ನಾಗವರ್ಮ ವಿರಚಿತ

# ಕರ್ಣಾಟಕ ಕಾದಂಬರಿ

ಗದ್ಯಾನುವಾದ :

ಹ. ನೆ. ನಾರಾಯಣಶಾಸ್ತ್ರೀ

ಕನ್ನಡ ಸಾಹಿತ್ಯ ಪರಿಷತ್ತು
1977
ವಜ್ರ ಮಹೋತ್ಸವ

## ಈ ಮಾಲೆಯಲ್ಲಿ ಪ್ರಕಟವಾಗುವ ಕಾವ್ಯಗಳು

ಪಂಪಭಾರತ * ಆದಿಪುರಾಣ * ಗದಾಯುದ್ಧ
ನೇಮಿನಾಥ ಪುರಾಣ (ಕರ್ಣಪಾರ್ಯ)
ನೇಮಿನಾಥ ಪುರಾಣ (ನೇಮಿಚಂದ್ರ)
ಯಶೋಧರ ಚರಿತೆ * ಅನಂತನಾಥ
ಪುರಾಣ * ಧರ್ಮಾಮೃತ
ಕರ್ಣಾಟಕ ಕಾದಂಬರಿ
ಪಂಚತಂತ್ರ * ನಳಚಂಪು
ಗಿರಿಜಾಕಲ್ಯಾಣ ಮಹಾಪ್ರಬಂಧ
ಜಗನ್ನಾಥ ವಿಜಯ * ಕಬ್ಬಿಗರ ಕಾವ
ಶಬರಶಂಕರ ವಿಲಾಸ * ಹರಿಹರನ ರಗಳೆಗಳು

[ಮುಂದುವರಿಸಿದೆ]



ಯಿಗಳು

ವಜ್ರಮಹೋತ್ಸವ ವರ್ಷ

ಪಂಚವಾರ್ಷಿಕ ಯೋಜನೆಯ ಪುಸ್ತಕಮಾಲೆ–100

ನಾಗವರ್ಮ ವಿರಚಿತ

# ಕರ್ಣಾಟಕ ಕಾದಂಬರಿ

ಗದ್ಯಾನುವಾದ :

ಹ. ವೆ. ನಾರಾಯಣಶಾಸ್ತ್ರೀ



ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ : : ಬೆಂಗಳೂರು–18.

1977

Nagavarma Virachita Karnataka Kadambari i Original with Prose rendering by Sri H. V. Narayanasastri. First Published in 1977 by Kannada Sahitya Parishat, Bangalore-560018. in Commemoration of its Diamond Jubilee, Demy Octavo Pages xvi + 614, Price Rs. 10-00



ಮೊದಲನೆಯ ಮುದ್ರಣ : 1977.



ಬೆಲೆ : ಹತ್ತು ರೂಪಾಯಿಗಳು



ಪ್ರಕಾಶಕರು : ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು–560 018

ಮುದ್ರಣ : ಶ್ರೀ ವೀರಾ ಪ್ರಿಂಟರ್ಸ್, ಶಿವರಾಂಪೇಟೆ, ಮೈಸೂರು–570 001

# ಪ್ರಸ್ತಾವನೆ

ಕನ್ನಡದ ಪ್ರಾಚೀನ ಕಾವ್ಯಸಂಪತ್ತು ಅಮೂಲ್ಯವಾಗಿದೆ. ಈ ಸಂಪತ್ತನ್ನು ಈಗಿನ ಕನ್ನಡ ಜನತೆ ಓದಿ ತಿಳಿದುಕೊಳ್ಳುವುದು ಅತ್ಯಾವಶ್ಯಕವಾಗಿದೆ. ಆದರೆ ಈ ಕಾವ್ಯಗಳು ಜನಸಾಮಾನ್ಯರಿಗೆ ಕಠಿಣವಾಗಿ ತೋರುವುದರಿಂದ ಇವುಗಳ ವ್ಯಾಸಂಗದಲ್ಲಿ ಉತ್ಸಾಹಪೂರ್ಣವಾದ ಪ್ರವೃತ್ತಿ ಕಂಡಬರುತ್ತಿಲ್ಲ. ಅನೇಕ ಸಂದರ್ಭಗಳಲ್ಲಿ ಮೂಲ ಗ್ರಂಥಗಳೂ ದೊರೆಯುವುದಿಲ್ಲ. ಎಷ್ಟೋ ವೇಳೆ ವಿಶ್ವವಿದ್ಯಾನಿಲಯದವರು ಪ್ರಾಚೀನ ಕಾವ್ಯಗಳನ್ನು ಕನ್ನಡ ಬಿ.ಎ., ಎಂ.ಎ, ಪದವಿಪರೀಕ್ಷೆಗಳಿಗೆ ಪಠ್ಯಪುಸ್ತಕಗಳಾಗಿ ಇಟ್ಟಾಗಲಂತೂ ಮೂಲಗ್ರಂಥಗಳ ಅಭಾವ ವಿಶೇಷವಾಗಿ ಕಂಡುಬರುತ್ತದೆ.

ಆದ್ದರಿಂದ ಈ ಕೊರತೆಯನ್ನು ನಿವಾರಣೆ ಮಾಡಲು ಕನ್ನಡ ಸಾಹಿತ್ಯ ಪರಿಷತ್ತು ತನ್ನ ಪಂಚವಾರ್ಷಿಕ ಯೋಜನೆಯಲ್ಲಿ ಹಳಗನ್ನಡ ಕಾವ್ಯಗಳ ಪುನರ್ಮುದ್ರಣಕ್ಕೆ ವಿಶೇಷ ಗಮನಹರಿಸಿ ಅದಕ್ಕಾಗಿ ಪ್ರತ್ಯೇಕ ಯೋಜನೆಯನ್ನು ಹಾಕಿಕೊಂಡಿತು. ಆರಿಸಿದ ಹಳಗನ್ನಡ ಹಾಗೂ ನಡುಗನ್ನಡ ಕಾವ್ಯಗಳನ್ನು ಹೊಸಗನ್ನಡ ಗದ್ಯದಲ್ಲಿ ಅನುವಾದಿಸಿ, ಆ ಅನುವಾದದೊಡನೆ ಮೂಲಪಾಠವನ್ನು ಪ್ರಕಟಿಸಿ ಪುಸ್ತಕ ರೂಪದಲ್ಲಿ ಹೊರತರುವುದು ಮತ್ತು ಸರ್ಕಾರದ ಸಹಾಯ ಪಡೆದು ಆ ಪುಸ್ತಕಗಳು ಸಾಧ್ಯವಾದಮಟ್ಟಿಗೆ ಸುಲಭ ಬೆಲೆಯಲ್ಲಿ ದೊರೆಯುವಂತೆ ಮಾಡುವುದು, ಈ ಯೋಜನೆಯ ಮುಖ್ಯ ಅಂಶಗಳು.

ಈ ಯೋಜನೆಯ ಕಾರ್ಯನಿರ್ವಹಣೆಗಾಗಿ ಪರಿಷತ್ತು ಮೊದಲು ಅನೇಕ ವಿದ್ವಾಂಸರಿಗೆ ಪ್ರಾರ್ಥನಾಪತ್ರಗಳನ್ನು ಕಳಿಸಿ ಯಾವ ಯಾವ ಕಾವ್ಯಗಳನ್ನು ಹೊಸಗನ್ನಡ ಗದ್ಯಾನುವಾದಕ್ಕೆ ತೆಗೆದುಕೊಳ್ಳಬಹುದು ಎಂದು ತಿಳಿಸುವಂತೆ ಕೇಳಿಕೊಳ್ಳಲಾಯಿತು. ಆ ಪಂಡಿತರ ಸಹಾನುಭೂತಿಯುತವಾದ ಮತ್ತು ಮೆಚ್ಚುಗೆಯ ಸೂಚನೆಗಳು ಬಂದಮೇಲೆ ಅನುವಾದಗ್ರಂಥಗಳ ಪಟ್ಟಿಯೊಂದನ್ನು ಪರಿಷತ್ತು ಸಿದ್ಧಪಡಿಸಿತು. ಆ ಪಟ್ಟಿಯಲ್ಲಿ ಸುಮಾರು ಅರವತ್ತಕ್ಕೂ ಮಿಕ್ಕು ಕಾವ್ಯಗಳು ಇದ್ದುವು.

ತರುವಾಯ ಆ ವಿದ್ವಜ್ಜನರ ಒಂದು ಸಭೆಯನ್ನು ದಿನಾಂಕ 23–9–73ನೆಯ ಭಾನುವಾರ ಬೆಳಿಗ್ಗೆ 10 ಗಂಟೆಗೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕರೆಯಲಾಯಿತು. ಆ ಸಭೆ ಬೆಳಗ್ಗೆಯಿಂದ ಸಂಜೆಯವರೆಗೆ ನಡೆದು ಅನುವಾದಕಾರ್ಯದ ವಿಷಯವನ್ನು

ಕುರಿತು ಕೂಲಂಕಷವಾಗಿ ಸಮಾಲೋಚಿಸಿ ಈ ಕೆಳಕಂಡ ತೀರ್ಮಾನಗಳನ್ನು ಕೈಗೊಂಡಿತು.

1. ಭಾರತೀಯ ಜ್ಞಾನಪೀಠದವರು, ವಿಶ್ವವಿದ್ಯಾನಿಲಯದವರು, ಖಾಸಗಿ ಪ್ರಕಾಶಕರು ಪರಿಷತ್ತಿನ ಉದ್ದೇಶದಂತೆ ಈಗಾಗಲೆ ಕನ್ನಡ ಕಾವ್ಯಗಳನ್ನು ಅನುವಾದ ಮಾಡಲು ಕಾರ್ಯ ಕೈಗೊಂಡಿದ್ದರೆ, ಅಂಥ ಕಾವ್ಯಗಳನ್ನು ಪರಿಷತ್ತು ಅನುವಾದಕ್ಕೆ ತೆಗೆದುಕೊಳ್ಳಬೇಕಾಗಿಲ್ಲ.

2. ಅಗತ್ಯ ಕಂಡ ಕಡೆ ಮೂಲವನ್ನು ಪರಿಷ್ಕರಿಸಿ ಅನುವಾದವನ್ನು ಕೈಗೊಳ್ಳ ತಕ್ಕದ್ದು.

3. ಈ ಕೆಳಗೆ ಕಾಣಿಸಿದ ಹಳಗನ್ನಡ ಮತ್ತು ನಡುಗನ್ನಡ ಕಾವ್ಯಗಳನ್ನು ಸದ್ಯ ದಲ್ಲಿ ಅನುವಾದಕ್ಕೆ ಆರಿಸಿಕೊಳ್ಳತಕ್ಕದ್ದು :

**ಹಳಗನ್ನಡ :** ವಿಕ್ರಮಾರ್ಜುನವಿಜಯ, ಆದಿಪುರಾಣ, ಗದಾಯುದ್ಧ, ನೇಮಿ ನಾಥಪುರಾಣ (1. ಕರ್ಣಪಾರ್ಯ 2. ನೇಮಿಚಂದ್ರ), ಯಶೋಧರಚರಿತೆ, ಅನಂತನಾಥ ಪುರಾಣ, ಧರ್ಮಾಮೃತ, ಕಾದಂಬರಿ, ಪಂಚತಂತ್ರ, ಸಳಚಂಪು, ಪಪ್ಪಾರಾಧನೆ, ಗಿರಿಜಾ ಕಲ್ಯಾಣ, ಜಗನ್ನಾಥವಿಜಯ, ಕಬ್ಬಿಗರಕಾವ, ಶರ್ಬಶರ್ಕವಿಳಾಸ, ಹರಿಹರನ ರಗಳೆ ಗಳು, ಕೆಳದಿನೃಪವಿಜಯ, ದಮಯಂತೀಸ್ವಯಂವರ, ಶಾಂತಿಪುರಾಣ, ಚಂದ್ರಪ್ರಭ ಪುರಾಣ, ಉದ್ಭಟಕಾವ್ಯಂ, ಕುಸುಮಾವಳಿ ಕಾವ್ಯ, ಅಭಿನವ ದಶಕುಮಾರಚರಿತೆ, ಮಲ್ಲಿ ನಾಥಪುರಾಣ, ರಾಜಶೇಖರವಿಳಾಸ, ಚಿಕ್ಕದೇವರಾಜ ವಂಶಾವಳಿ, ದಿವ್ಯಸೂರಿ ಚರಿತೆ.

**ನಡುಗನ್ನಡ :** ಸಿದ್ಧರಾಮಚಾರಿತ್ರ, ಬಸವಪುರಾಣ, ಪ್ರಭುಲಿಂಗಲೀಲೆ, ತೊರವೆ ರಾಮಾಯಣ, ರಾಮನಾಥಚರಿತೆ, ಭರತೇಶವೈಭವ, ಅನುಭವಾಮೃತ, ಗೀತಗೋಪಾಲ, ಹದಿಬದೆಯಧರ್ಮ, ನಳಚರಿತ್ರೆ, ಅದ್ಭುತರಾಮಾಯಣ, ಚೆನ್ನಬಸವ ಪುರಾಣ, ಭಾಗವತ, ಹರಿಕಥಾಮೃತಸಾರ, ಭಿಕ್ಷಾಟನಚರಿತೆ, ಮೋಹನತರಂಗಿಣಿ.

4. ಅನುವಾದ ಕಾರ್ಯವನ್ನು ನಡೆಸಲು ಪರಿಷತ್ತಿನ ಪ್ರಕಟಣಾ ಸಮಿತಿ ಆಶ್ರಯದಲ್ಲಿ ಎರಡು ಅನುವಾದಕ ಮಂಡಲಿಗಳು ಇರತಕ್ಕದ್ದು ; ಒಂದು ಬೆಂಗಳೂರಿ ನಲ್ಲಿ, ಇನ್ನೊಂದು ಮೈಸೂರಿನಲ್ಲಿ. ಅನುವಾದ ಕಾರ್ಯವನ್ನು ನಡೆಸಿಕೊಡಲು ಒಪ್ಪಿರುವ ಪಂಡಿತರು ಈ ಎರಡು ಅನುವಾದಕ ಮಂಡಲಿಗಳ ಪೈಕಿ ತಮಗೆ ಹತ್ತಿರ ವಿರುವ ಮಂಡಲಿಯ ಸದಸ್ಯರಾಗಬಹುದು.

5. ಮಂಡಲಿಯ ಸದಸ್ಯರಾದ ಅನುವಾದಕರು ಕನ್ನಡದಲ್ಲಿ ವಿದ್ವಾಂಸರಾಗಿದ್ದು ಆಧುನಿಕರಿಗೆ ಹಿತಕರವಾದ ಹೊಸಗನ್ನಡ ಶೈಲಿಯನ್ನು ಚೆನ್ನಾಗಿ ಬಲ್ಲವರಾಗಿರಬೇಕು. ಅವರಿಗೆ ಹಳಗನ್ನಡ ಮತ್ತು ಸಂಸ್ಕೃತ ಸಾಹಿತ್ಯವಾಙ್ಮಯದಲ್ಲಿ ಉತ್ತಮವಾದ ಪರಿಣತಿ

ಇರಬೇಕು. ಒಂದೊಂದು ಅನುವಾದಕ ಮಂಡಲಿಗೂ ಒಬ್ಬೊಬ್ಬ ಅಧ್ಯಕ್ಷರಿದ್ದು ಆ ಮಂಡಲಿಯ ಸಲಹೆಯಂತೆ ಅನುವಾದ ಕಾರ್ಯವು ನಡೆಯತಕ್ಕದ್ದು.

6. ಮೈಸೂರಿನ ಅನುವಾದಕ ಮಂಡಲಿಗೆ ಶ್ರೀ ಕೆ. ವೆಂಕಟರಾಮಪ್ಪ ಅವರು ಅಧ್ಯಕ್ಷರಾಗಿರಬೇಕೆಂದೂ ಬೆಂಗಳೂರಿನ ಅನುವಾದಕ ಮಂಡಲಿಗೆ ವಿದ್ವಾನ್ ಎನ್. ರಂಗನಾಥಶರ್ಮಾ ಅವರು ಅಧ್ಯಕ್ಷರಾಗಿರಬೇಕೆಂದೂ ಪರಿಷತ್ತಿನ ಅಧ್ಯಕ್ಷರು ನೀಡಿದ ಸೂಚನೆಗೆ ಸಭೆ ತನ್ನ ಸಮ್ಮತಿ ನೀಡಿತು.

7. ಒಂದು ತಿಂಗಳಿಗೆ ಕನಿಷ್ಠಪಕ್ಷದಲ್ಲಿ ಮೂರು ಸಲವಾದರೂ ಈ ಅನುವಾದಕ ಮಂಡಲಿಯು ಆಯಾ ಊರಿನಲ್ಲಿ ಸಭೆ ಸೇರಿ ಕಾರ್ಯವಿಧಾನವನ್ನೂ ಕಾರ್ಯಪ್ರಗತಿಯನ್ನೂ ಪರಿಶೀಲಿಸತಕ್ಕದ್ದು. ಅನುವಾದ ಕಾರ್ಯದಲ್ಲಿ ಸಂಭವಿಸಬಹುದಾದ ಎಡರು-ತೊಡರು, ಸಂದೇಹಗಳನ್ನು ಪರಸ್ಪರವಾಗಿ ಚರ್ಚಿಸಿ ಪರಿಹರಿಸಿಕೊಳ್ಳತಕ್ಕದ್ದು.

(ಅ) ಒಬ್ಬೊಬ್ಬ ಅನುವಾದಕನಿಗೆ ಒಂದೊಂದು ಕಾವ್ಯವನ್ನು ಪೂರ್ತಿಯಾಗಿ ಅನುವಾದಿಸುವ ಕಾರ್ಯವನ್ನು ವಹಿಸಿಕೊಡಬೇಕು. ವಿಶೇಷ ಸಂದರ್ಭದಲ್ಲಿ ಒಂದು ಪುಸ್ತಕವನ್ನು ಇಬ್ಬರು, ಮೂವರು ಅನುವಾದಕರಿಗೆ ವಹಿಸಿಕೊಡಬಹುದು.

(ಆ) ಅನುವಾದದಲ್ಲಿ ಏಕರೂಪತೆ ಇರಬೇಕು. ಮಧ್ಯದಲ್ಲಿ ವಿಚ್ಛಿನ್ನತೆ ಕಾಣಬಾರದು. ಕಥೆಯಂತೆ ಓದಿಸಿಕೊಂಡು ಹೋಗಬೇಕು.

(ಇ) ಅನುವಾದವು ಆಧುನಿಕರಿಗೆ ಪ್ರಿಯವಾಗುವ ಹೊಸಗನ್ನಡ ಗದ್ಯದಲ್ಲಿ ಇರಬೇಕು.

(ಈ) ಭಾಷೆಯು ಸರಳವಾಗಿಯೂ ಶುದ್ಧವಾಗಿಯೂ ಇರಬೇಕು. ಅನುವಾದವು ಮೂಲದಿಂದ ದೂರ ಹೋಗಬಾರದು ಮತ್ತು ಮೂಲವನ್ನು ಬಿಡಲೂಬಾರದು.

(ಉ) ಇದು ಪ್ರಾಚೀನ ಕಾವ್ಯಗಳ ಅನುವಾದವಾದ್ದರಿಂದ ವಿಷಯದ ಗಂಭೀರತೆ ಪವಿತ್ರತೆಗಳಿಗೆ ಅನುಗುಣವಾಗಿ ಭಾಷೆಯು ಲಲಿತಗಂಭೀರವಾಗಿ ಇರಬೇಕು.

(ಊ) ಪ್ರತಿಯೊಬ್ಬ ಅನುವಾದಕನೂ ತಾನು ಅನುವಾದಿಸಿದ ಗ್ರಂಥಕ್ಕೆ ಒಂದು ಉಪೋದ್ಘಾತ, ಶಬ್ದಾರ್ಥಕೋಶ, ಅನುಬಂಧಗಳನ್ನು ತಯಾರಿಸಿ ಕೊಡಬೇಕು. ಉಪೋದ್ಘಾತದಲ್ಲಿ ಪ್ರಸ್ತುತ ಕವಿಯ ದೇಶಕಾಲಾದಿ ಪರಿಚಯ, ಪ್ರಸ್ತುತ ಕಾವ್ಯದ ವಿಮರ್ಶೆ ಮುಂತಾದವು ಸಂಕ್ಷೇಪವಾಗಿ ಇರಬೇಕು. ಕಾವ್ಯದಲ್ಲಿ ಬಂದಿರುವ ನ್ಯಾಯಗಳು, ಗಾದೆಗಳು, ಪೂರ್ವಕತೆಗಳು ಮುಂತಾದವುಗಳ ವಿವರಣೆ ಅನುಬಂಧದಲ್ಲಿ ಇರಬೇಕು, ವಿವರಣೆ ಸಂಕ್ಷಿಪ್ತವಾಗಿದ್ದರೆ ಆಯಾ ಪುಟದ ಅಡಿಟಿಪ್ಪಣಿಯಲ್ಲಿ ಬರಬಹುದು,

(ಋ) ಅನುವಾದಕನು ಮೂಲ ಪರಿಷ್ಕೃತ ಪಾಠವನ್ನೂ ಅದರ ಕೆಳಗಡೆ ಅನುವಾದವನ್ನೂ ಕೊಡಬೇಕು,

(ಋೂ) ಉಪೋದ್ಘಾತದಲ್ಲಿ ಅನುವಾದಕನು ತನ್ನ ಸ್ವಂತ ವಿಷಯವೇನನ್ನೂ ಪ್ರಸ್ತಾಪಿಸಿಕೂಡದು.

(ಎ) ಯಾವೊಬ್ಬ ಅನುವಾದಕನ ಅನುವಾದಕಾರ್ಯ ಮಂಡಲಿಗೆ ತೃಪ್ತಿಕರವಾಗಿ ಕಂಡುಬಾರದಿದ್ದಲ್ಲಿ ಅಥವಾ ಅನುವಾದಕ ತಾನಾಗಿ ಒಪ್ಪಿಸಿದ ಕಾರ್ಯಮಾಡಲು ತನ್ನಿಂದ ಸಾಧ್ಯವಿಲ್ಲವೆಂದು ತಿಳಿಸಿದ ಸಂದರ್ಭದಲ್ಲಿ ಆ ಅನುವಾದಕಮಂಡಲಿಯ ಅಧ್ಯಕ್ಷರು ಪರಿಷತ್ತಿನ ಅಧ್ಯಕ್ಷರಿಗಾಗಲೀ ಅಥವಾ ಪರಿಷತ್ತಿನ ಪ್ರಕಟಣಾ ಸಮಿತಿ ಪ್ರಧಾನ ಸಂಪಾದಕರಿಗಾಗಲೀ ಆ ವಿಷಯವನ್ನು ತಿಳಿಸಿ ಆ ಕಾರ್ಯಕ್ಕೆ ಬೇರೊಬ್ಬ ವಿದ್ವಾಂಸರನ್ನು ಗೊತ್ತುಮಾಡಬಹುದು. ಹಾಗೆಯೇ ಅನುವಾದಕ ಮತ್ತು ಅನುವಾದಕ ಮಂಡಲಿ ಅಧ್ಯಕ್ಷರ ಮಧ್ಯೆ ಉದ್ಭವಿಸಬಹುದಾದ ಸಮಸ್ಯೆಗಳನ್ನು ಪರಿಷತ್ತಿನ ಅಧ್ಯಕ್ಷರು ಅಥವಾ ಪ್ರಕಟಣಾ ಸಮಿತಿಯ ಪ್ರಧಾನ ಸಂಪಾದಕರು ಪರಿಹರಿಸತಕ್ಕದ್ದು.

(ಏ) ನಿಯಮದಂತೆ ಗ್ರಂಥದ ಅನುವಾದಕಾರ್ಯ ಮುಗಿದಕೂಡಲೆ ಮಂಡಲಿಯ ಅಧ್ಯಕ್ಷರು ಅದನ್ನು ಅನುವಾದಕರಿಂದ ಪಡೆದು ತಮ್ಮ ಸಲಹೆಯೊಡನೆ ಅದನ್ನು ಪರಿಷತ್ತಿನ ಅಧ್ಯಕ್ಷರಿಗೆ ಕಳುಹಿಸಿಕೊಡತಕ್ಕದ್ದು.

8. ಹೀಗೆ ಅನುವಾದ ಕಾರ್ಯವನ್ನು ವಿದ್ವಾಂಸರಿಂದ ಮಾಡಿಸಿದಾಗ ಅವರಿಗೆ ಯುಕ್ತಸಂಭಾವನೆಯನ್ನು ಕೊಡುವ ಬಗ್ಗೆ ಸಭೆ ತೀರ್ಮಾನ ಕೈಗೊಂಡು, ಸಂಭಾವನೆ ಗ್ರಂಥದ ಪರಿಮಾಣದ ಆಧಾರದ ಮೇಲೆ ಸಲ್ಲಬೇಕೆಂದು ನಿರ್ಣಯಿಸಿ, ಗ್ರಂಥದ 400 ಅಕ್ಷರಗಳಿಗೆ ಒಂದು ಘಟಕವೆಂದೂ ಒಂದು ಘಟಕಕ್ಕೆ 2 ರೂ. ನಂತೆ ಸಂಭಾವನೆ ನೀಡಬೇಕೆಂದೂ ನಿಶ್ಚಯಿಸಲಾಯಿತು. ಮತ್ತು ಅನುವಾದಕ ಮಂಡಲಿಯ ಅಧ್ಯಕ್ಷರಿಗೆ ಅನುವಾದಕರಿಗೆ ಸಲ್ಲುವ ಸಂಭಾವನೆಯ ಶೇಕಡ 15ರಷ್ಟನ್ನು ಸಂಭಾವನೆಯಾಗಿ ಕೊಡತಕ್ಕದ್ದೆಂದೂ ಸಭೆ ನಿರ್ಣಯಿಸಿತು. ಮತ್ತು ಅವರು ಮೂಲಪಾಠ ಪರಿಷ್ಕರಣ, ಮುನ್ನುಡಿ, ಉಪೋದ್ಘಾತ, ಶೋಧನೆ, ಮೇಲ್ವಿಚಾರಣೆ ಇತ್ಯಾದಿ ಕಾರ್ಯಗಳನ್ನು ಗಮನದಲ್ಲಿಟ್ಟುಕೊಂಡು ಹಸ್ತಪ್ರತಿಯನ್ನು ಸಿದ್ಧಮಾಡಿ ಪರಿಷತ್ತಿಗೆ ಒಪ್ಪಿಸತಕ್ಕದ್ದೆಂದೂ ತೀರ್ಮಾನಿಸಲಾಯಿತು.

9. ಅನುವಾದಕರಿಗೆ ಅನುವಾದ ಕಾರ್ಯಕ್ಕಾಗಿ ಹಣ ಸಂದಾಯವಾದಮೇಲೆ ಆ ಗ್ರಂಥದ ಪೂರ್ಣ ಹಕ್ಕು ಪರಿಷತ್ತಿಗೆ ಸೇರುತ್ತದೆ. ಪುಸ್ತಕ ಪ್ರಕಟಣೆಯಾದಮೇಲೆ ಅನುವಾದಕರಿಗೆ ಗೌರವಧನ ನೀಡುವ ಪ್ರಶ್ನೆ ಬರುವುದಿಲ್ಲ. ಪುಸ್ತಕ ಅಚ್ಚಾದಮೇಲೆ ಅನುವಾದಕರಿಗೆ ಆ ಗ್ರಂಥದ ಹತ್ತು ಪ್ರತಿಗಳನ್ನೂ, ಮಂಡಲಿಯ ಅಧ್ಯಕ್ಷರಿಗೆ ಎರಡು ಪ್ರತಿಗಳನ್ನೂ ಉಚಿತವಾಗಿ ನೀಡತಕ್ಕದ್ದು.

ಮೇಲ್ಕಂಡ ತೀರ್ಮಾನದಂತೆ ಅನುವಾದಕಾರ್ಯ ಕೈಗೊಳ್ಳಲು ಪರಿಷತ್ತನ್ನು ಮೈಸೂರಿನಲ್ಲಿ ಮತ್ತು ಬೆಂಗಳೂರಿನಲ್ಲಿ ಅನುವಾದಕ ಮಂಡಲಿಗಳನ್ನು ರಚಿಸಿ ಅದಕ್ಕೆ

ಬೇಕಾದ ಸಲಕರಣೆಗಳನ್ನು ಒದಗಿಸಿಕೊಟ್ಟಿದೆ. ಯೋಜನೆಯ ಪ್ರಕಾರ ಅನುವಾದ ಕಾರ್ಯ ಎರಡು ಕಡೆಯೂ ನಡೆಯುತ್ತಿದೆ. ವಿದ್ವಾಂಸರು ಅನುವಾದಕ ಮಂಡಲಿ ಅಧ್ಯಕ್ಷರೊಡನೆ ಸಹಕರಿಸುತ್ತಿದ್ದಾರೆ. ಅನುವಾದಕ ಮಂಡಲಿ ಅಧ್ಯಕ್ಷರು ವಿಶೇಷ ಆಸಕ್ತಿ ವಹಿಸಿ ಅನುವಾದಕಾರ್ಯ ಅಚ್ಚುಕಟ್ಟಾಗಿ ನಡೆಯುವಂತೆ ಶ್ರಮಿಸುತ್ತಿದ್ದಾರೆ. ಪರಿಷತ್ತಿನ ಪ್ರಕಟಣ ಸಮಿತಿಯ ಪ್ರಧಾನ ಸಂಪಾದಕರಾದ ಡಾ|| ರಂ. ಶ್ರೀ. ಮುಗಳಿಯವರು ಅಷ್ಟೇ ಮುತುವರ್ಜಿಯಿಂದ ಅನುವಾದಕರಿಗೆ, ಮಂಡಲಿ ಅಧ್ಯಕ್ಷರಿಗೆ, ತಮ್ಮ ಸಲಹೆ ಸೂಚನೆಗಳನ್ನು ನೀಡಿ ಸಹಕರಿಸುತ್ತಿದ್ದಾರೆ. ಒಟ್ಟಿನಲ್ಲಿ ಈ ಎಲ್ಲ ವಿದ್ವನ್ಮಣಿಗಳೂ ಇದೊಂದು ಕನ್ನಡ ನುಡಿಯ ಮಹತ್ತರವಾದ ಸೇವೆ ಎಂಬ ಭಾವನೆಯಿಂದ ದುಡಿಯುತ್ತಿದ್ದಾರೆ. ಇವರೆಲ್ಲರಿಗೂ ಪರಿಷತ್ತಿನ ಪರವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ಈಗ 20 ಗ್ರಂಥಗಳ ಅನುವಾದಕಾರ್ಯ ಮುಗಿದು ಅವು ಅಚ್ಚಿಗೆ ಹೋಗಿವೆ. 1977ನೆಯ ಏಪ್ರಿಲ್ ತಿಂಗಳಿನಲ್ಲಿ ನಡೆಯುವ ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರ ಮಹೋತ್ಸವ ಸಂದರ್ಭದಲ್ಲಿ ಈ ಗ್ರಂಥಗಳು ಹೊರಬಿದ್ದು ಸಾರ್ವಜನಿಕರ ಕೈಗೆ ಸೇರುವಂತೆ ಮಾಡಬೇಕೆಂದು ಪರಿಷತ್ತು ನಿಶ್ಚಯಿಸಿದೆ. ಆ ವೇಳೆಗೆ ಈ ಎಲ್ಲ ಗ್ರಂಥಗಳನ್ನು ಮುದ್ರಿಸಿಕೊಡುವ ಜವಾಬ್ದಾರಿಯನ್ನು ಮೈಸೂರಿನ ಶ್ರೀ ಮೀರಾ ಪ್ರಿಂಟರ್ಸ್ ಮಾಲಿಕರಾದ ಶ್ರೀ ಕೆ. ಪಿ. ಪುಟ್ಟಸ್ವಾಮಿಯವರು ವಹಿಸಿಕೊಂಡಿದ್ದಾರೆ. ಅದಕ್ಕಾಗಿ ಅವರು ಈ ವರ್ಷ ಬೇರೆ ಯಾವ ಮುದ್ರಣ ಕೆಲಸಗಳನ್ನೂ ತೆಗೆದುಕೊಳ್ಳದೆ ಪರಿಷತ್ತಿನ ಈ ಅನುವಾದ ಗ್ರಂಥಗಳ ಮುದ್ರಣಕ್ಕೇ ವಿಶೇಷ ಗಮನಕೊಟ್ಟಿದ್ದಾರೆ. ಇವರಿಗೆ ಪರಿಷತ್ತು ಎಷ್ಟು ಕೃತಜ್ಞತೆಯನ್ನು ಅರ್ಪಿಸಿದರೂ ಸಾಲದು. ಇಂಥ ಗ್ರಂಥಗಳ ಕರಡಚ್ಚು ತಿದ್ದುವ ಕಾರ್ಯ ಎಷ್ಟು ಕಷ್ಟಕರವಾದುದು ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಇದರ ಹೊಣೆಯನ್ನು ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಉಪನಿರ್ದೇಶಕರಾದ ಶ್ರೀ ಆರ್. ಎಲ್. ಅನಂತರಾಮಯ್ಯನವರು ಮತ್ತು ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನ ವಿಭಾಗದ ಸಹಾಯಕ ನಿರ್ದೇಶಕರಾದ ಶ್ರೀ ಬಿ. ಎಸ್. ಸಣ್ಣಯ್ಯನವರು ಹೊತ್ತುಕೊಂಡು ತಮಗಾಗುವ ಅಪಾರ ಶ್ರಮವನ್ನು ಲೆಕ್ಕಿಸದೆ ಪ್ರೀತಿಯಿಂದ ದುಡಿಯುತ್ತಿದ್ದಾರೆ. ಈ ಮಹನೀಯರಿಗೆ ಪರಿಷತ್ತು ತುಂಬಾ ಆಭಾರಿಯಾಗಿದೆ.

ಈ ಅನುವಾದ ಗ್ರಂಥಗಳು ಕನ್ನಡ ಜನತೆಗೆ ಸುಲಭ ಬೆಲೆಯಲ್ಲಿ ದೊರೆಯಬೇಕೆಂಬ ಪರಿಷತ್ತಿನ ಆಶೆಯು ಸರ್ಕಾರದ ನೆರವಿನಿಂದ ಕೈಗೂಡಿದೆ ಎಂದು ತಿಳಿಸಲು ಸಂತೋಷಿಸುತ್ತೇನೆ. ವಜ್ರಮಹೋತ್ಸವದ ವೇಳೆಗೆ ಬಿಡುಗಡೆಯಾಗಲಿರುವ 20 ಅನುವಾದ ಗ್ರಂಥಗಳಿಗೆ ತಗಲುವ ವೆಚ್ಚ ಸುಮಾರು 4 ಲಕ್ಷ ರೂಪಾಯಿಗಳೆಂದು ಅಂದಾಜು ಮಾಡಲಾಗಿದೆ. ಈ ಅಂದಾಜಿನಂತೆ ಅನುವಾದ ಕೃತಿಗಳ ಬೆಲೆಯನ್ನು ಗೊತ್ತು ಮಾಡುವುದಾದರೆ ಈಗ ಇಟ್ಟಿರುವ ಬೆಲೆಯು ಮೂರು ಅಥವಾ ನಾಲ್ಕುಪಟ್ಟು ಹೆಚ್ಚಾಗು

ತ್ತದೆ. ಅನುವಾದ ಕೃತಿ ಎಷ್ಟೇ ಪುಟವಿರಲಿ 10 ರೂಪಾಯಿಗಳಿಗಿಂತ ಹೆಚ್ಚು ಬೆಲೆ ಇಡಕೂಡದು, ಪುಸ್ತಕದ ಬೆಲೆಯನ್ನು ನೋಡಿಯಾದರೂ ಜನರು ಈ ಗ್ರಂಥಗಳನ್ನು ಕೊಂಡು ಓದಲಿ ಎನ್ನುವ ದೃಷ್ಟಿಯಿಂದ ಉದಾರ ಧನಸಹಾಯಕ್ಕಾಗಿ ಈ ಯೋಜನೆಯನ್ನು ರಾಜ್ಯಸರ್ಕಾರದ ಮುಂದಿಡಲಾಯಿತು. ರಾಜ್ಯಸರ್ಕಾರ ಅನುವಾದ ಕೃತಿಗಳ ಮಹತ್ವವನ್ನರಿತು, ಪರಿಷತ್ತಿನ ಕೋರಿಕೆಯನ್ನು ಸಹಾನುಭೂತಿಯಿಂದ ಪರಿಶೀಲಿಸಿ ಉಚಿತ ಪ್ರಮಾಣದಲ್ಲಿ ಧನಸಹಾಯ ನೀಡಲು ಒಪ್ಪಿದೆ. ಇದರಿಂದ ಈ ಪುಸ್ತಕಗಳನ್ನು ಸುಲಭ ಬೆಲೆಗೆ ಕೊಡಲು ಸಾಧ್ಯವಾಗಿದೆ. ಈ ಸಹಾಯಕ್ಕಾಗಿ ಕನ್ನಡ ಸಾಹಿತ್ಯ ಪರಿಷತ್ತು ನಾಡಿನ ಜನತೆಯ ಪರವಾಗಿ ರಾಜ್ಯಸರ್ಕಾರಕ್ಕೆ ತನ್ನ ಅಪಾರ ಕೃತಜ್ಞತೆಗಳನ್ನು ಅರ್ಪಿಸುತ್ತದೆ.

ಕನ್ನಡಿಗರು ಈ ಅಮೂಲ್ಯವಾದ ಕೃತಿಗಳನ್ನು ಉತ್ಸಾಹದಿಂದ ಬರಮಾಡಿಕೊಂಡು ಇವುಗಳ ಪೂರ್ಣ ಪ್ರಯೋಜನ ಪಡೆಯಬೇಕೆಂದು ಪರಿಷತ್ತು ಬಯಸುತ್ತದೆ.

ಬೆಂಗಳೂರು
ದಿನಂಕ : 2-10-76
ಗಾಂಧಿ ಜಯಂತಿ

**ದೇಶಹಳ್ಳಿ ಜಿ. ನಾರಾಯಣ**
ಅಧ್ಯಕ್ಷ
ಕನ್ನಡ ಸಾಹಿತ್ಯ ಪರಿಷತ್ತು

# ಮುನ್ನುಡಿ

ಕನ್ನಡ ಸಾಹಿತ್ಯದ ಅಭಿವೃದ್ಧಿಗಾಗಿ ಶ್ರಮಿಸುತ್ತಿರುವ ಕನ್ನಡ ಸಾಹಿತ್ಯ ಪರಿಷತ್ತು ಸಾಹಿತ್ಯದ ಸಂರಕ್ಷಣೆಗಾಗಿಯೂ ಕೆಲಸ ಮಾಡಬೇಕಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಯನ್ನು ಅಭ್ಯಾಸ ಮಾಡಿದವರಿಗೆ ಸಾಹಿತ್ಯದಲ್ಲಿ ವಿವಿಧ ರೀತಿಯ ಆಂದೋಳನಗಳು ನಡೆದಿರುವುದು ಗೋಚರವಾಗದೆ ಇರದು. ಚಂಪೂರೂಪದಲ್ಲಿ ಬರವಣಿಗೆ ಕೆಲವು ಕಾಲ ನಡೆದು ವಚನ, ರಗಳೆ, ಷಟ್ಪದಿ, ಸಾಂಗತ್ಯ ಈ ಮುಂತಾದ ಪ್ರಕಾರಗಳು ತರುವಾಯ ಬಳಕೆಗೆ ಬಂದುದನ್ನು ನಾವು ಖಚಿತವಾಗಿ ಗುರುತಿಸಬಹುದು. ಅಲ್ಲಿಂದ ನವೋದಯದ ಕಾಲದಲ್ಲಿ ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ ಹೊಸ ಛಂದಸ್ಸು 'ಭಾವಗೀತೆ' ಗಳ ಧಾಟಿಯಲ್ಲಿ ಬಂದದ್ದನ್ನೂ ನಾವು ನೋಡುತ್ತೇವೆ. ಈಚೆಗೆ ಮುಕ್ತ ಛಂದಸ್ಸೂ, 'ನವ್ಯ ಕಾವ್ಯ' ದ ಧಾಟಿಯ ಗದ್ಯ ಛಂದಸ್ಸೂ ಬಳಕೆಯಲ್ಲಿವೆ. ಈ ರೀತಿಯ ಮಾರ್ಪಾಡು ಸಾಹಿತ್ಯರಚನೆಯಲ್ಲಿ ಅನಿವಾರ್ಯ ಮತ್ತು ಅವಶ್ಯ. ಇದು ಸಾಹಿತಿಗಳ, ಕವಿಗಳ ಪ್ರಗತಿ ಪರ ಮನೋಭಾವವನ್ನೂ ಸಾಮಾಜಿಕ ಪ್ರಜ್ಞೆಯನ್ನೂ ಪ್ರದರ್ಶಿಸುತ್ತದೆ. ಈ ಹೊಸ ದೃಷ್ಟಿ ಮೂಡಿದಂತೆ ಹಳೆಯದರ ಕಡೆ ಜನ ದೃಷ್ಟಿ ಹರಿಸುವುದು ಅಪರೂಪ. ಛಂದಸ್ಸಿನ ಬಗ್ಗೆ ಈ ಮಾತು ಹೇಗೆ ಅನ್ವಯಿಸುತ್ತದೆಯೋ ಹಾಗೆಯೇ ಕಾವ್ಯವಸ್ತುವಿಗೂ ಅನ್ವಯಿಸುತ್ತದೆ. ದೇವರು, ಪುರಾಣ, ಶ್ಲೀಲ, ಅಶ್ಲೀಲ, ಈ ವಿಷಯಗಳಲ್ಲಿಯೂ ಜನತೆಯ ಕಲ್ಪನೆ ಮತ್ತು ಅವುಗಳಿಗೆ ನೀಡುವ ಮೌಲ್ಯ ವ್ಯತ್ಯಾಸವಾಗುತ್ತಲೇ ಹೋಗುತ್ತವೆ. ಆ ಹಳೆಯ ಸಾಹಿತ್ಯ ಪ್ರಕಾರಗಳು ಮತ್ತು ವಿಷಯಗಳು ಇಂದಿನ ದೃಷ್ಟಿಗೆ ದಾರಿ ಮಾಡಿಕೊಟ್ಟಿವೆ ಎಂಬುದನ್ನು ನಾವು ಮರೆಯಬಾರದು. ಹೊಸ ಸಾಹಿತ್ಯಸೃಷ್ಟಿಯ ಮೋಹದಲ್ಲಿ ಹಳೆಯದು ನಮ್ಮ ಕೈಬಿಟ್ಟು ಹೋಗಬಾರದು ಎಂಬುದನ್ನು ನಾವು ಅರಿಯಬೇಕು. ಏಕೆಂದರೆ ಈಚೆಗೆ ಪಂಪಾದಿ ಕವಿಗಳ ಕಾವ್ಯಾಭ್ಯಾಸ ಪದವಿಪರೀಕ್ಷೆಗಳಲ್ಲಿ ಬಿಟ್ಟರೆ ಉಳಿದ ಕಡೆ ಕಡಮೆ ಆಗುತ್ತಿದೆ. ಅದನ್ನು ಉಳಿಸಿಕೊಳ್ಳಬೇಕು, ನಮ್ಮ ಜನಕ್ಕೆ ಅದು ಎಟುಕುವಂತಿರಬೇಕು ಎಂಬ ಉದ್ದೇಶದಿಂದ ಪರಿಷತ್ತು ಹಳಗನ್ನಡ ಕಾವ್ಯಗಳನ್ನು ಹೊಸಗನ್ನಡಕ್ಕೆ ಅನುವಾದಿಸಿ ಮೂಲಪಾಠಗಳೊಡನೆ ಸುಲಭ ಬೆಲೆಗೆ ಕೊಡಲು ಯೋಜನೆಯೊಂದನ್ನು ಹಾಕಿಕೊಂಡಿದೆ. ಇದರ ವಿವರ ಪರಿಷತ್ತಿನ ಅಧ್ಯಕ್ಷರ ಪ್ರಸ್ತಾವನೆಯಲ್ಲಿ ವಿವರವಾಗಿ ಬಂದಿದೆ,

ಹಳಗನ್ನಡ ಕಾವ್ಯಗಳನ್ನು ಹಳೆಯ ಮಾದರಿಯಲ್ಲಿ ಓದಿ, ವ್ಯಾಸಂಗ ಮಾಡಿ ಅದರಲ್ಲಿ ಪಾಂಡಿತ್ಯವನ್ನು ಸಂಪಾದಿಸಿಕೊಂಡಿರುವ ಜನ ನಮ್ಮಲ್ಲಿ ಈಗ ಕಡಮೆ. ಆದರೂ ಆ ರೀತಿಯ ಪಾಂಡಿತ್ಯವುಳ್ಳವರನ್ನು ಪರಿಷತ್ತು ಆರಿಸಿ, ಅವರಿಂದ ಈ ಅನುವಾದ ಕಾರ್ಯಗಳನ್ನು ಮಾಡಿಸಿದೆ. ಕಾವ್ಯವನ್ನು ಅಭ್ಯಾಸ ಮಾಡಿದವರು, ಪಾಠ ಹೇಳಿದವರು, ಕವಿಯ ಮನೋಭಾವವನ್ನು ಅರಿತವರು, ಹೊಸಗನ್ನಡವನ್ನು ಬಲ್ಲವರು ನಮಗೆ ಈ ಅನುವಾದಕಾರ್ಯವನ್ನು ಮಾಡಿಕೊಟ್ಟಿದ್ದಾರೆ. ಅವರೆಲ್ಲರಿಗೆ ಪರಿಷತ್ತು ತನ್ನ ಹೃತ್ಪೂರ್ವಕವಾದ ವಂದನೆಯನ್ನು ಸಲ್ಲಿಸುತ್ತದೆ.

ಕರ್ಣಾಟಕ ಕಾದಂಬರಿಯನ್ನು ಉಭಯಭಾಷಾ ವಿದ್ವಾಂಸರಾದ ಶ್ರೀ ಹ. ವೆ. ನಾರಾಯಣಶಾಸ್ತ್ರಿಗಳು ಅನುವಾದಮಾಡಿಕೊಟ್ಟಿದ್ದಾರೆ. ಇವರು ಬೆಂಗಳೂರು ಚಾಮರಾಜೇಂದ್ರ ಸಂಸ್ಕೃತ ಮಹಾಪಾಠಶಾಲೆಯಲ್ಲಿ ಸುದೀರ್ಘಕಾಲ ಉಪಪ್ರಾಧ್ಯಾಪಕರಾಗಿದ್ದು ನಿವೃತ್ತರಾದಮೇಲೆ ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ಕಚೇರಿಯಲ್ಲಿ ಅತ್ಯುತ್ತಮವಾದ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಇವರು ಸಂಸ್ಕೃತ ಮತ್ತು ಕನ್ನಡ ಭಾಷೆಗಳೆರಡರಲ್ಲೂ ಶ್ರೇಷ್ಠದರ್ಜೆಯ ವಿದ್ವಾಂಸರು. ಸಂಸ್ಕೃತ ಭಾಷೆಯಲ್ಲಿ "ವಿದ್ಯಾರಣ್ಯ ಚರಿತಮ್" "ಶ್ರೀಶೈಲ ಜಗದ್ಗುರು ಮಹಾಕಾವ್ಯಮ್" ಮೊದಲಾದ ಕಾವ್ಯಗಳನ್ನೂ "ಶ್ರೀ ಕೃಷ್ಣಭಿಕ್ಷಾ" "ಗುಣಪರೀಕ್ಷಣಂ" ಮೊದಲಾದ ನಾಟಕಗಳನೂ ರಚಿಸಿರುತ್ತಾರೆ.

ವಿದ್ವಾಂಸರಿಂದ ಆದ ಕಾವ್ಯಾನುವಾದವನ್ನು ನಿಷ್ಣಾತ ಪಂಡಿತರು ನೋಡಿ, ಅವಶ್ಯವಾದ ಕಡೆಗಳಲ್ಲಿ ತಿದ್ದಿ ಪರಿಷತ್ತಿನ ಪ್ರಕಟಣೆಗಾಗಿ ಕೊಟ್ಟಿದ್ದಾರೆ. ಹೀಗೆ ಘನ ವಿದ್ವಾಂಸರಿಬ್ಬರು ತಮ್ಮ ಪೂರ್ಣ ಪಾಂಡಿತ್ಯದಿಂದ ಈ ಅನುವಾದಕಾರ್ಯವನ್ನು ನೆರವೇರಿಸಿಕೊಟ್ಟಿದ್ದಾರೆ. ಹೀಗಿದ್ದರೂ ಆ ಕಾವ್ಯಗಳ ಕೆಲವು ಘಟ್ಟಗಳಲ್ಲಿ, ಸಂದರ್ಭಗಳಲ್ಲಿ ಅರ್ಥ ಕ್ಲಿಷ್ಟವಾಗಿ ಅಭಿಪ್ರಾಯ ಚರ್ಚೆಗೆ ಅವಕಾಶವನ್ನು ಒದಗಿಸಬಹುದು. ಅಂಥ ಸ್ಥಿತಿ ಅನಿವಾರ್ಯ. ಆದ್ದರಿಂದ ಅಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯ ಪರಿಷತ್ತಿನದೆಂದು ಯಾರೂ ಭಾವಿಸಬಾರದು. ಅದು ಪಂಡಿತರ ಅಭಿಪ್ರಾಯ. ಅದರಲ್ಲಿ ಭಿನ್ನಾಭಿಪ್ರಾಯ ವಿದ್ದರೆ ವಿದ್ವಾಂಸರು ಸೂಚಿಸಬಹುದು. ಏಕೆಂದರೆ 'ಜಗನ್ನಾಥ ವಿಜಯ' 'ರಾಜಶೇಖರ ವಿಳಾಸ' 'ಪಂಪಭಾರತ' ಮುಂತಾದ ಕಾವ್ಯಗಳ ಅಭಿಪ್ರಾಯವನ್ನು ಇಂದು ಖಚಿತವಾಗಿ ಹೇಳುವುದು ಕಷ್ಟಕರವಾದುದೇ.

ಸಂಸ್ಕೃತಭಾಷೆಯ ಮೂಲ ಕಾದಂಬರಿಯನ್ನು ಅನೇಕಸಲ ವಿದ್ಯಾರ್ಥಿಗಳಿಗೆ ಪಾಠ ಹೇಳಿದ ಅನುಭವ ಮತ್ತು ಕನ್ನಡ ಕಾದಂಬರಿಯನ್ನು ಸಂಸ್ಕೃತ ಕಾದಂಬರಿಯೊಂದಿಗೆ ತುಲನಾತ್ಮಕವಾಗಿ ಮಾಡಿರುವ ಆಳವಾದ ಅಭ್ಯಾಸದ ಫಲವಾಗಿ ಈ ಅನುವಾದವು ಕನ್ನಡನಾಡಿನ ಸಹೃದಯವೃಂದಕ್ಕೆ ಮೆಚ್ಚಿಕೆಯಾಗುವುದೆಂದೂ ಇವರ

ಅನುವಾದಶೈಲಿಯು ಸರಳವಾಗಿದ್ದು ಜನಸಾಮಾನ್ಯಕ್ಕೆ ನಾಗವರ್ಮನ ಕಾದಂಬರಿಯ ರಸವನ್ನು ಸವಿಯಲು ಸಹಾಯಕವಾಗಿದೆಯೆಂದೂ ನಂಬಿದ್ದೇನೆ.

ಅನುವಾದವನ್ನು ಮಾಡಿಕೊಟ್ಟ ಅನುವಾದಕರಿಗೂ, ಅನುವಾದ ನೋಡಿ ಪರಿಶೀಲಿಸಿ ಕೊಟ್ಟ ವಿದ್ವಾನ್ ಶ್ರೀ ಎಸ್. ರಂಗನಾಥ ಶರ್ಮಾ ಅವರಿಗೂ ನಮ್ಮ ಅಭಿನಂದನೆಗಳು. ಕನ್ನಡಿಗರು ಇದರ ಉಪಯೋಗವನ್ನು ಪಡೆಯುತ್ತಾರೆಂದು ನಂಬಿದ್ದೇನೆ.

ಬೆಂಗಳೂರು
2-10-76

ರಂ. ಶ್ರೀ. ಮುಗಳಿ
ಪ್ರಧಾನ ಸಂಪಾದಕ

# ಬಿನ್ನಹ

ಹಳಗನ್ನಡ ಕಾವ್ಯಗಳನ್ನು ಪ್ರಚಲಿತವಾದ ಕನ್ನಡದಲ್ಲಿ ಗದ್ಯಾನುವಾದ ಮಾಡಿ ಜನತೆಗೆ ಒದಗಿಸಬೇಕೆಂಬ ಉದ್ದೇಶದಿಂದ ಕನ್ನಡ ಸಾಹಿತ್ಯ ಪರಿಷತ್ತು ಎರಡು ಅನುವಾದಕ ಮಂಡಲಿಗಳನ್ನು ರಚಿಸಿತು. ಒಂದು ಬೆಂಗಳೂರಿನಲ್ಲಿಯೂ ಇನ್ನೊಂದು ಮೈಸೂರಿನಲ್ಲಿಯೂ ಅನುವಾದ ಕಾರ್ಯವನ್ನು ನಡೆಸಬೇಕೆಂದು ನಿರ್ಣಯವಾಯಿತು. ಬೆಂಗಳೂರಿನ ಅನುವಾದಕ ಮಂಡಲಿಗೆ ನಾನು ಅಧ್ಯಕ್ಷನಾಗಿರಬೇಕೆಂದು ಕನ್ನಡ ಸಾಹಿತ್ಯ ಪರಿಷತ್ತು ಗೊತ್ತುಮಾಡಿತು. ಈ ಮಂಡಲಿಗೆ ಅನುವಾದಕ ಸದಸ್ಯರಾಗಬೇಕೆಂದು ಕೆಲವು ವಿದ್ವಾಂಸರನ್ನು ಪರಿಷತ್ತು ಕೇಳಿಕೊಂಡಿತು. ಇದನ್ನು ಅಂಗೀಕರಿಸಿದ ವಿದ್ವಾಂಸರು ಅನುವಾದಕ ಮಂಡಲಿಯ ಸದಸ್ಯರಾಗಿ ತಮ್ಮ ಕಾರ್ಯವನ್ನು ನಡೆಸಿಕೊಡಲು ಒಪ್ಪಿದರು.

ಅನಂತರ ತಿಂಗಳಿಗೊಂದು ಸಲ ಸಭೆ ಸೇರಿ ಆ ತಿಂಗಳು ಮಾಡಿದ ಅನುವಾದ ಭಾಗವನ್ನು ಪರಿಶೀಲಿಸಿ ನ್ಯೂನಾತಿರೇಕಗಳನ್ನು ತಿದ್ದುವ ಕ್ರಮ ನಡೆಯುತ್ತಾ ಬಂದಿತು. ಅನೇಕಾರ್ಥಗಳನ್ನು ಕೊಡುವ ಶ್ಲೇಷವಾಕ್ಯವಿದ್ದರೆ ಪ್ರಕೃತವಾದ ಅರ್ಥವನ್ನು ಮೊದಲು ಬರೆದು ಅನಂತರ ಉಳಿದ ಅರ್ಥವನ್ನು ಬರೆಯಬೇಕು—ಎಂದು ನಿಶ್ಚಯಿಸಿಕೊಳ್ಳಲಾಯಿತು. ಅನುವಾದಕ್ರಮದಲ್ಲಿ ಬರುವ ತೊಡಕನ್ನು ಬಿಡಿಸುವುದು, ಕಠಿಣವಾದ ಗ್ರಂಥಭಾಗಕ್ಕೆ ಅರ್ಥವನ್ನು ನಿರ್ಣಯಿಸುವುದು ಮುಂತಾದ ಕಾರ್ಯಗಳು ನಡೆದವು,

ಹೀಗೆ ಹಂತಹಂತವಾಗಿ ಅನುವಾದ ಕಾರ್ಯ ನಡೆಯುವಾಗ ನಾನು ಅವನ್ನು ಪರಿಶೀಲಿಸಿ ಯಥಾಮತಿಯಾಗಿ ಮಾರ್ಗದರ್ಶನವನ್ನು ಮಾಡಿದ್ದೇನೆ. ಮೇಲೆ ಕಾಣಿಸಿದ ನಿರ್ಣಯಗಳಿಗೆ ಅನುಸಾರವಾಗಿ ಅನುವಾದವು ಇರಬೇಕೆಂದು ನನ್ನ ಸಂಕಲ್ಪವಾಗಿತ್ತು,

ಹಸ್ತಪ್ರತಿಗಳು ಕೈಸೇರುತ್ತಾ ಬಂದಂತೆ ಅವನ್ನು ಪರಿಶೀಲಿಸಿ ಅಲ್ಲಲ್ಲಿ ತಿದ್ದಿರುತ್ತೇನೆ. ತಿದ್ದಿರುವುದನ್ನು ಅನುವಾದಕರ ಗಮನಕ್ಕೆ ತಂದು ಅವರ ಒಪ್ಪಿಗೆಯನ್ನು ಪಡೆದಿರುತ್ತೇನೆ. ಹೆಚ್ಚಿನ ವಿಶೇಷವನ್ನು ಅಡಿಟಿಪ್ಪಣಿಯಲ್ಲಿ (ರಂ) ಎಂಬ ಸಂಕೇತದಿಂದ ಸೂಚಿಸಿದ್ದೇನೆ.

ಪತ್ರಿಯೊಂದು ವಾಕ್ಯವನ್ನೂ ತಿದ್ದಿ ಮಾರ್ಪಡಿಸುವುದು ಕಾರ್ಯಸಾಧ್ಯವಲ್ಲ ; ಅಪೇಕ್ಷಣೀಯವೂ ಅಲ್ಲ. ಅನುವಾದಕರು ವಿದ್ವಾಂಸರಾದ್ದರಿಂದ ಹೆಚ್ಚಿನ ಹಸ್ತಕ್ಷೇಪ ನನಗೆ ಸರಿಯೆನಿಸಲಿಲ್ಲ. ಮೂಲವನ್ನೂ ಅನುವಾದವನ್ನೂ ಅಕ್ಷರಶಃ ತಾಳೆನೋಡುವುದು ಕಠಿಣವೇ. ಅದೆಲ್ಲವನ್ನೂ ಅನುವಾದಕರು ಸರಿಯಾಗಿ ಗಮನಿಸಿಯೇ ಇರುತ್ತಾರೆಂಬ ವಿಶ್ವಾಸವನ್ನು ತಳೆದು, ಮೇಲ್ನೋಟದಲ್ಲಿ ಕಾಣುವ ಕೆಲವು ದೋಷಗಳನ್ನು ಅಲ್ಲಲ್ಲಿ ತಿದ್ದುವ ಪ್ರಯತ್ನಮಾಡಿದ್ದೇನೆ. ಅನುವಾದದಲ್ಲಿರುವ ಗುಣಗಳಿಗೆ ಆಯಾ ವಿದ್ವಾಂಸರೇ ಭಾಗಿಗಳು.

ಈ ಕಾರ್ಯದಲ್ಲಿ ನನಗೆ ಪೂರ್ಣ ಸಹಕಾರವನ್ನಿತ್ತು ತಮ್ಮ ಕಾರ್ಯವನ್ನು ಯಶಸ್ವಿಯಾಗಿ ನಡೆಸಿಕೊಟ್ಟಿರುವ ಎಲ್ಲ ವಿದ್ವಾಂಸರನ್ನೂ ಅಭಿನಂದಿಸುತ್ತೇನೆ.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರು ನನ್ನಲ್ಲಿ ವಿಶ್ವಾಸವಿಟ್ಟು ಅಭಿಮಾನದಿಂದ ಪ್ರೋತ್ಸಾಹಿಸಿದ್ದಾರೆ, ಈ ಮಂಡಲಿಯ ಅಧ್ಯಕ್ಷನಾಗಿ ಕೆಲಸಮಾಡಲು ಸಕಲ ಸೌಕರ್ಯಗಳನ್ನೂ ಒದಗಿಸಿಕೊಟ್ಟಿದ್ದಾರೆ. ಆ ಮಹನೀಯರಿಗೆ ಕೃತಜ್ಞತೆಯ ವಂದನೆಗಳನ್ನು ಅರ್ಪಿಸುತ್ತೇನೆ. ಎಲ್ಲ ನೆರವಿತ್ತು ಸಹಕರಿಸಿದ ಕನ್ನಡ ಸಾಹಿತ್ಯ ಪರಿಷತ್ತಿನ ಅಧಿಕಾರವರ್ಗದವರ ಉಪಕಾರವನ್ನು ಸ್ಮರಿಸಿಕೊಳ್ಳುತ್ತೇನೆ.

ಬೆಂಗಳೂರು
5–10–76

ಎನ್. ರಂಗನಾಥ ಶರ್ಮಾ
ಅಧ್ಯಕ್ಷ
ಬೆಂಗಳೂರು ಅನುವಾದಕ ಮಂಡಲಿ
ಕನ್ನಡ ಸಾಹಿತ್ಯ ಪರಿಷತ್ತು

# ವಿಷಯ ಸೂಚಿ

# ಉಪೋದ್ಘಾತ

## ಕರ್ಣಾಟಕ ಕಾದಂಬರಿಯ ಕವಿ ಮತ್ತು ಕಾಲ

ಕರ್ಣಾಟಕ ಕಾದಂಬರಿಯನ್ನು ರಚಿಸಿರುವವನು ನಾಗವರ್ಮ. ಇವನ ಕಾಲ ಮತ್ತು ದೇಶಗಳ ವಿಚಾರದಲ್ಲಿ ನಿರ್ಣಾಯಕವಾದ ಯಾವ ಆಧಾರವೂ ಸಿಕ್ಕಿಲ್ಲ. ಅದಲ್ಲದೆ ನಾಗವರ್ಮನೆಂಬ ಹೆಸರಿನ ಕವಿ ಒಬ್ಬ, ಇಬ್ಬರು, ಮೂವರು ಎಂಬ ವಿಚಾರವೂ ನಡೆದಿದೆ. ಈ ವಿಷಯದಲ್ಲಿ ಕನ್ನಡ ಕವಿಚರಿತ್ರೆಕಾರರಾದ ಕೀರ್ತಿಶೇಷ ಶ್ರೀ. ಆರ್. ನರಸಿಂಹಾಚಾರ್ಯರಿಂದ ಹಿಡಿದು ಈವರೆಗೂ ಹಲವಾರು ವಿದ್ವಾಂಸರು ಚರ್ಚಿಸಿದ್ದಾರೆ. ಈ ಚರ್ಚೆಗಳ ವಿವರಗಳನ್ನೆಲ್ಲ ಇಲ್ಲಿ ಕೊಡುವುದು ಪ್ರಕೃತೋಪಯೋಗಿಯೂ ಆಗುವುದಿಲ್ಲ. ಚರ್ವಿತ ಚರ್ವಣವೂ ಆಗುತ್ತದೆ. ಆದ್ದರಿಂದ ಅವರ ವಿಚಾರಮಂಥನದಿಂದ ಉದ್ಭೂತವಾದ ಸಾರಾಂಶವನ್ನು ಮಾತ್ರ ಇಲ್ಲಿ ತಿಳಿಸಲಾಗುವುದು.

"ನಾಗವರ್ಮ" ಎಂಬ ಹೆಸರಿನ ಕವಿಗಳು ಮೂವರಿದ್ದಾರೆ. ಇವರಲ್ಲಿ ಒಂದನೆಯ ನಾಗವರ್ಮನು ಕರ್ಣಾಟಕ ಕಾದಂಬರಿ ಎಂಬ ಚಂಪೂಕಾವ್ಯವನ್ನೂ "ಕರ್ಣಾಟಕ ಛಂದೋಂಬುಧಿ" ಎಂಬ ಛಂದಶ್ಶಾಸ್ತ್ರ ಗ್ರಂಥವನ್ನೂ ಬರೆದಿದ್ದಾನೆ. ಎರಡನೆಯ ನಾಗವರ್ಮನು ವರ್ಧಮಾನಪುರಾಣ, ವಸ್ತುಕೋಶ, ಕಾವ್ಯಾವಲೋಕನ, ಭಾಷಾಭೂಷಣ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಮೂರನೆಯ ನಾಗವರ್ಮನು ಚೂಡಮಣಿ ಶತಕವೆಂಬ ಗ್ರಂಥವನ್ನು ರಚಿಸಿದ್ದಾನೆ. ಇದರಿಂದ ಕರ್ಣಾಟಕ ಕಾದಂಬರಿಯ ಕವಿ ಒಂದನೆಯ ನಾಗವರ್ಮನೆಂದು ಹೇಳಿದಂತಾಯಿತು.

ಈ ನಾಗವರ್ಮನು ತನ್ನ ಛಂದೋಂಬುಧಿಯಲ್ಲಿ ಸ್ವವಿಷಯವನ್ನು ಹೀಗೆ ಹೇಳಿಕೊಂಡಿದ್ದಾನೆ : ಜಗತ್ಪ್ರಸಿದ್ಧವಾದ ವೆಂಗಿವಿಷಯದ ಸಪ್ತಗ್ರಾಮದಲ್ಲಿ ವೆಂಗಿಪಟು ಎಂಬ ಗ್ರಾಮವಿದೆ. ಅಲ್ಲಿ ವೆಣ್ಣಮಯ್ಯನೆಂಬ ದೊಡ್ಡ ವಿದ್ವಾಂಸನಿದ್ದನು. ಅವನು ವೇದಾಧ್ಯಯನ ಸಂಪನ್ನನಾಗಿಯೂ ಪರಿಶುದ್ಧವಾದ ನಡೆನುಡಿಯುಳ್ಳವನಾಗಿಯೂ ಇದ್ದನು. ಅವನು ಕೌಂಡಿನ್ಯಗೋತ್ರದವನು. ಆತನ ಧರ್ಮಪತ್ನಿ ಕೌಂಡಿಮಬ್ಬೆ. ಅವರಿಬ್ಬರ ಸುಪುತ್ರ ಧಾಮಮಯ್ಯ. ದಾಮಮಯ್ಯನ ಧರ್ಮಪತ್ನಿ ಕುಂದಕಬ್ಬೆ. ಈ ದಂಪತಿಗಳ ಹಿರಿಯ ಮಗ ವೆಣ್ಣಮಯ್ಯ. ವೆಣ್ಣಮಯ್ಯನ ಧರ್ಮಪತ್ನಿ ಪೋಟಿಕಬ್ಬೆ. ಪಂಡಿತೋತ್ತಮನಾದ ವೆಣ್ಣಮಯ್ಯ ಮತ್ತು ಪೋಟಿಕಬ್ಬೆಯರ ಹಿರಿಯ ಮಗನೇ ನಾಗವರ್ಮ. ಇದು ಕವಿಯ ತ್ರಿಪೂರುಷ.

ಹಾಗೆಯೆ ನಾಗವರ್ಮನು ಅದೇ ಛಂದೋಂಬುಧಿಯಲ್ಲಿ

ಅರಸಂ ರಕ್ಕಸಗಂಗಂ
ಗುರುಗಳ್ ನೆಗಟ್ದಜಿತಸೇನದೇವರ್ ದಯೆಯಿಂ
ಪೊರೆವ ನೃಪನಣ್ಣನೆನೆ ಮ
ಚ್ಚರಿಸುವರಾರ್ ನಾಕಿಯಿರುಳೊಳೇಂ ಪುಟ್ಟಿದನೇ
ಗಂಡರ ಮೂಕುತಿಯೆನಿಸಿದ
ಮಾಂಡಳಿಕರ ಮಂತ್ರಿ ಸಂಧಿವಿಗ್ರಹಿ ರಾಯಂ
ಕೊಂಡಾಡಿ ಪೊರೆದನೆನೆ ಧರೆ
ಕೊಂಡಾಡದೆ ಕೊಂಡುಕೊನೆಯದೇಂ ನಾಕಿಗನಂ

ಎಂದು ಹೇಳಿಕೊಂಡಿದ್ದಾನೆ.

ಇದರಿಂದ ಇವನು ರಕ್ಕಸಗಂಗನ ಕಾಲದಲ್ಲಿದ್ದನೆಂದೂ ಅಜೀತಸೇನದೇವರ ಶಿಷ್ಯನೆಂದೂ ಚಾಮುಂಡರಾಯನಿಂದ ಪೋಷಿತನಾಗಿದ್ದನೆಂದೂ ತಿಳಿದುಬರುತ್ತದೆ. ಇವರೆಲ್ಲರೂ ಚಾರಿತ್ರಿಕ ವ್ಯಕ್ತಿಗಳು. ಇದರಿಂದ ಇವನ ಕಾಲವು ಕ್ರಿ. ಶ. ೧೦ನೆಯ ಶತಮಾನದ ಅಂತ್ಯಭಾಗವೆಂದು ಹೇಳಬಹುದು. ಕವಿಚರಿತ್ರಕಾರರು ಕ್ರಿ. ಶ. ೯೯೦ರಲ್ಲಿ ಇವನು ಜೀವಿಸಿದ್ದನೆಂದು ತೀರ್ಮಾನಿಸಿದ್ದಾರೆ. ಇವನು ಛಂದೋಂಬುಧಿಯಲ್ಲಿ "ಸಯ್ಯಡಿಯ ಪಿನಾಕಿ ಕೂರ್ತು ನಮಗೀಗೆ ವರಂಗಳನುತ್ಸವಂಗಳಂ" ಎಂದು ಹೇಳಿಕೊಂಡಿರುವುದರಿಂದ ಈತನು ಸಯ್ಯಡಿಯೆಂಬ ಊರಿನಲ್ಲಿ ವಾಸವಾಗಿದ್ದನೆಂದು ಊಹಿಸಲು ಅವಕಾಶವಿದೆ.

ಇವನು ಶಿವೋಪಾಸಕನಾದ ಬ್ರಾಹ್ಮಣನೆಂದು ನಿರ್ಣಯಕ್ಕೆ ಬರಲು ಸಾಕಷ್ಟು ಆಧಾರಗಳಿವೆ.

ಇದಿಷ್ಟು ವಿಚಾರವೂ ಛಂದೋಂಬುಧಿಯಿಂದ ತಿಳಿದುಬಂದರೆ ಕಾದಂಬರಿಯಿಂದಲೂ ಒಂದೆರಡು ವಿಚಾರಗಳು ತಿಳಿದುಬರುತ್ತವೆ. ಅದರ ಏಳನೆಯ ಪದ್ಯ :

ಕೃತಿಪತಿ ನರೇಂದ್ರಚಂದ್ರಂ
ಕೃತಿಯಂ ಪೇಳ್ದಂ ಬುಧಾಬ್ಜವನಕಳಹಂಸಂ
ಕೃತಿ ಕಾದಂಬರಿಯೆನೆ ಸತ್ಕೃತಿ
ಕಥಿತ ಕಥಾವತಾರಮೇಂ ಕೇವಳಮೇ

ಇದರಿಂದ ನಾಗವರ್ಮನಿಗೆ ಚಂದ್ರನೆಂಬ ಹೆಸರುಳ್ಳ ರಾಜನು ಆಶ್ರಯದಾತನಾಗಿದ್ದನೆಂದು ಊಹಿಸಲು ಅವಕಾಶವಿದೆ. "ಬುಧಾಬ್ಜವನ ಕಳಹಂಸ" ಎಂಬುದು ಕವಿಯ ಬಿರುದಾಗಿರಬೇಕು. ಕಾವ್ಯದ ಮುಕ್ತಾಯದಲ್ಲೂ "ರಾಜೇಂದ್ರ ಚಂದ್ರಾಂಕನೊಳ್ ಸಂಗತಿವೆತ್ತು" ಎಂದು ಹೇಳಿದ್ದಾನೆ. ಈ ಚಂದ್ರನಾರು ? ಎಂಬುದು ತಿಳಿದುಬಂದಿಲ್ಲ.

ಮತ್ತೊಂದು ಪದ್ಯದಲ್ಲಿ

> ಇವು ಕಾಳಿಂಗಾಭಿಧೇಯ ಪ್ರವಿದಿತಮಿವು...ನಾನಾ ಶಾಸನಂ
> ಸತ್ಕೃತಿ ವನಿತೆಗಿವೌಚಿತ್ಯಮೆಂದಿತ್ತನತ್ಯುತ್ಸವದಿಂ ವಿದ್ವತ್ಸಭಾ
> ಮಂಡಲಿ ತಣವಿನೆಗಂ "ಭೋಜರಾಜಕ್ಷಿತೀಶಂ"

ಎಂದು ಭೋಜರಾಜನು ಅನೇಕ ಜಾತ್ಯಶ್ವಗಳನ್ನು ಕೊಟ್ಟು ಗೌರವಿಸಿದ ಸಂಗತಿಯನ್ನು ತಿಳಿಸಿದ್ದಾನೆ.

ಅವನು ಸಂಸ್ಕೃತಕವಿಯೂ ಅನೇಕ ಕವಿಗಳಿಗೆ ಆಶ್ರಯದಾತನೂ ಆಗಿದ್ದ ಧಾರಾ ನಗರದ ಭೋಜರಾಜನೇ ಇರಬೇಕೆಂದು ವಿದ್ವಾಂಸರು ನಂಬುತ್ತಾರೆ. ಏಕೆಂದರೆ ಧಾರಾ ನಗರದ ಭೋಜರಾಜನೂ ನಾಗವರ್ಮನೂ ಸಮಕಾಲೀನರೆಂದು ಹೇಳಲು ಆಧಾರವಿದೆ. ನಾಗವರ್ಮನು ಉದ್ದಾಮ ಕವಿ ಮಾತ್ರವಲ್ಲ, ಯುದ್ಧವೀರನೂ ಆಗಿದ್ದನೆಂಬುದು ಸ್ಥಿರ ಪಟ್ಟಿದೆ. ಆದರಿಂದ ಭೋಜರಾಜನು ಇವನಿಗೆ ಕುದುರೆಗಳನ್ನು ಕೊಡುವುದರಲ್ಲಿ ಔಚಿತ್ಯ ವಿದೆ. ಈ ವಿಷಯದಲ್ಲಿ ಶ್ರೀ ಎಚ್. ಎಂ. ಶಂಕರನಾರಾಯಣರಾಯರು ಒಂದನೆಯ ನಾಗವರ್ಮ ಎಂಬ ಪುಸ್ತಕದ ಪೀಠಿಕೆಯಲ್ಲಿ ಕವಿಯ ಆಶ್ರಯದಾತನಾದ ರಾಜನು ಧಾರಾ ನಗರದ ಭೋಜರಾಜನ ಸಮಕಾಲೀನನೂ ಅವನ ಸಾಮಂತರಾಜನೂ ಆಗಿದ್ದು ಕೊಲ್ಹಾ ಪುರ—ಕರ್ಹಾಡ ಪ್ರಾಂತ್ಯವನ್ನು ಆಳುತ್ತಿದ್ದ ಚಂದ್ರನೆಂಬ ರಾಜನೆಂದೂ ಈ ಸಂಬಂಧ ದಿಂದಲೇ ನಾಗವರ್ಮನ ಕವಿತಾಶಕ್ತಿಯೂ ಯುದ್ಧದಲ್ಲಿ ಪರಾಕ್ರಮವೂ ಭೋಜರಾಜನ ಕಿವಿಗೆ ಮುಟ್ಟಿ, ನಾಗವರ್ಮನನ್ನು ತನ್ನ ಆಸ್ಥಾನಕ್ಕೆ ಕರೆಸಿಕೊಂಡು ಜಾತ್ಯಶ್ವಗಳನ್ನು ಕೊಟ್ಟು ಗೌರವಿಸಿರಬೇಕೆಂದೂ ಹೇಳಿರುವುದು ಸಮಂಜಸವಾಗಿದೆ. ಧಾರಾನಗರದ ಭೋಜ ರಾಜನ ಕಾಲವು ಕ್ರಿ. ಶ. ೧೦೦೦—೧೦೫೪ ಎಂದು ದೃಢಪಟ್ಟಿರುವುದರಿಂದ ಅವನ ಸಮ ಕಾಲೀನನಾದ ನಾಗವರ್ಮನೂ ಅದೇ ಕಾಲದಲ್ಲಿದ್ದು ಗ್ರಂಥರಚನೆ ಮಾಡಿರುವನೆಂದೂ ಹೇಳಬಹುದು.

ಒಟ್ಟಿನಲ್ಲಿ ಒಂದನೆಯ ನಾಗವರ್ಮನು ಹತ್ತನೆಯ ಶತಮಾನದ ಅಂತ್ಯದಲ್ಲಿ ಹಾಗೂ ಹನ್ನೊಂದನೆಯ ಶತಮಾನದ ಆದಿಭಾಗದಲ್ಲಿ ಜೀವಿಸಿದ್ದು, ಮೊದಲು ಚಾಮುಂಡರಾಯನ ಆಶ್ರಯದಲ್ಲಿದ್ದು ಬಳಿಕ ಕೊಲ್ಹಾಪುರ—ಕರ್ಹಾಡ ಪ್ರಾಂತ್ಯದ ರಾಜ ನಾಗಿದ್ದ ಚಂದ್ರಭೂಪಾಲನ ಆಸ್ಥಾನವನ್ನು ಸೇರಿ ಕಾವ್ಯಗಳನ್ನು ರಚಿಸಿ ಮಹಾಕವಿ ಯೆನಿಸಿಕೊಂಡು, ಯುದ್ಧದಲ್ಲಿ ಸಾಹಸವನ್ನು ತೋರಿಸಿ ಮಹಾವೀರನೆನಿಸಿಕೊಂಡು, ಚಂದ್ರನ ಅಧಿರಾಜನಾದ ಭೋಜಮಹಾರಾಜನಿಂದಲೂ ಗೌರವಿಸಲ್ಪಟ್ಟು ದಿಗಂತ ವಿಶ್ರಾಂತವಾದ ಕೀರ್ತಿಯನ್ನು ಗಳಿಸಿದನೆಂದು ನಿರ್ಣಯಿಸಬಹುದು.

## ನಾಗವರ್ಮನ ವಂಶವೃಕ್ಷ




### ಬಾಣಭಟ್ಟ

ನಾಗವರ್ಮನು ಚಂಪೂ (ಗದ್ಯಪದ್ಯ ರೂಪವಾದ) ಕಾವ್ಯವಾಗಿ ಕನ್ನಡಿಸಿರುವ ಕರ್ಣಾಟಕ ಕಾದಂಬರಿಯ ಮೂಲಗ್ರಂಥವು ಸಂಸ್ಕೃತಭಾಷೆಯ "ಕಾದಂಬರೀ" ಎಂಬ ಸೊಗಸಾದ ಗದ್ಯಕಾವ್ಯ. ಇದನ್ನು ರಚಿಸಿರುವವನು ಸುಪ್ರಸಿದ್ಧ ಕವಿ ಬಾಣಭಟ್ಟ. ಸಂಸ್ಕೃತಭಾಷೆಯಲ್ಲಿ ಗದ್ಯಕಾವ್ಯಗಳೇ ವಿರಳ. ಸುಬಂಧುವಿನ ವಾಸವದತ್ತಾ, ಬಾಣನ ಹರ್ಷಚರಿತೆ, ಕಾದಂಬರೀ, ದಂಡಿಯ ದಶಕುಮಾರ ಚರಿತೆಗಳನ್ನು ಬಿಟ್ಟರೆ ಬೇರೆ ಗದ್ಯ ಕಾವ್ಯಗಳು ಪ್ರಚಾರದಲ್ಲಿಲ್ಲ. ಇವುಗಳಲ್ಲೂ ಕಾದಂಬರಿಯು ಕಥಾವಸ್ತು, ಪಾತ್ರ ನಿರ್ಮಾಣ, ರಸ, ವರ್ಣನೆ ಮೊದಲಾದ ಕಾವ್ಯಗುಣದಿಂದ ಸಂಸ್ಕೃತ ಸಾಹಿತ್ಯದಲ್ಲಿ ಮೂರ್ಧನ್ಯಸ್ಥಾನವನ್ನು ಅಲಂಕರಿಸಿದೆ.

ಬಾಣನು ತನ್ನ ಗದ್ಯಕಾವ್ಯಕ್ಕೆ ಕಥಾಸರಿತ್ಸಾಗರವೆಂಬ ಪ್ರಾಚೀನ ಕಾವ್ಯದಲ್ಲಿರುವ ಮಕರಂದೋಪಾಖ್ಯಾನವೆಂಬ ಕಥಾಭಾಗವನ್ನು ಆಧಾರವನ್ನಾಗಿ ತೆಗೆದುಕೊಂಡಿದ್ದಾನೆ. ಅದರಲ್ಲಿರುವ ಹೆಸರು, ಕಥಾವಸ್ತು ಮೊದಲಾದುವುಗಳನ್ನೆಲ್ಲಾ ಯಥೋಚಿತವಾಗಿ ಬದಲಾಯಿಸಿ ತನ್ನ ಅದ್ಭುತವಾದ ಕಲ್ಪನಾಶಕ್ತಿಯಿಂದ ಅದಕ್ಕೆ ಪರಮಸುಂದರವಾದ ಆಕಾರವನ್ನು ಕೊಟ್ಟು ಕಾದಂಬರಿಯನ್ನು ರಚಿಸಿದ್ದಾನೆ.

ಇಂತಹ ಅಮೋಘವಾದ ಕೃತಿಗೆ ಜನಕನಾದ ಬಾಣಮಹಾಕವಿಯು ಕ್ರಿ.ಶ. ೬೦೬—೬೪೮ರವರೆಗೆ ಉತ್ತರ ಭಾರತದಲ್ಲಿ ಚಕ್ರವರ್ತಿಯೆನಿಸಿಕೊಂಡು ಆಳಿದ ಸ್ಥಾಣೇಶ್ವರದ ಶ್ರೀಹರ್ಷದೇವನ ಆಸ್ಥಾನಕವಿಯಾಗಿದ್ದನು.

ಶ್ರೀಹರ್ಷನು ಸ್ವತಃ ಕವಿಯಾಗಿಯೂ ಕವಿಗಳಿಗೆ ಪೋಷಕನಾಗಿಯೂ ಇದ್ದನು. ಬಾಣ, ಮಯೂರ, ದಿವಾಕರ ಮೊದಲಾದ ಉದ್ದಾಮಕವಿಗಳು ಅವನ ಆಸ್ಥಾನವನ್ನು ಮಂಡಿಸಿದ್ದರು. ಚೀನಾದೇಶದ ಯಾತ್ರಿಕನಾದ ಹುಯಾನತ್ಸಾಂಗನು ಶ್ರೀಹರ್ಷನ ಆಸ್ಥಾನಕ್ಕೆ ಬಂದಿದ್ದುದು ಐತಿಹಾಸಿಕ ಸಂಗತಿಯಾಗಿದೆ. ಶ್ರೀಹರ್ಷನ ಕಾಲವು ಸಂಸ್ಕೃತ

ಸಾಹಿತ್ಯದ ಸುವರ್ಣಯುಗವೆಂದು ಹೇಳಬಹುದು. ಅಂತಹ ಕಾಲದಲ್ಲಿ ಬಾಣನು ಬದುಕಿ ಬಾಳಿ ಮಹಾಕವಿಯೆನಿಸಿಕೊಂಡಿದ್ದಾನೆ.

ಇವನು ತಾನು ಬರೆದ ಹರ್ಷಚರಿತೆ ಮತ್ತು ಕಾದಂಬರಿಗಳಲ್ಲಿ ತನ್ನ ಕುಲ ಗೋತ್ರವೇ ಮೊದಲಾದುವುಗಳನ್ನು ತಕ್ಕಮಟ್ಟಿಗೆ ತಿಳಿಸಿದ್ದಾನೆ.

ಇವನದು ವಾತ್ಸ್ಯಾಯನ ಗೋತ್ರ. ಅದರಲ್ಲಿ ಕುಬೇರನೆಂಬ ಬ್ರಾಹ್ಮಣಶ್ರೇಷ್ಠನು ಜನಿಸಿದನು. ಅವನ ಮಗ ಅರ್ಥಪತಿ. ಅವನ ಮಗ ಚಿತ್ರಭಾನು. ಚಿತ್ರಭಾನುವಿನ ಮಗನೇ ಬಾಣಭಟ್ಟ. ತಾಯಿ ರಾಜದೇವಿ. ಜನ್ಮಸ್ಥಳ ಶೋಣಾತೀರದಲ್ಲಿರುವ ಪ್ರೀತಿ ಕೂಟ (ಈ ಗ್ರಾಮವು ಉತ್ತರ ಪ್ರದೇಶದ ಶಾಹಾಬಾದ್ ಎಂಬ ಜಿಲ್ಲೆಯಲ್ಲಿದ್ದಿತು). ಬಾಣನ ತಾಯಿಯು ಇವನ ಬಾಲ್ಯದಲ್ಲೆ ಸ್ವರ್ಗಸ್ಥಳಾದಳು. ತಂದೆಯೂ ಇವನ ಹದಿ ನಾಲ್ಕನೆಯ ವರ್ಷದಲ್ಲಿ ದಿವಂಗತನಾದನು. ಬಾಲ್ಯದಲ್ಲೇ ವೇದಶಾಸ್ತ್ರಗಳ ಅಭ್ಯಾಸವು ಚೆನ್ನಾಗಿ ನಡೆದಿತ್ತು. ಆದರೇನು ? ತಂದೆ ಸತ್ತ ಮೇಲೆ ಬಾಣನು ಸ್ವೇಚ್ಛಾಚಾರಿ ಯಾದನು. ಇವನ ಸುತ್ತಲೂ ಅನೇಕ ಗೆಳೆಯರು ಸೇರಿಕೊಂಡರು. ಅವರಲ್ಲಿ ಬೇರೆ ಬೇರೆ ವೃತ್ತಿಯ ಹಾಗೂ ದರ್ಜೆಯವರಿದ್ದರು. ಅವರ ಹೆಸರು ಮತ್ತು ವೃತ್ತಿಗಳನ್ನು ಹರ್ಷಚರಿತೆಯಲ್ಲಿ ಬಾಣನೇ ವಿವರಿಸಿದ್ದಾನೆ. ಈ ತಂಡದಿಂದ ಕೂಡಿ ಬಾಣನು ಊರೂರು ಅಲೆದನು, ದೇಶ ದೇಶಗಳನ್ನು ಸುತ್ತಿದನು, ಬಹಳ ಕಾಲದ ನಂತರ ಊರಿಗೆ ಮರಳಿ ಬಂದು ನೆಲೆಸಿದನು, ಮದುವೆಯಾಗಿ ಸಂಸಾರಿಯಾದನು. ವಿಶೇಷ ಪಾಂಡಿತ್ಯವನ್ನೂ ಅಸಾಧಾರಣವಾದ ಲೋಕವ್ಯವಹಾರವನ್ನೂ ಮೈಗೂಡಿಸಿಕೊಂಡು ಗ್ರಂಥರಚನೆಗೆ ಪ್ರಾರಂಭಿಸಿದನು. ತನ್ನ ಹೆಸರು ಚಕ್ರವರ್ತಿಯಾದ ಹರ್ಷವರ್ಧನನ ಕಿವಿಗೂ ಮುಟ್ಟು ವಷ್ಟುಮಟ್ಟಿಗೆ ಇವನು ಪ್ರಸಿದ್ಧನಾದನು. ವಿದ್ಯಾಪಕ್ಷಪಾತಿಯಾದ ಶ್ರೀಹರ್ಷನು ಇವನನ್ನು ಕರೆಸಿಕೊಳ್ಳಬೇಕೆಂದಿರುವಲ್ಲಿ ಆಸ್ಥಾನಿಕರಾದ ಕೆಲವರು ಹೊಟ್ಟೆಕಿಚ್ಚಿನಿಂದ ಬಾಣ ನಿಗೆ ವಿರುದ್ಧವಾಗಿ ಚಾಡಿ ಹೇಳಿ ಚಕ್ರವರ್ತಿಯ ಮನಸ್ಸನ್ನು ಕೆಡಿಸಿದರು. ಬಾಣನೊಬ್ಬ ಪೋಲಿ ಎಂಬ ಭಾವನೆ ಮೂಡುವಂತೆ ಮಾಡಿಬಿಟ್ಟರು. ಇಷ್ಟರಲ್ಲಿ ಚಕ್ರವರ್ತಿಯ ತಮ್ಮ ಗುಣೈಕಪಕ್ಷಪತಿಯಾದ ಕೃಷ್ಣರಾಜನು ಹರ್ಷನ ಮನಸ್ಸನ್ನು ತಿರುಗಿಸಿ ಬಾಣನನ್ನು ಕರೆಸಿಕೊಳ್ಳಲು ಅನುಮತಿಯನ್ನು ಪಡೆದನು. ಅಂತೆಯೆ ಬಾಣನಿಗೆ "ನಿಮ್ಮ ವಿಷಯ ದಲ್ಲಿ ಯಾರೋ ಚಕ್ರವರ್ತಿಗೆ ದುರಭಿಪ್ರಾಯವು ಮೂಡುವಂತೆ ಮಾಡಿದ್ದಾರೆ. ನೀವು ಈಗ ಇಲ್ಲಿಗೆ ಬಂದರೆ ಎಲ್ಲವೂ ಸರಿಹೋಗುತ್ತದೆ. ಕೂಡಲೆ ಹೊರಟುಬರುವುದು" ಎಂಬ ಅರ್ಥ ಬರುವಂತೆ ಪತ್ರವನ್ನು ಬರೆದು ದೂತರ ಮೂಲಕ ಪ್ರೀತಿಕೂಟಕ್ಕೆ ಕಳುಹಿಸಿದರು. ಬಾಣನಿಗೆ ಅಲ್ಲಿಗೆ ಹೋಗುವುದಕ್ಕೆ ಅಂಜಿಕೆ. ಹೇಗೋ ಪ್ರಯಾಣ ಬೆಳಸಿದನು. ಶ್ರೀ ಹರ್ಷನ ಭೇಟಿಯೇನೋ ಆಯಿತು. ಆದರೆ ಬಾಣನಿಗೆ ದೊರಕಬೇಕಾದ ಮನ್ನಣೆ ಮಾತ್ರ ದೊರಕಲಿಲ್ಲ. ಚಕ್ರವರ್ತಿಯು ಪಕ್ಕದಲ್ಲಿದ್ದ ಮಾಲವರಾಜಪುತ್ರನ ಕಡೆ ನೋಡುತ್ತಾ "ಮಹಾನಯಂ ಭುಜಂಗಃ" (ಇವನೊಬ್ಬ ದೊಡ್ಡ ಪೋಲಿ) ಎಂದನ್ನು

ಕೂಡಲೆ ಮಹಾರಾಜನ ಮನಸ್ಸಿಗೆ ಬರುವಂತೆ ಬಾಣನು ತನ್ನ ಪರಿಶುದ್ಧವಾದ ನಡತೆಯ ಬಗ್ಗೆ ಅರಿಕೆ ಮಾಡಿಕೊಂಡನು.

ಸ್ವಲ್ಪ ದಿನಗಳು ಕಳೆಯುವುದರೊಳಗಾಗಿ ಚಕ್ರವರ್ತಿಗೆ ಬಾಣಭಟ್ಟನ ವಿಷಯದಲ್ಲಿದ್ದ ದುರ್ಭಾವನೆ ಮಾಯವಾಯಿತು ; ಪ್ರೀತಿ ವಿಶ್ವಾಸಗಳು ಬೆಳೆದುವು. ಬಾಣನು ಚಕ್ರವರ್ತಿಯ ಅಂತರಂಗ ಮಿತ್ರರಲ್ಲಿ ಒಬ್ಬನೆನಿಸಿ ಅವನಿಂದ ಸ್ಥಾನ, ಮಾನ, ಧನ, ಗೌರವ, ಆತ್ಮೀಯತೆ, ಪ್ರಭಾವಗಳನ್ನು ಪಡೆದು ಸಂಸ್ಕೃತ ಸಾಹಿತ್ಯಕ್ಕೆ ಸೇವೆಸಲ್ಲಿಸುತ್ತಾ ಕೀರ್ತಿವಂತನಾದನು. ಒಮ್ಮೆ ತನ್ನ ಹುಟ್ಟೂರಿಗೆ ಹೋಗಿದ್ದಾಗ ಅಲ್ಲಿ ಅವನ ಬಾಲ್ಯ ಸ್ನೇಹಿತರು ಬಂಧುಬಳಗದವರು ಕೇಳಿಕೊಳ್ಳಲು ಚಕ್ರವರ್ತಿಯ ಜೀವನ ಚರಿತ್ರೆಯನ್ನು ಬರೆದನು. ಅದು "ಶ್ರೀಹರ್ಷ ಚರಿತಮ್" ಎಂಬ ಹೆಸರಿನಿಂದ ಪ್ರಸಿದ್ಧಿಯನ್ನು ಪಡೆದಿದೆ.

ಬಾಣಭಟ್ಟನು ಈ ಎರಡು ಗದ್ಯ ಪ್ರಬಂಧಗಳಲ್ಲದೆ ಚಂಡೀಶತಕವೆಂಬ ಸ್ತೋತ್ರವನ್ನೂ, ಪಾರ್ವತೀ ಪರಿಣಯ, ಮುಕುಟ ತಾಡಿಕವೆಂಬ ಎರಡು ನಾಟಕಗಳನ್ನೂ ಬರೆದಿದ್ದಾನೆ. ಇವನ ಕೊನೆಯ ಕೃತಿ ಕಾದಂಬರಿ. ಅದನ್ನು ಪೂರ್ಣಗೊಳಿಸುವುದರೊಳಗೆ ಅವನಿಗೆ ಅವಸಾನಕಾಲವು ಪ್ರಾಪ್ತವಾಯಿತು. ಅವನ ಮಗನಾದ ಭೂಷಣಭಟ್ಟನು ಉಳಿದ ಭಾಗವನ್ನು ಪೂರ್ಣಗೊಳಿಸಿದ್ದಾನೆ. ತಂದೆಗೆ ಸರಿಸಮಾನನೆನಿಸಿ ವಿದ್ವಾಂಸರು ಮೆಚ್ಚುವಂತೆ ಕಥೆಯನ್ನು ಪರಿಸಮಾಪ್ತಿಗೊಳಿಸಿದ್ದಾನೆ.

ಒಟ್ಟಿನಲ್ಲಿ ಬಾಣಭಟ್ಟನು ಸಂಸ್ಕೃತ ಸಾಹಿತ್ಯದಲ್ಲಿ ಬಹಳ ದೊಡ್ಡ ಕವಿ. "ಬಾಣೋಚ್ಛಿಷ್ಟಂ ಜಗತ್ಸರ್ವಂ" (ಜಗತ್ತೆಲ್ಲ ಬಾಣನು ಹೇಳಿ ಬಿಟ್ಟಿರುವುದು) "ಪಂಚ ಬಾಣಸ್ತು ಬಾಣಃ" (ಬಾಣನು ಮನ್ಮಥನೇ ಆಗಿದ್ದಾನೆ.) ಇವೇ ಮೊದಲಾದ ಅನೇಕ ಪ್ರಶಂಸೆಗಳಿಗೆ ಪಾತ್ರನಾಗಿದ್ದಾನೆ. ಅನೇಕ ಸಂಸ್ಕೃತ ಕವಿಗಳೂ ಇತರ ಭಾರತೀಯ ಭಾಷಾ ಕವಿಗಳೂ ಬಾಣನನ್ನು ಮುಕ್ತಕಂಠದಿಂದ ಕೊಂಡಾಡಿದ್ದಾರೆ. ಇತ್ತೀಚೆಗಂತೂ ಇವನ ಕೀರ್ತಿ ಸಮುದ್ರವನ್ನೂ ದಾಟಿ ವಿದೇಶಗಳಲ್ಲೂ ಹರಡಿಕೊಂಡಿದೆ. ಇಂತಹ ಮಹಾಕವಿ ನಮ್ಮ ದೇಶದಲ್ಲಿ ಹುಟ್ಟಿದುದು ನಮ್ಮ ಭಾಗ್ಯ.

## ಕರ್ಣಾಟಕ ಕಾದಂಬರಿಯ ಸಂಪಾದನೆ

ನಾಗವರ್ಮನ ಈ ಮಹಾಕೃತಿಯು ಕೇವಲ ಓಲೆಗರಿಯ ಎರಡೇ ಮಾತೃಕೆಗಳಲ್ಲಿ ಜೀವಿಸಿದ್ದ ವಿಚಾರವನ್ನು ಕೇಳಿದರೆ ಭಯವೇ ಆಗುತ್ತದೆ. ಕನ್ನಡಿಗರ ಪುಣ್ಯದಿಂದ ಆ ಮಾತೃಕೆಗಳು ಕೀರ್ತಿಶೇಷರಾದ ಬಿ. ಮಲ್ಲಪ್ಪನವರಿಗೆ ದೊರಕಿದ್ದರಿಂದ ಈದಿನ ನಾವು ಕಾದಂಬರಿಯ ರಸಾಸ್ವಾದ ಮಾಡುವ ಅವಕಾಶವನ್ನು ಪಡೆದಿದ್ದೇವೆ.

ಶ್ರೀಮನ್ಮಹಾರಾಜರವರ ಕನ್ನಡ ಸ್ಕೂಲ್ ಹೆಡ್ಮಾಸ್ಟರಾಗಿದ್ದ ಶ್ರೀಯುತ ಬಿ. ಮಲ್ಲಪ್ಪನವರು ಇದನ್ನು 1892ರಲ್ಲಿ ಮುದ್ರಿಸಿ ಪ್ರಕಾಶಪಡಿಸಿದರು. ಅವರು ದೊಡ್ಡ ಪಂಡಿತರು. ಅಶುದ್ಧವಾಗಿದ್ದ ಭಾಗವನ್ನು ಪರಿಷ್ಕರಿಸಿ, ಕೆಳಗೆ ಅರ್ಥವಿವರಣೆಗಾಗಿ

ಅಡಿಟಿಪ್ಪಣಿಯನ್ನು ಕೊಟ್ಟು, ಮುಖ್ಯವಾದ ಪದಗಳಿಗೆ ನಿಷ್ಪತ್ತಿಯನ್ನು ವಿವರಿಸಿ ಗ್ರಂಥಸಂಪಾದನೆಯ ಕಾರ್ಯವನ್ನು ಚೆನ್ನಾಗಿ ನಿರ್ವಹಿಸಿದ್ದಾರೆ. ಅಲ್ಲಲ್ಲಿದ್ದ ಗ್ರಂಥಪಾತನವನ್ನು ಪೂರ್ಣಗೊಳಿಸಿದ್ದಾರೆ. ತುಟಿತವಾದ ಭಾಗವನ್ನು ತಮ್ಮ ಕಾಲದ ಕವಿಗಳಿಂದ ಬರೆಯಿಸಿ ಕಥಾಸ್ವಾರಸ್ಯಕ್ಕೆ ಭಂಗಬರದಂತೆ ಮಾಡಿದ್ದಾರೆ, ಅವರೇ ತಮ್ಮ ಮುನ್ನುಡಿಯಲ್ಲಿ ಸೂಚಿಸಿರುವಂತೆ ಪೂರ್ವ ಕಾದಂಬರಿಯ ೬೦೩ ರಿಂದ ೬೧೪ರ ವರೆಗೆ ಮತ್ತು ೭೨೧ ರಿಂದ ೭೨೭ ರವರೆಗೆ ಬಸವಪ್ಪಶಾಸ್ತ್ರಿಗಳೂ ಉತ್ತರ ಕಾದಂಬರಿಯಲ್ಲಿ ೫೭೦-೫೮೯ ರವರೆಗೆ ಅಯ್ಯಾಶಾಸ್ತ್ರಿಗಳೂ ೭೨೮-೭೩೫ರವರೆಗೆ ಕರಿಬಸವಪ್ಪಶಾಸ್ತ್ರಿಗಳೂ ರಚಿಸಿರುತ್ತಾರೆ.

(ಈ ಸಂಖ್ಯೆ ಅವರ ಮುದ್ರಣಪ್ರತಿಯದು. ನಮ್ಮಲ್ಲಿ ಬೇರೆ ಸಂಖ್ಯೆಯನ್ನು ಅಲ್ಲಲ್ಲಿ ಸೂಚಿಸಲಾಗಿದೆ)

ಚಿತ್ತ ದ್ರವೀಭಾವವನ್ನುಂಟು ಮಾಡುತ್ತದೆ. ಭವಭೂತಿಯ ಉತ್ತರರಾಮ ಚರಿತೆಯಲ್ಲೂ ಇದೇ ರಸ. ಹಾಗೆಯೇ ಕಾದಂಬರಿಯಲ್ಲೂ "ಕರುಣ ವಿಪ್ರಲಂಭ ಶೃಂಗಾರ" ವೆಂಬ ರಸವು ಬೇರೆ ಬೇರೆ ರಸಗಳಿಂದ ಪರಿಪುಷ್ಟವಾಗಿ ಪ್ರಧಾನವಾಗಿ ಅಭಿವ್ಯಕ್ತವಾಗುತ್ತದೆ.

ಇಂತಹ ಲೋಕೋತ್ತರವಾದ ಸಂಸ್ಕೃತ ಪ್ರಬಂಧದಿಂದ ಉಂಟಾಗುವ ಆನಂದವನ್ನು ಕನ್ನಡಿಗರೂ ಅನುಭವಿಸಲೆಂಬ ಘನೋದ್ದೇಶದಿಂದ ನಾಗವರ್ಮಕವಿ ಕನ್ನಡಿಸಿ ಕನ್ನಡ ಜನತೆಯ ಕೃತಜ್ಞತೆಗೆ ಪಾತ್ರನಾಗಿದ್ದಾನೆ. ಅಲ್ಲದೆ ಮೂಲಕಾದಂಬರಿಯಲ್ಲಿರುವ ಅತ್ಯಧಿಕವಾದ ವರ್ಣನಾಭಾಗವನ್ನು ಹಿತಮಿತವಾಗಿ ಸಂಗ್ರಹಿಸಿ ಕಥಾಂಶವನ್ನು ಬಿಡದೆ, ರಸಾಸ್ವಾದಕ್ಕೆ ಹಾನಿ ಬರದಂತೆ ಸಮರ್ಪಕವಾಗಿ ಅನುವಾದಿಸಿದ್ದಾನೆ. ಇದರಲ್ಲೂ ಲೋಪದೋಷಗಳಿಲ್ಲದಿಲ್ಲ. ಆದರೆ ಇದನ್ನು ಮಾತ್ರ ಪ್ರಮಾಣಪೂರ್ವಕವಾಗಿ ದೃಢಪಡಿಸಬಹುದು. ಈ ಕೆಲಸವನ್ನು ಬೇರೆ ಯಾರು ಮಾಡಿದ್ದರೂ ನಾಗವರ್ಮನಿಗಿಂತ ಉತ್ತಮವಾಗಿ ಮಾಡುತ್ತಿರಲಿಲ್ಲ. ಆದ್ದರಿಂದ ಸಂಸ್ಕೃತ ಸಾಹಿತ್ಯದಲ್ಲಿ ಬಾಣಭಟ್ಟನ ಹೆಸರು ಸ್ಥಿರವಾಗಿರುವಂತೆ ಕನ್ನಡ ಸಾಹಿತ್ಯದಲ್ಲಿ ನಾಗವರ್ಮನ ಹೆಸರೂ ಸ್ಥಿರವಾಗಿರುತ್ತದೆ.

ಹೀಗಿದ್ದರೂ ಈ ಸಂಪಾದಿತ ಗ್ರಂಥದಲ್ಲೂ ಕೆಲವು ಕಡೆ ಸಂಸ್ಕೃತ ಮೂಲಕ್ಕೆ ವಿರುದ್ಧವಾದ ಪಾಠಗಳು ಕಂಡುಬರುತ್ತವೆ. ಅವುಗಳನ್ನು ಇಲ್ಲಿ ಯಥಾಮತಿ ಪರಿಷ್ಕರಿಸಿ ಅನುವಾದ ಮಾಡಲಾಗಿದೆ.

ಮಲ್ಲಪ್ಪನವರಿಗೆ ದೊರೆತ ಕಾದಂಬರಿಯಲ್ಲಿ ಆಶ್ವಾಸ ಅಥವಾ ಪರಿಚ್ಛೇದಗಳಿಲ್ಲ. ಪೂರ್ವ ಕಾದಂಬರಿ ಮತ್ತು ಉತ್ತರ ಕಾದಂಬರಿ ಎಂಬ ಎರಡು ಭಾಗಗಳಿದ್ದು ಎರಡು ಭಾಗಗಳಿಗೂ ಪ್ರತ್ಯೇಕ ಪದ್ಯಸಂಖ್ಯೆಯನ್ನು ಕೊಡಲಾಗಿದೆ. ಈ ವಿಭಾಗವೂ ಸಂಸ್ಕೃತ ಕಾಧಂಬರಿಯಂತಿಲ್ಲ. ಚಂದ್ರಾಪೀಡನು ಕಾಧಂಬರಿಯನ್ನು ಕಾಣುವವರೆಗೆ ಪೂರ್ವಭಾಗ,

ಮುಂದಿನದು ಉತ್ತರಭಾಗವೆಂದು ವಿಭಾಗ ಮಾಡಲಾಗಿದೆ. ಮೂಲಕಾದಂಬರಿಯಲ್ಲಿ ಬಾಣನು ಬರೆದ ಭಾಗವು (ಪತ್ರಲೇಖೆಯು ಬಂದು ಚಂದ್ರಾಪೀಡನಿಗೆ ಕಾದಂಬರಿಯ ವಿರಹಾವಸ್ಥೆಯನ್ನು ವರ್ಣಿಸುವವರೆಗೆ) ಪೂರ್ವಕಾದಂಬರಿಯೆಂದೂ ಅವನ ಮಗ ಭೂಷಣಭಟ್ಟನು ಬರೆದ ಮುಂದಿನ ಭಾಗವು ಉತ್ತರ ಕಾದಂಬರಿ ಎಂದೂ ಪರಿಗಣಿಸಲ್ಪಟ್ಟಿದೆ.

ಅಲ್ಲದೆ ಅವರು ಮುದ್ರಿಸಿರುವ ಪ್ರತಿಯಲ್ಲಿ ನಾಗವರ್ಮನ ಕಾಲದಲ್ಲಿ ಬಳಕೆಯಲ್ಲಿದ್ದ ಱ ೞಗಳನ್ನು ಕೈಬಿಡಲಾಗಿದೆ. ಎಲ್ಲಾ ಕಡೆಯಲ್ಲೂ ರ ಳ ಗಳೇ ಇವೆ.

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯಲ್ಲಿ ಕೀರ್ತಿಶೇಷರಾದ ಟಿ. ಎಸ್. ವೆಂಕಣ್ಣಯ್ಯನವರು ಸಂಗ್ರಹಿಸಿರುವ "ಕರ್ಣಾಟಕ ಕಾದಂಬರೀ ಸಂಗ್ರಹಂ" ಎಂಬ ಪುಸ್ತಕವು ನಾಗವರ್ಮನ ಕಾದಂಬರಿಯ ಸಂಗ್ರಹರೂಪವಾಗಿದೆ. ಇದರಲ್ಲಿ ಕಥಾವತರಣ ಮೊದಲಾದ ಎಂಟು ಪರಿಚ್ಛೇದಗಳನ್ನಾಗಿ ವಿಂಗಡಿಸಿಕೊಂಡಿದ್ದಾರೆ. ಅಲ್ಲದೆ ಉಪಯುಕ್ತವಾದ ಪೀಠಿಕೆಯೂ ಇದೆ. ಅನೇಕ ವೇಳೆ ಪ್ರೌಢತರಗತಿಗಳಿಗೆ ಪಠ್ಯ ಪುಸ್ತಕವಾಗುತ್ತಿದ್ದು ವಿದ್ಯಾರ್ಥಿವೃಂದಕ್ಕೆ ಪರಿಚಿತವಾಗಿದೆ.

ಇತ್ತೀಚಿಗೆ ಉಷಾಗ್ರಂಥಮಾಲೆಯಲ್ಲಿ ಶ್ರೀ ಎನ್. ಅನಂತರಂಗಾಚಾರ್‌ರವರು ಸಂಪಾದಿಸಿ ಪ್ರಕಟಿಸಿರುವ ಕರ್ಣಾಟಕ ಕಾದಂಬರಿಯು ಮಲ್ಲಪ್ಪನವರು ಸಂಪಾದಿಸಿರುವ ಕಾದಂಬರಿಯ ಪುನರ್ಮುದ್ರಣವೆಂದು ಹೇಳಬಹುದು. ಆದರೆ ಱ ೞ ಗಳನ್ನು ಬಳಸಿದ್ದಾರೆ. ಕಾದಂಬರಿ ಸಂಗ್ರಹದಂತೆ ಪರಿಚ್ಛೇದಗಳನ್ನು ಮಾಡಿಕೊಂಡಿದ್ದಾರೆ. ಆದರೆ ದುರದೃಷ್ಟದಿಂದ ಇದರಲ್ಲಿ ಅನೇಕ ಮುದ್ರಣದೋಷಗಳಿದ್ದು ಅನೇಕಕಡೆ ಅಪಾರ್ಥಕ್ಕೆ ಅವಕಾಶವಾಗುವಂತಿದೆ.

ನಮ್ಮ ಈ ಅನುವಾದಕ್ಕೆ ಮಲ್ಲಪ್ಪನವರು ಸಂಪಾದಿಸಿರುವ ಕರ್ಣಾಟಕ ಕಾದಂಬರಿಯು ಮೂಲವಾಗಿದೆ. ಕಾದಂಬರೀ ಸಂಗ್ರಹದಂತೆ ಪರಿಚ್ಛೇದಗಳ ವಿಂಗಡನೆ ಮಾಡಿಕೊಳ್ಳಲಾಗಿದೆ. ಉಷಾ ಸಾಹಿತ್ಯಮಾಲೆಯ ಗ್ರಂಥದಿಂದಲೂ ಸಹಾಯವನ್ನು ಪಡೆಯಲಾಗಿದೆ.

ಅವರಿಗೆಲ್ಲ ನಾನು ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

## ನಾಗವರ್ಮನ ಪರಿವರ್ತನೆ

ನಾಗವರ್ಮನು ಸಂಸ್ಕೃತ ಭಾಷೆಯಲ್ಲಿ ಪ್ರೌಢಕಾವ್ಯವೆನಿಸಿದ ಕಾದಂಬರಿಯನ್ನು ಕನ್ನಡಿಸುವ ಸಾಹಸಕ್ಕೆ ಕೈಹಾಕಿದನು. ಶ್ಲೇಷೆಯೇ ಮೊದಲಾದ ಅಲಂಕಾರಗಳಿಂದಲೂ, ದೀರ್ಘ ಸಮಾಸಪದಗಳಿಂದಲೂ ವ್ಯಂಗ್ಯಾರ್ಥಗಳಿಂದಲೂ ಕೂಡಿರುವ ಮಹಾಗದ್ಯ ಕಾವ್ಯವನ್ನು ಪರಿವರ್ತಿಸುವುದು ಸಾಮಾನ್ಯವಾದ ಕೆಲಸವಲ್ಲ. ಅಂತಹ ಮಹಾಕಾರ್ಯವನ್ನು ನಾಗವರ್ಮನು ಸಮರ್ಪಕವಾಗಿ ನಿರ್ವಹಿಸಿದ್ದಾನೆ. ಅವನಿಗೆ ಕನ್ನಡ ಭಾಷೆ

ಯಲ್ಲಿ ಲೀಲಾಜಾಲವಾಗಿ ಪದ್ಯರಚನೆ ಮಾಡುವ ಸಾಮರ್ಥ್ಯವಿತ್ತು. ಕೆಲವು ಕಡೆಯು ಲ್ಲಂತೂ ಪದ್ಯಗಳು ಗದ್ಯದಂತೆಯೆ ಓಡುತ್ತವೆ. ಅನ್ವಯ ಮಾಡಿಕೊಳ್ಳುವ ಶ್ರಮವೇ ಇಲ್ಲದೆ ಸುಲಭವಾಗಿ ಅರ್ಥಬೋಧೆಯನ್ನುಂಟುಮಾಡುತ್ತವೆ. ಅಲ್ಲದೆ ಶೈಲಿಯನ್ನು ರಸೋಚಿತವಾಗಿ ಬದಲಾವಣೆ ಮಾಡಿರುತ್ತಾನೆ.

ತಾರಾಪೀಡನಿಗೆ ಪುತ್ರೋತ್ಸವವಾಗಿದೆ. ಆನಂದೋತ್ಸವದಿಂದ ಬೀಗುವ ಸಂದರ್ಭ. ಅದಕ್ಕೆ ತಕ್ಕ ಸುಲಭವಾಗಿ ಅರ್ಥವಾಗುವ ಪ್ರಸಾದಗುಣದಿಂದ ಕೂಡಿದ ರಚನೆ :

ಅಡಿಗಡಿಗಾನಂದಾಶ್ರುಗ
ಳೆಡೆವಿಡದಃಣ್ಮುತ್ತಿರಲ್ಕೆ ನಿಡು[ಗಣ್ಮಲರಿಂ]
ಪಿಡಿವಂದದೆ ಕುಡಿವಂದದೆ
ನುಡಿವಂದದೆ ಸುತನನಟ್ಟಿಜಿಂದೀಕ್ಷಿಸಿದಂ      ೨-೧೧೭

ಇಲ್ಲಿ ಪುತ್ರೋತ್ಸವದ ಆನಂದವನ್ನು ಅನುಭವಿಸುವ ರಾಜನಿಗಿಂತ ಅದನ್ನು ವರ್ಣಿಸುವ ಕವಿಗೇ ಹೆಚ್ಚು ಉತ್ಸಾಹವಿರುವುದು "ಡಕಾರ"ದ ಆವೃತ್ತಿಯಿಂದ ತೋರು ತ್ತಿದೆ. ದುಃಖಪ್ರಸಂಗವನ್ನು ವರ್ಣಿಸುವಾಗ ಅದಕ್ಕೆ ತಕ್ಕಂತೆ ಅಳುವ ಧಾಟಿಯಲ್ಲಿ ಬಿಡಿಬಿಡಿ ಪದಗಳ ರಚನೆಯು ಕಂಡುಬರುತ್ತದೆ.

ಕರುಣಿಸು ದೈವಮೆ ಪಾಲಿಸು
ಹರಾದ್ರಿ ರಕ್ಷಿಸೆಲೆ ರಾತ್ರಿ ಶರಣಾಗು ಸರೋ
ವರಮೆ ವನದೇವಿಯರಿರಾ
ನೆರೆದೆಲ್ಲರುಮೆನಗೆ ಪುರುಷಭಿಕ್ಷಮನಿಕ್ಕಿಂ      ೭-೧೧೮

ಇದು ಮಹಾಶ್ವೇತೆಯು ಅಸುವನ್ನು ನೀಗಿದ ಪ್ರಾಣಕಾಂತನನ್ನು ನೋಡಿ ವಿಲಾಪಿಸುವ ಪ್ರಸಂಗ. ಇಲ್ಲಿನ ಶೈಲಿಯು ಎಷ್ಟರಮಟ್ಟಿಗೆ ಕರುಣಾವ್ಯಂಜಕವಾಗಿದೆ ಎಂಬುದನ್ನು ಸಹೃದಯರು ಗಮನಿಸಬಹುದು. ಚಂದ್ರಾಪೀಡನು ದುಃಖಸಂತಪ್ತೆ ಯಾದ ಅವಳನ್ನು ಸಮಾಧಾನ ಮಾಡುವ ಈ ಪ್ರಸಂಗದಲ್ಲಿ

ಸತ್ತಳೆ ಕಾಮದೇವನ ಪರೋಕ್ಷದೊಳಾ ರತಿ ಪಾಂಡು ಸತ್ತೊಡಂ
ಸತ್ತಳೆ ಕುಂತಿ ಮತ್ತಭಿಮನ್ಯುಕುಮಾರಕನಂದು ಸತ್ತೊಡೇ
ನುತ್ತರೆ ಸತ್ತಳೇ ನೆಗಟ್ದ ಸಿಂಧುನೃಪಾಲಕನಂದು ಸತ್ತೊಡಂ
ಸತ್ತಳೆ ದುಶ್ಶಳಾವನಿತೆಯಿಂತಿವು ನೀವಱಿದಂದವಲ್ಲವೇ      ೫-೨೦೫

ಈ ರಚನೆ ಎಷ್ಟು ಕೋಮಲವಾಗಿದೆ. ದುಃಖಿತರನ್ನು ಸಮಾಧಾನಪಡಿಸುವಾಗ ಇದಕ್ಕಿಂತಲೂ ಮೃದುವಾದ ವಚನಗಳನ್ನು ಆಡಿಸಲು ನಾಗವರ್ಮನನ್ನು ಬಿಟ್ಟರೆ

ಮತ್ತಾರಿಗೆ ಸಾಧ್ಯ. ಸತ್ತಳೆ–ಸತ್ತಳೆ ಎಂಬ ಆವೃತ್ತಿ ಎಷ್ಟುಮಟ್ಟಿಗೆ ರಸವ್ಯಂಜಕ ವಾಗಿದೆ!

ವರ್ಣನೆಗಳಲ್ಲಿ ದೀರ್ಘಸಮಾಸಭೂಯಿಷ್ಠವಾದ ಶೈಲಿಯು ಕಂಡುಬರುತ್ತದೆ. ಉಜ್ಜಯಿನಿಯ ವರ್ಣನೆಯಲ್ಲಿ

> ವಿತತೋದಂಚತ್ಪತಾಕಾವಸನ ವಿಲಸಿತಂ ವಿದ್ರುಮೋ
> ತ್ತಂಭಿತಸ್ತಂಭತತೋದ್ಯಚ್ಚಾಮರೌಘಾಂಚಿತಂ.........
> ವನದಿಂ ರಂಜಿಸುತ್ತಿರ್ಪುವೆತ್ತಂ ೨–೨೯

ಹಾಗೆಯೆ ತಾರಾಪೀಡನ ವಿಹಾರವನ್ನು ವರ್ಣಿಸುವಾಗ ಮತ್ತಮಶೋಕತರುವಿ ನಂತೆ ತರುಣೀಪದ ಪ್ರಹಾರ ಸಂಕ್ರಾಂತಾಲಕ್ತಕರಾಗಮುಂ ತಾಳ್ದಿಯುಂ ಹಂಸನಂತೆ ರಮಣೀಯ ನೂಪುರ ನಿನಾದಾನಂದಿತ ಮಾನಸಸರೋವರದೊಳ್ ಚಲಿಸಿಯುಂ (೨–೩೦ ವ) ಈ ಬಗೆಯ ಬಂಧವು ಯಾರಿಗೂ ವೈರಸ್ಯವನ್ನುಂಟುಮಾಡುವುದಿಲ್ಲ.

ಇಂತಹ ವರಕವಿಯು ವಿಮರ್ಶಕರು ಮೆಚ್ಚುವಂತೆ ಆ ಪ್ರೌಢಕಾವ್ಯವನ್ನು ಕನ್ನಡಿಸಿದ್ದಾನೆ. ಸ್ವತಂತ್ರವಾಗಿ ಕಾವ್ಯಗಳನ್ನು ಬರೆಯುವುದು ಸುಲಭ, ಪರಿವರ್ತನೆ ಕಷ್ಟ. ಪಾಶ್ಚಾತ್ಯರು ಪರಿವರ್ತಕನನ್ನು ಕೊಲೆಪಾತಕನಿಗೆ ಹೋಲಿಸುತ್ತಾರಂತೆ.

ಪರಿವರ್ತನೆ ಚಂಪೂಶೈಲಿಯನ್ನು ಆರಿಸಿಕೊಂಡುದು ಅವನ ದೂರದೃಷ್ಟಿಯನ್ನು ಸೂಚಿಸುತ್ತದೆ. ಏಕೆಂದರೆ ಬಹಳ ಜಟಿಲವಾಗಿ ಛಂದಸ್ಸಿನ ಹಿಡಿತಕ್ಕೆ ಸಿಕ್ಕದಿರುವ ಕಡೆಗಳಲ್ಲಿ ಗದ್ಯರೂಪವಾಗಿ ಪರಿವರ್ತಿಸಲು ಅವಕಾಶ ದೊರಕಿತು. ಅನೇಕ ಕಡೆಗಳಲ್ಲಿ ಬಾಣನು ಪ್ರಯೋಗಿಸಿರುವ ಪದವಾಕ್ಯಗಳನ್ನೇ ನಾಗವರ್ಮನೂ ಹಾಗೆಯೆ ಅಥವಾ ಅಲ್ಪ ಬದಲಾವಣೆಯಿಂದ ತೆಗೆದುಕೊಂಡಿದ್ದಾನೆ. ಶಬರನನ್ನು ವರ್ಣಿಸುವಾಗ ಬಾಣ "ಗಜಮದ ಮಲಿನೀಕೃತೇನ ಕೇಸರಕಲಾಪೇನೋಪೇತಂ" ಎಂಬ ವಾಕ್ಯವನ್ನು ಹೇಳಿದ್ದರೆ ನಾಗವರ್ಮ "ಗಜಮದ ಮಳಿನಕೇಸರ ಜಟಾಕುಟಿಲಕುಂತಳ ಕಲಾಪನುಂ" ಎಂದು ಹೇಳಿದ್ದಾನೆ. ಬಾಣಭಟ್ಟನ "ಅತಿತುಂಗಘೋಣಂ" ಎಂಬುದನ್ನು ನಾಗವರ್ಮ "ಉತ್ತುಂಗ ಘೋರಘೋಣನುಂ" ಎಂದು ಪ್ರಯೋಗಿಸಿದ್ದಾನೆ.

ಶೂದ್ರಕನ ವರ್ಣನೆಯಲ್ಲಿ "ಚತುರುದಧಿಮಾಲಾ ಮೇಖಲಾಯಾಃ ಭುವೋ ಭರ್ತಾ" ಎಂಬ ಮೂಲಕಾದಂಬರಿಯ ವಾಕ್ಯವು "ಚತುರಬ್ಧಿ ಮೇಖಲಾವಳಯಿತ ಭೂಮಿಗಾದನೆಱಯಂ" ಎಂದು ಕರ್ಣಾಟಕ ಕಾದಂಬರಿಯಲ್ಲಿ ಪರಿವರ್ತಿತವಾಗಿದೆ. ಹಾಗೆಯೆ "ಯತ್ರಚ ಮಲಿನತಾ ಹವಿರ್ಧೂಮೇಷು ನ ಚರಿತೇಷು. ಮುಖರಾಗಂ ಶುಕೇಷು ನಕೋಪೇಷು" ಎಂಬ ಜಾಬಾಲಿ ಮಹರ್ಷಿಯ ಆಶ್ರಮವರ್ಣನೆಯ ವಾಕ್ಯವು "ಮತ್ತಂ ಮಲಿನತೆ ಹೋಮಧೂಮದೊಳ್ ಮುಖರಾಗಂ ಗಿಳಿಗಳೊಳ್" ಎಂದು ಪರಿವರ್ತಿತವಾಗಿದೆ.

ವರ್ಣನೆಗಳಲ್ಲಿ ನಾಗವರ್ಮನು ತನಗೆ ಚೆನ್ನಾಗಿರುವುದೆಂದು ಕಂಡುಬಂದುದನ್ನು ಮಾತ್ರ ತೆಗೆದುಕೊಂಡು ಕೆಲವನ್ನು ಕೈಬಿಟ್ಟಿದ್ದಾನೆ.

ಶೂದ್ರಕನ ವರ್ಣನೆಯಲ್ಲಿ ಮೂಲದಲ್ಲಿರುವ "ಚಕ್ರಧರ ಇವ ಕರಕಮಲೋಪಲಕ್ಷ್ಯಮಾಣ ಶಂಖಚಕ್ರ ಲಾಂಛನಃ, ಹರ ಇವ ಜಿತ ಮನ್ಮಥಃ ಗುಹ ಇವಾ ಪ್ರಹತ ಶಕ್ತಿಃ !" ಇತ್ಯಾದಿ ವರ್ಣನಾಭಾಗವನ್ನು ಪರಿವರ್ತಿಸಿಲ್ಲ.

ಹಾಗೆಯೆ ವಿಂಧ್ಯಾಟವೀ ವರ್ಣನೆಯಲ್ಲಿ "ಕ್ವಚಿನ್ಮತ್ತೇವ ಕೋಕಿಲ ಕುಲ ಪ್ರಲಾಪಿನೀ ಕ್ವಚಿದುನ್ಮತ್ತೇವ ವಾಯುವೇಗಕೃತ ಕಾಲ ಶಬ್ದಾ" ಎಂಬ ವರ್ಣನಾಭಾಗವನ್ನು ತೆಗೆದುಕೊಂಡಿಲ್ಲ.

ಮಹಾಶ್ವೇತಾ ವರ್ಣನೆಯಲ್ಲಿ "ಗೌರೀಮನಃಶುದ್ಧಿಮಿವ ಕೃತ ದೇಹ ಪರಿಗ್ರಹಾಂ ಕಾರ್ತಿಕೇಯ ಕೌಮಾರವ್ರತ ಕ್ರಿಯಾಮಿವ ಮೂರ್ತಿಮತೀಂ" ಎಂಬ ವರ್ಣನೆಯನ್ನು ಕೈಬಿಟ್ಟಿದ್ದಾನೆ. ಹಾಗೆಯೆ ಕಾದಂಬರೀ ವರ್ಣನೆಯಲ್ಲಿ "ಪೃಥಿವೀಮಿವ ಸಮುತ್ಸಾರಿತ ಮಹಾಕುಲ ಭೂಭೃದ್ವ್ಯತಿಕರಾಂ ಶೇಷ ಭೋಗ ನಿಷಣ್ಣಾಂ" ಮೊದಲಾದ ಭಾಗಗಳನ್ನು ಬಿಟ್ಟಿದ್ದಾನೆ.

ಹೀಗೆಯೆ ಅವನು ಅನೇಕ ವರ್ಣನೆಗಳನ್ನು ಕೈಬಿಟ್ಟಿದ್ದಾನೆ. ಹಾಗೆ ಅವನು ಎಲ್ಲವನ್ನೂ ಪರಿವರ್ತಿಸಿದ್ದರೆ ಈಗಿನ ಕಾದಂಬರಿಗಿಂತ ಎರಡು ಮೂರರಷ್ಟು ದೊಡ್ಡದಾಗಿಬಿಡುತ್ತಿತ್ತು. ಅವನು ಬಿಟ್ಟು ಬಿಟ್ಟು ಪರಿವರ್ತಿಸಿರುವುದು ಒಳ್ಳೆಯದೇ ಆಯಿತೆಂಬುದು ನಮ್ಮ ಅಭಿಪ್ರಾಯ.

ಕೆಲವು ಕಡೆಯಲ್ಲಿ ಬಾಣನ ಒಂದೇ ಒಂದು ವಾಕ್ಯವನ್ನು ಒಂದು ಇಡೀ ಪದ್ಯದಲ್ಲಿ ಸರಳವಾಗಿ ವಿವರಿಸುತ್ತಾನೆ. ತಾರಾಪೀಡನ ವರ್ಣನೆಯಲ್ಲಿ "ಯಸ್ತಮಃ ಪ್ರಸಾರ ಮಲಿನ ವಪುಷಾ ಪಾಪ ಬಹುಲೇನ ಕಲಿಕಾಲೇನ ಚಾಲಿತ ಮಾ ಮೂಲತೋ ಧರ್ಮಂ ದಶಾನನೇವ ಕೈಲಾಸಂ ಪಶುಪತಿರವಷ್ಟಭ್ಯ ಪುನರಪಿ ಸ್ಥಿರೀ ಚಕಾರ" ಈ ವಾಕ್ಯವನ್ನು

> ರಾವಣನೊತ್ತಿ ಕಿಟ್ಟಿ ರಜತಾದ್ರಿಯನಶ್ರುಮದೀಂದವಾ ಮಹಾ
> ದೇವನದೆಂತು ಮುನ್ನಿರಿಸಿದಂ ಸ್ಥಿರಮಾಗಿರಲಂತಶೇಪ ದೋ
> ಷಾವಿಳಮಪ್ಪದೊಂದು ಕಲಿಕಾಲಮದಾದಮೆ ಕಿಟ್ಟಿ ಧರ್ಮಮಂ
> ಭೂವರನಾವಗಂ ನಿಲಿಸಿದಂ ನಿಖಿಳಾವನಿ ರಕ್ಷಣಕ್ಷಮಂ    ೨–೧೮

ಎಂದು ಸರಳವಾಗಿ ಕನ್ನಡಿಸಿದ್ದಾನೆ. ಹಾಗೆಯೆ "ಯಂಚ ರತಿವಿಲಾಸಜನಿತ ದಯಾರ್ದ್ರಹರ ನಿರ್ಮಿತಮಪರಂ ಮಕರಕೇತು ಮಮಂಸ್ತ ಲೋಕ" ಎಂಬ ವಾಕ್ಯವನ್ನು

> ಪತಿಯುಗಲ್ದ ವೇಗದಿಂ ದುಃ
> ಖಿತೆಯಾಗಿರೆ ಕಂಡು ಕರುಣವಗ್ಗಲಿಸಲುಮಾ
> ಪತಿ ಪಡೆದಂ ಮತ್ತಂ ರತಿ
> ಪತಿಯನೆನುತ್ತಿರ್ಪುದವನಿ ಜಗದಧಿಪತಿಯಂ    ೨–೧೯

ಎಂಬ ಕಂದದಿಂದ ವಿವರಿಸಿದ್ದಾನೆ.

ಮತ್ತೆ ಕೆಲವು ಕಡೆಗಳಲ್ಲಿ ಬಾಣನ ದೊಡ್ಡ ದೊಡ್ಡ ವಾಕ್ಯಗಳನ್ನು ಮೂಲಾರ್ಥಕ್ಕೆ ಹಾನಿ ಬರದಂತೆ ಸಂಗ್ರಹಿಸಿದ್ದಾನೆ. ತಾರಾಪೀಡನ ವಿಸ್ತಾರವಾದ ರಾಜ್ಯದ ಎಲ್ಲೆಯನ್ನು ಬಾಣಭಟ್ಟ ಹನ್ನೊಂದು ಸಾಲಿನಲ್ಲಿ ದೀರ್ಘ ಸಮಾಸಪದಗಳಿಂದ ವಿವರಿಸಿರುವುದನ್ನು ನಾಗವರ್ಮನು ನಾಲ್ಕು ಸಾಲಿನ ಮತ್ತೇಭವಿಕ್ರೀಡಿತ ವೃತ್ತದಲ್ಲಿ ಸರಳವಾಗಿ ತಾತ್ಪರ್ಯಕ್ಕೆ ಲೋಪವಿಲ್ಲದಂತೆ ಕನ್ನಡಿಸಿದ್ದಾನೆ. ಹಾಗೆಯೆ ಎಂಟು ಸಾಲಿನ ಶುಕನಾಸನ ವರ್ಣನೆಯನ್ನೂ ಸಂಕ್ಷೇಪಿಸಿ ಹೇಳಿದ್ದಾನೆ.

ಪ್ರಾಚೀನಾಲಂಕಾರಿಕರು ಈ ಗುಣವನ್ನು "ಪದಾರ್ಥೇ ವಾಕ್ಯರಚನಾ ವಾಕ್ಯಾರ್ಥೇ ಚ ಪದಾಭಿದಾ ಪ್ರೌಢಿಃ" ಎಂದು ಹೇಳಿದ್ದಾರೆ. ಈ ಪ್ರೌಢಿ ಈ ಕೃತಿಯಲ್ಲಿ ಅಲ್ಲಲ್ಲಿ ಕಂಡುಬರುತ್ತದೆ.

ಕರ್ಣಾಟಕ ಕಾದಂಬರಿಯು ಮೂಲ ಸಂಸ್ಕೃತ ಕಾದಂಬರಿಯ ಅಕ್ಷರಶಃ ಅನುವಾದವಲ್ಲವೆಂದು ಹಿಂದೆ ಹೇಳಲಾಗಿದೆ. ಈಗ ಅನುವಾದಕ್ಕೂ ಮೂಲಕ್ಕೂ ಇರುವ ವ್ಯತ್ಯಾಸವನ್ನೂ ಇದರಿಂದ ಸಹೃದಯರ ಮನಸ್ಸಿನಲ್ಲಿ ಉಂಟಾಗುವ ಪ್ರತಿಕ್ರಿಯೆಯನ್ನೂ ಸ್ವಲ್ಪ ಮಟ್ಟಿಗೆ ವಿಚಾರಮಾಡೋಣ.

ಕಾದಂಬರೀ ಚಂದ್ರಾಪೀಡರಿಗೆ ಪರಸ್ಪರ ಭೇಟಿಯಾಗಿ ಪ್ರಣಯವು ಅಂಕುರಿಸಿದ ಮೇಲೆ ತಂದೆಯ ಅಪ್ಪಣೆಯಂತೆ ಚಂದ್ರಾಪೀಡನು ಉಜ್ಜಯಿನಿಗೆ ಬಂದು ಕಾದಂಬರಿಯ ಚಿಂತೆಯಿಂದಲೇ ಕೊರಗುತ್ತಿರುತ್ತಾನೆ. ಆಗ ಕಾದಂಬರಿಯ ಕಡೆಯಿಂದ ಮೊದಲು ಪತ್ರಲೇಖೆಯೂ ಬಳಿಕ ಕೇಯೂರಕನೆಂಬ ಕಾದಂಬರಿಯ ಸೇವಕನೂ ಬಂದು ಪ್ರತ್ಯೇಕ ಪ್ರತ್ಯೇಕವಾಗಿ ಕಾದಂಬರಿಯ ವಿರಹಾವಸ್ಥೆಯನ್ನು ವಿಸ್ತಾರವಾಗಿ ವರದಿಯೊಪ್ಪಿಸುತ್ತಾರೆ. ಮೂಲಕಾದಂಬರಿಯ ಈ ವಿಷಯವನ್ನು ನಾಗವರ್ಮನು ಬದಲಾವಣೆ ಮಾಡಿ ಎಲ್ಲವನ್ನೂ ಪತ್ರಲೇಖೆಯ ಬಾಯಿಂದಲೇ ಹೇಳಿಸಿ ಕೇಯೂರನ ಭಾರವನ್ನು ಕಮ್ಮಿ ಮಾಡಿದ್ದಾನೆ. "ಪತ್ರಲೇಖೆ ಪೇಟ್ದವಸ್ಥಾಂತರಗಳನಾಂ ಬಿನ್ನವಿಪೊಡೆ ಪುನರುಕ್ತಮೆಂದು ಬಿನ್ನವಿಸಿದ ಕೇಯೂರಕನ ಮಾತಂ ಕೇಳ್ದು" ಎಂದು ಕೇಯೂರಕನಿಂದ ಹೇಳಿಸಿ ಮುಗಿಸಿದ್ದಾನೆ. ಹೆಂಗಸರ ವಿರಹವೇದನೆಯನ್ನು ಗಂಡಸರು ಹೇಳುವುದಕ್ಕಿಂತ ಹೆಂಗಸರೇ ಹೇಳಿದರೆ ಚೆನ್ನು ಎಂದು ನಾಗವರ್ಮನು ಭಾವಿಸಿರಬಹುದು. ನಾವೂ ಅದನ್ನು ಒಪ್ಪಬಹುದು.

ಉಜ್ಜಯಿನಿಯಿಂದ ಪತ್ರ ಬಂದ ಕೂಡಲೆ ಚಂದ್ರಾಪೀಡನು ಉಜ್ಜಯಿನಿಗೆ ಹೊರಟನು. ದಾರಿಯಲ್ಲಿ ಒಂದು ಚಂಡಿಕಾಗೃಹಕ್ಕೆ ಬರುತ್ತಾನೆ. ಅಲ್ಲಿ ಒಬ್ಬ ದ್ರಾವಿಡ ದೇಶದ ಉಪಾಸಕನಿದ್ದನೆಂದು ಹೇಳಿ ಬಾಣಭಟ್ಟನು ಅವನ ದುಸ್ಸಾಹಸಗಳನ್ನೆಲ್ಲ ಹಾಸ್ಯಭರಿತವಾಗಿ ಚಿತ್ರಿಸಿದ್ದಾನೆ. "ದ್ರಾವಿಡ ಧಾರ್ಮಿಕೇಣಾಧಿಷ್ಠಿತಾಂ ಚಂಡಿಕಾಮಪಶ್ಯತ್" ಎಂದು ಮೂಲದಲ್ಲಿದೆ. ನಾಗವರ್ಮನು "ಜರದ್ದ್ರವಿಳ ಧಾರ್ಮಿಕ ಜನಂಗಳಿಂ" ಎಂದು ಹೇಳಿ ಅನೇಕ ಮಂದಿಯಿದ್ದರೆಂದು ತಿಳಿಸುತ್ತಾನೆ. ಈ ಬದಲಾವಣೆಯಿಂದ ಕಥೆಗಾಗಲಿ ರಸಕ್ಕಾಗಲಿ ಯಾವ ಸಹಾಯವೂ ಆದಂತೆ ಕಂಡುಬರುವುದಿಲ್ಲ.

ಉಜ್ಜಯಿನಿಯಿಂದ ಚಂದ್ರಾಪೀಡನಿಗೆ ಎರಡು ಪತ್ರಗಳು ಬಂದಿದ್ದುವು "ನಿಮ್ಮ ತಂದೆಯರಟ್ಟಿದ ರಾಜಾದೇಶಮಿದೆಂದು ಲೇಖನದ್ವಿತಯಮಂ ನೀಡೆ" ಎಂದು ಹೇಳಿದ ನಾಗವರ್ಮ ಮತ್ತೊಂದು ಪತ್ರವಾವುದೆಂದು ತಿಳಿಸಲಿಲ್ಲ. ಬಾಣಕಾದಂಬರಿಯಲ್ಲಿ "ಶುಕನಾಸ ಪ್ರೇಷಿತೇ ದ್ವಿತೀಯೇಪ್ಯಮುಮೇವಾರ್ಥಂ ಲಿಖಿತಮವಾಚಯತ್" ಶುಕ ನಾಸನು ಕಳುಹಿಸಿದ ಎರಡನೆಯ ಪತ್ರದಲ್ಲೂ ಇದೇ ಅಭಿಪ್ರಾಯವಿತ್ತು. ಅದನ್ನೂ ಓದಿಕೊಂಡನು ಎಂದು ಹೇಳಿದೆ. ಈ ಇದರ ಅನುವಾದವೂ ಇದ್ದಿದ್ದರೆ ಚೆನ್ನಾಗಿರುತ್ತಿತ್ತು.

ಮಹಾಶ್ವೇತೆಯು ತನ್ನ ಜನ್ಮವೃತ್ತಾಂತವನ್ನು ಹೇಳುವಾಗ ಮೂಲ ಕಾದಂಬರಿ ಯಲ್ಲಿ ಚಂದ್ರಕಿರಣಗಳಿಂದ ಹುಟ್ಟಿದ ಅಚ್ಚರಸಿಯರ ಒಂದು ಕುಲವನ್ನು ಹೇಳಿದೆ. ಹದಿನಾಲ್ಕು ಒಡಕಟ್ಟುಗಳಲ್ಲಿ ಅದೂ ಒಂದು. ಅದರಲ್ಲೆ ಮಹಾಶ್ವೇತೆ ಹುಟ್ಟಿದ್ದು. ನಾಗವರ್ಮ ಆ ಕುಲದ ಹೆಸರನ್ನು ಬಿಟ್ಟು ಅದರ ಸ್ಥಳದಲ್ಲಿ "ಕಡಲಿಂ" ಎಂದು ಹೇಳಿ ದ್ದಾನೆ. ಅದು "ಶಶಿಯಿಂ" ಎಂದು ಇರಬೇಕಾಗಿತ್ತು.

ತಾರಾಪೀಡನ ಪಟ್ಟದ ರಾಣಿಗೆ ಮಕ್ಕಳಾಗಿರಲಿಲ್ಲ. ಅದಕ್ಕಾಗಿ ಅನೇಕ ವ್ರತಗಳನ್ನು ಆಚರಿಸುತ್ತಾಳೆ. ಅದರಲ್ಲಿ "ಮಹಾನರೇಂದ್ರ ಲಿಖಿತ ಮಂಡಲಮಧ್ಯವರ್ತಿನೀ.... ಚತುಷ್ಪಥೇ ಸ್ನಪನ ಮಂಗಲಾನಿ ಭೇಜೇ" (ಮಂತ್ರಗಾರರು ಬರೆದ ಮಂಡಲದಲ್ಲಿ ಕುಳಿತುಕೊಂಡು ನಾಲ್ಕು ಬೀದಿಗಳು ಕೂಡುವ ಸ್ಥಳದಲ್ಲಿ ಸ್ನಾನ ಮಾಡಿದಳು) ಎಂದು ಮೂಲದಲ್ಲಿದೆ. ಅದನ್ನು ನಾಗವರ್ಮನು "ಪತಿಲಿಖಿತ ಮಂಡಲಸ್ಥಿತ" ಎಂದು ಹೇಳಿ ಗಂಡನು ಬರೆದ ಮಂಡಲದಲ್ಲಿ ಕುಳಿತುಕೊಂಡು" ಎಂದು ಅನುವಾದಿಸಿದ್ದಾನೆ. ಮಹಾ ನರೇಂದ್ರ ಎಂಬ ಪದಕ್ಕೆ ದೊಡ್ಡ ಮಂತ್ರಗಾರ, ದೊಡ್ಡ ರಾಜ ಎಂಬ ಎರಡು ಅರ್ಥ ಗಳೂ ಇವೆ. ಆದರೆ ಈ ಸಂದರ್ಭದಲ್ಲಿ ಮಂತ್ರಗಾರನೆಂದು ಹೇಳುವುದು ಹೆಚ್ಚು ಸಂಗತ ವಾಗುತ್ತದೆ.

ಅಲ್ಲದೆ ಕೆಲವು ಕಡೆ ಲೇಖಕರ ದೋಷದಿಂದಲೂ ತಪ್ಪುಗಳು ಸೇರಿವೆ. ಅವುಗಳನ್ನು [– –] ಈ ಚಿಹ್ನೆಯಿಂದ ತಿಳಿಸಿ ತಿದ್ದಿಕೊಳ್ಳಲಾಗಿದೆ.

ನಾಗವರ್ಮನು ಮೂಲಕಾದಂಬರಿಯನ್ನು ಅಲ್ಲಿರುವ ಅರ್ಥಕ್ಕಿಂತ ಬೇರೆ ರೀತಿ ಯಲ್ಲಿ ತಿರುಗಿಸಿರುವುದೂ ಉಂಟು. ವಿಂಧ್ಯಾಟವಿಗೆ ಬಂದ ಬೇಡರ ನಾಯಕನನ್ನು ವರ್ಣಿಸುವಾಗ "ಅಪತ್ಯಮಿವ ವಿಂಧ್ಯಾಚಲಸ್ಯ ಅಂಶಾವತಾರಮಿವ ಕೃತಾಂತಸ್ಯ ಸಹೋ ದರಮಿವ ಪಾಪಸ್ಯ ಸಾರಮಿವ ಕಲಿಕಾಲಸ್ಯ" ಎಂಬ ವರ್ಣನೆಯನ್ನು

ಪಡೆದಂ ವಿಂಧ್ಯನಗೇಂದ್ರ
ಕ್ಕೊಡವುಟ್ಟಿದನಂತಕಂಗೆ ನೇಟಂ ಪಾಪ
ಕ್ಕೊಡನಾಡಿ ಕಲಿಗೆನಿಪ್ಪಂ
ಪೊಡವಿಯೊಳಿನ್ನಾತನಿಂ ಭಯಂಕರನಾವಂ ೧–೪೩

ಇಲ್ಲಿ ಮೂಲದಲ್ಲಿ ಹೇಳಿರುವ "ವಿಂಧ್ಯಾಚಲದ ಅಂಶಾವತಾರನಂತೆ" ಎಂಬುದು ಪರಿವರ್ತನೆಯಲ್ಲಿಲ್ಲ. "ಸಹೋದರಮಿವ ಪಾಪಸ್ಯ" ಎಂಬುದು "ನಂಟಂ ಪಾಪಕ್ಕೆ" ಎಂದಾಗಿದೆ. ಆದರೂ ಮೂಲದ ಸ್ವಾರಸ್ಯಕ್ಕೆ ಭಂಗವೇನೂ ಬಂದಿಲ್ಲ.

ಹಾರೀತನೆಂಬ ಋಷಿಕುಮಾರನ ವರ್ಣನೆಯಲ್ಲಿ ಬಾಣಭಟ್ಟನು ೧. ಆ ಪಿಶಂಗಾವದಾತಯಾ ದೇಹಪ್ರಭಯಾ ಸ್ಫುರಂತ್ಯಾ ಸಬಾಲಾತಪಮಿವ ವಸಮುಪದರ್ಶಯನ್ ೨. ಉತ್ಪ್ರತಾಪ ಲೋಹಿನೀನಾಮನೇಕ ತೀರ್ಥಾಭಿಷೇಕಪೂತಾ ನಾಮಂಸಸ್ಥಲಾವಲಂಬಿನೀನಾಂ ಜಟಾನಾಂ ನಿಕರೇಣೋ ಪೇತಃ ಸ್ತಂಭಿತ ಶಿಖಾಕಲಾಪಃ ೩. ಖಾಂಡವವನದಿಧಿಕ್ಷಯೂ ಕೃತ-ಕಪಟ-ವಟುವೇಷ ಇವ ಭಗವಾನ್ ಪಾವಕಃ. ಹೀಗೆ ಸ್ವತಂತ್ರವಾದ ಮೂರು ವರ್ಣನೆಗಳನ್ನು ಮಾಡಿದ್ದಾನೆ. ನಾಗವರ್ಮನು ಇದರಲ್ಲಿ ಮಧ್ಯದ ವರ್ಣನೆಯನ್ನು ಕೈಬಿಟ್ಟು ಒಂದನೆಯ ಮತ್ತು ಮೂರನೆಯ ವರ್ಣನೆಯನ್ನು ಸೇರಿಸಿ ಒಂದೇ ವರ್ಣನೆಯಾಗುವಂತೆ ಮಾಡಿದ್ದಾನೆ

ಎಳವಿಸಿಲೆಱಗಿದಃದೋ ಬನ
ದೊಳಗೆನೆ ಮೆಯ್ವೆಳಗು ಬಳಸೆ ಖಾಂಡವಮಂ ತ
ಳ್ತಳುಱುತಿಕೆ ವಟುಕವೇಷಮ
ನೆಳಸಿದ ಪಾವಕನನಿನಿಸನುಕರಿಸಿರ್ದಂ ೧—೧೯

ಇದು ನಾಗವರ್ಮನ ವರ್ಣನೆ.

ಜಾಬಾಲಿ ಮಹರ್ಷಿಗಳ ಆಶ್ರಮದಲ್ಲಿ ಸೂರ್ಯನು ಮುಳುಗುತ್ತಿರುವುದನ್ನು ವರ್ಣಿಸುವಾಗ ಸಂಸ್ಕೃತ ಕಾದಂಬರಿಯಲ್ಲಿ "ಊರ್ಧ್ವಮುಖೈರರ್ಕಬಿಂಬ ವಿನಿಹಿತ ದೃಷ್ಟಿಭಿರೂಷ್ಮ ಪೈಸ್ತಪೋಧನೈರಿವ ಪರಿಪೀಯಮಾನ ತೇಜಃ ಪ್ರಸರೋ ವಿರಲಾತಪಸ್ತನಿಮಾನಮಭಜತ್ (ತಪಸ್ಸು ಮಾಡುವಾಗ ಊರ್ಧ್ವಮುಖರಾದ ಸೂರ್ಯಬಿಂಬದಲ್ಲೆ ನೆಟ್ಟ ದೃಷ್ಟಿಯುಳ್ಳ ತಾಪವನ್ನೇ ಕುಡಿಯುತ್ತಿರುವ ತಪಸ್ವಿಗಳಿಂದ ಕುಡಿಯಲ್ಪಡುತ್ತಿರುವ ತೇಜಃಪ್ರಸಾರವುಳ್ಳ ಸೂರ್ಯನು ಮಂದವಾದ ಬಿಸಿಲುಳ್ಳವನಾಗಿ ಕೃಶನಾದನು) ಎಂದು ಹೇಳಿದೆ. ಈ ಭಾವವು ಅದರ ಅನುವಾದವಾದ

ದಿನಕರಕಿರಣಮನುಷ್ಣಪ
ರೆನಿಸಿದ ಮುನಿಜನದ ಹೋಮಧೂಮಂ ಪೀರ್ದ
ತ್ತೆನಲೊಯ್ಯನೊಯ್ಯನಾಗಳ್
ಇನನಪಗತತೇಜಮಂಡುಗಲೊರಲಿಚಿತಾಗಳ್ ೧—೨೨೩

ಈ ಪದ್ಯದಲ್ಲಿ ಬರಲಿಲ್ಲ. ಹೋಮ ಧೂಮವು ಬಿಸಿಲನ್ನು ಕುಡಿಯಿತೆಂದು ಇಲ್ಲಿ ಹೇಳಿದ್ದಾನೆ.

ಮಹಾಶ್ವೇತೆಯ ವ್ಯಸನವನ್ನು ವರ್ಣಿಸುವಾಗ ಮೂಲಕಾದಂಬರಿಯ "ನೆಲದ ಮೇಲೆ ಹೊರಳಾಡುವವಳಾಗಿ ಧೂಳಿನ ಕಣಗಳಿಂದ ಮಲಿನವಾದ ಕಣ್ಣೀರುಗಳಿಂದ ಒದ್ದೆಯಾದ ಕೆನ್ನೆಯ ಮೇಲೆ ಅಂಟಿಕೊಂಡಿರುವ ಜಾರಿ ಬಿದ್ದು ಚದುರಿರುವ ತಲೆಗೂದಲುಗಳಿಂದ ಮುಚ್ಚಿದ ಮುಖವುಳ್ಳವಳಾಗಿ" ಎಂಬ ಅರ್ಥಬರುವ ಗದ್ಯಭಾಗವನ್ನು (ರೇಣುಕಣಧೂಸರೈರಶ್ರುಜಲಾರ್ದ್ರ ಕಪೋಲ ಸಂದಾನಿತೈರ್ವಿಮುಕ್ತವ್ಯಾಕುಲೈಃ ಶಿರೋರುಹೈರುಪರುದ್ಧಮುಖೀ)

ಪರೆದ ಮುಡಿಯೊಳ್ ಪೊರೆದು ಕಣ್ಣನೀರಿಂ ನಾಂದು
ಕದಂಪಿನೊಳ್ ಪಗಿಲ್ಪು ಪತ್ತಿದುತ್ತರೀಯಯೆಂ

ಎಂದು ಅನುವಾದ ಮಾಡಿದ್ದಾನೆ. ಕೂದಲುಳ್ಳವಳು ಎಂಬ ಅರ್ಥವನ್ನು ಬಿಟ್ಟು ಮೇಲುದವುಳ್ಳವಳು ಎಂದು ಹೇಳಿರುವುದು ಸರಿಯಾಗಿ ಕಾಣುವುದಿಲ್ಲ.

ಚಂದ್ರಾಪೀಡನು ಹೇಮಕೂಟಕ್ಕೆ ಬಂದಾಗ ಅಲ್ಲಿನ ಮಹಿಳೆಯರ ಸೌಕುಮಾರ್ಯಾತಿಶಯವನ್ನು ವಿವರಿಸುವ ಮೂಲ ವಾಕ್ಯಗಳ ಭಾವವು ಹೀಗಿದೆ: "ಹಾಗೆಯೆ ಅಲ್ಲಿ ಗೆಳತಿಯರನ್ನು ಕಂಡಾಗ ಕೈಹಿಡಿದುಕೊಳ್ಳದೆ ಅದೇ ದೊಡ್ಡ ಸಾಹಸ. ಅಲಂಕಾರ ಮಾಡಿಕೊಳ್ಳುವಾಗ ಹಾರದ ಭಾರವನ್ನು ತಡೆದುಕೊಳ್ಳುವುದು ಸ್ತನಗಳು ಬಹಳ ಕಠಿನವಾಗಿರುವುದರ ಪ್ರಭಾವ. ಹೂವನ್ನು ಕೊಯ್ಯುವಾಗ ಎರಡನೆಯ ಹೂವನ್ನು ಕೊಯ್ದುಬಿಟ್ಟರೆ ಅದು ತರುಣಿಯರು ಮಾಡುವಂತಹ ಕೆಲಸವೇ ಅಲ್ಲ. ಕನ್ನೆಯರ ಕುಶಲಕಲೆಗಳಲ್ಲಿ ಒಂದಾದ ಹೂಕಟ್ಟುವಿಕೆಯಂತೂ ಒರಟರು ಮಾಡುವ ಕೆಲಸವೆನಿಸಿಕೊಳ್ಳುತ್ತಿತ್ತು" ಎಂಬ ಅರ್ಥವನ್ನು ಕೊಡುವ ಮೂಲಗದ್ಯಭಾಗವು

ಹಾರದ ಭಾರಮನದನೇಂ
ಸೈರಿಸುವುದೆ ತನು ಲತಾಂಗಿಯರ್ಕಳ ಕಬರೀ
ಭಾರಕ್ಕಂ ಘನಕುಚಯುಗ
ಭಾರಕ್ಕಂ ಬಳ್ಕಿ ಕರಮೆ ಬಡನಡು ನಡುಗಲ್ ೬-೨೪
ಕಲಲೆಂದತಿಕೌತುಕದಿಂ
ದಲರ್ಗಟ್ಟುವೆವೆಂಬದೊಂದು ಸಾಹಸಮಂತಿ
ರ್ಕಲರಾಯ್ದು ಪದದೊಳೆರಡನೆ
ಯಲರ್ಗಂ ಕೈನೀಡಿ ಸೇದೆವಡುವರ್ ಸತಿಯರ್ ೬-೨೫

ಎಂಬ ಎರಡು ಕಂದಗಳಲ್ಲಿ ಅನುವಾದ ಮಾಡಲ್ಪಟ್ಟಿದೆ. ಇದು ಯಥಾಶ್ರುತವಾದ ಅನುವಾದವಾಗಲಿಲ್ಲ. ಸಪ್ಪೆಯಾದ ಭಾವಾನುವಾದವಾಗಿ ಬಿಟ್ಟಿದೆ ಅಷ್ಟೆ.

ಹೀಗೆ ಮೂಲಕಾದಂಬರಿಗೂ ಕರ್ಣಾಟಕ ಕಾದಂಬರಿಗೂ ಅನೇಕ ಕಡೆಗಳಲ್ಲಿ ವ್ಯತ್ಯಾಸವು ಕಂಡುಬರುತ್ತದೆ. ಕೇವಲ ಮಾದರಿಗಾಗಿ ಒಂದೆರಡು ದೃಷ್ಟಾಂತವನ್ನು ಕೊಡಲಾಗಿದೆ ಅಷ್ಟೆ.

ನಾಗವರ್ಮನು ಹೊಸದಾದ ಅಂದರೆ ಮೂಲಕಾದಂಬರಿಯಲ್ಲಿಲ್ಲದ ತಾನೆ ಕಲ್ಪಿಸಿರುವ ಹಲವಾರು ವರ್ಣನೆಗಳನ್ನು ಸೇರಿಸಿದ್ದಾನೆ. ಕಾದಂಬರಿಯ ವರ್ಣನೆಯಲ್ಲಿ

ತೊಳತೊಳತೊಳಗುವ ಬೆಳ್ದಿಂ
ಗಳ ಪಕ್ಕದೆ ಪೊಳೆವ ರಶ್ಮಿಜಾಲವಿದೆನೆ ಕೋ
ಮಳೆಯ ಸಿತಚ್ಛತ್ರದ ಕೆಲ
ದೊಳದೇನೊಪ್ಪಿದುವೊ ಧವಳ ಚಮರರುಹಂಗಳ್ ೬–೧೧೦

ಈ ಪದ್ಯದ ಭಾವ ಮೂಲಕಾದಂಬರಿಯಲ್ಲಿಲ್ಲ. ಇದು ಬೆಳದಿಂಗಳ ವರ್ಣನೆ.

ಸುರತಾಂತಶ್ರಾಂತಿಯಿಂ ನೀರಡಿಸಿದಬಲೆಯರ್ಗೀಂಟಲೌತ್ಸುಕ್ಯದಿಂ ನ
ಲ್ಲರೊಳೊಂದಲ್ ಪೋಪ ನಾರೀಜನಕೆ ಪಡುಗಲೆಂದೇಜಲುದ್ಯಾನಮಾಲಾಂ
ತರದೊಳ್ ಬಚ್ಚಲ್ಗಳಂ ತೀರ್ದಿಸಲವಿರಳ ಘರ್ಮಾರ್ದ್ರ ಕಾಂತಾಜನಕ್ಕಾ
ದರದಿಂ ನೀರಾಟಮಾಡಲ್ ನೆಱಿಗುವೆನೆ ಪೊದಟ್ದಿತ್ತು ಚಂದ್ರಾಂಶುಜಾಲಂ
೭–೯೯

ಈ ಪದ್ಯವೇನೋ ಬಹಳ ಚೆನ್ನಾಗಿದೆ. ಆದರೆ ಇದು ಬಾಣಕಾದಂಬರಿಯ ಆಧಾರದಿಂದ ಬರೆದುದಲ್ಲ.

ಹಾಗೆಯೆ ಕೊನೆಯಲ್ಲಿ ಬರುವ ೯–೬೧, ೬೨, ೬೩, ೬೪ ಪದ್ಯಗಳ ವಸಂತಋತುವಿನ ವರ್ಣನೆಯೂ ನಾಗವರ್ಮನ ಸ್ವಕಲ್ಪಿತವಾದುದು. ಹೀಗೆ ನಾಗವರ್ಮನು ಅನೇಕ ಕಡೆಗಳಲ್ಲಿ ಹೊಸದಾಗಿ ಸೇರಿಸಿರುವುದೂ ಉಂಟು.

ಹೀಗೆ ಬಾಣನ ಕಾದಂಬರಿಯನ್ನು ಅಕ್ಷರಶಃ ಅನುವಾದ ಮಾಡದೆ ಬಿಡುವುದನ್ನು ಬಿಟ್ಟು ಕೆಲವನ್ನು ಸೇರಿಸಿ ಕೆಲವನ್ನು ಬದಲಾಯಿಸಿ ಕನ್ನಡಿಗರು ಮೆಚ್ಚುವಂತೆ ಕನ್ನಡಿಸಿ ನಾಗವರ್ಮನು ಕೀರ್ತಿವಂತನಾಗಿದ್ದಾನೆ.

## ನಮ್ಮ ಅನುವಾದ

ಇನ್ನು ನಮ್ಮ ಅನುವಾದದ ವಿಷಯದಲ್ಲಿ ಒಂದೆರಡು ಮಾತುಗಳನ್ನು ಹೇಳ ಬಯಸುತ್ತೇನೆ.

ಸಂಸ್ಕೃತ ಕಾದಂಬರಿಯು ಬಹಳ ಪ್ರೌಢವಾದ ಗದ್ಯಕಾವ್ಯ, ಶ್ಲೇಷೆ ಮೊದಲಾದ ಅಲಂಕಾರ, ರಸ, ಭಾವಗಳಿಂದ ಪರಿಪೂರ್ಣವಾಗಿದೆ. ಎಂತಹ ವಿದ್ವಾಂಸನಿಗಾದರೂ ವ್ಯಾಖ್ಯಾನದ ಸಹಾಯವಿಲ್ಲದೆ ಅರ್ಥಮಾಡಿಕೊಳ್ಳುವುದು ಕಷ್ಟ. ಇಂತಹ ಕಾವ್ಯದ

ಪರಿವರ್ತನ ರೂಪವಾದ ಈ ಕರ್ಣಾಟಕ ಕಾದಂಬರಿಯೂ ಅದೇ ಮಟ್ಟದಲ್ಲಿದೆ. ಆದ್ದ ರಿಂದ ಇದರ ಗದ್ಯಾನುವಾದವು ಸುಲಭಸಾಧ್ಯವಲ್ಲ. ನಾಗವರ್ಮನಿಗಾದರೋ ಒಂದು ಸೌಲಭ್ಯವಿತ್ತು. ಬಾಣನ ಸಂಸ್ಕೃತ ಪದಗಳಿಗೆ ಕನ್ನಡ ಪದವು ದೊರಕದಿದ್ದರೆ ಅದೇ ಪದಕ್ಕೆ ಕನ್ನಡ ಪ್ರತ್ಯಯಗಳನ್ನು ಸೇರಿಸಿ ಪ್ರಯೋಗಿಸಿ ಗೆದ್ದುಬಿಡುತ್ತಿದ್ದನು. ನಾನು ಹಾಗೆ ಮಾಡುವಂತಿಲ್ಲ. ಸರಳವಾಗಿ ಬರೆಯಲು ಹೋದರೆ ಮೂಲಾರ್ಥವನ್ನೂ ಅಲಂಕಾರ ಗಳನ್ನೂ ತೃಪ್ತಿಕರವಾಗಿ ಅನುವಾದ ಮಾಡುವುದಕ್ಕೆ ಆಗುವುದಿಲ್ಲ. ಪ್ರಾಚೀನ ಶೈಲಿ ಯನ್ನು ಹಿಡಿದರೆ ಸರಳವಾಗುವುದಿಲ್ಲ. ಇಂತಹ ಇಕ್ಕಟ್ಟಿಗೆ ಸಿಕ್ಕಿಬಿದ್ದರೂ ಕೈಲಾದ ಮಟ್ಟಿಗೆ ಆಧುನಿಕ ಭಾಷೆಯನ್ನೇ ಬಳಸಿ ಅನುವಾದ ಮಾಡಿದ್ದೇನೆ. ಕಥಾಭಾಗವೆಲ್ಲ ಸರಳವಾದ ಶೈಲಿಯಲ್ಲಿದೆ. ಪ್ರೌಢವಾದ ವರ್ಣನಾ ಭಾಗವನ್ನು ಅನುವಾದ ಮಾಡುವಾಗ ಅದಕ್ಕೆ ತಕ್ಕಂತೆ ಸ್ವಲ್ಪಮಟ್ಟಿಗೆ ಶೈಲಿಯೂ ಬಿಗಿಯಾಗುವುದು ಅನಿವಾರ್ಯ. ಒಟ್ಟಿನಲ್ಲಿ ಮೂಲಾರ್ಥವನ್ನು ಸರಿಯಾಗಿ ವಿವರಿಸಬೇಕೆಂಬ ಧ್ಯೇಯವನ್ನು ಮನಸ್ಸಿನಲ್ಲಿಟ್ಟುಕೊಂಡು ಈ ಕಠಿನವಾದ ಕೆಲಸಕ್ಕೆ ತೊಡಗಿ ಭಗವಂತನ ಕೃಪೆಯಿಂದ ಮುಗಿಸಿದ್ದೇನೆ.

ಇದರಲ್ಲಿ ಶ್ಲೇಷೆ ಬಹಳವಾಗಿದೆ. ಅವುಗಳನ್ನು ಅನುವಾದಿಸುವಾಗ ಮೊದಲು ಶ್ಲಿಷ್ಟ ಪದವನ್ನು ಬಳಸಿ ದುಂಡುಕಂಸದಲ್ಲಿ ೧-೨ ಎಂಬ ಸಂಖ್ಯೆಯನ್ನು ಕೊಟ್ಟು ೧ರಲ್ಲಿ ಪ್ರಕೃತಾರ್ಥವನ್ನೂ ೨ರಲ್ಲಿ ಅಪ್ರಕೃತಾರ್ಥವನ್ನೂ ಕೊಡಲಾಗಿದೆ.

ಮೂಲವನ್ನು ಯಥಾಶ್ರುತವಾಗಿ ಅನುವಾದ ಮಾಡಿ ವಿವರಣೆ ಕೊಡಬೇಕಾದ ಕಡೆಗಳಲ್ಲಿ ಅಡಿಟಿಪ್ಪಣಿ ಕೊಡಲಾಗಿದೆ. ಇದರಲ್ಲಿ ಬಂದಿರುವ ಪೌರಾಣಿಕ ಕಥೆಗಳನ್ನು ಅನುಬಂಧದಲ್ಲಿ ವಿವರಿಸಿದ್ದೇನೆ.

ಮೊದಲಿಂದ ಕೊನೆಯವರೆಗೂ ಸಂಸ್ಕೃತ ಕಾದಂಬರಿಯನ್ನು ಪಕ್ಕದಲ್ಲಿಟ್ಟುಕೊಂಡು ನಾಗವರ್ಮನ ಕೃತಿಯನ್ನು ತೂಗಿ ನೋಡಿ ಅಪಪಾಠಗಳನ್ನು ತಿದ್ದಿ ಅನುವಾದ ಮಾಡಿ ದ್ದೇನೆ.

ಹೀಗೆ ಪರಿಶುದ್ಧವಾದ ಕಾದಂಬರಿಯ ಗದ್ಯಾನುವಾದವೆಂಬ ಪುಷ್ಪವನ್ನು ಕನ್ನಡಿ ಗರ ಅಡಿದಾವರೆಗೆ ಅರ್ಪಿಸಿದ್ದೇನೆ.

ಇಂತು ಕನ್ನಡಿಗರ ಸೇವಕ
**ಹ. ವೆ. ನಾರಾಯಣಶಾಸ್ತ್ರೀ**
ಅನುವಾದಕ

2

# ಕರ್ಣಾಟಕ ಕಾದಂಬರಿ

## ೧. ಕಥಾವತರಣಂ

ಶ್ರೀಮನ್ನಾಗೇಂದ್ರ ಭೋಗಸ್ಫುರದರುಣಮಣಿದ್ಯೋತಿ ಸಂಧ್ಯಾನಿಬದ್ಧ
ಪ್ರೇಮಂ ಪ್ರೋದ್ಯತ್ತರಂಗೋಚ್ಚರದಮರನದೀಶೀಕರೋದಾರ ತಾರಾ
ರಾಮಂ ಹೇಮಪ್ರಭಾ ಪ್ರಸ್ಫುರಿತ ಗಿರಿಶ ಚಂಚಜ್ಜಟಾಜಾಲಜೂಟ
ವ್ಯೋಮ ಪ್ರೋದ್ಭಾಸಿ ಚಂದ್ರಂ ತ್ರಿಭುವನಜನಕಾನಂದಮಂ ಮಾಡುಗೆಂದುಂ ೧

ಸತತ ಗಭೀರವೃತ್ತಿಯಿನುದಾರತೆಯಿಂ ಜಗದೇಕ ಜೀವನ
ಸ್ಥಿತಿಯಿನತಿಪ್ರಸಾದಗುಣದಿಂ ರಸಭಾವವಿಲಾಸದಿಂ ಕವಿ
ಪ್ರತತಿನಿತಾಂತ ಸೇವ್ಯತೆಯನೊಂದಿ ಸರಸ್ವತಿಯುಂದದಿಂ ಸರ
ಸ್ವತಿ ದಯೆಗೆಯ್ಗೆ ನಮ್ಮೊಳನುಕೂಲತೆಯಿಂದವೆ ನಿರ್ಮಳತ್ವಮಂ ೨

(ಪರಮೇಶ್ವರನಿಗೆ ಆಭರಣವಾಗಿರುವುದರಿಂದ) ಭಾಗ್ಯವಂತನಾದ ನಾಗರಾಜನ ಹೆಡೆಯಲ್ಲಿ ಪ್ರಕಾಶಮಾನವಾದ ಕೆಂಪುರತ್ನವಿದೆ. ಅದರ ಕೆಂಬೆಳಕೇ ಸಂಜೆ. ಆ ಸಂಜೆಯಲ್ಲಿ ಸಂಪರ್ಕ ಬೆಳೆಸಿದ್ದಾನೆ, ಶಿವನ ತಲೆಯ ಮೇಲಿರುವ ಚಂದ್ರ. ಮತ್ತು ಶಿವನ ತಲೆಯಲ್ಲಿ ಉಕ್ಕೇರುತ್ತಿರುವ ಅಲೆಗಳುಳ್ಳ ಗಂಗಾನದಿಯೂ ಇದೆ. ಆ ನದಿಯಿಂದ ಮೇಲಕ್ಕೆ ಸಿಡಿಯುತ್ತಿರುವ ಹನಿಗಳೇ ಮಿನುಗುವ ನಕ್ಷತ್ರಗಳು. ಆ ನಕ್ಷತ್ರಗಳ ಮಧ್ಯದಲ್ಲಿ ಈ ಚಂದ್ರನು ಆರಾಮವಾಗಿದ್ದಾನೆ. ಅಲ್ಲದೆ ಹೊಂಬೆಳಕಿನಿಂದ ಮಿನುಗುತ್ತಿರುವ ಶಿವಜಟಾಮಂಡಲವೆಂಬ ಆಕಾಶದಲ್ಲಿ ವಿರಾಜಿಸುತ್ತಿದ್ದಾನೆ. ಇಂತಹ ಚಂದ್ರನು ಮೂರುಲೋಕದ ಜನರಿಗೆಲ್ಲ ಯಾವಾಗಲೂ ಸಂತೋಷವನ್ನುಂಟುಮಾಡಲಿ. ಟಿ. ಇಲ್ಲಿ ಕವಿಯು "ಆಕಾಶದಲ್ಲಿ ವಿರಾಜಿಸುವ ಪ್ರಸಿದ್ಧ ಚಂದ್ರನಂತೆಯೇ ಶಿವನ ತಲೆಯ ಮೇಲೆ ಶೋಭಿಸುವ ಚಂದ್ರನೂ ಸಂಧ್ಯಾಪ್ರಣಯ, ಮೊದಲಾದ ಧರ್ಮಗಳನ್ನು ಹೊಂದಿದ್ದಾನೆ. ಆದ್ದರಿಂದ ಇಬ್ಬರೂ ಒಂದೇ" ಎಂದು ಚಿತ್ರಿಸಿದ್ದಾನೆ. ೨. ಸರಸ್ವತೀನದಿಯಂತಿರುವ ವಾಙ್ಮಯ ಸ್ವರೂಪಳಾದ ಸರಸ್ವತೀದೇವಿಯು ನಮಗೆ ಪ್ರತಿಭೆಯನ್ನು ಅನುಗ್ರಹಿಸಿ ಸಹಾಯಕಳಾಗಿ ನಾವು ಪ್ರಯೋಗಿಸುವ ಶಬ್ದಗಳು ದೋಷರಹಿತವಾಗಿಯೂ ಪರಿಶುದ್ಧವಾಗಿಯೂ ಇರುವಂತೆ ಅನುಗ್ರಹಿಸಲಿ. ಸರಸ್ವತೀದೇವಿಯು ಯಾವಾಗಲೂ ಅಶ್ಲೀಲ ಮೊದಲಾದ ದೋಷಗಳಿಲ್ಲದುದರಿಂದ ಗಂಭೀರವಾದ ಅರ್ಥವನ್ನು ಕೊಡುವ ಅಭಿಧೆ, ಲಕ್ಷಣೆ, ವ್ಯಂಜನೆ ಎಂಬ ಮೂರು ಬಗೆಯ ವೃತ್ತಿಗಳಿಂದ ಕೂಡಿದ್ದಾಳೆ ಅಥವಾ ರಸೋಚಿತವಾದ ಕೈಶಿಕೀ ಮೊದಲಾದ ವೃತ್ತಿಗಳಿಂದ ಕೂಡಿದ್ದಾಳೆ. ಇವಳಲ್ಲಿ ಉದಾರತೆಯೆಂಬ ಕಾವ್ಯಗುಣವಿದೆ. ಜಗತ್ತಿನ ಬಾಳುವಿಕೆಗೆ ಮುಖ್ಯಕಾರಣವಾಗಿದ್ದಾಳೆ. ಅತಿಶಯವಾದ ಪ್ರಸಾದವೆಂಬ

ಬಾಣಂ ವಲ್ಲಭನಕ್ಕುಮೆಂದು ಪಡೆದಾ ವಾಗ್ದೇವಿಗಬ್ಜೋದ್ಭವಂ
ಜಾಣಿಂ ಬಾಣಿಯೆನಿಪ್ಪದೊಂದು ಪೆಸರಂ ಮುನ್ನಿತ್ತನೆಂದಂದು ಪೋ
ಮಾಣೆನ್ನನ್ಯ ಕವಿಸ್ತುತಿವ್ಯಸನಮಂ ವಾಗ್ಜಾತ ಚಾತುರ್ಯಗೀ
ರ್ವಾಣಂ ತಾನೆನೆ ಸಂದ ಬಾಣನೆ ವಲಂ ವಂದ್ಯಂ ಪೆರರ್ವಂದ್ಯರೇ ೩

ಅವಯುವದೆರ್ದೆಗೊಳ್ವುದಿದಾ
ರುವನೆಂದೊಡೆ ಬಾಣಕೃತಿ ಪುಳಿಂದನ ಸಂಧಾ
ನವನೆಯ್ದಿದತ್ತು ಮತ್ತಿನ
ಕವಿಕುಳದೆರ್ದೆಗೊಳ್ವುದೆಂಬುದೊಂದಚ್ಚರಿಯೇ ೪

ಕಾವ್ಯಗುಣದಿಂದ ಕೂಡಿದ್ದಾಳೆ. ರಸ, ಭಾವಗಳ ಬೆಡಗಿನಿಂದ ಮನೋಹರವಾಗಿದ್ದಾಳೆ. ಅಲ್ಲದೆ ಕವಿಗಳು ಇವಳನ್ನು ಬಹಳವಾಗಿ ಸೇವಿಸುತ್ತಾರೆ. ಅಂದರೆ ಅಮೋಘವಾದ ಕಾವ್ಯಗಳನ್ನು ರಚಿಸುತ್ತಾರೆ. ಸರಸ್ವತೀನದಿಯು ಯಾವಾಗಲೂ ಆಳವಾಗಿಯೇ ಇರುತ್ತದೆ. ಬಹಳ ವಿಶಾಲವಾಗಿಯೂ ಇದೆ, ಜಲರೂಪವಾಗಿರುವುದರಿಂದ ಪ್ರಪಂಚದ ಜೀವನಕ್ಕೆ ಆಧಾರಭೂತವಾಗಿದೆ. ಇದರ ನೀರು ನೈರ್ಮಲ್ಯ ಗುಣದಿಂದ ಕೂಡಿದೆ. ಈ ನದಿಯ ನೀರೋಟದಲ್ಲಿ ಬಗೆಬಗೆಯಾದ ಭಂಗಿಗಳಿವೆ. ಅದರ ನೀರು ಹಕ್ಕಿಗಳ ಸಮೂಹದಿಂದ ಬಹಳವಾಗಿ ಓಲೈಸಲ್ಪಡುತ್ತಿದೆ. ಇಂತಹ ನದಿಯು ದಡಮುಟ್ಟ ಹರಿಯುತ್ತಿದ್ದರೆ ಸ್ನಾನದಿಂದ ಸ್ವಚ್ಛತೆಯನ್ನು ಪಡೆಯಲು ನಮಗೆ ಸಹಾಯವಾಗುತ್ತದೆ. ಟಿ. ಇಲ್ಲಿ ಕವಿಯು ಶ್ಲೇಷೆಯಿಂದ ಸರಸ್ವತೀನದಿಗೂ ವಾಗ್ರೂಪಳಾದ ಸರಸ್ವತಿಗೂ ಸಾಮ್ಯವನ್ನು ಚಿತ್ರಿಸಿದ್ದಾನೆ. ೩. ಬ್ರಹ್ಮನು ವಿದ್ಯಾಧಿದೇವತೆಯಾದ ಸರಸ್ವತಿಯನ್ನು ಸೃಷ್ಟಿಸಿದನು. ಆಗಲೇ ಜ್ಞಾನದೃಷ್ಟಿಯಿಂದ "ಮುಂದೆ ಬಾಣನೆಂಬುವನು ಹುಟ್ಟುತ್ತಾನೆ. ಅವನು ಇವಳಿಗೆ ಅತ್ಯಂತ ಪ್ರೀತಿಪಾತ್ರನಾಗುತ್ತಾನೆ." ಎಂಬುದನ್ನು ಅರಿತುಕೊಂಡನು. ಅದಕ್ಕೆ ಅನುಸಾರವಾಗಿ ಅವಳಿಗೆ "ಬಾಣಿ"=ಬಾಣನ ಪ್ರೀತಿಗೆ ಪಾತ್ರಳು ಎಂದು ಆಗಲೇ ನಾಮಕರಣ ಮಾಡಿಬಿಟ್ಟನು. ಹೀಗಿರಲು ನಮಗೆ ಬೇರೆ ಕವಿಗಳನ್ನು ಹೊಗಳುವ ಗೊಡವೆಯೇತಕ್ಕೆ ? ಶಬ್ದಜಾಲಗಳ ಚಮತ್ಕಾರವನ್ನು ತೋರಿಸುವ ವಿಷಯದಲ್ಲಿ ದೇವತೆಯಂತೆ ಪ್ರಭುತ್ವವನ್ನು ಪಡೆದಿರುವ ಬಾಣಕವಿಯೊಬ್ಬನೇ ನಮ್ಮ ನಮಸ್ಕಾರಕ್ಕೆ ಪಾತ್ರನಾಗುವನಲ್ಲದೆ ಬೇರೆ ಕವಿಗಳು ಆಗುತ್ತಾರೆಯೆ ? ಟಿ. ಇಲ್ಲಿ "ವಬಯೋರಭೇದಃ" ಎಂಬ ನ್ಯಾಯದಂತೆ ಕವಿವಾಣಿಯನ್ನು ಬಾಣಿಯನ್ನಾಗಿ ಮಾಡಿ ಬಾಣನ ವಲ್ಲಭಳು ಎಂಬ ಅರ್ಥವನ್ನು ಕಲ್ಪಿಸಿ ಚಮತ್ಕಾರವನ್ನುಂಟುಮಾಡಿದ್ದಾನೆ. ೪. ಬಾಣಕೃತಿ (ಅಂಬಿನ ಕಾರ್ಯ) ಹೇಗಿದೆಯೆಂದರೆ ಬೇಡನಿಂದ ಬಿಲ್ಲಿಗೆ ಸಂಧಾನ (ಹೂಡುವಿಕೆ) ಮಾಡಲ್ಪಟ್ಟು ಅದರ ಒಂದು ಭಾಗವಾದ ತುದಿಯಿಂದ ಯಾರ ಎದೆಯನ್ನಾಗಲಿ ನಾಟಿ ಒಳಕ್ಕೆ ಹೋಗುತ್ತದೆ. ಹಾಗೆಯೇ ಈ ಬಾಣಕೃತಿ (ಬಾಣನು ರಚಿಸಿರುವ ಕಾದಂಬರಿ)ಯೂ ಒಂದೊಂದು ಭಾಗವನ್ನು ಓದಿ

ಸತ್ಕೃತಿ ಸಂಸ್ಕೃತದಿಂದೆ ಜ
ಗತ್ಕೌತುಕವಾಗಿ ಮತ್ತೆ ಕರ್ಣಾಟದೊಳಂ
ಸತ್ಕೃತಿ ನಿವಹಂ ಪೊಗೞೆ ಚ
ಮತ್ಕೃತಿಯಂ ಪಡೆದು ಸೊಬಗುವಡೆದತ್ತೀಗಳ್ ೫

ಆಕೃತಿ ಮುನ್ನಂ ಚೆಲ್ವಿಂ
ಗಾಕರಮೆನಿಸಿರ್ದು ಮತ್ತೆ ಕನ್ನಡಿಸಿತ್ತಿ
ನ್ನೀ ಕವಿತೆಯಿಂ ಪ್ರಗಲ್ಭತೆ
ಯಾ ಕಾದಂಬರಿಯ ಸೊಬಗದೇನಚ್ಚರಿಯೋ ೬

ಕೃತಿಪತಿ ನರೇಂದ್ರಚಂದ್ರಂ
ಕೃತಿಯಂ ಪೇೞ್ದಂ ಬುಧಾಬ್ಜವನಕಳಹಂಸಂ
ಕೃತಿ ಕಾದಂಬರಿಯೆನೆ ಸ
ತ್ಕೃತಿ ಕಥಿತ ಕಥಾವತಾರಮೇಂ ಕೇವಳಮೇ ೭

ದರೂ ಸಾಕು, ವಿದ್ವಾಂಸರ ಎರ್ದೆಗೊಳ್ಳುವುದರಲ್ಲಿ (ಮನಸ್ಸನ್ನು ವಶಪಡಿಸಿಕೊಳ್ಳುವುದರಲ್ಲಿ) ಯಾವ ಆಶ್ಚರ್ಯವೂ ಇಲ್ಲ. ಬಾಣಕೃತಿಯ ಸ್ವಭಾವವೇ ಅಂತಹುದು. ಟಿ. ಇಲ್ಲಿ "ಬಾಣಕೃತಿ" ಮತ್ತು "ಎರ್ದೆಗೊಳ್ವುದು" ಎಂಬ ಎರಡು ಪದಗಳೂ ಶ್ಲೇಷೆಯಿಂದ ಎರಡು ಅರ್ಥವನ್ನು ಕೊಡುತ್ತವೆ. ಬೇಡನು ಸಂಧಾನ ಮಾಡಿದರೇ ಎದೆಗೆ ನಾಟುವ ಬಾಣಕೃತಿಯು ಪಂಡಿತರು ಸಂಧಾನ (ವ್ಯಾಸಂಗ) ಮಾಡಿದರೆ ಮನಸ್ಸಿಗೆ ನಾಟದಿರುತ್ತದೆಯೆ ? ಅಲ್ಲದೆ ಒಂದು ಭಾಗದಿಂದಲೇ ಎರ್ದೆಗೊಳ್ವುದಾದರೆ ಪೂರ್ಣವಾದ ಕೃತಿಯ ವಿಚಾರವನ್ನು ಹೇಳಬೇಕಾದ್ದೇ ಇಲ್ಲ ಎಂಬ ಅರ್ಥವಿಶೇಷವೂ ತೋರುತ್ತದೆ. ೫. ಈ ಶ್ರೇಷ್ಠವಾದ ಕಾದಂಬರಿಯು ಮೊದಲು ಸಂಸ್ಕೃತ ಭಾಷೆಯಲ್ಲಿ ವಿರಚಿತವಾಗಿ ಪ್ರಪಂಚಕ್ಕೆ ಆಶ್ಚರ್ಯವನ್ನುಂಟುಮಾಡುತ್ತಿರುವುದು ಸರಿಯಷ್ಟೆ. ಈಗ ನಾನು ಅದನ್ನು ಕನ್ನಡ ಭಾಷೆಗೆ ಪರಿವರ್ತಿಸುತ್ತಿದ್ದೇನೆ. ಈ ಕರ್ಣಾಟಕ ಕಾದಂಬರಿಯೂ ಕೂಡ ವಿದ್ವಜ್ಜನರು ಹೊಗಳುವಂತೆ ಚಮತ್ಕಾರವನ್ನುಂಟುಮಾಡುತ್ತಾ ಮನೋಹರವಾಗಿರುತ್ತದೆ. ೬. ಆ ಬಾಣಮಹಾಕವಿಯ ಕಾದಂಬರಿ ಎಂಬ ಗದ್ಯ ಪ್ರಬಂಧವು ಮೊದಲೇ ಕಾವ್ಯಸೌಂದರ್ಯಕ್ಕೆ ನೆಲೆವೀಡೆಂದು ಪ್ರಸಿದ್ಧವಾಗಿದೆ. ಈಗ ಈ ನನ್ನ ಈ ಕೃತಿಯ ಮೂಲಕ ಕನ್ನಡಿಸಲ್ಪಟ್ಟಿದೆ. ಆ ಮೂಲ ಕಾದಂಬರಿಯ ಪ್ರೌಢಿಮೆಯ ಸೊಬಗು ಎಷ್ಟು ಅದ್ಭುತವಾದುದೊ. ೭. ಈ ಕಾವ್ಯಕ್ಕೆ ಭೂಮಿಯಲ್ಲಿ ರಾಜನಾಗಿ ಅವತರಿಸಿದ ಚಂದ್ರನೇ ನಾಯಕನು. ಕಾವ್ಯವನ್ನು ಬರೆದವನಾದರೋ "ಬುಧಾಬ್ಜವನಕಳಹಂಸ" (ವಿದ್ವಾಂಸರೆಂಬ ತಾವರೆ ಗುಂಪಿನಲ್ಲಿ ರಾಜಹಂಸದಂತಿರುವವನು) ಎಂಬ ಬಿರುದನ್ನು ಪಡೆದಿರುವ ನಾಗವರ್ಮ. ಕಾವ್ಯವೇ ಕಾದಂಬರಿ,

ಇಳೆಯೊಳದೋರ್ವನಿಂದ್ರನೆನೆ ಸಂದ ಸಮೃದ್ಧಿಯೊಳೊಂದಿ ಕೂಡಿ ತ
ನ್ನೊಳೆ ನೃಪಲಕ್ಷಣಂ ನೆಗಟೆ ದೋರ್ವಲದಿಂ ಚತುರಬ್ಧಿಮೇಖಲಾ
ವಳಯಿತ ಭೂಮಿಗಾದನೆಱೆಯಂ ನೃಪತಿಪ್ರಭುಲೋಕಮಂ ನಿಜೋ
ಜ್ಜ್ವಳತರಕೀರ್ತಿಯಿಂ ನೆಱೆಯೆ ಮುದ್ರಿಸಿ ಶೂದ್ರಕನೆಂಬ ಭೂಭುಜಂ ೮

ಆಕ್ರಮಿಪೆಡೆಯೊಳ್ ಮೂಱಿಂ
ವಿಕ್ರಮದಾಯಾಸಮಾಯ್ತು ಮುಂ ಚಕ್ರಿಗೆ ನು
ತ್ಯಾಕ್ರಾಂತ ಸಮಸ್ತ ಜಗ
ಚ್ಚಕ್ರಂ ನೃಪನೊಂದೆ ವಿಕ್ರಮಂ ನಗುತಿರ್ಕುಂ ೯

ಅರಿಗಳ್ ಪೆಸರ್ಗೇಳ್ದಿರ್ದೆವೊಡೆ
ವರೆಂಬ ಶೂದ್ರಕನ ವಿಕ್ರಮಾಡಂಬರಮುಂ
ದರೆವಾನಿಸಿಕೆಯೊಳೊಂದಿದ
ನರಸಿಂಹಾಡಂಬರಕ್ಕೆ ನಸುನಗುತಿರ್ಕುಂ ೧೦

ಈ ಮಹಾಕಾವ್ಯದಲ್ಲಿ ವಿವರಿಸಿರುವ ಕಥಾಸ್ವರೂಪವು ಸಾಮಾನ್ಯವಾದುದೇ ! ಟಿ. ಈ ಪದ್ಯದಲ್ಲಿ ಕವಿಗೆ ಆಶ್ರಯದಾತನಾದ ಚಂದ್ರನೆಂಬ ರಾಜನು ಇದ್ದಿರಬೇಕೆಂದೂ ಅವನ ಅಂಕಿತದಲ್ಲಿ ಈ ಕಾವ್ಯವು ರಚಿಸಲ್ಪಟ್ಟಿರಬೇಕೆಂದೂ ಊಹಿಸಲು ಅವಕಾಶವಿದೆ. ೮. ಶೂದ್ರಕನೆಂಬ ಒಬ್ಬ ಮಹಾರಾಜನಿದ್ದನು. ಜನರು ಅವನನ್ನು ಭೂಲೋಕದ ದೇವೇಂದ್ರನೆಂದು ಕೊಂಡಾಡುತ್ತಿದ್ದರು. ಅವನು ಸಂಪತ್ತಿನ ಸಮೃದ್ಧಿಯಿಂದ ಕೂಡಿ ಕೊಂಡಿದ್ದನು. ಅವನಲ್ಲಿ ರಾಜಲಕ್ಷಣಗಳೆಲ್ಲವೂ ಪರಿಪೂರ್ಣವಾಗಿದ್ದುವು. ಸೊಂಟದ ಡಾಬಿನಂತೆ ಸುತ್ತಲೂ ಸುತ್ತುವರಿದಿರುವ ನಾಲ್ಕು ಸಮುದ್ರಗಳ ಮಧ್ಯದಲ್ಲಿರುವ ಭೂಮಿಗೆ ಅವನು ತನ್ನ ಬಾಹುಬಲದಿಂದಲೇ ಪತಿಯೆನ್ನಿಸಿಕೊಂಡಿದ್ದನು. ಅವನ ಪ್ರಕಾಶಮಾನ ವಾದ ಕೀರ್ತಿಯು ರಾಜ ಮಹಾರಾಜರುಗಳ ಸಮೂಹವನ್ನು ಸಂಪೂರ್ಣವಾಗಿ ಆವರಿಸಿ ಕೊಂಡಿದ್ದಿತು. ೯. ಹಿಂದೆ ವಾಮನಾವತಾರದಲ್ಲಿ ಶ್ರೀಮನ್ನಾರಾಯಣನು ಜಗತ್ತನ್ನು ಆಕ್ರಮಿಸಿಕೊಳ್ಳಬೇಕಾದರೆ ಮೂರು ವಿಕ್ರಮದ (ಮೂರು ಹೆಜ್ಜೆಗಳಿಂದ ಅಳೆದು ಕೊಳ್ಳುವ) ಪ್ರಯಾಸವನ್ನು ಪಡಬೇಕಾಯಿತಲ್ಲ ! ಈಗ ಈ ಶೂದ್ರಕ ಮಹಾರಾಜ ನಾದರೋ ಒಂದೇ ವಿಕ್ರಮದಿಂದಲೆ (ಪರಾಕ್ರಮವೊಂದರಿಂದಲೇ) ಇಡೀ ಜಗತ್ತನ್ನು ಆಕ್ರಮಿಸಿಕೊಂಡಿದ್ದಾನೆ. ಆದ್ದರಿಂದ ಶ್ರೀಮನ್ನಾರಾಯಣನನ್ನೂ ಹಾಸ್ಯ ಮಾಡು ತ್ತಿರುವನೋ ಏನೊ ! ೧೦. "ಶೂದ್ರಕ" ಎಂಬ ಹೆಸರು ಕಿವಿಗೆ ಬಿದ್ದರೆ ಸಾಕು ಶತ್ರುಗಳ ಎದೆ ಭಯದಿಂದ ಬಿರಿದು ಹೋಗುತ್ತಿತ್ತು. ಅವನ ಪರಾಕ್ರಮದ ಬಲ್ಮೆ ಅಂತಹುದು. ಹೀಗಿರಲು ಹಿಂದೆ ಶತ್ರುವಾದ ಒಬ್ಬ ಹಿರಣ್ಯಕಶಿಪುವಿನ ಎದೆಯನ್ನು ಭೇದಿಸಲು ಅರ್ಧಮನುಷ್ಯಾಕಾರವನ್ನು ತಾಳಿ ನರಸಿಂಹಾವತಾರ ಮಾಡಬೇಕಾಗಿ ಬಂದ

ಕಲಿಮಲಕುಭೃತ್ಸಂಗದ
ಕಳಂಕಮಂ ಕರ್ಚಿ ಕಳೆಯಲೆಂದಾ ಭೂಮಂ
ಡಳಪತಿಯ ಖಡ್ಗಧಾರಾ
ಜಳದೊಳ್ ಸಾಮ್ರಾಜ್ಯಲಕ್ಷ್ಮಿ ಸಲೆ ನೆಲೆಸಿರ್ಪಳ್ ೧೧

ಪಿರಿದುಂ ದೃಢಕರಮುಷ್ಟಿಯ
ಭರದಿಂ ಮುನ್ನುಂಡ ನೀರನುಗುಟ್ದಪುದೆಂಬಂ
ತರಿಕರಿಮಸ್ತಕ ಮುಕ್ತಾ
ತ್ಕರದಂತುರಮೆಸೆವುದಾ ನೃಪಾಲಕೃಪಾಣಂ ೧೨

ಕಲಿಗಳುರಃಕವಾಟಕವಚಂಗಳ ಕಟ್ಟಲೆಯೊಳ್ ಕವೀಂದ್ರ ಸಂ
ಕುಳ ಮದವಾರಿಧಾರೆಗಳ ಪೆರ್ಮಟೆಯೊಳ್ ರಣಮೆಂಬ ರಾತ್ರಿಯೊಳ್
ಸಲೆ ಬರುತಿರ್ಪಳೆಂದುಮಭಿಸಾರಿಕೆಯಂದದೆ ರಾಜ್ಯಲಕ್ಷ್ಮಿ ತ
ನ್ನೊಲವಿನೊಳೆಂದೊಡಾ ನೃಪನ ಪೌರುಷಮೇಂ ಪೊಗಟಲ್ಕೆವೇಟ್ಕುಮೇ ೧೩

ಶ್ರೀಮನ್ನಾರಾಯಣನ ಆಟಾಟೋಪಕ್ಕೆ ಅದು ನಗುತ್ತಿದೆಯೋ ಎಂಬಂತೆ ತೋರು ತ್ತದೆ. ಒಟ್ಟಿನಲ್ಲಿ ಶ್ರೀಮನ್ನಾರಾಯಣನ ಪರಾಕ್ರಮಕ್ಕೂ ಮಿಗಿಲಾದ ಪರಾಕ್ರಮ ಶೂದ್ರಕ ಮಹಾರಾಜನದು. ೧೧. "ಕಲಿಯುಗದ ದೋಷಕ್ಕೆ ಒಳಗಾಗಿ ಕೊಳಕಾಗಿ ರುವ ಅನೇಕ ರಾಜರ ಸಂಪರ್ಕವು ಇದುವರೆಗೆ ನನಗೆ ಆಗಿಬಿಟ್ಟಿದೆ. ಇದರಿಂದ ನನಗೂ ಕೊಳಕು ಅಂಟಿಕೊಂಡಿದೆ. ಇದನ್ನು ತೊಳೆದುಕೊಳ್ಳಲೇಬೇಕು" ಎಂದು ನಿಶ್ಚಯಿಸಿ ಸಾಮ್ರಾಜ್ಯಲಕ್ಷ್ಮಿಯು ಈ ಚಕ್ರವರ್ತಿಯ ಕತ್ತಿಯ ಅಲಗೆಂಬ ನೀರಿನಲ್ಲಿ ಬಹುಕಾಲ ದಿಂದ ನೆಲಸಿದ್ದಾಳೆ. ೧೨. ಆ ರಾಜನು ಯುದ್ಧದಲ್ಲಿ ಶತ್ರುಗಜಗಳ ತಲೆಗಳನ್ನು ತನ್ನ ಕತ್ತಿಯಿಂದ ಸೀಳುತ್ತಿದ್ದನು. ಆಗ ಆ ಆನೆಗಳ ತಲೆಯೊಳಗಿದ್ದ ಮುತ್ತುಗಳು ಕತ್ತಿಗೆ ಹಳ್ಳತಿಟ್ಟಾಗುವಂತೆ ಅಂಟಿಕೊಳ್ಳುತ್ತಿದ್ದುವು. ಅದನ್ನು ನೋಡಿದರೆ ಈ ಕತ್ತಿ ಹಿಂದೆ ಪದ ಕೊಡುವಾಗ ಹಾಕಿದ ನೀರನ್ನು ಹೀರಿಕೊಂಡಿತ್ತಲ್ಲ. ಆ ನೀರನ್ನೆಲ್ಲಾ ಈಗ ಆ ರಾಜನ ಬಹಳ ಗಟ್ಟಿಯಾದ ಮುಷ್ಟಿಯ ಹಿಡಿತದಿಂದ ಹಿಸುಕಿದಂತಾಗಿ ಉಗುಳು ತ್ತಿದೆಯೊ ಎಂಬಂತೆ ಕಾಣುತ್ತಿತ್ತು. ೧೩. ಅಭಿಸಾರಿಕೆಯು ಎಂತಹ ಕಗ್ಗತ್ತಲೆಯ ರಾತ್ರಿಯಲ್ಲೂ ಮಳೆ ಸುರಿಯುತ್ತಿದ್ದರೂ ತನ್ನ ಇನಿಯನನ್ನು ಹುಡುಕಿಕೊಂಡು ಹೋಗು ವುದಿಲ್ಲವೆ ? ಹಾಗೆಯೆ ಯುದ್ಧವೆಂಬ ರಾತ್ರಿಯಲ್ಲಿ ಬಾಗಿಲಿನಂತೆ ವಿಶಾಲವಾದ ಭಟರ ಎದೆಯ ಮೇಲಿರುವ ಕವಚಗಳೆಂಬ ಕತ್ತಲೆಯಲ್ಲಿ ಮದ್ದಾನೆಗಳ ಗುಂಪಿನ ಮದೋದಕ ಪ್ರವಾಹವೆಂಬ ದೊಡ್ಡ ಮಳೆಯಲ್ಲಿ ಅಭಿಸಾರಿಕೆಯಂತೆ ರಾಜ್ಯಲಕ್ಷ್ಮಿಯು ಒಲುಮೆ ಯಿಂದ ಆ ರಾಜನನ್ನು ಹುಡುಕಿಕೊಂಡು ಬರುತ್ತಿದ್ದಳು—ಎಂದ ಮೇಲೆ ಅವನ ಥರ್ಥಾ

ಹೃದಯಸ್ಥಿತ ನೃಪರುಮನಃರು
ಪಿದಪ್ಪುದೆನಲ್ ಪತಿವಿಯೋಗ [ಖಿದ್ಯದ್ವನಿತಾ]
ಹೃದಯಂಗಳೊಳಾವಗಮುರಿ
ವುದು ಕಡುಪಿನೊಳಾ ನೃಪಪ್ರತಾಪಜ್ವಲನಂ ೧೪

ಇದು ಕಲಿಭೀತಿಯಂ ಕೃತಯುಗಂ ಬಲಿದಿರ್ದಪುದೆಂಬ ಸಚ್ಚರಿ
ತ್ರದಿನೆಸೆದಾವಗಂ ತ್ರಿಭುವನಪ್ರಸವಕ್ಕಿದು ಭೂಮಿಯೆಂಬ ಪೆಂ
ಪೊದವಿರೆ ಪೆರ್ಮೆಯಿಂ ವಿದಿಸೆಯೆಂಬುದು ನಚ್ಚಿನ ರಾಜಧಾನಿಯಾ
ದುದು ಜಗದೊಳ್ ವಿಶೇಷಮೆನಲೊಪ್ಪುವ ಮಾಳವ ಮಧ್ಯದೇಶದೊಳ್ ೧೫

ವ॥ ಮತ್ತಮದು ಜಲಕೇಳಿಗೆಂದು ಬಂದೋಲಾಡುವ ಮಾಳವ ವಿಳಾಸಿನಿಯರ ಪೆರ್ಮೊಲೆಯ ಪೊರ್ಕುಳಿಯೊಳ್ ಪಟಿವಟಿಯಾದ ಪೆರ್ದೆಱೆಯೊಳಮವಗಾಹನಕ್ಕೆಂದು ಬಂದ ಸೊಕ್ಕಿದಾನೆಗಳ ಸಿಂದುರಂಬೊರೆದ ಸಲಿಲಂಗಳೊಳಮಿಂಚರದಂಚೆವಿಂಡುಗಳಿಂ ಸೊಗಯಿಸು ವಿರ್ತಡಿಗಳೊಳಮೊಪ್ಪಂಬೆತ್ತ ವೇತ್ರವತಿಯೆಂಬ ನದಿಯಿಂ ಸುತ್ತುಂಗೊಂಡಿರ್ಪುದಾ ರಾಜಧಾನಿ ಯೊಳ್

ಕ್ರಮವನ್ನು ಹೊಗಳಬೇಕಾದ್ದೇ ಇಲ್ಲ. ಟಿ॥ ಕಾಮಪರವಶಳಾಗಿ ತಾನಾಗಿಯೇ ಇನಿಯನ ಬಳಿಗೆ ಹೋಗುವವಳಿಗೆ ಅಭಿಸಾರಿಕೆಯೆಂದು ಹೆಸರು. ೧೪. ಶೂದ್ರಕನೊಂದಿಗೆ ಸೆಣಸಿದ ಶತ್ರುರಾಜರು ನಾಮಾವಶೇಷರಾಗಿ ಹೋಗಿದ್ದರು. ಆದರೂ ವಿರಹದಿಂದ ಸದಾ ಪತಿಯನ್ನೇ ಚಿಂತಿಸುತ್ತಾ ಬಸವಳಿದ ತಮ್ಮ ತಮ್ಮ ಕಾಂತೆಯರ ಹೃದಯದಲ್ಲಿ ಭಾವನಾರೂಪದಿಂದ ನೆಲಸಿದ್ದರು. ಹಾಗೆ ಅಲ್ಲಿ ನೆಲಸಿರುವ ಶತ್ರುಗಳನ್ನೂ ಕೂಡ ಸುಟ್ಟು ಬೂದಿಮಾಡಬೇಕೆಂಬ ಉದ್ದೇಶದಿಂದ ಶೂದ್ರಕನ ಪ್ರತಾಪವೆಂಬ ಬೆಂಕಿಯು ಶತ್ರುಸ್ತ್ರೀಯರ ಹೃದಯದಲ್ಲಿ ಯಾವಾಗಲೂ ಪ್ರಬಲವಾಗಿ ಉರಿಯುತ್ತಿತ್ತು ಟಿ. ಪತಿವಿರಹದಿಂದ ಉಂಟಾದ ಮನೋವ್ಯಥೆಯೇ ರಾಜನ ಪ್ರತಾಪಾಗ್ನಿ. ಒಟ್ಟಿನಲ್ಲಿ ಶೂದ್ರಕಮಹಾರಾಜನ ಶತ್ರುಗಳಿಗೆ ಎತ್ತಲೂ ಉಳಿಗಾಲವಿಲ್ಲ. ೧೫. ಜಗತ್ತಿನಲ್ಲಿ ಬಹಳ ಅತಿಶಯವಾದುದೆಂದು ಹೆಸರು ಪಡೆದಿರುವ ಮಾಳವದೇಶದಲ್ಲಿ ಜನರ ಅಭಿಮಾನಕ್ಕೆ ಪಾತ್ರವಾದ ವಿದಿಸೆಯೆಂಬ ಹೆಸರಿನ ಪಟ್ಟಣವು ರಾಜಧಾನಿಯಾಗಿತ್ತು. ವ॥ ಮತ್ತು ಆ ರಾಜಧಾನಿಯು ವೇತ್ರವತಿಯೆಂಬ ನದಿಯಿಂದ ಸುತ್ತುವರಿಯಲ್ಪಟ್ಟಿತ್ತು, ಮಾಳವಮಹಿಳೆಯರು ನೀರಾಟಕ್ಕೆಂದು ಆ ನದಿಗೆ ಬರುತ್ತಿದ್ದರು. ಅವರು ಆ ನದಿಯ ನೀರಿಗೆ ಇಳಿದು ಈಜಾಡುತ್ತಿರುವಲ್ಲಿ ಅವರ ಪೀವರಸ್ತನಗಳಿಗೂ ಮತ್ತು ಹೊಕ್ಕಳಿಗೂ ಬಡಿದು ಅಲೆಗಳು ಒಡೆದು ಚೆಲ್ಲಾಪಿಲ್ಲಿಯಾಗುತ್ತಿದ್ದವು. ಅಲ್ಲದೆ ಅದರ ನೀರು ಸ್ನಾನಕ್ಕಾಗಿ ಬರುತ್ತಿದ್ದ ಮದ್ದಾನೆಗಳ ತಲೆಗೆ ಬಳಿದಿದ್ದ ಚಂದ್ರದ ಪುಡಿಯಿಂದ ಕೆಂಬಣ್ಣವಾಗಿ ಹರಿಯುತ್ತಿತ್ತು. ಆ ಹೊಳೆಯ ಎರಡು ದಡಗಳಲ್ಲೂ ಹಂಸಪಕ್ಷಿಗಳು ಇಂಪಾಗಿ ಧ್ವನಿಗೈಯುತ್ತಿದ್ದುವು. ಇವೆಲ್ಲದರಿಂದ ಆ ವೇತ್ರವತಿಯು ಬಹಳ

ಮಥಿತ ರಿಪುಭೂಪಾಳಂ ಹೇಳಾವಶೀಕೃತಮಂಡಲಂ
ಪ್ರಥಿತ ಪೃಥಿವೀಪಾಲೌಘಾನಮ್ರಮೌಳಿಮಣಿಪ್ರಭಾ
ಗ್ರಥಿತ ಪದಪೀಠಾಗ್ರಂ ಕೇಯೂರಮಂ ತಳೆವಂದದಿಂ
ಪೃಥುಳ ಭುಜದಿಂ ಪೃಥ್ವೀಶಂ ತಾಳ್ದಿದಂ ನೆಲನೆಲ್ಲಮಂ ೧೬

ವ॥ ಅಂತು ವಿಜಿತಾಶೇಷ ಭುವನಮಂಡಲತೆಯಿನಪಗತರಾಜ್ಯ ಚಿಂತಾಭಾರನಿರ್ವೃತ ನಾಗಿರ್ಪನಂತುಮಲ್ಲದೆಯುಂ

ಪ್ರಣತ ರಿಪುನೃಪತಿಚೂಡಾ
ಮಣಿರಂಜಿತಪಾದನಧಿಕ ಸತ್ವಗುಣೈಕಾ
ಗ್ರಣಿಗಾ ನೃಪಂಗೆ ಮನದೊಳ್
ತೃಣವಲ್ಲಘುವಾದುದಾವಗಂ ಸ್ತ್ರೈಣಸುಖಂ ೧೭

ಕಂತುಗೆ ತಾನೆ ಮೇಲೆನಿಸಿಯುಂ ಪೊಸಜವ್ವನದಿಂದವೊಂದಿಯುಂ
ಸಂತತಿವೇಟ್ಕುಮೆಂದು ಸಚಿವರ್ ಸಲೆ ಪೇೞ್ಯುವೊಳ್ಪುವೆತ್ತ ಶು
ದ್ಧಾಂತ ನಿತಂಬಿನೀನಿವಹಮೊಲ್ದೆಳಸುತ್ತಿರೆಯುಂ ಧರಾಂಗನಾ
ಕಾಂತನ ಚಿತ್ತವೇಕಱಿಯೆಮೊಂದದಣಂ ಸುರತೋಪಭೋಗಮಂ ೧೮

ಸೊಗಸಾಗಿ ಕಾಣುತ್ತಿತ್ತು. ೧೬. ಇಂತಹ ರಾಜಧಾನಿಯಲ್ಲಿ ಶೂದ್ರಕಮಹಾರಾಜನು ತನ್ನ ಪರಿಪುಷ್ಟವಾದ ತೋಳುಗಳಿಂದ ತೋಳುಬಂದಿಯನ್ನು ಹಾಕಿಕೊಳ್ಳುವಂತೆ ಅನಾಯಾಸವಾಗಿ ಸಮಸ್ತ ಭೂಮಂಡಲವನ್ನೂ ಧರಿಸಿದ್ದನು. ಅಂದರೆ ತನ್ನ ಭುಜ ಬಲದಿಂದ ರಾಜ್ಯಭಾರ ಮಾಡುತ್ತಿದ್ದನು. ಅವನು ಶತ್ರುರಾಜರುಗಳನ್ನೆಲ್ಲಾ ಅಡಗಿಸಿ ಬಿಟ್ಟಿದ್ದನು. ಆಟವಾಡುವಂತೆ ಅನಾಯಾಸವಾಗಿ ಭೂಮಂಡಲವನ್ನು ಅಧೀನದಲ್ಲಿ ಇಟ್ಟುಕೊಂಡಿದ್ದನು. ಸುಪ್ರಸಿದ್ಧರಾದ ರಾಜರುಗಳೂ ಕೂಡ ಗುಂಪು ಗುಂಪಾಗಿ ಬಂದು ಇವನ ಕಾಲಿಗೆ ಎರಗುತ್ತಿದ್ದರು. ಆಗ ಅವನು ಕಾಲಿಟ್ಟುಕೊಂಡಿದ್ದ ಪಾದಪೀಠವು ಅವರ ಬಗ್ಗಿದ ತಲೆಯ ರತ್ನಗಳ ಕಾಂತಿಯಿಂದ ಆವರಿಸಲ್ಪಡುತ್ತಿತ್ತು. ವ॥ ಹಾಗೆ ಸಮಸ್ತ ಭೂಮಂಡಲವನ್ನೂ ಜಯಿಸಿದ್ದುದರಿಂದ ರಾಜ್ಯಭಾರದ ವಿಷಯದಲ್ಲಿ ಯಾವ ಚಿಂತೆಯೂ ಇಲ್ಲದೆ ನೆಮ್ಮದಿಯಿಂದ ಇದ್ದನು. ಅದಲ್ಲದೆ, ೧೭. ಕಾಲಿಗೆ ಬೀಳುತ್ತಿರುವ ಶತ್ರುರಾಜರ ತಲೆಮಣಿಯ ಪ್ರಭೆಯಿಂದ ಬೆಳಗುವ ಕಾಲುಗಳುಳ್ಳ ಮತ್ತು ಕೆಚ್ಚೆದೆಯವರಲ್ಲಿ ಅಗ್ರೇಸರನೆನಿಸಿರುವ ಆ ಮಹಾರಾಜನ ಮನಸ್ಸಿನಲ್ಲಿ ಸ್ತ್ರೀ ಸುಖವೆಂದರೆ ಹುಲ್ಲುಕಡ್ಡಿಗಿಂತ ಕಡೆ ಎಂಬ ಒಂದು ತುಚ್ಛಭಾವನೆ ನೆಲಸಿಬಿಟ್ಟಿದ್ದಿತು. ೧೮. ಆ ರಾಜನು ಚಲುವಿನಲ್ಲಿ ಮನ್ಮಥನಿಗಿಂತಲೂ ಮಿಗಿಲಾಗಿದ್ದನು. ಹೊಸ ಜವ್ವನವು ತುಂಬಿತ್ತು. ಮಕ್ಕಳಾಗಬೇಕೆಂದು ಮಂತ್ರಿಗಳೂ ಪದೇಪದೇ ಒತ್ತಾಯಪಡಿಸುತ್ತಿದ್ದರು. ಪರಮ ಸುಂದರಿಯರಾದ ರಾಣಿಯರೂ ಪ್ರೀತಿಯಿಂದ ಓಲೈಸಿಕೊಂಡಿದ್ದರು. ಇಷ್ಟೆಲ್ಲಾ

ಅದೊರ್ಮೆ ಕಲವಾದ್ಯದಿಂ ಸರಸ ವಾದ ಗೀತಂಗಳಿಂ
ದದೊರ್ಮೆ ಮೃದುಪಂಚಮೋಚಿತ ವಿಪಂಚಿಕಾನಾದದಿಂ
ದದೊರ್ಮೆ ರಸಭಾವಕಂಚುಕಿತ ಚಿತ್ರಕರ್ಮಂಗಳಿಂ
ದದೊರ್ಮೆ ವಿವಿಧಪ್ರಕಾರ ಮೃಗಯಾ ವಿನೋದಂಗಳಿಂ ೧೯

ಅದೊರ್ಮೆ ನವಕಾವ್ಯಬಂಧರಚನಾ ವಿಶೇಷಂಗಳಿಂ
ದದೊರ್ಮೆ ವರವೀರ ವಿಶ್ರುತ ಕಥಾಪುರಾಣಂಗಳಿಂ
ದದೊರ್ಮೆ ಮುನಿಮಂಡಳೀಪದಪಯೋಜ ಶುಶ್ರೂಷೆಯಿಂ
ವಿದಗ್ಧಜನವಲ್ಲಭಂ ಕಳೆವನಿಂತು ಪೊಟ್ತಂ ನೃಪಂ ೨೦

ವ॥ ಅಂತು ವನಿತಾಸುಖಪರಾಙ್ಮುಖಂ ಪೊಟ್ತುಗಳೆವುತ್ತಿರ್ದೊಂದು ದಿವಸಂ ಪ್ರಭಾತ ಸಮಯುದೊಳೊಡ್ಡೋಲಗದೊಳಿರೆ

ತಳೆದೇನಿರ್ದರೊ ತಮ್ಮ ತಮ್ಮ ತಲೆಯೊಳ್ ರಾಜಾಜ್ಞೆಯಂ ಮೂರ್ತಿಗೊಂ
ಡಳೆಸೆಂಬಂತಿರೆ ಭೂಪತಿಪ್ರಕರ ನಾನಾಮೌಳಿಮಾಣಿಕ್ಯ ಸಂ
ಕುಳದೊಳ್ ಮಾರ್ಪೊಳೆವುತ್ತಮೊಯ್ಯನೆ ಬರುತಿರ್ದಳ್ ಪ್ರತೀಹಾರಿ ಭೂ
ವಳಯಾಧೀಶ್ವರನಲ್ಲಿಗಾಗಿ ನಯುದಿಂ ವಿಜ್ಞಾಪನೋತ್ಕಂಠೆಯಿಂ ೨೧

ಇದ್ದರೂ ಆದೇಕೋ ಏನೋ ತಿಳಿಯದು, ಅವನ ಮನಸ್ಸು ರತಿಸುಖಕ್ಕಂತೂ ಸ್ವಲ್ಪವೂ ಇಷ್ಟಪಡುತ್ತಿರಲಿಲ್ಲ. ೧೯. ಅವನು ಒಮ್ಮೊಮ್ಮೆ ಮೃದಂಗ ಮೊದಲಾದ ವಾದ್ಯಗಳನ್ನು ಇಂಪಾಗಿ ಬಾರಿಸುತ್ತಲೂ ಒಮ್ಮೊಮ್ಮೆ ಆನಂದವಾಗಿ ಹಾಡುತ್ತಲೂ ಒಮ್ಮೊಮ್ಮೆ ಮಧುರವಾದ ಮತ್ತು ಪಂಚಮಸ್ವರದಿಂದ ರಮ್ಯವಾದ ವೀಣಾವಾದನ ದಿಂದಲೂ ಒಮ್ಮೊಮ್ಮೆ ರಸಭಾವ ಪರಿಪೂರ್ಣವಾದ ಚಿತ್ರಗಳನ್ನು ಬರೆಯುವುದ ರಿಂದಲೂ ಒಮ್ಮೊಮ್ಮೆ ಬಗೆಬಗೆಯ ಉಲ್ಲಾಸಕರವಾದ ಬೇಟೆಯಿಂದಲೂ ಕಾಲವನ್ನು ಕಳೆಯುತ್ತಿದ್ದನು. ೨೦. ರಸಿಕಾಗ್ರೇಸರನಾದ ಆ ದೊರೆಯು ಇದೇ ರೀತಿಯಲ್ಲಿ ಕೆಲವು ವೇಳೆ ಬಗೆ ಬಗೆಯಾದ ಹೊಸ ಹೊಸ ಕಾವ್ಯಗಳನ್ನು ಬರೆಯುವುದರಿಂದಲೂ ಮತ್ತು ಕೆಲವು ವೇಳೆ ಪುರಾತನರಾದ ವೀರಾಗ್ರೇಸರರ ಇತಿಹಾಸವನ್ನೂ ಮತ್ತು ಪುರಾಣ ಪುಣ್ಯಕಥೆಗಳನ್ನೂ ಶ್ರವಣ ಮಾಡುವುದರಿಂದಲೂ ಮತ್ತು ಕೆಲವು ವೇಳೆ ಮಹರ್ಷಿಗಳ ಪಾದಕಮಲ ಸೇವೆಯಿಂದಲೂ ಕಾಲವನ್ನು ಕಳೆಯುತ್ತಿದ್ದನು. ವ॥ ಹೀಗೆ ಸ್ತ್ರೀಸುಖಕ್ಕೆ ಸ್ವಲ್ಪವೂ ಆಶಿಸದ ಆ ಅರಸನು ಸುಖವಾಗಿ ಕಾಲಕಳೆಯುತ್ತಿರಲು ಒಂದು ದಿನ ಬೆಳಗಿನ ಜಾವದಲ್ಲಿ ಒಡ್ಡೋಲಗದಲ್ಲಿ ಮಂಡಿಸಿರಲು ೨೧. ದ್ವಾರಪಾಲಿಕೆ ಯೊಬ್ಬಳು ಸಂಗತಿಯೊಂದನ್ನು ಅರಿಕೆ ಮಾಡಿಕೊಳ್ಳಬೇಕೆಂಬ ಉದ್ದೇಶದಿಂದ ವಿನಯ ವನ್ನು ತೋರ್ಪಡಿಸುತ್ತಾ ಮೆಲ್ಲನೆ ರಾಜನ ಸಮೀಪಕ್ಕೆ ಬರುತ್ತಿದ್ದಳು. ಅವಳ ಆಕಾರವು

ವ॥ ಅಂತು ಬಂದು

ಜನತಾಧೀಶ್ವರ ಬಿನ್ನಪಂ ತ್ರಿದಶಲೋಕಕ್ಕೇಱುತಿರ್ದಾ ತ್ರಿಶಂ
ಕುನರಾಧೀಶನ ಲಕ್ಷ್ಮಿ ಶಕ್ರನ ಮಹಾಹುಂಕಾರದಿಂ ಬಿರ್ದಳಿಂ
ಬಿನೆಗಂ ವಿಶ್ರುತ ದಕ್ಷಿಣಾಪಥದಿನೊರ್ವಳ್ ಕನ್ನೆ ಚಂಡಾಲೆ ದ
ರ್ಶನತಾತ್ಪರ್ಯದೆ ರಾಜಕೀರಸಹಿತಂ ಬಂದಿರ್ದಪಳ್ ಬಾಗಿಲೊಳ್ ೨೨

ವ॥ ಎಂದು ಪಡಿಯಱಿತಿ ಬಿನ್ನವಿಸೆ ರಾಜಾಧಿರಾಜಂ ರಾಜಲೋಕದ ಮೊಗಮುಂ ನೋಡಿ ದೋಷಮೇಂ ಬರ್ಕೆಂಬುದುಂ ಚಂಡಾಲಕನ್ನೆಯುಂ ಪುಗವೇೞ್ದಾಗಳ್

ಕುಳಶೈಳವ್ರಾತದಿಂದಂ ಬಳಸಿದ ಕನಕಾದ್ರೀಂದ್ರಮೆಂಬಂತೆ ಭೂಭೃ
ತ್ಕುಳಮೆತ್ತಂ ಸುತ್ತೆ ರತ್ನಾಭರಣಕಿರಣಜಾಲಂಗಳಿಂದಿಂದ್ರಚಾಪಂ
ಗಳ ತಳ್ಪಿಂದೊಪ್ಪಮುಂ ತಾಳ್ದಿದ ಘನಸಮಯಂ ತಾನಿದೆಂಬಂದದಿಂ ಕ
ಣ್ಗೊಳಿಸಿರ್ದಂ ಪಾದಪೀಠಾಂಕಿತ ಮಣಿಮಯ ಪರ್ಯಂಕದೊಳ್ ವಿಕ್ರಮಾಂಕಂ
೨೩

ಅಲ್ಲಿ ನೆರೆದಿದ್ದ ಸಾಮಂತರಾಜರ ಗುಂಪಿನ ಅನೇಕ ಕಿರೀಟಗಳಲ್ಲಿರುವ ಮಾಣಿಕ್ಯಗಳ ಸಮೂಹದಲ್ಲಿ ಪ್ರತಿಬಿಂಬಿಸಿತ್ತು. ಅದನ್ನು ನೋಡಿದರೆ ಈ ರಾಜರುಗಳೆಲ್ಲರೂ ಸ್ತ್ರೀ ರೂಪವನ್ನು ತಾಳಿರುವ ರಾಜಾಜ್ಞೆಯನ್ನು ತಮ್ಮ ತಮ್ಮ ತಲೆಗಳಲ್ಲಿ ಧರಿಸಿಕೊಂಡಿದ್ದಾರೋ ಎಂಬಂತೆ ತೋರುತ್ತಿತ್ತು. ವ॥ ಹಾಗೆ ಬಂದು ೨೨. "ಬಿನ್ನಹ ಮಹಾಸ್ವಾಮಿ. ಹೆಸರಾಂತ ದಕ್ಷಿಣದೇಶದಿಂದ ಚಂಡಾಲರ ಹುಡುಗಿಯೊಬ್ಬಳು ಬಂದು ಅರಗಿಳಿಯನ್ನು ತೆಗೆದುಕೊಂಡು ಬಂದು ಬಾಗಿಲಲ್ಲಿ ನಿಂತು ಮಹಾಸ್ವಾಮಿಯವರ ದರ್ಶನವನ್ನು ಬಯಸುತ್ತಿದ್ದಾಳೆ, ಅವಳು ತ್ರಿಶಂಕು ಮಹಾರಾಜನ ಜೊತೆಯಲ್ಲೇ ಸ್ವರ್ಗಕ್ಕೆ ಏರಿಹೋಗುತ್ತಿದ್ದು ಅಲ್ಲಿ ಇಂದ್ರನ ಹುಂಕಾರದಿಂದ ಭೂಮಿಗೆ ಬಿದ್ದ ರಾಜಲಕ್ಷ್ಮಿಯೊ ಎಂಬಂತೆ ಕಾಣುತ್ತಿದ್ದಾಳೆ, ಮಹಾಸ್ವಾಮಿ." ವ॥ ಎಂಬುದಾಗಿ ಆ ಬಾಗಿಲುಕಾಯುವವಳು ಅರಿಕೆ ಮಾಡಲಾಗಿ ಚಕ್ರವರ್ತಿಯು ಅಲ್ಲಿದ್ದ ರಾಜರೆಲ್ಲರ ಮುಖವನ್ನು ಒಮ್ಮೆ ನೋಡಿ "ತಪ್ಪೇನು ? ಬರಲಿ" ಎಂದು ಆ ಚಂಡಾಲಕನ್ನಿಕೆಯನ್ನು ಒಳಗೆ ಬರುವಂತೆ ಅನುಮತಿ ಕೊಟ್ಟನು. ೨೩. ಪರಾಕ್ರಮಕ್ಕೆ ಹೆಸರುವಾಸಿಯಾದ ಶೂದ್ರಕಮಹಾರಾಜನು ಕೆಳಗೆ ಕಾಲುಮಣೆಯನ್ನು ಅಳವಡಿಸಿರುವ ರತ್ನನಿರ್ಮಿತವಾದ ಮಂಚದ ಮೇಲೆ ಮಂಡಿಸಿದ್ದನು. ಸಾಮಂತರಾಜರು ಅವನ ಸುತ್ತಲೂ ನೆರೆದಿದ್ದರು. ಇದರಿಂದ ಅವನು ಕುಲಪರ್ವತಗಳಿಂದ ಆವರಿಸಲ್ಪಟ್ಟಿರುವ ಮೇರುಪರ್ವತವೋ ಎಂಬಂತೆಯೂ ಅವನು ಧರಿಸಿಕೊಂಡಿದ್ದ ಒಡವೆಗಳ ಕಾಂತಿ ಸುತ್ತಲೂ ಪಸರಿಸಿರಲು ಕಾಮನಬಿಲ್ಲುಗಳಿಂದ ಕೂಡಿಕೊಂಡು ಮಿರುಗುತ್ತಿರುವ ಮಳೆಗಾಲದಂತೆಯೂ ಕಂಗೊಳಿ

ಅಧಿಕತರ ರಾಗದೀಧಿತಿ
ನಿಧಾನಮೆನಲೆಸೆವ ಚಕ್ರಿಚರಣಾಂಬುಜವಾ
ಮಧುಕೈಟಭಮದಮರ್ದನ
ರುಧಿರಾರುಣಚಕ್ರಿಚರಣಮಂ ನೆನೆಯಿಸುಗುಂ ೨೪

ಕರೆಗಳ್ ಮಿಳ್ಳಿಸೆ ಚಾಮರಂಗಳೆಲರಿಂದಂ ಮೆಲ್ಪಿನಿಂ ನರ್ತಿಸು
ತ್ತಿರೆ ನೀಳ್ದಿರ್ದ ಸೆಱಂಗು ಚಿತ್ರಿಸಿದ ಹಂಸಾನೀಕದಿಂ ಚೆಲ್ವನಾ
ಳ್ದಿರೆ ದುಗ್ಧಾರ್ಣವಫೇನ ಪಾಂಡುರತೆಯಂ ಕೆಯ್ಕೊಂಡು ಬೆಳ್ದಿಂಗಳಂ
ತಿರೆ ತೋಱುತ್ತೆಸೆವುತ್ತರೀಯವಸನಂ ರಾಜೇಂದ್ರಚಂದ್ರಾಂಕನಾ ೨೫

ಎಳವಿಸಿಲ ಮುಱಿಗಳಿಂ ಕ
ಣ್ಗೊಳಿಸುವ ಕೈಲಾಸದಂತೆ ಕೀರ್ತಿವಿಲಾಸಂ
ಬೆಳಗುವ ಚಂದನದಣ್ಪಂ
ತೊಳಗುವ ಕುಂಕುಮದ ತಳ್ಕಿನಿಂ ಕರಮೆಸೆದಂ ೨೬

ತಾರಾವಳಿ ಮುಖಚಂದ್ರನ
ಸಾರೋಲಗಿಸುತ್ತಮಿರ್ದುದೆನೆ ಸಕಲಕಳಾ
ಧಾರನ ಪೇರುರದೊಳ್ ಮಣಿ
ಹಾರಂ ಥಳಥಳಿಸಿ ಪೊಳೆವುತಿರ್ದತ್ತಾಗಳ್ ೨೭

ಸುತ್ತಿದ್ದನು. ೨೪. ಆ ದೊರೆಯ ಪಾದಕಮಲವು ಅತ್ಯಧಿಕವಾದ ಕೆಂಬೆಳಗಿಗೆ ನೆಲೆಯೆನಿಸಿತ್ತು. ಅದು ಮಧು ಕೈಟಭರೆಂಬ ರಾಕ್ಷಸರನ್ನು ಸಂಹರಿಸುವ ಕಾಲದಲ್ಲಿ ಅವರ ರಕ್ತದಿಂದ ತೊಯ್ದು ಕೆಂಪಾಗಿದ್ದ ಶ್ರೀಮನ್ನಾರಾಯಣನ ಪಾದಗಳನ್ನು ನೆನಪಿಗೆ ತರುತ್ತಿತ್ತು. ೨೫. ಅವನು ಹೊದೆದಿದ್ದ ವಸ್ತ್ರದ ಅಂಚುಗಳು ಬೀಸುವ ಚಾಮರಗಳ ಗಾಳಿಯಿಂದ ಅಲುಗಾಡುತ್ತಿದ್ದುವು. ಮತ್ತು ಆ ವಸ್ತ್ರದ ನೀಳವಾದ ಸೆರಗು ಮೆಲ್ಲನೆ ಕುಣಿಯುತ್ತಿತ್ತು. ಮತ್ತು ಬಣ್ಣಗಳಿಂದ ಬರೆದಿರುವ ಹಂಸಪಕ್ಷಿಗಳ ಸಮೂಹದಿಂದ ಅದು ಬಹಳ ಅಂದವಾಗಿತ್ತು. ಅಲ್ಲದೆ ಕ್ಷೀರಸಮುದ್ರದ ನೊರೆಯಂತೆಯೂ ಬೆಳ್ದಿಂಗಳಿನಂತೆಯೂ ಬೆಳ್ಳಗೆ ಶೋಭಿಸುತ್ತಿತ್ತು. ೨೬. ಅವನ ಶರೀರವು ಬಿಳಿಯ ಚಂದನದಿಂದ ಲೇಪನಗೊಂಡಿತ್ತು. ಅಲ್ಲಲ್ಲಿ ಕುಂಕುಮದ ಬೊಟ್ಟುಗಳು ಪ್ರಕಾಶಿಸುತ್ತಿದ್ದವು. ಇದರಿಂದ ಎಳೆಯ ಕೆಂಬಿಸಿಲಿನ ಚೂರುಗಳಿಂದ ಕೂಡಿಕೊಂಡಿರುವ ಕೈಲಾಸದಂತೆ ಕೀರ್ತಿವಂತನಾದ ಆ ಮಹಾರಾಜನು ಶೋಭಿಸುತ್ತಿದ್ದನು. ೨೭. ಸಕಲ ಕಲೆಗಳಿಗೂ ಆಧಾರಭೂತನಾದ ಆ ರಾಜನ ವಿಶಾಲವಾದ ವಕ್ಷಸ್ಥಳದಲ್ಲಿ ಮಣಿಹಾರವು ಥಳಥಳನೆ ಹೊಳೆಯುತ್ತಿತ್ತು. ಇದು ನಕ್ಷತ್ರಗಳ ಸಮುದಾಯವು ರಾಜನ ಮುಖವೆಂಬ ಚಂದ್ರನನ್ನು ಸಮೀಪಿಸಿ ಓಲೈಸು

ಕರಮೆಸೆದಿರ್ದುದು ಚಪಳೆಗೆ
ಸಿರಿಗಿಕ್ಕಿದ ನಿಯಮನಿಗಳಮೆನೆ ಭುಜಗಯುಗಂ
ಪರಿವೇಷ್ಟಿಸಿದುದು ಚಂದನ
ಪರಿಮಳಕೆನೆ ನೃಪನ ರತ್ನಕೇಯೂರಯುಗಂ ೨೮

ತುಱುಗಿದ ತಾರಾಪುಂಜದೆ
ಮಿಱುಗುತ್ತಿರ್ದಪುದೊ ಪಶ್ಚಿಮಾದ್ರೀಂದ್ರಮೆನಲ್
ನಱುಗಂಪುವೊಱಿದ ಜಾದಿಯ
ತುಱುಂಬು ಕಣ್ಗೊಳಿಸೆ ಶೂದ್ರಕಂ ಕರಮೆಸೆದಂ ೨೯

ತಳೆದಳೊ ಪತಿಯಂ ನೆಲೆವೆಣ್
ಒಳೆದನುರಾಗದೊಳೆ ಹೃದಯವಿಂದೆಂಬಿನೆಗಂ
ಥಳಥಳಿಪ ರತ್ನಕುಟ್ಟಿಮ
ತಳದೊಳ್ ಪೊಳೆದತ್ತು ರೂಪು ಭೂಪೋತ್ತಮನಾ ೩೦

ವ॥ ಅಂತಿರ್ದ ಶೂದ್ರಕಚಕ್ರವರ್ತಿಯನಾ ಚಂಡಾಲಕನ್ಯೆ ಕಂಡು

ಅರುಣದಳೋತ್ಪಲ ಕೋಮಲ
ಕರತಳದೊಳ್ ತಳೆದದೊಂದು ಸಂಬಳಿಗೋಲಿಂ
ದಿರದೆ ಪಳಂಚಿಸಿದಳ್ ಜ
ರ್ಝರರವವೊಗೆಯಲ್ಕೆ ನೃಪಸಭಾಕುಟ್ಟಿಮಮಂ ೩೧

ತ್ತಿರುವಂತೆ ಕಾಣುತ್ತಿತ್ತು. ೨೮. ಆ ರಾಜನ ಎರಡು ತೋಳುಗಳಲ್ಲೂ ಎರಡು ರತ್ನ ಖಚಿತವಾದ ತೋಳುಬಂದಿಗಳಿದ್ದವು. ಅವು ತೋಳುಗಳಲ್ಲಿ ವಾಸಿಸುತ್ತಿರುವ ಲಕ್ಷ್ಮಿಯು ಸ್ವಭಾವತಃ ಚಪಲಚಿತ್ತಳಾದುದರಿಂದ ಬೇರೆ ಕಡೆಗೆ ಎಲ್ಲೂ ಹೋಗದಿರಲಿ ಎಂದು ಅವಳಿಗೆ ತೊಡಿಸಿರುವ ಬೇಡಿಯಂತೆ ಕಾಣುತ್ತಿದ್ದವು. ಅಲ್ಲದೆ ಗಂಧದ ಸುವಾಸನೆಗೆ ಎಳಸಿ ಬಂದು ಬಳಸಿಕೊಂಡಿರುವ ಎರಡು ಹಾವುಗಳಂತೆ ಕಾಣುತ್ತಿದ್ದವು. ೨೯. ಶೂದ್ರಕ ಮಹಾರಾಜನು ಸುವಾಸನೆಯುಳ್ಳ ಹೆಜ್ಜಾಜಿ ಹೂವಿನ ದಂಡೆಯನ್ನು ಮುಡಿದಿದ್ದನು. ಇದರಿಂದ ಅವನು ನಕ್ಷತ್ರಗಳ ಗುಂಪಿನಿಂದ ಪ್ರಕಾಶಿಸುತ್ತಿರುವ ಅಸ್ತಪರ್ವತದಂತೆ ಬಹಳ ಚೆನ್ನಾಗಿ ಶೋಭಿಸುತ್ತಿದ್ದನು. ೩೦. ಆ ರಾಜಾಧಿರಾಜನ ರೂಪು ಥಳಥಳಿಸುತ್ತಿರುವ ರತ್ನಖಚಿತವಾದ ನೆಲೆಗಟ್ಟಿನಲ್ಲಿ ಪ್ರತಿಬಿಂಬಿಸಿತ್ತು. ಇದು ಭೂಮಿಯೆಂಬ ಮಹಿಳೆಯು ತನ್ನ ಪತಿಯಾದ ಈ ರಾಜನನ್ನು ಹೆಚ್ಚಿನ ಅನುರಾಗದಿಂದ ಹೃದಯದಲ್ಲಿ ಧರಿಸಿರುವಂತೆ ತೋರುತ್ತಿತ್ತು. ವ॥ ಹಾಗೆ ಶೋಭಿಸುತ್ತಿದ್ದ ಶೂದ್ರಕಚಕ್ರವರ್ತಿಯನ್ನು ಆ ಚಂಡಾಲಕನ್ನಿಕೆಯು ನೋಡಿ, ೩೧. ಕೆಂದೆಸಳುಗಳಿಂದ ಕೂಡಿದ ನೈದಿಲೆಯಂತೆ ಮೃದುವಾದ ತನ್ನ ಕೈಯಲ್ಲಿ ಹಿಡಿದುಕೊಂಡಿರುವ ಬಿದಿರುಕೋಲಿನಿಂದ ಝುರ್ ಝುರ್

ವ॥ ಅಂತು ಸಂಬಳಿಗೋಲಿಂ ಸನ್ನೆಗೆಯ್ಯೆ

ಒಗೆದೊಂದು ತಾಳೆದನಿಗೇ
ಳ್ದ ಗಜವ್ರಜದಂದದಮಾಗೆ ಸಂಬಳಿಗೋಲಿಂ
ದೊಗೆದೊಂದುಲುಪಿಂಗತ್ತಲೆ
ಮೊಗಮಾದುದು ಭೋಂಕನಖಿಳರಾಜಕದಂಬಂ ೩೨

ವ॥ ಅಂತು ಚಂಡಾಲಕನ್ಯೆ ಪೊಗುತರ್ಪಾಗಳ್

ಜರೆಯಿಂದಂ ಕೂಡಿ ಬೆಳ್ಪಂ ತಳೆಯೆ ತಲೆದಳದ್ರಕ್ತನೀರೇಜಮಂ ಪೋ
ಲ್ತಿರೆ ಕಣ್ ವ್ಯಾಯಾಮದಿಂ ಮೆಯ್ ಸಡಿಲದೆಸೆಯೆ ಮಾತಂಗನಾಗಿರ್ದುಮೇಂ ನಿ
ಷ್ಠುರಮಲ್ತಾಕಾರಮಿಾತಂಗೆನಿಸಿ ಧವಳವಾಸೋನ್ವಿತಂ ಮತ್ತಮೊರ್ವಂ
ಬರುತಿರ್ದಂ ಬೆನ್ನೊಳಾತ್ಮೋಚಿತಮೆನಿಸಿದ ಚಾತುರ್ಯದಿಂದಾರ್ಯವೇಷಂ ೩೩

ವ॥ ಅಲ್ಲಿಂ ಪೆಱಗೆ

ಅರಗಿಳಿಯ ಪಸುರ್ಪಿಂದಂ
ಮರಕತಮಯಮೆನಿಪ ಪೊನ್ನಪಂಜರಮಂ ಪೊ
ತ್ತಿರದೇಳ್ತಂದಂ ಚಂಡಿಕೆ
ವೆರಸಿದ ಚಂಡಾಲಬಾಲಕಂ ಮತ್ತೊರ್ವಂ ೩೪

ಎಂದು ಶಬ್ದವಾಗುವಂತೆ ಒಡ್ಡೋಲಗದ ನೆಲೆಗಟ್ಟನ್ನು ಕುಟ್ಟಿದಳು ವ॥ ಹೀಗೆ ಬಿದಿರು ಕೋಲಿನಿಂದ ಸನ್ನೆಮಾಡಲಾಗಿ ೩೨. ಕಾಡಿನಲ್ಲಿ ಉಂಟಾಗುವ ತಾಳೆಗರಿಗಳ ಧ್ವನಿಯನ್ನು ಕೇಳಿದ ಆನೆಗಳ ಹಿಂಡಿನಂತೆ ಆ ಬಿದುರುಗೋಲಿನಿಂದ ಉಂಟಾದ ಶಬ್ದವನ್ನು ಕೇಳಿ ಎಲ್ಲಾ ರಾಜರ ಮುಖಗಳೂ ಥಟ್ಟನೆ ಅತ್ತಕಡೆಗೇ ತಿರುಗಿದವು. ವ॥ ಹೀಗೆ ಆ ಅಂತ್ಯಜ ಬಾಲಿಕೆಯು ಪ್ರವೇಶ ಮಾಡುತ್ತಿರಲಾಗಿ ೩೩. ಸ್ವಭಾವಸಿದ್ಧವಾದ ಚತುರತೆಯಿಂದ ಕೂಡಿದ ಪುರುಷನೊಬ್ಬನು ಅವಳ ಹಿಂದೆ ಬರುತ್ತಿದ್ದನು. ಅವನ ತಲೆ ಮುಪ್ಪಿನಿಂದ ಬೆಳ್ಳಗಾಗಿತ್ತು. ಕಣ್ಣು ಅರಳಿರುವ ಕೆಂದಾವರೆಯಂತಿತ್ತು. ಅಂಗಸಾಧನೆಯಿಂದ ಅವನ ಶರೀರವು ಈ ಇಳಿವಯಸ್ಸಿನಲ್ಲೂ ಗಳಿತವಾಗದೆ ದೃಢವಾಗಿಯೇ ಇತ್ತು. ಅವನು ಚಂಡಾಲನಾಗಿದ್ದರೇನು ? ಆಕಾರವಂತೂ ಸ್ವಲ್ಪವೂ ಒರಟಾಗಿ ಕಾಣುತ್ತಿರಲಿಲ್ಲ. ಶುಭ್ರವಸ್ತ್ರವನ್ನು ಧರಿಸಿಕೊಂಡಿದ್ದ ಆತನ ವೇಷದಲ್ಲಿ ಸಭ್ಯತೆಯ ಲಕ್ಷಣವು ಸ್ಪಷ್ಟವಾಗಿ ತೋರಿಬರುತ್ತಿತ್ತು. ವ॥ ಅದಕ್ಕೆ ಹಿಂದೆ ೩೪. ಮತ್ತೊಬ್ಬ ಜುಟ್ಟುಬಿಟ್ಟಿದ್ದ ಚಂಡಾಲ ಬಾಲಕನು ಬರುತ್ತಿದ್ದನು. ಅವನು ತನ್ನ ಕೈಯಲ್ಲಿ ಚಿನ್ನದ ಪಂಜರವನ್ನು ಹಿಡಿದುಕೊಂಡಿದ್ದನು. ಒಳಗಿರುವ ಗಿಳಿಯ ಹಸುರುಬಣ್ಣದಿಂದ ಆ ಪಂಜರವು ಪಚ್ಚೆಯಿಂದ

ವ॥ ಅಂತವರ್ ಬೆರಸು ಬಂದಳಂತುಮಲ್ಲದೆಯುಂ

ದನುಜರ ಕೆಯ್ಯೊಳಿರ್ದಮರ್ದನಾವಗಮೀಳ್ಕೊಳಲೆಂದು ದೈತ್ಯಮ
ರ್ದನನೆನಿಸಿರ್ದವಂ ಕಪಟದಿಂದೆ ವಿಲಾಸಿನಿಯಾದ ವೇಷಮಂ
ನೆನೆಯಿಸಿದಪ್ಪುದೀ ಪಸಿಯ ಬಣ್ಣಮಿವಳ್ಗೆನೆ ಚೆಲ್ವನಾಳ್ದು ಮೆ
ಲ್ಲನೆ ನಡೆತರ್ಪ ನೀಲಮಣಿಪುತ್ರಿಕೆಯಂದದಿನಾದವೊಪ್ಪಿದಳ್ ೩೫

ಮುಸುಕಿದ ಮೆಯ್ಯಿಂಗುಲ್ಫಾ
ವಸಕ್ತಮೆನಿಸಿರ್ದ ರಕ್ತನವಕಂಚುಕವಿಂ
ಕಿಸುಸಂಜೆಯೊಳ್ ಬಿಸಿಲ್ವೊರೆ
ದಸಿತೋತ್ಪಲಿನಿಯವೊಲಾಕೆ ಕಣ್ಗೆಸೆದಿರ್ದಳ್ ೩೬

ಪೊಳೆವೊಂದು ದಂತದೋಲೆಯ
ಬೆಳಗಿಂದುಜ್ವಳಿಪ ಕದಪಿನಿಂದಿಂದುವಮಂ
ಡಳದಿಂದಮಾವಗಂ ಕ
ಙ್ಗೊಳಿಪ ವಿಭಾವರಿಯನಿನಿಸನನುಕರಿಸಿರ್ದಳ್ ೩೭

ಅತಿಕಪಿಳ ರೋಚನಾರಚಿ
ತ ತಿಳಕಮದು ನೊಸಲ ಕಣ್ವೊಲೆಸೆದಿರೆ ಗೌರೀ
ಪತಿಯ ಬಿನದಕ್ಕೆ ಭ್ರೂಭ್ರ
ತ್ಸ್ನತೆ ಬೇಡತಿಯಾದ ತೆಜನನನುಕರಿಸಿರ್ದಳ್ ೩೮

ಮಾಡಿದಂತೆ ಕಾಣುತ್ತಿತ್ತು. ವ॥ ಹೀಗೆ ಅವರಿಬ್ಬರೊಂದಿಗೆ ಬಂದಳು. ಅಲ್ಲದೆ ೩೫. ಅವಳ ಶ್ಯಾಮಲವರ್ಣವು ಬಹಳ ಸೊಬಗನ್ನು ಪಡೆದಿತ್ತು. ಅದು ಹಿಂದೆ ರಾಕ್ಷಸರ ಕೈಸೇರಿಬಿಟ್ಟಿದ್ದ ಅಮೃತವನ್ನು ಕಸಿದುಕೊಳ್ಳಬೇಕೆಂದು ಶ್ರೀಮನ್ನಾರಾಯಣನು ಮಾಯೆಯಿಂದ ತಾಳಿದ ಮೋಹಿನೀರೂಪವನ್ನು ಜ್ಞಾಪಿಸುತ್ತಿತ್ತು. ಅವಳು ಮೆಲ್ಲನೆ ನಡೆದು ಬರುತ್ತಿರುವ ಇಂದ್ರನೀಲಮಣಿಯ ಪುತ್ಥಳಿಯಂತೆ ಚೆನ್ನಾಗಿ ಶೋಭಿಸುತ್ತಿದ್ದಳು. ೩೬. ಆ ಕನ್ಯೆಯ ದೇಹವು ಕಾಲುಹರಡನ್ನು ಮುಟ್ಟುತ್ತಿದ್ದ ಕೆಂಬಣ್ಣದ ಹೊಸ ನಿಲುವಂಗಿಯಿಂದ ಮುಚ್ಚಿಕೊಂಡಿತ್ತು. ಅದರಿಂದ ಅವಳು ಕೆಂಪಾದ ಸಂಧ್ಯಾಕಾಲದಲ್ಲಿ ಕೆಂಬಿಸಿಲಿನಿಂದ ಆವರಿಸಲ್ಪಟ್ಟ ಕನ್ನೈದಿಲೆಯ ಬಳ್ಳಿಯಂತೆ ಕಂಗೊಳಿಸುತ್ತಿದ್ದಳು. ೩೭. ಅವಳ ಒಂದು ಕಿವಿಯಲ್ಲಿ ಪೊಳೆಯುತ್ತಿರುವ ದಂತದ ಓಲೆಯಿತ್ತು. ಅದರ ಹೊಳಪಿನಿಂದ ಅವಳ ಕೆನ್ನೆಯು ಕಾಂತಿಮಯವಾಗಿತ್ತು. ಇದರಿಂದ ಅವಳು ಯಾವಾಗಲೂ ಚಂದ್ರಬಿಂಬದಿಂದ ಕಂಗೊಳಿಸುವ ರಾತ್ರಿಯನ್ನು ಸ್ವಲ್ಪಮಟ್ಟಿಗೆ ಹೋಲುತ್ತಿದ್ದಳು. ೩೮. ಆ ಹುಡುಗಿಯು ತನ್ನ ಹಣೆಯಲ್ಲಿ ಕೆಂಪು ಮತ್ತು ಹಳದಿ ಬಣ್ಣದಿಂದ ಕೂಡಿದ ಗೋರೋಚನದ ತಿಲಕವನ್ನು ಇಟ್ಟುಕೊಂಡಿದ್ದಳು. ಅದು ಹಣೆಯಲ್ಲಿರುವ ಕಣ್ಣಿನಂತೆ ತೋರುತ್ತಿತ್ತು. ಅದರಿಂದ ಅವಳು ಪರಮೇಶ್ವರನ ವಿನೋದಕ್ಕಾಗಿ ಬೇಡಿತಿ

ಶ್ರೀರಮಣೀಪ್ರಿಯನ ವಿಶಾ
ಲೋರಸ್ಥಳದಲ್ಲಿ ನಿಂದು ತತ್ಪ್ರಭೆಯಿಂ ಲ
ಕ್ಷ್ಮೀರಮಣಿ ಪುದಿದಳೆನೆ ನೀ
ತೀರುಹದಳನಯನೆ ನಾಡೆ ಕಣ್ಗೆಸೆದಿರ್ದಳ್ ೩೯

ಸ್ಮರರಿಪುಲಲಾಟನೇತ್ರ
ಸ್ಫುರದುರುಹುತವಹವನಿನೆಯ್ದೆ ಬೇವುತ್ತಿರ್ದಾ
ಸ್ಮರನ ಪೊಗೆಯಿಂದೆ ಪುದಿದಿ
ರ್ದ ರತಿಯವೋಲ್ ಕಾಂತೆ ಕರಮೆ ಕಣ್ಗೆಸೆದಿರ್ದಳ್ ೪೦

ಸ್ಮರವೇದನೆಯಿಂ ಮಹಿಷಾ
ಸುರನೇಳ್ತರೆ ಮೆಟ್ಟಿಕೊಲ್ವ ಪದದೊಳ್ ನೆತ್ತರ್
ಪೊರೆದದ್ರಿಕನ್ಯೆಯಡಿಯಿಂ
ತಿರಲೇನೆಸೆದಿರ್ದುವಡಿಗಳಾ ಕನ್ನಿಕೆಯಾ ೪೧

ಬೆಟ್ಟಿತಿದು ನಾಡೆಯುಂ ಮಣಿ
ಕುಟ್ಟಿಮತಳಮೆಂದು ತಳಿರ್ಗಳಂ ಮೆಲ್ಲಡಿಯಿಂ
ಮೆಟ್ಟಿರ್ದಪಳೆನೆ ಚೆಲ್ವಿಂ
ದಿಟ್ಟಳಮೆನಿಸಿರ್ದುವರುಣಚರಣದ್ಯುತಿಗಳ್ ೪೨

ರೂಪವನ್ನು ತಾಳಿದ ಪಾರ್ವತಿಯಂತೆ ಕಾಣುತ್ತಿದ್ದಳು. ೩೯. ತಾವರೆಯಂತೆ ಸುಂದರವಾದ ಕಣ್ಣುಳ್ಳ ಆ ಕನ್ನಿಕೆಯು ಶ್ಯಾಮಲವರ್ಣವುಳ್ಳವಳಾಗಿದ್ದಳು. ಇದರಿಂದ ಶ್ರೀಮನ್ನಾರಾಯಣನ ವಿಶಾಲವಾದ ವಕ್ಷಸ್ಸ್ಥಳದಲ್ಲಿ ವಾಸಿಸುವುದರಿಂದ ಸಂಕ್ರಾಂತವಾದ ಅವನ ಮೈಬಣ್ಣದ ಪ್ರಭೆಯಿಂದ ನೀಲವರ್ಣವನ್ನು ಪಡೆದಿರುವ ಲಕ್ಷ್ಮಿಯಂತೆ ಚೆನ್ನಾಗಿ ಶೋಭಿಸುತ್ತಿದ್ದಳು. ೪೦. ಶತ್ರುವಾದ ಪರಮೇಶ್ವರನ ಹಣೆಗಣ್ಣಿನ ಪ್ರಕಾಶಮಾನವಾದ ದೊಡ್ಡ ಕಿಚ್ಚಿನಿಂದ ಧಗಧಗನೆ ಉರಿಯುತ್ತಿರುವ ಮನ್ಮಥನ ಹೊಗೆಯಿಂದ ಆವರಿಸಲ್ಪಟ್ಟು ಮಲಿನಳಾಗಿರುವ ರತಿಯಂತೆ ಆ ಚಾಂಡಾಲಬಾಲಿಕೆಯು ಕಂಗೊಳಿಸುತ್ತಿದ್ದಳು. ೪೧. ಕಾಮಪೀಡಿತನಾದ ಮಹಿಷಾಸುರನು ಯುದ್ಧಕ್ಕೆ ಬರಲಾಗಿ ಅವನನ್ನು ತುಳಿದು ಸಂಹರಿಸಿದ ಚಂಡಿಕಾಪರಮೇಶ್ವರಿಯ ರಕ್ತಸಿಕ್ತವಾದ ಕಾಲಿನಂತೆ ಅವಳ ಅರಗಿನ ರಸದ ಲೇಪನದಿಂದ ಕೆಂಪಾದ ಕಾಲುಗಳು ಎಷ್ಟು ಚೆನ್ನಾಗಿ ಶೋಭಿಸುತ್ತಿದ್ದುವೊ! ೪೨. "ಒಡ್ಡೋಲಗಶಾಲೆಯ ರನ್ನದ ನೆಲಗಟ್ಟು ಬಹಳ ಕಠಿನವಾಗಿದೆ ಎಂದು ಚಿಗುರುಗಳನ್ನು ಮೃದುವಾದ ಪಾದಗಳಿಂದ ಮೆಟ್ಟಿಕೊಂಡಿದ್ದಾಳೆ ಎಂಬಂತೆ" ಅವಳ ಕೆಂಪಾದ

ಅನಲಂ ರೂಪಿನ ಪಕ್ಷಪಾತದೊಳಿ ತಾನೆಳ್ತಂದು ನೀಚೀಜಗ
ರ್ಭನಗೆಯ್ತುಂ ಗಡಮುಪ್ರಮಾಣಮೆನುತಂ ತಜ್ಜಾತಿ ಸಂಶೋಧನ
ಕ್ಕನುರಾಗುಂಬೆರಸಾವಮಪ್ಪಿದನೊ ಪೇಟೀಗಳೆಂಬಂದದಿಂ
ದೆನಸುಂ ನೂಪುರ ರತ್ನಕಾಂತಿ ತನುವಂ ಪರ್ವಿತ್ತು ತನ್ವಂಗಿಯಾ ೪೩

ಸ್ಮರ ಚಕ್ರೇಶ್ವರ ಕರಿಕುಂ
ಭರುಚಿರ ನಕ್ಷತ್ರಮಾಲೆ ರೋಮಲತಾಬಂ
ಧುರತಾಲವಾಲಮೆಂಬಂ
ತಿರಲೆಸೆಗುಂ ಕಾಂಚಿ ಜಘನದೊಳ್ ಗುರುಕುಚೆಯಾ ೪೪

ಮಂದಾಕಿನಿ ಪರಿದಾ ಕಾ
ಳಿಂದಿಯೆಗೆತ್ತಾದಮಟ್ಕಟಿಂದಂ ಕೊರಲಂ
ಬಂದಪ್ಪಿರ್ದಳೊ ಪೇಟಿಂ
ಬಂದದಿನೆಸೆದತ್ತು ಹಾರಮಾ ಕಾಮಿನಿಯಾ ೪೫

ಕಾಲುಗಳ ಕಾಂತಿಯು ಸೊಬಗಿನಿಂದ ಮನೋಹರವಾಗಿದ್ದುವು. ೪೩. ಅಗ್ನಿದೇವನು ಅವಳನ್ನು ನೋಡಿ ಅವಳ ಚೆಲುವಿಕೆಗೆ ಮಾರುಹೋಗಿ ಹತ್ತಿರಕ್ಕೆ ಬಂದು "ಬ್ರಹ್ಮನು ಅವಳನ್ನು ನೀಚಜಾತಿಯಲ್ಲಿ ಹುಟ್ಟಿಸಿರುವುದು ಶುದ್ಧಾಂಗ ತಪ್ಪು. ನಾನು ಅವನ ಕೆಲಸ ವನ್ನಂತೂ ಒಪ್ಪುವುದಿಲ್ಲ. ಅವಳನ್ನು ಶುದ್ಧಿಗೊಳಿಸಲೇಬೇಕೆಂದು ಮನಸ್ಸುಮಾಡಿ ಪ್ರೀತಿಯಿಂದ ಅವಳನ್ನು ಆಲಿಂಗಿಸಿಕೊಂಡಿದ್ದಾನೆ ಎಂಬಂತೆ ಅವಳ ಕಾಲ್ಗಡಗದ ರತ್ನದ ಹೊಳಪು ಇಡೀ ಶರೀರವನ್ನೆಲ್ಲಾ ಆವರಿಸಿಕೊಂಡಿತ್ತು. ಟಿ. ಅಶುಚಿಯಾದ ವಸ್ತುಗಳು ಅಗ್ನಿಯಿಂದ ಪರಿಶುದ್ಧಿಗೊಳ್ಳುತ್ತವೆ ಎಂದು ಧರ್ಮಶಾಸ್ತ್ರದಲ್ಲಿ ಹೇಳಿದೆ. ೪೪. ಆ ತೋರಮೊಲೆಗಳಿಂದ ರಂಜಿಸುವ ಆ ಸುಂದರಿಯು ಸೊಂಟದಲ್ಲಿ ಒಡ್ಯಾಣವನ್ನು ಧರಿಸಿ ದ್ದಳು. ಅದು ಮನ್ಮಥನೆಂಬ ಚಕ್ರವರ್ತಿಯ ವಾಹನವಾದ ಆನೆಯ ಕುಂಭಸ್ಥಳದಲ್ಲಿ ಹಾಕಿರುವ ನಕ್ಷತ್ರಮಾಲಿಕೆಯಂತೆಯೂ ಬಾಸೆ (ರೋಮರಾಜಿ) ಬಳ್ಳಿಗೆ ಕಟ್ಟಿರುವ ಮನೋಹರವಾದ ಪಾತಿಯಂತೆಯೂ ವಿರಾಜಿಸುತ್ತಿತ್ತು. ಟಿ. ಇಪ್ಪತ್ತೇಳು ಮುತ್ತು ಗಳುಳ್ಳ ಹಾರಕ್ಕೆ ನಕ್ಷತ್ರಮಾಲಿಕೆಯೆಂದು ಹೆಸರು ೪೫. ಆ ಹುಡುಗಿಯು ಸ್ವಲ್ಪ ಕಪ್ಪುಬಣ್ಣದವಳಾಗಿದ್ದಳು. ಅವಳ ಕೊರಳಿನಲ್ಲಿ ಬಿಳಿಯ ಮುತ್ತಿನಹಾರವು ಶೋಭಿಸು ತ್ತಿತ್ತು. ಇದರಿಂದ ಗಂಗಾನದಿಯು ಇವಳನ್ನು ಯಮುನೆಯೆಂದು ತಿಳಿದುಕೊಂಡು ಹರಿದುಬಂದು ಅಕ್ಕರೆಯಿಂದ ಕಂಠವನ್ನು ಅಪ್ಪಿಕೊಂಡಿದ್ದಾಳೋ ಎಂಬಂತೆ ಕಾಣುತ್ತಿತ್ತು.

ವ॥ ಅದಲ್ಲದೆಯುಂ ಮಲಯಮೇಖಲೆಯಂತೆ ಚಂದನಪಲ್ಲವಾವತಂಸೆಯುಂ ನಕ್ಷತ್ರಮಾಲೆಯಂತೆ ಚಿತ್ರಾಶ್ಲೇಷ ಶ್ರವಣಾಭರಣಭೂಷಿತೆಯುಂ ಲಕ್ಷ್ಮಿಯಂತೆ ಹಸ್ತಸ್ಥಿತ ಕಮಲಶೋಭಿತೆಯುಂ ದಿವ್ಯಕಾಂತೆಯಂತಕುಲೀನೆಯುಂ ನಿದ್ರೆಯಂತೆ ಲೋಚನಗ್ರಾಹಿಣಿಯುಂ ಮೂರ್ಛೆಯಂತೆ ಮನೋಹರೆಯುಂ ಅರಣ್ಯಭೂಮಿಯಂತಕ್ಷತರೂಪಸಂಪನ್ನೆಯುಂ ಅರಣ್ಯ ಕಮಲಿನಿಯಂತೆ ಮಾತಂಗಕುಲದೂಷಿತೆಯುಂ ಅಮೂರ್ತೆಯಂತೆ ಸ್ಪರ್ಶವರ್ಜಿತೆಯುಂ ಆಲೇಖ್ಯಗತೆಯಂತೆ ದರ್ಶನಮಾತ್ರಫಲೆಯುಂ ಮಧುಮಾಸ ಕುಸುಮಸಮೃದ್ಧಿಯಂತೆ

ವ॥ ಅಲ್ಲದೆ ಆ ತರುಣಿಯು ಮಲಯಪರ್ವತದ ಮಧ್ಯಭಾಗದಂತೆ ಚಂದನಪಲ್ಲವಾವತಂಸೆಯಾಗಿದ್ದಳು (ಶ್ರೀಗಂಧದ ಮರದ ಚಿಗುರುಗಳನ್ನು ಕಿವಿಯಮೇಲೆ ಮುಡಿದು ಕೊಂಡಿದ್ದಳು. ಮಲಯಪರ್ವತವು ಗಂಧದಮರದ ಚಿಗುರುಗಳಿಂದ ಅಲಂಕೃತವಾಗಿರುತ್ತದೆ) ನಕ್ಷತ್ರಪಂಕ್ತಿಯಂತೆ ಚಿತ್ರಾಶ್ಲೇಷಶ್ರವಣಾಭರಣಭೂಷಿತೆಯಾಗಿದ್ದಳು. (೧. ಆಶ್ಚರ್ಯಕರವಾದ ಜೋಡಣೆಯುಳ್ಳ ಕಿವಿಯ ಒಡವೆಗಳಿಂದ ಅಲಂಕಾರ ಮಾಡಿಕೊಂಡಿದ್ದಳು. ೨. ಚಿತ್ತೆ, ಆಶ್ಲೇಷ, ಶ್ರವಣ, ಭರಣಿ ನಕ್ಷತ್ರಗಳಿಂದ ಶೋಭಿಸುತ್ತದೆ) ಲಕ್ಷ್ಮಿಯಂತೆ ಹಸ್ತಸ್ಥಿತ ಕಮಲಶೋಭಿತೆಯಾಗಿದ್ದಳು. (೧. ಕೈಯಲ್ಲಿ ಹಿಡಿದುಕೊಂಡಿರುವ ತಾವರೆಯಿಂದ ಚಂದಗಾಣುತ್ತಿದ್ದಳು. ೨ ಲಕ್ಷ್ಮಿಯೂ ಕೈಯಲ್ಲಿ ಕಮಲವನ್ನು ಹಿಡಿದಿರುತಾಳೆ) ದೇವತಾಸ್ತ್ರೀಯಂತೆ ಅಕುಲೀನೆಯಾಗಿದ್ದಳು. (೧. ಒಳ್ಳೆಯ ಜಾತಿಯಲ್ಲಿ ಹುಟ್ಟಿದವಳಲ್ಲ. ೨. ಅ+ಕು+ಲೀನೆ ಭೂಮಿಯ ಸ್ಪರ್ಶವಿಲ್ಲದವಳು) ನಿದ್ರೆಯಂತೆ ಲೋಚನಗ್ರಾಹಿಣಿಯಾಗಿದ್ದಳು. (೧. ಜನರ ಕಣ್ಣನ್ನು ಸೌಂದರ್ಯಾತಿಶಯದಿಂದ ಸೆರೆ ಹಿಡಿಯುತ್ತಿದ್ದಳು. ೨. ಕಣ್ಣು ಮುಚ್ಚಿ ತೆರೆಯುವುದನ್ನು ತಪ್ಪಿಸುತ್ತದೆ). ಮೂರ್ಛೆಯಂತೆ ಮನೋಹರೆಯಾಗಿದ್ದಳು. (೧. ತನ್ನ ಸೊಬಗಿನಿಂದ ಜನರ ಮನಸ್ಸನ್ನು ಸೆಳೆಯುತ್ತಿದ್ದಳು. ೨. ಜ್ಞಾನವನ್ನು ತಪ್ಪಿಸಿ ಮನೋವ್ಯಾಪಾರವನ್ನು ನಿಲ್ಲಿಸಿಬಿಡುತ್ತದೆ.) ಅರಣ್ಯಭೂಮಿಯಂತೆ ಅಕ್ಷತರೂಪಸಂಪನ್ನೆಯಾಗಿದ್ದಳು. (೧. ಅಕ್ಷತ+ರೂಪ+ಸಂಪನ್ನೆ= ಕಮ್ಮಿಯಿಲ್ಲದ ಚೆಲುವಿನಿಂದ ತುಂಬಿದ್ದಳು. ೨. ಅಕ್ಷತರು+ಉಪಸಂಪನ್ನೆ=ತಾರೆಗಿಡಗಳಿಂದ ತುಂಬಿದೆ). ಕಾಡುತಾವರೆಬಳ್ಳಿಯಂತೆ ಮಾತಂಗಕುಲದೂಷಿತೆಯಾಗಿದ್ದಳು. (೧. ಚಂಡಾಲಜಾತಿಯಲ್ಲಿ ಜನಿಸಿದ್ದರಿಂದ ಅಸ್ಪೃಶ್ಯಳೆನಿಸಿಕೊಂಡಿದ್ದಳು. ೨. ಆನೆಗಳ ಗುಂಪಿನಿಂದ ಕಿತ್ತಾಡಲ್ಪಡುತ್ತದೆ. ನಿರಾಕಾರವಾದ ವಸ್ತುವಿನಂತೆ ಸ್ಪರ್ಶವರ್ಜಿತೆಯಾಗಿದ್ದಳು. (ಅಂತ್ಯಜಳಾದುದರಿಂದ ಮುಟ್ಟಲಾಗದವಳಾಗಿದ್ದಳು. ನಿರಾಕಾರವಸ್ತುವನ್ನೂ ಮುಟ್ಟಲಾಗುವುದಿಲ್ಲ) ಚಿತ್ರದಲ್ಲಿ ಬರೆಯಲ್ಪಟ್ಟವಳಂತೆ ದರ್ಶನಮಾತ್ರಫಲೆಯಾಗಿದ್ದಳು. (ಅಸ್ಪೃಶ್ಯಳಾದುದರಿಂದ ಅಂಗಸಂಗಕ್ಕೆ ಅರ್ಹಳಾಗಿರಲಿಲ್ಲ. ಚಿತ್ರದ ಬೊಂಬೆಯೂ ನೋಟಕ್ಕೆ ಮಾತ್ರ ಚಂದ ) ವಸಂತಕಾಲದ ಪುಷ್ಪಸಮೃದ್ಧಿಯಂತೆ ವಿಜಾತಿಯಾಗಿದ್ದಳು. (೧. ಹೀನಜಾತಿಯವಳಾಗಿದ್ದಳು. ೨. ಮಾಲತೀ ಕುಸುಮರಹಿತವಾಗಿರುತ್ತದೆ. ಏಕೆಂದರೆ

ವಿಜಾತಿಯುಂ ಮದನಚಾಪಲತೆಯಂತೆ ಮುಷ್ಟಿಗ್ರಾಹ್ಯಮಧ್ಯೆಯುಂ ಯಕ್ಷಾಧಿಪಲಕ್ಷ್ಮಿಯಂತಳಕೋದ್ಭಾಸಿಯುಮೆನಿಸಿದೇಱುಂಜವ್ವನೆಯ ರೂಪಾತಿಶಯಮನೆವೆಯಿಕ್ಕದೆ ನೋಡುತ್ತಮತಿವಿಸ್ಮಿತಚಿತ್ತನಾಗಿ ತನ್ನೊಳಿಂತೆಂದಂ

ಇದು ಮೂಲೋಕಕ್ಕಚ್ಚರಿಯೆನಿಸಿದುದಸ್ಥಾನದೊಳ್ ರೂಪಮಂ ಮಾ
ಡಿದ ವಾಣೀಶಪ್ರಯತ್ನಂ ತ್ರಿಭುವನಜನಕ್ಕಾಶ್ಚರ್ಯಮಪ್ಪಂತು ರೂಪಂ
ಪದಪಿಂದಂ ಮಾಡಿಯುಂ ನೋಡಿಯುಮಸದೃಶದೊಳ್ ಗರ್ಹಿತ ಸ್ಪರ್ಶಸಂಭೋ
ಗದೊಳಿಂತೀ ದುಷ್ಟಚಂಡಾಲರ ಕುಲದೊಳಗೇಗೈದನೋ ದುರ್ವಿವೇಕಂ ೪೬

ಇದನಱಿವೆಂ ಕಮಲಭವಂ
ಮೊದಲೊಳ್ ಮಾತಂಗಿಯೆಂದು ತಾಂ ಮುಟ್ಟದೆ ಮಾ
ಡಿದನಕ್ಕುಂ ಕೈಯ್ಯೊಳ್ ಮು
ಟ್ಟಿದೊಡಿಂತಗ್ಗಳಿಸಿ ತೋರ್ಕುಮೇ ಲಾವಣ್ಯಂ ೪೭

ವ॥ ಎಂದಾ ರೂಪಿಂಗಚ್ಚರಿವಡುತಿರ್ದ ನೃಪರೂಪಚಂದ್ರನಂ ನೋಡಿ

ವಸಂತಕಾಲದಲ್ಲಿ ಮಾಲತೀ ಕುಸುಮವಿರುವುದಿಲ್ಲ) ಮನ್ಮಥನ ಬಳ್ಳಿಯಂದದ ಬಿಲ್ಲಿನಂತೆ ಮುಷ್ಟಿಗ್ರಾಹ್ಯ ಮಧ್ಯಳಾಗಿದ್ದಳು. (೧. ಮುಷ್ಟಿಯಿಂದ ಹಿಡಿದುಕೊಳ್ಳಬಹುದಾದಷ್ಟು ಸಣ್ಣನಾದ ಸೊಂಟವುಳ್ಳವಳಾಗಿದ್ದಳು. ೨. ಮುಷ್ಟಿಯಿಂದ ಹಿಡಿದುಕೊಳ್ಳುವ ಮಧ್ಯಭಾಗವುಳ್ಳದ್ದು.) ಕುಬೇರನ ಸಂಪತ್ತಿನಂತೆ ಅಲಕೋದ್ಭಾಸಿನಿಯಾಗಿದ್ದಳು. (೧. ಮುಂಗುರುಳುಗಳಿಂದ ಶೋಭಿಸುತ್ತಿದ್ದಳು. ೨. ಅಲಕಾಪಟ್ಟಣದಿಂದ ಶೋಭಿಸುತ್ತದೆ.) ಹೀಗಿದ್ದ ಬೆಳೆಯುತ್ತಿರುವ ಹರಯವುಳ್ಳ ಆ ತರುಣಿಯ ಸೌಂದರ್ಯಾತಿಶಯವನ್ನೇ ಎವೆ ಇಕ್ಕದೆ ನಿಟ್ಟಿಸುತ್ತಾ ಬಹಳ ಆಶ್ಚರ್ಯಗೊಂಡ ಮನಸ್ಸುಳ್ಳವನಾಗಿ ತನ್ನಲ್ಲಿ ಹೀಗೆ ಆಲೋಚಿಸಿದನು. ೪೬. ಯೋಗ್ಯವಲ್ಲದ ಎಡೆಯಲ್ಲಿ ಈ ಅತ್ಯದ್ಭುತವಾದ ರೂಪವನ್ನು ನಿರ್ಮಾಣಮಾಡಿದ ಸೃಷ್ಟಿಕರ್ತನಾದ ಬ್ರಹ್ಮನ ಈ ಕೆಲಸವು ಮೂರು ಲೋಕಕ್ಕೂ ಆಶ್ಚರ್ಯವನ್ನುಂಟುಮಾಡುತ್ತದೆ. ಏಕೆಂದರೆ ಅವಿವೇಕಿಯಾದ ಅವನು ಮೂರು ಲೋಕದ ಜನರನ್ನೂ ಬೆರಗುಗೊಳಿಸುವ ಈ ಚೆಲ್ವಿಕೆಯನ್ನು ಬಹಳ ಕಷ್ಟಪಟ್ಟು ಸೃಷ್ಟಿಮಾಡಿದ್ದಾನೆ. ಅಂದ ಮೇಲೆ ತಿಳಿದೂ ತಿಳಿದೂ ಈ ಕೀಳುಜಾತಿಯಲ್ಲಿ ಮುಟ್ಟುವುದಕ್ಕೂ ಅನುಭವಿಸುವುದಕ್ಕೂ ಸರ್ವಥಾ ಅನರ್ಹವಾದ ಈ ಕೆಟ್ಟ ಚಾಂಡಾಲರ ಜಾತಿಯಲ್ಲಿ ಇವಳನ್ನೇಕೆ ಹುಟ್ಟಿಸಿಬಿಟ್ಟನೊ ? ೪೭. ಅಂತ್ಯಜಳಾದುದರಿಂದ ಬ್ರಹ್ಮನು ಇವಳನ್ನು ಮುಟ್ಟದೆ ಸೃಷ್ಟಿಸಿರಬೇಕು ಎಂದು ನಾನು ಭಾವಿಸುತ್ತೇನೆ. ಕೈಯಿಂದ ಮುಟ್ಟಿ ಮಾಡಿದ್ದರೆ ಇವಳ ಲಾವಣ್ಯವು ಇಷ್ಟು ಅತಿಶಯವಾಗಿ ಸ್ವಲ್ಪವೂ ಮಾಸದಂತೆ ತೋರುತ್ತಿತ್ತೆ ? ವ॥ ಎಂದು ಅವಳ ಸೌಂದರ್ಯಕ್ಕೆ ಆಶ್ಚರ್ಯಪಡುತ್ತಿದ್ದ ರಾಜರೂಪದ ಚಂದ್ರನೋ

ಸೊಗಯಿಸುವ ಪಾಲೆಯಿಂ ನಸು
ಜಗಲುತ್ತಿರೆ ಕರ್ಣಪೂರಪಲ್ಲವಮಾ ಚ
ಕ್ರಿಗೆ ತನ್ನ ವಿನಯದಿಂದಂ
ಪ್ರಗಲ್ಭೆಯೆನಿಸಿರ್ದ ವನಿತೆವೋಲ್ ಪೊಡಮಟ್ಟಳ್ ೪೮

ವ॥ ಅಂತು ಪೊಡಮಟ್ಟು ಮಣಿಕುಟ್ಟಿಮತಳದೊಳ್ ಕುಳ್ಳಿರ್ದುದುಮೊಡನೆಯಾ ಮಾತಂಗಂ ವಿಹಂಗಸಂಗತಪಂಜರಮುಂ ಪಿಡಿದು ನರೇಂದ್ರನಂ ದೇವ ಬಿನ್ನಪಮೆಂದೀಂತೆಂದಂ

ಇದು ವಿದಿತಾರ್ಥಶಾಸ್ತ್ರನಿದಶೇಷ ಪುರಾಣಕಥಾಪ್ರವೀಣನಿಂ
ತಿದು ಸಕಲಾಂಗವೇದವಿದನಿಂತಿದು ಕಾವ್ಯಕಲಾಪ್ರಗಲ್ಭನಿಂ
ತಿದು ವಿತತಾದಿ ವಾದ್ಯವಿದನಿಂತಿದು ಚಿತ್ರಕಥಾಭಿರೂಪನಿಂ
ತಿದು ಗಜ ವಾಜಿ ಲಕ್ಷಣವಿಚಕ್ಷಣನೀ ಶುಕನುದ್ಗತಾಂಶುಕಂ ೪೯

ಇದು ನರ್ತನಾವಲೋಕನ
ವಿದನಿದು ಪರಿಹಾಸವಚನ ನಿಚಯಾಸ್ಪದನಿಂ
ತಿದು ಸಕಲಸುಭಾಷಿತಕೋ
ವಿದನಿದು ಬಹುವಿಧಕಳಾಕಳಾಪಾಭಿಜ್ಞಂ ೫೦

ಎಂಬಂತಿರುವ ಅರಸನನ್ನು ನೋಡಿ ೪೮. ಕಿವಿಯ ಆಭರಣವಾಗಿದ್ದ ಸೊಗಸಾದ ಚಿಗುರು ಕಿವಿಯೆಡೆಯಿಂದ ಸ್ವಲ್ಪ ಜಾರುತ್ತಿರಲು ಆ ಹುಡುಗಿಯು ಒಳ್ಳೆಯ ಚಾಕಚಕ್ಯತೆಯಿಂದ ಕೂಡಿರುವ ಮಹಿಳೆಯಂತೆ ವಿನಯದಿಂದ ಚಕ್ರವರ್ತಿಗೆ ನಮಸ್ಕರಿಸಿದಳು. ವ॥ ಹಾಗೆ ನಮಸ್ಕರಿಸಿ ರತ್ನದ ನೆಲೆಗಟ್ಟಿನ ಮೇಲೆ ಕುಳಿತುಕೊಳ್ಳಲಾಗಿ, ಕೂಡಲೇ ಜೊತೆಯಲ್ಲಿ ಬಂದಿದ್ದ ಆ ಮುದುಕನು ಪಕ್ಕಿಯಿದ್ದ ಪಂಜರವನ್ನು ಹಿಡಿದು ರಾಜನನ್ನು ಕುರಿತು ಹೀಗೆ ಅರಿಕೆ ಮಾಡಿದನು. ೪೯. "ಮಹಾಸ್ವಾಮಿ, ಈ ತೇಜಸ್ವಿಯಾದ ಗಿಳಿಯು ಅರ್ಥಶಾಸ್ತ್ರವನ್ನು ತಿಳಿದುಕೊಂಡಿದೆ. ಸಮಸ್ತ ಪುರಾಣೇತಿಹಾಸಗಳಲ್ಲೂ ಪ್ರವೀಣತೆಯನ್ನು ಪಡೆದಿದೆ. ಷಡಂಗಸಹಿತವಾದ ನಾಲ್ಕು ವೇದಗಳನ್ನೂ ಅಭ್ಯಾಸಮಾಡಿದೆ. ಕಾವ್ಯಕಳೆಯಲ್ಲೂ ಪ್ರೌಢಿಮೆಯನ್ನು ಗಳಿಸಿದೆ. ಅಲ್ಲದೆ ವೀಣೆ ಮೊದಲಾದ ವಾದ್ಯಗಳಲ್ಲಿ ನೈಪುಣ್ಯವನ್ನು ಹೊಂದಿದೆ. ಅದ್ಭುತವಾದ ಕಥೆಗಳನ್ನು ಹೇಳುವುದರಲ್ಲಂತೂ ನಿಪುಣಾಗ್ರೇಸರ ! ಆನೆ ಕುದುರೆ ಮೊದಲಾದುವುಗಳ ಲಕ್ಷಣವನ್ನು ಬಹಳ ಚೆನ್ನಾಗಿ ತಿಳಿದುಕೊಂಡಿದೆ. ೫೦. ಇದು ನಾಟ್ಯವನ್ನು ನೋಡಿ ರಸಾಸ್ವಾದನೆ ಮಾಡಬಲ್ಲುದು. ಇದು ಹಾಸ್ಯಭರಿತವಾದ ಮಾತುಗಳಿಂದ ಜನರನ್ನು ನಗಿಸಬಲ್ಲದು. ಇದು ಸಮಸ್ತ ನೀತಿ, ಸುಭಾಷಿತ ವಚನಗಳನ್ನು ಉದಾಹರಿಸುವುದರಲ್ಲಿ ನಿಪುಣತೆಯುಳ್ಳದ್ದು. ಇದು ನಾನಾ ವಿಧವಾದ ಕಲೆಗಳನ್ನೂ ಬಹಳ

ವ॥ ಅದಲ್ಲದೆಯುಂ

ವನಿತೆಯರೊಲವಿನ ಕಲಹದ
ಮುನುಸುಗಳಂ ತಿಳಿಪುವೆಡೆಯೊಳತಿಚತುರಂ ತಾ
ನೆನಿಸಿರ್ದುಂ ವೈಶಂಪಾ
ಯನನೆನಿಪುದು ಪೆಸರೊಳೀ ಶುಕಂ ಭುವನಪತೀ ೫೧

ದೇವರೆ ಭಾಜನಂ ವಿದಿತರತ್ನಚಯಕ್ಕೆ ದಲೇದು ತನ್ನ ಸ
ದ್ಭಾವದಿನೆನ್ನನಾಳ್ದನ ಮಗಳ್ ಪದಪಿಂದಮೆ ತಂದಳಿಂತಿದಂ
ದೇವರ ಪಾದಪಂಕರುಹದಲ್ಲಿಗೆ ಕನ್ನೆಯದೊಂದು ಭಕ್ತಿಯಂ
ಭಾವಿಸಿ ನೀನಿದಂ ನೃಪತಿ ಕೈಕೊಳವೇಟ್ಪುದು ರಾಜಕೀರವಂ ೫೨

ವ॥ ಎಂದೊಡನೆಯಾ ಮಾತಂಗಂ ಬಿನ್ನವಿಸಿ ಶುಕಪಂಜರದ ಬಾಗಿಲಂ ತೆಱೆದು ಮುಂದಿರಿಸಲಾ ಶುಕಂ ರಾಜಾಭಿಮುಖನುಮುನ್ನಮಿತ ದಕ್ಷಿಣಚರಣನುಮ್ಮತಿಸ್ಪಷ್ಟವರ್ಣಸಂಸ್ಕಾರಮಪ್ಪ ವಾಣಿಯಿಂ ಕೃತಜಯಶಬ್ದನುಮಾಗಿ

ತಿರ್ಯಗ್ಜಾತಿಯೊಳೀ ಚಾ
ತುರ್ಯಮಿದೇನೆಂದು ಸಭೆಯ ಚಿತ್ತದೊಳತ್ಯಾ
ಶ್ಚರ್ಯಮೊದವುವಿನಮರಸಂ
ಗಾರ್ಯಮನೋದಿತ್ತದೊಂದನಾ ಶುಕರತ್ನಂ ೫೩

ಚೆನ್ನಾಗಿ ತಿಳಿದುಕೊಂಡಿದೆ. ವ॥ ಅದಲ್ಲದೆ, ೫೧. ಮಹಾಸ್ವಾಮಿ, ಇದು ಹೆಂಗಸರು ಪ್ರಣಯಕಲಹದಿಂದ ನಲ್ಲನ ಮೇಲೆ ಮುನಿಸಿಕೊಂಡಿದ್ದರೆ ಅಂತಹ ಮುನಿಸನ್ನು ಪರಿಹರಿಸುವುದರಲ್ಲಿ ಬಹಳ ಜಾಣನೆನಿಸಿಕೊಂಡಿದೆ. ಇದಕ್ಕೆ ವೈಶಂಪಾಯನನೆಂದು ಹೆಸರು. ೫೨. ಲೋಕದಲ್ಲಿ ಪ್ರಸಿದ್ಧವಾದ ಉತ್ಕೃಷ್ಟ ವಸ್ತುಗಳನ್ನು ಹೊಂದಿರಲು ಮಹಾಪ್ರಭುಗಳೇ ನಿಜವಾದ ಅಧಿಕಾರಿಗಳು—ಎಂಬ ಒಂದು ಸದ್ಭಾವನೆಯಿಂದ ನನ್ನ ಒಡೆಯನ ಮಗಳು ಇದನ್ನು ಮಹಾಸ್ವಾಮಿಯವರ ಅಡಿದಾವರೆಯಲ್ಲಿ ಒಪ್ಪಿಸಲು ಆತ್ಮಸಂತೋಷದಿಂದ ತಂದಿದ್ದಾಳೆ. ಈ ಹುಡುಗಿಯ ಇದೊಂದು ಭಕ್ತಿಯನ್ನು ಪರಾಂಬರಿಸಿ ಈ ಅರಗಿಳಿಯನ್ನು ಒಪ್ಪಿಸಿಕೊಳ್ಳಬೇಕು, ಮಹಾಸ್ವಾಮಿ." ವ॥ ಹೀಗೆ ಆ ಅಂತ್ಯಜನು ಅರಿಕೆಮಾಡಿ ಕೂಡಲೆ ಪಂಜರದ ಬಾಗಿಲನ್ನು ತೆರೆದು ಮುಂದಿರಿಸಲಾಗಿ, ಆ ಗಿಳಿಯು ಮಹಾರಾಜನ ಮುಂದುಗಡೆ ತನ್ನ ಬಲಗಾಲನ್ನು ಮೇಲಕ್ಕೆತ್ತಿ ಬಹಳ ಸ್ಪಷ್ಟವಾದ ಅಕ್ಷರಗಳಿಂದ ಕೂಡಿದ ಮತ್ತು ವ್ಯಾಕರಣಪರಿಶುದ್ಧವಾದ ಮಾತುಗಳಿಂದ ಮಹಾರಾಜನಿಗೆ ಜಯಘೋಷವನ್ನು ಮಾಡಿತು. ೫೩. "ಪಶುಪಕ್ಷಿ ಜಾತಿಗೆ ಈ ಚದುರುತನ ಹೇಗೆ ಬಂದಿತು ?" ಎಂದು ಸಭೆಯಲ್ಲಿರುವವರೆಲ್ಲರ ಮನಸ್ಸಿನಲ್ಲಿ ಅತ್ಯಾಶ್ಚರ್ಯವು ಮೂಡುತ್ತಿರಲು, ಆ ಅರಗಿಳಿಯು ರಾಜನನ್ನು ಕುರಿತು ಒಂದು ಆರ್ಯೆಯನ್ನು ಈ ರೀತಿ ಹಾಡಿತು, ೬. ಮಾತ್ರಾ ಛಂದಸ್ಸಿಗೆ ಸೇರಿದ ಪದ್ಯಕ್ಕೆ ಆರ್ಯೆ ಎಂದು

ಆರ್ಯಾ॥ ಸ್ತನಯುಗಮಶ್ರುಸ್ನಾತಂ
ಸಮೀಪತರವರ್ತ್ತಿ ಹೃದಯಶೋಕಾಗ್ನೇಃ
ಚರತಿ ವಿಮುಕ್ತಾಹಾರಂ
ವ್ರತಮಿವ ಭವತೋ ರಿಪುಸ್ತ್ರೀಣಾಂ

ವೀರರ ವೀರ ವಿಮುಕ್ತಾ
ಹಾರಂ ಭವದರಿವಧೂಸ್ತನದ್ವಿತಯಂ ಕ
ಣ್ಣೀರಿಂ ಮಿಂದೆರ್ದೆಗಿರ್ಚಿಂ
ದೋರಂತಿರೆ ಬೆಂದು ಚರಿಸುತಿರ್ಪುದು ತಪಮಂ ೫೪

ವ॥ ಅಂತದನರಸಂ ಕೇಳ್ದು ಚೋದ್ಯಂಬಟ್ಟು ಬಲದ ಕೆಲದೊಳ್ ಮಹಾಹೇಮಾಸನಾಸೀನನುಮಮರಗುರುಸದೃಶನುಮಖಿಲಮಂತ್ರಿಮಂಡಳಿಕ ಪ್ರಧಾನನುಮಪ್ಪ ಕುಮಾರಪಾಲಿತನೆಂಬ ಮಂತ್ರಿಮುಖ್ಯನನಿಂತೆಂದಂ

ಗಿಳಿಗೀ ಸ್ಪಷ್ಟಾಕ್ಷರೋಚ್ಚಾರಣಮೆ ಮೊದಲೊಳಾಶ್ಚರ್ಯಮೆಂಬಲ್ಲಿ ಮತ್ತ
ಗ್ಗಳಿಸುತ್ತಂ ವರ್ಣಮಾತ್ರಾಸ್ವರ ರುಚಿರಮುಮಾದಾರ್ಯೆಯಂ ವ್ಯಕ್ತದಿಂದ
ಸ್ಖಲಿತಂ ತಾನೆನ್ನನುದ್ದೇಶಿಸಿ ಸುಲಲಿತಮೆಂಬಂದದಿಂದೋದಿತೋರ್ದೀ
ಗಿಳಿಗೆಂತೋ ಬುದ್ಧಿಪೂರ್ವಂ ಮನುಜರ ತೆಱದಿಂದೋದುವಾಶ್ಚರ್ಯ
ಮಾಗಲ್ ೫೫

ಹೆಸರು. ೫೪. "ಎಲೈ ವೀರಾಗ್ರೇಸರನೆ, ನಿನ್ನ ಶತ್ರುರಮಣಿಯರ ಸ್ತನಗಳು ತಪಸ್ಸು ಮಾಡುತ್ತಿರುವಂತೆ ತೋರುತ್ತಿವೆ. ಹೇಗೆಂದರೆ ತಪಸ್ವಿಗಳು ಸ್ನಾನ ಮಾಡುತ್ತಾರೆ. ಸ್ತನಗಳು ಸುರಿಯುತ್ತಿರುವ ಕಣ್ಣೀರಿನಿಂದಲೇ ಸ್ನಾನ ಮಾಡುತ್ತಿವೆ. ತಪಸ್ಸು ಮಾಡುವವರು ಪಂಚಾಗ್ನಿಗಳ ಮಧ್ಯೆ ಕುಳಿತುಕೊಳ್ಳುವಂತೆ ಇವು ಹೃದಯದಲ್ಲಿ ಉರಿಯುತ್ತಿರುವ ದುಃಖಾಗ್ನಿಯ ಹತ್ತಿರದಲ್ಲೇ ಇದ್ದುಕೊಂಡು ಬೆಂದುಹೋಗುತ್ತಿವೆ. ತಪಸ್ಸು ಮಾಡುವವರು ವಿಮುಕ್ತಾಹಾರ (ವಿಮುಕ್ತ + ಆಹಾರ)ರಾಗುತ್ತಾರೆ. ಅಂದರೆ ಉಪವಾಸವನ್ನು ಮಾಡುತ್ತಾರೆ. ಹಾಗೆಯೇ ಸ್ತನಗಳೂ ವಿಮುಕ್ತಾಹಾರ (ವಿ + ಮುಕ್ತಾಹಾರ) ತೆಗೆಯಲ್ಪಟ್ಟ ಮುತ್ತಿನ ಸರವುಳ್ಳವುಗಳಾಗಿವೆ." ಟಿ. ಶೂದ್ರಕಮಹಾರಾಜನು ಶತ್ರುಗಳನ್ನು ಅಡಗಿಸಿ ಪರಾಕ್ರಮೋತ್ಕರ್ಷದಿಂದ ಮೆರೆಯುತ್ತಿದ್ದನು ಎಂದು ಭಾವ : ವ॥ ಇದನ್ನು ರಾಜನು ಕೇಳಿ ಆಶ್ಚರ್ಯಪಟ್ಟು ಬಲಗಡೆ ಪಕ್ಕದಲ್ಲಿ ದೊಡ್ಡದಾದ ಚಿನ್ನದ ಪೀಠದ ಮೇಲೆ ಕುಳಿತುಕೊಂಡಿರುವ ಬೃಹಸ್ಪತಿಗೆ ಸಮಾನನೂ ಮಂತ್ರಿಮಂಡಲದಲ್ಲಿ ಪ್ರಧಾನನೂ ಆದ ಕುಮಾರಪಾಲಿತನೆಂಬ ಮುಖ್ಯಮಂತ್ರಿಯನ್ನು ಕುರಿತು ಹೀಗೆ ಹೇಳಿದನು. ೫೫. "ಮೊದಲನೆಯದಾಗಿ ಗಿಳಿಗಳಿಗೆ ಈ ರೀತಿ ಸ್ಫುಟವಾದ ಅಕ್ಷರೋಚ್ಚಾರಣೆಯೇ ಆಶ್ಚರ್ಯಕರವಾಗಿದೆ. ಹೀಗಿರಲು ಇದು ಮತ್ತೂ ಹೆಚ್ಚಿನ ಸಾಮರ್ಥ್ಯವನ್ನು ಪ್ರಕಟಿಸುತ್ತ ಅಕ್ಷರ, ಮಾತ್ರೆ, ಸ್ವರಗಳಿಂದ ಅಂದವಾದ ಈ ಆರ್ಯಾವೃತ್ತವನ್ನು ಇಷ್ಟು ಸ್ಪಷ್ಟವಾಗಿ, ಸ್ವಲ್ಪವೂ ತಡೆಬಡೆ ಇಲ್ಲದಂತೆ ನನ್ನನ್ನು ಕುರಿತು ರಮ್ಯವಾಗಿ ಹಾಡಿ ತೋರಿಸಿ

ವ॥ ಎಂಬುದುಂ ಕುಮಾರಪಾಲಿತನೀತೆಂದಂ

ಶುಕಶಾರಿಕಾದಿ ವಿಹಗ
ಪ್ರಕರಂ ಮುಂ ಕೇಳ್ದ ವಚನಮಂ ನುಡಿವುದು ಕೌ
ತುಕಮಲ್ಲದೀಗಳುಂ ಕೌ
ತುಕಮಿಂತಿಂತೇಕೆ ದೇವ ನೀನಱಿಯದುದೇ ೫೬

ಇದು ಪೂರ್ವಜನ್ಮಸಂಸ್ಕಾ
ರದೆ ಮೇಣ್ ಪುರುಷಪ್ರಯತ್ನದಿಂದಂ ಮೇಣಿಂ
ತುದಯಿಸುಗುಮಲ್ತೆ ಸಂಸ್ಕಾ
ರದೊಳತಿಶಯ ಚಿತ್ರಮಲ್ತು ಭಾವಿಸಿ ನೋಡಲ್ ೫೭

ವ॥ ಅಲ್ಲದೆಯುಂ

ನುಡಿ ಮುನ್ನಂ ಸ್ಪಷ್ಟಮಾಗಿರ್ದುದು ಬಳಿಕಮಿದಸ್ಪಷ್ಟಮಾಯ್ತಗ್ನಿಶಾಪಂ
ಗುಡಲಲ್ಲಿಂದಿತ್ತಲಿಂತೀ ಶುಕಸಮಿತಿಗೆ ತಚ್ಛಾಪದಿಂದಾನೆಗಳ್ಗಂ
ನುಡಿಯಲ್ಕಾಗಂದಿನಿಂ ನಾಲಗೆ ಮಡಿದುದೆನುತ್ತಿಂತು ಪೇಳುತ್ತಿರಲ್ಕಾ
ಗಡೆ ಪೊಣ್ಮತ್ತಲ್ಲಿ ಮಧ್ಯಂದಿನ ಸಮಯಸಮುದ್ಭೂತ ಶಂಖಪ್ರಣಾದಂ ೫೮

ವ॥ ಆದಂ ಕೇಳ್ದು ಮಜ್ಜನಕ್ಕುಜ್ಜುಗಂಗೆಯ್ದೊಡ್ಡೋಲಗಮಂ ಪಱಿಯಲ್ವೇಳ್ದಾ ಸ್ಥಾನಮಂಟಪದಿಂ ಮಹೀಪಾಲನೇಳ್ವುದುಮನೇಕಾಂಗದ ಮಕರಿಕಾಪತ್ರಾದಿಗಳಿಂ ಮಿಂಚು

ಬಿಟ್ಟಿತಲ್ಲ ! ಹೀಗೆ ಆಚ್ಚರಿಯಾಗುವಂತೆ ಈ ಗಿಳಿಗೆ ಮನುಷ್ಯರ ಹಾಗೆ ಬುದ್ಧಿಪೂರ್ವಕವಾದ ಪಠನವು ಹೇಗೆ ಉಂಟಾಯಿತೊ ?" ಎಂದನು. ವ॥ ಆಗ ಕುಮಾರಪಾಲಿತನು ಹೀಗೆ ಹೇಳಿದನು : ೫೬. "ಪ್ರಭುವೆ ಗಿಳಿ, ಮೈನಾ ಮೊದಲಾದ ಹಕ್ಕಿಗಳ ಗುಂಪು ಮೊದಲು ತಾವು ಕೇಳಿದ್ದನ್ನು ಪುನರುಚ್ಚರಿಸುವುದು ಆಶ್ಚರ್ಯವಲ್ಲ ಎಂಬುದು ಸನ್ನಿಧಾನಕ್ಕೆ ವೇದ್ಯವಾಗಿಯೇ ಇದೆ. ಈಗಲೂ ಇದರಲ್ಲಿ ಇಷ್ಟುಮಟ್ಟಿಗೆ ಆಶ್ಚರ್ಯವೇಕೆ ? ೫೭. ಹಿಂದಿನ ಜನ್ಮದ ಸಂಸ್ಕಾರದಿಂದಲೋ ಅಥವಾ ಜನರು ಪ್ರಯತ್ನಪೂರ್ವಕವಾಗಿ ಕಲಿಸುವುದರಿಂದಲೋ ಹೀಗೆ ಸಂಸ್ಕಾರಾತಿಶಯವು ಉಂಟಾಗುವುದಿಲ್ಲವೆ ? ವಿಚಾರಮಾಡಿ ನೋಡಿದರೆ ಇದೇನೂ ಅಷ್ಟು ವಿಚಿತ್ರವಾಗಿ ತೋರುವುದಿಲ್ಲ. ವ॥ ಮತ್ತೇನೆಂದರೆ : ೫೮. ಮೊದಲು ಈ ಗಿಳಿಗಳೂ ಸ್ಪಷ್ಟವಾಗಿಯೇ ಮಾತನಾಡುತ್ತಿದ್ದುವು. ಅಗ್ನಿಯು ಶಾಪವನ್ನು ಕೊಡಲಾಗಿ ಅಲ್ಲಿಂದೀಚೆಗೆ ಗಿಳಿಗಳ ಜಾತಿಗೆ ನುಡಿ ಅಸ್ಪಷ್ಟವಾಗಿಬಿಟ್ಟಿತು. ಹಾಗೆಯೆ ಆನೆಗಳಿಗೂ ಅದೇ ಅಗ್ನಿಶಾಪದಿಂದ ನಾಲಿಗೆ ಮಡಿಸಿಕೊಂಡುಬಿಟ್ಟಿತು. ಅಂದಿನಿಂದ ಅವಕ್ಕೂ ಮಾತನಾಡಲಾಗುವುದಿಲ್ಲ." ಹೀಗೆ ಹೇಳುತ್ತಿರುವಷ್ಟರಲ್ಲಿ ಆ ಕಡೆ ಅರಮನೆಯಲ್ಲಿ ಪದ್ಧತಿಯಂತೆ ಮಧ್ಯಾಹ್ನಕಾಲದಲ್ಲಾಗುವ ಶಂಖಧ್ವನಿ ಹರಡಿತು. ವ॥ ಅದನ್ನು ಕೇಳಿ ಸ್ನಾನ ಮಾಡಲು ಮನಸ್ಸುಮಾಡಿ ಈಗಿನ ಒಡ್ಡೋಲಗವು ಮುಕ್ತಾಯವಾಗಲೆಂದು ಅಣತಿಯಿತ್ತು ಸಭಾಮಂಟಪದಿಂದ ರಾಜನು ಏಳಲಾಗಿ ಅನೇಕ ತೋಳುಬಂದಿ, ಮಕರಿಕಾ

**ಪೊಣ್ಮ ತ್ತವ್ರೊಳ್ ಪಳಂಚಲೆಯೆಯುಂ ತೋರಮುಯ್ವುಗಳೊಳೆಸೆವ ಕುಂಕುಮಂಗಳ ಬಂಬಲ ಸೋಂಕಿನೊಳ್ ರಜಂ ನೆಗೆದು ದೆಸೆಗಳ್ ಪೊಂಬಣ್ಣಮಾಗೆಸೆಯೆಯುಂ ತುಂಬಿಗಳ್ ಪೂಗಳಂ ಬಿಟ್ಟು ಮೇಗೆ ನೆಗೆಯೆಯುಂ ಕರ್ಣೋತ್ಪಲಂಗಳ್ ಕಪೋಲಬಿಂಬಂಗಳೊಳ್ ಬಿಂಬಿಸೆಯುಂ ತೋರ ಮುತ್ತಿನಹಾರಂಗಳುರಸ್ಥಲಂಗಳೊಳ್ ಒಲೆದಾಡೆಯುಮತಿಸಂಭ್ರಮದಿನೊಡನೆಟ್ಟ ಮಹೀಪಾಲರೊಳಂ ಅಂಸಾವಸಕ್ತ ಚಮರೀಜೆಯರಪ್ಪ ಕಾಂತೆಯರ ಕಮಳಮಧುಪಾನದಿಂ ಸೊಕ್ಕಿದ ಮುತ್ತ್ರೇಚಿಯ ಧ್ವನಿಗಳಂತೆ ಜರ್ಝರಮಾದ ಪೊಂಗೆಜ್ಜೆಗಳ ಮೆಲ್ಲುಲಿಯೊಳಂ ವಿಳಾಸಿನೀಜನದ ಘನಜಘನಂಗಳೊಳ್ ಪಳಂಚುವ ರತ್ನಮಾಲೆಗಳೊಳಮಡಿಯಿಡುವ ರಮಣಿಯರ ನೂಪುರರಣಿತಕ್ಕೆಳಸಿ ಬರ್ಪ ಅಂಚೆವಿಂಡಿನಿಂಚರದೊಳಮುಲ್ಲಸಿತಮಾದ ಕಾಂಚೀಕ್ರೇಂಕಾರಕ್ಕುತ್ಕಂಠಂಗಳಾದ ಸಾರಸಂಗಳ ಕೂಜಿತಂಗಳೊಳಮನುಪಮ ಪ್ರಾಸಾದಕೂಟ ಕುಹರಂಗಳೊಳ್ ಮಾರ್ದನಿಯಿಡುವ ಪಡಿಯರರ ಕಳಕಳಂಗಳೊಳರಸುಗಳೆಮಗೆತಮಗೆಂದು ಪೊಡುವಡುವಲ್ಲಿ ಮಣಿಕುಟ್ಟಿಮತಳದೊಳ್ ಪಳಂಚುವ ಮಣಿಮಯ ಕಿರೀಟ ಕರ್ಣಪೂರ ಕೇಯೂರಹಾರರಣಿತಂಗಳೊಳಮೆಡವರಿಯದಡಿಯಿಡುವ ಮಾಮಸಕಕಂಜಿ ಮಣಿಕುಟ್ಟಿಮತಳದ**

ಪತ್ರಗಳೆಂಬ ಕರ್ಣಾಭರಣಗಳಿಂದ ಹೊಳಪು ಹೊರಹೊಮ್ಮಿ ಒಂದಕ್ಕೊಂದು ತಾಗುತ್ತಿರಲಾಗಿ ದಪ್ಪನಾದ ಹೆಗಲುಗಳಲ್ಲಿ ಶೋಭಿಸುವ ಕುಂಕುಮಗಳು ಇಕ್ಕಟ್ಟಿನಲ್ಲಿ ಪರಸ್ಪರ ತಗುಲುವಿಕೆಯಿಂದ ಧೂಳು ಹಾರಿ ದಿಕ್ಕುಗಳೆಲ್ಲ ಹೊಂಬಣ್ಣವಾಗಿ ಪ್ರಕಾಶಿಸಲಾಗಿ, ದುಂಬಿಗಳು ಮುಡಿದುಕೊಂಡಿರುವ ಹೂವುಗಳನ್ನು ಬಿಟ್ಟು ಮೇಲಕ್ಕೆ ಹಾರುತ್ತಿರಲಾಗಿ, ಕಿವಿಗೆ ಆಭರಣವಾಗಿರುವ ನೈದಿಲೆಗಳು ಜಾರಿ ಕೆನ್ನೆಯನ್ನು ಸೋಕುತ್ತಿರಲಾಗಿ, ದಪ್ಪ ಮುತ್ತಿನ ಸರಗಳು ಎದೆಯ ಮೇಲೆ ಹೊಳೆಯುತ್ತಾ ತೂಗಾಡುತ್ತಿರಲಾಗಿ, ಬಹಳ ಸಡಗರದಿಂದ ರಾಜನ ಜೊತೆಯಲ್ಲಿ ಏಳುತ್ತಿರುವ ರಾಜರಿಂದಲೂ ಹೆಗಲಮೇಲಿರಿಸಿಕೊಂಡಿರುವ ಚಾಮರವುಳ್ಳ ಚಾಮರಧಾರಿಣಿಯರ ತಾವರೆಯ ಬಂಡನ್ನು ಕುಡಿದು ಸೊಕ್ಕಿರುವ ಮುದಿ ಹಂಸಪಕ್ಷಿಯ ಧ್ವನಿಯಂತೆ ಒಡಕಲಾಗಿ ಕೇಳಿಬರುವ ಚಿನ್ನದ ಗೆಜ್ಜೆಗಳ ಮೃದುಧ್ವನಿಗಳಿಂದಲೂ, ಒನಪುಗಾರ್ತಿಯರ ಜಘನಗಳಿಗೆ ನಡೆಯುವಾಗ ತಾಗಿ ದನಿಗೈಯುವ ರತ್ನದ ನಡುಪಟ್ಟಿಗಳಿಂದ ಸುಂದರಿಯರ ಕಾಲುಗಡಗಗಳ ಧ್ವನಿಗೆ ಆಸೆಪಟ್ಟು ಬರುವ ಹಂಸಪಕ್ಷಿಗಳ ಗುಂಪಿನ ಇಂಪಾದ ಧ್ವನಿಯಿಂದಲೂ, ಡಾಬಿನ ಸುಖಕರವಾದ ಕ್ರೇಂಕಾರಧ್ವನಿಗೆ ಆಸೆಪಟ್ಟಿರುವ ಸಾರಸಪಕ್ಷಿಗಳ ಕೂಗಿನಿಂದಲೂ, ಅಸದೃಶವಾದ ಅರಮನೆಯ ಶಿಖರದ ಗೂಡುಗಳಲ್ಲಿ ಪ್ರತಿಧ್ವನಿ ಕೊಡುತ್ತಿರುವ ಬಾಗಿಲುಕಾಯುವವರ ಗುಜುಗುಂಪಿನಿಂದಲೂ, ಸಾಮಂತರಾಜರು ನಾನು ಮುಂದು ತಾನು ಮುಂದು ಎಂಬುದಾಗಿ ನಮಸ್ಕಾರ ಮಾಡುತ್ತಿರಲಾಗಿ ರತ್ನಮಯವಾದ ನೆಲಗಟ್ಟಿನಲ್ಲಿ ತಾಗುವ ರತ್ನಖಚಿತವಾದ ಕಿರೀಟ ಹತ್ತಕಡುಕು ತೋಳುಬಂದಿ ಹಾರಗಳ ದನಿಗಳಿಂದಲೂ, ತಡೆಬಡೆಯಿಲ್ಲದೆ ಹೆಜ್ಜೆಯಿಡುತ್ತಿರುವ ಜನರ ತಿಕ್ಕಾಟಕ್ಕೆ ಹೆದರಿ ರತ್ನದ ನೆಲಕಟ್ಟಿನ ಮೇಲೆ ಎರಚಿರುವ ಹೂವುಗಳನ್ನು ಬಿಟ್ಟು ಹಾರುತ್ತಿ

ಪೂವಲಿಯುಂ ಬಿಟ್ಟು ಪಾಱುವ ಮಧುವಿಹಂಗಗಳ ಹುಂಕಾರದೊಳಂ ಮುಂದೆ ಬಂದೋದುವ ಮಂಗಳಪಾಠಕರ ಜಯಜಯಾದಿ ಮಧುರರವಂಗಳೊಳಮತಿಕ್ಷುಭಿತಮಾದಾಸ್ಥಾನಮಂಟಪದಿಂ ಮನುಜೇಂದ್ರಂ ಪೊಱಮಟ್ಟು ಸಕಲ ರಾಜಲೋಕಮಂ ವಿಸರ್ಜಿಸಿ ಚಂಡಾಲಕನ್ನೆಯುಂ ವಿಶ್ರ ಮಿಸಲ್ವೇಳ್ದು ವೈಶಂಪಾಯನನಂ ಮಹಾದೇವಿಯರರಮನೆಗೆ ಕಳುಪಿಮೆಂದಾ ತಾಂಬೂಲ ಕರಂಕವಾಹಿನಿಗೆ ಬೆಸಸಿ ಕೆಲಬರರುಸುಮಕ್ಕಳ್ವೆರಸೊಳಗುಪೊಕ್ಕು

ಭುವನೇಶಂ ಭೂಷಣವೆ
ಲ್ಲವನಾಗಳ್ ಕಳೆದು ನಾಡೆಯುಂ ಕಣ್ಗೆಸೆದಂ
ದಿವಸಕರ ಚಂದ್ರ ತಾರಾ
ನಿವಹಂ ತೊಲಗಿರ್ಪ ಗಗನವಿಸ್ತಾರದವೊಲ್ ೪೯

ಪೆಱಗಿವೆ ಪೊಣ್ಮಿದತ್ತಮೃತಬಿಂದುಗಳೆಂಬಿನೆಗಂ ಲಲಾಟದೊಳ್
ತುಱುಗಿದ ಸಿಂಧುವಾರ ನವಮಂಜರಿಯೆಂಬಿನೆಗಂ ಕದಂಪಿನೊಳ್
ಮಿಱುಗುವ ಹಾರಮೆಂಬಿನಮುರಸ್ಥಳದೊಳ್ ಘನಘರ್ಮಬಿಂದುಗಳ್
ಪೊಱಮಡೆ ಮತ್ತಳಂಕೃತನವೋಲೆಸೆದಂ ನೃಪರೂಪ ಚಂದ್ರಮಂ ೫೦

ವ॥ ಅನಂತರಂ ಕಟ್ಟಿದ ಬೆಳುವಟ್ಟೆಯ ಮೇಲ್ಕಟ್ಟಿನೊಳಂ ತೀವಿದ ಚೆಂಬೊನ್ನ ದೋಣಿ ಗಳೊಳಮಳಂಕರಿಸಿದ ಪಳುಕಿನ ಪಟ್ಟವಣೆಗಳೊಳಂ ಪರಿಮಳಕ್ಕೆಱಗಿ ಮುಸುಱುವ ಮಱಿ

ರುವ ಬಂಡುಣಿಗಳ ಝುಂಕಾರದಿಂದಲೂ, ಮುಂದೆ ಬಂದು ಪಠಿಸುತ್ತಿರುವ ಮಂಗಳ ಪಾಠಕರ ಜಯಕಾರದ ಮಧುರಧ್ವನಿಯಿಂದಲೂ, ಬಹಳ ಗಡಿಬಿಡಿಗೊಂಡ ಆಸ್ಥಾನ ಮಂಟಪದಿಂದ ರಾಜನು ಹೊರಟು ರಾಜರೆಲ್ಲರ ಗುಂಪನ್ನು ಕಳುಹಿಸಿ ಚಂಡಾಲಕನ್ನೆ ಯನ್ನು ವಿಶ್ರಮಿಸಿಕೊಳ್ಳುವಂತೆ ತಿಳಿಸಿ ವೈಶಂಪಾಯನನನ್ನು ಮಹಾರಾಣಿಯರ ಅಂತಃ ಪುರಕ್ಕೆ ಕಳುಹಿಸಿಕೊಡುವಂತೆ ತಾಂಬೂಲದ ತಟ್ಟೆಯನ್ನು ಹಿಡಿಯುವವಳಿಗೆ ಅಪ್ಪಣೆ ಮಾಡಿ, ಕೆಲವು ಮಂದಿ ಅರಸುಮಕ್ಕಳೊಂದಿಗೆ ಒಳಕ್ಕೆ ಹೋಗಿ ೪೯. ಆ ಮಹಾ ರಾಜನು ಆಗ ಒಡವೆಗಳೆಲ್ಲವನ್ನೂ ತೆಗೆದಿಟ್ಟರೂ ಸೂರ್ಯ ಚಂದ್ರ ನಕ್ಷತ್ರಗಳು ಇಲ್ಲ ದಿರುವ ವಿಸ್ತಾರವಾದ ಆಕಾಶದಂತೆ ಇನ್ನೂ ಚೆನ್ನಾಗಿಯೇ ಶೋಭಿಸಿದನು. ೫೦. ಅವನ ಹಣೆಯಲ್ಲಿ ದಟ್ಟವಾದ ಬೆವರಿನ ಹನಿಗಳು ಹೊರಹೊಮ್ಮಿರಲು, ಚಂದ್ರನಲ್ಲಿ ಅಮೃತದ ಹನಿಗಳು ಮೂಡಿದಂತೆ ಕೆನ್ನೆಗಳ ಮೇಲೆ ಮೂಡಿರಲು (ಕಿವಿಯಲ್ಲಿ ಧರಿಸಿರುವ) ಲಕ್ಕೀಹೂವಿನ ಗೊಂಚಲಿನೋಪಾದಿಯಲ್ಲಿ ಎದೆಯಲ್ಲಿ ಮೂಡಿರಲು ಪ್ರಕಾಶಮಾನ ವಾದ ಹಾರವೆಂಬಂತೆಯೂ ಕಾಣುತ್ತಿತ್ತು. ಇದರಿಂದ ಆ ಚಂದ್ರನಂದದ ರಾಜನು ಒಡವೆಗಳನ್ನು ತೆಗೆದಿಟ್ಟಿದ್ದರೂ ಮತ್ತೆ ಸಿಂಗರಿಸಿಕೊಂಡವನಂತೆಯೇ ಶೋಭಿಸುತ್ತಿದ್ದನು. ವ॥ ಬಳಿಕ ಕಟ್ಟಿರುವ ಬಿಳಿಯ ಬಟ್ಟೆಯ ಮೇಲ್ಕಟ್ಟುಗಳಿಂದಲೂ ತುಂಬಿರುವ ಚಿನ್ನದ ಕೊಪ್ಪರಿಗೆಗಳಿಂದಲೂ ಸಿಂಗಾರ ಮಾಡಿರುವ ಸ್ಫಟಿಕಶಿಲೆಯ ರಾಜಪೀಠಗಳಿಂದಲೂ

ದುಂಬಿಯ ಬಂಬಲಿಂ ನೀಳಾಂಬರದಿಂ ಬಾಸಣಿಸಿರ್ದ ಗಂಧೋದಕಲಶಂಗಳೊಳವೆಸೆವ ಮಜ್ಜನ ಪ್ರದೇಶಕ್ಕೆ ಮಜ್ಜನೋಪಕರಣ ಸಂಪಾದನವ್ಯಗ್ರಪರಿಜನಂಬೆರಸು ಬಂದು ನೀರ್ದೋಣಿ ಯೊಳೋಲಾಡಿ ಮಜ್ಜನಪೀಠಮನಲಂಕರಿಸಿದಾಗಳ್

ಬಿಗಿದೊಗೆದೊಪ್ಪಿ ತೋರ್ಪ ಕುಚಮಂಡಳಮಂ ರುಚಿರಾಂಚಲಂಗಳಿಂ
ಬಿಗಿದಮರ್ವಂತಿಱುಂಕಿ ನಿಱಯಂ ಲುಳಿತಾಳಕಜಾಳಮಂ ತೊಡಂ
ಕೆಗೆ ತೆಗೆದೇಱಿನೂಂಕಿ ಮಣಿಕಂಕಣಮಂ ಕಳಶೋತ್ಕರಂಗಳಂ
ತೆಗೆದಭಿಷೇಕದೇವತೆಯರಂದದಿನೊಪ್ಪಿದರಂದು ಕಾಂತೆಯರ್ ೭೧

ಕಲಶಮನಾಗಳ್ ನಿಜಕುಚ
ಕಲಶದ ಮೇಲಿಟ್ಟು ನೃಪನ ಕೆಲದೊಳ್ ಕೆಲಬರ್
ಕಲಶಸ್ತನೆಯರ್ ನಿಜಕುಚ
ಕಲಶದ ಚೆಲ್ವಿಂಗೆ ಕಲಶವಿಟ್ಟಂತಿರ್ದರ್ ೭೨

ನಳಿನದಳಪುಟದೆ ನೀರಂ
ನಳಿನಿಗಳಿವು ರೂಪುಗೊಂಡು ಸುರಿದಪುವೆನೆ ಕಂ
ಗೊಳಿಪ ಮರಕತದ ಕಳಶಂ
ಗಳಜಲಮಂ ಸುರಿದರಮಳ ಕಮಳಾನನೆಯರ್ ೭೩

ಪರಿಮಳದ ಆಸೆಯಿಂದ ಬಂದು ಮುತ್ತಿಕೊಂಡಿರುವ ಮರಿದುಂಬಿಗಳ ಸಮೂಹದಿಂದ ಕಪ್ಪುಬಟ್ಟೆಯ ಮುಸುಕನ್ನು ಹಾಕಿರುವಂತೆ ಶೋಭಿಸುವ ಸ್ನಾನದ ಮನೆಗೆ ಸ್ನಾನಕ್ಕೆ ಬೇಕಾದ ಸಲಕರಣೆಗಳನ್ನು ಅಣಿಮಾಡುವುದರಲ್ಲಿ ಗಡಿಬಿಡಿಗೊಂಡ ಪರಿವಾರದ ಜನ ರಿಂದ ಕೂಡಿಕೊಂಡು ಬಂದು ನೀರಿನ ಕೊಪ್ಪರಿಗೆಯಲ್ಲಿ ಮುಳುಗಾಡಿ, ಬಳಿಕ ಸ್ನಾನ ಪೀಠದ ಮೇಲೆ ಕುಳಿತುಕೊಂಡಾಗ, ೭೧. ಎದ್ದು ಕಾಣುತ್ತಿರುವ ಸ್ತನಗಳನ್ನು ಸುಂದರ ವಾದ ಸೀರೆಯ ಸೆರಗಿನಿಂದ ಬಿಗಿದು ಕಟ್ಟಿ, ನಿರಿಗೆಯನ್ನು ಹೊಂದಿಕೊಳ್ಳುವಂತೆ ಸಂಕೋಚ ಮಾಡಿಕೊಂಡು, ಕೆದರಿರುವ ಮುಂಗುರುಳುಗಳನ್ನು ಕಿವಿಯ ಮೇಲಕ್ಕೆ ಸರಿಸಿ ಕೊಂಡು, ರನ್ನಗಡಗವನ್ನು ಮೇಲಕ್ಕೆ ನೂಕಿಕೊಂಡ ಹೆಂಗಸರು ಅಭಿಷೇಕ ದೇವತೆಗಳಂತೆ ಶೋಭಿಸುತ್ತಿದ್ದರು. ೭೨. ಕೊಡದಷ್ಟು ದಪ್ಪವಾದ ಕುಚಗಳುಳ್ಳ ಕೆಲವು ರಮಣಿ ಯರು ಕೊಡಗಳನ್ನು ತಮ್ಮ ಕೊಡದಂತಿರುವ ಮೊಲೆಗಳ ಮೇಲೆ ಇಟ್ಟುಕೊಂಡು ತಮ್ಮ ಸ್ತನಗಳ ಸೌಂದರ್ಯಕ್ಕೆ ಕಲಶವಿಟ್ಟಂತೆ ದೊರೆಯ ಸಮೀಪದಲ್ಲಿ ಮೆರೆಯುತ್ತಿ ದ್ದರು. ೭೩. ತಾವರೆಬಳ್ಳಿಗಳು ಸ್ತ್ರೀರೂಪವನ್ನು ತಾಳಿ ತಾವರೆಯೆಲೆಯ ದೊನ್ನೆ ಯಲ್ಲಿ ನೀರನ್ನು ಸುರಿಸುತ್ತಿವೆಯೊ ಎಂಬಂತೆ ನಿರ್ಮಲವಾದ ಕಮಲದಂತೆ ಮುಖವುಳ್ಳ

ರಜನಿಗಳ್ಶೈಂದವಬಿಂಬ
ವ್ರಜದಿಂ ಜ್ಯೋತ್ಸ್ನಾಪ್ರವಾಹಮಂ ಪಸರಿಪವೋಲ್
ರಜತಕಲಶಂಗಳಿಂ ಮಳ
ಯಜಜಳಮಂ ಸುರಿದರಸಿತನಳಿನೇಕ್ಷಣೆಯರ್ ೬೪

ಸುರುಚಿರಶಾತ ಕುಂಭಕಲಶಂಗಳ ಮಂಗಳಪಲ್ಲವಂಗಳಂ
ತಿರೆ ಕರಪಲ್ಲವಂ ನಖನಿಕಾಯದಿನುಣ್ಮುವ ಕಾಂತಿಜಾಳಮಂ
ಜರಿ ಲುಲಿತಾಂಗುಳಿಪ್ರಕರದಿಂ ಪೊಱಪೊಣ್ಮುವ ವಾರಿಧಾರೆಯಂ
ತಿರೆ ಜಲಯಂತ್ರದೇವತೆಯರಂದದಿನೊಪ್ಪಿದರಂದು ಕಾಂತೆಯರ್ ೬೫

ಕಳಶಮನೆತ್ತಿ ಬಟಲ್ವಾ
ಗಳಂತೆ ಸರ್ವಾಂಗದಿಂದೆ ಪೊಣ್ಮೆ ಬೆಮರ್ ಕೋ
ಮಳೆಯರ್ ಜಳದೇವತೆಯರ
ವಿಳಾಸಮಂ ತಳೆದು ಸುರಭಿಜಳಮಂ ಸುರಿದರ್ ೬೬

ಉದಯಂಗೆಯ್ವಿನಬಿಂಬದಿ
ನುದಯಿಸುವೆಳೆವಿಸಿಲಿದೆಂಬಿನಂ ಮಣಿಮಯಕುಂ
ಭದಿನಂದು ಪೊಯ್ದೊರ್ವಳ್
ವಿದಳಿತ ಪಂಕರುಹವದನೆ ಕುಂಕುಮಜಳಮಂ ೬೭

ರಮಣಿಯರು ಕಂಗೊಳಿಸುವ ಪಚ್ಚೆಯ ಕೊಡಗಳಿಂದ ನೀರನ್ನು ಎರೆದರು. ೬೪. ಕನ್ನೈದಿಲೆಯಂತೆ ಕಣ್ಣುಳ್ಳ ಆ ಸುಂದರಿಯರು ರಾತ್ರಿಗಳು ಚಂದ್ರಬಿಂಬಗಳ ಸಮೂಹದಿಂದ ಬೆಳದಿಂಗಳಿನ ಪ್ರವಾಹವನ್ನು ಸುರಿಸುತ್ತಿವೆಯೋ ಎಂಬಂತೆ ಬೆಳ್ಳಿಯ ಕೊಡಗಳಿಂದ ಗಂಧೋದಕವನ್ನು ಸುರಿದರು. ೬೫. ಹೀಗೆ ನೀರನ್ನು ಎರೆಯುತ್ತಿದ್ದ ಆ ಸುಂದರಿಯರ ಚಿಗುರಿನಂತೆ ಮೃದುವಾದ ಕೈಗಳು ಅಲ್ಲಿಟ್ಟಿರುವ ರಮಣೀಯವಾದ ಚಿನ್ನದ ಕೊಡಗಳ ಮೇಲೆ ಮಂಗಳಾರ್ಥವಾಗಿ ಇರಿಸಿರುವ ಮಾವು ಮೊದಲಾದ ಮರಗಳ ಚಿಗುರುಗಳಂತೆ ಕಾಣುತ್ತಿದ್ದುವು. ಉಗುರುಗಳಿಂದ ಹೊರಹೊಮ್ಮುವ ಗೊಂಚಲಿನಂತಿರುವ ಕಾಂತಿಗಳ ಸಮೂಹವು ಅಮುಕಲ್ಪಟ್ಟ ಬೆರಳುಗಳಿಂದ ಹೊರಡುತ್ತಿರುವ ಜಲಧಾರೆಯಂತೆ ತೋರುತ್ತಿತ್ತು. ಹೀಗಿರಲು ಆ ಸುಂದರಿಯರು ಜಲಯಂತ್ರದೇವತೆಗಳಂತೆ ಕಾಣುತ್ತಿದ್ದರು. ೬೬. ಹೀಗೆ ಜಲದೇವತೆಯರ ಬೆಡಗನ್ನು ಹೊಂದಿರುವ ಆ ಕೋಮಲೆಯರು ಕೊಡಗಳನ್ನು ಎತ್ತಿ ಬಳಲಿಕೆಯಿಂದ ಅವರ ಸರ್ವಾಂಗಗಳಿಂದ ಬೆವರು ಸುರಿಯುತ್ತಿರಲಾಗಿ ಪರಿಮಳದ ನೀರನ್ನು ಮಹಾರಾಜನಿಗೆ ಎರೆಯುತ್ತಿದ್ದರು. ೬೭. ಅರಳಿದ ತಾವರೆಯಂತೆ ಮುಖವುಳ್ಳವಳೊಬ್ಬಳು ಉದಯಿಸುತ್ತಿರುವ ಸೂರ್ಯಬಿಂಬದಿಂದ ಹುಟ್ಟುವ ಎಳೆಬಿಸಿಲೆಂಬಂತೆ ರತ್ನಕುಂಭದಿಂದ ಕುಂಕುಮೋದಕವನ್ನು

ವ॥ ಅಂತು ಮಜ್ಜನಾನಂತರದೊಳ್

ತರುಣೋರಗ ನವನಿರ್ಮೋ
ಕರುಚಿರಮೆನಿಸಿರ್ದ ಧೌತಧವಳಾಂಬರದಿಂ
ಕರಮೆಸೆದನಭ್ರಗಂಗಾ
ಪರಿವೃತ ಹಿಮವನ್ನಗೇಂದ್ರದಂತೆ ನರೇಂದ್ರಂ ೦೮

ವ॥ ಅನಂತರಂ [ಸಂಪಾದಿತ] ಪಿತೃತರ್ಪಣನುಮಭಿವಂದಿತ ಸಹಸ್ರಕಿರಣನು ಮಭ್ಯರ್ಚಿತ ಭಗವದ್ಭವಾನೀವಲ್ಲಭ ಚರಣಕಮಳನುಮುಪಚರಿತ ಲೇಪನಾಲಂಕಾರನು ಮಾಚರಿತಭ್ಯವಹಾರನುಮುದ್ಗ್ರಹೀತ ತಾಂಬೂಲಕರಂಕವಾಹಿನೀಸ್ಕಂಧವಿನ್ಯಸ್ತಹಸ್ತನುಮಾಗಿ ಕತಿಪಯ ಪದಂಗಳಂ ನಡೆದಿದಿರೊಳ್ ಪೊಳೆವ ಪಳುಕಿನ ಭಿತ್ತಿಯಂತೆ ಸುತ್ತಿದ ನೇತ್ರ ದುಕೂಲದೊಳಂ ಕಸ್ತೂರಿಯ ಕಂಪಿನಿಂ ಪೊರೆದ ಚಂದನದಣ್ಪಿಂ ಕುಳಿರ್ವ ಮಣಿಕುಟ್ಟಿಮ -ತಳದೊಳಂ ಗಗನತಳದೊಳ್ ಪೊಳೆವ ತಾರಾವಳಿಯಂತೆ ನೀಲದ ನೆಲಗಟ್ಟಿನೊಳ್ ಪೊರೆದ ಪೂವಲಿಯೊಳಂ ಗೃಹದೇವತೆಯರ್ ಸಂನಿದವಾದರೆನಿಸಿ ರಂಜಿಸುವ ಮಣಿಮಯ ಸಾಲಭಂಜಿಕೆಗಳೊಳಂ ಸುಗಂಧಜಲದೊಳ್ ತೊಳೆಯೆ ಕಂಪುವೆತ್ತು ಪೊಳೆವ ಪಳುಕಿನ ಕಂಬಂ ಗಳೊಳಂ ಮಂದೈಸಿ ನೆಗೆವಗರುಧೂಪಧೂಮದೊಳಮೆಸೆವಾಸ್ಥಾನಮಂಟಪದೊಳ್ ಸಮು ಚಿತಾಮಾತ್ಯರಾಜಪುತ್ರಮಿತ್ರ ಸಮನ್ವಿತಂ ಬಂದು ಪುಗುವಲ್ಲಿ

ಎರೆದಳು. ವ॥ ಹೀಗೆ ಸ್ನಾನವಾದ ಮೇಲೆ, ೦೮. ರಾಜನು ಪ್ರಾಯಕ್ಕೆ ಬಂದ ಹಾವಿನ ಪೊರೆಯಂತೆ ರಮ್ಯವಾದ ಒಗೆದ ಬಿಳಿಯ ಬಟ್ಟೆಯನ್ನು ಧರಿಸಿದನು. ಆಗ ಅವನು ಆಕಾಶಗಂಗಾನದಿಯಿಂದ ಸುತ್ತುವರಿಯಲ್ಪಟ್ಟ ಹಿಮಾಲಯಪರ್ವತದಂತೆ ಶೋಭಿಸಿ ದನು. ವ॥ ಬಳಿಕ ಅವನು ಪಿತೃಗಳಿಗೆ ತರ್ಪಣವನ್ನು ಕೊಟ್ಟು ಸೂರ್ಯನನ್ನು ವಂದಿಸಿ ಪಾರ್ವತೀಪತಿಯಾದ ಪರಮೇಶ್ವರನ ಪಾದಕಮಲಗಳನ್ನು ಪೂಜಿಸಿದನು. ಶಿವಪೂಜೆ ಯನ್ನು ಮುಗಿಸಿ ಶರೀರವನ್ನು ಶ್ರೀಗಂಧಲೇಪನದಿಂದ ಸಿಂಗರಿಸಿಕೊಂಡನು. ಬಳಿಕ ಊಟವನ್ನು ಮಾಡಿ ತಾಂಬೂಲವನ್ನು ಸೇವಿಸಿ ಹಡಪವಳಿತಿಯ (ತಾಂಬೂಲದ ತಟ್ಟೆ ಯನ್ನು ಹಿಡಿಯುವವಳ) ಹೆಗಲ ಮೇಲೆ ಕೈಯಿರಿಸಿಕೊಂಡು ಕೆಲವು ಹೆಜ್ಜೆಗಳನ್ನು ನಡೆದು ಮುಂದುಗಡೆ ಹೊಳೆಯುತ್ತಿರುವ ಸ್ಫಟಿಕದ ಗೋಡೆಯಂತೆ ಸುತ್ತಿರುವ ಸೂಕ್ಷ್ಮವಾದ ಪಟ್ಟೆವಸ್ತ್ರಗಳಿಂದಲೂ ಕಸ್ತೂರಿಯ ವಾಸನೆಯಿಂದ ಕೂಡಿಕೊಂಡಿರುವ ಶ್ರೀಗಂಧದ ಲೇಪನದಿಂದ ತಂಪಾಗಿರುವ ರತ್ನದ ನೆಲೆಗಟ್ಟುಗಳಿಂದಲೂ ಆಕಾಶದಲ್ಲಿ ಹೊಳೆಯುವ ನಕ್ಷತ್ರಗಡಣದಂತೆ ಇಂದ್ರನೀಲಮಣಿಯ ನೆಲೆಗಟ್ಟಿನಲ್ಲಿ ಚೆಲ್ಲಿರುವ ಹೂವುಗಳಿಂದಲೂ ಗೃಹದೇವತೆಗಳೇ ಸನ್ನಿಹಿತವಾದರೇನೋ ಎಂಬಂತೆ ಶೋಭಿಸುತ್ತಿರುವ ರತ್ನಮಯವಾದ ಪುತ್ಥಳಿಗಳಿಂದಲೂ ಗಂಧೋದಕದಿಂದ ತೊಳೆಯಲಾಗಿ ಸುವಾಸನೆಯನ್ನು ಹೊಂದಿ ಹೊಳೆಯುವ ಸ್ಫಟಿಕಶಿಲೆಯ ಕಂಭಗಳಿಂದಲೂ ದಟ್ಟವಾಗಿ ಮೇಲಕ್ಕೇಳುತ್ತಿರುವ ಅಗರು

ಬಳಸಿರ್ದಭ್ರಾಳಿಯಿಂದಂ ತುಹಿನಗಿರಿ ಶಿಲಾಪಟ್ಟವೆಂಬಂತೆ ಜೆಲ್ವಾ
ದ ಲತಾಂತಂ ತಳ್ತ ಶಯ್ಯಾಶ್ರಿತ ಸಿತ ಮೃದುಳ ಪ್ರಚ್ಛದಚ್ಛನ್ನ ಶಯ್ಯಾ
ತಲದೊಳ್ ಕಿಳ್ವಾಳವಳ್ ಮೆಲ್ಲನೆ ಕರತಳಪದ್ಮಂಗಳಿಂ ಪಾದಪದ್ಮಂ
ಗಳನಂದೊತ್ತುತ್ತಿರಲ್ ಶೂದ್ರಕನೃಪತಿ ಸುಖಾಸೀನನಾಗಿರ್ದನಾಗಳ್ ೬೯

ವ॥ ಅನಂತರಮನತಿದೂರದೊಳಿರ್ದ ದೌವಾರಿಕೆಯುಂ ವೈಶಂಪಾಯನನೊಡಗೊಂಡು ಬರ್ಪುದೆಂದು ತದ್ವೃತ್ತಾಂತಾಕರ್ಣನ ಕೌತುಕದಿಂ ಬೆಸಸೆ

ಪಡಿಯರತಿ ವಿನಯವಿನಮಿತೆ
ಪೊಡೆವಟ್ಟಾಕ್ಷಣದೊಳಂತೆ ಮುದದಿಂದಂ ಕ
ನ್ನಡವಕ್ಕಿಯ ಪಂಜರಮಂ
ತಡೆಯದೆ ತಂದವನಿಪತಿಯ ಮುಂದಿಟಿಪುವುದುಂ ೭೦

ಕುಂಚಿತ ಪೂರ್ವಕಾಯನುಪಜಾತಜರಾ ಧವಳೋತ್ತಮಾಂಗನೆಂ
ಗಾಂಚಿತ ಕಂಚುಕಂ ವಿಹಗಜಾತಿಯ ಕೂರ್ಮೆಯಿನೆಯ್ದೆವರ್ಪ ಮು
ತ್ತಂಚೆಯಿದೆಂಬಿನಂ ಗಿಳಿಯ ಬೆನ್ನನೆ ಮೆಲ್ಲನೆ ಗದ್ಗದಸ್ವನಂ
ಕಂಚುಕಿ ಬಂದುಕಂಡನನುರಾಗದಿನಾ ಮನುಜೇಂದ್ರಚಂದ್ರನಂ ೭೧

ಧೂಪದ ಹೊಗೆಯಿಂದಲೂ ಶೋಭಿಸುತ್ತಿರುವ ಆಸ್ಥಾನಮಂಟಪದಲ್ಲಿ ತನ್ನ ಜೊತೆಗೆ ತಕ್ಕವರೆನಿಸಿದ ಅರಸುಮಕ್ಕಳುಗಳಿಂದಲೂ ಗೆಳೆಯರಿಂದಲೂ ಕೂಡಿಕೊಂಡವನಾಗಿ ಬಂದು ಪ್ರವೇಶಿಸಿ ೬೯. ಮೇಘಗಳ ಗುಂಪಿನಿಂದ ಸುತ್ತುವರಿಯಲ್ಪಟ್ಟಿರುವ ಹಿಮವತ್ಪರ್ವತದ ಹಾಸುಗಲ್ಲಿನಂತೆ ಶೋಭಿಸುವ, ಹೂವುಗಳಿಂದ ಕೂಡಿಕೊಂಡಿರುವ ಬಿಳುಪಾದ ಮತ್ತು ಮೃದುವಾದ ಹೊದಿಕೆಯಿಂದ ಆವೃತವಾದ ಹಾಸಿಗೆಯಲ್ಲಿ (ಅಂಗರಕ್ಷಕಳಾದ) ಬಿಚ್ಚುಕತ್ತಿಯುವಳು ಕರಕಮಲಗಳಿಂದ ಅಡಿದಾವರೆಗಳನ್ನು ಒತ್ತುತ್ತಿರಲು ಶೂದ್ರಕಮಹಾರಾಜನು ಸುಖಾಸೀನನಾಗಿದ್ದನು. ವ॥ ಬಳಿಕ ವೈಶಂಪಾಯನನ ವೃತ್ತಾಂತವನ್ನು ಕೇಳಬೇಕೆಂಬ ಕುತೂಹಲದಿಂದ ಹತ್ತಿರದಲ್ಲಿದ್ದ ದ್ವಾರಪಾಲೆಯುನ್ನು ಕುರಿತು ವೈಶಂಪಾಯನನನ್ನು ತೆಗೆದುಕೊಂಡು ಬರಬೇಕೆಂದು ಅಪ್ಪಣೆ ಮಾಡಲಾಗಿ ೭೦. ಆ ದ್ವಾರಪಾಲೆಯು ವಿನಯದಿಂದ ತಲೆಬಾಗಿ ಕೂಡಲೇ ಹೊರಟು ಸಂತೋಷದಿಂದ ಗಿಳಿಯಪಂಜರವನ್ನು ವಿಳಂಬ ಮಾಡದೆ ತಂದು ರಾಜನ ಮುಂದೆ ಇಡಲಾಗಿ ೭೧. ಅದರ ಹಿಂದೆಯೇ ಮುದಿತನದಿಂದ ಬಾಗಿದ ಸೊಂಟದ ಮೇಲು ಭಾಗವುಳ್ಳ, ಮುಪ್ಪಿನಿಂದ ಬೆಳ್ಳಗಾಗಿರುವ ತಲೆಗೂದಲುಳ್ಳ, ನಿಲುವಂಗಿಯನ್ನು ತೊಟ್ಟುಕೊಂಡಿರುವ, ಹಕ್ಕಿಯ ಜಾತಿಯ ಮೇಲಿರುವ ಮಮತೆಯಿಂದ ಹಿಂಬಾಲಿಸುತ್ತಿರುವ ಮುದಿಹಂಸವೋ ಎಂಬಂತಿರುವ ಗಡರುಧ್ವನಿಯಿಂದ ಕೂಡಿರುವ ಕಂಚುಕಿಯೊಬ್ಬನು ಗಿಳಿಯ ಹಿಂದೆಯೇ

ವ॥ ಅಂತು ಕಂಡವನಿತಳಕ್ಕೆ ಕರತಳಮನಿಕ್ಕಿ ಪೊಡಮಟ್ಟು ದೇವ! ಬಿನ್ನಪಂ ದೇವಿಯರ್ ದೇವರಾಣತಿಯಿಂ ಕೃತಸ್ನಾನನುಮುಪರಚಿತಾಹಾರನುಮಾದೀ ವೈಶಂಪಾಯನನಂ ದೇವರಡಿಯೆಡೆಗೆ ದೌವಾರಿಕೆಯೊಡನೆ ಕಳುಪಿದೆವೆಂದು ಬಿನ್ನವಿಸಿದರೆನೆ ವೈಶಂಪಾಯನನಂ ನರೇಂದ್ರನಿಂತೆಂದಂ

ಏನೇನಭಿಮತಮಂ ಪೇಟ್
ನೀನಾಸ್ವಾದಿಸಿದೆ ದೇವಿಯರ ಮನೆಯೊಳೆನ
ಲ್ಕೇನೇನಭಿಮತಮಂ ಕೇ
ಳಾನಾಸ್ವಾದಿಸಿದೆನಿಲ್ಲ ನೃಪಕುಲತಿಲಕಾ ೭೨

ಕಳಕಂಠಲೋಚನಚ್ಛವಿ
ಳಾಸಮಂ ತಳೆದ ನೀಲಪಾಟಳ ಜಂಬೂ
ಫಳ ಮಧುರರಸಮನೀಂಟಿದೆ
ನಿಳೇಶ ಪಿರಿದಟ್ಟಿಯಿಂ ಮನಂ ತಣಿವಿನೆಗಂ ೭೩

ಹರಿವಿದಳಿತ ಮದಗಜಕುಂ
ಭರಕ್ತಸಿಕ್ತಾರ್ದ್ರಮೌಕ್ತಿಕಪ್ರಕರದವೋಲ್
ಕರಮೆಸೆವ ದಾಡಿಮೀಬೀ
ಜರಾಜಿಯಿಂ ತೆಗೆದು ರಸವನಾಸ್ವಾದಿಸಿದೆಂ ೭೪

ಬಂದು ಆ ರಾಜನನ್ನು ಭಕ್ತಿಯಿಂದ ಕಂಡನು. ವ॥ ಹಾಗೆ ಕಂಡು ನೆಲಕ್ಕೆ ಕೈಯನ್ನು ಮುಟ್ಟಿಸಿ ನಮಸ್ಕರಿಸಿ, "ಅರಿಕೆ ಜೀಯಾ! ಮಹಾಸ್ವಾಮಿಯವರ ಅಪ್ಪಣೆಯಂತೆ ಈ ವೈಶಂಪಾಯನನನ್ನು ಸ್ನಾನಮಾಡಿಸಿ ಊಟಮಾಡಿಸಿ ಮಹಾಸ್ವಾಮಿಯವರ ಸನ್ನಿಧಾನಕ್ಕೆ ಪಡಿಯರತಿಯೊಂದಿಗೆ ಕಳುಹಿಸಿಕೊಟ್ಟಿದ್ದೇವೆ ಎಂದು ಮಹಾರಾಣಿಯವರು ಅರಿಕೆ ಮಾಡುತ್ತಾರೆ" ಎಂದು ಬಿನ್ನೈಸಿಕೊಳ್ಳಲು, ಮಹಾರಾಜನು ವೈಶಂಪಾಯನನನ್ನು ಕುರಿತು ಹೀಗೆ ಹೇಳಿದನು. ೭೨. "ಮಹಾರಾಣಿಯವರ ಅಂತಃಪುರದಲ್ಲಿ ಬೇಕುಬೇಕಾದ ಏನೇನನ್ನು ತಿಂದೆ?" ಎಂದು ಪ್ರಶ್ನಿಸಲು ವೈಶಂಪಾಯನನು "ಎಲೈ ರಾಜಾಧಿರಾಜನೇ, ನನಗೆ ಬೇಕಾದ ಏನನ್ನು ತಾನೆ ನಾನು ಅಲ್ಲಿ ಸವಿಯಲಿಲ್ಲ! ೭೩. ಕೋಕಿಲೆಯ ಕಣ್ಣಿನಂತೆ ಕಾಂತಿಯ ಬೆಡಗನ್ನು ಹೊಂದಿರುವ ನೀಲಿ ಮತ್ತು ಪಾಟಳ ಬಣ್ಣದಿಂದ ಕೂಡಿರುವ ನೇರಳೆಹಣ್ಣಿನ ಸಿಹಿಯಾದ ರಸವನ್ನು ಬಹಳ ಇಷ್ಟದಿಂದ ಮನಸ್ಸು ತಣಿಯುವವರೆಗೂ ಕುಡಿದು ಬಂದೆ. ೭೪. ಸಿಂಹದಿಂದ ಸೀಳಲ್ಪಟ್ಟ ಮದ್ದಾನೆಯ ಕುಂಭಸ್ಥಳದ ನೆತ್ತರಿನಿಂದ ತೊಯ್ದು, ಒದ್ದೆಯಾದ ಮುತ್ತಿನ ರಾಶಿಯಂತೆ ರಂಜಿಸುವ ದಾಳಿಂಬೆಬೀಜಗಳ

ಆದತ್ತಾಮಳಕಫಳಾ
ಸ್ವಾದನೆಯಿಂ ತೃಪ್ತದೇವ ಗಟಪುತ್ತಿರಲೇಂ
ಆದತ್ತಮೃತಂ ದೇವಿಯ
ರಾದರದಿಂ ತಮ್ಮ ಕಯ್ಯೊಳೂಡಿದರೆನ್ನಂ ೭೫

ವ॥ ಅಂತು ನುಡಿದ ವೈಶಂಪಾಯನನಂ ನರೇಂದ್ರನಿಂತೆಂದಂ
ಎಂತೆಂತು ನುಡಿಯೆ ವಿಸ್ಮಯ
ವಂತಂತೊದವಿಪ್ಪುದು ಚಿತ್ತದೊಳ್ ಕೇಳಿದನ
ತ್ಯಂತಂ ನಿನ್ನಯ ನಿಜವೃ
ತ್ತಾಂತಮನೆನಗಱಿಯೆ ಪೇೞ್ವುದತಿಕೌತುಕಮಂ ೭೬

ನಿನ್ನಯ ದೇಶಮೆತ್ತಣದು ಪುಟ್ಟಿದೆಯೆಂತಭಿಧಾನಮಾವನಿಂ
ದಂ ನಿನಗಾಯ್ತು ವೇದನಿವಹಸ್ಮೃತಿ ಶಾಸ್ತ್ರಕಳಾಕಳಾಪ ಸಂ
ಪನ್ನತೆಯೆಂತು ಬಂದುದು ಭವಸ್ಮೃತಿ ಪುಟ್ಟಿತೊ ಮೇಣ್ ವರಪ್ರಸಾ
ದೋನ್ನತಿಯಾದುದೋ ಮಱಸಲೆಂದು ವಿಹಂಗಮವೇಷಿಯಾದೆಯೋ ೭೭

ದೊರೆಕೊಂಡೆಯೆಂತು ಮುಂ ಪಂ
ಜರಬಂಧನಮಾದುದೆಂತು ನಿನಗೀ ಚಂಡಾ
ಲರ ಸಂಗತಿಯೆಂತಿಲ್ಲಿಗೆ
ಬರವಾಯಿತ್ತೆಂತು ಪೇೞಿದೆಲ್ಲಮನೀಗಳ್ ೭೮

ರಾಣಿಯಿಂದ ರಸವನ್ನು ಸವಿದು ಬಂದಿದ್ದೇನೆ. ೭೫. ಅವರು ಕೊಟ್ಟ ನೆಲ್ಲಿಕಾಯಿಗಳನ್ನು ತಿಂದು ತೇಗಿದ್ದೇನೆ. ಹೆಚ್ಚು ಮಾತು ಏತಕ್ಕೆ ? ಮಹಾರಾಣಿಯರು ಆದರದಿಂದ ತಮ್ಮ ಕೈಯಿಂದಲೇ ನನಗೆ ಊಟ ಮಾಡಿಸಿದ್ದಾರೆ. ಎಲ್ಲವೂ ಅಮೃತದಂತಿತ್ತು, ಮಹಾಪ್ರಭು." ವ॥ ಹೀಗೆ ಹೇಳುತ್ತಿರುವಾಗ ವೈಶಂಪಾಯನನನ್ನು ಕುರಿತು ಶೂದ್ರಕ ಮಹಾರಾಜನು ಹೀಗೆ ಹೇಳಿದನು. ೭೬. "ನೀನು ಹೇಗೆ ಹೇಗೆ ಮಾತನಾಡುತ್ತೀಯೋ ಹಾಗೆ ಹಾಗೆ ಕೇಳುವವರ ಮನಸ್ಸಿನಲ್ಲಿ ಬಹಳ ಸೋಜಿಗವುಂಟಾಗುತ್ತದೆ. ಅದ್ಭುತವಾದ ನಿನ್ನ ವೃತ್ತಾಂತವನ್ನು ನನಗೆ ತಿಳಿಯಪಡಿಸು ೭೭. ನಿನ್ನ ದೇಶವು ಯಾವುದು ? ಹೇಗೆ ಹುಟ್ಟಿದೆ ? ಯಾರು ನಿನಗೆ ನಾಮಕರಣ ಮಾಡಿದರು ? ವೇದ, ಸ್ಮೃತಿ, ಶಾಸ್ತ್ರ, ಕಲೆ ಇವುಗಳಲ್ಲಿ ಸಂಪೂರ್ಣ ವಿದ್ವತ್ತು ನಿನಗೆ ಹೇಗೆ ಬಂತು ? ಏನಾದರೂ ಜನ್ಮಾಂತರ ಸಂಸ್ಕಾರವೊ ಅಥವಾ ವರಪ್ರಸಾದದ ಮಹಿಮೆಯೊ ? ನಿಜಸ್ವರೂಪವನ್ನು ಮುಚ್ಚಬೇಕೆಂದು ಈ ಪಕ್ಕಿಯ ರೂಪವನ್ನು ತಾಳಿದ್ದೀಯೊ ? ೭೮. ನೀನು ಮೊದಲು ಹೇಗೆ ಸಿಕ್ಕಿಬಿದ್ದೆ ? ಹೇಗೆ ಪಂಜರಬಂಧನವಾಯಿತು ? ಈ ಚಾಂಡಾಲರ ಸಹವಾಸ ನಿನಗೆ ಹೇಗೆ ಗಂಟು ಬಿತ್ತು ? ಇಲ್ಲಿಗೆ ಹೇಗೆ ಬಂದೆ ? ಇದೆಲ್ಲವನ್ನೂ ಈಗ ವಿವರಿಸಪ್ಪ"

ತನ್ನಯ ಚಿತ್ತದೊಳ್ ಪಿರಿದು ಕೌತುಕಮಾಗಲು ತನ್ನನಟ್ಕಱಿಂ
ಮನ್ನಿಸಿ ಭೂಭುಜಂ ಬೆಸಗೊಳಲ್ ನಿಜವೃತ್ತಮನೆಲ್ಲವಂ ಕ್ಷಣಂ
ತನ್ನೊಳೆ ತಾನೆ ಭಾವಿಸುತುಮಿರ್ದ ಶುಕಂ ನುಡಿಗುಂ ನರೇಂದ್ರ ಕೇಳ್
ನಿನ್ನ ಮನಕ್ಕೆ ಕೌತುಕಮಿದಪ್ಪೊಡೆ ಪೇೞ್ವೆನೆ ತತ್ಪ್ರಪಂಚಮಂ ೭೯

ವ॥ ಎಂದು ವೈಶಂಪಾಭಿಧಾನ ಶುಕಂ ಪೇೞಲ್ತಗುಟ್ಟುದದೆಂತೆನೆ

ಭುವನಪ್ರಸ್ತುತ್ಯ ವಸ್ತುಪ್ರಕರದ ಪುದುವಿಂ ಮಧ್ಯದೇಶಕ್ಕಳಂಕಾ
ರವೆನಲ್ ಚೆಲ್ವಾಗಿ ಭೂದೇವಿಯ ರುಚಿರಕಟೀಸೂತ್ರವೋ ಪೇೞ್ವೆಂಬಂ
ತವೊಲೊಪ್ಪಂಬೆತ್ತು ಪೂರ್ವಾಪರ ಜಳನಿಧಿ ವೇಳಾತರಂಗೋಚ್ಚಳದ್ರ
ತ್ನವಿನಿದ್ರ ಪ್ರಾಂತದೇಶಂ ಸೊಗಯಿಪುದೆನಸುಂ ನೀಳ್ದ ವಿಂಧ್ಯಾಚಳೇಂದ್ರಂ ೮೦

ವ॥ ಅಂತಾ ವಿಂಧ್ಯಾಚಳದ ಪೇರಡವಿಯೊಳ್

ಪಳುವದ ಮದಕರಿಗಳ ಮದ
ಜಳದೊಳ್ ನಿಮಿರ್ದಿರ್ದ ಮರದ ತುದಿಗೊಂಬುಗಳೊಳ್
ಪೊಳೆವುವು ಸಿಲುಕದ ತಾರಾ
ವಳಿಗಳಿವೆನೆ ತೊಳಗಿ ಪೊಳೆವ ಕುಸುಮಾವಳಿಗಳ್ ೮೧

೭೯. ಮನಸ್ಸಿನಲ್ಲಿ ಬಹಳ ಆಶ್ಚರ್ಯವುಂಟಾಗಲು, ಮಹಾರಾಜನು ಈ ರೀತಿ ತನ್ನನ್ನು ಅಕ್ಕರೆಯಿಂದ ಮನ್ನಿಸಿ ಕೇಳುತ್ತಿರಲು, ಆ ಗಿಳಿಯು ತನ್ನ ಚರಿತ್ರೆಯೆಲ್ಲವನ್ನೂ ಮನಸ್ಸಿನಲ್ಲಿ ಸ್ವಲ್ಪ ಹೊತ್ತು ಜ್ಞಾಪಿಸಿಕೊಂಡು ಹೇಳುತ್ತದೆ. "ಮಹಾರಾಜನೆ, ಇದು ನಿನ್ನ ಮನಸ್ಸಿಗೆ ಕುತೂಹಲವನ್ನುಂಟುಮಾಡುವುದಾದರೆ ಎಲ್ಲವನ್ನೂ ವಿಸ್ತಾರವಾಗಿ ಹೇಳದೆ ಇರುವೆನೆ ?" ವ॥ ಹೀಗೆ ವೈಶಂಪಾಯನ ಗಿಳಿಯು ಹೇಳಲು ಪ್ರಾರಂಭಿಸಿತು. ಅದು ಹೇಗೆಂದರೆ—೮೦. ಮಧ್ಯದೇಶಕ್ಕೆ ಅಲಂಕಾರಪ್ರಾಯವಾಗಿರುವ, ಭೂದೇವಿಯ ಸುಂದರವಾದ ಒಡ್ಯಾಣವೋ ಎಂಬಂತೆ ಶೋಭಿಸುತ್ತಿರುವ, ನೀಳವಾದ ವಿಂಧ್ಯಪರ್ವತವು ಬಹಳ ಸೊಗಸನ್ನುಂಟುಮಾಡುತ್ತದೆ. ಅದು ಪ್ರಪಂಚದಲ್ಲೆಲ್ಲಾ ಅತ್ಯುತ್ತಮವಾದ ಪದಾರ್ಥಗಳಿಂದ ಕೂಡಿಕೊಂಡಿದೆ. ಅಲ್ಲದೆ ಪೂರ್ವಸಮುದ್ರತೀರದಿಂದ ಪಶ್ಚಿಮ ಸಮುದ್ರದ ತೀರದವರೆಗೂ ವ್ಯಾಪಿಸಿಕೊಂಡಿದೆ. ಅದರಿಂದಲೇ ಇದರ ತಪ್ಪಲುಪ್ರದೇಶಗಳು ಆ ಸಮುದ್ರ ತೀರದಲ್ಲಿ ಅಲೆಗಳಿಂದ ಮೇಲಕ್ಕೆ ಎರಚಲ್ಪಟ್ಟ ರತ್ನಗಳ ಗುಂಪಿನಿಂದ ತುಂಬಿಹೋಗಿದೆ. ವ॥ ಅಂತಹ ವಿಂಧ್ಯಪರ್ವತದ ದೊಡ್ಡ ಕಾಡಿನಲ್ಲಿ ೮೧. ಕಾಡಿನ ಮದ್ದಾನೆಗಳ ಮದೋದಕದಿಂದಲೇ ಬೆಳೆದು ನಿಂತಿರುವ ದೊಡ್ಡ ದೊಡ್ಡ ಮರಗಳಿವೆ. ಅಂತಹ ಮರಗಳ ತುದಿಗೊಂಬೆಗಳಲ್ಲಿ ಅರಳಿದ ಹೂವುಗಳಿವೆ. ಆ ಹೂವುಗಳು ಕೊಂಬೆಗಳ ಮಧ್ಯದಲ್ಲಿ ಸಿಕ್ಕಿಕೊಂಡಿರುವ ನಕ್ಷತ್ರಗಳ ಸಮೂಹವೋ ಎಂಬಂತೆ ಪ್ರಕಾಶಿಸುತ್ತವೆ.

ಕುರರಕುಲತುಂಡ ಖಂಡಿತ
ಮರಿಚಲತಾಪ್ರಚಯರುಚಿರನವಪಲ್ಲವದಿಂ
ಕರಿಕುಲಮೃದಿತ ತಮಾಲೋ
ತ್ಕರಕಿಸಲಯಸುರಭಿಗಂಧದಿಂ ಸೊಗಯಿಸುಗುಂ ೮೨

ಚರಿಯಿಪ ವನದೇವತೆಯರ
ಚರಣಾಲಕ್ತಕದೆ ಪೊರೆದುವೆನಿಪುವು ಮಧುವಿಂ
ಮರೆಸೊಕ್ಕಿನಾಳ್ದ ಕೀರಳಿ
ಯುರ ಕದಪಿನ ಬಣ್ಣಮಪ್ಪ ಚಂದಳಿರ್ದುರುಗಲ್ ೮೩

ವ॥ ಮತ್ತಮಲ್ಲಿ ಗಿಳಿಗಳ ಗೂಡಿಂದುದಿರ್ವ ದಾಳಿಂಬದ ಬಿತ್ತುಗಳಿನೊಸರ್ವ ತನಿರಸ ವಳಿಪದೊಳಮೆಲರಲಪದಿಂದುರುಳ್ದು ಪರೆದೆಸೆವ ಕುಸುಮರೇಣುಗಳೊಳಂ ಪಥಿಕಜನಂಗಳಿಂ ಪಸರಿಸಿದ ಲವಂಗ ಪಲ್ಲವದ ಪಾಸುಗಳೊಳಂ ಕುರವಕದ ವಕುಳದೆಳೆಗೌಂಗಿನ ಪೊಂಗೇದಗೆಯ ಬಳಸಿನೊಳಮೆಲೆವಳ್ಳಿಯ ತಳ್ಕಿನಿಂ ಮನಂಗೊಳಿಪ ಕವುಂಗಿನ ಮರಗಳೊಳಂ ಮನಂಗೊಳಿಸುವ ವನಲಕ್ಷ್ಮಿಯ ನಿವಾಸಭವನದಂತಿರ್ದ ಲತಾಮಂಡಪಂಗಳ್ ಮನಂಗೊಳಿಪುವಂತುಮಲ್ಲದೆಯುಂ

೮೨. ಆ ಪರ್ವತವು ಕುರರಪಕ್ಷಿಗಳ ಕೊಕ್ಕುಗಳಿಂದ ಮುರಿಯಲ್ಪಟ್ಟಿರುವ ಮೆಣಸಿನ ಬಳ್ಳಿಗಳ ರಮ್ಯವಾದ ಎಳೆಚಿಗುರುಗಳಿಂದಲೂ ಆನೆಗಳ ಸೊಂಡಲುಗಳಿಂದ ಹೊಸ ಕಲ್ಪಟ್ಟ ಹೊಂಗೆಯ ಮರಗಳ ಗುಂಪಿನ ಚಿಗುರುಗಳ ಸುವಾಸನೆಯಿಂದಲೂ ಮನೋಹರವಾಗಿದೆ. ೮೩. ಮಧುಪಾನದಿಂದ ಮದವೇರಿದ ಕೀರಳ ವನಿತೆಯರ ಕೆನ್ನೆಯ ಬಣ್ಣವನ್ನು ಹೊಂದಿರುವ ಕೆಂದಳಿರಿನ ಗೊಂಚಲು ಅಲ್ಲಿ ಸಂಚರಿಸುತ್ತಿರುವ ವನದೇವತೆಯರ ಕಾಲಿನ ಅರಗಿನ ರಸದಿಂದ ಲೇಪನ ಹೊಂದಿರುವಂತೆ ಕಾಣುತ್ತಿತ್ತು. ವ॥ ಮತ್ತು ಅಲ್ಲಿ ಗಿಳಿಗಳ ಗೂಡಿನಿಂದ ಉದುರುತ್ತಿರುವ ದಾಳಿಂಬೆಹಣ್ಣಿನ ಬೀಜಗಳಿಂದ ಜಿನುಗುತ್ತಿರುವ ಸಮೃದ್ಧಿಯಾದ ರಸದ ಸೇಚನೆಯಿಂದಲೂ, ಗಾಳಿಬೀಸುವುದರಿಂದ ಕೆಳಕ್ಕೆ ಉದುರಿ ಅಲ್ಲೆಲ್ಲಾ ಚೆದುರಿ ಶೋಭಿಸುವ ಹೂವಿನ ಧೂಳುಗಳಿಂದಲೂ, ಪ್ರಯಾಣಿಕರಿಂದ ವಿಶ್ರಮಿಸಿಕೊಳ್ಳಲು ನೆಲದ ಮೇಲೆ ಹರಡಿರುವ ಲವಂಗಗಿಡದ ಚಿಗುರುಗಳ ಹಾಸಿಗೆಯಿಂದಲೂ, ಕುರವಕ, ವಕುಳ, ಅಡಕೆಯ ಮರ, ಹೊಂಗೇದಗೆಮರ ಇವುಗಳ ಸುತ್ತುವರಿಯುವಿಕೆಯಿಂದಲೂ, ವೀಳೆಯದೆಲೆ ಬಳ್ಳಿಯ ತೆಕ್ಕೆಯಿಂದ ರಂಜಿಸುವ ಅಡಕೆಮರಗಳಿಂದಲೂ, ಚಿತ್ತಾಕರ್ಷಕವಾದ ವನಲಕ್ಷ್ಮಿಯ ವಾಸಭವನದಂತಿರುವ ಲತಾಮಂಟಪಗಳು ಮನಸ್ಸನ್ನು

ಮದವನ್ಮಾತಂಗಕಪೋ
ಲದಿನೊರೆದೊರತೆಯೊಳೆ ಬೆಳೆದುದೆಂಬಿನಮೆತ್ತಂ
ಮದಗಂಧಮೊದವೆ ಕತ್ತಲಿ
ಪುದು ಪುದಿದೇಲಾಲತಾವನಪ್ರೋದ್ಯಾನಂ ೮೪

ಗಗನತಳಂಬರಂ ನೆಗೆದು ಮತ್ತಗಜಂಗಳ ಮಸ್ತಕಕ್ಕೆ ಪಾ
ಯ್ದುಗಿಬಗಿ ಮಾಡುವಲ್ಲಿ ಪೊಳೆವಂಕುಶದಂತಿರೆ ಕೊಂಕುವೆತ್ತ ಕೂ
ರುಗುರ್ಗಳೊಳೆಯ್ದೆ ತೆತ್ತಿಸಿದ ಮುತ್ತಿನ ಲೋಭದೆ ಕೊಲ್ವರೆತ್ತಲುಂ
ಮೃಗಪತಿ ಯೂಥಮಂ ಪಲಬರಾ ಬನದೊಳ್ ಶಬರಾಧಿನಾಯಕರ್ ೮೫

ವ॥ ಮತ್ತಮದು ಸಮರಸಮುದ್ಯತನಂತೆ ವೇಣುಬಾಣಾಸನಾರೋಪಿತ ಶಿಳೀಮುಖಮುಂ ವಿವಿಕ್ತ ಸಿಂಹನಾದಮುಂ ಯಮಪುರದಂತೆ ಮೃತ್ಯುಭೀಷಣಮುಂ ಮಹಿಷಾಧಿಷ್ಠಿತಮುಂ ಕಾತ್ಯಾಯನೀಕಾಯದಂತೆ ವಿಚಳಿತ ಖಡ್ಗಭಯಂಕರಮುಂ ಅರುಣಚಂದನ

ಸೆಳೆಯುತ್ತವೆ. ಅಲ್ಲದೆ, ೮೪. ಮದ್ದಾನೆಗಳ ಕೆನ್ನೆಗಳಿಂದ ಜಿನುಗುವ (ಮದೋದಕದ) ಪ್ರವಾಹದಿಂದ ಬೆಳೆದಿವೆಯೋ ಎಂಬಂತೆ ಎಲ್ಲೆಲ್ಲೂ ಸುವಾಸನೆಯು ಹರಡುತ್ತಿರಲಾಗಿ ಅಲ್ಲೆಲ್ಲಾ ಹರಡಿರುವ ಏಲಕ್ಕಿಯ ವನಗಳಿಂದ ಕೂಡಿದ ದೊಡ್ಡ ಉಪವನದಂತಿರುವ ಆ ವಿಂಧ್ಯಕಾನನವು ಸೂರ್ಯರಶ್ಮಿಗೂ ಅವಕಾಶವನ್ನು ಕೊಡದೆ ಕತ್ತಲೆಯನ್ನುಂಟುಮಾಡಿದೆ. ೮೫. ಸಿಂಹಗಳು ಆಕಾಶಕ್ಕೆ ನೆಗೆದು ಕೊಬ್ಬಿದ ಆನೆಗಳ ತಲೆಯ ಮೇಲೆ ಹಾರಿ ಕುಳಿತು ಕುಂಭಸ್ಥಳವನ್ನು ಸೀಳುತ್ತವೆ. ಹಾಗೆ ಸೀಳುವಾಗ ಆ ಸಿಂಹಗಳ ಹೊಳೆಯುವ ಅಂಕುಶ ದಂತಿರುವ ಡೊಂಕಾದ ಹಾಗೂ ಚೂಪಾದ ಉಗುರುಗಳಲ್ಲಿ ಆನೆಯ ಕುಂಭಸ್ಥಳದಲ್ಲಿರುವ ಮುತ್ತುಗಳು ಸಿಕ್ಕಿಕೊಳ್ಳುತ್ತವೆ. ಆ ಮುತ್ತುಗಳ ಆಸೆಗಾಗಿ ಸಿಂಹಗಳನ್ನು ಆ ಕಾಡಿನ ಕೆಲವರು ಪ್ರಮುಖರಾದ ಬೇಡರು ಕೊಲ್ಲುತ್ತಾರೆ. ವ॥ ಮತ್ತು ಆ ಕಾಡು ಯುದ್ಧಕ್ಕೆ ಹೊರಟಿರುವ ಯೋಧನಂತೆ "ವೇಣುಬಾಣಾಸನಾರೋಪಿತ ಶಿಲೀಮುಖ"ವಾಗಿದ್ದಿತು. (೧. ಬಿದಿರು, ಗೋರಂಟೆ, ಸರ್ಜಕಮರಗಳಲ್ಲಿ ಕುಳಿತಿರುವ ದುಂಬಿಗಳುಳ್ಳದ್ದು. ೨. ಬಿದಿರಿನಿಂದ ಮಾಡಿದ ಬಿಲ್ಲಿನಲ್ಲಿ ಏರಿಸಲ್ಪಟ್ಟ ಬಾಣವುಳ್ಳವನು) ಮತ್ತು "ವಿಮುಕ್ತ ಸಿಂಹನಾದ" ವಾಗಿದ್ದಿತು. (೧. ಹೊರಸೂಸಿದ ಸಿಂಹಗಳ ಗರ್ಜನೆಯುಳ್ಳದ್ದು. ೨. ಮಾಡುತ್ತಿರುವ ಸಿಂಹಗರ್ಜನೆಯುಂದದ ಧ್ವನಿಯುಳ್ಳವನು.) ಯಮಪಟ್ಟಣದಂತೆ "ಮೃತ್ಯುಭೀಷಣ" ವಾಗಿದ್ದಿತು. (೧. ಮರಣವನ್ನುಂಟುಮಾಡುವುದರಿಂದ ಭಯಂಕರ. ೨. ಮೃತ್ಯುದೇವತೆಯ ವಾಸಸ್ಥಾನವಾದ್ದರಿಂದ ಭಯಂಕರ.) ಅಲ್ಲದೆ "ಮಹಿಷಾಧಿಷ್ಠಿತ"ವಾಗಿದ್ದಿತು. (೧. ಕಾಡುಕೋಣಗಳಿಗೆ ವಾಸಸ್ಥಳ. ೨. ಯಮವಾಹನವಾದ ಕೋಣನಿಗೆ ವಾಸಸ್ಥಳ)

**ಪಲ್ಲವಾಳಂಕೃತಮುಂ ಸಂಧ್ಯಾಕಾಲದಂತೆ ನೃತ್ಯನ್ನೀಲಕಂಠಮುಂ ಪಲ್ಲವಾರುಣಿತಮುಂ ಸಾಮ್ರಾಜ್ಯವಿಭವದಂತೆ ಚಮರೀವಾಲವ್ಯಜನೋಪಶೋಭಿತಮುಂ ಗಜಘಟಾಪರಿಪಾಲಿತಮುಂ ಕಾಮಿನೀಜನದಂತೆ ಮೃಗಮದ ಪರಿಮಳಾಮೋದಿತಮುಂ ಕೃಷ್ಣಾಗರುತಿಳಕಭೂಷಿತಮುಂ ವಿರಹಿಜನದಂತೆ ವಿವಿಧಪಲ್ಲವಾನಿಲವೀಜ್ಯಮಾನಮುಂ ಮದನಾಕ್ರಾಂತಮುಂ ಬಾಲಗಳದಂತೆ**

ಚಂಡಿಕಾಪರಮೇಶ್ವರಿಯ ಶರೀರದಂತೆ "ವಿಚಲಿತ ಖಡ್ಗಭಯಂಕರ"ವಾಗಿದ್ದಿತು. (೧. ಸಂಚರಿಸುತ್ತಿರುವ ಗೇಂಡಾಮೃಗಗಳಿಂದ ಭಯಂಕರ. ೨. ಝಳಪಿಸುತ್ತಿರುವ ಕತ್ತಿಯಿಂದ ಭಯಂಕರ. ಮತ್ತು "ಅರುಣಚಂದನಪಲ್ಲವಾಳಂಕೃತ"ವಾಗಿದ್ದಿತು (೧. ಕೆಂಪು ಗಂಧದ ಮರಗಳ ಚಿಗುರುಗಳಿಂದ ಶೋಭಿಸುವ ೨. ಶ್ರೀಗಂಧದ ಚಿಗುರನ್ನು ಕಿವಿಯಲ್ಲಿ ಮುಡಿದುಕೊಂಡಿರುವ) ಸಂಧ್ಯಾಕಾಲದಂತೆ "ನೃತ್ಯನ್ನೀಲಕಂಠ"ವಾಗಿದ್ದಿತು. (೧. ಕುಣಿಯುತ್ತಿರುವ ನವಿಲುಗಳುಳ್ಳದ್ದು. ೨. ನರ್ತಿಸುತ್ತಿರುವ ಪರಮೇಶ್ವರನುಳ್ಳದ್ದು.) ಮತ್ತು "ಪಲ್ಲವಾರುಣಿತ"ವಾಗಿದ್ದಿತು. (೧. ಚಿಗುರುಗಳಿಂದ ಕೆಂಬಣ್ಣವುಳ್ಳದ್ದಾಗಿದ್ದಿತು. ೨. ಚಿಗುರಿನಂತೆ ಕೆಂಬಣ್ಣವುಳ್ಳದ್ದಾಗಿದ್ದಿತು). ಚಕ್ರಾಧಿಪತ್ಯದ ವೈಭವದಂತೆ "ಚಮರೀವಾಲವ್ಯಜನೋಪಶೋಭಿತ"ವಾಗಿದ್ದಿತು. (೧. ಚಮರಮೃಗಗಳ ಬಾಲಗಳೆಂಬ ಬೀಸಣಿಗೆಗಳಿಂದ ರಮ್ಯವಾಗಿದ್ದಿತು. ೨. ಚಾಮರಗಳಿಂದಲೂ ಬೀಸಣಿಗೆಗಳಿಂದಲೂ ಚಂದಗಾಣುತ್ತಿದ್ದಿತು.) ಮತ್ತು "ಗಜಘಟಾಪರಿಪಾಲಿತ"ವಾಗಿದ್ದಿತು. (೧. ಆನೆಗಳ ಗುಂಪಿನಿಂದ ರಕ್ಷಿಸಲ್ಪಡುವುದು) ಶೃಂಗಾರನಾಯಿಕೆಯರಂತೆ "ಮೃಗಮದ ಪರಿಮಳಾಮೋದಿತ"ವಾಗಿದ್ದಿತು. (೧. ಕಸ್ತೂರಿಮೃಗದ ಪರಿಮಳದಿಂದ ಸುವಾಸನೆಗೊಂಡಿದ್ದಿತು. ೨. ಕಸ್ತೂರಿಯ ಪರಿಮಳದಿಂದ ಸುವಾಸನೆಯುಳ್ಳವಳು) ಮತ್ತು "ಕೃಷ್ಣಾಗರುತಿಲಕಭೂಷಿತ"ವಾಗಿದ್ದಿತು. (೧. ಕಾಲಾಗರು, ತಿಲಕ ಎಂಬ ಮರಗಳಿಂದ ಚಂದಗಾಣುತ್ತಿದ್ದಿತು. ೨. ಕಾಲಾಗರುವಿನ ಬೊಟ್ಟಿನಿಂದ ಚಂದಗಾಣುತ್ತಿದ್ದಳು). ವಿರಹಪೀಡಿತರಂತೆ "ವಿವಿಧ ಪಲ್ಲವಾನಿಲವೀಜ್ಯಮಾನ"ವಾಗಿದ್ದಿತು. (೧. ನಾನಾ ಬಗೆಯ ಚಿಗುರುಗಳ ಗಾಳಿಯಿಂದ ಬೀಸಲ್ಪಡುತ್ತಿತ್ತು. ೨. ವಿರಹತಾಪ ಶಾಂತಿಗಾಗಿ ಬಗೆ ಬಗೆಯ ಚಿಗುರುಗಳಿಂದ ಗಾಳಿ ಹಾಕಲ್ಪಡುತ್ತಾರೆ) ಮತ್ತು "ಮದನಾಕ್ರಾಂತ"ವಾಗಿಯೂ ಇದ್ದಿತು. (೧. ಮದನವೃಕ್ಷಗಳಿಂದ ಕೂಡಿಕೊಂಡಿದ್ದಿತು. ೨. ಅನುರಾಗದಿಂದ ಕೂಡಿಕೊಂಡಿರುತ್ತಾರೆ). ಚಿಕ್ಕಮಕ್ಕಳ ಕುಠದಂತೆ "ವ್ಯಾಘ್ರನಖಮಂಡಿತ"ವಾಗಿದ್ದಿತು. (೧. ಹುಲಿಗಳು ನಡೆಯುವಾಗ ಉಂಟಾಗುವ ಉಗುರು ಗುರುತುಗಳಿಂದ ಅಲಂಕೃತವಾಗಿದ್ದಿತು. ೨. ರಕ್ಷಾರ್ಥವಾಗಿ ಕೊರಳಿಗೆ ಕಟ್ಟಿರುವ ಹುಲಿಯುಗುರುಗಳಿಂದ ಅಲಂಕೃತವಾಗಿದ್ದಿತು) ಮತ್ತು "ಗಂಡಕಾಭರಣ"ವುಳ್ಳದ್ದಾಗಿದ್ದಿತು. (೧. ಗಂಡಕಮೃಗಗಳೆಂಬ ಒಡವೆಗಳಿಂದ ಕೂಡಿದ್ದಿತು. ೨. ಗಂಡಕವೆಂಬ ಕಿವಿಯೊಡವೆಯಿಂದ ಕೂಡಿದ್ದಿತು.) ಮದ್ಯಪಾನ ಮಾಡುವ ಸ್ಥಳದಂತೆ "ಪರಿಗತ ಮಧು

ವ್ಯಾಘ್ರನಖಮಂಡಿತಮುಂ ಗಂಡಕಾಭರಣಮುಂ ಪಾನಪ್ರದೇಶದಂತೆ ಪರಿಗತ ಮಧುಕೋಶ ಶತಮುಂ ವಿಕೀರ್ಣವಿವಿಧ ಕುಸುಮಮುಂ ದಶಮುಖನಗರಿಯಂತೆ ವಾನರಭಜ್ಯಮಾನ ತುಂಗ ಸಾಲಮುಂ ಪ್ರಳಯಕಾಲದಂತೆ ಮಹಾವರಾಹ ಸಮುತ್ಖಾತ ಧರಣೀಮಂಡಲಮುಂ ವಿವಾಹ ಗೇಹದಂತೆ ಸಮಿತ್ಕುಶಕುಸುಮ ಶಮೀಪಲಾಶೋಪಶೋಭಿತಮುಂ ಅಮರಪತಿಗಾತ್ರದಂತೆ ನೇತ್ರಸಹಸ್ರ ಸಂಕುಳಮುಂ ಅವನಿಪತಿ ಗೃಹದ್ವಾರದಂತೆ ವೇತ್ರಲತಾಶತದುಷ್ಪ್ರವೇಶಮುಂ

ಕೋಶಶತ"ವುಳ್ಳದ್ದಾಗಿದ್ದಿತು. (೧. ಅನೇಕ ಜೇನುಗೂಡುಗಳಿಂದ ಕೂಡಿಕೊಂಡಿದ್ದಿತು. ೨. ಅನೇಕ ಹೆಂಡದ ಬುರುಡೆಗಳುಳ್ಳದ್ದು) ಮತ್ತು "ವಿಕೀರ್ಣ ವಿವಿಧ ಕುಸುಮ" ಉಳ್ಳ ದ್ದಾಗಿದ್ದಿತು. (೧. ಚೆಲ್ಲಾಪಿಲ್ಲಿಯಾಗಿ ಬಿದ್ದಿರುವ ಬಗೆ ಬಗೆಯಾದ ಹೂವುಗಳುಳ್ಳದ್ದು. ೨. ಎರಚಲ್ಪಟ್ಟ ಬಗೆ ಬಗೆಯ ಹೂವುಗಳುಳ್ಳದ್ದು). ರಾವಣನ ರಾಜಧಾನಿಯಾದ ಲಂಕೆಯಂತೆ "ವಾನರಭಜ್ಯಮಾನ ತುಂಗಸಾಲ"ವುಳ್ಳದ್ದು. (೧. ಕಪಿಗಳಿಂದ ಮುರಿ ಯಲ್ಪಡುವ ಎತ್ತರವಾದ ಸಾಲೆಮರಗಳಿಂದ ಕೂಡಿಕೊಂಡಿದೆ. ೨. ಕಪಿಗಳಿಂದ ಒಡೆಯಲ್ಪಡುವ ಎತ್ತರವಾದ ಕೋಟೆಯುಳ್ಳದ್ದು). ಪ್ರಳಯಕಾಲದಂತೆ "ಮಹಾ ವರಾಹ ಸಮುತ್ಖಾತ ಧರಣೀಮಂಡಲ"ವುಳ್ಳದ್ದು. (೧. ದೊಡ್ಡ ದೊಡ್ಡ ಕಾಡುಹಂದಿ ಗಳಿಂದ ಅಗೆಯಲ್ಪಟ್ಟ ನೆಲವುಳ್ಳದ್ದು. ೨. ವಿಷ್ಣುವಿನ ಅವತಾರವಾದ ವರಾಹಮೂರ್ತಿ ಯಿಂದ ಮೇಲಕ್ಕೆ ಎತ್ತಲ್ಪಟ್ಟ ಭೂಮಿಯುಳ್ಳದ್ದು). ಮದುವೆಯ ಮನೆಯಂತೆ "ಸಮಿತ್ಕುಶ ಕುಸುಮಶಮೀ ಪಲಾಶೋಪಶೋಭಿತ"ವಾಗಿದೆ. (೧. ಹೋಮಕ್ಕೆ ಬೇಕಾದ ಕಡ್ಡಿ, ದರ್ಭೆ, ಹೂವು, ಬನ್ನಿಮರ, ಮುತ್ತುಗದ ಮರಗಳಿಂದ ರಂಜಿಸುತ್ತಿದೆ. ೨. ಸಮಿತ್ತು, ದರ್ಭೆ, ಹೂವು, ಬನ್ನಿಕೊನೆ, ಮುತ್ತುಗದಕಡ್ಡಿ ಮೊದಲಾದುವು ಗಳಿಂದ ರಂಜಿತವಾಗಿದೆ). ಇಂದ್ರನ ಶರೀರದಂತೆ "ನೇತ್ರಸಹಸ್ರಸಂಕುಳ"ವಾಗಿದೆ. (೧. ಸಾವಿರಾರು ಮರದ ಬೇರುಗಳಿಂದ ಕೂಡಿಕೊಂಡಿದೆ. ೨. ಅನೇಕ ಕಣ್ಣುಗಳಿಂದ ಕೂಡಿಕೊಂಡಿದೆ). ಅರಮನೆಯ ಬಾಗಿಲಿನಂತೆ "ವೇತ್ರಲತಾದುಷ್ಪ್ರವೇಶ"ವಾಗಿದೆ. (೧, ಅನೇಕ ಬೆತ್ತದ ಬಳ್ಳಿಗಳಿಂದ ಒಳಹೊಗಲು ಅಸಾಧ್ಯವಾಗಿದೆ. ೨. ದ್ವಾರಪಾಲಕರ ಕೈಯಲ್ಲಿರುವ ನೀಳನೀಳವಾದ ಬೆತ್ತಗಳಿಂದ ಒಳಗೆ ಬರಲು ಅಸಾಧ್ಯವಾಗಿದೆ.) ವಿರಾಟ ರಾಜನ ಪಟ್ಟಣದಂತೆ "ಕೀಚಕಾವೃತ"ವಾಗಿದೆ. (೧. ಕೂಗು ಬಿದುರುಗಳಿಂದ ತುಂಬಿದೆ. ವಿರಾಟರಾಜನ ಭಾವಮೈದುನರಾದ ನೂರುಜನ ಕೀಚಕರೆಂಬುವರಿಂದ ಕೂಡಿಕೊಂಡಿದೆ.) ಆಕಾಶದಂತೆ "ವ್ಯಾಧಾನುಗಮ್ಯಮಾನ ತರಳ ತಾರಕ ಮೃಗ"ವುಳ್ಳದ್ದಾಗಿದೆ. (೧. ಬೇಡ ರಿಂದ ಅಟ್ಟಿಸಿಕೊಂಡು ಬಂದ ಪರಪರಗುಟ್ಟುತ್ತಿರುವ ಕಣ್ಣುಗುಡ್ಡೆಗಳುಳ್ಳ ಜಿಂಕೆ ಗಳಿಂದ ಕೂಡಿದೆ. ೨. ವ್ಯಾಧರೂಪವನ್ನು ತಾಳಿರುವ ಶಿವನಿಂದ ಹಿಂಬಾಲಿಸಲ್ಪಡುವ ಭಯಗೊಂಡಿರುವ ಮೃಗರೂಪನಾದ ಪ್ರಜಾಪತಿಯುಳ್ಳದ್ದು.) ವ್ರತವನ್ನು ಹಿಡಿದಿರು ವವನಂತೆ ದರ್ಭೆ ಚೀರ ಜಟಾವಲ್ಕಲಧಾರಿಯಾಗಿದ್ದಿತು. (೧. ದರ್ಭೆ, ಚೀರವೆಂಬ ಹುಲ್ಲು,

ವಿರಾಟನಗರಿಯಂತೆ ಕೀಚಕಾವೃತಮುಂ ಅಂಬರದಂತೆ ವ್ಯಾಧಾನುಗಮ್ಯಮಾನ ತರಳತಾರಕ ಮೃಗಮುಂ ಗೃಹೀತವ್ರತನಂತೆ ದರ್ಭಚೀರ ಜಟಾವಲ್ಕಲಧಾರಿಯುಂ ಸಪ್ತಪರ್ಣೋಪ ಶೋಭಿತಮುಂ ಕ್ರೂರಸತ್ವಮಾಗಿಯುಂ ಮುನಿಜನಸೇವಿತಮುಮೆನಿಪುದಂತುಮಲ್ಲದೆಯುಂ

ಅದು ನಿಖಿಲಭುವನಮಂಡಲ
ವಿದಿತಂ ತಳ್ತಿಸೆವ ದಂಡಕಾರಣ್ಯದೊಳಿ
ರ್ಪುದಗಸ್ತ್ಯಮುನಿಪನಾಶ್ರಮ
ಪದವತಿಪಾವನವಗಣ್ಯಪುಣ್ಯಕ್ಷೇತ್ರಂ ೮೬

ವ॥ ಅದರೊಳ್ ಸುರಾಸುರಮಕುಟಪತ್ರಭಂಗಕೋಟಿಚುಂಬಿತ ಚರಣಾರವಿಂದನುಂ ದಕ್ಷಿಣಾಶಾವಧೂಮುಖ ವಿಶೇಷಕನುಮೆನಿಸಿದಗಸ್ತ್ಯಮಹಾಮುನಿಯಿರ್ಪನಾತನ ಮಹಾ ಪ್ರಭಾವವಂ ಪೇೞ್ವೊಡೆ

ಕೆಡೆದಂ ಭೋಂಕನೆ ಸಗ್ಗದಿಂದೆ ನಹುಷಂ ಪಾವಾಗಿ ಹುಂಕಾರದಿಂ
ಪೊಡೆಗಿಚ್ಚಿಂದವೆ ಜೀರ್ಣನಾದನಸುರಂ ವಾತಾಪಿ ತನ್ನಾಣೆಯಿ
ಟ್ಟೊಡೆ ಮಾಣ್ದುರ್ದದೆ ಮೇರು ಮತ್ಸರದೊಳಾದಂ ನೀಳ್ದ ವಿಂಧ್ಯಾಚಳಂ
ಕಡಲಾಪೋಶನಮಾದುದಾ ಮುನಿಗೆನಲ್ಕೇನೆಂಬೆನಾಶ್ಚರ್ಯಮಂ ೮೭

ಬಿಳಿಲು, ತೊಗಟೆಗಳನ್ನು ಹೊಂದಿರುತ್ತದೆ. ೨. ದರ್ಭೆ, ತುಂಡುಬಟ್ಟೆ, ಜಟೆ, ನಾರುಬಟ್ಟೆ ಗಳನ್ನು ಧರಿಸಿರುವನು) ಮತ್ತು "ಸಪ್ತವರ್ಣೋಪಶೋಭಿತ"ವಾಗಿದ್ದಿತು. (೧. ಏಳೆಲೆಬಾಳೆಗಿಡಗಳಿಂದ ಕೂಡಿದ್ದಿತು. ೨. ಆಹಾರಕ್ಕಾಗಿ ಏಳು ಎಲೆಗಳಿಂದ ಕೂಡಿರುವವನು). "ಕ್ರೂರಸತ್ವ"ವಾಗಿದ್ದರೂ (೧. ಕೆಟ್ಟ ಮನಸ್ಸುಳ್ಳದ್ದು ೨. ದುಷ್ಟ ಪ್ರಾಣಿಗಳುಳ್ಳದ್ದು.) ಮುನಿಜನರಿಂದ ಸೇವಿಸಲ್ಪಡುತ್ತಿರುವುದು. ಅದಲ್ಲದೆ, ೮೬. ಹೀಗೆ ಇಡೀ ಜಗತ್ತಿನಲ್ಲಿ ಪ್ರಸಿದ್ಧಿಯನ್ನು ಪಡೆದು ಶೋಭಿಸುವ ವಿಂಧ್ಯಾಟವಿಗೆ ಸೇರಿದ ದಂಡ ಕಾರಣ್ಯದಲ್ಲಿ ಬಹಳ ಪವಿತ್ರವಾದ ಮತ್ತು ದೊಡ್ಡ ಪುಣ್ಯಕ್ಷೇತ್ರವಾದ ಅಗಸ್ತ್ಯಮಹರ್ಷಿ ಗಳ ಆಶ್ರಮವಿರುವುದು, ವ॥ ಅದರಲ್ಲಿ ದೇವಾಸುರರ ಕಿರೀಟದ ಮಕರಪತ್ರಗಳ ತುದಿಯಿಂದ ಮುಟ್ಟಲ್ಪಟ್ಟ ಪಾದಕಮಲವುಳ್ಳ, ದಕ್ಷಿಣದಿಕ್ಕೆಂಬ ಮಹಿಳೆಯ ಮುಖಕ್ಕೆ ತಿಲಕಪ್ರಾಯನಾಗಿದ್ದ ಅಗಸ್ತ್ಯನೆಂಬ ಮಹರ್ಷಿಯಿದ್ದನು. ಅವನ ಪ್ರಭಾವವನ್ನು ಹೇಳುವುದಾದರೆ—೮೭. ಇವನ ಒಂದು ಹುಂಕಾರದಿಂದ ನಹುಷನು ಹಾವಾಗಿ ಸ್ವರ್ಗ ದಿಂದ ತಟ್ಟನೆ ಕೆಳಕ್ಕೆ ಬಿದ್ದನು. ವಾತಾಪಿ ಎಂಬ ರಾಕ್ಷಸನು ಇವನ ಜಠರಾಗ್ನಿ ಯಲ್ಲೇ ಜೀರ್ಣವಾಗಿ ಹೋದನು. ಮೇರುಪರ್ವತದ ಸ್ಪರ್ಧೆಯಿಂದ ಬಹಳ ಎತ್ತರ ವಾಗಿ ಬೆಳೆದಿದ್ದ ವಿಂಧ್ಯಪರ್ವತವು ಇವನ ಆಜ್ಞೆಯಿಂದ ತಗ್ಗಿಹೋಯಿತು. ಆ ಮಹರ್ಷಿಗೆ ಸಮುದ್ರವು ಆಪೋಶನವಾಗಿಬಿಟ್ಟಿತು. ಈ ಆಶ್ಚರ್ಯವನ್ನು ಏನು

ಆ ಮುನಿಮುಖ್ಯನ ಸತಿ ಲೋ
ಪಾಮುದ್ರೆ ತನೂಜರಿಂದೆ ಮಿಗಿಲೆನಿಸಿದತಿ
ಪ್ರೇಮದೆ ನಡಪಿದ ವಿಟಪಿ
ಸ್ತೋಮದಿನಾಶ್ರಮಪದಂ ಮನಂಗೊಳಿಸಿರ್ಕುಂ ೮೮

ವ॥ ಮತ್ತಂ ಗೃಹೀತವ್ರತನುಮಾಕಲಿತಶಾಸ್ತ್ರನುಮುಪರಚಿತ ಭಸ್ಮತ್ರಿಪುಂಡ್ರಕಾಭರಣನುಮಾಬದ್ಧಮೌಂಜಮೇಖಳಾರಂಜಿತನುಂ ಪರ್ಣಪುಟೋಪನೀತಪ್ರತ್ಯುಟಜಭಿಕ್ಷನುಮೆನಿಸಿದ ತತ್ಪುತ್ರನಪ್ಪಿಧ್ಮವಾಹನಿಂ ಪವಿತ್ರೀಕೃತಮಾಗಿರ್ದುದಂತುಮಲ್ಲದೆಯುಂ

ಪರಿಪೀತಮಾಯ್ತು ರತ್ನಾ
ಕರನೀ ಕಳಶಜನಿನೆಂದವನ ಬಟಿಸಂದಂ
ತಿರೆ ಬದ್ಧವೇಣಿ ಗೋದಾ
ವರಿ ಬಂದವತರಿಸಿದುದು ತದಾಶ್ರಮಪದಮಂ ೮೯

ಗುರುವಿನ ನನ್ನಿಗುರ್ವರೆಯನಿತ್ತನುಜಾತನುಮಾತ್ಮಕಾಂತೆಯುಂ
ಬೆರಸು ತದಾಶ್ರಮಪ್ರಥಿತ ಪಂಚವಟೀಸ್ಥಳದೊಳ್ ಮಹಾಮುನೀ
ಶ್ವರನೆನಿಸಿರ್ದಗಸ್ತ್ಯನಿರಿಸಲ್ ಪಲವುಂ ದಿನಮಿರ್ದನಂದು ಕಂ
ಧರಕುಲಖಂಡನಾಹಿತ ದಶಾನನ ಲಾಘವನಪ್ಪ ರಾಘವಂ ೯೦

ಹೇಳಲಿ ! ೮೮. ಆ ಅಗಸ್ತ್ಯಮುನಿಯ ಧರ್ಮಪತ್ನಿಯಾದ ಲೋಪಾಮುದ್ರೆಯಿಂದ ಮಕ್ಕಳಿಗಿಂತಲೂ ಹೆಚ್ಚಾದ ಮಹಾಪ್ರೀತಿಯಿಂದ ಬೆಳೆಸಿದ ಮರಗಳ ಗುಂಪಿನಿಂದ ಆ ಆಶ್ರಮಪ್ರದೇಶವು ಮನೋಹರವಾಗಿದ್ದಿತು. ವ॥ ಮತ್ತು ಬ್ರಹ್ಮಚರ್ಯವ್ರತನಿಷ್ಠನಾದ ಶಾಸ್ತ್ರಾಧ್ಯಯನವನ್ನು ಮಾಡುತ್ತಿದ್ದ ಮುಂಜವೆಂಬ ಹುಲ್ಲಿನಿಂದ ಹೆಣೆದ ಹುರಿಯನ್ನು ಉಡಿದಾರವಾಗಿ ಕಟ್ಟಿಕೊಂಡಿರುವ ಎಲೆಯಿಂದ ಮಾಡಿದ ಭಿಕ್ಷಾಪಾತ್ರೆಯನ್ನು ಕೈಯಲ್ಲಿ ಹಿಡಿದುಕೊಂಡು ಪ್ರತಿಯೊಂದು ಪರ್ಣಶಾಲೆಗೂ ಹೋಗಿ ಭಿಕ್ಷೆಯನ್ನು ಬೇಡುತ್ತಿದ್ದ ಇಧ್ಮವಾಹನೆಂಬ ಅಗಸ್ತ್ಯಪುತ್ರನಿಂದ ಪಾವನಗೊಳಿಸಲ್ಪಟ್ಟಿತ್ತು. ೮೯. ಗೋದಾವರೀನದಿಯು "ನನ್ನ ಪತಿಯಾದ ಸಮುದ್ರನನ್ನು ಈ ಅಗಸ್ತ್ಯನು ಕುಡಿದು ಹೊಟ್ಟೆಯಲ್ಲಿ ಅಡಗಿಸಿಕೊಂಡಿದ್ದಾನೆ. ಗಂಡನನ್ನು ಹಿಂಬಾಲಿಸಿ ಅವನಿರುವ ಕಡೆ ಇರುವುದು ಪ್ರತಿವ್ರತಾಧರ್ಮ"ವೆಂದು ನಿಶ್ಚಯಿಸಿ "ಬದ್ಧವೇಣಿ"ಯಾಗಿ (೧. ಪ್ರವಾಹದಿಂದ ಕೂಡಿದವಳಾಗಿ ೨. ಕಟ್ಟಿದ ತಲೆಗೂದಲುಳ್ಳವಳಾಗಿ) ಈ ಆಶ್ರಮಸಮೀಪದಲ್ಲೇ ಹರಿಯುತ್ತಿದ್ದಾಳೆ. ಟಿ. ಪತಿಯು ದೇಶಾಂತರಗತನಾಗಿದ್ದಾಗ ತಲೆಗೂದಲನ್ನು ಬಾಚಿ ಹೆಣೆದುಕೊಳ್ಳಬಾರದು. ಬರಿಗಂಟು ಹಾಕಿಕೊಂಡಿರಬೇಕೆಂಬುದು ಪತಿವ್ರತಾಧರ್ಮ. ೯೦. ಹಿಂದೆ ತಂದೆಯು ಕೊಟ್ಟ ವರವನ್ನು ಸತ್ಯವನ್ನಾಗಿ ಮಾಡಲು ರಾಜ್ಯವನ್ನು ತಮ್ಮನಾದ ಭರತನಿಗಾಗಿ ತೊರೆದು ತಮ್ಮನಾದ ಲಕ್ಷ್ಮಣ ಹಾಗೂ ಮಡದಿಯಾದ ಸೀತೆಯೊಂದಿಗೆ ಅಗಸ್ತ್ಯಾಶ್ರಮಕ್ಕೆ ಸಮೀಪದಲ್ಲಿರುವ

ಚೆಲುವೆನಿಸಿರ್ದೀ ಕುಸುಮಾ
ವಳಿಯಂ ಕೊಯ್ದುವನಿಸುತೆಯು ಕರತಳರಾಗಂ
ಬಳಸಿದುದೆಂಬಿನವೆಸೆದುವು
ಲಲಿತ ಲತಾಲುಳಿತ ಪಲ್ಲವಪ್ರಕರಂಗಳ್ ೯೧

ವ॥ ಮತ್ತಂ

ಘನತರುಶಾಖಾಗ್ರಾವಮಾ
ಗ್ರನಿಭೃತ ಪಾಂಡುರಕಪೋತಪಂಕ್ತಿಪ್ರಕರಂ
ನೆನೆಯಿಪುದು ಶೂನ್ಯಮಾಗಿಯು
ಮನೇಕ ಮುನಿಪಾಗ್ನಿಹೋತ್ರಧೂಮವನಿನ್ನುಂ ೯೨

ವ॥ ಮತ್ತಮಲ್ಲಿ

ಕಿಡೆ ಕೊಲ್ವ ರಾಮಬಾಣದೆ
ಕೆಡೆದ ನಿಶಾಚರರ ನೆತ್ತರೊಳ್ ಬೆಳೆದುವೆನಲ್
ಕಡುಗೆಂಪುವೊರೆದ ತಳಿರ್ಗಳಿ
ನೆಡೆವಿಡದಿಡಿದಡವಿ ಸುತ್ತಿ ಸೊಗಯಿಸಿ ತೋರ್ಕುಂ ೯೩

ಪ್ರಸಿದ್ಧವಾದ ಪಂಚವಟಿ ಎಂಬ ಸ್ಥಳದಲ್ಲಿ ಅಗಸ್ತ್ಯಮಹರ್ಷಿಯು ಇರುವಂತೆ ತಿಳಿಸಲು, ತಲೆಗಳನ್ನು ತರಿದು ರಾವಣನನ್ನು ಹುಲ್ಲುಕಡ್ಡಿಯಂತೆ ಲಘುವಾಗಿ ಕಡೆಗಣಿಸಿದ ಶ್ರೀರಾಮನು ಇಲ್ಲಿ ಕೆಲವು ದಿನಗಳು ವಾಸವಾಗಿದ್ದನು. ೯೧. ಹಿಂದೆ ಸೀತಾದೇವಿಯು ತನ್ನ ಕೈಗಳಿಂದ ಈ ಕಾಡಿನ ಹೂವುಗಳನ್ನು ಕೊಯ್ಯಲು, ಅವಳ ಕೈಯ ಕೆಂಪು ಅಂಟಿಕೊಂಡಿರುವಂತೆ ಕೆಂಪು ಬಣ್ಣವನ್ನು ಪಡೆದಿರುವ ಸುಂದರವಾದ ಬಳ್ಳಿಗಳ ಚಲಿಸುತ್ತಿರುವ ಚಿಗುರುಗಳ ಸಮೂಹವು ಶೋಭಿಸುತ್ತಿದೆ. ವ॥ ಮತ್ತು ೯೨. ಅಲ್ಲಿ ದಟ್ಟವಾದ ಕೊಂಬೆಗಳ ಗುಂಪಿನಲ್ಲಿ ನಿಶ್ಚಲವಾಗಿ ಕುಳಿತಿರುವ ಬಿಳುಪಾದ ಪಾರಿವಾಳಗಳ ಸಮುದಾಯವು ಈಗ ಅಲ್ಲಿ ಯಾವ ಋಷಿಗಳೂ ಇಲ್ಲದಿದ್ದರೂ ಹಿಂದೆ ಇದ್ದ ಅನೇಕ ಮಹರ್ಷಿಗಳು ಮಾಡುತ್ತಿದ್ದ ಅಗ್ನಿಹೋತ್ರದ ಹೊಗೆಯನ್ನು ನೆನಪಿಗೆ ತರುತ್ತಿತ್ತು. ೯೩. ನಾಶವಾಗುವಂತೆ ಕೊಲ್ಲುತ್ತಿರುವ ರಾಮಬಾಣಗಳಿಂದ ಕೆಳಗುರುಳಿದ ರಾಕ್ಷಸರ ರಕ್ತದಿಂದಲೇ ಬೆಳೆದಿರಬೇಕೆಂಬಂತೆ ಅತಿಶಯವಾದ ಕೆಂಪನ್ನು ಹೊಂದಿರುವ ಚಿಗುರುಗಳಿಂದ ಸ್ಥಳಾವಕಾಶವೇ ಇಲ್ಲದಂತೆ ತುಂಬಿರುವ ಕಾಡು

ಜನಕಜೆ ಕೂರ್ವೆಯಿಂ ನಡಪಿದಂದಿನ ಜೀರ್ಣಚರನ್ಮೃಗಾಳಿ ಘೋಂ
ಕನೆ ಮಟಗಾಲದೊಳ್ ಮೊಳಗುಗೇಳ್ದು ಜಗದ್ವಿವರಾಂತಮಪ್ಪ ರಾ
ಮನ ಘನಚಾಪದಂಡರವಮಂ ನೆನೆದೆತ್ತಲುಮೀಕ್ಷಿಸುತ್ತೆ ಕಂ
ಬನಿಗಳನಿಕ್ಕಿ ಮೇಪುಗೊಳಲೊಲ್ಲವು ರೂಢಿಯ ಶಾಡ್ವಲಂಗಳೊಳ್ ೯೪

ಮೃಗಯಾನಿತಾಂತಹತಿಯಿಂ
ಮಿಗೆ ನೊಂದಟ್ಟಿದುವೊ ನಿಖಿಳವನಮೃಗವೆನೆ ಪೊಂ
ಮಿಗವಿರದೊಯ್ದುದು ಸೀತೆಯ
ನಗಲ್ಚಿ ನಿಲಲೀಯದಲ್ಲಿ ದಶರಥಸುತನಂ ೯೫

ಪೊಲ್ಲದು ಗೆಯ್ದನೆಂದು ನಹುಷಾಜಗರಂ ಪಿರಿದಪ್ಪ ದೈನ್ಯದಿಂ
ಬಲ್ಲಿದನಪ್ಪಗಸ್ತ್ಯಮುನಿಯೊಳ್ ದಯೆಯಂ ಪಡೆಯಲ್ಕೆ ಬಂದವೋ
ಲಲ್ಲಿಯೆ ರಾಘವಂ ತಱಿದ ಯೋಜನಬಾಹುವ ಬೀಟ್ದ ತೋಳದೊಂ
ದೆಲ್ಲರ ಚಿತ್ತದೊಳ್ ಪಿರಿದುವೊಂದಭಿಶಂಕೆಯನುಂಟುಮಾಡುಗುಂ ೯೬

ಸುತ್ತಲೂ ರಮ್ಯವಾಗಿ ಕಾಣುತ್ತದೆ. ೯೪. ಹಿಂದೆ ಸೀತಾದೇವಿಯು ಪ್ರೀತಿಯಿಂದ ಸಾಕುತ್ತಿದ್ದ ಜಿಂಕೆಗಳು ಈಗಲೂ ಜೀವಿಸಿದ್ದುವು. ಆ ಮುದಿ ಜಿಂಕೆಗಳು ಅಲ್ಲೆಲ್ಲಾ ಓಡಾಡಿಕೊಂಡಿದ್ದವು. ಅವು ಮಳೆಗಾಲದಲ್ಲಿ ತಟ್ಟನೆ ಗುಡುಗಿನ ಶಬ್ದವನ್ನು ಕೇಳಿದುವು. ಆಗ ಅವಕ್ಕೆ ಬ್ರಹ್ಮಾಂಡದ ಒಳಭಾಗದಲ್ಲಿ ಹರಡಿರುವ ಶ್ರೀರಾಮನ ಶ್ರೇಷ್ಠವಾದ ಬಿಲ್ಲಿನ ಧ್ವನಿಯು ನೆನಪಿಗೆ ಬಂತು. ಆಗ ಅವು ಎಲ್ಲೆಲ್ಲೂ ನೋಡುತ್ತಾ ಕಣ್ಣೀರು ಸುರಿಸಿ ಚಿರಪರಿಚಿತವಾದ ಹುಲ್ಲುಗಾವಲುಗಳಲ್ಲೂ ಹುಲ್ಲನ್ನು ಮೇಯಲೊಲ್ಲವು. ೯೫. ಶ್ರೀರಾಮನು ಬೇಟೆಯಾಡುವಾಗ ಅನೇಕ ಜಿಂಕೆಗಳನ್ನು ಕೊಲ್ಲುತ್ತಿದ್ದನು. ಇದ ರಿಂದ ನೊಂದ ಕಾಡುಜಿಂಕೆಗಳೆಲ್ಲ ಸೇರಿ ಶ್ರೀರಾಮನಿಗೆ ತೊಂದರೆಯನ್ನುಂಟುಮಾಡ ಬೇಕೆಂದು ಚಿನ್ನದ ಜಿಂಕೆಯನ್ನು ಕಳುಹಿಸಿದುವೋ ಏನೋ ? ಅಂತೂ ಅದು ಶ್ರೀರಾಮ ನನ್ನು ಅಲ್ಲಿ ನಿಲ್ಲಗೊಡದೆ ಸೀತೆಯನ್ನು ಅಗಲಿಸಿ ದೂರಹೋಗುವಂತೆ ಮಾಡಿಬಿಟ್ಟಿತು. ೯೬. ಇಲ್ಲಿ ಶ್ರೀರಾಮನು ಕಬಂಧನ ತೋಳನ್ನು ಕತ್ತರಿಸಿ ಹಾಕಿದನು. ಅದು ಈಗಲೂ ಅಲ್ಲಿ ಬಿದ್ದಿದೆ. ಅದನ್ನು ನೋಡಿದರೆ ಹಿಂದೆ ಅಗಸ್ತ್ಯರ ಶಾಪದಿಂದ ಹೆಬ್ಬಾವಾಗಿ ಭೂಮಿಗೆ ಬಿದ್ದ ನಹುಷನು ತಾನು ಮಾಡಿದುದು ತಪ್ಪು ಎಂಬುದಾಗಿ ಹೆಚ್ಚು ದೈನ್ಯ ವನ್ನು ತಾಳಿ ಮಹಾತ್ಮನಾದ ಅಗಸ್ತ್ಯನಲ್ಲಿ ಕ್ಷಮೆಯನ್ನು ಬೇಡಿ ಆವನ ಕರುಣೆಯನ್ನು ಪಡೆಯಲು ಬಂದಿರುವನೋ ಎಂಬ ದೊಡ್ಡ ಸಂದೇಹವು ಎಲ್ಲರ ಮನಸ್ಸಿನಲ್ಲಿಯೂ

ವಿರಹದೆ ರಾಮಬಾಣದುಟಜಾಂಗಣ ರಮ್ಯಶಿಲಾತಲಂಗಳೊಳ್
ಬರೆಯೆ ವಿಚಿತ್ರಮಾಗೆಸೆವ ಸೀತೆಯ ಚಿತ್ರಮನಿನ್ನುಮಲ್ಲಿ ತ
ನ್ನರಸನ ನಿಂದ ತಾಣಮನೆ ನೋಡಲಿದಂ ಪೊಱಮಟ್ಟಳಾಗಳು
ರ್ವರೆಯನಿಳಾತನೂಜೆಯೆನುತಂತದನೀಕ್ಷಿಸುವರ್ ವನೇಚರರ್ ೯೭

ವ॥ ಅಂತೀಗಳುಂ ಪ್ರಕಟೋಪಲಕ್ಷ್ಯಮಾಣ ಪ್ರಮಾಣಪೂರ್ವಮಪ್ಪಗಸ್ತ್ಯಾಶ್ರಮಕ್ಕನತಿ ದೂರಮೆನಿಸಿ

ಕಡಲಂ ಪೀರ್ದನಗಸ್ತ್ಯನೆಂಬ ಪುರುಡಿಂ ಮತ್ತೊಂದನಬ್ಜೋದ್ಭವಂ
ಪಡೆದಂ ಪೆರ್ಗಡಲಂ ಮಹಾಪ್ರಳಯದೊಳ್ ದಿಕ್ಸಂಧಿಗಳ್ಬಂಧಮಂ
ಬಿಡೆ ಬೀಟ್ಟತ್ತಿಳೆಗಾಗಸಂ ಧರಣಿಯಂ ಪೆರ್ಬಂದಿ ಕೀಟತ್ತಿತ್ತಿದೊಂ
ದೆಡೆ ನೀರ್ ತೀವಿತೆನಲ್ಕೆ ಪೆಂಪುವಡೆಗುಂ ಗುಣ್ಪೇದೆ ಪಂಪಾಸರಂ ೯೮

ವ॥ ಮತ್ತಮಲ್ಲಿ ಬಂದೋಲಾಡುವ ಪುಳಿಂದಸುಂದರಿಯರ ಪೆರ್ಮೊಲೆಯ ಪೆರ್ಕುಳಿ ಯೊ[ಳ್ ಪರಿಪರಿಯಾದ ಜಲದೊಳಂ] ಉಳ್ಳಲರ್ದ ಕುಮುದ ಕುವಲಯ ಕಲ್ಹಾರ ಕುಸುಮಂ ಗಳೊಳಂ ಅಲರ್ದ ತಾವರೆಯ ತನಿವಂಡಿನ ಪನಿಗಳಂ ಪಸರಿಸುವ ಪೀಲಿಗಣ್ಗಳೊಳಂ ಕಾರ್ಗತ್ತಲೆ

ಉಂಟಾಗುತ್ತದೆ ! ೯೭. ಸೀತಾದೇವಿಯನ್ನು ಅಗಲಿದ ಶ್ರೀರಾಮನು ಬೇಜಾರು ಕಳೆ ಯಲು ಪರ್ಣಶಾಲೆಯ ಅಂಗಳದಲ್ಲಿರುವ ಸುಂದರವಾದ ಹಾಸರೆಯ ಮೇಲೆ ಬಾಣ ದಿಂದ ಸೀತಾದೇವಿಯ ಚಿತ್ರವನ್ನು ಕೊರೆದಿದ್ದನು. ಆಶ್ಚರ್ಯಕರವಾದ ಆ ಚಿತ್ರವು ಈಗಲೂ ಇದೆ. ಅದನ್ನು ಅಲ್ಲಿನ ಬೇಡರು "ತನ್ನ ಗಂಡನು ವಾಸಮಾಡುತ್ತಿದ್ದ ಸ್ಥಳ ವನ್ನು ನೋಡಬೇಕೆಂಬ ಕುತೂಹಲವುಳ್ಳವಳಾಗಿ ಭೂಮಿಯ ಅಡಿಯಿಂದ ಮೇಲಕ್ಕೆ ಬಂದಿರುವ ಸೀತೆಯೆಂಬ ಒಂದು ಭಾವನೆಯಿಂದ ನೋಡುತ್ತಾರೆ. ವ॥ ಹಾಗೆ ಈಗಲೂ ಸ್ಪಷ್ಟವಾಗಿ ಕಾಣುತ್ತಿರುವ ಹಿಂದಿನ ಹೆಗ್ಗುರುತುಗಳುಳ್ಳ ಅಗಸ್ತ್ಯಾಶ್ರಮಕ್ಕೆ ಸ್ವಲ್ಪ ದೂರ ದಲ್ಲಿ ೯೮. ಅಗಸ್ತ್ಯಮಹರ್ಷಿಯು ಸಮುದ್ರವನ್ನು ಕುಡಿದುಬಿಟ್ಟನೆಂಬ ಸ್ಪರ್ಧೆಯಿಂದ ಬ್ರಹ್ಮನು ಅವನ ಆಶ್ರಮದ ಪಕ್ಕದಲ್ಲೇ ಮತ್ತೊಂದು ದೊಡ್ಡ ಸಮುದ್ರವನ್ನು ಸೃಷ್ಟಿ ಮಾಡಿದ್ದಾನೆ ಎಂಬಂತೆಯೂ ಮಹಾಪ್ರಳಯಕಾಲದಲ್ಲಿ ಎಂಟು ದಿಕ್ಕಿನ ಸಂಧಿಗಳು ಕಳಚಿಬೀಳಲಾಗಿ ಆಕಾಶವೇ ಕೆಳಕ್ಕೆ ಕಳಚಿಬಿದ್ದಿದೆ ಎಂಬಂತೆಯೂ ಆದಿವರಾಹನು ಭೂಮಿ ಯನ್ನು ಕಿತ್ತು ಎತ್ತಿಕೊಳ್ಳಲು ಆ ಎಡೆಯಲ್ಲಿ ನೀರು ತುಂಬಿಕೊಂಡಿದೆ ಎಂಬಂತೆಯೂ ಕಾಣುವ ಪಂಪಾಸರೋವರವು ಬಹಳ ಆಳವಾಗಿದ್ದು ಹಿರಿಮೆಯನ್ನು ಪಡೆದು ಶೋಭಿ ಸುತ್ತದೆ. ವ॥ ಮತ್ತು ಅಲ್ಲಿ ನೀರಾಟಕ್ಕಾಗಿ ಬರುವ ಬೇಡರ ಚೆಲುವೆಯರ ದಪ್ಪ ಮೊಲೆಗಳ ಬಡಿತದಿಂದ ಕಲಕಲ್ಪಟ್ಟ ನೀರಿನಿಂದಲೂ ಒಳಗಿನಿಂದ ಅರಳಿರುವ ಬೆಳ್ದಾವರೆ, ಕನ್ನೈದಿಲೆ, ಕೆಂದಾವರೆಗಳಿಂದಲೂ ಅರಳಿರುವ ತಾವರೆಗಳ ಸವಿಯಾದ ಮಕರಂದದ

ಮಸಗೆ ಮುಸುಱುವ ಮಱಿದುಂಬಿಯ ಬಂಬಲೊಳಂ ಎಕ್ಕೆಕ್ಕೆಯಿನುಲಿವ ಜಕ್ಕವಕ್ಕಿಗಳ ಕಳ ಕಳಂಗಳೊಳಂ ತಾವರೆವಂಡಿನ ತನಿಸೊಕ್ಕಿಂ ಸೊಕ್ಕಿದ ಪೆಣ್ಣಂಚೆಗಳಿಂಚರಂಗಳೊಳಂ ಜಲಚರಂಗಳ ಪೊಳಪಿನೆಸಕದಿಂ ಮಸಗಿ ಮೊೞೆವ ತೆರೆದುಱುಗಲೊಳಂ ಎಲರಲೆಪದಿನೊಗೆದ ತೆರೆಗೊನೆಯ ತೂರ್ಪನಿಯ ತುಂತುಱುಗಳಿಂ ಮಸಗುವ ಮಂಜಿನೊಳಂ ಅಂಜದೆ ಪೊಕ್ಕು ನಡುನೀರೊಳಾಡುವ ವನದೇವಿಯರ ಸೋರ್ಮುಡಿಯಿಂ ಪರೆದರಲ ಬೆರಕೆಗಂಪಿನ ಪೊಂಪುೞಿಯೊಳಂ ಒಂದೊಂದೆಡೆಯೊಳ್ ತಾಪಸರ್ ತೀವುವ ಕಮಂಡಲುಗಳಿನುಣ್ಮುವ ಕಳಕಳಧ್ವನಿಗಳೊಳಮೋರನ್ನಮಾಗಿ ನೆಯ್ದಿಲ್ಬನದೊಳ್ ದನಿಗೈದಾಡುವುದೞಿಂದೞಿಯಲ್ವರ್ಪಂಚೆವಿಂಡುಗಳೊಳಮಭಿಷೇಕಕ್ಕೆ ಬಂದಿೞಿದ ಪುಳಿಂದರಾಜಸುಂದರಿಯರ ನೆಲೆಮೊಲೆಯ ಸಿರಿಕಂಡದಣ್ಪಿನಿಂ ಪೊರೆದು ಬಳರ್ಪನಾಂತ ತೆರೆಗಳೊಳಮುಪಾಂತದೊಳ್ ಪರ್ವಿದ ಪೊಂಗೇದಗೆಯ ರಜದಿಂ ಪುೞಿಲ್ಗಟ್ಟಿದ ಪೆರ್ದಂಡೆಗಳೊಳಂ ಮುನಿಜನಂಗಳೊಗೆದಾರಲಿಕ್ಕಿದ ತಳಿರ್ಗಾಸೆಗಳ ಸೋರ್ದ ಬಣ್ಣದಿಂ ಬೆಳರ್ಗಂ ಪಿಡಿದು ತಡಿಯೊಳ್ ಬೆಳೆದ ಮರಂಗಳ ಚಿಗುರ್ಗಳಿಂದೊಗೆದೆಲರಿಂ ತಣ್ಪುವೆತ್ತಿರ್ಪ ತೀರಜಲಂಗ

ಹನಿಗಳ ಪ್ರಸಾರದಿಂದ ನೀರಿನ ಮೇಲೆ ಉಂಟಾಗುವ ನವಿಲುಗರಿಕಣ್ಣಿನಂದದ ಆಕೃತಿಗಳಿಂದಲೂ, ಕಗ್ಗತ್ತಲೆಯು ಹರಡುವಂತೆ ಮುತ್ತುತ್ತಿರುವ ಮರಿದುಂಬಿಗಳ ಗುಂಪುಗಳಿಂದಲೂ, ಗುಂಪು ಗುಂಪಾಗಿ ದನಿಗೈಯುತ್ತಿರುವ ಚಕ್ರವಾಕಪಕ್ಷಿಗಳ ಕೋಲಾಹಲದಿಂದಲೂ, ತಾವರೆ ಬಂಡನ್ನು ಕುಡಿಯುವುದರಿಂದ ಉಂಟಾದ ಅಧಿಕ ಮದದಿಂದ ಕೊಬ್ಬಿದ ಹೆಣ್ಣುಹಂಸಪಕ್ಷಿಗಳ ಮಧುರಧ್ವನಿಯಿಂದಲೂ, ನೀರುಪ್ರಾಣಿಗಳ ಪ್ರಕಾಶಿಸುವ ಚಲನವಲನರೂಪವಾದ ಕಾರ್ಯದಿಂದ ಅತಿಶಯವಾಗಿ ಶಬ್ದಮಾಡುತ್ತಿರುವ ಅಲೆಗಳ ಸಮೂಹದಿಂದಲೂ, ಗಾಳಿಯ ಬೀಸುವಿಕೆಯಿಂದ ಉಂಟಾದ ಅಲೆಗಳ ತುದಿಯ ತೂರುಹನಿಗಳ ತುಂತುರುಗಳಿಂದ ಹೆಚ್ಚಾಗಿ ಉಂಟಾದ ಇಬ್ಬನಿಯಂದದ ಸುರಿಮಳೆಯಿಂದಲೂ, ನಿರಾತಂಕವಾಗಿ ನಡುನೀರನ್ನು ಸೇರಿ, ಜಲಕ್ರೀಡೆಯಾಡುತ್ತಿರುವ ವನದೇವತೆಗಳ ನೀಳವಾದ ಕೇಶಪಾಶಗಳಿಂದ ಹೊರಡುತ್ತಿರುವ ಹೂವಿನ ಮಿಶ್ರಗಂಧದ ಹೆಚ್ಚಳದಿಂದಲೂ, ಒಂದೊಂದು ಕಡೆಯಲ್ಲಿ ಮುನಿಜನರು ನೀರು ತುಂಬಿಕೊಳ್ಳುತ್ತಿರುವಾಗ ಕಮಂಡಲುಗಳಿಂದ ಹೊರಡುವ ಗುಳುಗುಳು ಧ್ವನಿಯಿಂದಲೂ, ಬೆಳ್ದಾವರೆಯ ಗುಂಪಿನಲ್ಲಿ ವಿಹರಿಸುತ್ತಿರುವಾಗ ಒಂದೇ ಬಣ್ಣದಿಂದ ಗುರುತು ಸಿಕ್ಕದೆ ಇದ್ದರೂ ಧ್ವನಿಯಿಂದ ಪತ್ತೆ ಹಚ್ಚಬಹುದಾದ ಹಂಸಪಕ್ಷಿಗಳ ಸಮೂಹದಿಂದಲೂ, ಸ್ನಾನಕ್ಕೆ ಬಂದಿಳಿದಿರುವ ಬೇಡರ ರಾಜನ ನಲ್ಲೆಯರ ಕಠಿನಸ್ತನಗಳ ಶ್ರೀಗಂಧದ ಲೇಪನದಿಂದ ಕೂಡಿಕೊಂಡು ಬೆಳ್ಳಗಾಗಿರುವ ಅಲೆಗಳಿಂದಲೂ, ಸಮೀಪದಲ್ಲೇ ಹಬ್ಬಿ ಬೆಳೆದಿರುವ ಹೊಂಗೇದಗೆಯ ಧೂಳಿನಿಂದ ಮರಳುರಾಶಿಯಾಗಿ ಮಾಡಲ್ಪಟ್ಟಿರುವ ದೊಡ್ಡದಾದ ತೀರಪ್ರದೇಶದಿಂದಲೂ, ಸುತ್ತ ಮುತ್ತಲಿನ ಆಶ್ರಮಗಳಲ್ಲಿ ವಾಸಿಸುವ ಋಷಿಗಳು ಒಗೆದು ಒಣಗಿ ಹಾಕಿರುವ ಚಿಗುರು ಬಣ್ಣದ ಕಾವಿಬಟ್ಟೆಗಳಿಂದ ಸೋರುತ್ತಿರುವ ಬಣ್ಣದಿಂದ ಬಿಳುಪುಮಿಶ್ರ ಕೆಂಪುಬಣ್ಣ

ಳೊಳವೆಡೆವಿಡಿದ ತಮಾಲವೀಥಿಯೊಳೊಗೆದ ಕಟ್ತಲೆಯಿಂ ಋಷ್ಯಮೂಕನಿವಾಸಿಯಪ್ಪ ಸುಗ್ರೀವ ನಿಂದವಲುಪ್ತಫಲಮಾದ ಲತಾವಿತಾನದಿಂ ಮುನಿಜನದೇವತಾರ್ಚನೋಪಯುಕ್ತಮಾದ ಕುಸುಮವಿಸರದಿಂ ನೀರ್ವಕ್ಕಿಗಳೆಱಂಕೆಯಿಂದುದಿರ್ದ ಪನಿಗಳಿಂ ನಾಂದು ನುಣ್ಬುವೆತ್ತ ಲತಾ ಕಿಸಲಯಂಗಳಿಂ ಲತಾಮಂಡಪಂಗಳೊಳ್ ತಾಂಡವಮನೊಡರ್ಚುವ ಶಿಖಂಡಿಮಂಡಲಂಗಳಿಂ ವನದೇವತಾ ನಿಶ್ವಾಸವಾಸಿತಂಗಳೆನಿಪ ಕುಸುಮಪರಿಮಳಂಗಳಿಂ ಮಸಂಗೊಳಿಸುವ ವನರಾಜಿ ಗಳೊಳಂ ರಂಜಿಸುವುದಂತುಮಲ್ಲದೆಯುಂ

ಮತ್ತಲ್ಲಿ ಮಹಾಂಬುಧಿಯೆ
ಗೆತ್ತು ಮುಗಿಲ್ದುಱುಗಿ ನೀರ ಮೊಗೆವವೊಲಂದೇಂ
ಕತ್ತಲಿಸಿ ಬಂದು ನೀರಾ
ಡುತ್ತಿರ್ದುವು ಸುತ್ತಮಲ್ಲಿ ವನಕರಿನಿವಹಂ ೯೯

ವ॥ ಅಂತಗಾಧಮುಮತರ್ಕ್ಯಮುಮನಂತಮುಮೆನಿಸಿದ ಪಂಪಾಸರೋವರದ ಪಡು ವಣ ತಡಿಯೊಳ್ ದಶರಥಸುತನ ಶರಪ್ರಹಾರ ಜರ್ಝರಿತಮಪ್ಪ ತಾಳತರುಷಂಡಸಮೀಪದೊಳ್

ವನ್ನು ಪಡೆದು ದಡದಲ್ಲಿ ಬೆಳೆದಿರುವ ಮರಗಳ ಚಿಗುರುಗಳಿಂದ ಹೊರಡುತ್ತಿರುವ ತಂಪಾದ ದಡದ ನೀರುಗಳಿಂದಲೂ, ದಟ್ಟವಾಗಿ ಬೆಳೆದಿರುವ ಹೊಂಗೇಮರದ ಸಾಲು ಗಳಿಂದ ಉಂಟಾದ ಕತ್ತಲೆಯಿಂದಲೂ, ವಾಲಿಯಿಂದ ಓಡಿಸಲ್ಪಟ್ಟು ಋಷ್ಯಮೂಕ ಪರ್ವತದಲ್ಲಿ ವಾಸಿಸುತ್ತಿದ್ದ ಸುಗ್ರೀವನಿಂದ ಕೊಯ್ದು ಬರಿದು ಮಾಡಲ್ಪಟ್ಟಿರುವ ಹಣ್ಣು ಕಾಯಿ ಬಿಡುವ ಬಳ್ಳಿಗಳ ಸಮೂಹದಿಂದಲೂ, ಋಷಿಗಳ ದೇವರ ಪೂಜೆಗೆ ಆವಶ್ಯಕವಾದ ಹೂವುಗಳ ಸಮೂಹದಿಂದಲೂ, ನೀರುಹಕ್ಕಿಗಳ ಗರಿಗಳಿಂದ ಉದುರಿದ ಹನಿಗಳಿಂದ ತೊಯ್ದು ನುಣುಪಾಗಿರುವ ಚಿಗುರುಗಳಿಂದಲೂ, ಲತಾಮಂಡಪಗಳಲ್ಲಿ ನರ್ತನಮಾಡುತ್ತಿ ರುವ ನವಿಲುಗಳ ಗುಂಪಿನಿಂದಲೂ, ವನದೇವತೆಗಳ ಉಸಿರಿನಿಂದ ಸುವಾಸನೆಗೊಳಿಸಿದಂತಿ ರುವ ಹೂವುಗಳ ಕಂಪಿನಿಂದ ಮನೋಹರವಾದ ಕಾಡಿನ ಸಮೂಹದಿಂದಲೂ ಶೋಭಿಸು ತ್ತಿದೆ. ಅದಲ್ಲದೆ, ೯೯. ಅಲ್ಲಿ ಕಾಡಾನೆಗಳು ಕತ್ತಲೆಯನ್ನುಂಟುಮಾಡುವಂತೆ ಸುತ್ತಲೂ ಕವಿದು ನೀರಾಟವಾಡುತ್ತಿದ್ದುವು. ಅವು ಈ ಸರೋವರವನ್ನು ಸಮುದ್ರವೆಂದು ತಿಳಿದು ನೀರನ್ನು ಹೀರಲು ಕವಿದುಬಂದಿರುವ ಮೋಡಗಳೋ ಎಂಬಂತೆ ಕಾಣುತ್ತಿದ್ದುವು. ವ॥ ಹೀಗೆ ಆಳವಾಗಿಯೂ ಊಹೆಗೆ ಸಿಲುಕದೆಯೂ ಎಲ್ಲೆಗಾಣದೆಯೂ ಇರುವ ಪಂಪಾ ಸರೋವರದ ಪಶ್ಚಿಮತೀರದಲ್ಲಿ ಶ್ರೀರಾಮನ ಬಾಣದ ಏಟಿನಿಂದ ಛಿದ್ರಛಿದ್ರವಾಗಿರುವ

ಮರಗಟ್ಟೆಂಬಂತೆ ಸುತ್ತುಂ ಮೊದಲೊಳಜಗರಂ ಸುತ್ತ ದಿಕ್ಚಕ್ರವಾಳಾಂ
ತರಮಂ ನೋಡಲ್ಕೆ ನೀಳ್ದಂತಿರೆ ಬೆಳೆದ ಮಹಾಶಾಖೆಗಳ್ ತಾಂಡವಾಡಂ
ಬರದೊಳ್ ನಾನಾವಿಧಂ ನರ್ತಿಪ ನಟನ ಭುಜಾದಂಡವೋ ಪೇಟೆವೆಂಬಂ
ತಿರವೇಯಸ್ಕಂಧಮಂ ಸಂಧಿಸೆ ಜರಠ ಮಹಾಶಾಲ್ಮಲೀವೃಕ್ಷಮಿರ್ಕುಂ ೧೦೦

ಭಯದೊದವಿಂದೆ ಮಾಣದೆ ನಭಸ್ಥಲದೊಳ್ ಪರಿಯುತ್ತುಮಿರ್ಪ ತ
ನ್ನಯು ಪರಿಖೇದದಿಂದೆ ಕಡುಸೇದೆಯನಾಂತ ಪತಂಗನೊಥ ವಾ
ಜಿಯು ಕಡೆವಾಯ್ಗಳಿಂದುಗುವ ಫೇನವಿತಾನದೊಳಾದವೊಂದಿ ಸಂ
ಶಯಮನೆ ಮಾಳ್ಪವಾತುರದ ತೂಳಿಲಗೊಂಬಿನ ತೂಲರಾಶಿಗಳ್ ೧೦೧

ಪಿರಿದುಂ ತೀಂಟೆತ್ತಿ ಗಂಡಸ್ಥಳಮನನುದಿನಂ ಕಾಡಸೊಕ್ಕಾನೆಗಳ್ ಬಂ
ದೊರಸಲ್ ಸುತ್ತುಂ ಜಗಲ್ತಗ್ಗಲಿಸಿದ ಮದದಿಂ ಕಳ್ಗಿ ತದ್ಗಂಧಮಂ ಕ
ವ್ವರೆಗೊಂಡೋರಂತೆ ಸುತ್ತಿರ್ದಳಿಕುಳದೆನಸುಂ ಶೃಂಖಲಾಬದ್ಧಮೆಂಬಂ
ತಿರೆ ಕಲ್ಪಸ್ಥಾಯಿಯಾಗಿರ್ದುದು ಗಿರಿಕಟಕಸ್ಥಳಮಾ ವೃಕ್ಷಮೂಲಂ ೧೦೨

ತಾಳೆಮರಗಳ ಗುಂಪಿನ ಸಮೀಪದಲ್ಲಿ ೧೦೦. ಒಂದು ಬಹಳ ಹಳೆಯದಾದ ದೊಡ್ಡ ಬೂರುಗದ ಮರವಿದೆ. ಅದರ ಬುಡದಲ್ಲಿ ಸುತ್ತಲೂ ಒಂದು ಹೆಬ್ಬಾವು ಸುತ್ತಿಕೊಂಡಿದ್ದಿತು. ಅದು ನೀರು ಹಾಕಲು ಮರಕ್ಕೆ ಕಟ್ಟಿರುವ ಪಾತಿಯಂತೆ ಕಾಣುತ್ತಿತ್ತು. ಅದರ ನೀಳ ನೀಳವಾದ ಕೊಂಬೆಗಳು ದಿಙ್ಮಂಡಳವನ್ನು ನೋಡಲು ಹೋಗಿರುವಂತೆ ಕಾಣುತ್ತಿದ್ದುವು. ಮತ್ತು ತಾಂಡವನೃತ್ಯಕಾಲದಲ್ಲಿ ನಾನಾ ವಿಧವಾಗಿ ನರ್ತಿಸುತ್ತಿರುವ ಮಹಾನಟನಾದ ಪರಮೇಶ್ವರನ ದಂಡಾಕಾರವಾದ ಭುಜಗಳೋ ಎಂಬಂತೆ ತೋರುತ್ತಿದ್ದುವು. ಅದು ಬಹಳ ಎತ್ತರವಾಗಿದ್ದುದರಿಂದ ಕೆಳಕ್ಕೆ ಬಿದ್ದುಬಿಡುವ ಹೆದರಿಕೆಯಿಂದ ಆಕಾಶದ ಹೆಗಲಿಗೆ ಆತುಕೊಂಡಂತೆ ಕಾಣುತ್ತಿತ್ತು. ೧೦೧. ಆ ಬೂರುಗದ ಮರದ ಚಾಚುಗೊಂಬೆಗಳಲ್ಲಿ ಬಿಟ್ಟಿರುವ ಹತ್ತಿಯರಾಶಿಗಳು ಎತ್ತರವಾದ ಈ ಮರದ ಮೇಲುಗಡೆಯಲ್ಲೇ ಸಾರಥಿಯಾದ ಅರುಣನ ಚಾಟಿಯ ಏಟಿನ ಭಯದಿಂದ ವೇಗವಾಗಿ ಹೋಗುತ್ತಾ ತಮ್ಮ ಆಯಾಸದಿಂದ ಬಳಲಿಕೆಯನ್ನು ಹೊಂದಿರುವ ಸೂರ್ಯನ ರಥವನ್ನು ಹೊತ್ತಿರುವ ಕುದುರೆಗಳ ಕಟವಾಯಿಗಳಿಂದ ಹೊರಕ್ಕೆ ಬಂದು ಬಿದ್ದಿರುವ ನೊರೆಗಳ ಗುಂಪೋ ಎಂಬ ಸಂಶಯವನ್ನು ಉಂಟುಮಾಡುತ್ತವೆ. ೧೦೨ ಆ ಕಾಡಿನ ಕೊಬ್ಬಿದ ಆನೆಗಳಿಗೆ ಬಹಳವಾಗಿ ನವೆಯುಂಟಾಗಲಾಗಿ ಅವು ಪ್ರತಿನಿತ್ಯವೂ ಬಂದು ತಮ್ಮ ಕೆನ್ನೆಯನ್ನು ಈ ಮರಕ್ಕೆ ತಿಕ್ಕುತ್ತಿದ್ದುವು. ಆಗ ಈ ಮರಕ್ಕೆ ಅಂಟಿಕೊಂಡ ಮಿಗಿಲಾದ ಮದೋದಕದ ವಾಸನೆಗಾಗಿ ದುಂಬಿಗಳು ಬಂದು ಹುರುಪುಗೊಂಡು ಸುತ್ತಲೂ ಕುಳಿತುಕೊಳ್ಳುತ್ತಿದ್ದುವು. ಹೀಗೆ ಬಂದು ಕುಳಿತ ಕಪ್ಪಾದ ಆ ಭ್ರಮರಪಂಕ್ತಿಯು ಮರಕ್ಕೆ ಸರಪಣಿಯನ್ನು ಬಿಗಿ

ವ॥ ಮತ್ತಮದು ದುರ್ಯೋಧನನಂತುಪಲಕ್ಷಿತ ಶಕುನಿ ಪಕ್ಷಪಾತಮುಂ ಪದ್ಮನಾಭನಂತೆ ವನಮಾಲೋಪಗೂಢಮುಂ ಜಳದವ್ಯೂಹದಂತೆ ನಭೋವಿಭಾಗಪ್ರಭೂತೋನ್ನತಿಯುಮೆನಿಪು ದಂತುಮಲ್ಲದೆಯುಂ

ಭುವನತ್ರಯಮುಮನತ್ಯು
ತ್ಸವದಿಂದಂ ನೋಡಲಿದುವೆ ದಲ್ ವನದೇವೀ
ನಿವಹಕ್ಕೆ ಮಹಾಪ್ರಾಸಾ
ದವೆನಿಸಿ ತೋಱುವುದು ತನ್ನೊಳಾದುನ್ನತಿಯಿಂ ೧೧೩

ವ॥ ಮತ್ತಮದು ವಿಂಧ್ಯಾಚಳಸೋದರಮುಂ ದಂಡಕಾರಣ್ಯದಧಿಪತಿಯುಂ ವನಸ್ಪತಿಗಳ ನಾಯಕನುಮೆನಿಸಿತದಱಾ

ತಳಿರ್ಗಳೞುಂಬಿನಲ್ಲಿ ತುದಿಗೊಂಡ ಮೊದಲ್ಗಳ ತಾಣದಲ್ಲಿ ನಾ
ರ್ಗಳ ಪೊರೆಯಲ್ಲಿ ಪೋಳ್ಗಳೆಡೆಯಲ್ಲಿ ಕವಲ್ಗಣಿಯಲ್ಲಿ ಸುತ್ತಲುಂ
ಗಿಳಿಗಳ ಹಿಂಡುಗಳ್ ನೆರೆದು ಕೂಡಿಯುಮಲ್ಲಿ ಸಹಸ್ರಮುಂ ನಿರಾ
ಕುಳಮನುರಾಗದಿಂ ಪಲವು ದೇಶದೊಳಿರ್ಪುವು ಬಂದು ಭೂಪತೀ ೧೧೪

ದಂತೆ ಕಾಣುತ್ತಿತ್ತು. ಇದರಿಂದ ಬೆಟ್ಟದ ನಡುವಿನಂತೆ ದಪ್ಪನಾದ ಆ ಮರದ ಬುಡವು ಕಲ್ಪಪರ್ಯಂತ ಇರತಕ್ಕದ್ದೆಂದು ಗೊತ್ತಾಗುತ್ತಿತ್ತು. ಏಕೆಂದರೆ ಸರಪಣಿಯಿಂದ ಬಿಗಿದು ಕಟ್ಟಿದ ಪದಾರ್ಥಗಳು ಬಹಳ ಕಾಲ ಇರುತ್ತವೆ. ವ॥ ಮತ್ತು ಆ ಮರವು ದುರ್ಯೋಧನನಂತೆ "ಉಪಲಕ್ಷಿತ ಶಕುನಿಪಕ್ಷಪಾತ"ವೆನಿಸಿದ್ದಿತು. (೧. ಕಾಣಲ್ಪಟ್ಟ ಪಕ್ಕಿಗಳ ಬಡಿತವುಳ್ಳದ್ದು. ೨. ತೋರಿಸಲ್ಪಟ್ಟ ಶಕುನಿಯ ಮೇಲಿನ ಮಮತೆಯುಳ್ಳವನು) ಶ್ರೀಮನ್ನಾರಾಯಣನಂತೆ "ವನಮಾಲೋಪಗೂಢ"ವಾಗಿದ್ದಿತು. (೧. ಕಾಡಿನ ಸಾಲುಗಳಿಂದ ಆವೃತ್ತವಾಗಿದ್ದಿತು. ೨. ವನಮಾಲೆಯೆಂಬ ಹೂವಿನ ಸರದಿಂದ ಕೂಡಿಕೊಂಡಿದ್ದನು). ಮೇಘಮಂಡಲದಂತೆ "ನಭೋವಿಭಾಗಪ್ರಭೂತೋನ್ನತಿ"ಯಾಗಿದ್ದಿತು. (೧. ಆಕಾಶದಲ್ಲಿ ಬಹಳ ಎತ್ತರವಾಗಿ ಬೆಳೆದಿರುವುದು. ೨. ಶ್ರಾವಣಮಾಸದಲ್ಲಿ ವಿಶೇಷವಾದ ಅಭಿವೃದ್ಧಿಯುಳ್ಳದ್ದು.) ಅದಲ್ಲದೆ, ಟಿ. ಮೊಳಕಾಲಿನವರೆಗೂ ಜೋಲಾಡುವ, ಎಲ್ಲಾ ಋತುಗಳಿಗೂ ಹೊಂದಿಕೆಯಾಗುವ ಹೂವುಗಳಿಂದ ಕಟ್ಟಲ್ಪಟ್ಟು ಮಧ್ಯದಲ್ಲಿ ದಪ್ಪ ಕದಂಬಕುಸುಮದಿಂದ ಕೂಡಿರುವ ಮಾಲಿಕೆಗೆ ವನಮಾಲೆಯೆಂದು ಹೆಸರು. ೧೧೩. ಇದು ಬಹಳ ಎತ್ತರವಾಗಿದ್ದಿತು. ಇದರಿಂದ ವನದೇವತೆಗಳಿಗೆ ಮೂರು ಲೋಕಗಳನ್ನೂ ಬಹಳ ಸಂಭ್ರಮದಿಂದ ನೋಡಲು ಅನುಕೂಲವಾದ ದೊಡ್ಡ ಮಹಡಿಯಂತೆ ತೋರುತ್ತದೆ. ವ॥ ಬಹಳ ಎತ್ತರವಾದ ಆ ಬೂರುಗದ ಮರವು ವಿಂಧ್ಯ ಪರ್ವತದ ಸಹೋದರನೆಂದೂ ದಂಡಕಾರಣ್ಯದ ಅಧಿಪತಿಯೆಂದೂ ಮರಗಳ ನಾಯಕನೆಂದೂ ಹೇಳಿಸಿಕೊಂಡಿತ್ತು. ಆದರೆ, ೧೧೪. ಎಲೈ ರಾಜನೆ ಚಿಗುರುಗಳ ನಡುವೆ ತುದಿಗೊಂಬೆ ಮೊದಲಾದ ಸ್ಥಳಗಳಲ್ಲಿ ತೊಗಟೆಗಳ ಪದರಗಳಲ್ಲಿ ಸೀಳುಗಳ

ಪರಿವೃತ ಪಲ್ಲವಾಂತರದೊಳುದ್ಗತ ವಲ್ಕಲಮಧ್ಯದೊಳ್ ನಿರಂ
ತರ ವಿಟಪಾಗ್ರದೊಳ್ ವಿಪುಳಕೋಟರ ಸಂಕುಳದೊಳ್ ವಿಶಾಲ ಕಂ
ಧರಗತ ಸಂಧಿಯೊಳ್ ನಿಚಿತ ನೀಡನಿಕಾಯಮನೆಯ್ದೆ ಸುತ್ತಲುಂ
ವಿರಚಿಸಿ ನಿರ್ಭಯಂ ಪಲವುಮಿರ್ಪವು ಕೀರಕುಳಂ ನಿರಾಕುಳಂ ೧೦೫

ಎಲವಂ ಮಡಲ್ತುದೆನೆಯೆಲೆ
ಕಿಲಕಿಲವಾಗಿರ್ದುಮೆಲೆಯ ಪುದುವಿಂದವೆ ಕ
ತ್ತಲಿಸಿದವೋಲಿರ್ಪುದಂದ
ಗ್ಗಲಿಸಿದ ಗಿಳಿವಿಂಡುಗಳ ಪೊದಳ್ದ ಪಸುರ್ಪಿಂ ೧೦೬

ಎಲೆ ಕಾಳಿಂದೀಪ್ರವಾಹೋತ್ಕರವೊ ಸುರಗಜೋನ್ಮೂಲಿತಾಕಾಶಗಂಗಾ
ನಲಿನೀ ಸಂತಾನವೋ ಮೇಣ್ ಪರಿಕಿಸೆ ದಿನಕೃದ್ವಾಜಿರಾಜಪ್ರಭಾಮಂ
ಡಲವೋ ಸಂಚಾರಿಗಾರುತ್ಮತ ರುಚಿರಧರಾಭಾಗವೋ ಶಕ್ರಚಾಪಾ
ವಲಿಯೋ ಪೇಟೆಂಬಿನಂ ಪೋಪುವು ಕುಟುಕುಗೊಳಲ್ ನಿಚ್ಚಲುಂ
ಕೀರಜಾಳಂ ೧೦೭

ಬಿಸಿಲೆಸಕದಿಂದೆ ಕೊರಗಿದ
ದೆಸೆವೆಣ್ಗಳ ಬಿಸುಪನಾಱಿಪಂತಿರೆ ಗಿಳಿಗಳ್
ಪಸುರೆಱಕೆಯೆಂಬ ಬಾಟೆಯ
ಪೊಸ ಬಿಜ್ಜಣಿಗೆಗಳಿನೆಸಗಿಪುವು ತಣ್ಣೆಲರಂ ೧೦೮

ಸ್ಥಳಗಳಲ್ಲಿ ಕವಲುಗಳ ಮಧ್ಯದಲ್ಲಿ ಸುತ್ತಲೂ ಗಿಳಿಗಳ ಹಿಂಡು ನಾನಾ ದೇಶಗಳಿಂದ ಬಂದು ಸಾವಿರಗಟ್ಟಲೆಯಾಗಿ ನೆರೆದು ಯಾವ ಒಂದು ಆತಂಕವೂ ಇಲ್ಲದೆ ಪ್ರೀತಿಯಿಂದ ವಾಸವಾಗಿದ್ದುವು. ೧೦೫. ತುಂಬಿಕೊಂಡಿರುವ ಎಲೆಗಳ ಮಧ್ಯದಲ್ಲಿ ಮೇಲಕ್ಕೆ ಎದ್ದಿರುವ ತೊಗಟೆಗಳ ಮಧ್ಯದಲ್ಲಿ, ದಟ್ಟವಾದ ಕೊಂಬೆಗಳ ತುದಿಯಲ್ಲಿ, ಅಸಂಖ್ಯಾತವಾದ ಪೊಟರೆಗಳ ಗುಂಪಿನಲ್ಲಿ, ವಿಶಾಲವಾದ ಕವಲುಗಳ ಸಂದಿಯಲ್ಲಿ ಸುತ್ತಲೂ ಗೂಡುಗಳನ್ನು ದಟ್ಟವಾಗಿ ಕಟ್ಟಿಕೊಂಡು ಗಿಳಿಗಳ ಗುಂಪು ನಿರ್ಭಯವಾಗಿಯೂ ನಿರಾತಂಕವಾಗಿಯೂ ವಾಸಮಾಡಿಕೊಂಡಿದ್ದುವು. ೧೦೬. ಈ ಮರವು ಬಹಳ ಜೀರ್ಣವಾಗಿದ್ದುದರಿಂದ ಎಲೆಗಳು ಬಹಳ ವಿರಳವಾಗಿದ್ದುವು. ಆದರೂ ಅಲ್ಲಿ ತುಂಬಿಕೊಂಡಿರುವ ಗಿಳಿಗಳ ಹರಡುತ್ತಿರುವ ಹಸುರಿನಿಂದ ಬೂರುಗವೇ ಚಿಗುರಿ ಎಲೆಗಳ ಗುಂಪಿನಿಂದ ದಟ್ಟವಾಗಿದ್ದಂತೆ ಇತ್ತು. ೧೦೭. ಯಮುನಾನದಿಯ ಪ್ರವಾಹ ಪರಂಪರೆಯೋ, ಐರಾವತದಿಂದ ಕೀಳಲ್ಪಟ್ಟ ಆಕಾಶಗಂಗಾನದಿಯ ಕಮಲಗಳ ಗುಂಪೋ, ಸೂರ್ಯನ ಕುದುರೆಗಳ ಸಾಲಿನ ಹಸುರಾದ ಕಾಂತಿಮಂಡಲವೋ, ಸಂಚರಿಸುತ್ತಿರುವ ಸುಂದರವಾದ ಪಚ್ಚೆಯ ನೆಲವೋ ಅಥವಾ ಕಾಮನಬಿಲ್ಲಿನ ಪಂಕ್ತಿಯೋ ಎಂಬಂತಿರುವ ಗಿಳಿಗಳ ಸಮೂಹವು ಆಹಾರಕ್ಕಾಗಿ ಹೋಗಿ ಬರುತ್ತಿದ್ದುವು. ೧೦೮. ಬಿಸಿಲಿನ ಪ್ರಭಾವದಿಂದ ಸಂಕಟಪಡುತ್ತಿರುವ ದಿಕ್ಕುಗಳೆಂಬ ಮಹಿಳೆಯರ ದಗೆಯನ್ನು ಆರಿಸುವಂತೆ ಗಿಳಿಗಳು ಹಸುರು

ಶುಕಶಕುನಿಗಳ್ ಕೃತಾಹಾ
ರಕಂಗಳತಿಪಕ್ಷಪಾತದಿಂದಂ ನಿಜಶಾ
ಬಕತತಿಯನೆಯ್ದಿ ಚಂಚು
ಪ್ರಕರದೆ ನೀಡುವುವು ಕುಟುಕನುತ್ಕಂಠಂಗಳ್ ೧೯

ಅಂತಾ ಶುಕಸಂತತಿ ನಿ
ಶ್ಚಿಂತದಿನಿರ್ದಲ್ಲಿ ಜೀರ್ಣಕೋಟರವಿರಳಾ
ಭ್ಯಂತರದೊಳಿರ್ದುದೊಂದು ಶು
ಕಂ ತನ್ನಯ ಜಾಯೆವೆರಸು ಪರಿಣತವಯಸಂ ೧೦

ಆ ವೃದ್ಧಶುಕಂಗೊರ್ವನೆ
ದೈವಾಧೀನದೊಳೆ ಪುಟ್ಟಿದೆಂ ಪಾಪಿಯೆನಿ
ನ್ನೇವೇಳ್ದಪೆಂ ಪ್ರಸೂತ್ಯು
ದ್ಭಾವದಿನೆಮ್ಮವ್ವೆ ಕಳಿದಳಂತಾಕ್ಷಣದೊಳ್ ೧೧

ವ॥ ಅಂತು ಕಳಿಯೆ ಜಾಯಾವಿಯೋಗದಿಂ ದುಃಖಿತನಾಗಿಯುಮೆನ್ನ ತಂದೆ ಪುತ್ರ ಸ್ನೇಹದಿಂದಳವಿಗಳಿದ ಹೃದಯಶೋಕಮನಡಂಗಿಸಿರ್ದು ಮತ್ಪ್ರಾಣನ ಪ್ರಯತ್ನತತ್ಪರನಾಗಿ

ಕಟಲಲ್ ನಿಜತನುವೊಂದೆರ
ಡುಳಿಯಲ್ ಗಱವೀಟ್ಟು ಕುಳಿಯಲಾಕರ್ಣಂ ಜೋ
ಲ್ದಿಳಿಯಲ್ ಮುಯ್ಯುಗಳಾವಗೆ
ವಳಿಯಲ್ ಬಲವಾಱಿದಂತು ಮುಪ್ಪಿಂ ಪಾಱಲ್ ೧೨

ರೆಕ್ಕೆಗಳೆಂಬ ಬಾಳೆಗರಿಯ ಹೊಸ ಬೀಸಣಿಗೆಯಿಂದ ತಂಗಾಳಿಯನ್ನು ಬೀಸುತ್ತಿವೆ. ೧೯. ಈ ಗಿಳಿಗಳು ಹೀಗೆ ಆಹಾರವನ್ನು ಸಂಪಾದಿಸಿಕೊಂಡು ತಾವೂ ತಿಂದು ಬಹಳ ಅಕ್ಕರೆಯಿಂದ ತಮ್ಮ ಮರಿಗಳ ಹತ್ತಿರ ಬಂದು "ಉತ್ಕಂಠ"ಗಳಾಗಿ (೧. ಮೇಲಕ್ಕೆತ್ತಿದ ಕತ್ತುಳ್ಳವುಗಳಾಗಿ, ೨. ಪ್ರೀತಿಯಿಂದ ಕೂಡಿದವುಗಳಾಗಿ) ಗುಟುಕನ್ನು ಕೊಕ್ಕಿನಿಂದ ತಿನ್ನಿಸುತ್ತಿದ್ದುವು. ೧೦. ಹೀಗೆ ಅಲ್ಲಿ ಗಿಳಿಗಳ ಸಮುದಾಯವು ನೆಮ್ಮದಿಯಿಂದ ಇರುತ್ತಿರುವಲ್ಲಿ ಆ ಮರದ ಹಳೆಯ ಪೊಟರೆಯ ಅಗಲವಾದ ಒಳಭಾಗದಲ್ಲಿ ಒಂದು ಮುದಿಗಿಳಿಯು ತನ್ನ ಹೆಂಡತಿಯೊಂದಿಗೆ ವಾಸವಾಗಿತ್ತು. ೧೧. ಆ ಮುದಿಗಿಳಿಗೆ ಅದೃಷ್ಟವಶದಿಂದ ಪಾಪಿಯಾದ ನಾನೊಬ್ಬನು ಮಗನಾಗಿ ಹುಟ್ಟಿದೆನು. ಅಯ್ಯೋ, ಏನು ಹೇಳಲಿ ! ಹೆರಿಗೆಯ ಕಾಲದಲ್ಲಿ ಉಂಟಾದ ಸಂಕಟದಿಂದ ನಮ್ಮ ತಾಯಿಯು ಸತ್ತು ಹೋದಳು. ವ॥ ಹೀಗೆ ಸತ್ತುಹೋಗಲಾಗಿ ಹೆಂಡತಿಯ ಅಗಲುವಿಕೆಯಿಂದ ದುಃಖಿತನಾದರೂ ನನ್ನ ತಂದೆಯು ಎಲ್ಲೆಮೀರಿದ ಮನಸ್ಸಿನ ಅಳಲನ್ನು ಅಡಗಿಸಿಕೊಂಡು ನನ್ನನ್ನು ಸಾಕುವ ಪ್ರಯತ್ನದಲ್ಲೇ ಆಸಕ್ತನಾಗಿ, ೧೨. ಶರೀರವು ಗಳಿತವಾಗಲು ಗರಿಗಳು ಬಿದ್ದು ಒಂದೆರಡು ಮಾತ್ರ ಉಳಿದಿರಲು, ಶ್ರವಣಶಕ್ತಿಯು ಕಮ್ಮಿಯಾಗಲು, ಹೆಗಲು (ರೆಕ್ಕೆಯ ಮೂಲ) ಜೋಲುಬೀಳಲು, ಮುಪ್ಪಿನಿಂದ ಹಾರಲು ಶಕ್ತಿಯಿಲ್ಲದಂತೆ

ವ॥ ಅಂತು ಮುಪ್ಪಿಂ ಪಾಱಲಾಱದೆ

ಪಕ್ಕಿಗಳಲ್ಲಿ ತಿಂದುೞಿದ ನೆಲ್ಗಳನುಚ್ಚುಗಳಂ ಫಲಂಗಳಂ
ಪಕ್ಕದೊಳಿರ್ದ ಗೂಡುಗಳಿನಾಯ್ದೆನಗಿಕ್ಕುವನಕ್ಕಱಿಂದೆ ತಾಂ
ಮಿಕ್ಕುದನುಂಡಪಂ ಕಡಿದು ನೆಲ್ಗಳನಂಟದ ತಾೞವಣ್ಣ ಬ
ಣ್ಣಕ್ಕೆಣೆಯಾದ ಚಂಚುಪುಟದಿಂದಮ ಮಜ್ಜನಕಂ ಮಹೀಪತೀ ೧೧೩

ವ॥ ಅಂತಾತನೆನಗೆ ಕುಟುಕನಿಕ್ಕಿ ಮಿಕ್ಕುದಂ ತನಗಶನಮಂ ಮಾಡಿ ಜೀವಿಸುತ್ತು
ಮಿರೆಯಿರೆ

ಅರುಣಮರೀಚಿರಕ್ತ ನಳಿನೀದಳದಿಂದೆಸೆವಭ್ರಪಂಕಜಾ
ಕರತಟದಿಂದಮೀಗಳಪರಾಬ್ಧಿಗೆ ಬರ್ಪ ಜರನ್ಮರಾಳಮೋ
ಪಿರಿದುಮೆನಲ್ಕೆ ಮೆಲ್ಲನಿೞಿದತ್ತು ವಿಯತ್ತಳ ಮಧ್ಯಭಾಗದಿಂ
ಪರಿಣತರಂಕು ರೋಮತತಿ ಪಾಂಡುರಮಂದು ಶಶಾಂಕಮಂಡಲಂ ೧೧೪

ಅದು ಸಂಧ್ಯೋಪಾಸ್ತಿಗೆ ಪೋ
ರ್ದಿದಪುದು ಮಾನಸ ಸರಕ್ಕಮೀಗಳಿದೆಂಬಂ
ದದಿನುತ್ತರಾಶೆಯಂ ಪೊ
ರ್ದಿದತ್ತು ಸಪ್ತರ್ಷಿಮಂಡಲಂ ಕ್ರಮದಿಂದಂ ೧೧೫

ಶರೀರಸ್ಥಿತಿಯು ಕುಂದಲು ವ॥ ಹಾಗೆ ಮುಪ್ಪಿನಿಂದ ಹಾರಲಾರದೆ ೧೧೩. ಎಲೈ ಮಹಾರಾಜನೆ, ಆ ನನ್ನ ತಂದೆಯು ಮುದಿತನದ ಪ್ರಯುಕ್ತ ತುದಿ ಮುರಿದುಹೋಗಿರುವುದರಿಂದ ಭತ್ತದ ಕಾಳುಗಳನ್ನು ಹಿಡಿದುಕೊಳ್ಳಲಾರದ ಮತ್ತು ತಾಳೆಹಣ್ಣಿನ ಬಣ್ಣವನ್ನು ಹೊಂದಿರುವ ಕೊಕ್ಕಿನಿಂದಲೇ ಹಕ್ಕಿಗಳು ತಿಂದು ಮಿಕ್ಕ ಬತ್ತದ ನುಚ್ಚುಗಳನ್ನೂ ಹಣ್ಣುಗಳನ್ನೂ ಅಕ್ಕಪಕ್ಕದ ಗೂಡುಗಳಿಂದ ಆಯ್ದುಕೊಂಡು ಬಂದು ಬಹಳ ಅಕ್ಕರೆಯಿಂದ ನನಗೆ ಕೊಡುತ್ತಿದ್ದನು; ಉಳಿದುದನ್ನು ತಾನು ತಿನ್ನುತ್ತಿದ್ದನು, ವ॥ ಹೀಗೆ ಅವನು ನನಗೆ ಗುಟುಕನ್ನು ಕೊಟ್ಟು ಮಿಕ್ಕುದನ್ನು ತಾನು ತಿನ್ನುತ್ತಾ ಜೀವಿಸುತ್ತಿರಲಾಗಿ ೧೧೪. ಕೆಂಪು ಕಾಂತಿಯನ್ನು ಹೊಂದಿರುವ ಕೆಂದಾವರೆಯ ಎಸಳುಗಳಿಂದ ಶೋಭಿಸುವ ಆಕಾಶಗಂಗಾನದಿಯ ಕಮಲಸಮೂಹದಿಂದ ಹೊರಟು ಪಶ್ಚಿಮ ಸಮುದ್ರಕ್ಕೆ ಬರುತ್ತಿರುವ ಮುದಿಹಂಸವೋ ಎಂಬಂತಿರುವ ಮುದಿಯಾದ ರಂಕುಮೃಗದ (ಒಂದು ಜಾತಿಯ ಜಿಂಕೆ) ರೋಮರಾಜಿಯಂತೆ ಬಿಳುಪಾದ ಚಂದ್ರಮಂಡಲವು ಆಕಾಶದ ಮಧ್ಯದಿಂದ ಮೆಲ್ಲನೆ ಇಳಿಯುತ್ತಿತ್ತು. ೧೧೫. ಸಪ್ತರ್ಷಿಗಳು ಸಂಧ್ಯಾವಂದನೆಯನ್ನು ಮಾಡಲು ಮಾನಸಸರೋವರಕ್ಕೆ ಹೋಗುತ್ತಿದ್ದಾರೋ ಎಂಬಂತೆ ಸಪ್ತರ್ಷಿಮಂಡಲವು ಕ್ರಮಕ್ರಮವಾಗಿ ಉತ್ತರದ ಕಡೆಗೆ

ಕರಗಿರ್ದಪುವೋ ತರದಿಂ
ದರಗಿನ ಸರಿಗೆಗಳಿವಲ್ಲವಾನೆಯ ನೆತ್ತರ್
ಪೊರೆದಿರ್ಪುವೊ ಸಿಂಹದ ಕೇ
ಸರಂಗಳೆನಲೊಗೆದವರುಣತರಣಿಕರಂಗಳ್ ೧೧೬

ಹರಿದಶ್ವಂ ಬಂದಪಂ ವಾಹಳಿಗೆನುತರುಣಂ ವ್ಯೋಮವಿಸ್ತೀರ್ಣರಂಗಾಂ
ತರವೀಧೀಚ್ಛನ್ನತಾರಾಸ್ಫಟಿಕಶಕಲಮಂ ನೂಂಕುತಂ ಚಾರುಚಾಮೀ
ಕರಯಂತ್ರವ್ರಾತದಿಂ ಕುಂಕುಮ ಘನರಸಮಂ ಸಿಂಪಿಸುತ್ತಿರ್ದನೆಂಬಂ
ತಿರಲೆತ್ತಂ ನೀಳ್ದು ಪೊಣ್ಮಿತ್ತುದಯಸಮಯದೊಳ್ ಶೋಣಸೂರ್ಯಾಂ
ಶುಜಾಲಂ ೧೧೭

ಗಗನಾಂತರ್ಭಾಗದೊಳ್ ತೀವಿದ ನಿಜಕರಸಂದೋಹದಿಂದೆಯ್ದೆ ಮಿತ್ರಂ
ಮಿಗೆ ನೂಂಕಲ್ ತಾರಕಾಸಂಕುಲಮುದಿರ್ದುವೊ ಪೇೞ್ಬಿನಂ ಸಂಪುಟಂ ಪ
ತ್ತುಗೆವಿಟ್ಟೋರಂದದಿಂ ಸಿಂಪುಗಳುಗುೞ್ ಪಿಡಿಲ್ತಂದ ಮುಕ್ತಾಫಲಶ್ರೇ
ಣಿಗಳಿಂದಂ ಪಶ್ಚಿಮಾಂಭೋಧಿಯ ಪುಳಿನಚಯಂ ಬೆಳ್ಪನಾಳ್ದಿರ್ದುವಾಗಳ್ ೧೧೮

ಕೞಿದುವು ಪನಿಪುಲ್ಗಳ ಕಣ್
ತೆಱೆದುವು ನವಿಲೆರ್ದು ಕರಿಣಿಕರ್ಣಂಗಳನೆ
ಚ್ಚಱಿಸಿದುವಾಗಳ್ ಬಾಯಂ
ತೆಱೆದುವು ಪಿಂಗಳಿಗಳಲ್ಲಿ ಮುನ್ನೀಸಱನೊಳ್ ೧೧೯

ಹೋಗುತ್ತಿತ್ತು. ೧೧೬. ದ್ರವೀಭಾವವನ್ನು ಹೊಂದಿರುವ ಅರಗಿನ ಎಳೆಗಳೋ ಅಥವಾ ಕೊಂದ ಆನೆಯ ರಕ್ತದಿಂದ ತೊಯಿದಿರುವ ಸಿಂಹದ ಕೇಸರಗಳೋ ಎಂಬಂತಿರುವ ಕೆಂಪಾದ ಸೂರ್ಯನ ಕಿರಣಗಳು ಉದಯಿಸಿದುವು. ೧೧೭. ಸೂರ್ಯನು ವಿಹಾರಕ್ಕಾಗಿ ಬರುತ್ತಾನೆ ಎಂಬುದಾಗಿ ಅವನ ಸಾರಥಿಯಾದ ಅರುಣನು ಆಕಾಶವೆಂಬ ವಿಶಾಲವಾದ ರಂಗಸ್ಥಳದ ಮಾರ್ಗದಲ್ಲಿ ಹರಡಿಕೊಂಡಿರುವ ನಕ್ಷತ್ರಗಳೆಂಬ ಸ್ಫಟಿಕಶಿಲೆಯ ಚೂರುಗಳನ್ನು ಗುಡಿಸಿ ರಮಣೀಯವಾದ ಚಿನ್ನದ ಯಂತ್ರಗಳಿಂದ ಕುಂಕುಮಕೇಸರಿಯ ಉತ್ತಮವಾದ ನೀರನ್ನು ಚಿಮುಕಿಸುತ್ತಿರುವನೋ ಎಂಬಂತೆ ಉದಯಕಾಲದಲ್ಲಿ ಸೂರ್ಯನ ಕೆಂಪುಕಿರಣಗಳು ಎಲ್ಲೆಲ್ಲೂ ವಿಸ್ತಾರವಾಗಿ ಹಬ್ಬಿದುವು. ೧೧೮. ಆಕಾಶದ ಮಧ್ಯಭಾಗದಲ್ಲಿ ವ್ಯಾಪಿಸಿಕೊಂಡಿರುವ ಕರ (ಕಿರಣ, ಕೈ)ಗಳ ಸಮೂಹದಿಂದ ಸೂರ್ಯನು ನೂಕಲಾಗಿ ನಕ್ಷತ್ರಗಳ ಗುಂಪು ಅಲ್ಲಿ ಉದುರಿವೆಯೋ, ಹೇಳು—ಎಂಬಂತೆಯೂ ಸಂಪುಟವು ಬೇರ್ಪಟ್ಟು ಚಿಪ್ಪುಗಳು ಹೊರಚೆಲ್ಲಲು ಸಿಡಿದು ಬರುತ್ತಿರುವ ಮುಕ್ತಾಫಲಗಳ ಸಮೂಹದಿಂದಲೂ ಮರಳರಾಶಿಯು ಬಿಳಿಯ ಬಣ್ಣವನ್ನು ತಾಳಿದ್ದಿತು. ೧೧೯. ಆ ಬೆಳಗಿನ ಜಾವದಲ್ಲಿ ಮಂಜಿನ ಹನಿಗಳು ಸುರಿದುವು, ನವಿಲುಗಳು ಕಣ್ಣುಬಿಟ್ಟುವು, ಹೆಣ್ಣಾನೆಗಳು ಎಚ್ಚೆತ್ತು ಗಂಡಾನೆಗಳನ್ನು ಎಚ್ಚರಿಸಿದುವು, ಸಿಂಹಗಳು ಆಕಳಿಸಿದುವು,

ಅರುಣಂಗೆ ವನಂ ಪಲ್ಲವ
ಕರಂಗಳಿಂದರ್ಘ್ಯವೆತ್ತುತಿರ್ದಪನೆಂಬಂ
ತಿರೆ ಪನಿವ ಪುಲ್ಲನೀರ್ಗ
ಳ್ವಿರಸಲರುದುರುತ್ತುಮಿರ್ದುವಂತಾಕ್ಷಣದೊಳ್ ೧೨೦

ವನದೇವೀಪ್ರಾಸಾದಮಿ
ದೆನಿಪಗಳ್ಕುಳದೊಳ್ ಕಪೋತಸಂಪತಿ ನೆಗೆದ
ತ್ತೆನಿಪುವು ಧರ್ಮಪತಾಕೆಗ
ಳೆನಿಸಿದ ಮುನಿಪಾಗ್ನಿಧೂಮತತಿ ತದ್ದಿನದೊಳ್ ೧೨೧

ಲತಿಕಾಲಾಸ್ಯೋಪದೇಶವ್ಯಸನಿ ವನಲತಾಂದೋಳಿತಾಮೋದ ಸಂತ
ರ್ಪಿತ ಚಂಚಚ್ಚಂಚರೀಕಂ ಕಮಲವನರಜೋರಂಜಿತಾಂಗಂ ಪುಳಿಂದೀ
ರತಘರ್ಮಸ್ವೇದವಿಚ್ಛೇದನಪಟು ಮೃಗಸಂದೋಹರೋಮಂಥಫೇನೋ
ದ್ಗತ ಬಿಂದುಸ್ಯಂದಿ ತೀಡಿತ್ತೆಸಗಿ ಸುರಭಿವೈಭಾತಿಕಂ ಮಾತರಿಶ್ವಂ ೧೨೨

ಬೆಳಗಾಯ್ತೆಂಬವಸರದೊಳ್
ನಳಿನವನಶ್ರೀ ಪ್ರಬೋಧವಾಗಧಿಯರ್ ಬಂ
ದೆಳಸಿ ಪೊಗಟ್ದಪ್ಪರೆಂಬಿನ
ಮಳಿಸಂಕುಲನಿನದಮೊಗೆದುದಬ್ಜಾಕರದೊಳ್ ೧೨೩

೧೨೦. ಕಾಡು ಸೂರ್ಯನಿಗೆ ಚಿಗುರೆಂಬ ಕೈಗಳಿಂದ ಅರ್ಘ್ಯವನ್ನು ಕೊಡುತ್ತದೆ ಎಂಬಂತೆ ಹನಿಯಿಕ್ಕುತ್ತಿರುವ ಮಂಜಿನಿಂದ ಕೂಡಿದ ಹೂವುಗಳು ಉದುರುತ್ತಿದ್ದುವು. ೧೨೧. ಆ ಬೆಳಗಿನ ಜಾವದಲ್ಲಿ ಋಷಿಗಳು ಅಗ್ನಿಹೋತ್ರವನ್ನು ಮಾಡುತ್ತಿದ್ದರು. ಅದರಿಂದ ಏಳುವ ಹೊಗೆಯು ಧರ್ಮದ ಬಾವುಟವೋ ಎಂಬಂತೆ ಮೇಲೆ ಮೇಲೆ ಹರಡುತ್ತಿತ್ತು. ಅಲ್ಲದೆ ಅದು ವನದೇವತೆಗಳ ಉಪ್ಪರಿಗೆಮನೆಯಂತಿರುವ ಮರಗಳ ಮೇಲೆ ಹಾರಾಡು ತ್ತಿರುವ ಪಾರಿವಾಳಗಳ ಗಡಣವೋ ಎಂಬಂತೆ ಕಾಣುತ್ತಿತ್ತು. ೧೨೨. ಎಳೆಬಳ್ಳಿಗಳೆಂಬ ಕನ್ನೆಯರಿಗೆ ಮಧುರನೃತ್ಯವನ್ನು ಕಲಿಸುವುದರಲ್ಲಿ ಆಸಕ್ತಿ ಹೊಂದಿರುವ (ಎಳೆಬಳ್ಳಿ ಗಳನ್ನು ಮೆಲ್ಲನೆ ಅಳ್ಳಾಡುವಂತೆ ಮಾಡುವ), ಕಾಡಿನ ಹೂಬಳ್ಳಿಗಳನ್ನೆಲ್ಲಾ ತೂಗಾಡಿಸಿ ಅದರಿಂದ ಹೊರಡುವ ಪರಿಮಳದಿಂದ ಕಾಡಿನಲ್ಲಿ ಹಾರಾಡುವ ದುಂಬಿಗಳಿಗೆಲ್ಲಾ ತೃಪ್ತಿ ಯನ್ನುಂಟುಮಾಡುವ, ಕಮಲಗಳ ಗುಂಪಿನ ಪರಾಗಗಳಿಂದ ಬಳಿಯಲ್ಪಟ್ಟ ದೇಹವುಳ್ಳ (ಕೂಡಿಕೊಂಡಿರುವ) ಬೇಡರ ಹೆಂಗಸರಿಗೆ ಸಂಭೋಗಕಾಲದಲ್ಲಿ ಸೆಕೆಯಿಂದ ಉಂಟಾಗುವ ಬೆವರನ್ನು ನಿವಾರಿಸುವುದರಲ್ಲಿ ಚಟುವಟಿಕೆಯಿಂದ ಕೂಡಿರುವ, ಮೃಗಸಮುದಾಯವು ಮೆಲುಕುಹಾಕುವಾಗ ಉಂಟಾಗುವ ನೊರೆಯ ತುಂತುರುಗಳನ್ನು ಹಾರಿಸಿಕೊಂಡು ಹೋಗಿ ಎಲ್ಲಾ ಕಡೆಗಳಲ್ಲೂ ಸುರಿಸುವ ಪರಿಮಳಯುಕ್ತವಾದ ಬೆಳಗಿನ ಜಾವದ ಗಾಳಿಯು ಸುತ್ತಲೂ ಬೀಸುತ್ತಿತ್ತು. ೧೨೩. ಬೆಳಗಾಗುವ ಕಾಲದಲ್ಲಿ ಕಮಲವನದಲ್ಲಿ ವಾಸಿಸುತ್ತ ಈಗ ಮಲಗಿರುವ ಲಕ್ಷ್ಮೀದೇವಿಯನ್ನು ಎಚ್ಚರಿಸಲು ಭಟ್ಟಂಗಿ ಮಹಿಳೆಯರು

ಡಿಂಡಿಮರವದೊಳ್ ವನವೇ
ತಂಡಮನೆಚ್ಚರಿಸುತಿರ್ಪವೋಲ್ ಸೊಗಯಿಸುಗುಂ
ಗಂಡಸ್ಥಳಮದಸೌರಭ
ಮಂಡಳಿತ ಭ್ರಮರ ಮಧುರ ಮಂದ್ರಧ್ವಾನಂ ೧೨೪

ಕರಗಿದರಗಿಂ ಪಗಿಲ್ತಂ
ತಿರೆ ತಳ್ತಿಮೆಯ್ಯೆಕಿಲೆಲರಿನೆಚ್ಚೆತ್ತಾ ಪೊ
ಟ್ಟರೆಯೊಳ್ ಕಣ್ದೆರೆದತ್ತೂ
ಪರಶಯ್ಯಾಧೂಮ್ರರೋಮಹರಿಣಸಮೂಹಂ ೧೨೫

ದಿನಮುಖದೊಳ್ ಸಂಚರಿಸುವ
ವನಕರಿಗಳ ಕರ್ಣತಾಳ ಗಂಭೀರತರ
ಧ್ವನಿಗೆಳಸಿ ರಾಗದಿಂ ಸೋ
ಗೆನವಿಲ್ಗಳ ಪಿಂಡು ನಲಿದು ನರ್ತಿಸಿತಾಗಳ್ ೧೨೬

ವ॥ ಅಂತು ನೇಸರ್ ಮೂಡಲೊಡನೆ ಗೂಡುಗಳಿಂ ಗಿಳಿಗಳೆಲ್ಲಂ ಕುಟುಕುಗೊಳಲೆಂದು ಪೋಗೆ ಶಾಬಕನಿಕರಸನಾಥಮಾಗಿಯುಃಂ ನಿಶ್ಶಬ್ದತೆಯಿಂ ಶೂನ್ಯದಂತಿರ್ದ ಶಾಲ್ಮಲಿ ವನಸ್ಪತಿಯೊಳ್

ಬಂದು ಆಸಕ್ತಿಯಿಂದ ಹೊಗಳಿ ಹಾಡುತ್ತಿದ್ದಾರೋ ಎಂಬಂತೆ ತಾವರೆಕೊಳಗಳಲ್ಲಿ ದುಂಬಿಗಳ ಸಮೂಹದ ಝೇಂಕಾರವು ಕೇಳಿಬರುತ್ತಿತ್ತು. ೧೨೪. ಕಪೋಲಗಳಲ್ಲಿ ಸುರಿಯುತ್ತಿರುವ ಮದೋದಕದ ಪರಿಮಳದಿಂದ ಆಕರ್ಷಿಸಲ್ಪಟ್ಟು ಮುತ್ತಿಕೊಂಡಿರುವ ದುಂಬಿಗಳ ಮಧುರವಾಗಿಯೂ ಗಂಭೀರವಾಗಿಯೂ ಇರುವ ಧ್ವನಿಯು ಮಲಗಿರುವ ಕಾಡಾನೆಯನ್ನು ಡಿಂಡಿಮವೆಂಬ ವಾದ್ಯವನ್ನು ಬಾರಿಸಿ ಎಚ್ಚರಿಸುವಂತೆ ಸೊಗಸನ್ನು ಪಡೆದಿತ್ತು. ೧೨೫. ಕರಗಿದ ಅರಗಿನಿಂದ ಅಂಟಿಸಿದಂತೆ ಒಂದಕ್ಕೊಂದು ಕೂಡಿಕೊಂಡಿರುವ ರೆಪ್ಪೆಗಳುಳ್ಳ, ಬಂಜರುನೆಲದಲ್ಲಿ ಮಲಗಿಕೊಂಡಿರುವುದರಿಂದ ಧೂಮ್ರವರ್ಣವನ್ನು ಹೊಂದಿರುವ ಕೂದಲುಗಳುಳ್ಳ ಜಿಂಕೆಗಳ ಸಮೂಹವು ಬೆಳಗಿನಜಾವದಲ್ಲಿ ತಂಗಾಳಿಯಿಂದ ಎಚ್ಚೆತ್ತು ಕಣ್ಣುಬಿಟ್ಟಿತು. ೧೨೬. ಮುಂಜಾನೆ ಸಂಚರಿಸುತ್ತಿರುವ ಕಾಡಾನೆಗಳ ಕಿವಿಗಳೆಂಬ ತಾಳಗಳಿಂದ ಉಂಟಾಗುವ ಅತ್ಯಂತ ಗಂಭೀರವಾದ ಧ್ವನಿಯನ್ನು ಗುಡುಗೆಂದು ತಿಳಿದು ಆಸೆಪಟ್ಟು, ನವಿಲುಗಳ ಹಿಂಡು ಪ್ರೀತಿಯಿಂದ ನಲಿದು ಕುಣಿದಾಡಿತು. ವ॥ ಹೀಗೆ ಸೂರ್ಯನು ಹುಟ್ಟಲಾಗಿ ಕೂಡಲೆ ಗೂಡುಗಳಿಂದ ಗಿಳಿಗಳೆಲ್ಲವೂ ಗುಟುಕನ್ನು ಸಂಗ್ರಹಿಸಲು ಹೊರಟುಹೋಗಿರಲಾಗಿ ಗಿಳಿಯ ಮರಿಗಳ ಗುಂಪಿನಿಂದ ಕೂಡಿಕೊಂಡಿದ್ದರೂ ನಿಶ್ಶಬ್ದವಾಗಿರುವುದರಿಂದ ಖಾಲಿಯಾಗಿರುವಂತೆ ಇದ್ದ ಆ

ಕುಡುಕುಗೊಳವೋಪ ಶಕುನಿಗ
ಳೊಡವೋಗಲ್ ಜನಕನಾಱದಿರ್ದೊಡಮಾನುಂ
ಮಿಡುಕಲಣಮಱಿಯದಿರ್ದೆಂ
ಪೊಡರದ ಗಱಿಯುವನೆ ತನ್ನ ತಂದೆಯ ಕೆಲದೊಳ್ ೧೨೭

ಚಕಿತೋದ್ಯತ್ಪಕ್ಷಿ ಪಕ್ಷಸ್ವನದೊಳಮರ್ದ ಕೋಳಾಹಳಧ್ವಾನದಿಂ ಕೊ
ರ್ವಿ ಕರೀಂದ್ರೋದ್ಭೂತ ಘೂತ್ಕಾರದೆ ಪುದಿದು ಗುಹಾನೀಕಸುಪ್ತೋತ್ಥಸಿಂಹ
ಪ್ರಕರಪ್ರೋನ್ನಾದದಿಂ ತಳ್ತುಪಗತ ವನದೇವೀಚಯಸ್ವಾಂತಸಂತ್ರಾ
ಸಕರಂ ಪೊಣ್ಮಿತ್ತು ವಿಂಧ್ಯಂ ನಡುಗೆ ಘನರವಸ್ಪರ್ಧಿ ಕೈರಾತಘೋಷಂ ೧೨೮

ಅಂತಶ್ರುತ ಪೂರ್ವಧ್ವನಿ
ಯಂ ತೊಟ್ಟನೆ ಕೇಳ್ದು ಕೇಳ್ದು ಕಿವಿಯೊಡೆದಪುದೆಂ
ಬಂತಾಗೆ ಘೀಳಿಡಲ್ವೊ
ಕ್ಕೆಂತಂದೆಯ ಶಿಥಿಲ ಪಕ್ಷಸಂಪುಟದೆಡೆಯೊಳ್ ೧೨೯

ವ॥ ಅಂತಾ ಸಮಯದೊಳ್

ಇದೆ ಪರ್ವಿತ್ತು ಮತಂಗಜೋಚ್ಚಳಿತ ಕಂಜಾಳೀರಜಸ್ತೋಮಮಿಂ
ತಿದೆ ತೀಡಿತ್ತು ವರಾಹಸಂಕುಳದಳನ್ಮುಸ್ತೋತ್ಕರಾಮೋದಮಿಂ
ತಿದೆ ಬಂದಿತ್ತಿಭಯೂಥನಾಥದಳಿತೋದ್ಯತ್ಸಲ್ಲಕೀಗಂಧಮಿಂ
ತಿದೆ ತೋಱಿತ್ತು ಮದಾಂಧಸೈರಿಭಖುರಪ್ರೋದ್ಧೂತರೇಣುವ್ರಜಂ ೧೩೦

ಬೂರುಗದ ಮರದಲ್ಲಿ ೧೨೭. ಹೀಗೆ ಆಹಾರವನ್ನು ತರಲು ಹೋಗುವ ಪಕ್ಕಿಗಳ ಜೊತೆಯಲ್ಲಿ ಹೋಗಲು ಅಶಕ್ತನಾದ ನನ್ನ ತಂದೆಯು ಅಲ್ಲಿಯೇ ಇದ್ದುದರಿಂದ ಗರಿಪುಟ್ಟದಿರುವ ನಾನೂ ಚಲಿಸುವುದಕ್ಕೆ ಸ್ವಲ್ಪವೂ ಆಗದೆ ನನ್ನ ತಂದೆಯ ಪಕ್ಕದಲ್ಲೇ ಇದ್ದೆ. ಆಗ, ೧೨೮. ಗಾಬರಿಯಿಂದ ಹಾರಿಹೋಗಲಿರುವ ಪಕ್ಕಿಗಳ ರೆಕ್ಕೆಗಳ ಧ್ವನಿಯಿಂದ ಕೂಡಿದ ಕೋಲಾಹಲಧ್ವನಿಯಿಂದ, ಮತ್ತೂ ಹೆಚ್ಚಾಗಿರುವ ಗಾಬರಿಗೊಂಡ ಸಲಗಗಳ ಚೀತ್ಕಾರದಿಂದ ಕೂಡಿಕೊಂಡಿರುವ, ಗುಹೆಗಳಲ್ಲಿ ಮಲಗಿದ್ದು ಎಚ್ಚರಗೊಂಡ ಸಿಂಹಗಳ ತಂಡದ ದೊಡ್ಡ ಧ್ವನಿಯಿಂದ ಸೇರಿಕೊಂಡ, ವನದೇವತೆಗಳ ಮನಸ್ಸಿಗೆ ಭಯವನ್ನುಂಟುಮಾಡುವ, ಗುಡುಗಿನ ಧ್ವನಿಯೊಂದಿಗೆ ಪೈಪೋಟಿ ಮಾಡುವಂತಿರುವ ಬೇಡರ ಕೋಲಾಹಲಧ್ವನಿಯು ವಿಂಧ್ಯಪರ್ವತವು ಅಳ್ಳಾಡಿ ಹೋಗುವಂತೆ ಹರಡಿಬಿಟ್ಟಿತು. ೧೨೯. ಹೀಗೆ ಹಿಂದೆ ಎಂದೂ ಕೇಳದ ಈ ಧ್ವನಿಯನ್ನು ತಟ್ಟನೆ ಕೇಳಿ ಕೇಳಿ ಕಿವಿಯೊಡೆದುಹೋಗುವಂತಾಗಲು ನಾನು ಕಿರಿಚುತ್ತಾ ತಂದೆಯ ಗಳಿತವಾದ ರೆಕ್ಕೆಗಳ ಸಂದಿಯನ್ನು ಸೇರಿಕೊಂಡೆನು. ೧೩೦. "ಇಲ್ಲಿ ಆನೆಗಳಿಂದ ಕೀಳಲ್ಪಟ್ಟ ಕಮಲಗಳ ಪರಾಗವಿದೆ. ಇಲ್ಲಿ ಕಾಡುಹಂದಿಗಳ ತಂಡದಿಂದ ಅಗೆಯಲ್ಪಟ್ಟ ಕೊನ್ನಾರಿ ಗಡ್ಡೆಯ ಸುವಾಸನೆಯು ಹರಡುತ್ತಿದೆ. ಇಲ್ಲಿ ಸಲಗನಿಂದ ಮುರಿಯಲ್ಪಟ್ಟು ಹೊರ ಬರುತ್ತಿರುವ ಆನೆಬೇಲದಮರದ ವಾಸನೆಯಿದೆ. ಇಲ್ಲಿ ಕೊಬ್ಬಿರುವ ಕಾಡುಕೋಣದ

ರುರುಗಣಮಿತ್ತಲಿತ್ತ ವಿಚರನ್ಮೃಗಸಂಕುಳಮಿತ್ತಲಿತ್ತ ಸೂ
ಕರಚಯಮಿತ್ತಲಿತ್ತ ವನಸೈರಿಭಸಂಕುಲಮಿತ್ತಲಿತ್ತ ಕುಂ
ಜರಕುಳಮಿತ್ತಲಿತ್ತಲಿವೆ ಶಿಖಂಡಿಕುಲಸ್ವನಮಿತ್ತಲಿತ್ತ ಕೇ
ಸರಿರವಮಿತ್ತಲಿತ್ತಮೆನುತಿರ್ಪ ರವಂ ನೆಗೆದತ್ತು ಸುತ್ತಲುಂ ೧೩೧

ಇದೆ ಚಕಿತ ಲಾವುಕಸ್ವನ
ಮಿದೆ ಹರಿನಖಭಿನ್ನಕುಂಭ ಕುಂಜರರವಮಿಂ
ತಿದೆ [ಕುರರಕುಲಸ್ವನ]ಮಿಂ
ತಿದೆ ಕುಕ್ಕುಟರಭಸಮಿದೆ ಕಪಿಂಜಲನಿನದಂ ೧೩೨

ನಸು ಮೆಲ್ದಚ್ಚಗಱುಂಕೆ ಸೂಸುತಿದೆ ಪೋದತ್ತಿಲ್ಲಿ ನಾನಾ ಮೃಗಂ
ಮುಸುಱುತ್ತಿರ್ಪುದು ಗುಂಗುರೀಯೆಡೆಯೊಳಂ ಪೋದತ್ತು ಸೊಕ್ಕಾನೆ ಪೆ
ರ್ಗೆಸರಾಗಿರ್ಪುದು ಬಟ್ಟೆ ಪೋದವಿದಱೊಳ್ ಪೆರ್ಬಂದಿಗಳ್ ನೆತ್ತರುಂ
ಬಸಿವುತ್ತಿರ್ಪುದು ಪೋದವಿಕ್ಕಿ ಮಱಿಯಂ ಪುಲ್ಲಟ್ಟೆಯೊಳ್ ಪುಲ್ಲೆಗಳ್ ೧೩೩

ಬರೆದರೊ ಪತ್ರಮನೆಂಬಂ
ತಿರೆ ಪಜ್ಜೆಗಳೆಸೆಯೆ ನಾಂದು ನೆತ್ತರೊಳೆತ್ತಂ
ಕರಿಮಸ್ತಕಮೌಕ್ತಿಕದಿಂ
ತುರವೀಧಿಯ ತೋಱಿದಪುದು ಮೃಗಪತಿಮಾರ್ಗಂ ೧೩೪

ಗೊರಸಿನಿಂದ ಏಳುತ್ತಿರುವ ಧೂಳು ಕಾಣುತ್ತಿದೆ. ೧೩೧. 'ಈ ಕಡೆ ರುರುಮೃಗಗಳ ಮಂದೆ ! ಈ ಕಡೆ ಸಂಚರಿಸುತ್ತಿರುವ ಜಿಂಕೆಗಳ ತಂಡ ! ಈ ಕಡೆ ಕಾಡುಹಂದಿಗಳ ಗುಂಪು ! ಈ ಕಡೆ ಕಾಡುಕೋಣಗಳ ಸಮೂಹ. ಈ ಕಡೆ ಆನೆಗಳ ಹಿಂಡು ! ಈ ಕಡೆ ನವಿಲುಗಳ ಧ್ವನಿ ! ಈ ಕಡೆ ಸಿಂಹಗಳ ಗರ್ಜನೆ' ಎಂಬ ಕೂಗಾಟವು ಎಲ್ಲೆಲ್ಲೂ ಹೊರಡುತ್ತಿತ್ತು. ೧೩೨. "ಇದು ಗಾಬರಿಗೊಂಡ ಗೀಜಗನ ಕೂಗು. ಇದು ಸಿಂಹಗಳ ಉಗುರುಗಳಿಂದ ಸೀಳಲ್ಪಟ್ಟ ಕುಂಭಸ್ಥಳವುಳ್ಳ ಆನೆಗಳ ಚೀರಾಟ. ಇದು ಕುರರಪಕ್ಷಿಗಳ ಕೂಗಾಟ. ಇದು ಕೋಳಿಗಳ ಜೋರುದನಿ. ಇದು ಲಾವುಗೆಹಕ್ಕಿಗಳ ಸ್ವರ. ೧೩೩. ಸ್ವಲ್ಪ ಮೇದಿರುವ ಹಸಿರುಗರಿಕೆ ಅಲ್ಲಲ್ಲಿ ಬಿದ್ದಿದೆ. ಆದ್ದರಿಂದ ಇಲ್ಲಿ ಅನೇಕ ಜಿಂಕೆಗಳು ಹೋಗಿರಬೇಕು. ಈ ಎಡೆಯಲ್ಲಿ ಗುಂಗುರು ಮುತ್ತಿಕೊಂಡಿದೆ. ಆದ್ದರಿಂದ ಕೊಬ್ಬಿದ ಆನೆ ಈ ಕಡೆ ಹೋಗಿರಬೇಕು. ಈ ಕಡೆ ದಾರಿಯೆಲ್ಲಾ ಕೆಸರಾಗಿದೆ. ದೊಡ್ಡ ಹಂದಿಗಳು ಈ ಕಡೆ ಹೋಗಿರಬೇಕು. ಇಲ್ಲಿ ರಕ್ತ ಸೋರುತ್ತಿದೆ. ಜಿಂಕೆಗಳು ಮರಿ ಹಾಕಿ ಹುಲ್ಲಿನ ದಾರಿಯಿಂದ ಈ ಕಡೆ ಹೋಗಿವೆ. ಇದು ಸಿಂಹ ಹೋಗಿರುವ ಹಾದಿ. ಇಲ್ಲಿ ರಕ್ತದಿಂದ ತೊಯ್ದಿರುವ ಸಿಂಗದ ಹೆಜ್ಜೆಯ ಗುರುತುಗಳಿವೆ. ೧೩೪. ಈ ಹೆಜ್ಜೆಗಳು ರಕ್ತದಿಂದ ಕಾಗದವನ್ನು ಬರೆದಿಟ್ಟಿರುವಂತೆ ತೋರುತ್ತವೆ. ಇದು ಆನೆಯ ತಲೆಗಳಿಂದ ಉದುರಿದ

ನಡೆಸಲ್ ನಿಲ್ವಿದು ಸಾರ್ಚಮುರ್ಚು ಮಾರನಂ ಬಂದೇಱು ಬಿಲ್ವೀಸುತಂ
ಜಡಿ ಸೋಂಕೊಂಕು ತೆರಳ್ಚು ನೋಡು ಕಡುಗೆಯ್ದೇಱುರ್ ನಿಂದು ಸೀಳ್ಕಾಯ್ಗಳಂ
ಬಿಡು ಕೋಲಂ ತುಡು ಸಾರ್ದು ಪೊರ್ದಿಸೆನುತಂ ತಂತಮ್ಮೊಳೋರೋರ್ವರೊಳ್
ನುಡಿವೊಂದಬ್ಬರಮುರ್ಬಿತಾಗಳೆನಸುಂ ವಿಂಧ್ಯಾಟವೀಮಧ್ಯದೊಳ್ ೧೩೪

ವ॥ ಅನಂತರಮನೇಕ ಶಬರ [ಶರ]ಸಂಘಾತದಿಂದಱಿಯೆ ನೊಂದು ಮೃದಂಗಧ್ವಾನ [ಧೀರವಾಗೆ] ಬೆಟ್ಟುಗಳ್ ಮಾರ್ದನಿಗುಡೆ ಗಜಱಿ ಗರ್ಜಿಪ ಕಂಠೀರವರವಂಗಳೊಳಂ ಬೆದಱಿ ಬೆರ್ಚಿ ಕಡುಪುಗಳಂ ಬಿಟ್ಟು ಪರಿದೊಂದಿ ನಿಂದು ಭೂಮಿ ತಾಡನಂಗೆಯ್ದು ಮುಗಿಲ್ಗಳ್ ಮೊೞಗುವಂತೆ ಮೊೞಗುವ ಯೂಥಪತಿಗಳ ಬೃಂಹಿತಂಗಳೊಳಂ ಪರಿದುಪತ್ತಿ ನಾಯ್ಗಳುಲಿದು ತಿನೆ ಜೋಲ್ದು ಕೆಡೆದ ಹರಿಣಂಗಳ ಕೂಜಿತಂಗಳೊಳಂ ಬೞಿಸಲ್ವ ಮಱಿಗಳ್ವೆರಸು ಕಳಕಳಕ್ಕೆ ಕೆಕ್ಕರಿಸಿ ಪರಿವೃತವಾಗಳಾಗಳೆ ಬೀೞ್ದ ನಿಜಯೂಥಪತಿಗಳಂ ಕಂಡು ಪೋಗಲಾಱದೆ ಸುೞಿ ಸುೞಿದು ನಿಲ್ವ ಕರಿಣಿಗಳ ಚೀತ್ಕಾರದೊಳಂ ಆಗಳೆ ಪೆತ್ತ ಮಱಿಗಳಂ ಬಿಟ್ಟು ಬೆದಱಿ ಪೋಗಲಾಱದೆಳಸಿ ನಿಲಲಾಱವೆ ಬಾಯ್ವಿಟ್ಟೊದಱಿ ಪೆಳಱಿ ಪರಿವ ಖಡ್ಗಿಧೇನುಕಂಗಳ ಕರುಣಾ

ಮುತ್ತುಗಳಿಂದ ತುಂಬಿಕೊಂಡಿರುವ ಹಾದಿಯನ್ನು ತೋರಿಸುತ್ತವೆ. ೧೩೪. ಹೋಗು ! ಮುನ್ನುಗ್ಗು ! ನಿಲ್ಲಗೊಡಿಸು ! ಸಮೀಪಕ್ಕೆ ಹೋಗು ! ಸೇರಿಸು ! ಮರವನ್ನು ಬಂದು ಹತ್ತು ! ಬಿಲ್ಲನ್ನು ಬೀಸುತ್ತಾ ಹೊಡೆ, ಮುಟ್ಟು, ಒತ್ತು ! ಸಾಮರ್ಥ್ಯವನ್ನು ತೋರ್ಪಿಸಿ ಸಿದ್ಧನಾಗು ! ನಿಂತು ಸೀಳ್ಕಾಯಿಗಳನ್ನು ಬಿಡು ! ಬಾಣಪ್ರಯೋಗ ಮಾಡು ! ಮುಂದಕ್ಕೆ ಹೋಗಿ ಜೋಡಿಸು !" ಎನ್ನುತ್ತಾ ತಮ್ಮತಮ್ಮಲ್ಲಿ ಒಬ್ಬೊಬ್ಬರು ಮಾತನಾಡುವ ಆರ್ಭಟವು ಆ ವಿಂಧ್ಯಪರ್ವತದ ಕಾಡಿನ ಮಧ್ಯದಲ್ಲಿ ಬಹಳವಾಗಿ ಹೆಚ್ಚಿತು. ವ॥ ಬಳಿಕ ಬೇಡರ ಅನೇಕ ಬಾಣಗಳಿಂದ ಸಾಯುವಂತೆ ಸಂಕಟಪಟ್ಟು, ಮೃದಂಗಧ್ವನಿಯಂತೆ ಗಂಭೀರವಾಗಿ ಬೆಟ್ಟಗಳು ಪ್ರತಿಧ್ವನಿಗೊಡುವಂತೆ ಗರ್ಜಿಸುತ್ತಿರುವ ಸಿಂಹಗಳ ಧ್ವನಿಯಿಂದಲೂ, ಹೆದರಿ ಗಾಬರಿಗೊಂಡು ತನ್ನ ಗುಂಪಿನ ಆನೆಗಳನ್ನು ಬಿಟ್ಟು ಚೆದುರಿ ಒಬ್ಬಂಟಿಗನಾಗಿ ನಿಂತು ಸೊಂಡಿಲನ್ನು ಭೂಮಿಗೆ ಅಪ್ಪಳಿಸಿ ಮೋಡಗಳು ಗುಡುಗುವಂತೆ ಧ್ವನಿ ಮಾಡುತ್ತಿರುವ ಸಲಗಗಳ ಘೀಳಿಡುವಿಕೆಯಿಂದಲೂ, ನಾಯಿಗಳು ಓಡಿಹೋಗಿ ಹಿಂಬಾಲಿಸಿ ಗುರುಗುಟ್ಟಿ ತಿನ್ನಲಾಗಿ ಜೋಲುಬಿದ್ದು ಕೆಳಗುರುಳುವ ಜಿಂಕೆಗಳ ಅರಿಚಾಟದಿಂದಲೂ, ಹತ್ತಿರಕ್ಕೆ ಬಂದ ಮರಿಗಳೊಂದಿಗೆ ಕೋಲಾಹಲಕ್ಕೆ ಹೆದರಿ ಧಾವಿಸುತ್ತಾ ಆಗಲೆ ಬೇಡರ ಹೊಡೆತದಿಂದ ಕೆಳಕ್ಕೆ ಉರುಳಿದ ತಮ್ಮ ಸಲಗಗಳನ್ನು ಕಂಡು ಮುಂದಕ್ಕೆ ಚಲಿಸಲಾರದೆ ಅಲ್ಲಲ್ಲೆ ಸುಳಿದಾಡುತ್ತ ನಿಂತಿರುವ ಹೆಣ್ಣಾನೆಗಳ ಚೀತ್ಕಾರದಿಂದಲೂ, ಆಗ ತಾನೆ ಹೆತ್ತಿರುವ ಮರಿಗಳನ್ನು ಹೆದರಿಕೆಯಾದರೂ ಬಿಟ್ಟುಹೋಗಲಾರದೆ ಅಕ್ಕರೆಯಿದ್ದರೂ ಅಲ್ಲಿ ನಿಲ್ಲಲಾರದೆ ಬಾಯಿಬಿಟ್ಟು ಅರಚಿ ಹೆದರಿ ಓಡಾಡುತ್ತಿರುವ ಹೆಣ್ಣು

ಕ್ರಂದನಂಗಳೊಳಂ ಮರತುದಿಗೋಡುಗಳಿಂ ತಱಗೆಲೆಗಳಂತೆ ಬೆದಱಿ ನೆಲಕ್ಕೆ ಬೀೞ್ವ ಪಕ್ಕಿಗಳು ಲುಪ್ಪುಗಳೊಳಂ ಭೂಮಿ ಕಂಪವಾಗೆ ಪರಿವ ಮೃಗಯುಃಗಳ ಚರಣಾಘಾತ ಶಬ್ದಂಗಳೊಳಂ ಮಹಿಷಸ್ಕಂಧಪೀಠಪಾತಿತಂಗಳಪ್ಪ ಬಾಳ್ಗಳ ಬಾಯಧಾರೆಗಳ ನಿನಾದದೊಳಂ ಎಡೆವಿಡದೆ ಬೆದೆವೆರಸಿದ ಕುರರಕೂಜಿತಂಗಳಂತೊಗೆವ ಸರಳ ಮೊಱೆಪದೊಳಂ ಕೂಡೆ ವಿಂಧ್ಯಾಟವಿಯೆಲ್ಲಂ ಪ್ರಚಲಿತಮಾದಂತಾಗೆ

ಆಂ ಜನಕನೆಱಕೆಯೊಳಗಿ
ರ್ದಂಜುತ್ತಂ ಕೇಳುತಿರ್ದೆನಿರ್ಪನ್ನವರಂ
ಬಿಂಜದಡವಿಯೊಳಗೆಲ್ಲಂ
ನಂಜಿನಮೞೆಗೊಂಡು ಬಿಟ್ಟ ತೆಱನಾಯ್ತಾಗಳ್ ೧೩೬

ಅದು ಮೊಟಗು ಮಾಣ್ದು ಕಾರ್ಗಾ
ಲದ ಮುಗಿಲದು ಕಡೆಪಮುಡುಗಿದಂಬುಧಿಯೆಂಬಂ
ದದಿನಡವಿ ಮೂಗುವಟ್ಟಿ
ರ್ದುದು ಬೇಟೆಯೊಳಾದ ಕಳಕಳಂ ಪಿಂಗುವಿನಂ ೧೩೭

ವ॥ ಅಂತಾ ಕಳಕಳರವಮುಡಂಗಲೊಡನೆಯುದ್ಭೂತವಿಸ್ಮಯನಾಗಿ ತಂದೆಯಿರಿಸಿದ ಪಕ್ಷ ಸಂಪುಟದೊಳಗಣಂ ಪೊಱಮಟ್ಟಿದೇನೆನುತ್ತಮಾಂ ಪೊಟಲೊಳಗಿರ್ದು ಮೆಲ್ಲನೆ ನಿಳ್ಕಿನಿಳ್ಕಿದೆಪ್ಪಳಿಸಿ ನೋೞ್ಪನ್ನೆಗಮಲ್ಲಿ

ಗೇಂಡಾಮೃಗಗಳ ಕರುಣಾಜನಕವಾದ ಆಕ್ರಂದನಧ್ವನಿಯಿಂದಲೂ, ಮರದ ತುದಿಗೊಂಬೆ ಗಳಿಂದ ಹೆದರಿ ತರಗೆಲೆಯಂತೆ ನೆಲಕ್ಕೆ ಬೀಳುತ್ತಿರುವ ಪಕ್ಷಿಗಳ ಕೂಗಾಟದಿಂದಲೂ, ಭೂಮಿಯು ನಡುಗುವಂತೆ ಓಡಾಡುತ್ತಿರುವ ಬೇಟೆಗಾರರ ಹೆಜ್ಜೆಯ ಹೊಡೆತದ ಶಬ್ದ ದಿಂದಲೂ, ಕಾಡೆಮ್ಮೆಯ ಕೊರಳೆಡೆಯಲ್ಲಿ ಬೀಳುತ್ತಿರುವ ಕತ್ತಿಗಳ ಬಾಯ ಅಲಗಿನ ಧ್ವನಿ ಯಿಂದಲೂ, ಕಾಮಾತುರಗಳಾದ ಕುರರಪಕ್ಷಿಗಳ ಉಲಿಯುತಿರುವ ಒಂದೇಸಮನೆ ಬಿಡಲ್ಪಡುತ್ತಿರುವ ಬಾಣಗಳ ಮೊರೆತದಿಂದಲೂ ಒಟ್ಟಿಗೆ ವಿಂಧ್ಯಾರಣ್ಯವೆಲ್ಲವೂ ಅಲ್ಲೋಲ ಕಲ್ಲೋಲವಾದಂತಾಗಿ ೧೩೬. ನಾನು ತಂದೆಯ ರೆಕ್ಕೆಯೊಳಗಿದ್ದು ಹೆದರುತ್ತಾ ಇದೆಲ್ಲ ವನ್ನೂ ಕೇಳುತ್ತಿದ್ದೆ. ಅಷ್ಟರಲ್ಲಿ ಆ ವಿಂಧ್ಯಾರಣ್ಯದಲ್ಲೆಲ್ಲಾ ವಿಷದ ಮಳೆ ಬಂದು ನಿಂತಂತೆ ಆಯಿತು. ೧೩೭. ಹೀಗೆ ಬೇಟೆಯ ಕೋಲಾಹಲವು ಅಡಗಲಾಗಿ ಆ ಕಾಡು ಗುಡುಗು ಗಳ ಶಬ್ದವೆಲ್ಲಾ ಅಡಗಿದ ಮೇಘದಂತೆಯೂ ಅಮೃತಪ್ರಾಪ್ತಿಗಾಗಿ ಮಾಡಿದ ಕಡೆತವು ನಿಂತುಹೋದ ಮೇಲಿನ ಕ್ಷೀರಸಮುದ್ರದಂತೆಯೂ ಸದ್ದು ಗದ್ದಲವಡಗಿ ಮೌನವನ್ನು ತಾಳಿತು. ವ॥ ಹೀಗೆ ಆ ಕೋಲಾಹಲವು ಅಡಗಲಾಗಿ ಕೂಡಲೆ ನಾನು ಆಶ್ಚರ್ಯಗೊಂಡ ವನಾಗಿ ಅಡಗಿದ್ದ ತಂದೆಯ ರೆಕ್ಕೆಗಳ ಮಧ್ಯದಿಂದ ಹೊರಕ್ಕೆ ಬಂದು ಪೊಟರೆಯೊಳಗೆ ಇದ್ದುಕೊಂಡೇ ಇದೇನೆಂದು ಬೆರಗಾಗಿ ಮೆಲ್ಲಮೆಲ್ಲನೆ ಕತ್ತನ್ನು ಚಾಚಿ ಚಾಚಿ ನೋಡುತ್ತಿರ

ಇದು ನವಕಾಳಮೇಘಚಯಮಲ್ಲಿದು ಘೋರ ಮಹಾಂಧಕಾರಮ
ಲ್ಲಿದು ವಿಚರತ್ತಮಾಳವನಮಲ್ಲಿದು ಘೋರಕೃತಾಂತಸೈನ್ಯಮ
ಲ್ಲಿದು ಕಲಿಕಾಲ ಬಂಧುಕುಲಮಲ್ಲಿದು ದುರ್ಧರ ದಾನವೌಘಮೆಂ
ಬುದನೆನಿಸುತ್ತಮಲ್ಲಿ ಬರುತಿರ್ದುದನಂತಕಿರಾತಸಂಕುಳಂ ೧೩೮

ವ॥ ಅಂತುತ್ಪಾತವೇತಾಳವಡೆಯಂತೆ ಭಯಂಕರಾಕಾರಮಾದ ಬೇಡವಡೆಯ ನಡುವೆ

ಕಟ್ಬೋನ್ನಿಂದಂ ವಿಧಾತ್ರಂ ಸಮೆದನಿವನನೆಂಬೊಂದು ಕಾರ್ಕಶ್ಯದಿಂದಂ
ಸರ್ವಾಂಗಂ ಕಣ್ಗೆಗುರ್ವಂ ಪಡೆಯಲಡವಿಯಂ ಕೂಡೆ ಕಾಳಿಂದಿಯೆತ್ತಂ
ಪರ್ವಿತ್ತೆಂಬಂತೆ ನೀಳೋತ್ಪಳದಳ ರುಚಿರಶ್ಯಾಮದೇಹಾಂಶು ಪರ್ವ
ಲ್ಕೊರ್ವಂ ಬಂದಂ ಪುಳಿಂದಪ್ರಕರ ಬಹುಳ ಸೇನಾಪರೀತಂ ಕಿರಾತಂ ೧೩೯

ವ॥ ಅದಲ್ಲದೆಯುಂ ಯೂಥಪತಿ ಪ್ರಥಮೋದ್ಭಿನ್ನ ದಾನಲೇಖಾನುಕಾರಿಶ್ಮಶ್ರು ಲೇಖನುಂ ಗಜಮದ ಮಳಿನ ಕೇಸರಿ ಜಟಾಕುಟಳಕುಂತಳಕಳಾಪನುಂ ಕಾತ್ಯಾಯನೀ ತ್ರಿಶೂಲ ಲಾಂಛನ ಪ್ರತಿಮ ತ್ರಿಪತಾಕಾ ಭ್ರುಕುಟಿ ವಿಕಟಲಲಾಟಪಟ್ಟನುಮುತ್ತುಂಗ ಘೋರ ಘೋಣನುಂ ಕರ್ಣಾಭರಣೀಕೃತ ಫಣಾಮಣಿಪ್ರಭಾರುಣಿತ ವಾಮಪಾರ್ಶ್ವನುಂ ಕಾಳಾಗರು ಪರಿಮಳಾ ಮೋದಿತ [ಕಲಿ]ಮದಕರ್ದಮಕೃತಾಂಗರಾಗನುಂ ಅಂಗರಾಗಪರಿಮಳಪ್ರಬದ್ಧ ಮಂಡಲಾಳಿ

ಲಾಗಿ, ಅಲ್ಲಿ ೧೩೮. ಹೊಸದಾದ ಕಪ್ಪುಮೋಡಗಳ ಒಬ್ಬುಳಿಯಂತೆಯೂ, ಭಯಂಕರ ವಾದ ಕಗ್ಗತ್ತಲೆಯಂತೆಯೂ, ಸಂಚರಿಸುತ್ತಿರುವ ಹೊಂಗೆಮರದ ತೋಪಿನಂತೆಯೂ, ಭಯಂಕರವಾದ .ಯಮಸೈನ್ಯದಂತೆಯೂ, ಕಲಿಯುಗಪುರುಷನ ಮಿತ್ರಮಂಡಲಿ ಯಂತೆಯೂ, ಎದುರಿಸಲಸಾಧ್ಯವಾದ ರಾಕ್ಷಸರ ಗುಂಪಿನಂತೆಯೂ ಇದ್ದ ಲೆಕ್ಕಕ್ಕೆ ಸಿಕ್ಕ ದಷ್ಟು ದೊಡ್ಡದಾದ ಬೇಡರ ಪಡೆಯು ಅಲ್ಲಿ ಬರುತ್ತಿತ್ತು. ವ॥ ಹೀಗೆ ಅಪಶಕುನ ವನ್ನುಂಟುಮಾಡುವ ದೆವ್ವಗಳ ಗುಂಪಿನಂತಿರುವ ಭಯಂಕರವಾದ ಬೇಡರ ಪಡೆಯ ಮಧ್ಯದಲ್ಲಿ ೧೩೯. ಬಹಳ ದೊಡ್ಡದಾದ ಬೇಡರ ಪಡೆಯಿಂದ ಕೂಡಿಕೊಂಡು ಸೇನಾ ಪತಿಯಾದ ಒಬ್ಬ ಕಿರಾತನು ಬರುತ್ತಿದ್ದನು. ಅವನ ಸರ್ವಾಂಗವೂ ಬಹಳ ಒರಟಾಗಿದ್ದು ಕಣ್ಣಿಗೆ ಭಯವನ್ನುಂಟುಮಾಡುತ್ತಿತ್ತು. ಅದರಿಂದ ಬ್ರಹ್ಮನು ಇವನನ್ನು ಕಬ್ಬಿಣದಿಂದ ನಿರ್ಮಿಸಿರಬೇಕೆಂದು ತೋರುತ್ತಿತ್ತು. ಕನ್ನೈದಿಲೆಯ ದಳಗಳಂತೆ ಶೋಭಿಸುವ ಮನೋ ಹರವಾದ ಮತ್ತು ಕಪ್ಪಾದ ಅವನ ದೇಹದ ಕಾಂತಿ ಹರಡಿತ್ತು. ಇದರಿಂದ ಕಾಡಿನಲ್ಲೆಲ್ಲಾ ಯಮುನಾನದಿಯ ಪ್ರವಾಹವು ಹರಿಯುತ್ತಿರುವಂತೆ ಕಾಣುತ್ತಿತ್ತು. ವ॥ ಅದಲ್ಲದೆ ಅವನು ಪ್ರಾಯಕ್ಕೆ ಬಂದಿರುವ ಸಲಗನ ಮೊತ್ತಮೊದಲನೆಯದಾಗಿ ಹೊರಡುತ್ತಿ ರುವ ಮದೋದಕದ ಗೆರೆಯಂತೆ ಕಾಣುತ್ತಿರುವ ಮೀಸೆಯ ಸಾಲನ್ನು ಹೊಂದಿದ್ದನು. ಆನೆಯ ಮದೋದಕದಿಂದ ಮಲಿನವಾಗಿರುವ ಸಿಂಹದ ಕೇಸರದಂತಿರುವ ತಲೆಗೂದಲುಳ್ಳ ವನಾಗಿದ್ದನು. ಅವನ ಹಣೆಯು ಮೂರು ಧ್ವಜಗಳಂತಿರುವ ಮೂರು ಗೆರೆಗಳಿಂದ ಕೂಡಿದ ಹುಬ್ಬುಗಂಟಿನಿಂದ ವಿಕಾರವಾಗಿದ್ದಿತು. ಇದು ದುರ್ಗಾದೇವಿಯು ಇವನು ನನ್ನ

**ರಂಜಿತ ಮಯೂರ ಪಿಂಛಾತಪತ್ರನುಂ ವಿಂಧ್ಯಾಟವೀಕರತಲಾನುಕಾರಿ ಕರ್ಣಪಲ್ಲವಾಪನೋದಿತ ಕಪೋಲಮಂಡಲೀಸ್ವೇದನುಂ ಅಕಾಲಸಂಧ್ಯಾಪ್ರದಾನ ಪ್ರವೀಣಲೋಹಿತಲೋಚನನುಂ ಚಂಡಿಕಾ ರುಧಿರಧಾರಾವಿನಿಹಿತಶಸ್ತ್ರೋಲ್ಲೇಖಿನ ವಿಷಮಿತ ಭುಜಯುಗಳನುಂ ಮೃಗರುಧಿರಶೀಕರರಂಜಿತ ಸ್ವೇದೋ[ದ]ಬಿಂದುಮಾಲಾಲಂಕೃತ ವಿಶಾಲವಕ್ಷಸ್ಥಳನುಂ ಅನವರತ ಶ್ರಮಾಭ್ಯಾಸ ಕೃತೋದರನುಂ ಬದ್ಧಕಾಶೇಯವಸನನುಂ ಇಭಮದಮಲಿನೀಕೃತಾಲಾಲಸ್ತಂಭದ್ವಯೋಪ ಮಾನೋರುಯುಗಳನುಂ ಕಾಳಾಯಸ ನಿಗಳಬದ್ಧ ವಾಮಪಾದನುಂ ಅರಣ್ಯದಂತೆ ಖಡ್ಗಧೇನುಕಾ ಸಹಿತನುಂ ಅಭಿನವಜಲಧರದಂತೆ ಮಯೂರಪಿಂಛವಿಚಿತ್ರಚಾಪಧರನುಂ ಬಕನಂತೆ ಗೃಹೀ**

ಭಕ್ತ. ನನ್ನವನು ಎಂದು ತೋರಿಸಲು ತನ್ನ ತ್ರಿಶೂಲದಿಂದ ಮುದ್ರೆಯೊತ್ತಿದಂತೆ ಕಾಣು ತ್ತಿತ್ತು. ಮೂಗು ಎತ್ತರವಾಗಿಯೂ ಭಯಂಕರವಾಗಿಯೂ ಇತ್ತು. ಎಡಗಿವಿಯಲ್ಲಿ ನಾಗರತ್ನದ ಕಡುಕು ಶೋಭಿಸುತ್ತಿತ್ತು. ಇದರ ಕಾಂತಿಯಿಂದ ಅವನ ಎಡಭಾಗವೆಲ್ಲಾ ಕೆಂಪಾಗಿದ್ದಿತು. ಅವನು ಕಾಲಾಗರುವಿನಂತೆ ಪರಿಮಳಯುಕ್ತವಾದ (ಆಗತಾನೆ ಕೊಂದಿ ರುವ) ಆನೆಯ ಮದೋದಕವನ್ನು ಮೈಗೆ ಲೇಪನ ಮಾಡಿಕೊಂಡಿದ್ದನು. ಹಾಗೆ ಅವನು ಲೇಪಿಸಿಕೊಂಡಿದ್ದ ಮದೋದಕದ ಸುವಾಸನೆಗೆ ಎರಗಿಬಂದ ದುಂಬಿಗಳು ಮೇಲೆ ಮಂಡ ಲಾಕಾರವಾಗಿ ನೆರೆದಿರಲು ಅದು ನವಿಲುಗರಿಯ ಛತ್ರಿಯಂತೆ ಶೋಭಿಸುತ್ತಿತ್ತು. ಅವನು ಕಿವಿಯಲ್ಲಿ ಇಟ್ಟುಕೊಂಡಿರುವ ಚಿಗುರಿನಿಂದ ಕೆನ್ನೆಯ ಮೇಲೆ ಮೂಡುತ್ತಿದ್ದ ಬೆವರಿನಹನಿ ಗಳು ಒರೆಸಲ್ಪಡುತ್ತಿದ್ದುವು. ಇದು ಇವನಿಂದ ಆಕ್ರಮಿಸಲ್ಪಟ್ಟ ವಿಂಧ್ಯಾಟವಿಯು ಸ್ತ್ರೀ ರೂಪದಿಂದ ಬಂದು ತನ್ನ ಕೆಂಪಾದ ಹಾಗೂ ಮೃದುವಾದ ಕೈಯಿಂದ ಬೆವರನ್ನು ಒರೆಸು ತ್ತಿರುವಳೋ ಎಂಬಂತೆ ಇತ್ತು. ಅವನ ಕೆಂಪಾದ ಕಣ್ಣಿನ ಹೊಳಪು ಅಕಾಲದಲ್ಲಿ ಕೆಂಬಣ್ಣ ವನ್ನುಂಟುಮಾಡಿ ಸಂಧ್ಯಾಕಾಲವನ್ನು ನಿರ್ಮಿಸಿದಂತೆ ತೋರುತ್ತಿತ್ತು. ತನ್ನ ಇಷ್ಟ ದೇವತೆಯಾದ ಚಂಡಿಕಾದೇವಿಗೆ ಅರ್ಪಿಸುವುದಕ್ಕಾಗಿ ಬೇಕಾಗುವ ತನ್ನ ದೇಹದ ರಕ್ತವನ್ನು ತೆಗೆದುಕೊಳ್ಳುವುದಕ್ಕಾಗಿ ಪ್ರಯೋಗಿಸಿದ ಶಸ್ತ್ರಗಳಿಂದ ಉಂಟಾದ ಗೀರುಗಾಯಗಳಿಂದ ಅವನ ತೋಳುಗಳು ಪಳ್ಳತಿಟ್ಟಾಗಿದ್ದುವು. ಅವನ ವಿಶಾಲವಾದ ವಕ್ಷಸ್ಥಳವು ಕೊಂದ ಜಿಂಕೆಗಳ ನೆತ್ತರಿನ ಹನಿಗಳಿಂದ ಕೂಡಿಕೊಂಡಿರುವ ಬೆವರಿನ ಹನಿಗಳ ಮಾಲಿಕೆಯಿಂದ ಶೋಭಿಸುತ್ತಿತ್ತು. ಯಾವಾಗಲೂ ಅಂಗಸಾಧನೆ ಮಾಡಿಕೊಂಡಿದ್ದುದರಿಂದ ಅವನ ಹೊಟ್ಟೆಯು ತೆಳ್ಳಗಿದ್ದಿತು. ಅವನು ರೇಷ್ಮೆಯ ವಸ್ತ್ರಗಳನ್ನು ಧರಿಸಿದ್ದನು. ಅವನ ಎರಡು ತೊಡೆಗಳು ಆನೆಯನ್ನು ಕಟ್ಟುವ ಅದರ ಮದೋದಕದಿಂದ ಮಲಿನವಾದ ಎರಡು ಕಂಭಗಳಂತಿದ್ದುವು. ಅವನು ಎಡಗಾಲಿಗೆ ಕಬ್ಬಿಣದ ಸರಪಣಿಯನ್ನು ಹಾಕಿಕೊಂಡಿದ್ದನು. ಅವನು ಅರಣ್ಯದಂತೆ "ಖಡ್ಗಧೇನುಕಾಸಹಿತ" ನಾಗಿದ್ದನು. (೧. ಚೂರಿ ಎಂಬ ಆಯುಧ ವುಳ್ಳವನಾಗಿದ್ದನು. ೨. ಗೇಂಡಾಮೃಗಗಳಿಂದಲೂ ಹೆಣ್ಣಾನೆಗಳಿಂದಲೂ ಕೂಡಿರುವುದು) ಹೊಸಮೋಡದಂತೆ "ಮಯೂರಪಿಂಛವಿಚಿತ್ರ ಚಾಪಧರ"ನಾಗಿದ್ದನು. (೧. ನವಿಲುಗರಿ

ತ್ಯೈಕಚಕ್ರನುಂ ಗರುಡನಂತೆ ಸಮುದ್ಧೃತಾನೇಕ ನಾಗದಶನನುಂ ನಿದಾಘದಿವಸದಂತಾವಿಷ್ಕೃತ ಮೃಗತೃಷ್ಣನುಂ ಹಿರಣ್ಯಾಕ್ಷನಂತೆ ಮಹಾವರಾಹ ವಿಶೀರ್ಣವಕ್ಷಸ್ಥಳನುಂ ರಾಗಿಯಂತೆ ಬಹು ವಿಧಪರಿಗ್ರಹನುಂ ಅಭಿನವ ಯೌವನನಾಗಿಯುಂ ಕ್ಷಪಿತವಯುಸನುಂ ಕೃಷ್ಣನಾಗಿಯುಮಸುದರ್ಶನನುಂ ಕ್ಷಿತಿಭೃತ್ಪಾದಾನುವರ್ತಿಯಾಗಿಯುಂ ರಾಜಸೇವಾನಭಿಜ್ಞನುಮೆನಿಸಿರ್ದನಂತಲ್ಲದೆಯುಂ

ಪೊರೆದರೊ ನೆತ್ತರಿಂದೆನಿಪ ನಾಲಿಗೆಯಿಂ ಬಿಡೆ ಕೀಳ್ತ ಸಿಂಹಕೇ
ಸರದವೊಲಿರ್ದ ದಾಡೆಗಳ ಕಾಂತಿಯುನಾಂತ ವರಾಹಘಾತ ಜ
ರ್ಝರತನುಗಳ್ ನಿಜಶ್ರಮುವನೊಯ್ಯನೆ ನಾಲಗೆಯಿಂದೆ ತೋಱುವಂ
ತಿರೆ ಬಟಿಸಂದುವಾ ಶಬರನಾಯಕನಂ ಕಿಱುನಾಯುಕುನ್ನಿಗಳ್ ೧೪೦

ಯನ್ನೂ ಹೊಸ ಬಗೆಯ ಬಿಲ್ಲನ್ನೂ ಧರಿಸಿದ್ದನು. ೨. ನವಿಲುಗರಿಯಂತೆ ನಾನಾ ಬಣ್ಣಗಳುಳ್ಳ ಕಾಮನಬಿಲ್ಲನ್ನು ಹೊಂದಿರುವುದು.) ಬಕನಂತೆ "ಗೃಹೀತೈಕಚಕ್ರ"ನಾಗಿದ್ದನು. (೧. ಚಕ್ರವೆಂಬ ಆಯುಧವೊಂದನ್ನು ಹಿಡಿದುಕೊಂಡಿದ್ದನು. ೨. ಏಕಚಕ್ರವೆಂಬ ಊರನ್ನು ಆಕ್ರಮಿಸಿಕೊಂಡಿದ್ದನು.) ಗರುಡನಂತೆ "ಸಮುದ್ಧೃತಾಶೇಷನಾಗ" ನಾಗಿದ್ದನು. (೧. ಎಲ್ಲಾ ಆನೆಗಳ ದಂತಗಳನ್ನೂ ಕೀಳುತ್ತಿದ್ದನು. ೨. ಮೇಲಕ್ಕೆ ಎತ್ತಿಕೊಂಡು ಬಂದು ಎಲ್ಲಾ ಹಾವುಗಳನ್ನೂ ಕಚ್ಚುತ್ತಿದ್ದನು.) ಬೇಸಿಗೆದಿನಗಳಂತೆ "ಆವಿಷ್ಕೃತ ಮೃಗತೃಷ್ಣ"ನಾಗಿದ್ದನು. (೧. ಮೃಗಗಳ ಮೇಲೆ ಬಹಳ ಆಸೆಯನ್ನು ತೋರ್ಪಡಿಸುತ್ತಿದ್ದನು. ೨. ಬಿಸಿಲ್ಗುದುರೆಗಳನ್ನು ತೋರ್ಪಡಿಸುವುವು.) ಹಿರಣ್ಯಾಕ್ಷನಂತೆ "ಮಹಾವರಾಹವಿಶೀರ್ಣವಕ್ಷಸ್ಥಳ"ನಾಗಿದ್ದನು. (೧. ದೊಡ್ಡ ಕಾಡುಹಂದಿಗಳಿಂದ ಗಾಯಗೊಳಿಸಲ್ಪಟ್ಟ ಎದೆಯುಳ್ಳವನಾಗಿದ್ದನು. ೨. ಆದಿವರಾಹಸ್ವಾಮಿಯಿಂದ ಸೀಳಲ್ಪಟ್ಟ ಎದೆಯುಳ್ಳವನು.) ವಿಷಯಾಸಕ್ತನಂತೆ "ಬಹುವಿಧಪರಿಗ್ರಹ"ನಾಗಿದ್ದನು. (೧. ಅನೇಕ ಬಗೆಯ ವಸ್ತುಗಳನ್ನು ಸಂಗ್ರಹಿಸಿದ್ದನು. ೨. ಅನೇಕ ಬಗೆಯ ಹೆಂಡತಿಯರನ್ನು ಪಡೆದಿದ್ದನು.) ಹೊಸದಾದ ತಾರುಣ್ಯದಿಂದ ಕೂಡಿದ್ದರೂ "ಕ್ಷಪಿತ ವಯಸ"ನಾಗಿದ್ದನು. (೧. ಮುದುಕನಾಗಿದ್ದನು. ೨. ಹಕ್ಕಿಗಳನ್ನು ಕೊಲ್ಲುತ್ತಿದ್ದನು.) ಕೃಷ್ಣನಾಗಿದ್ದರೂ "ಅಸುದರ್ಶನ" ನಾಗಿದ್ದನು. (೧. ಸುದರ್ಶನ ಚಕ್ರವನ್ನು ಹೊಂದಿರಲಿಲ್ಲ. ೨. ಕರಿಯನಾಗಿದ್ದನು ಮತ್ತು ನೋಡಲು ಚೆನ್ನಾಗಿರಲಿಲ್ಲ.) "ಕ್ಷಿತಿಭೃತ್ಪದಾನುವರ್ತಿಯಾಗಿಯುಂ" ರಾಜಸೇವಾನಭಿಜ್ಞನೆನಿಸಿದ್ದನು. (೧. ದೊರೆಯ ಪಾದಸೇವಕನಾಗಿದ್ದರೂ ದೊರೆಯ ಸೇವೆಯನ್ನು ತಿಳಿದವನಾಗಿರಲಿಲ್ಲ. ೨. ಬೆಟ್ಟದ ತಪ್ಪಲಿನಲ್ಲಿ ವಾಸಿಸುವನಾಗಿಯೂ, ತಾನೇ ರಾಜನಾಗಿದ್ದುದರಿಂದ ಬೇರೆ ರಾಜರ ಸೇವೆಯನ್ನು ಮಾಡಲು ಅರಿಯದವನಾಗಿಯೂ ಇದ್ದನು.) ಅದಲ್ಲದೆ, ೧೪೦. ಆ ಶಬರಸೇನಾಪತಿಯನ್ನು ಸಣ್ಣ ನಾಯಿಮರಿಗಳು ಹಿಂಬಾಲಿಸಿ ಬರುತ್ತಿದ್ದುವು. ಅವುಗಳ ನಾಲಿಗೆಗಳು ಬಹಳ ಕೆಂಪಾಗಿದ್ದುವು; ಆದರಿಂದ ಅವು ರಕ್ತದಿಂದ ಲೇಪನ ಮಾಡಲ್ಪಟ್ಟಿವೆಯೋ ಎಂಬಂತಿದ್ದುವು. ಆ ನಾಯಿಮರಿಗಳ ದಂತಕಾಂತಿಯು ಹೊರಹೊಮ್ಮುತ್ತಿತ್ತು. ಅದು ಸಿಂಹಗಳಮೇಲೆ ಬಿದ್ದು ಕಚ್ಚಿಹಾಕುವಾಗ ಅಂಟಿಕೊಂಡಿರುವ ಕೇಸರಗಳಂತೆ ಕಾಣುತ್ತಿತ್ತು.

ಕಾಯಲ್ವೇಟ್ಟುದು ಸಿಂಪನಿ
ಕಾಯಮನೆಂದಭಯದಾನಮಂ ಬೇಡುವ ಸಿಂ
ಹೀಯೂಥಮೆಂಬಿನಂ ಕೌ
ಳೇಯ ಕುಟುಂಬಿನಿಗಳೆಸೆದುವಾತನ ಕೆಲದೊಳ್ ೧೪೧

ಕಲಿದಂತಂಗಳನಾಂತು ಪೀಲಿವೊಱೆಯಂ ತಳ್ಕೈಸಿ ಗಂಧೇಭ ಬಂ
ಧುರ ಮುಕ್ತಾಫಳಭಾರಮಂ ತಳೆದು ಮಾಂಸವ್ರಾತಮಂ ಪೊತ್ತು ಕೇ
ಸರಿಚರ್ಮವ್ರಜಮಂ ತೆರಳ್ಚಿ ಚಮರೀವಾಲಂಗಳಂ ತಾಳ್ದು ಬಂ
ದರನೇಕರ್ ಬೞಿಸಂದು ಕಾಡೊಡೆಯನಂ ಕಾಂತಾರದೊಳ್ ಲುಬ್ಧಕರ್ ೧೪೨

ವII ಅಂತನೇಕ ಶಬರಪರಿವೃತನಾಗಿ ಬರುತಿರ್ದನಂತುಮಲ್ಲದೆಯುಂ

ಪಡೆವಂ ವಿಂಧ್ಯನಗೇಂದ್ರ
ಕ್ಕೊಡವುಟ್ಟಿದನಂತಕಂಗೆ ನಂಟಂ ಪಾಪ
ಕ್ಕೊಡನಾಡಿ ಕಲಿಗೆನಿಪ್ಪಂ
ಪೊಡವಿಯೊಳಿನ್ನಾತನಿಂ ಭಯಂಕರನಾವಂ ೧೪೩

ಆತನ ಪೆಸರಂ ಕೇಳ್ದಿಂ
ಮಾತಂಗಕನೆಂದು ಬೞಿಯಮಾ ಶಬರಂ ಸಂ
ಜಾತಶ್ರಮಂ ಕಿರಾತಸ
ಮೇತಂ ಶಾಲ್ಮಲಿಮಹೀಜಮಂ ಸಾರ್ತಂದಂ ೧೪೪

ಕಾಡುಹಂದಿಗಳ ಹೊಡೆತದಿಂದ ಅವುಗಳ ಶರೀರವು ಜರ್ಝರಿತವಾಗಿದ್ದಿತು. ಅವು ಜೋಲಾಡುವ ನಾಲಿಗೆಯಿಂದ ತಮ್ಮ ಶ್ರಮವನ್ನು ಸೂಚಿಸುತ್ತಿದ್ದುವು. ೧೪೧. ಸಿಂಹಗಳನ್ನು ಕೊಲ್ಲದೆ ಕಾಪಾಡಬೇಕು ಎಂಬುದಾಗಿ ಈ ಬೇಡರರಾಜನಲ್ಲಿ ಅಭಯದಾನವನ್ನು ಬೇಡಲು ಬಂದಿರುವ ಹೆಣ್ಣುಸಿಂಹಗಳೋ ಎಂಬಂತಿರುವ ದೊಡ್ಡ ಆಕಾರದ ಹೆಣ್ಣು, ನಾಯಿಗಳ ಗುಂಪು ಅವನ ಸಮೀಪದಲ್ಲಿ ಶೋಭಿಸುತ್ತಿದ್ದುವು. ೧೪೨. ಆನೆಯ ದಂತಗಳನ್ನು ತೆಗೆದುಕೊಂಡು ಕೆಲವರು, ನವಿಲುಗರಿಯ ಹೊರೆಯನ್ನು ಇರುಕಿಕೊಂಡು ಕೆಲವರು ಮತ್ತೆ ಕೆಲವರು ಮದ್ದಾನೆಗಳ ರಮಣೀಯವಾದ ಕಟ್ಟಾಣಿಮುತ್ತುಗಳ ಗಂಟನ್ನು ಇಟ್ಟುಕೊಂಡು ಮಾಂಸಗಳ ರಾಶಿಯನ್ನು ಹೊತ್ತು ಕೆಲವರು, ಸಿಂಹಗಳ ಚರ್ಮದ ಹೊರೆಯನ್ನು ಹೊತ್ತು ಕೆಲವರು, ಹಾಗೆಯೇ ಚಮರೀಮೃಗಗಳ ಬಾಲವನ್ನು ಇಟ್ಟುಕೊಂಡು ಕೆಲವರು. ಹೀಗೆ ಅನೇಕ ಬೇಟೆಗಾರರು ಕಾಡಿನಲ್ಲಿ ಕಾಡಿನ ಒಡೆಯನಾದ ಅವನನ್ನು ಹಿಂಬಾಲಿಸಿ ಬರುತ್ತಿದ್ದರು. ೧೪೩. ಆತನು ವಿಂಧ್ಯಪರ್ವತದ ಮಗನಂತೆಯೂ, ಯಮನಿಗೆ ಸಹೋದರನಂತೆಯೂ, ಪಾಪದ ನಂಟನಂತೆಯೂ, ಕಲಿಯುಗದ ಗೆಳೆಯನಂತೆಯೂ ಇದ್ದನು. ಈ ಭೂಮಿಯಲ್ಲಿ ಅವನಿಗಿಂತ ಭಯಂಕರರು ಯಾರಿದ್ದಾರೆ ? ೧೪೪. ಅವನ ಹೆಸರು ಮಾತಂಗನಂತೆ. ಆಮೇಲೆ ಅದು ನನ್ನ ಕಿವಿಗೆ ಬಿತ್ತು. ಬಳಿಕ ಅವನು ಆಯಾಸಗೊಂಡ

ವ॥ ಅಂತು ನೆಟಲ್ಗೆವಂದುದ್ದಂಡಮಪ್ಪ ಕೋದಂಡಮಂ ಮರದ ವೊದಲೊಳ್ ಸಾರ್ಚಿ ಪರಿಜನೋಪನೀತಪಲ್ಲವಾಸನದೊಳ್ ಕುಳ್ಳಿರ್ಪುದುಂ

ಕೊಳದೊಳೆ ಪೊಕ್ಕು ನೂಂಕಿ ಸರಸೀಜರಜಂಗಳನಲ್ಲಿ ಚಂದ್ರಮಂ
ಡಳಮೊಱಿದತ್ತು ಮುತ್ತುಗಳೊಸರ್ದುವೆನಿಪ್ಪ ಹಿಮೋದಕಂಗಳಂ
ಕುಳಿರ್ವ ಸರೋಜಪತ್ರಪುಟದಿಂದಮೆ ತೆಕ್ಕನೆ ತೀವಿ ತಂದು ಕೋ
ಮಳಬಿಸಕಾಂಡಮಂ ಬೆರಸು ನೀಡಿದನಾಗಳದೊರ್ವ ಲುಬ್ಧಕಂ ೧೪೫

ವ॥ ಅಂತು ನೀಡೆ ನೀರನೀಂಟಿ ಶಶಿಕಳೆಗಳಂ ಮೆಲ್ವ ಸೈಂಹಿಕೇಯನಂತೆ ಮೃಣಾಳನಾಳಂಗಳಂ ಮೆಲ್ದು ವಿಗತಪರಿಶ್ರಮನಾಗಿ ಬಟಲ್ಕೆಗಳೆದು ಮಾತಂಗಂ ಬೇಡವಡೆವೆರಸು ನಿಜಾವಾಸಕ್ಕೆ ಪೋದನನ್ನೆಗಮಿತ್ತಲ್

ಜರೆಯೀದಂ ಪುರ್ಬು ಜೋಲಲ್ ತೆರೆ ತರತರದಿಂದುಣ್ಮೆ ಪೊಣ್ಮಲ್ಕೆ ಗಂಟಲ್
ಮುರಿದತ್ತೊಂದೊಂದಱೊಳ್ ತಳ್ಪೊಗೆಯೆ ಸೆರೆಗಳೊತ್ತಂಬದಿಂ ಬರ್ಪ ಕೆಮ್ಮಿಂ
ಬರಿಯಲ್ ಬೆಟ್ಟಂಗಳಾ ಬಟ್ಟೆಯೊಳನಿತಡಗುಂ ತನ್ನ ಕೈಸಾರದೆಂದಾ
ತುರಿಸುತ್ತಂ ಭ್ರಾಂತಿಯಿಂದೆನ್ನಯ ಮರದಡಿಯೊಳ್ ನಿಂದನೊರ್ವಂ ಪುಳಿಂದಂ ೧೪೬

ವನಾಗಿ ಆ ಬೂರುಗದ ಮರದ ಹತ್ತಿರಕ್ಕೆ ಬಂದನು. ವ॥ ಹೀಗೆ ನೆರಳಿಗೆ ಬಂದು ಹೆಡೆ ಬಿಚ್ಚಿದ ತನ್ನ ಬಿಲ್ಲನ್ನು ಮರದ ಬುಡದಲ್ಲಿ ಇಟ್ಟು ಪರಿಜನರಿಂದ ತರಲ್ಪಟ್ಟ ಚಿಗುರಿನ ಆಸನದಲ್ಲಿ ಕುಳಿತುಕೊಂಡಿರಲಾಗಿ, ೧೪೫. ಆಗ ಒಬ್ಬ ಭಿಲ್ಲನು ಪಂಪಾಸರೋವರಕ್ಕೆ ಹೋಗಿ ಕಮಲದ ಧೂಳುಗಳನ್ನು ಕೈಯಿಂದ ತಳ್ಳಿ ಚಂದ್ರಮಂಡಲವೇ ಸೋರಿದಂತೆಯೂ ಮುತ್ತುಗಳು ಕರಗಿ ನೀರಾಗಿರುವಂತೆಯೂ ಇರುವ ತಣ್ಣೀರನ್ನು ತಣ್ಣಗಿರುವ ತಾವರೆ ಎಲೆಯ ದೊನ್ನೆಯಿಂದ ತಟ್ಟನೆ ತುಂಬಿಕೊಂಡು ಬಂದು ಎಳೆಯದಾದ ತಾವರೆದಂಟುಗಳೊಂದಿಗೆ ಅವನಿಗೆ ಕೊಟ್ಟನು. ವ॥ ಹೀಗೆ ಕೊಡಲಾಗಿ ಚಂದ್ರಕಳೆಗಳನ್ನು ಮೆಲ್ಲುವ ರಾಹುವಿನಂತೆ ತಾವರೆದಂಟುಗಳನ್ನು ತಿಂದು ಆಯಾಸವನ್ನು ಪರಿಹರಿಸಿಕೊಂಡು ಆ ಮಾತಂಗನು ತನ್ನ ಸೈನ್ಯದೊಂದಿಗೆ ಹೊರಟುಹೋದಮೇಲೆ ಈ ಕಡೆ ೧೪೬. ಒಬ್ಬ ಬೇಡನಿಗೆ ತಾನು ಹೋದ ದಾರಿಯಲ್ಲಿ ಮಾಂಸ ಸಿಕ್ಕಲಿಲ್ಲ. ಆದುದರಿಂದ ಇಲ್ಲಾದರೂ ಸಿಕ್ಕಬಹುದೆಂದು ತವಕಿಸುತ್ತಾ ಆಸೆಯಿಂದ ನಾನು ವಾಸವಾಗಿದ್ದ ಮರದ ಅಡಿಯಲ್ಲೇ ನಿಂತನು. ಮುಪ್ಪಿನಿಂದ ಅವನ ಹುಬ್ಬು ಜೋಲುಬಿದ್ದಿದ್ದಿತು. ಚರ್ಮದ ಮೇಲಿನ ಸುಕ್ಕುಗಳು ಮೇಲೆಮೇಲೆ ಹೊರಹೊಮ್ಮಿ ಕಾಣುತ್ತಿದ್ದುವು. ಗಂಟಲು ಒಡೆದು ಧ್ವನಿಗಾರಾಗಿ ಹೋಗಿತ್ತು. ನರಗಳು ಒಂದೊಂದರಲ್ಲಿ ಸೇರಿಹೋಗಿದ್ದವು. ಅವನು ಬೆಟ್ಟ

ಬೇಡಿದೊಡೀಯುದೈದೆ ಬಿಯದರ್ ಮೃಗಮಾಂಸವ ರಕ್ತವರ್ಣದಿಂ
ಕೂಡಿದ ಕಣ್ಗಳಿಂ ಶುಕನಿಕಾಯದ ಜೀವಮಸೆಯ್ದೆ ಪೀರ್ವವೋಲ್
ಗೂಡುಗಳಂ ತಗುಳ್ದೆಣಿಪವೋಲ್ ವಿಹಗಾಮಿಷ ಲಾಭಲೋಲುಪಂ
ನೋಡಿದನಾ ಜರಚ್ಛಬರನಾಯಕನಾ ಮರನಂ ಮಹೀಪತೀ ೧೪೭

ವ॥ ಅಂತು ನೋಡುತ್ತುಮದನೇಕ ತಾಳೋತ್ಸೇಧಮುಮಭ್ರಂಕಷಮುಂ ದುರಾರೋಹಮುಮಾದೊಡಂ ಬಗೆಯದೆ ಬಳಸಿದ ಬಳ್ಳಿವಿಡಿದಡರ್ದೇರಿ

ಜಳಜದ ಮೊಗ್ಗೆಯಂತೆ ಮುಗುಳಂತೆಳೆಯೆಕ್ಕೆಯ ಕಾಯ್ಗಳಂತೆ ಶಾ
ಲ್ಮಲಿಕುಸುಮಂಗಳಂತೆ ತರುನೀಡನಿಕಾಯದಿನೆಲ್ಲವಾಗಳಾ
ಗಳೆ ಗಱಿವೊಯ್ದು ಕಂದೆರೆವ ತುಪ್ಪುಳ್ಮೊಡರ್ಚುವ ಕಂಪನಾಳ್ದ ಕೋ
ಮಳಶಿಶುಶಾಬಕಪ್ರಕರಮಂ ತೆಗೆದಂ ದಯೆಗೆಟ್ಟು ಲುಬ್ಧಕಂ ೧೪೮

ಪಱಿದುವು ಗಱಿ ಚಂಚುಗಳುಂ
ಮುಱಿದುವು ತಲೆ ನಡುಗುತಿರ್ದುವೆನ್ನದೆ ತರದಿಂ
ಬಱಿಗೆಯ್ವುತಿರ್ದ ಮಾಯ್ದಱಿ
ಗುಲಿ ಕರ್ವೇಡನಲ್ಲಿ ಮುದುಗಿಳಿಗಳುಮಂ ೧೪೯

ಗಳು ಬಿರಿದುಹೋಗುವಂತೆ ಒಂದೇಸಮನಾಗಿ ಕೆಮ್ಮುತ್ತಿದ್ದನು. ೧೪೭. ಎಲೈ ರಾಜನೆ, ಕೇಳು. ಆ ಬೇಡನು ತನಗೂ ಸ್ವಲ್ಪ ಜಿಂಕೆಯ ಮಾಂಸವನ್ನು ಕೊಡುವಂತೆ ತನ್ನ ಒಡನಾಡಿಗಳಾದ ಭಿಲ್ಲರನ್ನು ಕೇಳಿಕೊಂಡರೂ ಅವರು ಕೊಡದೆ ಹೊರಟುಹೋದರು. ಆಗ ಕೆಂಬಣ್ಣದಿಂದ ಕೂಡಿದ ಕಣ್ಣುಗಳಿಂದ ಆ ಗಿಳಿಗಳ ಪ್ರಾಣವನ್ನು ಹೀರುವಂತೆಯೂ, ಮರದ ಮೇಲಿರುವ ಗಿಳಿಗೂಡುಗಳನ್ನು ಒಂದು ಕಡೆಯಿಂದ ಆರಂಭಿಸಿ ಲೆಕ್ಕ ಮಾಡುವಂತೆಯೂ ಹಕ್ಕಿಗಳ ಮಾಂಸದಲ್ಲಿ ಆಸೆಯುಳ್ಳ ಆ ವೃದ್ಧ ಭಿಲ್ಲನು ಮರವನ್ನು ದುರುಗುಟ್ಟಿ ನೋಡಿದನು. ವ॥ ಹೀಗೆ ನೋಡುತ್ತ ಅನೇಕ ತಾಳೆಮರಗಳಷ್ಟು ಎತ್ತರವಾಗಿದ್ದರೂ ಆಕಾಶವನ್ನು ಮುಟ್ಟುತ್ತಿದ್ದರೂ ಹತ್ತಲು ಬಹಳ ಕಷ್ಟಕರವಾಗಿದ್ದರೂ ಲೆಕ್ಕಿಸದೆ ಮರಕ್ಕೆ ಹಬ್ಬಿದ್ದ ಬಳ್ಳಿಯನ್ನು ಹಿಡಿದುಕೊಂಡು ಹತ್ತಿ ೧೪೮. ಆ ಬೇಡನು ಸ್ವಲ್ಪವೂ ಕನಿಕರವಿಲ್ಲದೆ ಆಗತಾನೆ ಗರಿಮೂಡುತ್ತಿರುವುದರಿಂದ ಅರಳುತ್ತಿರುವ ದಳಗಳುಳ್ಳ ತಾವರೆಮೊಗ್ಗಿನಂತಿರುವ, ಆಗತಾನೆ ಕಣ್ಣುಬಿಡುತ್ತಿರುವುದರಿಂದ ಅರಳಲಿರುವ ಹೂವಿನ ಮೊಗ್ಗಿನಂತಿರುವ, ಆಗತಾನೆ ರೋಮಗಳು ಹುಟ್ಟುತ್ತಿರುವುದರಿಂದ ಎಕ್ಕದಕಾಯಿಗಳಂತಿರುವ, ಸ್ವಲ್ಪ ದಿವಸಗಳ ಕೆಳಗೆ ತಾನೆ ಹುಟ್ಟಿರುವುದರಿಂದ ಇನ್ನೂ ಕೆಂಪಾಗಿಯೇ ಇರುವುದರಿಂದ ಬೂರುಗದ ಹೂವಿನಂತಿರುವ ಎಳೆಯ ಗಿಳಿಮರಿಗಳನ್ನೆಲ್ಲಾ ತೆಗೆದುಕೊಂಡನು. ೧೪೯. ನೀಚನೂ, ಧರ್ಮಭ್ರಷ್ಟನೂ ಆದ ಆ ಕರಿಬೇಡನು ರೆಕ್ಕೆ ಉದುರಿಹೋಗಿರುವ, ಕೊಕ್ಕುಗಳೂ ಮುರಿದುಹೋಗಿರುವ, ತಲೆ ನಡಗುತ್ತಿರುವ ಮುದಿಗಿಳಿಗಳನ್ನೂ ಕೂಡ ಇವೇಕೆಂದು ಬಿಡದೆ ಒಂದೇಸಮನಾಗಿ (ಗೂಡುಗಳಿಂದ) ಖಾಲಿ ಮಾಡುತ್ತಿದ್ದನು. ಟಿ॥ ಇಲ್ಲಿ "ಬಱಿಗೆಯ್ವುತಿರ್ದನಾಯ್ದಱಿಗುಲಿ" ಎಂಬ ಶುದ್ಧಪಾಠವಿರಬೇಕೆಂದು ಕಾಣುತ್ತದೆ. ಆಯ್ದು

ವ|| ಅಂತವೆಲ್ಲವನೊಡನೊಡನೆ ಗಂಟಲಂ ಮುಱಿದು ನೆಲಕ್ಕೀಡಾಡುತಿರ್ದ ಬೇಡನಂ ತೊಟ್ಟನೆ ನೋಡಿ ಪ್ರಾಣಾಪಹಾರಮುಮಪ್ರತೀಕಾರಮುಮಪ್ಪ ಕಷ್ಟಮಂ ಕಂಡು ಭಯಂಗೊಂಡು

ಬಸವೞಿದು ಕಣ್ಣನೀರಿಂ
ದೆಸೆಗೆಟ್ಟಲೆ ಮಗನೆ ನಿನ್ನನಿನ್ನಾರ್ ಕಾಯ
ಲ್ಕೆ ಸಮರ್ಥರೆನುತ್ತಾಗಳ್
ಬಿಸುಸುಯ್ದಂ ನೋಡಿ ಜನಕನೆನ್ನಯ ಮೊಗಮಂ ೧೫೦

ವ|| ಅದಲ್ಲದೆಯುಂ

ನಿನ್ನಯ ತಾಯನೊಯ್ವ ಪದದೊಳ್ ಜವನಕ್ಕಟ ನೋಡು ಕಂದ ಬಂ
ದೆನ್ನುಮನಂತೆ ಕೂಡಿದೊಡನೊಕ್ಕಲುಪೋಗಿಸನೇಕೆ ಬಯ್ತೆ ನಾಂ
ನಿನ್ನನೆ ನೋಡಿ ಶೋಕಮನಡಂಗಿಸಿ ಬಾೞ್ಕೆಯ ಲೇಸೆನುತ್ತಮಿ
ರ್ಪನ್ನೆಗಮಮ್ಮ ನಿನ್ನನೊಡಗೊಂಡು ಮುೞುಂಗುವ ಕಾಲಮಾದುದೋ ೧೫೧

ವ|| ಎಂದು ಸೈರಿಸಲಾಱದೆ

ಇಱುಕಿ ತೊಡೆಯೆಡೆಯೊಳೆನ್ನಂ
ಪಱಿದೆಱಕೆಗಳಿಂದ ಮುಚ್ಚಿ ಮೋಹದೆ ತಾತಂ
ಮಱುಗುತ್ತಿರ್ಪಿನಮೆಯ್ದಿದ
ನಱಿಗುಲಿ ಕರ್ವೇಡನೆನ್ನ ಪೊೞಲಿಂಗಾಗಳ್ ೧೫೨

ಬಱಿಗೆಯ್ವುತಿರ್ದಂ = ಆರಿಸಿ ಖಾಲಿ ಮಾಡುತ್ತಿದ್ದನು ಎಂಬ ಅರ್ಥ ಸಮಂಜಸವಾಗುತ್ತದೆ. ವ|| ಹೀಗೆ ಅವೆಲ್ಲವನ್ನೂ ಸರಸರನೆ ಗಂಟಲನ್ನು ಮುರಿದು ನೆಲಕ್ಕೆ ಎಸೆಯುತ್ತಿದ್ದ ಬೇಡನನ್ನು ತಟ್ಟನೆ ನೋಡಿ ಪ್ರಾಣವನ್ನೇ ತೆಗೆಯುವ ಪರಿಹಾರೋಪಾಯವೇ ಇಲ್ಲದ ಈ ವಿಪತ್ತನ್ನು ಕಂಡು ಭಯಪಟ್ಟು ೧೫೦. ಆಗ ನನ್ನ ತಂದೆಯು ಮೈಮರೆತು ಕಣ್ಣೀರು ಸುರಿಸುತ್ತಾ ದಿಕ್ಕುಗೆಟ್ಟು 'ಎಲೈ ಮಗನೆ, ನಿನ್ನನ್ನು, ಕಾಪಾಡಲು ಯಾರು ಶಕ್ತರು ?' ಎನ್ನುತ್ತಾ ನನ್ನ ಮುಖವನ್ನು ನೋಡಿ ನಿಟ್ಟುಸಿರು ಬಿಟ್ಟನು. ವ|| ಅದಲ್ಲದೆ ೧೫೧. 'ಅಯ್ಯೋ ಕಂದ, ನೋಡಪ್ಪ, ಆ ಯಮನು ನಿನ್ನ ತಾಯಿಯನ್ನು ಕೊಂಡುಹೋದ ಸಮಯದಲ್ಲೇ ನನ್ನನ್ನೂ ಕೂಡ ಸಂಸಾರಸಮೇತವಾಗಿ ಏಕೆ ಕೊಂಡುಹೋಗಲಿಲ್ಲವೊ ? ನೀನು ಏಕಪ್ಪ ಬದುಕಿಕೊಂಡೆ ? ನಾನು ನಿನ್ನನ್ನು ನೋಡಿ ದುಃಖವನ್ನು ಅಡಗಿಸಿಕೊಂಡು ಬದುಕಿರುವುದೇ ಮೇಲೆಂದು ಇರುವಷ್ಟರಲ್ಲಿ ಅಪ್ಪ ! ನಿನ್ನನ್ನೂ ಕೂಡಿಕೊಂಡೇ ಮುಳುಗಿಹೋಗುವ ಕಾಲ ಬಂದುಬಿಟ್ಟಿತಲ್ಲ' ವ|| ಎಂದು ಸೈರಿಸಲಾರದೆ ೧೫೨. ನನ್ನನ್ನು ತೊಡೆಗಳ ಮಧ್ಯದಲ್ಲಿ ಇರುಕಿಕೊಂಡು ಹರಡಿದ ರೆಕ್ಕೆಗಳಿಂದ ಮುಚ್ಚಿ ಪುತ್ರವ್ಯಾಮೋಹದಿಂದ ತಂದೆಯು ಮರುಗುತ್ತಿರಲು

ಅಡಸುವ ಕಾಲದಂಡಮೆರೆಗೊಳ್ವಸಿತೋರಗನೆಂಬ ಶಂಕೆ ನೂ
ರ್ಮಡಿಸಿರೆ ಕಾಡಪಂದಿಗಳ ಬಲ್ಕೋಣದಿಂ ಪೊಲಸಟ್ಟ ನಾರ್ವ ಜೇ
ವಡೆಗಳ ಪುಣ್ಗಳಿಂ ತೊರೆವ ನೆತ್ತರ ಕೆಯ್ ನಡುಗಲ್ಕೆ ನೀಡಿ ಕೀ
ೞಡೆಯಿಡೆ ಗಂಟಲಂ ಮುಱಿದನೊರ್ಮೆಯೆ ನಿರ್ಘೃಣನೆನ್ನ ತಂದೆಯಂ ೧೫೩

ಬೆಱೆತುಱಿದೆನಾಗಿಯುಂ ತನು
ಕಿಱಿದಾಗಿಯುಮತ್ತಮಾಯುಮುಂಟಾಗಿಯುಂ ಮೋ
ಣಱಿಯೆಂ ಕಾಣಂ ತಂದೆಯ
ಗಱಿಯೊಳಗಿರ್ದವನನೆನ್ನನಂದು ನೃಶಂಸಂ ೧೫೪

ವ॥ ಅಂತು ಜೀವಮಂ ಬಿಟ್ಟು ಗೋಣ್ಟಲ್ವೆನ್ನ ತಂದೆಯಂ ಮರದ ಮೇಗಣಿಂ ನೆಲಕ್ಕೀಡಾಡಲಾನುಂ ತೊಡೆಯೆಡೆಯೊಳಿರ್ದೊಡಸಂದು ಸುಟ್ಟುರೆಯ ತಱಗೆಲೆಯಂತೆ ತಿಱ್ಱನೆ ತಿರುಗಿ ಬೀೞ್ವಲ್ಲಿಱುಂಕಿದೆಱಂಕೆಯೊಳಗಣಿಂ ಸಿಡಿಲ್ದು ದೈವವಶದಿಂ ಗಾಳಿಯೊಳ್ ತೆರಳ್ದು ತಱಗೆಲೆಯ ರಾಶಿಯೊಳ್ ಪೋಗಿಬಿರ್ದು

ಕಱಿದಿರ್ದ ತಂದೆಯುಂ ಬಿಸು
ಟಟಲುಮನಿನಿಸಱಿಯಂದೆಳವೆಯೊಳ್ ಪಾತಕನೆಂ
ಪಱಿಯ ತಱಗೆಲೆಗಳೊಳಗಿ
ರ್ದವಿದೆಂ ಖಳನಿಱಿದು ಕಾಣ್ಗುಮೆಂಬೀ ಭಯಂದಿಂ ೧೫೫

ವಾಗಲೇ ಆ ಧರ್ಮನಾಶಕನಾದ ಕರಿಬೇಡನು ನನ್ನ ಪೊಟರೆಗೂ ಬಂದೇಬಿಟ್ಟನು. ೧೫೩. ಮೇಲೆ ಬೀಳುವ ಯಮದಂಡವೋ ಆಹಾರವನ್ನು ನುಗಲು ಬರುವ ಕರಿನಾಗರಹಾವೋ ಎಂಬ ಸಂದೇಹವು ನೂರುಪಟ್ಟು ಹೆಚ್ಚುತ್ತಿರಲಾಗಿ ಕಾಡುಹಂದಿಗಳ ಹೆಚ್ಚಾದ ಕೊಬ್ಬಿನಿಂದ ಹೊಲಸಾಗಿ ನಾರುತ್ತಿರುವ, ಬಿಲ್ಲಿನ ಹೆದೆಯನ್ನು ಎಳೆಯುವುದರಿಂದ ಉಂಟಾದ ಹುಣ್ಣುಗಳಿಂದ ಹೊರಡುತ್ತಿರುವ ರಕ್ತವುಳ್ಳ ಕೈಯನ್ನು ಮುಷ್ಟಿನಿಂದ ನಡುಗುತ್ತಿರಲಾಗಿ ನೀಡಿ ಸ್ವಲ್ಪವೂ ದಯೆ ಇಲ್ಲದ ಆ ಬೇಡನು ಅರಚಿಕೊಳ್ಳುತ್ತಿದ್ದ ನಮ್ಮ ತಂದೆಯ ಕೊರಳನ್ನು ಮುರಿದನು. ೧೫೪. ಮೈಯನ್ನು ಮುದುರಿಕೊಂಡು ಅಡಗಿಕುಳಿತಿದ್ದುದರಿಂದಲೋ, ಶರೀರವು ಬಹಳ ಸಣ್ಣನಾಗಿದ್ದುದರಿಂದಲೋ, ಆಯುಸ್ಸು ಇನ್ನೂ ಉಳಿದಿರುವುದರಿಂದಲೋ, ಹೇಗೋ ಗೊತ್ತಿಲ್ಲ, ಆ ಘಾತುಕನು ತಂದೆಯ ರೆಕ್ಕೆಯ ಒಳಗಿದ್ದ ನನ್ನನ್ನು ನೋಡಲಿಲ್ಲ. ವ॥ ಹೀಗೆ ಪ್ರಾಣವನ್ನು ಬಿಟ್ಟು ಕತ್ತು ಜೋಲಾಡುತ್ತಿರುವ ನನ್ನ ತಂದೆಯನ್ನು ಮರದ ಮೇಲಿನಿಂದ ನೆಲಕ್ಕೆ ಬಿಸಾಡಲು, ನಾನೂ ಅವನ ತೊಡೆಯ ಒಳಗಿದ್ದು ಜೊತೆಯಲ್ಲೇ ಸೇರಿಕೊಂಡು ಬಿರುಗಾಳಿಗೆ ಸಿಕ್ಕಿದ ತರಗೆಲೆಯಂತೆ ತಿರ್ರನೆ ತಿರುಗಿ ಬೀಳಲಾಗಿ ಇರುಕಿಕೊಂಡಿದ್ದ ರೆಕ್ಕೆಗಳ ಒಳಗಿನಿಂದ ಸಿಡಿದು ಅದೃಷ್ಟವಶದಿಂದ ಗಾಳಿಯಲ್ಲಿ ತೂರಿಕೊಂಡು ತರಗೆಲೆಗಳ ರಾಶಿಯಲ್ಲಿ ಹೋಗಿಬಿದ್ದೆ. ೧೫೫. ಪಾಪಿಷ್ಠನಾದ ನಾನು ತಂದೆಯನ್ನು ತೊರೆದು ಇನ್ನೂ ಶೈಶವಾವಸ್ಥೆಯಲ್ಲಿದ್ದುದರಿಂದ ತಂದೆ ಸತ್ತ ದುಃಖವನ್ನು ತಿಳಿದುಕೊಳ್ಳಲಾರದೆ ಆ ದುಷ್ಟನು ಇಳಿದುಬಂದು

ವ॥ ಅನ್ನೆಗಮಿತ್ತಲ್

ಇೞಿದು ಮರದಿಂದಮಾಗಳ್
ಕೆೞಗೆಲ್ಲಂ ಪರೆದು ಬಿರ್ದ ಶುಕಸಂತತಿಯುಂ
ಗೞಗೞಿಸಿ ಕಟ್ಟಿ ನಡು ಬೆ
ನ್ನಿೞಿವಿನೆಗಂ ಪೊತ್ತುಪೋದನಾ ಮುದುವೇಡಂ ೧೫೭

ವ॥ ಅಂತಾ ಬೇಡಂ ಬೇಡವಡೆಯಂ ಬೞಿಸಂದು ಪೋಗೆವೋಗೆ

ತಂದೆ ಕೞಿದಱಲ ಬೇಗೆಯೊ
ಳಂದೂರದೆ ಬಿರ್ದದೊಂದು ಕಡುಸೇದೆಯೊಳಂ
ಬಂದೆನ್ನಂ ಪರವಶತೆಯೊ
ಳೊಂದಿಸಿದತ್ತಾಗಳಾ ಪಿಪಾಸೋದ್ರೇಕಂ ೧೫೮

ವ॥ ಅಂತಾ ಪಿಪಾಸೆ ಪುಟ್ಟಲೊಡಂ

ಅಱಿಯೆಂ ಪಾರಲ್ ಬಾಯುಂ
ಬಱಬಱ ಬತ್ತಿತ್ತು ಪೋಪೆನೆಂದೆೞ್ದುದುಮಾ
ತಱಗೆಲೆ ಗಿಱುಕೆನೆ ಬೇಡಂ
ಪೊಱಗೆಯ್ದಿದನೆಂದು ಭಯದೆ ಮಱುಗಿದೆನಾಗಳ್ ೧೫೯

ವ॥ ಮತ್ತಂ ಮೆಲ್ಲನೆೞ್ದು ದೆಸೆಗಳೆಲ್ಲಮಂ ನೋಡಿವೊರ್ವರುಮಂ ಕಾಣದೆರ್ದೆಯಂ ನೀವಿಕೊಂಡು ನೀರ್ದಾಣಕ್ಕೆ ಪೋಗಲುದ್ಯೋಗಂಗೆಯ್ದು

ಕಂಡುಬಿಡುತ್ತಾನೋ ಎಂಬ ಹೆದರಿಕೆಯಿಂದಲೇ ಹಳೆಯ ತರಗೆಲೆಗಳ ಒಳಗೆ ಇದ್ದು ಬದುಕಿಕೊಂಡೆನು. ವ॥ ಅಷ್ಟರಲ್ಲಿ ಈ ಕಡೆ, ೧೫೭. ಆ ಮುದಿ ಬೇಡನು ಆಗ ಮರದಿಂದ ಇಳಿದು ಕೆಳಗೆ ಚೆಲ್ಲಾಪಿಲ್ಲಿಯಾಗಿ ಬಿದ್ದಿರುವ ಸತ್ತ ಗಿಳಿಗಳನ್ನೆಲ್ಲಾ ಸರಸರನೆ ಕಟ್ಟಿಕೊಂಡು ಬೆನ್ನಿನ ಮಧ್ಯವು ಕುಗ್ಗಿಹೋಗುವಂತೆ ಹೊತ್ತುಕೊಂಡು ಹೋದನು. ವ॥ ಹಾಗೆ ಆ ಬೇಡನು ಬೇಡರ ಸೈನ್ಯವನ್ನು ಹಿಂಬಾಲಿಸಿ ಹೋಗಲಾಗಿ, ೧೫೮. ತಂದೆಯು ತೀರಿಹೋದ ದುಃಖದಿಂದಲೂ ಬಹಳ ಎತ್ತರದಿಂದ ಬಿದ್ದ ಹೆಚ್ಚಾದ ಶ್ರಮದಿಂದಲೂ ಉಂಟಾದ ಮಿಗಿಲಾದ ಬಾಯಾರಿಕೆಯು ನನ್ನನ್ನು ಮೂರ್ಛೆಹೋಗುವಂತೆ ಮಾಡಿತು. ವ॥ ಹೀಗೆ ಬಾಯಾರಿಕೆ ಹುಟ್ಟಲಾಗಿ, ೧೫೯. ಹೋಗಬೇಕೆಂದು ಎದ್ದರೆ ಹಾರಲು ಆಗಲಿಲ್ಲ, ಬಾಯಿ ಬರಬರನೆ ಬತ್ತಿಹೋಗಿತ್ತು, ತರಗೆಲೆಯು ಗಿರಗಿರ ಎಂದು ಅಲ್ಲಾಡಿದರೂ ಬೇಡನು ಹತ್ತಿರಕ್ಕೆ ಬಂದುಬಿಟ್ಟನೋ ಎಂಬ ಭಯದಿಂದ ಸಂಕಟಪಡುತ್ತಿದ್ದೆನು. ವ॥ ಮತ್ತು ಮೆಲ್ಲನೆದ್ದು ದಿಕ್ಕುಗಳನ್ನೆಲ್ಲಾ ನೋಡಿ ಒಬ್ಬರನ್ನೂ ಕಾಣದೆ ಎದೆಯನ್ನು ನೀವಿಕೊಂಡು ನೀರಿರುವ ಸ್ಥಳಕ್ಕೆ ಹೋಗಲು ಪ್ರಯತ್ನಪಟ್ಟು

ಗಱಿ ಪಾರಲ್ಕಿಲ್ಲ ಕಾಲುಂ ಬಲಿಯವು ನಡೆಯಲ್ ಬೆಟ್ಟಿತೆಂಬಂತೆ ಮೂಗಂ
ಮುಱಿವನ್ನಂ ಮುಂದೆ ಮುಗ್ಗುತ್ತೆಡಬಲದೊಳಗಾಂ ಬೀೞುತುಂ ಪಕ್ಕಗೂಡಾ
ಗೊಱಗುತ್ತಂ ಪೋಗಿ ಮಧ್ಯಾಹ್ನದ ಬಿಸಿಲುಮಿರಲ್ ಕಣ್ಮಲರ್ನಟ್ಟು ಸುಯ್ಗಳ್
ಪೊಱಮಟ್ಟೊಂದೊಂದನಟ್ಟುತ್ತಿರೆ ಪಿರಿದುಮಟಲ್ದೆನ್ನೊಳಿಂತೆಂದೆನಾಗಳ್ ೧೫೯

ಬಸವಲ್ತೆಂತುಮೆನಿಪ್ಪವಸ್ಥೆಗಳನೆಯ್ದುತ್ತಿರ್ಪನಂ ಜೀವಮಂ
ಬಿಸುಡಲ್ ಜೀವಿಗಪೇಕ್ಷೆ ಪುಟ್ಟದುವಲಂ ಪೋಜೀವದಿಂ ಬಿಟ್ಟಪೇ
ಕ್ಷಿಸುವಂತಪ್ಪುದೆ ಕಾಣನಿಂತು ಸಲೆ ತಾತಂ ದುಃಖಿಮೆಯ್ದುರ್ದುದಿ
ಲ್ಲಸುವೆನ್ನಿಂ ಕೃಪೆಗೆಟ್ಟನಂ ಪೆಱನದೊರ್ವಂ ಸತ್ತವೋಲಿರ್ದನಂ ೧೬೦

ಎನ್ನಯ ತಾಯಿ ಸತ್ತಟಲನಾದವಡಂಗಿಸಿ ಮುಪ್ಪಿನೊಳ್ ಮರ
ಲ್ದೆನ್ನನೆ ನೋಡಿ ತತ್ತಿವಿಡಿದಿಂದುವರಂ ಪಿಡಿದಿರ್ದು ಯತ್ನದಿಂ
ದಂ ನಡಪುತ್ತಮಿರ್ದುದುಮನೊಲ್ಮೆಯೆ ದಲ್ ಮಱೆದೀ ಕೃತಘ್ನನ
ಪ್ಪೆನ್ನಸುನಿರ್ಘೃಣಂ ಬಟಿಸಲಲ್ಕಣಮಾಱದು ತಂದೆ ಸಾಯೆಯುಂ ೧೬೧

೧೫೯. ಹಾರುವುದಕ್ಕೆ ಇನ್ನೂ ರೆಕ್ಕೆ ಬಂದಿಲ್ಲ. ಕಾಲುಗಳಿಗೆ ಶಕ್ತಿಬಂದಿಲ್ಲ. ನಡೆಯುವುದು ಬಹಳ ಕಠಿನವಾಗುತ್ತದೆ. ಹೀಗಿದ್ದರೂ ಮುಂದಕ್ಕೆ ಹೋಗಿ ಮುಗ್ಗರಿಸಿ ಮುಮ್ಮುಗವಾಗಿ ಬೀಳುತ್ತಿದ್ದೆ. ಮೂಗು ಒಡೆದುಹೋಗುವಂತೆ ಆಗುತ್ತಿತ್ತು. ಮುಂದೆ ಹೋಗುತ್ತಾ ಒಂದು ಸಲ ಎಡಕ್ಕೆ ಒಂದು ಸಲ ಬಲಕ್ಕೆ ಮಗುಚಿಕೊಳ್ಳುತ್ತಿದ್ದೆ. ಮತ್ತು ಒಂದು ಪಕ್ಕದ ರೆಕ್ಕೆಗೂಡನ್ನು ನೆಮ್ಮಿ ನಿಲ್ಲುತ್ತಿದ್ದೆ. ಹೀಗೆ ಹೋಗಿ ಮಧ್ಯಾಹ್ನದ ಬಿಸಿಲು ಹರಡುತ್ತಿರಲಾಗಿ ಕಣ್ಣು ಸ್ತಿಮಿತವಾಗಿ ಬಿಡುತ್ತಿತ್ತು. ನಿಟ್ಟುಸಿರು ಹೊರಟು ಒಂದರ ಮೇಲೆ ಒಂದು ಹಿಂಬಾಲಿಸುತ್ತಿದ್ದುವು. ಇಂತಹ ಅವಸ್ಥೆಯಲ್ಲಿ ನಾನು ಬಹಳವಾಗಿ ಅಳಲಿ ನನ್ನಲ್ಲೇ ಹೀಗೆ ಯೋಚಿಸಿದೆನು. ೧೬೦. ಎಂತಹ ಕಷ್ಟಕರವಾದ ಅವಸ್ಥೆಗಳನ್ನು ಅನುಭವಿಸುತ್ತಿದ್ದರೂ ಪ್ರಾಣವನ್ನು ಬಿಡಲು ಯಾವ ಪ್ರಾಣಿಗೂ ಅಪೇಕ್ಷೆಯುಂಟಾಗುವುದಿಲ್ಲ. ಇದು ಖಂಡಿತ. ಅಲ್ಲದೆ ಪ್ರಾಣಕ್ಕಿಂತಲೂ ಮಿಗಿಲಾದ ಪ್ರಿಯವಸ್ತು ಮತ್ತೊಂದಿಲ್ಲ. ಏಕೆಂದರೆ, ಹೀಗೆ ನನ್ನ ತಂದೆಯು ಸತ್ತುಹೋದರೂ ನನ್ನ ಜೀವಕ್ಕೆ ದುಃಖವುಂಟಾಗಲಿಲ್ಲ. ನನಗಿಂತಲೂ ದಯಾಹೀನನಾದ, ತಂದೆ ಸತ್ತಿದ್ದರೂ ಯಾರೋ ಸತ್ತಂತೆ ಉದಾಸೀನನಾಗಿರುವ ಮತ್ತೊಬ್ಬನನ್ನು ನಾನು ಕಂಡೇ ಇಲ್ಲ. ೧೬೧. ಮುಪ್ಪಿನಲ್ಲಿ ಜನಿಸಿದ ನನ್ನನ್ನೇ ನೋಡಿಕೊಂಡ ನಮ್ಮ ತಾಯಿ ಸತ್ತ ದುಃಖವನ್ನೂ ಬಹಳಮಟ್ಟಿಗೆ ಅಡಗಿಸಿಕೊಂಡು, ಮೊಟ್ಟೆ ಇಟ್ಟಂದಿನಿಂದ ಇಂದಿನವರೆಗೂ ಬಹಳ ಸಾಕುತ್ತಿದ್ದುದನ್ನು ಒಂದೇ ಸಲಕ್ಕೆ ಮರೆತುಬಿಟ್ಟ ಕೃತಘ್ನನಾದ ನನ್ನ ನಿರ್ದಯವಾದ ಪ್ರಾಣವು ಅಂತಹ

ಅತಿಕಷ್ಟಮಪ್ಪವಸ್ಥಾ
ತತಿಯಂ ಮಱಿಯಿಸಿ ಜಳಾಭಿಲಾಷೆಯನೀ ಜೀ
ವಿತತೃಷ್ಣೆ ಮೂಡಿತೀ ಜೀ
ವಿತಾಶೆಯಂ ಬಿಟ್ಟು ಕಷ್ಟಮಾವುದುಮುಂಟೇ ೧೬೨

ಪೆಱತೇಂ ನಿರ್ಘೃಣನೆಂಬುದ
ನಱಿದೆಂ ಪಿತೃಮರಣಜಾತದುಃಖಮನೀಗಳ್
ಮಱೆದು ಮನಂ ನೀರ್ಗುಡಿಯಲ್
ಮಱುಗಿದಪುದು ಕುಡಿವೊಡೆನಗೆ ನೀರುಂ ದೂರಂ ೧೬೩

ಅದೆವಾತಂ ನಸುಗೇಳಲಾಯ್ತು ಜಳದೇವೀನೂಪುರಾರಾವದಂ
ದದೆ ಹಂಸಸ್ವನ ಪಾರಿಬಂದುದದೆ ನಾನಾ ಸಾರಸೋತ್ತಾರಸಂ
ಮದಕೋಳಾಹಳಮೆಯ್ದಿದತ್ತದುವೆ ತಾನುಲ್ಲಾಸಿ ದಿಗ್ದೇವತಾ
ವದನೋತ್ಸರ್ಪಣವಿಪ್ರಕರ್ಷವಿರಳಂ ಪಂಕೇಜಿನೀಸೌರಭಂ ೧೬೪

ವ॥ ಅದಲ್ಲದೆಯುಂ

ಕಡುವೊತ್ತಾದುದು ರವಿಯುಂ
ನಡುವಗಲೊಳ್ ನಿಂದು ಕಿದಱಿದಂ ಕರತತಿಯಿಂ
ಕಿಡಿಗಳನೆನೆ ಬಿಱಿವಿಸಿಲುಂ
ಸುಡುತಿರೆ ನೀರಡಿಕೆ ತಿಣ್ಣಮಾದತ್ತಾಗಳ್ ೧೬೫

ತಂದೆ ಸತ್ತರೂ ಜೊತೆಯಲ್ಲಿ ಹೋಗಲಿಲ್ಲವಲ್ಲ ! ೧೬೨. ಈ ಪ್ರಾಣದ ಮೇಲಿನ ಆಸೆಯು ಬಹಳ ಕಷ್ಟಕರವಾದ ಅವಸ್ಥೆಯನ್ನೂ ಮರೆಯುವಂತೆಮಾಡಿ ನನಗೆ ನೀರು ಕುಡಿಯಬೇಕೆಂಬ ಇಚ್ಛೆಯನ್ನು ಉಂಟುಮಾಡಿದೆ. ಒಟ್ಟಿನಲ್ಲಿ ಬದುಕಬೇಕೆಂಬ ಅಭಿಲಾಷೆಗಿಂತಲೂ ಕೆಟ್ಟದ್ದು ಈ ಭೂಮಿಯಲ್ಲಿ ಮತ್ತೊಂದಿಲ್ಲ. ೧೬೩. ಬೇರೆಯ ಮಾತು ಏತಕ್ಕೆ ? ನಾನೊಬ್ಬ ದಯಾಶೂನ್ಯ. ಏಕೆಂದರೆ ನನ್ನ ಮನಸ್ಸು ತಂದೆಯ ಸಾವಿನಿಂದ ಉಂಟಾದ ದುಃಖವನ್ನೆಲ್ಲಾ ಮರೆತು ನೀರು ಕುಡಿಯಲು ತವಕಿಸುತ್ತಿದೆ. ಕುಡಿಯೋಣವೆಂದರೆ ನೀರೂ ಬಹಳ ದೂರದಲ್ಲಿದೆ ! ೧೬೪. ಜಲದೇವತೆಯ ಕಾಲುಗಡಗದ ದನಿಯಂತಿರುವ ಹಂಸಗಳ ಉಲಿಯು ದೂರದಲ್ಲಿ ಸ್ವಲ್ಪ ಸ್ವಲ್ಪ ಮಾತ್ರ ಕೇಳಿಬರುತ್ತಿದೆ. ಅನೇಕ ಬಗೆಯ ಸಾರಸಪಕ್ಷಿಗಳು ಆನಂದದಿಂದ ಮಾಡುವ ದೊಡ್ಡ ಕಲಕಲಧ್ವನಿಯು ದೂರದಿಂದ ಕೇಳಿಬರುತ್ತಿದೆ. ದಿಗ್ದೇವತೆಗಳ ಮುಖದವರೆಗೂ ಹರಡುತ್ತಾ ಹೋಗುವ ಆದರೆ ದೂರವಾದ್ದರಿಂದ ಅಲ್ಪಪ್ರಮಾಣದಲ್ಲಿ ಹರಡುವ ಆಹ್ಲಾದಕರವಾದ ಕಮಲವನದ ಪರಿಮಳವು ಸುಳಿಯುತ್ತಿದೆ. ವ॥ ಅದಲ್ಲದೆ. ೧೬೫. ಹೊತ್ತು ಬಹಳವಾಯಿತು. ಸೂರ್ಯನು ನಡುಹಗಲಿಗೆ ಏರಿ ತನ್ನ ಕಿರಣಗಳೆಂಬ ಕೈಗಳಿಂದ ಕಿಡಿಗಳನ್ನು ಎರಚುತ್ತಿದ್ದಾನೋ ಎಂಬಂತೆ ಬಿಸಿಲು ಜೋರಾಗಿ ಸುಡುತ್ತಿರಲಾಗಿ ಬಾಯಾರಿಕೆಯು ಬಹಳ

ಬಟ್ಟೆಯು ದೂಳಿದೂವೆ ಮೊದಲಾದುದು ಪೋದಪೆನೆಂಬ ಮೆಯ್ ಜವಂ
ಗೆಟ್ಟು ಪಿಪಾಸೆಯಿಂ ಪೊಡರಲಾರ್ತಪುದಿಲ್ಲ ದೆಗೆಟ್ಟೆನೀಗಳೀ
ದಿಟ್ಟಿ ಮರಳ್ದು ನಂದಿದಪುದೆನ್ನುವಃನಾನಱಿದಪ್ಪೆನಿಲ್ಲ ಪೋ
ಬೆಟ್ಟದನಾಗಿ ತಾನೆ ವಿಧಿ ಕೊಂದಪನಾಗಳೆ ಸಾಯದಿರ್ದೊಡಂ ೧೬೬

ವ॥ ಎಂದು ಚಿಂತಿಸುತ್ತಿರೆಯಿರೆ

ಪ್ರತ್ಯಾಸನ್ನದೊಳಿರ್ಪುದು
ಯತ್ಯಾಶ್ರಮಮಲ್ಲಿ ನೆಗಟ್ದ ಜಾಬಾಲಿಗಳಿಂ
ಬತ್ಯುತ್ತಮ ಯತಿಪತಿಗಳ
ಪತ್ಯಂ ಹಾರೀತನಾಮನಾವನದೊರ್ವಂ ೧೬೭

ಸಮವಯಸರ್ ಕೆಲದೊಳ್ ಮುನಿ
ಕುಮಾರರಿರ್ವರ್ ಬರುತುಮಿರೆ ಬಹುವಿದ್ಯಂ
ಕಮಳಾಕರಮಂ ಮೀಯಲ್
ಕುಮರಂ ಬಂದಂ ಸನತ್ಕುಮಾರನ ದೊರೆಯಿಂ ೧೬೮

ಇದು ರವಿಬಿಂಬದಿನೊಗೆದ
ತ್ತಿದು ಮಿಂಚಿನ ಗೊಂಚಲಿಂದೆ ಮೇಣ್ ಮೂಡಿದುದಿಂ
ತಿದು ಕನಕದ್ಯುತಿಯಿಂ ಪೂ
ಸಿದುದೆನೆ ಪೊಳೆದತ್ತು ಮೂರ್ತಿ ತನ್ಮುನಿವರನಾ ೧೬೯

ಹೆಚ್ಚಾಯಿತು. ೧೬೬. ಸೂರ್ಯನ ಕಿರಣಗಳಿಂದ ಕಾದು ದಾರಿಯು ಧೂಳು ಹೊಗೆ ಯಂತೆ ಮೇಲೇಳುತ್ತಿದೆ. ಹೋಗಬೇಕೆಂದು ಹೊರಟ ಶರೀರವು ಬಾಯಾರಿಕೆಯಿಂದ ಬಲಗುಂದಿ ಚಲಿಸಲಾರದೆ ಹೋಗಿದೆ. ಧೈರ್ಯ ಕುಂದಿದೆ. ಕಣ್ಣು ಕಾದು ಕುರುಡಾಗು ತ್ತಿದೆ. ನಾನು ಯಾರೆಂಬುದು ನನಗೇ ಗೊತ್ತಾಗುತ್ತಿಲ್ಲ. ಛೆ! ಛೆ! ನಾನಾಗಿ ಸಾಯಲು ಇಷ್ಟಪಡದಿದ್ದರೂ ವಿಧಿಯು ಕ್ರೂರನಾಗಿ ತಾನೇ ಕೊಂದುಬಿಡುತ್ತಾನೋ ಏನೋ, ವ॥ ಹೀಗೆ ಚಿಂತಿಸುತ್ತಿರಲಾಗಿ ೧೬೭. ಆ ಸರೋವರಕ್ಕೆ ಸಮೀಪದಲ್ಲಿ ಒಂದು ತಪೋ ವನವಿರುವುದು. ಅಲ್ಲಿ ಪ್ರಸಿದ್ಧರಾದ ಜಾಬಾಲಿಗಳೆಂಬ ಬಹಳ ಶ್ರೇಷ್ಠರಾದ ಮಹರ್ಷಿ ಗಳು ವಾಸವಾಗಿದ್ದರು. ಅವರಿಗೆ ಹಾರೀತನೆಂಬ ಹೆಸರಿನ ಒಬ್ಬ ಮಗನಿದ್ದನು. ೧೬೮. ಸನತ್ಕುಮಾರನಂತೆ ಸರ್ವವಿದ್ಯಾಪಾರಂಗತನಾದ ಆ ಮುನಿಕುಮಾರನು ತನ್ನ ಸಮಾನವಯಸ್ಸಿನ ಇಬ್ಬರು ಋಷಿಕುಮಾರರು ಜೊತೆಯಲ್ಲಿ ಬರುತ್ತಿರಲಾಗಿ ಸ್ನಾನ ಮಾಡಲು ಆ ತಾವರೆಗೊಳಕ್ಕೆ ಬಂದನು. ೧೬೯. ಆ ಕುಮಾರನ ಆಕಾರವು ಸೂರ್ಯ ಮಂಡಲದಿಂದ ಹುಟ್ಟಿಬಂದಂತೆಯೂ ಮಿಂಚಿನಗೊಂಚಲಿನಿಂದ ನಿರ್ಮಿಸಲ್ಪಟ್ಟಂತೆಯೂ

ಎಳೆವಿಸಿಲೆಱಗಿದುದೊ ಬನ
ದೊಳಗೆನೆ ಮೆಯ್ಸೆಳಗು ಬಳಸೆ ಖಾಂಡವಮಂ ತ
ಳ್ತಳುಱುತಿರೆ ವಟುಕವೇಷಮ
ನೆಳಸಿದ ಪಾವಕನನಿನಿಸನುಕರಿಸಿರ್ದಂ ೧೭೦

ವ॥ ಅದಲ್ಲದೆಯುಂ

ಬಳೆದು ಪೊಱಮುಯ್ಯವರೆಗಂ
ತಳೆದು ಕನತ್ಕನಕ ಪಿಂಗರುಚಿಯಂ ತೀರ್ಥಾ
ವಳಿ ಜಲಪೂತಂಗಳ್ ಕ
ಣ್ಗೊಳಿಪುವು ಮುನಿವರನ ಮಿಸುಪ ಕೆಂಜೆಡೆಮುಱುಗಲ್ ೧೭೧

ಬಿಸುಟೆಂ ಸಮಸ್ತ ವಿಷಯದ
ದೆಸೆಯಂ ನಿಶ್ಚಯದೆ ಮೂಱುಸೂಳ್ವರಮೆಂಬಂ
ತೆಸೆದತ್ತು ನಾಡೆಯುಂ ಪೆಱೆ
ನೊಸಲೊಳ್ ಭಸಿತಪುಂಡ್ರಕಂ ಮುನಿವರನಾ ೧೭೨

ಗಗನಗಮನಕ್ಕೆ ಹಂಸಂ
ಮೊಗಸಿದುದೆನೆ ನಿಮಿರ್ದ ಕೊರಳನೊಳ್ವೆಳಗಿನ ಗುಂ
ಡಿಗೆ ಮುನಿಯ ಕೆಯ್ಯೊಳೆಸೆದುದು
ಜಗಕೆಲ್ಲಂ ಸ್ವರ್ಗಮಾರ್ಗಮಂ ತೋಱುವವೋಲ್ ೧೭೩

ಚಿನ್ನದ ಕಾಂತಿಯಿಂದ ಲೇಪನಮಾಡಿದಂತೆಯೂ ಹೊಳೆಯುತ್ತಿತ್ತು. ೧೭೦. ಅವನ ದೇಹ ಕಾಂತಿಯು ಕಾಡಿನಲ್ಲಿ ಎಳೆಬಿಸಿಲು ಹರಡುವಂತೆ ಹರಡಿತ್ತು. ಅದರಿಂದ ಖಾಂಡವ ವನದಲ್ಲಿ ಬೆಂಕಿ ಹಬ್ಬಿರಲು ವಟುವೇಷವನ್ನು ತಾಳಿ ಅಲ್ಲಿ ನಿಂತಿದ್ದ ಅಗ್ನಿದೇವನನ್ನು ಅವನು ಸ್ವಲ್ಪಮಟ್ಟಿಗೆ ಹೋಲುತ್ತಿದ್ದನು. ವ॥ ಅದಲ್ಲದೆ, ೧೭೧. ಆ ಮುನಿಕುಮಾರನ ಹೆಗಲಿನ ಕೆಳಗಿನವರೆಗೂ ಬೆಳೆದಿರುವ, ಮಿರುಗುವ ಚಿನ್ನದಂತೆ ಹಳದಿ ಬಣ್ಣದ, ಅನೇಕ ಪುಣ್ಯನದೀ ಸರೋವರಗಳ ಜಲದಿಂದ ಪವಿತ್ರವಾದ ಮತ್ತು ಪ್ರಕಾಶಮಾನವಾದ ಜಟಾ ಸಮೂಹವು ಕಂಗೊಳಿಸುತ್ತಿತ್ತು. ೧೭೨. ಐಹಿಕವಾದ ಎಲ್ಲಾ ವಿಷಯುಗಳ ಗೊಡವೆ ಯನ್ನೂ ನಾನು ದೂರೀಕರಿಸಿದ್ದೇನೆ. ಇದು ಖಂಡಿತವಾಗಿಯೂ ಸತ್ಯ, ಸತ್ಯ, ಸತ್ಯ ಎಂದು ಮೂರು ಸಲ ಆಣೆಯಿಟ್ಟುಕೊಂಡಿದ್ದೇನೆ .ಎಂದು ತೋರಿಸುವನಂತೆ ಚಂದ್ರನಕಳೆಯಂತಿ ರುವ ಅವನ ಹಣೆಯಲ್ಲಿ ವಿಭೂತಿಯ ಮೂರು ಅಡ್ಡಪಟ್ಟೆಗಳು ಶೋಭಿಸುತ್ತಿದ್ದುವು. ೧೭೩, ಆಕಾಶಕ್ಕೆ ಹಾರಿಹೋಗಲು ಹಂಸಪಕ್ಷಿಯು ಆಸೆಪಟ್ಟು ಕತ್ತನ್ನು ಮೇಲಕ್ಕೆ ಎತ್ತಿಕೊಂಡಿದೆಯೋ ಎಂಬಂತಿರುವ, ಶುಭ್ರವಾದ ಕಾಂತಿಯುಳ್ಳ ಮತ್ತು ಮೇಲಿರುವ ಸ್ವರ್ಗದ ಮಾರ್ಗವನ್ನು ಜಗತ್ತಿಗೆಲ್ಲ ತೋರಿಸುತ್ತಿರುವುದೋ ಎಂಬಂತೆ ಮೇಲುಮುಖ

ಉರದ ಬರಿಯೆಲುವನೆಣಿಪಂ
ತಿರಲೆಲರಿಂ ನಡುಗುತಂ ತಪಸ್ವಿಯ ಕೊರಲೊಳ್
ಕರವೆಸೆದು ತೋಱಿದುದು ತಾ
ವರೆದಂಟಿನ ಮಿಸುಪ ನೂಲ ಪೊಸ ಜನಿವಾರಂ ೧೭೪

ಅಗುಳ್ದು ತುದಿಗೊಂಬಿನೊಳ್ ಮೆ
ಲ್ಲಗೆ ಪೊತ್ತಭಿಷೇಕ ಮೃತ್ತಿಕೆಯನೊಡಸಂದ
ತೃಗಲದಿನಿಸುಂ ತಪೋವನ
ಮೃಗಮಾ ಮುನಿವರನೊಳಾದ ಪರಿಚಯದಿಂದಂ ೧೭೫

ವ॥ ಅದಲ್ಲದೆಯುಂ ಗಿರಿಯಂತೆ ಮೇಖಳಾಳಂಕೃತನುಂ ದ್ರೋಣನಂತಸಹಾಯ ಕೃಪಾನುಗತನುಂ ನಕ್ಷತ್ರಚಕ್ರದಂತೆ ನಾನಾ ಮೃಗಕೃತ್ತಿಕಾಶ್ಲೇಷೋಪಶೋಭಿತನುಂ ಘರ್ಮ ಸಮಯದಂತೆ ಕ್ಷಪಿತದೋಷನುಂ ಹರಿಯಂತಪಗತನರಕಭಯನುಂ ನೀತಿಯುಳ್ಳರಸನಂತೆ ಗೂಢ

ವಾದ ಕಂಠವುಳ್ಳ ಕಮಂಡಲು ಅವನ ಕೈಯಲ್ಲಿ ಕಂಗೊಳಿಸುತ್ತಿತ್ತು. ೧೭೪. ಅವನ ಕತ್ತಿನಲ್ಲಿ ತಾವರೆಯ ದಂಟಿನ ಎಳೆಗಳಿಂದ ಮಾಡಿದ ಪ್ರಕಾಶಮಾನವಾದ ಹೊಸ ಜನಿವಾರವಿತ್ತು. ಅದು ಗಾಳಿಯಿಂದ ಅಳ್ಳಾಡುತ್ತಿತ್ತು. ಅದರಿಂದ ಹೆಚ್ಚು ಮಾಂಸಗಳಿಲ್ಲದಿರುವುದರಿಂದ ಹೊರಗೆ ಕಾಣುತ್ತಿರುವ ಮೂಳೆಗಳನ್ನು ಲೆಕ್ಕ ಮಾಡುವಂತೆ ಕಾಣುತ್ತಿತ್ತು. ೧೭೫. ಆಶ್ರಮದಲ್ಲೇ ಬೆಳೆದ ಜಿಂಕೆಯೊಂದು ಆ ಕುಮಾರನ ಮೇಲಿನ ವಿಶೇಷ ಸಲಿಗೆಯಿಂದ ಅವನನ್ನು ಹಿಂಬಾಲಿಸಿಕೊಂಡು ಬರುತ್ತಿತ್ತು. ಅದು ಅವನ ಸ್ನಾನಕ್ಕೆ ಬೇಕಾದ ಮೃತ್ತಿಕೆಯನ್ನು ಕೋಡ ತುದಿಯಿಂದ ಅಗೆದು ಮೆಲ್ಲನೆ ಹೊತ್ತು ತರುತ್ತಿತ್ತು. ವ॥ ಆದಲ್ಲದೆ ಅವನು ಬೆಟ್ಟದಂತೆ "ಮೇಖಳಾಳಂಕೃತ"ನಾಗಿದ್ದನು. (೧. ಮುಂಜವೆಂಬ ಹುಲ್ಲಿನಿಂದ ಹೊಸೆದ ಉಡಿದಾರದಿಂದ ಶೋಭಿಸುತ್ತಿದ್ದನು. ೨. ನಡು ಭಾಗದಿಂದ ಶೋಭಿಸುತ್ತಿತು). ದ್ರೋಣನಂತೆ "ಅಸಹಾಯಕೃಪಾನುಗತ"ನಾಗಿದ್ದನು. (೧. ನಿರ್ಗತಿಕರಾದವರಲ್ಲಿ ದಯೆಯಿಂದ ಕೂಡಿಕೊಂಡಿದ್ದನು. ೨. ಶೂರನಾದ ಕೃಪಾಚಾರ್ಯನಿಂದ ಹಿಂಬಾಲಿಸಲ್ಪಡುತ್ತಿದ್ದನು.) ನಕ್ಷತ್ರಚಕ್ರದಂತೆ "ನಾನಾಮೃಗ ಕೃತ್ತಿಕಾಶ್ಲೇಷೋಪಶೋಭಿತ" ನಾಗಿದ್ದನು. (೧. ಅನೇಕ ಜಿಂಕೆಗಳ ಚರ್ಮದ ಸಂಬಂಧದಿಂದ ಶೋಭಿಸುತ್ತಿದ್ದನು. ಬಗೆಬಗೆಯ ಮೃಗಶಿರ, ಕೃತ್ತಿಕೆ, ಆಶ್ಲೇಷ ಎಂಬ ನಕ್ಷತ್ರಗಳಿಂದ ಶೋಭಿಸುತ್ತದೆ. ಬೇಸಿಗೆಕಾಲದಂತೆ "ಕ್ಷಪಿತದೋಷ"ನಾಗಿದ್ದನು. (೧. ನಾಶಗೊಳಿಸಲ್ಪಟ್ಟ ಕಾಮಕ್ರೋಧಾದಿ ದೋಷಗಳುಳ್ಳವನಾಗಿದ್ದನು. ೨. ಕಡಮೆ ಮಾಡಲ್ಪಟ್ಟ ರಾತ್ರಿಯುಳ್ಳದ್ದು) ಶ್ರೀಕೃಷ್ಣನಂತೆ "ಅಪಗತನರಕಭಯ"ನಾಗಿದ್ದನು. (೧. ಪಾಪದಿಂದ ಉಂಟಾಗುವ ನರಕಭಯವಿಲ್ಲದವನಾಗಿದ್ದನು. ೨. ನರಕಾಸುರನ ಭಯವನ್ನು ತಪ್ಪಿಸುವ

ಮಂತ್ರ ಸಾಧನಕ್ಷಯಿತವಿಗ್ರಹನುಂ ವನಚರನಾಗಿಯುಂ [ಮಹಾಲಯ ಪ್ರವೇಶನುಂ] ಅಸಂಯಮನಾಗಿಯುಂ ಮೋಕ್ಷಾರ್ಥಿಯುಂ ಸಾಮಪ್ರಯೋಗನಾಗಿಯುಂ ಗೃಹೀತದಂಡನುಂ ಸುಪ್ತನಾಗಿಯುಂ ಪ್ರಬುದ್ಧನುಂ ವಿಶಾಲಲೋಚನದ್ವಯನಾಗಿಯುಂ ತ್ಯಕ್ತವಾಮಲೋಚನನು ಮೆನಿಸಿದ ಮುನಿಕುಮಾರಂ ಬರುತಿರ್ದ ಬಟ್ಟೆಯೊಳ್ ಕಂಠಗತಪ್ರಾಣನಾಗಿರ್ದೆನ್ನಂ ಕಂಡು

ಗುಣಿಗಳ ಮನವೆಂದುಮಕಾ
ರಣದೊಳೆ ಕರುಣಾರಸಾರ್ದ್ರಮಾರೊಳಮದು ಕಾ
ರಣದಿಂದೆ ಮುನಿಕುಮಾರಾ
ಗ್ರಣಿ ಕರುಣಿಸಿ ಕೆಲದ ಮುನಿಕುಮಾರರ್ಗೆಂದಂ ೧೭೬

ವನು.) ನೀತಿವಂತನಾದ ರಾಜನಂತೆ "ಗೂಢಮಂತ್ರಕ್ಷಪಿತವಿಗ್ರಹ"ನಾಗಿದ್ದನು. ಗುಟ್ಟಾದ ಮಂತ್ರಗಳ ಸಿದ್ಧಿಯಲ್ಲಿ ಉಂಟಾದ ಶ್ರಮದಿಂದ ಕೃಶವಾದ ಶರೀರವುಳ್ಳವನು. ೨. ಗುಟ್ಟಾದ ರಹಸ್ಯಾಲೋಚನೆಯಿಂದ ಪರಿಹರಿಸಲ್ಪಟ್ಟ ಯುದ್ಧವುಳ್ಳವನು). ಅವನು ವನಚರನಾಗಿದ್ದರೂ ಮಹಾಲಯಪ್ರವೇಶನಾಗಿದ್ದನು. (ಕಾಡಿನಲ್ಲಿ ಸಂಚರಿಸುತ್ತಿದ್ದರೂ (೧. ದೊಡ್ಡ ದೊಡ್ಡ ಮನೆಗಳ ಒಳಕ್ಕೆ ಹೋಗುತ್ತಿದ್ದನು. ೨. ಪರಮಾತ್ಮನಲ್ಲಿ ಆಸಕ್ತನಾಗಿದ್ದನು.) ಅಸಂಯಮನಾಗಿಯೂ ಮೋಕ್ಷಾರ್ಥಿಯಾಗಿದ್ದನು. (೧. ಇಂದ್ರಿಯ ನಿಗ್ರಹವಿಲ್ಲದವನಾದರೂ ಮೋಕ್ಷವನ್ನು ಬಯಸುತ್ತಿದ್ದನು. ೨. ನಿರ್ಬಂಧಕ್ಕೆ ಒಳಪಡದವನಾದರೂ ಸ್ವಂತ ಇಚ್ಛೆಯಿಂದಲೇ ಮೋಕ್ಷವನ್ನು ಬಯಸುತ್ತಿದ್ದನು). "ಸಾಮ ಪ್ರಯೋಗನಾದರೂ ಗೃಹೀತದಂಡನಾಗಿದ್ದನು. (೧. ಸಾಮವೆಂಬ ಉಪಾಯವನ್ನು ಪ್ರಯೋಗಿಸುವುದರಲ್ಲಿ ಚತುರನಾದರೂ ದಂಡೋಪಾಯಕ್ಕೆ ತೊಡಗುತ್ತಿದ್ದನು. ೨. ಸಾಮವೇದದಲ್ಲಿ ಗಟ್ಟಿಗನಾಗಿಯೂ ಬ್ರಹ್ಮಚಾರಿವ್ರತೋಚಿತವಾದ ಮುತ್ತುಗದ ಕೋಲನ್ನು ಧರಿಸಿದ್ದನು. ಸುಪ್ತನಾಗಿದ್ದರೂ ಪ್ರಬುದ್ಧನಾಗಿದ್ದನು. (೧. ನಿದ್ರೆ ಮಾಡುತ್ತಿದ್ದರೂ ಎಚ್ಚರವಾಗಿದ್ದನು. ೨. ಒಳ್ಳೆಯ ಜಟೆಗಳನ್ನು ಹೊಂದಿರುವವನೂ ಒಳ್ಳೆಯ ಜ್ಞಾನಿಯೂ ಆಗಿದ್ದನು.) (ಪಾ = ಜಟೆ) "ವಿಶಾಲಲೋಚನದ್ವಯ"ನಾದರೂ ತ್ಯಕ್ತವಾಮಲೋಚನನಾಗಿದ್ದನು. (೧. ಅಗಲವಾದ ಎರಡು ಕಣ್ಣುಗಳುಳ್ಳವನಾದರೂ ಅವನಿಗೆ ಎಡಗಣ್ಣೇ ಇರಲಿಲ್ಲ. ೨. ವಿಶಾಲವಾದ ಎರಡು ಕಣ್ಣುಳ್ಳವನೂ ಹೆಂಗಸರ ಗೊಡವೆಯನ್ನು ತ್ಯಜಿಸಿದವನೂ ಆಗಿದ್ದನು.) ಇಂತಹ ಮುನಿಕುಮಾರನು ಬರುತ್ತಿದ್ದ ದಾರಿಯಲ್ಲಿ ಕುತ್ತಿಗೆಗೆ ಬಂದಿರುವ ಜೀವವುಳ್ಳ ನನ್ನನ್ನು ಕಂಡು ೧೭೬. ಸತ್ಪುರುಷರ ಮನಸ್ಸು ಯಾವಾಗಲೂ ಯಾರಲ್ಲಾದರೂ ಯಾವ ಕಾರಣವೂ ಇಲ್ಲದಿದ್ದರೂ ದಯೆಯಿಂದ ಕರಗಿಬಿಡುತ್ತದೆ. ಅದರಿಂದ ಆ ಮುನಿಕುಮಾರನಾದ ಹಾರೀತನು ನನ್ನನ್ನು ನೋಡಿ ಕರುಣೆಯನ್ನು ಹೊಂದಿ ಪಕ್ಕದಲ್ಲಿದ್ದ ಮುನಿಪುತ್ರನನ್ನು ಕುರಿತು ಹೀಗೆ ಹೇಳಿ

ಗಿಡುಗುಂ ತಂದತ್ತೊ ಮೇಣ್ ಪೆರ್ಮರನ ತುದಿಯಿನೇಱಿ ಬಿರ್ದುದೋ
ಸೇದೆಯೊಂದು
ಗ್ಗಡದಿಂದಂ ಸುಯ್ ಪೊದಟ್ದುಣ್ಮುವುದು ನಡುಗುತ್ತಿರ್ದುವೀ ಕಣ್ಮಲರ್ ಬಾ
ಯ್ವಿಡುತ್ತಿರ್ದತ್ತಕ್ಕಟಾ ಗೋಣಿನಿಸು ನಿಲಲುವಾರ್ತಪ್ಪುದಿಲ್ಲೆಯ್ದೆ ಜೀವಂ
ಬಿಡದನ್ನಂ ಬೇಗಮಿಂತೀ ಗಿಳಿಮಱಿಯನಬ್ಜಾಕರಕ್ಕೊಯ್ವಮೀಗಳ್ ೧೭೭

ವ॥ ಅಂತಾ ಗಿಳಿವೆರಸು ಮುನಿಕುಮಾರಕಂ ಕಮಳಾಕರಕ್ಕೆವಂದು ದಂಡಕಮಂಡಲು ಗಳನೊಂದೆಡೆಯೊಳಿರಿಸಿ

ಕುಡಿತೆಯೊಳೆ ತಂದು ನೀರಂ
ಪಿಡಿದೊಯ್ಯನೆ ತೆಱೆದು ತಾನೆ ಚಂಚೂಪುಟದಿಂ
ಕುಡಿಯಿಸುತಡಿಯಣ ತಾವರೆ
ಗೊಡೆಯೆಲೆಗಳ ತಳದ ನೆಟಲೊಳಿರಿಸಿದನೆನ್ನಂ ೧೭೮

ವ॥ ಅಂತೆನ್ನಂ ಸಪ್ರಾಣನಪ್ಪಂತುಮಾಡಿ ಸಕಲ ಪರಿಶ್ರಮಂಗಳನಾಱಿಸಿ ಮುನಿ ಕುಮಾರಂ ಕೃತಸ್ನಾನನಾಗಿ ಪ್ರಾಣಾಯಾಮಪೂರ್ವಕಮಘಮರ್ಷಣ ಕ್ರಿಯೆಗಳಂ ನಿರ್ವರ್ತಿಸಿ ನಳಿನೀದಳಪುಟದೆ ಕೆಂದಾವರೆಯಲರ್ಗಳಿಂ ದಿವಸಕರಂಗರ್ಘ್ಯಮನೆತ್ತಿ ಗೃಹೀತ ಧವಳವಲ್ಕ

ದನು. ೧೭೭. ಈ ಮರಿಗಿಳಿಯನ್ನು ಇಲ್ಲಿ ಗಿಡುಗನು ತಂದು ಹಾಕಿದೆಯೋ ಏನೋ ಅಥವಾ ಮರದ ತುದಿಯನ್ನು ಹತ್ತಿ ಕೆಳಕ್ಕೆ ಬಿದ್ದುಬಿಟ್ಟಿದೆಯೋ ಏನೋ ಆತಿಶಯ ವಾದ ಶ್ರಮದಿಂದ ನಿಟ್ಟುಸಿರು ಹೊರಹೊಮ್ಮುತ್ತಿದೆ. ಕಣ್ಣುಗುಡ್ಡೆಗಳು ಭಯದಿಂದ ಪರಪರಗುಟ್ಟುತ್ತಿವೆ. ಅಯ್ಯೋ ! ಬಾಯಿ ಬಾಯಿ ಬಿಡುತ್ತಿದೆ. ಕೊರಳಿಗೆ ನಿಲ್ಲಲು ಶಕ್ತಿಯೇ ಇಲ್ಲ. ಪ್ರಾಣ ಹೋಗುವುದಕ್ಕೆ ಮೊದಲೇ ಇದನ್ನು ತಾವರೆಗೊಳಕ್ಕೆ ತೆಗೆದು ಕೊಂಡುಹೋಗೋಣ. ವ॥ ಹೀಗೆ ಗಿಳಿಯಿಂದ ಕೂಡಿ ಮುನಿಕುಮಾರಕನು ತಾವರೆ ಗೊಳಕ್ಕೆ ಬಂದು ದಂಡಕಮಂಡಲುಗಳನ್ನು ಒಂದುಕಡೆ ಇರಿಸಿ, ೧೭೮. ಬೊಗಸೆಯಲ್ಲಿ ನೀರನ್ನು ತಂದು ನನ್ನನ್ನು ಹಿಡಿದುಕೊಂಡು ಮೆಲ್ಲನೆ ಕೊಕ್ಕನ್ನು ಬಿಡಿಸಿ ನೀರು ಕುಡಿಸಿ ಕೆಳಗಿದ್ದ ಕೊಡೆಯಂತೆ ಹರಡಿದ್ದ ತಾವರೆ ಎಲೆಗಳ ಕೆಳಗೆ ನೆರಳಿನಲ್ಲಿ ನನ್ನನ್ನು ಇರಿಸಿದನು. ವ॥ ಹಾಗೆ ನನಗೆ ಜೀವವುಳಿಯುವಂತೆ ಮಾಡಿ ನನ್ನ ಆಯಾಸವನ್ನೆಲ್ಲಾ ಪರಿಹರಿಸಿ ಆ ಮುನಿಕುಮಾರನು ಸ್ನಾನಮಾಡಿ ಪ್ರಾಣಾಯಾಮಪೂರ್ವಕವಾಗಿ ಅಘಮರ್ಷಣ ಮಂತ್ರ ಜಪವೇ ಮೊದಲಾದ ಕರ್ಮಗಳನ್ನು ನೆರವೇರಿಸಿ ತಾವರೆಯೆಲೆಯ ದೊನ್ನೆಯಲ್ಲಿ ಕೆಂದಾವರೆಯ ಹೂವುಗಳಿಂದ ಕೂಡಿದ ಅರ್ಘ್ಯವನ್ನು ಸೂರ್ಯನಿಗೆ ಕೊಟ್ಟು ಬಿಳಿಯ ನಾರುಮಡಿಯನ್ನುಟ್ಟು, ಜಟೆಯನ್ನು ಚೆನ್ನಾಗಿ ಕೊಡಹಿ ನೀರು ಹೋಗುವಂತೆ

ಲನುಂ ನಿರ್ಧೂತ ಜಟಾಕಳಾಪನುಂ ಪೂರ್ಣಕಮಂಡಳಾಕಲಿತ ಕರತಳನುಮಾಗೆನ್ನಂ ಪರ್ಣಪುಟ ದೊಳ್ ತಳೆದು ನಿರ್ವರ್ತಿತನಿಯಮರಪ್ಪ ಮುನಿಕುಮಾರರ್ ಬೆರಸು ನಿಜಾಶ್ರಮಕ್ಕೆ ಪೋಗೆಪೋಗೆ

ತನುವೆರಸೊಯ್ಯಲ್ ಮುನಿಗಳ
ನನಲಂ ಸ್ವರ್ಗಕ್ಕೆ ಸೇತುಗಟ್ಟಿದನೆನೆ ಪಾ
ವನ ಹೋಮಧೂಮವೊಗೆಯಲ್
ಮುನಿಪಾಶ್ರಮಮೆನಗೆ ಕಾಣಲಾದತ್ತಾಗಳ್ ೧೭೯

ತಿಲಕಾಶೋಕ ತಮಾಳ ತಾಳ ವಕುಳಾಲಂಕಾರಮೇಲಾಲತಾ
ಕುಲ ಪೂಗದ್ರುಮ ನಾಳಿಕೇರ ಬಹುಳಂ ಚೂತಾವನೀಜಾತ ಲೋ
ಧ್ರ ಲವಂಗಪ್ರಕರಪ್ರವಾಳರುಚಿರಂ ಪ್ರೋತ್ಫುಲ್ಲ ನಾನಾ ಲತಾ
ಲಲಿತಂ ಕಾನನಮೆಯ್ದೆ ಕಣ್ಗೊಳಿಸುಗುಂ ಋಷ್ಯಾಶ್ರಮೋಪಾಂತ್ಯದೊಳ್ ೧೮೦

ಅಳಿನೀರ್ಝಂಕಾರಸಾರಂ ವಿಲುಳಿತ ಸುಮನೋಮಂಜರೀರಂಜಿತಂ ಕೋ
ಕಿಳ ಕಾಂತಾಳಾಪರಮ್ಯಂ ನಿಪತಿತ ವಿವಿಧಾನೇಕಪುಷ್ಪಂ ಪರಾಗೋ
ಜ್ವಳಿತಂ ನೃತ್ಯನ್ಮಯೂರ ಪ್ರಕರ ಸುರುಚಿರಂ ಪ್ರೌಢಪೂಗದ್ರುಮಾ ಬ
ದ್ಧಲತಾಂದೋಳೀ ವಿಳಾಸೋತ್ಸುಕವನವನಿತಾನೀಕಕಾಂತಂ ವನಾಂತಂ ೧೮೧

ಮಾಡಿ ನೀರು ತುಂಬಿದ ಕಮಂಡಲುವನ್ನು ಕೈಯಲ್ಲಿ ಹಿಡಿದು ನನ್ನನ್ನು ಒಂದು ಎಲೆಯ ದೊನ್ನೆಯಲ್ಲಿಟ್ಟುಕೊಂಡು ತನ್ನಂತೆಯೇ ಸ್ನಾನಾಹ್ನಿಕಗಳನ್ನು ಮುಗಿಸಿದ ಋಷಿಬಾಲಕ ರೊಂದಿಗೆ ಕೂಡಿ ತನ್ನ ಆಶ್ರಮಕ್ಕೆ ಹೋಗುತ್ತಿರಲಾಗಿ ೧೭೯. ನನಗೆ ಜಾಬಾಲಿ ಮಹರ್ಷಿಯ ಆಶ್ರಮವು ಕಣ್ಣಿಗೆ ಬಿತ್ತು. ಅಲ್ಲಿ ಅಗ್ನಿಹೋತ್ರದ ಪವಿತ್ರವಾದ ಹೊಗೆಯು ಮೇಲಕ್ಕೆ ಏಳುತ್ತಿತ್ತು. ಅದು ಅಗ್ನಿದೇವನು ಆಶ್ರಮದ ಋಷಿಗಳೆ ಲ್ಲರನ್ನೂ ಸಶರೀರವಾಗಿಯೇ ಸ್ವರ್ಗಕ್ಕೆ ಕರೆದುಕೊಂಡುಹೋಗಲು ಸೇತುವೆಯನ್ನು ಕಟ್ಟಿರುವನೋ ಎಂಬಂತೆ ಕಾಣುತ್ತಿತ್ತು. ೧೮೦. ಆ ಋಷ್ಯಾಶ್ರಮದ ಸುತ್ತಲೂ ಒಂದು ತಪೋವನವು ಚೆನ್ನಾಗಿ ಕಂಗೊಳಿಸುತ್ತಿತ್ತು. ಅದು ತಿಲಕ, ಅಶೋಕ, ಹೊಂಗೆ, ತಾಳೆ, ವಕುಳಮರಗಳಿಂದ ಅಲಂಕರಿಸಲ್ಪಟ್ಟಿತ್ತು. ಅಲ್ಲದೆ ಏಲಕ್ಕಿಗಿಡ ಅಡಕೆಮರ ತೆಂಗಿನಮರಗಳಿಂದ ತುಂಬಿದ್ದಿತು. ಮಾವು, ಲೋಧ್ರ, ಲವಂಗ ಮೊದಲಾದ ಮರಗಳ ಚಿಗುರುಗಳಿಂದ ಮನೋಹರವಾಗಿದ್ದಿತು. ಮತ್ತು ಹೂಬಿಟ್ಟಿರುವ ನಾನಾ ಪ್ರಕಾರವಾದ ಬಳ್ಳಿಗಳಿಂದ ಸುಂದರವಾಗಿದ್ದಿತು. ೧೮೧. ಆ ತಪೋವನದಲ್ಲಿ ಹೆಣ್ಣುದುಂಬಿಗಳ ಝುಂಕಾರವೇ ಮುಖ್ಯವಾಗಿ ಕೇಳಿಬರುತ್ತಿತ್ತು. ಅದು ಜೋಲಾಡುತ್ತಿರುವ ಹೂ ಗೊಂಚಲುಗಳಿಂದ ರಮಣೀಯವಾಗಿಯೂ, ಹೆಣ್ಣು ಕೋಗಿಲೆಗಳ ಪಂಚಮಸ್ವರದಿಂದ ರಮ್ಯವಾಗಿಯೂ, ಕೆಳಗೆ ಬಿದ್ದಿರುವ ಅನೇಕ ಹೂವುಗಳುಳ್ಳದ್ದಾಗಿಯೂ, ಹೂವಿನ ಪರಾಗ ಗಳಿಂದ ಪ್ರಕಾಶಮಾನವಾಗಿಯೂ, ಕುಣಿಯುತ್ತಿರುವ ನವಿಲುಗಳ ಹಿಂಡಿನಿಂದ ಮನೋ

ವ॥ ಮತ್ತಂ ಮಾರೀಚಮಾಯಾಮೃಗಪ್ರಚಾರ ಭೂಮಿಭಾಗದಿಂ ದಶರಥಸುತ ಚಾಪಕೋಟಿಕ್ಷತಕಂದಗರ್ತ ವಿಷಮಿತಸ್ಥಲಂಗಳೊಳಮೆಸೆವ ದಂಡಕಾರಣ್ಯಸ್ಥಳಗಳಿನಾಶ್ರಮ ಮುಪಾಶ್ರಯಂಬಡೆವುದಂತುಮಲ್ಲದೆಯುಂ

ಪಿಡಿದು ಸಮಿತ್ಕುಶಕುಸುಮಮ
ನೆಡೆವಿಡದೋದುತ್ತೆ ವಿನಯದಿಂ ಶಿಷ್ಯರ್ ತ
ಮ್ಮೊಡನೆಯೆ ಬರುತಿರೆ ಮುನಿಗಳ್
ಗಡಣದೆ ಪುಗುತಿರ್ದರತ್ತಮಾಶ್ರಮಪದಮಂ ೧೮೨

ವ॥ ಮತ್ತಮಲ್ಲಿ

ಕಲುಷರಹಿತಂಗಳೆನಿಸುವ
ಕೊಳದೊಳಘಮರ್ಷಣಕ್ಕೆ ಋಷಿಸಂಕುಳಮೇಂ
ನೆಲಸಿರ್ದುದೊ ಪೇಳೆನೆ ಕ
ಣ್ಗೊಳಿಪುವು ತೆರೆವಿಡಿದು ಪೊಳೆವ ರವಿಬಿಂಬಂಗಳ್ ೧೮೩

ಮುನಿಜನದುಪಾಸ್ತಿಗೆಯ್ಯ
ಲ್ಕೆ ನಿಶಿಯೊಳೇಂ ಗ್ರಹಸಮೂಹಮೆಯ್ತಂದುದೊ ಪೇ
ಳೆನಲೆಸೆವ ಕುಮುದ ಕುವಲಯ
ವನದಿಂ ಸೊಗಯಿಪುದು ದೀರ್ಘಿಕಾನಿಕುರುಂಬಂ ೧೮೪

ಹರವಾಗಿಯೂ, ದೊಡ್ಡದಾಗಿ ಬೆಳೆದಿರುವ ಅಡಕೆಮರಕ್ಕೆ ಕಟ್ಟಿರುವ ಬಳ್ಳಿಗಳಲ್ಲಿ ಉಯ್ಯಾಲೆ ಆಟವಾಡುವುದರಲ್ಲಿ ಬಹಳ ಉತ್ಸಾಹಗೊಂಡಿರುವ ವನದೇವತೆಯರ ತಂಡ ದಿಂದ ಸುಂದರವಾಗಿಯೂ ಇತ್ತು. ವ॥ ಮತ್ತು ಈ ಆಶ್ರಮಪ್ರದೇಶವು ಹಿಂದೆ ಮಾಯಾಮೃಗವಾದ ಮಾರೀಚನು ಸಂಚರಿಸಿದ್ದ ಪ್ರದೇಶಗಳಿಂದಲೂ ಶ್ರೀರಾಮನ ಬಿಲ್ಲಿನ ತುದಿಯಿಂದ ಆಗೆದ ಗೆಡ್ಡೆಗಳಿಂದ ಉಂಟಾದ ಹಳ್ಳಗಳಿಂದ ಏರುಪೇರಾದ ಪ್ರದೇಶ ಗಳಿಂದಲೂ ಶೋಭಿಸುವ ದಂಡಕಾರಣ್ಯಭಾಗಕ್ಕೆ ಸೇರಿದ್ದಿತು. ಅಲ್ಲದೆ ೧೮೨. ಶಿಷ್ಯರು ಸಮಿತ್ತು ದರ್ಭೆ ಹೂವುಗಳನ್ನು ಹಿಡಿದುಕೊಂಡು ಒಂದೇಸಮನೆ ಅಧ್ಯಯನ ಮಾಡುತ್ತಾ ತಮ್ಮೊಡನೆ ವಿನಯದಿಂದ ಬರುತ್ತಿರಲಾಗಿ ಮಹರ್ಷಿಗಳು ಗುಂಪು ಗುಂಪಾಗಿ ಆಶ್ರಮವನ್ನು ಪ್ರವೇಶಿಸುತ್ತಿದ್ದರು. ವ॥ ಮತ್ತು ಅಲ್ಲಿ ೧೮೩. ಕೊಳಕಿಲ್ಲದೆ ಪರಿಶುದ್ಧ ವಾಗಿರುವ ಆಶ್ರಮದ ಸರೋವರಗಳ ಅಲೆಗಳಲ್ಲಿ ಪ್ರತಿಫಲಿಸಿರುವ ಸೂರ್ಯಮಂಡಲದ ಪ್ರತಿಬಿಂಬಗಳು, ಆ ಕೊಳಗಳಲ್ಲಿ ಋಷಿಗಳು ಪಾಪಪರಿಹಾರಾರ್ಥವಾದ ಸ್ನಾನಕ್ಕಾಗಿ ಬಂದಿರುವವರೋ ಎಂಬಂತೆ ಕಂಗೊಳಿಸುತ್ತಿದ್ದುವು. ೧೮೪. ಅಲ್ಲಿರುವ ಜಾಬಾಲಿಯೇ ಮೊದಲಾದ ಮಹರ್ಷಿಗಳನ್ನು ಸೇವಿಸಲು ರಾತ್ರಿಯಕಾಲದಲ್ಲಿ ಬಂದಿರುವ ಗ್ರಹ ಸಮೂಹದಂತಿರುವ ಕುಮುದ ಮತ್ತು ಕನ್ನೈದಿಲೆಗಳ ಗುಂಪಿನಿಂದ ಕೂಡಿಕೊಂಡಿರುವ

ತಲೆವಾಗುತ್ತಿರ್ದುವೆಂಬಂತೆಱಪ ಲತೆಗಳಿಂದರ್ಚಿಸುತ್ತಿರ್ದುವೆಂಬಂ
ತಲರ್ಗಳ್ ತಳ್ತಲ್ಲುಗುತ್ತಿರ್ದಖಿಳ ತರುನಿಕಾಯಂಗಳಿಂ ಕೂಡೆ ಬದ್ಧಾಂ
ಜಳಿಯಾಗುತ್ತಿರ್ದುವೆಂಬಂತೆಸೆವ ಕಿಸಲಯಾಬದ್ಧ ಸಂಭಿನ್ನಶಾಖಾ
ಕುಲದಿಂ ಚೆಲ್ವಾದ ಋಷ್ಯಾಶ್ರಮದ ರಚನೆಯಂ ನೋಡುತಂ ಪೋದನಾಗಳ್
೧೮೫

ವ॥ ಅಂತುಟಜಾಂಗಣದೊಳ್ ಪರಪಿದ ಪಲತೆಱದ ಫಲಂಗಳಿಂ ಶ್ರುತಿಮುಖರ ಮುಖಂಗಳಪ್ಪ ಶುಕಶಾರಿಕೆಗಳಿಂ ಮುನಿಕುಮಾರಕರನೆಳಸಿ ಮೆಲ್ಲಮೆಲ್ಲನೆ ನಕ್ಕುವೆಳೆವುಲ್ಲೆಗಳಿಂ ಜರದಂಧತಾಪಸರ ಕಯ್ಯಂ ಪಿಡಿದೆಡಪಲೀಯದೆ ನಡೆಯಿಸುವ ಚಪಳಮರ್ಕಟಂಗಳಿಂ ಮುನಿಜನಂಗಳ್ಗೆ ಕೋಡುಗಳಿಂ ಕಂದಮೂಲಫಲಂಗಳನುಗುಳ್ದು ಕೊಡುವ ವನಹರಿಣಗಳಿಂ ಕರಪುಷ್ಕರಂಗಳಿಂ ತಂದು ಪೂಗಿಡುಗಳ್ಗೆ ನೀರೆಱೆವ ಮಱಿಯಾನೆಗಳಿಂ ಮುನಿಕುಮಾರರ್ಗೆ ಹಂದಿಗೆಡ್ಡೆಯಂ ದಾಡೆಯಿಂದುಗುಳ್ದು ನೀಡುವ ವನವರಾಹಂಗಳಿಂ ತಮ್ಮಱಂಕೆಯ ಗಾಳಿಯಿಂ ಪೊಗೆಯುಂ ನಂದಿಸಲೀಯದೆ ಹೋಮಾನಲಪ್ರಜ್ವಲನಮನೆಸಗುವ ಸೋಗೆನವಿಲ್ಗಳಿಂ ಸೊಗಯಿಸುವುದಂತುಮಲ್ಲದೆಯುಂ

ಕೊಳಗಳು ಚೆಂದಗಾಣುತ್ತಿದ್ದುವು ೧೮೫. ಭಕ್ತಿಯಿಂದ ನಮಸ್ಕರಿಸುತ್ತಿವೆಯೋ ಎಂಬಂತೆ ಬಗ್ಗಿರುವ ಬಳ್ಳಿಗಳಿಂದಲೂ, ಪೂಜಿಸುತ್ತಿವೆಯೋ ಎಂಬಂತೆ ಹೂವುಗಳನ್ನು ಹೆಚ್ಚಾಗಿ ಸುರಿಸುತ್ತಿರುವ ಮರಗಳ ಗುಂಪಿನಿಂದಲೂ, ಕೈಮುಗಿಯುತ್ತಿರುವಂತೆ ಕಾಣುವ ಚಿಗುರುಗಳಿಂದ ಕೂಡಿದ್ದು ಮುಚ್ಚಿಕೊಂಡಿರುವ ಕೊಂಬೆಗಳ ಸಮೂಹದಿಂದಲೂ ಸುಂದರವಾದ ತಪೋವನದ ರೀತಿಯನ್ನು ನೋಡುತ್ತಾ ಹೋಗುತ್ತಿದ್ದನು. ವ॥ ಹಾಗೆ ಅದು ಪರ್ಣಶಾಲೆಯ ಅಂಗಳದಲ್ಲಿ ಹರಡಿರುವ ಹಲವು ಬಗೆಯ ಹಣ್ಣುಗಳಿಂದಲೂ ವೇದಗಳನ್ನು ಬಾಯಲ್ಲಿ ಹೇಳುತ್ತಿರುವ ಗಿಳಿ ಮತ್ತು ಮೈನಾಹಕ್ಕಿಗಳಿಂದಲೂ ತಾಪಸಬಾಲಕರನ್ನು ಪ್ರೀತಿಯಿಂದ ಮೆಲ್ಲಮೆಲ್ಲನೆ ನೆಕ್ಕುತ್ತಿರುವ ಜಿಂಕೆಮರಿಗಳಿಂದಲೂ, ಮುದುಕರಾಗಿ ಕಣ್ಣು ಕಾಣದಿರುವ ಋಷಿಗಳ ಕೈಯನ್ನು ಹಿಡಿದುಕೊಂಡು ಎಡವದಂತೆ ನಡೆಯಿಸುವ ಚಂಚಲಸ್ವಭಾವದ ಕೋತಿಗಳಿಂದಲೂ, ಋಷಿಗಳಿಗೆ ತಮ್ಮ ಕೋಡುಗಳಿಂದ ಗೆಡ್ಡೆಗೆಣಸುಗಳನ್ನು ಅಗೆದುಕೊಡುವ ಕಾಡುಜಿಂಕೆಗಳಿಂದಲೂ, ತಮ್ಮ ಸೊಂಡಿಲತುದಿಯಿಂದ ನೀರು ತುಂಬಿಕೊಂಡು ಬಂದು ಹೂವಿನಗಿಡಗಳಿಗೆ ನೀರು ಹಾಕುವ ಆನೆಮರಿಗಳಿಂದಲೂ, ಋಷಿಕುಮಾರರುಗಳಿಗೆ ಕೊನ್ನಾರಿಗಡ್ಡೆಗಳನ್ನು ದಾಡೆಯಿಂದ ಅಗೆದುಕೊಡುವ ಕಾಡುಹಂದಿಗಳಿಂದಲೂ, ತಮ್ಮ ರೆಕ್ಕೆಯ ಗಾಳಿಯಿಂದ ಹೊಗೆ ಆರದಂತೆ ಮಾಡಿ ಅಗ್ನಿಕುಂಡದ ಅಗ್ನಿಯನ್ನು ಉರಿಸುತ್ತಿರುವ ಗರಿ

ಚರುಚಾರುಗಂಧದೊಳ್ ಮೆ
ಯ್ವೊರೆದು ಪುರೋಡಾಶಪುಣ್ಯತರಪರಿಮಳದೊಳ್
ಪೊರಳ್ದಾಜ್ಯಾಹುತಿರವದೊಳ್
ನೆರೆದೆಸೆವುದು ಪಾವನಂ ತಪೋವನಪವನಂ ೧೮೬

ಜಲಜರುಹಬೀಜರಾಜಿಗಳನಾಱಿಪ ಪರ್ಣಕುಟೀರಕಂಗಳಂ
ನಿಲಿಸುವ ದಂಡಮೊತ್ತುವ ಮೃಗಾಜಿನಮಂ ಪೊಲುತಿರ್ಪ ಮುಂಜಮೇ
ಖಲೆಗಳನೊಪ್ಪಮಾಡುವ ಸಮಿತ್ಕುಶಮಂ ತರವೋಪಧೌತವ
ಲ್ಕಲವನಲಂಬುವಕ್ಷಮಣಿಯಂ ಸಮೆವೀ ವ್ಯವಸಾಯಮೆತ್ತಲುಂ ೧೮೭

ಅತಿಥಿಯನಾದರಿಪ್ಪ ಪಿತೃದೈವಮನರ್ಚಿಪ ಧರ್ಮಶಾಸ್ತ್ರಸಂ
ಗತಿಗಳೊಳಿರ್ಪ ಯಜ್ಞವಿಧಿವೇೞ್ವ ಪುರಾಣಮನೋದುವಾಗಮ
ಪ್ರತತಿಗಳಂ ವಿಚಾರಿಸುವ ತತ್ವನಿರೀಕ್ಷಣೆಗೆಯ್ವ ಯೋಗದು
ನ್ನತಿಕೆಯನಪ್ಪುಗೆಯ್ವ ಮುನಿಸಂಘದಿನೊಪ್ಪುವುದಾ ತಪೋವನಂ ೧೮೮

ಯುಳ್ಳ ನವಿಲುಗಳಿಂದಲೂ ಮನೋಹರವಾಗಿದ್ದಿತು. ಅದಲ್ಲದೆ ೧೮೬. ಹೋಮಾ ನ್ನದ ಘಮಘಮಿಸುವ ವಾಸನೆಯಿಂದ ಕೂಡಿಕೊಂಡು ಪುರೋಡಾಶವೆಂಬ ಹೋಮ ದ್ರವ್ಯದ ಪುಣ್ಯ ಸುವಾಸನೆಯಿಂದ ಕೂಡಿ, ತುಪ್ಪವನ್ನು ಹೋಮ ಮಾಡುವಾಗ ಉಂಟಾಗುವ ಚಟಚಟತ್ಕಾರಧ್ವನಿಯಿಂದ ಕೂಡಿಕೊಂಡ ಪವಿತ್ರವಾದ ತಪೋವನದ ವಾಯುವು ಶೋಭಿಸುತ್ತಿತ್ತು. ೧೮೭. ಕಮಲದ ಬೀಜಗಳನ್ನು ಆರಿಸುವ, ಎಲೆಮನೆ ಗಳನ್ನು ಕಟ್ಟುವ, ಮುತ್ತುಗ ಮೊದಲಾದುವುಗಳ ಕೋಲುಗಳನ್ನು ನೇರಮಾಡಲು ಭಾರವನ್ನು ಹೇರಿಡುವ, ಜಿಂಕೆಚರ್ಮವನ್ನು ಹೊಲಿಯುತ್ತಿರುವ, ಉಡಿದಾರಗಳನ್ನು ಅಚ್ಚುಕಟ್ಟು ಮಾಡುವ, ಹೋಮದ ಕಡ್ಡಿ ಮತ್ತು ದರ್ಭೆಗಳನ್ನು ತರಲು ಹೋಗುವ, ಒಗೆದ ನಾರುಬಟ್ಟೆಯನ್ನು ಜಾಲಿಸುತ್ತಿರುವ, ಜಪಮಣಿಯನ್ನು ಮಾಡುವ ಕಾರ್ಯ ಭಾರವು ಎಲ್ಲೆಲ್ಲೂ ಕಾಣುತ್ತಿತ್ತು. ೧೮೮. ಮನೆಗೆ ಬಂದವರನ್ನು ಆದರಿಸುವ, ಪಿತೃದೇವತೆಗಳನ್ನು ತೃಪ್ತಿಪಡಿಸುವ, ಧರ್ಮಶಾಸ್ತ್ರವಿಚಾರವನ್ನು ಚರ್ಚಿಸುತ್ತಿರುವ, ಯಜ್ಞಯಾಗಗಳ ಕ್ರಮವನ್ನು ವಿವರಿಸುತ್ತಿರುವ, ಪುರಾಣಗಳನ್ನು ಪ್ರವಚನ ಮಾಡು ತ್ತಿರುವ, ಆಗಮಗಳ ಸಮೂಹವನ್ನು ಚರ್ಚಿಸುವ, ವೇದಾಂತವಿಚಾರ ಮಾಡುತ್ತಿ ರುವ, ಯೋಗಶಾಸ್ತ್ರದ ಹಿರಿಮೆಯನ್ನು ಮಂದಟ್ಟುಮಾಡಿಕೊಳ್ಳುತ್ತಿರುವ ತಾಪಸರ

ವ॥ ಮತ್ತಮಸುರಾರಿಯಂತೆ ಪ್ರಕಟಿತ ಹರಿವರಾಹಮುಂ ಸಾಂಖ್ಯದಂತೆ ಕಪಿಲಾಧಿಷ್ಠಿತಮುಂ ಉದಯನನಂತಾನಂದಿತ ವತ್ಸಕುಳಮುಂ ಸಮುದ್ರದಂತೆ ವನಗಹನಮಧ್ಯ ಸುಪ್ತಹರಿಯುಂ ಮಾತಂಗಕುಳದೂಷಿತಮಾಗಿಯುಮತಿಪವಿತ್ರಮುಮುಲ್ಲಸಿತ ಧೂಮಕೇತು ಶತಮಾಗಿಯುಂ ಪ್ರಶಾಂತೋಪದ್ರವಮುಂ ಪರಿಪೂರ್ಣ ದ್ವಿಜರಾಜ ಸನಾಥಮಾಗಿಯುಂ ತರುಗಹನಾಂಧಕಾರಿತಮುಮಪ್ಪುದಂತುಮಲ್ಲದೆಯುಂ

ಅಸವಸದಿಂ ಕಲಿಕಾಲದ
ದೆಸೆಯುಂ ಮೊದಲಾಗಿ ಪೊರ್ದಲಱಿಯದು ಮಱೆದುಂ
ಪುಸಿಯೆಂತುಂ ಕಂಡಱಿಯದು
ಕುಸುಮಾಸ್ತ್ರಂ ಪೊರ್ದಿಯಱಿಯನಾ ಮುನಿಪದಮಂ ೧೮೯

ಸಮೂಹದಿಂದ ಆ ತಪೋವನವು ವಿರಾಜಿಸುತ್ತಿತ್ತು. ವ॥ ಮತ್ತು ಆ ತಪೋವನವು ಶ್ರೀಮನ್ನಾರಾಯಣನಂತೆ "ಪ್ರಕಟಿತ ಹರಿವರಾಹ"ವಾಗಿದ್ದಿತು. (ಎಲ್ಲೆಲ್ಲೂ ಕಾಣಬರುತ್ತಿರುವ ಸಿಂಹ ಮತ್ತು ಕಾಡುಹಂದಿಯುಳ್ಳದ್ದು ? ತೋರ್ಪಡಿಸಿದ ನರಸಿಂಹಾವತಾರ ಮತ್ತು ವರಾಹಾವತಾರವುಳ್ಳವನು) ಸಾಂಖ್ಯಶಾಸ್ತ್ರದಂತೆ "ಕಪಿಲಾಧಿಷ್ಠಿತ"ವಾಗಿದ್ದಿತು. (೧. ಕಪಿಲವರ್ಣದ ಗೋವುಗಳಿಂದ ಕೂಡಿಕೊಂಡಿರುವುದು. ೨. ಸಾಂಖ್ಯಶಾಸ್ತ್ರ ಪ್ರವರ್ತಕನಾದ ಕಪಿಲಮುನಿಯ ಸಂಪರ್ಕವುಳ್ಳದ್ದು.) ಉದಯನನೆಂಬ ರಾಜನಂತೆ "ಆನಂದಿತ ವತ್ಸಕುಲ"ವಾಗಿದ್ದಿತು. (ಸಂತೋಷಗೊಳಿಸಲ್ಪಟ್ಟ ಕರುಗಳ ಗುಂಪುಳ್ಳದ್ದು. ೨. ಸಂತೋಷಗೊಳಿಸಲ್ಪಟ್ಟ ವತ್ಸದೇಶದ ಜನರುಳ್ಳವನು.) ಸಮುದ್ರದಂತೆ "ವನಗಹನ ಮಧ್ಯ ಸುಪ್ತಹರಿ"ಯಾಗಿದ್ದಿತು. (೧. ಪ್ರವೇಶಿಸಲು ಅಸಾಧ್ಯವಾದ ಕಾಡಿನ ಮಧ್ಯದಲ್ಲಿ ಮಲಗಿರುವ ಸಿಂಹವುಳ್ಳದ್ದು. ೨. ಅಗಾಧವಾದ ನೀರಿನ ಮಧ್ಯದಲ್ಲಿ ಮಲಗಿರುವ ಶ್ರೀಮನ್ನಾರಾಯಣನುಳ್ಳದ್ದು.) ಇದು "ಮಾತಂಗಕುಲದೂಷಿತ"ವಾಗಿದ್ದರೂ (೧. ಚಾಂಡಾಲರ ವಂಶದಿಂದ ಮೈಲಿಗೆಯುಳ್ಳದ್ದು. ೨. ಆನೆಗಳ ಗುಂಪಿನಿಂದ ಭಯವನ್ನುಂಟುಮಾಡುವ ದೋಷದಿಂದ ಕೂಡಿದ್ದಿತು.) ಅತಿಪವಿತ್ರವಾಗಿದ್ದಿತು. "ಉಲ್ಲಸಿತ ಧೂಮಕೇತು ನತ"ವಾಗಿದ್ದರೂ (೧. ಏಳುತ್ತಿರುವ ಅನಿಷ್ಟಸೂಚಕಗಳಾದ ಅನೇಕ ಧೂಮಕೇತುಗಳುಳ್ಳದ್ದಾದರೂ ೨. ಉರಿಯುತ್ತಿರುವ ಅನೇಕ ಅಗ್ನಿಗಳುಳ್ಳದ್ದಾದರೂ) ಕ್ಷಾಮಡಾಮರ ಈತಿಬಾಧೆಗಳೇನೂ ಇಲ್ಲದುದಾಗಿದ್ದಿತು. ಇದು "ಪರಿಪೂರ್ಣದ್ವಿಜ ರಾಜನಾಥ"ವಾಗಿದ್ದರೂ (೧. ಪೂರ್ಣಚಂದ್ರನಿಂದ ಕೂಡಿದ್ದರೂ ೨. ಸಂಪೂರ್ಣ ಜ್ಞಾನಿಗಳಾದ ಬ್ರಾಹ್ಮಣಶ್ರೇಷ್ಠರಿಂದ ಕೂಡಿಕೊಂಡಿತ್ತು.) ದಟ್ಟವಾದ ಮರಗಳಿಂದ ಕತ್ತಲೆಯಾದಂತೆ ಇತ್ತು. ಅದಲ್ಲದೆ, ೧೮೯. ಆ ತಪೋವನಕ್ಕೆ ಕಲಿ ಕಾಲದ ಒಂದು ಅವಸ್ಥೆಯ ಬೇರೆ ಕಡೆಗೆ ನುಗ್ಗುವಂತೆ ಸಡಗರದಿಂದ ನುಗ್ಗುವಂತಿರಲಿಲ್ಲ. ಅಲ್ಲಿಗೆ ಸುಳ್ಳೆಂಬುದು ಮರೆತೂ ಸುಳಿಯುವಂತಿರಲಿಲ್ಲ. ಕಾಮನಂತೂ ಕಾಲಿಡುವಂತಿಲ್ಲ.

ವ॥ ಮತ್ತಂ ಮಲಿನತೆ ಹೋಮಧೂಮದೊಳ್ ಮುಖರಾಗಂ ಗಿಳಿಗಳೊಳ್ ತೀಕ್ಷ್ಣತ್ವಂ ಕುಶಾಗ್ರಂಗಳೊಳ್ ಸಂಚಳತ್ವಂ ಕದಳೀವನಂಗಳೊಳ್ ನಯನರಾಗಂ ಕೋಕಿಲಂಗಳೊಳ್ ಕಂಠಗ್ರಹಣಂ ಕಮಂಡಲಂಗಳೊಳ್ ಸ್ತನಸ್ಪರ್ಶನಂ ಹೋಮಧೇನುಗಳೊಳ್ ವಸುಸಂಕೀರ್ತನಂ ದಿವ್ಯಕಥೆಯೊಳ್ ರಾಮಾನುರಾಗಂ ರಾಮಾಯಣದೊಳ್ ಭ್ರಮಂ ಹೋಮಾಗ್ನಿಪ್ರದಕ್ಷಿಣಂಗಳೊಳ್ ಮುಖಭಂಗವಿಕಾರಂ ಜರೆಯೊಳ್ ಶಕುನಿವಧಂ ಭಾರತದೊಳ್ ವಾಯುಪ್ರಲಪಿತಂ ಪುರಾಣದೊಳ್ ದ್ವಿಜಪತನಂ ವಯಃಪರಿಣತಿಯೊಳ್ ಜಾಡ್ಯಮುಪವನಶ್ರೀಖಂಡತರುಷಂಡಂಗಳೊಳ್ ನೃತ್ಯಪಕ್ಷಪಾತಂ ನವಿಲ್ಗಳೊಳ್ ಗೀತವ್ಯಸನಂ ಮೃಗಂಗಳೊಳ್ ಭೋಗಭುಜಂಗಂಗಳೊಳ್ ಶ್ರೀಫಳಾಭಿಲಾಷಂ ಕಪಿಗಳೊಳ್ ಅಧೋಗತಿ ಬೇರ್ಗಳೊಳಲ್ಲದೆ ತನ್ನೊಳಿಲ್ಲೆನಿಸಿ ಬೇಱೊಂದು ಬ್ರಹ್ಮಲೋಕದಂತಿರ್ಪುದಂತುಮಲ್ಲದೆಯುಂ

ಮತ್ತು ಬೇರೆ ಕಡೆಯಿದ್ದ ಕೆಲವು ದೋಷಗಳು ಈ ಆಶ್ರಮದಲ್ಲಿರಲಿಲ್ಲ. ಹೇಗೆಂದರೆ ಮಲಿನತೆಯು (೧. ಕಪ್ಪು ೨. ದೋಷ) ಹೋಮದ ಹೊಗೆಯಲ್ಲಿತ್ತು.) ಮುಖರಾಗವು (೧. ಕೊಕ್ಕಿನ ಕೆಂಪು ೨. ಕೋಪದಿಂದ ಉಂಟಾಗುವ ಮುಖದ ಕೆಂಪು) ಗಿಣಿಗಳಲ್ಲಿತ್ತು. ತೀಕ್ಷ್ಣತ್ವವು(೧ ಚೂಪಾಗಿರುವಿಕೆ. ೨. ಕ್ರೌರ್ಯ) ದರ್ಭೆಯ ತುದಿಯಲ್ಲಿತ್ತು. ಸಂಚಳತ್ವವು(೧. ಅಲ್ಲಾಡುವಿಕೆ ೨. ಚಾಪಲ್ಯ) ಬಾಳೆಯ ತೋಟದಲ್ಲಿತ್ತು, ನಯನಾನುರಾಗವು (೧. ಕಣ್ಣಿನ ಕೆಂಪು ೨. ಕಣ್ಣಿನಿಂದ ತೋರಿಸುವ ಹೆಂಗಳಮೇಲಿನ ಅನುರಾಗ) ಕೋಗಿಲೆಗಳಲ್ಲಿತ್ತು. ಕಂಠಗ್ರಹವು (೧. ಕೊರಳಿನೆಡೆಯನ್ನು ಹಿಡಿದುಕೊಳ್ಳುವುದು, ೨. ಹೆಂಗಸರ ಕೊರಳಿಗೆ ಕೈಬಳಸಿ ಆಲಿಂಗಿಸುವುದು) ಕಮಂಡಲುವಿನಲ್ಲಿತ್ತು. ಸ್ತನಸ್ಪರ್ಶವು (೧. ಹಾಲು ಕರೆಯಲು ಹಸುಗಳ ಮೊಲೆಯನ್ನು ಮುಟ್ಟುವುದು. ೨. ಕಾಮಾತುರತೆಯಿಂದ ಹೆಂಗಸರ ಸ್ತನಗಳ ಮೇಲೆ ಕೈಯಿಡುವುದು) ಹೋಮಧೇನುವಿನಲ್ಲಿತ್ತು. ವಸುಸಂಕೀರ್ತನವು (೧. ಅಷ್ಟ ವಸುಗಳ ವಿಚಾರವನ್ನು ಹೇಳುವುದು ೨. ಹಣದ ಸೊಲ್ಲು) ದೇವತೆಗಳ ಕಥೆಯಲ್ಲಿತ್ತು. ರಾಮಾನುರಾಗವು (೧. ರಾಮನ ಮೇಲಿನ ಪ್ರೀತಿ ೨. ಹೆಂಗಸರ ಮೇಲಿನ ಪ್ರೇಮ.) ರಾಮಾಯಣದಲ್ಲಿತ್ತು. ಭ್ರಮವು (೧. ಪ್ರದಕ್ಷಿಣೆ ೨. ಭ್ರಾಂತಿ) ಹೋಮಾಗ್ನಿ ಪ್ರದಕ್ಷಿಣೆ ಮಾಡುವಾಗ ಇತ್ತು. ಮುಖಭಂಗವಿಕಾರವು (೧. ಮುಖದಲ್ಲಿ ಚರ್ಮಸುಕ್ಕುವುದು ಮೊದಲಾದ ಬದಲಾವಣೆ, ೨. ಕೋಪದಿಂದ ಮುಖವನ್ನು ಸಿಂಡಿಸುವುದು) ಮುಪ್ಪಿನಲ್ಲಿತ್ತು. ಶಕುನಿ ವಧೆಯ (೧. ದುರ್ಯೋಧನನ ಮಾವನಾದ ಶಕುನಿಯನ್ನು ಕೊಲ್ಲುವುದು ೨. ಪಕ್ಕಿಗಳನ್ನು ಕೊಲ್ಲುವುದು) ಮಹಾಭಾರತದಲ್ಲಿತ್ತು. ವಾಯುಪ್ರಲಪಿತವು (೧. ವಾಯುದೇವರ ಭಾಷಣ ೨. ದೆವ್ವ ಪಿಶಾಚಿ ಹಿಡಿದು ಕೂಗಿಕೊಳ್ಳುವುದು) ಪುರಾಣದಲ್ಲಿತ್ತು. ದ್ವಿಜಪತನವು (೧. ಹಲ್ಲು ಬೀಳುವುದು. ೨. ಬ್ರಾಹ್ಮಣನ ಹೀನಸ್ಥಿತಿ) ಮುಪ್ಪಿನಲ್ಲಿತ್ತು. ಜಾಡ್ಯವು(೧. ತಂಪು. ೨. ಸೋಮಾರಿತನ) ಉದ್ಯಾನದ ಗಂಧದ ಮರದ ತೋಪಿನಲ್ಲಿತ್ತು. ನೃತ್ಯ .ಪಕ್ಷಪಾತವು (೧. ಕುಣಿಯುವಾಗ ರೆಕ್ಕೆಯನ್ನು ಒಡಿಯುವುದು ೨.

ತಳಿರ್ಗಳಿಱುಂಬಿನೊಳ್ ತರದೆ ಪೇಱಿದ ಕೃಷ್ಣಮೃಗಾಜಿನಂಗಳಿಂ
ಜಳಕಳಶಂಗಳಿಂ ಮುನಿಕುಮಾರಿಯರಿಕ್ಕಿದ ಪಿಷ್ಟಚರ್ಚೆಯಿಂ
ಬಳಸಿಯುಮೇಣಶಾಬತತಿ ನೀರುಣಿ ಕಣ್ಗೊಳಿಪಾಳವಾಳಮಂ
ಡಳದಿನದೊಂದು ಮುಂದೆಸೆದುತೋಱಿದುವಾಗಳಶೋಕಭೂರುಹಂ ೯೯೦

ವ॥ ಮತ್ತಂ ಗೋಮಯಾವಲಿಪ್ತ ಭೂತಲಮುಂ ಕುಸುಮೋಪಪಾರ ರಮಣೀಯಮುಂ ವಿಸ್ತೀರ್ಣತರಾವಕಾಶಮುಮೆನಿಸಿದ ರಕ್ತಾಶೋಕ ತರುವಿನ ತಣ್ನೆಳಲೊಳ್

ಕುಳಶೈಲವ್ರಾತದಿಂದಂ ಬಳಸಿದ ಕನಕಕ್ಷ್ಮಾಧರೇಂದ್ರಂ ಸಮುದ್ರಾ
ವಳಿಯಿಂ ಸುತ್ತಿರ್ದ ಲೋಕಂ ಹುತವಹತತಿಯಿಂ ವೇಷ್ಟಿಸಿರ್ದಧ್ವರಂ ಪ್ರ
ಜ್ವಳಿತಾರ್ಕಾನೀಕದಿಂದಂ ಬಳಸಿದ ಗಗನಾಭೋಗಮೆಂಬಂದದಿಂ ಕ
ಣ್ಗೊಳಿಸುತ್ತಂ ಯೋಗಿವೃಂದಾರಕರ ನಡುವೆ ಜಾಬಾಲಿಯೋಗೀಂದ್ರನಿರ್ದಂ ೯೯೧

ನೃತ್ಯದಲ್ಲಿ ಆಸಕ್ತಿ) ನವಿಲುಗಳಲ್ಲಿತ್ತು. ಗೀತವ್ಯಸನವು (ಸಂಗೀತದ ಚಟ) ಜಿಂಕೆಗಳಲ್ಲಿತ್ತು. ಭೋಗವು (೧. ಹಾವಿನ ದೇಹ ೨. ಸುಖಾನುಭವ) ಹಾವುಗಳಲ್ಲಿತ್ತು. ಶ್ರೀಫಳಾಭಿಲಾಷೆಯು (೧. ಬಿಲ್ವಪತ್ರೆಹಣ್ಣಿನ ಆಸೆ ೨. ಐಶ್ವರ್ಯದ ಪ್ರಯೋಜನವನ್ನು ಪಡೆಯಬೇಕೆಂಬ ಆಸೆ) ಕಪಿಗಳಲ್ಲಿತ್ತು. ಅಧೋಗತಿಯು (೧. ಕೆಳಕ್ಕೆ ಇಳಿಯುವುದು ೨. ಕೀಳ್ಮಟ್ಟ) ಬೇರುಗಳಲ್ಲಿತ್ತು. ಈ ತಪೋವನದಲ್ಲಿ ಇರಲಿಲ್ಲ ಎಂದು ಹೊಗಳಿಸಿಕೊಂಡು ಬೇರೊಂದು ಬ್ರಹ್ಮಲೋಕವೋ ಎಂಬಂತೆ ಶೋಭಿಸುತ್ತಿತ್ತು. ಅದಲ್ಲದೆ ೯೯೦. ಅಲ್ಲಿ ಒಂದು ಅಶೋಕವೃಕ್ಷವು ಕಣ್ಣಿಗೆ ಬಿತ್ತು. ಅದರ ಚಿಗುರುಗಳ ಮಧ್ಯದಲ್ಲಿ ಅಲ್ಲಲ್ಲಿ ಕ್ರಮವಾಗಿ ಕೃಷ್ಣಾಜಿನಗಳನ್ನೂ ಜಲ ಕಳಶಗಳನ್ನೂ ತೂಗಹಾಕಿದ್ದರು. ಮರದ ಬುಡದಲ್ಲಿ ತಾಪಸಕನ್ನೆಯರು ಹಿಟ್ಟಿನ ರಂಗ ವಲ್ಲಿಗಳನ್ನು ಹಾಕಿದ್ದರು. ಮರದ ಸುತ್ತಲೂ ದುಂಡಾದ ಪಾತಿಯಿತ್ತು. ಆ ಪಾತಿಗೆ ಹಾಕಿದ ನೀರನ್ನು ಜಿಂಕೆಮರಿಗಳು ಹಿಂಡುಹಿಂಡಾಗಿ ಬಂದು ಕುಡಿಯುತ್ತಿದ್ದುವು. ಇವುಗಳಿಂದ ಆ ಮರವು ಶೋಭಿಸುತ್ತಿತ್ತು. ವ॥ ಮತ್ತು ಗೋಮಯದಿಂದ ಸಾರಿಸಿರುವ ನೆಲವುಳ್ಳ ಹೂವುಗಳನ್ನು ವಿರಚಿಸಿರುವುದರಿಂದ ಸುಂದರವಾಗಿಯೂ ಕೆಳಗಡೆ ವಿಶಾಲವಾದ ಸ್ಥಳಾವಕಾಶವುಳ್ಳದ್ದಾಗಿಯೂ ಇರುವ ಕೆಂಪು ಅಶೋಕಮರದ ತಂಪಾದ ನೆರಳಿನಲ್ಲಿ ೯೯೧. ಕುಲಪರ್ವತಗಳ ಗುಂಪಿನಿಂದ ಸುತ್ತುವರಿಯಲ್ಪಟ್ಟಿರುವ ಮೇರುಪರ್ವತದಂತೆಯೂ ಸಮುದ್ರಗಳಿಂದ ಸುತ್ತುವರಿಯಲ್ಪಟ್ಟಿರುವ ಭೂಪ್ರದೇಶದಂತೆಯೂ ಅಗ್ನಿಗಳ ಸಮೂಹದಿಂದ ಆವರಿಸಲ್ಪಟ್ಟಿರುವ ಯಾಗದಂತೆಯೂ ಕಲ್ಪಕಾಲದಲ್ಲಿ ಉರಿಯುತ್ತಿರುವ ಸೂರ್ಯರ ಗುಂಪಿನಿಂದ ಬಳಸಲ್ಪಟ್ಟಿರುವ ಆಕಾಶಪ್ರದೇಶದಂತೆಯೂ ಮಹರ್ಷಿಗಳ ಗುಂಪಿನ ಮಧ್ಯದಲ್ಲಿ ಜಾಬಾಲಿಯೆಂಬ ಮುನೀಶ್ವರನು ಕಂಗೊಳಿಸುತ್ತಿದ್ದನು.

ವ॥ ಮತ್ತಂ ಶಾಪಭೀತೆಯಂತೆ ಕಂಪಿತದೇಹೆಯುಂ ಪ್ರಣಯಿನಿಯಂತೆ ವಿಹಿತಕೇಶಗ್ರಹೆಯುಂ ಕ್ರುದ್ಧೆಯಂತೆ ಕೃತಭ್ರೂಭಂಗೆಯುಂ ಪ್ರಸಾಧಿತೆಯಂತೆ ಪ್ರಕಟತತಿಳಕೆಯುಂ ಗೃಹೀತವ್ರತೆಯಂತೆ ಭಸ್ಮಪಾಂಡುರೆಯುಮೆನಿಸಿದ ಜರೆಯಿಂದೆ ಧವಳವಿಗ್ರಹನಾಗಿರ್ದನಂತುಮಲ್ಲದೆಯುಂ

ಯತಿಗಳನನೇಕರಂ ತ
ನ್ನ ತಪದೆ ಗೆಲ್ದೆತ್ತಿಪೊಳೆವ ಧರ್ಮಪತಾಕಾ
ತತಿಯಂದದೆ ಸೊಗಯಿಸಿದುವು
ಯತಿಪತಿಯ ಜರಾತಿಧವಳಮೆನಿಸಿದ ಜಡೆಗಳ್ ೧೯೨

ತ್ರಿಪಥಗೆಯ ಮೂಱು ಪೊನಲಿಂ
ದೆ ಪೊಳೆವ ಹಿಮಗಿರಿಶಿಲಾತಳಕ್ಕೆಣೆಯೆನಿಸಿ
ತ್ತುಪರಚಿತ ರುಚಿರ ಭಸ್ಮ
ತ್ರಿಪುಂಡ್ರ ಲಾಂಛಿತಲಲಾಟವಾ ಮುನಿವರನಾ ೧೯೩

ಥಳಥಳಿಸಿ ಪೊಳೆವ ಚಂದ್ರನ
ಕಳೆಗಳ್ ಕವಿದಿರ್ದುವೆರಡಿವೆಂಬಿನೆಗಂ ಕ
ಣ್ಗಳ ಮೇಲೆ ಕವಿದು ತೋರ್ಪುವು
ವಳಿಶಿಥಿಲಭ್ರೂಲತಾಯುಗಂ ಮುನಿವರನಾ ೧೯೪

ವ॥ ಮತ್ತು ಅವನು ಜರೆಯಿಂದ (ಮುಪ್ಪು) ಬಿಳುಪಾದ ಶರೀರವುಳ್ಳವನಾಗಿದ್ದನು. ಆ ಜರೆ ಶಾಪಭೀತೆಯಂತೆ ನಡುಗುತ್ತಿರುವ ದೇಹವುಳ್ಳವಳಾಗಿಯೂ ಒಲಿದುಬಂದ ಕಾಮಿನಿಯಂತೆ ಕೂದಲನ್ನು ಹಿಡಿದುಕೊಂಡವಳಾಗಿಯೂ ಕೋಪಗೊಂಡವಳಂತೆ ಹುಬ್ಬುಗಂಟು ಹಾಕುವವಳಾಗಿಯೂ ಅಲಂಕಾರಮಾಡಿಕೊಂಡಿರುವವಳಂತೆ "ಪ್ರಕಟಿತ ತಿಳಕೆ" (೧. ಮೈಯಲ್ಲಿ ಕಪ್ಪುಮಚ್ಚೆಯುಳ್ಳವಳು (ಸಂಗಾತಿಮಚ್ಚೆ) ೨. ತಿಲಕವನ್ನು ಹಾಕಿಕೊಂಡಿರುವವಳು) ವ್ರತವನ್ನು ಹಿಡಿದಿರುವವಳಂತೆ "ಭಸ್ಮಪಾಂಡುರೆ" (೧. ಬೂದಿಯಂತೆ ಬಿಳುಪಾದುದು ೨. ವಿಭೂತಿಯಿಂದ ಬಿಳುಪಾದುದು) ಯಾಗಿದ್ದಳು. ಅದಲ್ಲದೆ (ಟಿ. ಜರೆಯನ್ನು ಹೆಂಗಸು ಎಂದು ರೂಪಿಸಿದ್ದಾನೆ) ೧೯೨. ಅನೇಕ ಮಹರ್ಷಿಗಳನ್ನು ತನ್ನ ತಪಸ್ಸಿನಿಂದ ಗೆದ್ದು ಏರಿಸಲಾಗಿ ಪ್ರಕಾಶಿಸುತ್ತಿರುವ ಧರ್ಮವನ್ನು ಸೂಚಿಸುವ ಬಾವುಟಗಳೋ ಎಂಬಂತಿರುವ ಮುಪ್ಪಿನಿಂದ ಬೆಳ್ಳಗಾಗಿರುವ ಜಾಬಾಲಿಮಹರ್ಷಿಯ ಜಟೆಗಳು ಮನೋಹರವಾಗಿದ್ದುವು. ೧೯೩. ಸುಲಕ್ಷಣವಾದ ವಿಭೂತಿಯ ಮೂರುಗೆರೆಗಳಿಂದ ಶೋಭಿಸುವ ಹಣೆಯು ಗಂಗಾನದಿಯ ಮೂರು ಪ್ರವಾಹಗಳಿಂದ ಕೂಡಿಕೊಂಡು ಪ್ರಕಾಶಿಸುವ ಹಿಮಾಲಯದ ಹಾಸರೆಗಲ್ಲಿಗೆ ಸಮಾನವೆನಿಸಿಕೊಂಡಿದ್ದಿತು. ೧೯೪. ಸುಕ್ಕುಗಳಿಂದ ಶಿಥಿಲವಾಗಿರುವ ಅವನ ಎರಡು ಬಿಳಿಹುಬ್ಬುಗಳು ಥಳಥಳಿಸಿ ಹೊಳೆಯುವ ಚಂದ್ರನ

ಪೆಱತೇಂ ಸತ್ಯಪ್ರರೋಹಂ ತುಱುಗಿದಪುದು ವಿದ್ಯಾಗುಣಾನೀಕಮಾದಂ
ಮಿಱುಗುತ್ತಿರ್ದತ್ತು ಕಾರುಣ್ಯದ ರಸದ ಪೊನಲ್ ಪರ್ವುತಿರ್ದತ್ತಿದೆಂಬೀ
ತೆಱದಿಂ ದಂತಾಂಶುಜಾಳಂ ಪಸರಿಸೆ ಮುಖದಿಂದಭ್ರಗಂಗಾಪ್ರವಾಹಂ
ಪೊಱಪೊಣ್ಮುತ್ತಿರ್ದ ಜಹ್ನುವ್ರತಿಯ ಮಹಿಮೆಯಂ ತಾಳ್ದಿದಂ ತಾಪಸೇಂದ್ರಂ ೧೯೫

ಆ ಪೀತ ಸೋಮರಸಂ ಗಂ
ಧೋಪೇತಮೆನಿಪ್ಪ ಸುಯ್ಗೆ ಸುಟಿವಳಿನಿಕರಂ
ಶಾಪಾಕ್ಷರ ನಿಕುರುಂಬಂ
ರೂಪಂಕೆಯ್ಕೊಂಡು ಮುಂದೆ ನಿಂದವೊಲೆಸೆಗುಂ ೧೯೬

ಸಿತ ದೀರ್ಘ ರೋಮನಿಕರಾ
ನ್ವಿತಮಾದುದು ಕರ್ಣಯುಗಳ ವಿವರಂ ನಿರ್ಮಾಂ
ಸತೆಯಿಂದೆ ಗಂಡಗರ್ತ
ದ್ವಿತಯಂ ನಿಮ್ನತರಮಾದುದಾ ಮುನಿಪತಿಯಾ ೧೯೭

ಅತಿಚಪಳಮೆನಿಪ್ಪಿಂದ್ರಿಯ
ತತಿಯಂ ತೆಗೆದೊಳಗೆ ಪಿಡಿದು ಕಟ್ಟಿದ ರಜ್ಜು
ಪ್ರತತಿಯಿದೆಂಬಿನೆಗಂ ಯತಿ
ಪತಿಗೆಸೆದುವು ಕೊರಲೊಳಮರ್ದ ಸೆರೆಗಳ ತುಱುಗಲ್ ೧೯೮

ಕಳೆಗಳು ಕವಿದಿವೆಯೋ ಎಂಬಂತೆ ತೋರುತ್ತಿತ್ತು. ೧೯೫. ಬೇರೆ ಹೇಳುವುದೇನಿದೆ ? ಈ ಮುನಿಯಲ್ಲಿ ರೂಢಮೂಲವಾಗಿರುವ ಸತ್ಯದ ಮೊಳಕೆಗಳು ತುಂಬಿಕೊಂಡಿರುವಂತೆಯೂ ಇವನಲ್ಲಿರುವ ವಿದ್ಯಾಗುಣವು ವಿಶೇಷವಾಗಿ ಹೊಳೆಯುತ್ತಿರುವಂತೆಯೂ ಇವನಲ್ಲಿ ತುಂಬಿರುವ ದಯಾರಸವು ಪ್ರವಾಹಾಕಾರವಾಗಿ ಹಬ್ಬುತ್ತಿರುವಂತೆಯೂ ಅವನ ಹಲ್ಲುಗಳ ಕಾಂತಿಗಳು ಬಾಯಿಂದ ಹೊರಹೊಮ್ಮುತ್ತಿದ್ದುವು. ಇದರಿಂದ ಅವನು ಗಂಗಾಪ್ರವಾಹವನ್ನು ಹೊರಕ್ಕೆ ಬಿಡುತ್ತಿದ್ದ ಜಹ್ನುಮಹರ್ಷಿಯ ಪ್ರಭಾವವನ್ನು ತಾಳಿದ್ದನು. ೧೯೬. ಇವನು ಅನೇಕ ಯಾಗಗಳಲ್ಲಿ ಸೋಮಪಾನ ಮಾಡುತ್ತಿದ್ದನು. ಅದರ ವಾಸನೆಯಿಂದ ಕೂಡಿಕೊಂಡಂತಿರುವ ಉಸಿರಿಗೆ ದುಂಬಿಗಳು ಬಂದು ಮುತ್ತುತ್ತಿದ್ದುವು. ಅವು ಈ ಮುನೀಶ್ವರನ ಬಾಯಿಯಲ್ಲಿ ಸದಾ ಸನ್ನಿಹಿತವಾಗಿರುವ ರೂಪವನ್ನು ತಾಳಿರುವ ಶಾಪಾಕ್ಷರಗಳಂತೆ ತೋರುತ್ತಿದ್ದುವು. ೧೯೭. ಅವನ ಎರಡು ಕಿವಿಗಳು ಬಿಳುಪಾಗಿಯೂ ಉದ್ದವಾಗಿಯೂ ಇರುವ ರೋಮರಾಜಿಯಿಂದ ಕೂಡಿಕೊಂಡಿತ್ತು. ಮತ್ತು ಮಾಂಸಗಳು ಕಮ್ಮಿಯಾಗಿರುವುದರಿಂದ ಕೆನ್ನೆಗಳ ಕುಳಿಗಳು ಆಳವಾಗಿದ್ದುವು. ೧೯೮. ಮುಪ್ಪಿನ ದೆಸೆಯಿಂದ ಅವನ ಕೊರಳೊಳಗೆ ನರಗಳು ಬಿಟ್ಟುಕೊಂಡಿದ್ದುವು. ಅವು ಬಹಳ ಚಂಚಲವಾದ ಇಂದ್ರಿಯಗಳನ್ನು ಸೇರಿಸಿ ಒಳಗೆ ಹಿಡಿದುಕಟ್ಟಿರುವ ಹುರಿಗಳೋ

ಕೊರಲೊಳ್ ಯಜ್ಞೋಪವೀತಂ ಪೊಳೆಯೆ ಬರಿಗಳೊಳ್ ತೋಱುತಿರ್ಪೆಲ್ಲ
ೆಲೊಳ್ ಪಂ
ಜರಿಸಿರ್ದಂತೆಯ್ದೆ ಬೇರ್ವಟ್ಟಿರೆ ತೆಱೆದುಱುಗಲ್ ಗಾಳಿಯಿಂದಾಡೆ ಯೋಗೀ
ಶ್ವರನಂತಾ ಬೇಗದೊಳ್ ಕೋಮಳಯುಗಳಮೃಣಾಳಂ ಪೊದಳ್ದುಣ್ಮಿತೇಂಕಲ್
ತರದಿಂ ರಂಗತ್ತರಂಗಂ ನೆಗೆಯಲೆಸೆವ ಗಂಗಾಪ್ರವಾಹಂಬೊಲಿರ್ದಂ ೧೯೯

ಆಕ್ಷಣದೊಳ್ ಶುದ್ಧಸ್ಫಟಿ
ಕಾಕ್ಷಾವಳಿಯಂ ಮಗುಳ್ಚೆ ಬೆರಳಿಂ ಭ್ರಾಮ್ಯ
ನ್ನಕ್ಷತ್ರ ಚಕ್ರಮಧ್ಯದ
ಸಾಕ್ಷಾದ್ಧ್ರುವನೆನಿಸಿದಂ ಮಹಾಮುನಿಮುಖ್ಯಂ ೨೦೦

ಸೆರೆದುಱುಗಲ್ ಮೆಯ್ಯೆಲ್ಲಮ
ನಿರದಡರೆ ಜರಲ್ಲತಾವಿತಾನದಿನೆತ್ತಂ
ಪರಿವೇಷ್ಟಿಸಿರ್ದ ಪರಿಣತ
ಸುರತರುವಂ ಪೋಲ್ತು ಸೊಗಯಿಸಿರ್ದಂ ಮುನಿಪಂ ೨೦೧

ಮಿಸುಗುವ ಚಂದ್ರಮರೀಚಿ
ಪ್ರಸರಂಗಳಿನೆಯ್ದೆ ನೆಯ್ದು ವೆಂಬಿನೆಗಂ ಮಾ
ನಸ ಸಲಿಲಧೌತಮಮಲಮ
ದೆಸೆದುದು ಮುನಿಪತಿಯ ಪೊಳೆವ ವಲ್ಕಲಯುಗಳಂ ೨೦೨

ಎಂಬಂತೆ ಕಾಣುತ್ತಿದ್ದವು. ೧೯೯. ಆ ಮಹರ್ಷಿಯ ಕೊರಳಿನಲ್ಲಿ ಯಜ್ಞೋಪವೀತವು ಪ್ರಕಾಶಿಸುತ್ತಿತ್ತು. ಪಕ್ಕಗಳಲ್ಲಿ ಎದ್ದು ಕಾಣುತ್ತಿರುವ ಮೂಳೆಗಳು ಪಂಜರದ ಸರಳುಗಳಂತೆ ವಿರಳ ವಿರಳವಾಗಿ ಕಾಣುತ್ತಿದ್ದುವು. ಚರ್ಮದ ಸುಕ್ಕುಗಳು ಗಾಳಿಗೆ ಅಲುಗಾಡುತ್ತಿ ತ್ತಿದ್ದುವು. ಹೀಗಿರಲು ಆ ಯೋಗಿವರೇಣ್ಯನು ಕೋಮಲವಾದ ಎರಡು ತಾವರೆದಂಟು ಗಳು ಮೇಲೆ ಮೇಲೆ ಎದ್ದು ತೇಲುತ್ತಿರಲು ಕುಣಿಯುತ್ತಿರುವ ಅಲೆಗಳುಳ್ಳ ಗಂಗಾ ಪ್ರವಾಹದಂತೆ ಕಾಣುತ್ತಿದ್ದನು. ೨೦೦. ಆಗ ಆ ಮುನೀಶ್ವರನು ಪರಿಶುದ್ಧವಾದ ಸ್ಫಟಿಕದ ಜಪಸರವನ್ನು ಬೆರಳಿನಿಂದ ತಿರುಗಿಸುತ್ತಿರಲಾಗಿ ನಕ್ಷತ್ರಚಕ್ರದ ಮಧ್ಯದಲ್ಲಿರುವ ಧ್ರುವನಕ್ಷತ್ರದಂತಿದ್ದನು. ೨೦೧. ಅವನ ದೇಹವನ್ನೆಲ್ಲಾ ನರಗಳ ಸಮೂಹವು ಕಾಣುವಂತೆಯೇ ಆವರಿಸಿದ್ದುವು. ಆದರಿಂದ ಅವನು ಜೀರ್ಣವಾದ ಬಳ್ಳಿಗಳಿಂದ ಸುತ್ತುವರಿಯಲ್ಪಟ್ಟ ವಯಸ್ಸಾದ ಕಲ್ಪವೃಕ್ಷದಂತೆ ಶೋಭಿಸುತ್ತಿದ್ದನು. ೨೦೨. ಆ ಮಹರ್ಷಿಯ ಪ್ರಕಾಶಮಾನವಾದ ಚಂದ್ರಕಿರಣಜಾಲಗಳಿಂದ ನೆಯ್ದಂತಿರುವ, ಮಾನಸ ಸರೋವರದ ನೀರಿನಿಂದ ಒಗೆದು ಮಡಿಮಾಡಿರುವ ನಿರ್ಮಲವಾದ ನಾರುಬಟ್ಟೆಯು

ಪಳುಕಿನ ಗುಂಡಿಗೆ ಗಂಗಾ
ಜಳದಿಂದಂ ತೀವಿ ತನ್ನ ಪಕ್ಕದೊಳಿರೆ ಕ
ಣ್ಗೊಳಿಸಿರ್ದನಂಚೆ ಪದಪಿಂ
ನೆಲಸಿದ ಸಿತಕಮಳವನದವೋಲ್ ಮುನಿಮುಖ್ಯಂ ೨೦೩

ಧರಣಿಗೆ ಧೈರ್ಯಮಂಬುಧಿಗೆ ಗುಣ್ಪು ಸಹಸ್ರಕರಂಗೆ ತೇಜಮಂ
ಬರಕೆ ಮಹತ್ವಮಿಂದುಗುಪಶಾಂತತೆ ಮೇರುಗೆ ಬಿಣ್ಪು ತನ್ನದೊಂ
ದಿರವಿನೊಳಾದುವೆಂಬಿನಮುದಾರಗುಣಪ್ರಕರಂಗಳಿಂದಳಂ
ಕರಿಪ ನಿಜಪ್ರಭಾವ ಮಹಿಮೋನ್ನತಿಯಿಂದೆಸೆದಂ ಮುನೀಶ್ವರಂ ೨೦೪

ಶಾಂತತೆಯನೆ ತಳೆದುಂ ರೂ
ಪಿಂತು ಕಾರ್ಗಾಲಮಿಂಚಿದೆನೆ ಕಣ್ ಕೋರೈ
ಪಂತಿರೆ ಪೊಳೆಯುತ್ತಿರ್ದಪು
ದೆಂತಕ್ಕುಮೊ ತಪದ ಮಹಿಮೆ ಮುನಿಪುಂಗವನಾ ೨೦೫

ಭುವನಪ್ರಸ್ತುತ್ಯರೋರಂದದೆ ತಪದೊಳೆ ಕರ್ಮಕ್ಷಯಂಗೆಯ್ದು ಮೂಲೋ
ಕವಿದೆಲ್ಲಂ ಕಯ್ಯೊಳಿರ್ದಾಮಳಕಫಳಮೆನಲ್ ಕಾಣ್ಬ ಯೋಗೀಂದ್ರರಿಂತ
ಪ್ಪವರಂ ಕೇಳ್ದೊಂದು ಪುಣ್ಯಂ ಸಮನಿಸಿದೊಡೆ ಪಾಪಕ್ಷಯಂ ಪ್ರಾಣಿಗೆಂದಂ
ದು ವಿಶೇಷಂ ಕಾಣ್ಬ ಪುಣ್ಯೋದಯಮುದಯಿಸಲಾ ಸೈಪನಿನ್ನೇನನೆಂಬೆಂ
೨೦೬

ಜೊತೆಯು ಶೋಭಿಸುತ್ತಿತ್ತು. ೨೦೩. ಆ ಮುನಿವರೇಣ್ಯನ ಪಕ್ಕದಲ್ಲಿ ಗಂಗಾನದಿಯ ನೀರಿನಿಂದ ತುಂಬಿದ ಸ್ಫಟಿಕಶಿಲೆಯ ಕಮಂಡಲು ಇತ್ತು. ಇದರಿಂದ ಆತನು ಹಂಸ ಪಕ್ಷಿಯು ಮನೆಮಾಡಿಕೊಂಡಿರುವ ಬಿಳಿತಾವರೆಯ ಪೊದರಿನಂತೆ ವಿರಾಜಿಸುತ್ತಿದ್ದನು. ೨೦೪. ಈತನ ಸದ್ಗುಣಗಳಿಂದ ಭಾಗವನ್ನು ಪಡೆಯುವುದರಿಂದಲೇ ಭೂಮಿಗೆ ಧೈರ್ಯವೂ ಸಮುದ್ರಕ್ಕೆ ಗಾಂಭೀರ್ಯವೂ ಸೂರ್ಯನಿಗೆ ತೇಜಸ್ಸೂ ಆಕಾಶಕ್ಕೆ ವಿಶಾಲ ತೆಯೂ ಚಂದ್ರನಿಗೆ ಪ್ರಶಾಂತತೆಯೂ ಮೇರುಪರ್ವತಕ್ಕೆ ಸ್ಥಿರತೆಯೂ ಉಂಟಾಗಿದೆಯೋ ಎಂಬಂತೆ ಉತ್ಕೃಷ್ಟವಾದ ಗುಣಗಳ ಸಮೂಹದಿಂದ ಶೋಭಿಸುತ್ತಿರುವ ತನ್ನ ಪ್ರಭಾವದ ಮಹಿಮೆಯಿಂದ ಆ ಮುನಿವರೇಣ್ಯನು ಶೋಭಿಸುತ್ತಿದ್ದನು. ೨೦೫. ಆ ಮಹಾ ಮುನಿಯ ರೂಪು ಪ್ರಶಾಂತವಾಗಿತ್ತು; ಆದರೂ ಮಳೆಗಾಲದ ಮಿಂಚಿನಂತೆ ನೋಡುವವರ ಕಣ್ಣನ್ನು ಕೋರೈಸುವಂತೆ ಪ್ರಕಾಶಿಸುತ್ತಿತ್ತು. ಆತನ ತಪಃಪ್ರಭಾವವು ಎಂತಹುದೋ. ೨೦೬. ಇಡೀ ಜಗತ್ತಿನಿಂದ ಸ್ತೋತ್ರಮಾಡಲ್ಪಡುವ ಒಂದೇಸಮನೆ ಮಾಡುತ್ತಿರುವ ತಪಸ್ಸಿನಿಂದ ಕರ್ಮಗಳನ್ನು ಕಳೆದುಕೊಂಡು ಮೂರು ಲೋಕಗಳನ್ನೆಲ್ಲಾ ಕಯ್ಯಲ್ಲಿರುವ ನೆಲ್ಲಿಯಕಾಯಿಯಂತೆ ನೋಡುವ ಇಂತಹ ಯೋಗೀಶ್ವರರ ಹೆಸರನ್ನು ಕೇಳುವ ಪುಣ್ಯ ಉಂಟಾದರೇ ಸಾಕು, ಮನುಷ್ಯರ ಪಾಪ ಪರಿಹಾರವಾಗುತ್ತದೆ. ಅಂದಮೇಲೆ ಅವರ

ಪಾವನಮಾದತ್ತೊಂದು ತ
ಪೋವನಮೆಂದಲ್ತು ಸಕಳ ವಸುಧಾತಳಮುಂ
ಪಾವನಮಾದುದು ನಿಖಿಳ ಧ
ರಾವಳಯಬ್ರಹ್ಮನೆನಿಪ ಮುನಿವರನಿಂದಂ ೨೦೭

ಪರಿಹೃತತೃಷ್ಣಮಾಹಿತರಸಂ ದ್ವಿಜಸನ್ನಿಹಿತಂ ಗಭೀರತಾ
ನಿರತಮತಿಪ್ರಸಾದಸುಭಗಂ ವಿಬುಧವ್ರಜಸೇವ್ಯಮೆಂಬಿನಂ
ಸುರುಚಿರಮಾದ ಸನ್ಮುನಿಯ ಮಾನಸದೊಳ್ ನೆಲಸಿರ್ದ ಹಂಸಿಯಂ
ತಿರೆ ಮುಖಪದ್ಮದೊಳ್ ನೆರೆವ ಭಾರತಿಯಿಂ ಕೃತಕೃತ್ಯಳಾವಳೋ ೨೦೮

ಕಲಿಕಲುಷಿತ ವಿದ್ಯಾಸಂ
ಕುಳಮಾ ಮುನಿತಿಳಕನಿಂ ಪ್ರಸಾದಮನಾಗಳ್
ತಳೆದೇನೆಸೆವುದೊ ಶಾರದ
ನಳಿನಸರೋವರದ ತೆಱದೆ ನಿಖಿಳಾವನಿಯೊಳ್ ೨೦೯

ದರ್ಶನವನ್ನು ಮಾಡುವ ಪುಣ್ಯವೊದಗಿದರೆ ಆ ಭಾಗ್ಯವನ್ನು ಏನು ಹೇಳಲಿ ! ೨೦೭. ಭೂಲೋಕದ ಬ್ರಹ್ಮನಂತಿರುವ ಈ ಮುನೀಶ್ವರನಿಂದ ಈ ಆಶ್ರಮವು ಮಾತ್ರ ಪಾವನವಾಗಿದೆಯೆಂದಲ್ಲ, ಇಡೀ ಜಗತ್ತೇ ಇವನಿಂದ ಪಾವನವಾಗುತ್ತದೆ. ೨೦೮. ಈ ಮಹರ್ಷಿಯ ಮನಸ್ಸೆಂಬ ಮಾನಸಸರೋವರದಲ್ಲಿ ಮುಖಕಮಲದ ಸಂಪರ್ಕವನ್ನು ಹೊಂದಿ ಹಂಸಿಯಂತೆ ವಾಸಮಾಡುವ ಸರಸ್ವತಿ (ವಿದ್ಯೆ)ಯು ಎಷ್ಟು ಕೃತಾರ್ಥಳೋ ! ಈತನ ಮನಸ್ಸು ಮತ್ತು ಮಾನಸಸರೋವರ ಇವೆರಡೂ "ಪರಿಹೃತತೃಷ್ಣ"ಗಳು (೧. ಆಸೆಯನ್ನು ಬಿಟ್ಟಿರುವುದು ೨. ಬಾಯಾರಿಕೆಯನ್ನು ಪರಿಹರಿಸುವುದು.) ಎರಡೂ "ಆಹಿತರಸ"ಗಳು (೧. ಆನಂದದಿಂದ ಕೂಡಿಕೊಂಡಿರುವುದು ೨. ನೀರಿನಿಂದ ಕೂಡಿಕೊಂಡಿರುವುದು) ಎರಡೂ "ದ್ವಿಜ ಸನ್ನಿಹಿತಗಳು" (೧. ಶಿಷ್ಯರಾದ ಬ್ರಾಹ್ಮಣರಿಂದ ಓಲೈಸಲ್ಪಡುವುದು. ೨. ಹಕ್ಕಿಗಳುಳ್ಳದ್ದು). ಎರಡೂ "ಗಭೀರತಾನಿರತ"ಗಳು (೧. ಗಂಭೀರವಾಗಿರುವುದು ೨. ಆಳವಾಗಿರುವುದು) ಎರಡೂ "ಅತಿಪ್ರಸಾದಸುಭಗ"ಗಳು. (೧. ಬಹಳ ಪ್ರಸನ್ನವಾಗಿರುವುದರಿಂದ ಆಕರ್ಷಣೀಯವಾದುದು ೨. ಬಹಳ ಸ್ವಚ್ಛವಾಗಿರುವುದರಿಂದ ಆಕರ್ಷಣೀಯವಾಗಿರುವುದು). ಎರಡೂ "ವಿಬುಧಬುಧವ್ರಜಸೇವ್ಯಗಳೇ. (೧. ಬ್ರಾಹ್ಮಣರ ಗುಂಪಿನಿಂದ ಸೇವಿಸಲ್ಪಡುವುದು ೨. ದೇವತೆಗಳ ಗುಂಪಿನಿಂದ ಸೇವಿಸಲ್ಪಡುವುದು.) ಎರಡೂ "ಸುರುಚಿರ"ಗಳು (೧. ಪ್ರಶಸ್ತವಾಗಿರುವುದು. ೨. ಮನೋಹರವಾಗಿರುವುದು.) ಟಿ. ಇಲ್ಲಿ ಮಾನಸಸರೋವರಕ್ಕೂ ಜಾಬಾಲಿಗ ಮನಸ್ಸಿಗೂ ಉಪಮಾನೋಪಮೇಯ ಭಾವವು ಶ್ಲೇಷೆಯಿಂದ ನಿರ್ವಹಿಸಲ್ಪಟ್ಟಿದೆ. ೧೦೯. ಈ ಕಲಿಕಾಲದಲ್ಲಿ ಎಲ್ಲಾ ವಿದ್ಯೆಗಳೂ ಕುತ್ಸಿತ ವ್ಯಾಖ್ಯಾನ, ಅಪಾರ್ಥಗಳಿಂದ ಮಲಿನ ಮಾಡಲ್ಪಟ್ಟಿದ್ದುವು. ಈಗ ಶರತ್ಕಾಲದಿಂದ ತಾವರೆಗೊಳಗಳು ತಿಳಿಯಾಗಿ ಮಾಡಲ್ಪಡುವಂತೆ

ಮುನಿಪತಿ ನೆಲಸಿದ ನಿಖಿಳಾ
ವನಿತಳಮಂ ನೋಡಿದಂಬರಕ್ಕೀಂ ಸಪ್ತ
ರ್ಷಿನಿವಾಸನಾದೆ ನಾನೆಂ
ಬಿನಿತೊಂದಭಿಮಾನವಟೆಯದಿರ್ಕುಮೆ ಪಿರಿದುಂ ೨೧೦

ಉರಿಯೊಳ್ ದುಗ್ಧಾಂಬಃಧಾರಾತತಿ ಹರನ ಜಟಾಜೂಟದೊಳ್ ಗಂಗೆಯಂತಂ
ತಿರೆ ನಿರ್ಯತ್ಫೇನ ಪುಂಜಪ್ರತಿಮಧವಳೆ ತಾಂ ಭೀತಿಯಂ ಪತ್ತುವಿಟ್ಟೀ
ಜರೆಯುಂ ತಾಂ ಮೇಲೆ ಬೀಟ್ವಳ್ ವಿಳಯಸಮಯತೀವ್ರಾಂಶುವೋಲಿರ್ದ ಯೋಗೀ
ಶ್ವರಪೀಗೋದ್ಯಜ್ಜಟಾಮಂಡದೊಳೆನಗಿದಾಶ್ಚರ್ಯಮಾದಪ್ಪುದೀಗಳ್ ೨೧೧

ಯತಿಪತಿತಪಃಪ್ರಭಾವೋ
ನ್ನತಿಗಳ್ಕಿದ ತೆಱದೆ ತರಣಿಕಿರಣಚಯಂಗಳ್
ವಿತತ ಬಹುಳಾಜ್ಯಮಾವು
ಪ್ರತಾನದಿಂ ನುಸುಳವೀ ತಪೋವನದತ್ತಲ್ ೨೧೨

ಈ ಮುನಿತಿಲಕನಾದ ಜಾಬಾಲಿಯಿಂದ ಪ್ರಾಮಾಣಿಕವಾದ ಅರ್ಥವಿವರಣೆ. ಅನುಷ್ಠಾನಗಳಿಂದ ಪರಿಶುದ್ಧಗೊಳಿಸಲ್ಪಟ್ಟುವು. ೨೧೦. ಆಕಾಶಕ್ಕೆ ಸಪ್ತರ್ಷಿಗಳು ತನ್ನಲ್ಲಿ ನೆಲೆಸಿರುವುದರಿಂದ ತಾನು ಯಾರಿಗೆ ಕಮ್ಮಿ ಎಂಬ ಒಂದು ಅಹಂಕಾರವಿತ್ತು. ಈಗ ಮಹಾಮಹಿಮರಾದ ಜಾಬಾಲಿಮಹರ್ಷಿಗಳು ನೆಲೆಸಿರುವ ಭೂಮಂಡಲದ ಭಾಗ್ಯ ವಿಶೇಷವನ್ನು ಕಂಡು ಆಕಾಶದ ಆ ಅಭಿಮಾನವು ತೊಡೆದುಹೋಗದಿರುವುದಿಲ್ಲ. ೨೧೧. ಉಕ್ಕುತ್ತಿರುವ ನೊರೆಗಳ ಗುಂಪಿನಂತೆ ಬಿಳುಪಾಗಿರುವ ಈ ಜರೆ (ಮುಪ್ಪು)ಯು ಸಾಮಾನ್ಯಳಲ್ಲ. ಮಹಾಸಾಹಸಿಕೆ ಹೇಗೆಂದರೆ, ಪ್ರಳಯಕಾಲದ ತೀಕ್ಷ್ಣನಾದ ಸೂರ್ಯನಂತಿರುವ ಹಳದಿಬಣ್ಣವನ್ನು ಹೊಂದಿರುವ ಪ್ರಕಾಶಮಾನವಾದ ಈ ಯೋಗೀಶ್ವರನ ಜಟಾಮಂಡಳದಲ್ಲಿ ಅಗ್ನಿಯಲ್ಲಿ (ಹೋಮಕಾಲದಲ್ಲಿ) ಕ್ಷೀರಧಾರೆಯಂತೆಯೂ ಪರಮೇಶ್ವರನ ಜಟಾಕಲಾಪದಲ್ಲಿ ಬೀಳುವ ಗಂಗೆಯಂತೆಯೂ ಭಯವನ್ನು ಬಿಟ್ಟು ಮೇಲೆ ಬಿದ್ದು ಸೇರಿದ್ದಾಳೆ. ೨೧೨. ಈ ಆಶ್ರಮದಲ್ಲಿ ಅಗ್ನಿಯಲ್ಲಿ ಹೋಮಮಾಡಿದ ತುಪ್ಪದ ಹೊಗೆಗಳು ಸೂರ್ಯರಶ್ಮಿಗೂ ತೂರಲು ಅವಕಾಶವಿಲ್ಲದಂತೆ ಹರಡಿಕೊಂಡಿವೆ. ಇದನ್ನು ನೋಡಿದರೆ ಈ ಮಹರ್ಷಿಗಳ ಮಿಗಿಲಾದ ತಪಃಪ್ರಭಾವಕ್ಕೆ ಹೆದರಿಕೊಂಡು ಸೂರ್ಯನು ತನ್ನ ಕಿರಣಗಳನ್ನು ಆಶ್ರಮದೊಳಕ್ಕೆ ಹೊಗಿಸುವುದಿಲ್ಲವೋ ಏನೋ

ಇವೆ ಮಂತ್ರಪೂತಮೆನಿಸಿದ
ಹವಿಗಳನಿದಿರೆಟ್ಟು ಸಲೆ ಶಿಖಾಂಜಳಿಪುಟವಿಂ
ದವೆ ಸುತ್ತಂ ಕಯ್ಕೊಂಡಿ
ರ್ಪುವು ಹುತವಹನಿವಹಮೆಂದೊಡಿನ್ನೇವೊಗಟ್ಟಿಂ ೨೧೩

ವಿಲುಳಿತ ದುಕೂಲವಲ್ಕಾಂ
ಚಳವೊಯ್ಯನೆ ಭೀತನಂತೆ ಮುನಿಪನ ಸುತ್ತುಂ
ಕೆಲಕೆಲದೊಳ್ ಸುಟಿದಪ್ಪುದು
ಬಲಿಕುಸುಮಾವೋದಬಂಧುರಂ ಗಂಧವಹಂ ೨೧೪

ತಮ್ಮೊಳ್ ತಿರ್ಯಗ್ಜಾತಿಗ
ಳೊಮ್ಮೆಯೆ ಮಱೆದುಂ ನಿಸರ್ಗವೈರಮನೆಂದುಂ
ತಮ್ಮೊಳ್ ಮತ್ಸರಮಂ ಮಱೆ
ದೊಮ್ಮೆಯುಮನುಭವಿಪುವಾ ತಪೋವನಸುಖಮಂ ೨೧೫

ಬಳಸಿಯೆ ನೋಡುತಿರ್ದ ಹರಿಣಂಗಳ ಕಂಗಳ ಕಾಂತಿಯಿಂದೆ ಕ
ಣ್ಗೊಳಿಪೆಳೆವುಲ್ಲ ನುಣ್ಪಸಲೆಯಂ ಪುಗುವಂದದೆ ಶಂಕೆಗೆಟ್ಟು ತ
ಳ್ತಳುರ್ವ ಬಿಸಿಲ್ಗೆ ಸೈರಿಸದೆ ಪೊಕ್ಕಪುದಿಂತಿದೆ ಪಾವು ಪೀಲಿಗ
ಣ್ಗಳಪರಭಾಗದಿಂದೆಸೆದು ತೋಱುವ ಸೋಗೆಯ ತಳ್ತ ಸೋಗೆಯಂ ೨೧೬

ಎಂಬಂತೆ ಕಾಣುತ್ತದೆ ೨೧೩. ಈ ಮಹರ್ಷಿಗಳು ಹೋಮ ಮಾಡಿದ ಹವಿಸ್ಸನ್ನು ಅಗ್ನಿಗಳು ಪ್ರೀತಿಯಿಂದ ಇದಿರೆದ್ದು ತಮ್ಮ ಜ್ವಾಲೆಗಳೆಂಬ ಬೊಗಸೆಯಿಂದ ಸ್ವೀಕರಿಸುತ್ತಿವೆಯೋ ಎಂಬಂತೆ ಕಾಣುತ್ತಿದೆ. ಇಂತಹ ಮಹಿಮೆಯನ್ನು ಇನ್ನೇನು ಹೊಗಳಲಿ ! ೨೧೪. ಇಲ್ಲಿ ಪೂಜೆ ಮಾಡಿದ ಹೂವುಗಳ ಸುವಾಸನೆಯಿಂದ ಮನೋಹರವಾದ ಮಾರುತನು ಈ ಮಹರ್ಷಿಗೆ ಹೆದರಿಕೊಂಡವನಂತೆ ಅವನ ಸುತ್ತಲೂ ಅವನು ಧರಿಸಿರುವ ರೇಷ್ಮೆ ಮತ್ತು ನಾರುಬಟ್ಟೆಯ ಅಂಚನ್ನು ಅಲುಗಾಡಿಸುತ್ತಾ ಮೆಲ್ಲನೆ ಸುಳಿಯುತ್ತಾನೆ. ೨೧೫. ಈ ಆಶ್ರಮದಲ್ಲಿರುವ ಸಿಂಹ ಆನೆ ಮೊದಲಾದ ಮೃಗಗಳು ತಮಗೂ ಬೇರೆ ಜಾತಿಯ ಮೃಗಕ್ಕೂ ಇರುವ ನಿಸರ್ಗವೈರವನ್ನೂ ತಮ್ಮೊಳಗಿರುವ ಪರಸ್ಪರ ವೈರವನ್ನೂ ಮರೆತು ತಪೋವನದ ಸುಖವನ್ನು ಅನುಭವಿಸುತ್ತವೆ. ೨೧೬. ಇತ್ತ ಕಡೆ ಒಂದು ಹಾವು ಹರಡುತ್ತಿರುವ ಉರಿಬಿಸಿಲನ್ನು ತಾಳಲಾರದೆ, ಮೇಯಲು ನಿಂತು ಸುತ್ತ ನೋಡುತ್ತಿರುವ ಜಿಂಕೆಗಳ ಕಣ್ಣುಗಳ ಹೊಳಪಿನಿಂದ ಬೆರೆತು ಕಂಗೊಳಿಸುತ್ತಿರುವ ಮೃದುವಾದ ಎಳೆಹುಲ್ಲು ಬೆಳೆದಿರುವ ಸ್ಥಳಕ್ಕೆ ಸೇರುವಂತೆ, ನವಿಲುಗರಿಗಳ ಕಣ್ಣುಗಳ ವರ್ಣೋತ್ಕರ್ಷದಿಂದ ರಂಜಿಸುವ ವಿಶಾಲವಾಗಿ ಹರಡಿರುವ ಗರಿಗಳನ್ನು ನಿರ್ಭಯವಾಗಿ ಸೇರುತ್ತದೆ. ಟಿ. ಹಾವು ಬಿಸಿಲಿನ ತಾಪವನ್ನು ತಾಳಲಾರದೆ ತನ್ನ ಸಹಜಶತ್ರುವಾಗಿ

ಪರಿಹರಿಸಿ ತನ್ನ ತಾಯಂ
ಪರಿಚಯದಿಂ ಕೇಸರಂಗಳೊಗೆಯದ ವನಕೇ
ಸರಿಶಿಶುಗಳೊಡನೆ ಮೃಗಶಿಶು
ಬರೆ ತೆಗೆದೂಡಿದುದು ತೋರೆದ ಸಿಂಹೀಸ್ತನಮಂ ೨೧೭

ಎಳೆವೆಱೆಗಳನಿೞಿಪ ಸಟಾ
ವಳಿಯಂ ಬಿಸವಿಸರಮೆಂದು ಕರಿಕಳಭಂಗಳ್
ಸೆಳೆಯುತ್ತಿರೆ ಸೊಗಯಿಸಿ ಕ
ಣ್ಗಳನರೆಮುಚ್ಚಿರ್ದುದಂತದೊಂದು ಮೃಗೇಂದ್ರಂ ೨೧೮

ಮದಸೌರಭಕ್ಕೆ ಬಂದೆಱ
ಗಿದ ಮಱಿದುಂಬಿಗಳ ಬಂಬಲಂ ದಯೆಯಿಂ ಸೋ
ವದೆ ಕರ್ಣತಾಳದಿಂದಂ
ಮದಾಂಧನಾಗಿರ್ದುದಂತದೊಂದು ಗಜೇಂದ್ರಂ ೨೧೯

ವ॥ ಅದಲ್ಲದೆಯುಂ

ಫಲಮೂಲಂಗಳನಾಂತು ವಲ್ಕಲದಿನೊಪ್ಪಂಬೆತ್ತು ಕೃಷ್ಣಾಜಿನಂ
ಗಳನೀ ತಾಪಸಹೋಮಧೂಮತತಿಯಿಂದಂ ತಾಳ್ದಿ ನಿಶ್ಚೇತನಂ
ಗಳುಮಿರ್ದಪ್ಪುವು ಪಾರ್ಶ್ವದೊಳ್ ನಿಯಮಮಂ ತಾಳ್ದಿರ್ದವೋಲ್ ಭೂರುಹಂ
ಗಳಿವೇದಂದು ಮುನೀಂದ್ರನುನ್ನತಿಯನಂತಿಂತುಂತೆನಲ್ ಬರ್ಕುಮೋ ೨೨೦

ದ್ದರೂ ನವಿಲಿನ ಗರಿಗಳಲ್ಲಿ ಬಂದು ವಿಶ್ರಾಂತಿ ಪಡೆಯಿತು. ೨೧೭. ಜಿಂಕೆಯುಮರಿ ತನ್ನ ತಾಯಿಯನ್ನು ಬಿಟ್ಟು ಪರಿಚಯ ಬೆಳೆದುಬಂದಿರುವುದರಿಂದ ಇನ್ನೂ ಕೊರಳು ಗೂದಲು ಬೆಳೆಯದಿರುವ ಸಿಂಹದ ಮರಿಗಳ ಜೊತೆಗೂಡಿ ಅವುಗಳ ತಾಯಿಯ ಹತ್ತಿರಕ್ಕೆ ಹೋಗುತ್ತದೆ. ಆಗ ಆ ಸಿಂಹಿಯು ಆ ಜಿಂಕೆಮರಿಗೂ ತನ್ನ ಮೊಲೆಯನ್ನು ಊಡಿಸುತ್ತದೆ. ೨೧೮. ಬಾಲಚಂದ್ರನನ್ನು ತಿರಸ್ಕರಿಸುವಂತಿರುವ ಕೊರಳು ಕೂದಲನ್ನು ತಾವರೆದಂಟೆಂಬ ಭ್ರಮೆಯಿಂದ ಆನೆಮರಿಗಳು ಎಳೆಯುತ್ತಿರಲಾಗಿ ಸಿಂಹವು ಕಣ್ಣುಗಳನ್ನು ಅರ್ಧ ಮುಚ್ಚಿ ಕೊಂಡು ಶಾಂತವಾಗಿ ಮಲಗಿದೆ. (ಟಿ. ಬಾಲಚಂದ್ರನನ್ನು ತಿರಸ್ಕರಿಸುವ=ಬಾಲಚಂದ್ರ ನಂತಿರುವ) ೨೧೯. ಆನೆಯೊಂದು ಮದದಿಂದ ಪರವಶವಾಗಿದ್ದರೂ ಮದೋದಕದ ಪರಿಮಳಕ್ಕೆ ಬಂದೆರಗುವ ಮರಿದುಂಬಿಗಳ ಗುಂಪನ್ನು ಕಿವಿಗಳನ್ನು ಅಲ್ಲಾಡಿಸಿ ಓಡಿಸಲಿಲ್ಲ, ಕನಿಕರದಿಂದ ಸುಮ್ಮನಿದೆ. ವ॥ ಅದಲ್ಲದೆ ೨೨೦. ಈ ಆಶ್ರಮದಲ್ಲಿರುವ ಮರಗಳೂ ಋಷಿಗಳಂತೆ ಹಣ್ಣು, ಗೆಡ್ಡೆಗಳನ್ನು ಹೊಂದಿವೆ. ಋಷಿಗಳಿರುವಂತೆಯೇ ಇದಕ್ಕೆ ತೊಗ ಟೆಯ ಉಡುಪೂ ಇದೆ. ಋಷಿಗಳು ಮಾಡುವ ಹೋಮದ ಹೊಗೆ ಆವರಿಸಿರುವುದರಿಂದ ಜಿಂಕೆಯ ಚರ್ಮದಿಂದ ಕೂಡಿಕೊಂಡಿರುವಂತಿವೆ. ಹೀಗೆ ಅಚೇತನಗಳಾದ ಮರಗಳೂ ಈ ಜಾಬಾಲಿಮಹರ್ಷಿಗಳ ಸಮೀಪದಲ್ಲಿ ವ್ರತವನ್ನು ತಾಳಿರುವಂತೆ ಕಾಣುತ್ತಿವೆ. ಹೀಗಿರಲು ಆ ಮಹರ್ಷಿಗಳ ಮಹಿಮೆಯನ್ನು ಹಾಗೆ ಹೀಗೆ ಎಂದು ವರ್ಣಿಸಲು

ವ॥ ಎಂದು ತನ್ಮುನಿಪ್ರಭಾವಮನೆ ಮನದೊಳ್ ಪರಿಭಾವಿಸುತ್ತಿರ್ಪನ್ನೆಗಮಾ ರಕ್ತಾಶೋಕತರುವಿನ ತಣ್ಣೆಟಲೊಳ್

ಪರಮತಪೋನಿಧಿಯೆನಿಸಿದ
ಗುರುವಿಂಗಭಿವಂದಿಸುತ್ತೆ ಹಾರೀತಂ ಕು
ಳ್ಳಿರೆ ನಿಮಗಿದೆತ್ತಣಿಂದಂ
ದೊರೆಕೊಂಡಿತ್ತೆಂದು ತಾಪಸರ್ ಬೆಸಗೊಂಡರ್ ೨೨೧

ವ॥ ಅಂತು ಬೆಸಗೊಳ್ವುದುಂ ಹಾರೀತಕನೆಂದನಾಂ ಸ್ನಾನಾರ್ಥಂ ಪೋಗುತ್ತಿರೆ ಪಂಪಾಸರೋವರದ ಪಕ್ಕದಡವಿಯ ಪೆರ್ಮರನ ತುದಿಗೋಡಿನಿಂ ಬಿರ್ದು ದೆಸೆಗೆಟ್ಟು ನಡುವಗಲ ಬಿಸಿಲಳುರೆ ಕಿಡಿಯಿಡುವ ಪುಡಿಯೊಳ್ ಪೊರಳುತ್ತುಂ ಕಂಠಗತಪ್ರಾಣನಾಗಿರ್ದುದನೀ ಗಿಳಿಯುಂ ಕಂಡು ಕರುಣಿಸಿ ತಂದೆಂ ನಡಪಿ ಗರಿಮೂಡಿದಬಳಿಕ್ಕಂ ಪಾರಿಪೋಕುಮಲ್ಲದಂತು ಪರಿಚಯದಿಂ ನಿಲ್ಗೆಂದೆನ್ನ ಸಂಬಂಧಮಂ ನುಡಿವುತ್ತಿರೆ ಜಾಬಾಲಮುನೀಂದ್ರನಾ ಮಾತಂ [ಕೇಳ್ದೀಪದಾವಲಿತ] ಕಂಧರನಿದೆತ್ತಣಿಂ ಬಂದುದೆಂದು ಪುಣ್ಯಜಲದಿಂ ಪ್ರಕ್ಷಾಳಿಸುವಂತೆ ಶಾಂತದೃಷ್ಟಿಗಳಿಂದೆನ್ನಂ ಮುನ್ನಂ ಕಂಡಟಿವನಂತೆ ನೀಡುಂ ಭಾವಿಸಿ ನೋಡಿ

ಸಾಧ್ಯವೇ ? ವ॥ ಎಂದು ಆ ಮುನಿಯ ಪ್ರಭಾವವನ್ನೇ ಮನಸ್ಸಿನಲ್ಲಿ ಎಣಿಕೆ ಹಾಕುತ್ತಿರುವಷ್ಟರಲ್ಲಿ ಆ ಕೆಂಪು ಅಶೋಕವೃಕ್ಷದ ತಂಪಾದ ನೆರಳಿನಲ್ಲಿ ೨೨೧. ದೊಡ್ಡ ತಪೋನಿಧಿಯೆನಿಸಿಕೊಂಡಿರುವ ತಂದೆಗೆ ನಮಸ್ಕರಿಸಿ ಹಾರೀತನು ಕುಳಿತುಕೊಳ್ಳಲಾಗಿ 'ಇದುಂ ನಿಮಗೆ ಹೇಗೆ ದೊರಕಿತು ?' ಎಂದು ಅಲ್ಲಿದ್ದ ಋಷಿಗಳೆಲ್ಲರೂ ಕೇಳಿದರು. ವ॥ ಹಾಗೆ ಕೇಳಲಾಗಿ ಹಾರೀತನು "ನಾನು ಸ್ನಾನಕ್ಕಾಗಿ ಹೋಗುತ್ತಿರಲಾಗಿ ಪಂಪಾ ಸರೋವರದ ಪಕ್ಕದ ಕಾಡಿನ ದೊಡ್ಡ ಮರದ ತುದಿಗೊಂಬೆಯಿಂದ ಬಿದ್ದು ದಿಕ್ಕುಕೆಟ್ಟು, ಮಧ್ಯಾಹ್ನದ ಬಿಸಿಲು ಪರಡುತ್ತಿರಲಾಗಿ ಬೆಂಕಿಯನ್ನುಗುಳುವ ಧೂಳಿಯಲ್ಲಿ ಹೊರಳುತ್ತ ಕಂಠಗತಪ್ರಾಣನಾಗಿದ್ದ ಈ ಗಿಳಿಯನ್ನು ಕಂಡೆ. ಅಯ್ಯೋ ಪಾಪ !–ಎನ್ನಿಸಿತು. ಅದರಿಂದ ಇಲ್ಲಿಗೆ ತಂದೆನು. ಸ್ವಲ್ಪಕಾಲ ಇಲ್ಲಿಯೇ ಸಾಕುವುದು, ಆಮೇಲೆ ರಕ್ಕೆ ಬಂದ ಮೇಲೆ ಬೇಕಾದರೆ ಹಾರಿಹೋಗಲಿ, ಇಲ್ಲದಿದ್ದರೆ ಪರಿಚಯ ಉಂಟಾಗಿರುವುದರಿಂದ ಇಲ್ಲೇ ಬೇಕಾದರೂ ಇರಲಿ–ಎಂದು ನನ್ನ ವಿಷಯವನ್ನು ಹೇಳುತ್ತಿರಲಾಗಿ, ಜಾಬಾಲಿ ಮಹರ್ಷಿಯು ಆ ಮಾತನ್ನು ಕೇಳಿ ನನ್ನ ಕಡೆಗೆ ತನ್ನ ಕೊರಳನ್ನು ಸ್ವಲ್ಪ ತಿರುಗಿಸಿ ಇದು ಎಲ್ಲಿಂದ ಬಂತು ? ಎಂಬ ಕುತೂಹಲದಿಂದ ಪವಿತ್ರವಾದ ಜಲದಿಂದ ನನ್ನನ್ನು ತೊಳೆಯುವಂತೆ ಪ್ರಶಾಂತದೃಷ್ಟಿಯಿಂದ ಹಿಂದೆ ನೋಡಿದವನನ್ನು ಗುರುತು ಹಿಡಿದವನಂತೆ ಮತ್ತೆ

ಈತಂ ಮುನ್ನಿನ ಭವದೊಳ್
ನೀತಿಯನುೞಿದೆಸಗಿ ಮೋಹದಿಂದಂ ತಿರ್ಯ
ಗ್ಜಾತಿಗೆ ಬಿೞ್ದೋರಂದದಿ
ನೀ ತೆಱದಿಂ ಕರ್ಮಫಲವನುಂಡಪನಲ್ತೇ ೨೨೨

ವ|| ಎಂದು ಕಾಲತ್ರಯವೇದಿಗಳ್ ನುಡಿಯೆ ಮುನಿಗಳೆಲ್ಲರ್ ವಿಸ್ಮಿತಾಂತಃಕರಣರಾಗಿ ಮುನೀಂದ್ರನನಿಂತೆಂದರ್

ಮುನ್ನಾವನ ವಿನಯಮನೇ
ನಂ ನೆಗೞ್ದಂ ವಿಹಗಯೋಗಿಯೆಂತಾದಂ ಮು
ತ್ತಿನ್ನೇನಾದಪನೆನುತಂ
ಭಿನ್ನವಿಪುತ್ಕಂಠೆ ಮನದೊಳಾದಪುದೀಗಳ್ ೨೨೩

ವ|| ಅದುಕಾರಣದಿಂ

ಬೆಸಸಲ್ಕೀಂ ಪೇೞ್ವುದಿಂತೀ ಗಿಳಿಯುಮುೞಿಯ ವೃತ್ತಾಂತಮಂ ತಾಮೆನಲ್ ತಾ
ಪಸವೃಂದಕ್ಕಾ ಮುನೀಂದ್ರಂ ಕಥೆ ಪಿರಿದು ಮಹಾಶ್ಚರ್ಯಮೀ ರಾತ್ರಿಯೊಳ್ ಸಂ
ತಸವಿರ್ಪಂತಾಗೆ ತಾಂ ಕೇಳಿಸಿದಪೆನದಱಿಂದೆೞ್ದು ನೀಮೆಲ್ಲರುಂ ಪ್ರಾ
ರ್ಥಿಸದೀ ಮಧ್ಯಾಹ್ನಕಾಲೋಚಿತ ಸಮಯದೊಳಾಸಕ್ತಿಯಂ ತಾಳ್ವಿಮೀಗಳ್ ೨೨೪

ಮತ್ತೆ ಚೆನ್ನಾಗಿ ನೋಡಿದನು. ೨೨೨. "ಈತನು ಹಿಂದಿನ ಜನ್ಮದಲ್ಲಿ ನೀತಿಯನ್ನು ಬಿಟ್ಟು ಅಜ್ಞಾನದಿಂದ ಏನೋ ಮಾಡಿಬಿಟ್ಟ. ಅದರಿಂದ ಈ ಹಕ್ಕಿಯ ಜಾತಿಯಲ್ಲಿ ಬಿದ್ದು ಒಂದೇ ಸಮನಾಗಿ ಈ ರೀತಿಯಾದ ಕರ್ಮಫಲವನ್ನು ಅನುಭವಿಸುತ್ತಿದ್ದಾನಲ್ಲ !" ವ|| ಎಂದು ತ್ರಿಕಾಲಜ್ಞಾನಿಗಳಾದ ಅವರು ನುಡಿದರು. ಋಷಿಗಳೆಲ್ಲರೂ ಆಶ್ಚರ್ಯಗೊಂಡ ಮನಸ್ಸುಳ್ಳವರಾಗಿ ಆ ಯೋಗೀಶ್ವರನನ್ನು ಕುರಿತು ಹೀಗೆ ಹೇಳಿದರು. ೨೨೩. "ಪೂಜ್ಯರೆ, ಇವನು ಹಿಂದಿನ ಜನ್ಮದಲ್ಲಿ ಯಾವ ನೀತಿಗೆಟ್ಟ ಕೆಲಸವನ್ನು ಮಾಡಿದನು ? ಹಕ್ಕಿಯ ಜಾತಿಯಲ್ಲಿ ಹೇಗೆ ಹುಟ್ಟಿದನು ? ಮುಂದೆ ಏನಾಗುತ್ತಾನೆ ? ಎಂಬುದನ್ನು ತಿಳಿದುಕೊಳ್ಳಬೇಕೆಂದು ಮನಸ್ಸಿನಲ್ಲಿ ಕುತೂಹಲವುಂಟಾಗಿದೆ. ಆ ಕಾರಣದಿಂದ ೨೨೪. ತಾವು ಈ ಗಿಳಿಮರಿಯ ವೃತ್ತಾಂತವನ್ನು ನಮಗೆ ಹೇಳಬೇಕು" ಎಂದು ಆ ಮುನಿಸಮೂಹವು ಅರಿಕೆಮಾಡಿಕೊಂಡಿತು. ಆ ಜಾಬಾಲಿಮಹರ್ಷಿಯು "ಈ ಕಥೆ ಬಹಳ ದೊಡ್ಡದು ಮತ್ತು ಬಹಳ ಚಮತ್ಕಾರಿಯಾಗಿದೆ. ಆದ್ದರಿಂದ ಈ ರಾತ್ರಿ ನೀವೆಲ್ಲರೂ ಸಾವಧಾನರಾಗಿರುವಾಗ ನಾನು ಹೇಳುತ್ತೇನೆ. ಈಗ ನೀವು ಕೇಳಬೇಡಿ. ಪ್ರಕೃತ ಎಲ್ಲರೂ ಎದ್ದು ಮಧ್ಯಾಹ್ನ ಕಾಲೋಚಿತವಾದ ಕಾರ್ಯಗಳನ್ನು ಮಾಡಿಕೊಳ್ಳಿ" ಎಂದು

ಎಂದುಂ ಮುನಿಗಳ್ಗೆ ಬೆಸಸು
ತ್ತುಂ ದಿವಸೋಚಿತಮೆನಿಪ್ಪ ನಿಯಮಕ್ಕಿರದ
ಲ್ಲಿಂದೆಟ್ಟು ಪೋದನಾ ಮುನಿ
ವೃಂದಂಬೆರಸಾ ಮುನೀಂದ್ರನಂದವನಿಪತೀ ೨೨೫

ವ॥ ಅಂತು ನಿತ್ಯನಿಯಮವ್ಯಾಪಾರಂಗಳಂ ತೀರ್ಚುತ್ತಮಿರ್ದು

ದಿನಕರಕಿರಣಮನುಷ್ಣಪ
ರೆನಿಸಿದ ಮುನಿಜನದ ಹೋಮಧೂಮಂ ಪೀರ್ದ
ತ್ತೆನಲೊಯ್ಯನೊಯ್ಯನಾಗಳ್
ಇನನಪಗತತೇಜಮುಡುಗಲೊಡರಿಚಿತಾಗಳ್ ೨೨೬

ತಮತಮಗೆತ್ತುವ ಮುನಿಜನ
ಸಮಿತಿಯ ಹರಿಚಂದನಾರ್ಘ್ಯಸಲಿಲದ್ಯುತಿ ಸಂ
ಕ್ರಮಿಸಿತ್ತೆನಲ್ಕೆ ಪುದಿದರು
ಣಿಮದಿಂದಂ ತರಣಿಬಿಂಬಮೆಸೆದತ್ತಾಗಳ್ ೨೨೭

ಆದುದು ಸಮಸ್ತ ಮುನಿನಿವ
ಹೋದಯಮುಂ ಸೋಂಕಲಾಗದವರ್ಗಳನಾನೇ
ದಾದಂ ದಿನಾಧಿಪತಿ ನಿಜ
ಪಾದಂಗಳನುಡುಗಿ ಗಗನತಳದಿಂದಿಟಿದಂ ೨೨೮

ಹೇಳಿದನು. ೨೨೫. ಎಲೈ ರಾಜನೆ, ಹೀಗೆ ಋಷಿಗಳಿಗೆಲ್ಲರಿಗೂ ತಿಳಿಸಿ ಮಾಧ್ಯಾಹ್ನಿಕ ಮೊದಲಾದ ಕರ್ಮಗಳನ್ನು ನೆರವೇರಿಸಲು ಆ ಜಾಬಾಲಿಯು ಅಲ್ಲಿಂದೆದ್ದು ಋಷಿಗಳೊಂದಿಗೆ ತೆರಳಿದನು. ವ॥ ಹೀಗೆ ಪ್ರತಿನಿತ್ಯವೂ ಮಾಡಬೇಕಾದ ವಿಧಿಗಳನ್ನು ನೆರವೇರಿಸುತ್ತಿರಲಾಗಿ ೨೨೬. ಉಷ್ಣಪರೆಂಬ ಹೆಸರನ್ನು ಪಡೆದಿರುವ ಮುನಿಜನರ ಹೋಮದ ಹೊಗೆಯು ಸೂರ್ಯನ ಕಿರಣಗಳನ್ನು ಕುಡಿದುಬಿಟ್ಟಿವೆಯೋ ಎಂಬಂತೆ ಸೂರ್ಯನ ಕಮ್ಮಿ ಕಮ್ಮಿಯಾಗುತ್ತಿರುವ ತೇಜಸ್ಸು ಕ್ಷೀಣವಾಗಲು ಪ್ರಾರಂಭಿಸಿತು. ಟಿ. ಸೂರ್ಯನನ್ನೇ ನೋಡುತ್ತಾ ಕಠಿನವಾದ ತಪಸ್ಸು ಮಾಡುವ ತಪಸ್ವಿಗಳಿಗೆ ಉಷ್ಣಪರೆಂದು ಹೆಸರು. ೨೨೭. ಸಂಧ್ಯಾಕಾಲದಲ್ಲಿ ಋಷಿಗಳೆಲ್ಲರೂ ಕೊಡುವ ಕೆಂಪುಗಂಧದಿಂದ ಮಿಶ್ರವಾದ ಅರ್ಘ್ಯದ ನೀರಿನ ಕಾಂತಿಯು ಸೇರಿಕೊಂಡಿದೆಯೋ ಎಂಬಂತೆ ಕೆಂಬಣ್ಣದಿಂದ ಸೂರ್ಯಮಂಡಲವು ಶೋಭಿಸುತ್ತಿತ್ತು. ೨೨೮. ಆಕಾಶದಲ್ಲಿ ನಕ್ಷತ್ರರೂಪದಿಂದ ನೆಲೆಸಿರುವ ಸಪ್ತರ್ಷಿಗಳು ಈಗ ಉದಯಿಸುತ್ತಾರೆ. ನಾನು ಅವರನ್ನು ಪಾದ (೧. ಕಾಲು ೨. ಕಿರಣ) ಗಳಿಂದ ಮುಟ್ಟಬಾರದು ಎಂದು ಸೂರ್ಯನು ತನ್ನ ಪಾದ (೧. ಕಾಲು ೨. ಕಿರಣ)

ಜಲನಿಧಿಶಯ್ಯೆಯೊಳ್ ನೆಲಸಿದಂಬುಜನಾಭನ ನಾಭಿಯಲ್ಲಿ ಕೋ
ಮಳಮಧುಧಾರೆಗಳ್ ನಿಮಿರ್ದು ಕಣ್ಗೊಳಿಪೊಂದರವಿಂದಮೆಂಬಿನಂ
ಪೊಳೆವರುಣಾಂಶುವಿಂದೆಸೆವ ತನ್ನಯ ಮಂಡಳಮಬ್ಧಿಯಲ್ಲಿ ಮಾ
ರ್ಪೊಳೆವಿನೆಗಂ ಸರೋಜಸಖನೊಯ್ಯನೆ ಪೊರ್ದಿದನಸ್ತಶೈಲಮಂ ೨೨೯

ಮುನಿನಿವಹಮಾಱಲಿಕ್ಕಿದ
ತನುತರ ಕಾಷಾಯವಲ್ಕವಸನಂಗಳನಂ
ದೆನಸುಂ ತಾಳ್ದಿದುವೆನೆ ಬೈ
ಗಿನ ಕೆಂಬಿಸಿಲಳುಱಲೆಸೆದುವಾಶ್ರಮತರುಗಳ್ ೨೩೦

ವ॥ ಅನಂತರಂ ದಿವಸಕರನಪರವಾರ್ಧಿಗೆ ಮಗ್ನನಾಗೆ

ಪವಳದ ಬಳ್ಳಿಯ ತುಱುಗಲ್
ಪವಣಲ್ಲದೆ ತಳ್ತು ಬೆಳೆದು ಕುಡಿವಿಟ್ಟಪರಾ
ರ್ಣವತಟದೊಳ್ ಪರೆದಪುದೆಂ
ಬವೊಲೆಸೆದತ್ತು ಸಾಂದ್ರಸಂಧ್ಯಾರಾಗಂ ೨೩೧

ವನರುಹಕಾಂತ ಕುಟ್ಮಳ ಕಮಂಡಲುರಾಜಿನಿ ಹಂಸಮಾಲಿಕಾ
ತನು ಸಿತ ವಲ್ಕಭಾಜಿನಿ ಮೃಣಾಳಲತಾಲಲಿತೋಪವೀತರಂ
ಜಿನಿ ವಳಿತದ್ವಿರೇಫನಿವಹಾಕ್ಷಸಮಾಜಿನಿ ಶೋಕದಿಂ ಸರೋ
ಜಿನಿ ದಿನಕೃದ್ವಿಯೋಗಿನಿ ತಪಸ್ವಿನಿಯಂತೆವೊಲಾದವೊಪ್ಪಿದಳ್ ೨೩೨

ಗಳನ್ನು ಮುದುರಿಕೊಂಡೇ ಆಕಾಶದಿಂದ ಕೆಳಗೆ ಇಳಿಯಲಾರಂಭಿಸಿದನು. ೨೨೯. ಸೂರ್ಯನು ಮೆಲ್ಲಮೆಲ್ಲನೆ ಅಸ್ತಪರ್ವತವನ್ನು ಸೇರಿದನು. ಕೆಂಬಣ್ಣದ ಕಾಂತಿಯಿಂದ ರಂಜಿಸುವ ಅವನ ಮಂಡಲವು ಸಮುದ್ರದಲ್ಲಿ ಪ್ರತಿಬಿಂಬಿಸಿತು. ಆಗ ಅದು ಸಮುದ್ರವೆಂಬ ಹಾಸಿಗೆಯಲ್ಲಿ ಮಲಗಿರುವ ಶ್ರೀಮನ್ನಾರಾಯಣನ ಹೊಕ್ಕಳಲ್ಲಿ ಬೆಳೆದು ಮೃದುವಾದ ಮಕರಂದಧಾರೆಗಳಿಂದ ತುಂಬಿ ಶೋಭಿಸುವ ಕಮಲದಂತೆ ಕಾಣುತ್ತಿತ್ತು. ೨೩೦. ಆಗ ಸಂಧ್ಯಾಕಾಲದ ಕೆಂಬಿಸಿಲು ಆಶ್ರಮದ ಮರಗಳ ಮೇಲೆ ಹರಡಿತ್ತು. ಅದು ಮುನಿಗಳು ಒಣಗಿಸಲು ಕೊಂಚಕಾಲ ಹರವಿರುವ ನವಿರಾದ ಕೆಂಪು ನಾರುಬಟ್ಟೆಯೋ ಎಂಬಂತೆ ಕಾಣುತ್ತಿತ್ತು. ವ॥ ಆಮೇಲೆ ಸೂರ್ಯನು ಪಶ್ಚಿಮ ಸಮುದ್ರದಲ್ಲಿ ಮುಳುಗಲಾಗಿ, ೨೩೧. ಹವಳದ ಬಳ್ಳಿಗಳ ಗುಂಪು ಲೆಕ್ಕವಿಲ್ಲದಂತೆ ಬೆಳೆದು ಕುಡಿಗಳನ್ನು ಹೊಂದಿ ಪಶ್ಚಿಮ ಸಮುದ್ರದತೀರದಲ್ಲಿ ಹರಡಿಕೊಂಡಿದೆ ಎಂಬಂತೆ ದಟ್ಟವಾದ ಸಂಜೆಗೆಂಪು ಶೋಭಿಸುತ್ತಿತ್ತು. ೨೩೨. ಕಮಲದ ಬಳ್ಳಿಯೆಂಬ ರಮಣಿಯು ತನ್ನ ರಮಣನಾದ ಸೂರ್ಯನು ಮುಳುಗಿಹೋಗಲಾಗಿ ಅವನ ವಿರಹದಿಂದ ಉಂಟಾದ ವ್ಯಥೆಯಿಂದ ತಪಸ್ವಿನಿಯಾಗಿಬಿಟ್ಟಳು. ಹೇಗೆಂದರೆ, ಅವಳು ಕಮಲದ ಸುಂದರವಾದ ಮೊಗ್ಗೆಂಬ ಕಮಂಡಲುವಿನಿಂದ ವಿರಾಜಮಾನಳಾಗಿದ್ದಾಳೆ. ಹಂಸಗಳ ಸಾಲೆಂಬ ನವುರಾದ ಹಾಗೂ ಶುಭ್ರವಾದ ನಾರುಮಡಿಯನ್ನು ಧರಿಸಿ

ಅಂಬರತಳದಿಂ ದಿನನಪ
ರಾಂಬುಧಿಯೊಳ್ ಬೀೞ ನೆಗೆದ ಸೀರ್ಪನಿಗಳೊ ಪೇ
ೞಂಬಿನೆಗಂ ತಾರಾನಿಕು
ರುಂಬಂ ಸೊಗಯಿಸಿದುವೆಯ್ದೆ ಗಗನಾಂತರದೊಳ್ ೨೩೩

ತವತವಗೆ ಸಿದ್ಧಕನ್ಯಾ
ನಿವಹಂ ಸಂಧ್ಯಾರ್ಚನಕ್ಕೆ ಸೂಸಿದ ಕುಸುಮಾ
ಳಿವೊಲೆಸೆಯೆ ಪರೆದು ಕಣ್ಗೊಳಿ
ಪುವು ತರದಿಂ ತುಱುಗಿ ಮಿಱುಪ ತಾರಾನಿಕರಂ ೨೩೪

ಮುನಿಜನನಿವಹಂ ಸಾಯಂ
ತನಸಮಯದೊಳೆತ್ತುವರ್ಘ್ಯಜಲದಿಂದಂ ಭೋಂ
ಕೆನಲೆಯ್ದೆ ಕರ್ಚಿ ಕಳೆದ
ತ್ತೆನೆ ಪೋದುದು ಪರೆದು ನಿಖಿಳ ಸಂಧ್ಯಾರಾಗಂ ೨೩೫

ಇನನ ಬೞಿಸಂದ ಸಂಧ್ಯಾ
ವನಿತೆಯ ಪಿಂಗಿದ ವಿರಕ್ತಿ ಪುಟ್ಟಲ್ ಕೃಷ್ಣಾ
ಜಿನಮಂ ತಾಳ್ದಿದಳೊ ನಿಶಾಂ
ಗನೆಯೆಂಬಿನಮುರ್ಚಿ ಮುರ್ಚಿ ಪರ್ಚಿತ್ತಾಗಳ್ ೨೩೬

ದ್ದಾಳೆ. ಬಳ್ಳಿಯಂತೆ ಕೋಮಲವಾದ ತಾವರೆಯ ದಂಟೆಂಬ ಯಜ್ಞೋಪವೀತ ವನ್ನು ಹಾಕಿಕೊಂಡಿದ್ದಾಳೆ. ಸುತ್ತುತ್ತಿರುವ ದುಂಬಿಗಳ ಗುಂಪೆಂಬ ಜಪಸರವನ್ನು ಹೊಂದಿದ್ದಾಳೆ. ಹೀಗೆ ಕಮಲಿನಿಯು ತಪಸ್ವಿನಿಯಂತಾಗಿದ್ದಾಳೆ. ೨೩೩. ಸೂರ್ಯನು ಆಕಾಶದಿಂದ ಪಶ್ಚಿಮ ಸಮುದ್ರಕ್ಕೆ ಬೀಳಲಾಗಿ ಸಮುದ್ರದಿಂದ ಮೇಲಕ್ಕೆ ಚಿಮ್ಮುವ ತುಂತುರುಹನಿಗಳೆಂಬಂತಿರುವ ನಕ್ಷತ್ರಸಮೂಹವು ಆಕಾಶದಲ್ಲಿ ರಮಣೀಯವಾಗಿತ್ತು. ೨೩೪. ಸಿದ್ಧಕನ್ಯೆಯರು ಸಂಧ್ಯಾದೇವಿಯ ಪೂಜೆಗಾಗಿ ಚೆಲ್ಲಿದ ಹೂವುಗಳ ಸಮೂಹವೋ ಎಂಬಂತೆ ಕಾಣುವ ಮಿನುಗುವ ನಕ್ಷತ್ರಗಳು ಆಕಾಶದಲ್ಲಿ ಹರಡಿಕೊಂಡು ಕಂಗೊಳಿಸಿ ದವು. ೨೩೫. ತಾಪಸರು ಸಾಯಂಕಾಲದಲ್ಲಿ ಕೊಡುವ ಅರ್ಘ್ಯಜಲದಿಂದ ತಟ್ಟನೆ ತೊಳೆದುಹೋದಂತೆ ಸಂಜೆಗೆಂಪು ಹರಿಯಿತು. ೨೩೬. ಸಂಧ್ಯೆಯೆಂಬ ಮಹಿಳೆಯು ತನ್ನ ಪತಿಯಾದ ಸೂರ್ಯನನ್ನೇ ತಾನೂ ಹಿಂಬಾಲಿಸಿದಳು. ಹೀಗೆ ಪತಿಯ ಜೊತೆಯಲ್ಲಿ ಸಹಗಮನ ಮಾಡಿದ ಸಂಧ್ಯೆಯನ್ನು ನೋಡಿ, ಅವಳ ಗೆಳತಿಯಾದ ನಿಶೆ ಯೆಂಬ ಮಹಿಳೆಗೆ ಬಹಳ ವ್ಯಥೆಯುಂಟಾಯಿತು. ಆಗ ಅವಳು ಸಂಸಾರದಲ್ಲಿ ಬಹಳ ಮಟ್ಟಿಗೆ ವಿರಕ್ತಿಯನ್ನು ಹೊಂದಿ ಅದರ ಗುರುತಾಗಿ ಕೃಷ್ಣಾಜಿನವನ್ನು ಹೊದ್ದು

ವಳಯೀಭೂತ ತಮಸ್ತಮಾಳಗಹನಂ ಸಾಷಾಢಸಪ್ತರ್ಷಿಸಂ
ಕುಳಸಂಪೂತವರುಂಧತೀಸ್ತುತಿನುತಂ ಮೂಲಾನ್ವಿತಂ ವ್ಯೋಮಮಂ
ಡಳಮಾಯ್ತಾಶ್ರಮಮೆಂದು ಬಂದೆಳಸಿದಂ ವೈರಾಗ್ಯದಿಂ ಧೌತವ
ಲ್ಕಲಶೋಭಾಂಬರನಂದು ಮಿತ್ರವಿರಹೋದ್ವೇಗಾತುರಂ ಚಂದ್ರಮಂ ೨೩೭

ಸುರನದಿಯವಗಾಹನದೆ ಸಿಂ
ಧುರಮೆಲ್ಲಂ ತೊಳೆದು ಪೋಗೆ ಪೊಳೆವಿಂದ್ರದಿಶಾ
ಕರಿಕುಂಭಮಂಡಳಕ್ಕೀಂ
ದೊರೆಯಾದುದೊ ಮಂಡಳಂ ನಿಶಾಧೀಶ್ವರನಾ ೨೩೮

ಕೊಂಡಿದ್ದಾಳೋ ಎಂಬಂತೆ ಎಲ್ಲೆಲ್ಲೂ ಕತ್ತಲೆಯು ವ್ಯಾಪಿಸಿತು. ೨೩೭. ಚಂದ್ರನಿಗೆ "ಮಿತ್ರವಿರಹದಿಂದ" (೧. ಸೂರ್ಯನ ಅಗಲುವಿಕೆಯಿಂದ, ೨. ಗೆಳೆಯನ ಅಗಲುವಿಕೆಯಿಂದ) ಬಹಳ ದುಃಖವುಂಟಾಯಿತು. ಆದ್ದರಿಂದಲೇ "ವೈರಾಗ್ಯ" (೧. ಹೆಚ್ಚು ಕೆಂಪು ೨. ವಿರಕ್ತಿ) ವುಂಟಾಯಿತು. ಬಳಿಕ "ಧೌತವಲ್ಕಲ ಶೋಭಾಂಬರ" ನಾದನು. (೧. ಒಗೆದು ಮಡಿಮಾಡಿರುವ ನಾರುಮಡಿಯಂತೆ ಶೋಭಿಸುವ ಆಕಾಶವುಳ್ಳವನು, ೨. ಒಗೆದು ಮಡಿಮಾಡಿರುವ ನಾರುಮಡಿಯ ಸೊಗಸಾದ ಬಟ್ಟೆಯನ್ನು ಧರಿಸಿದವನು). ಬಳಿಕ ಆಕಾಶವೆಂಬ ತಪೋವನಕ್ಕೆ ತನ್ನೊಂದು ಇಚ್ಛೆಯಿಂದ ಬಂದು ಸೇರಿದ್ದಾನೆ. ಆ ಆಕಾಶವೆಂಬ ತಪೋವನವು "ವಳಯೀಭೂತ ತಮಸ್ತಮಾಲಗಹನ" ವಾಗಿದೆ. (೧. ಸುತ್ತುವರಿಯಲ್ಪಟ್ಟಿರುವ ಹೊಂಗೇಮರದಂತಿರುವ ಕತ್ತಲೆಯಿಂದ ದಟ್ಟವಾಗಿದೆ. ೨. ಗುಂಪುಗುಂಪಾಗಿದ್ದು ಕತ್ತಲೆಯನ್ನುಂಟುಮಾಡುವ ಹೊಂಗೆತೋಪಿನಿಂದ ಕೂಡಿದೆ.) "ಸಾಷಾಢ ಸಪ್ತರ್ಷಿಸಂಕುಳಸಂಪೂತ"ವೆನಿಸಿದೆ. (೧. ಪೂರ್ವೋತ್ತರಾಷಾಢಾ ನಕ್ಷತ್ರಗಳಿಂದಲೂ, ಸಪ್ತರ್ಷಿಮಂಡಳದಿಂದಲೂ ಕೂಡಿದೆ. ೨. ಮುತ್ತುಗದ ದಂಡವನ್ನು ಹೊಂದಿರುವ ಬಂದು ಹೋಗುವ ಸಪ್ತರ್ಷಿಗಳಿಂದ ಪವಿತ್ರವಾಗಿದೆ). "ಅರುಂಧತೀಸ್ತುತಿನುತ"ವಾಗಿದೆ. (೧. ಅರುಂಧತೀಸ್ತೋತ್ರರೂಪವಾದ ವೇದಮಂತ್ರಗಳಿಂದ ಹೊಗಳಲ್ಪಟ್ಟಿದೆ. ೨. ಅರುಂಧತಿಯ ಹೊಗಳುವಿಕೆಯಿಂದ ಪ್ರಶಸ್ತವಾಗಿದೆ) ಮತ್ತು "ಮೂಲಾನ್ವಿತ"ವಾಗಿದೆ. (೧. ಮೂಲಾನಕ್ಷತ್ರದಿಂದ ಕೂಡಿಕೊಂಡಿದೆ. ೨. ಗೆಡ್ಡೆಗೆಣಸುಗಳಿಂದ ಕೂಡಿಕೊಂಡಿದೆ.) ಟಿ॥ ಇಲ್ಲಿ ಆಕಾಶಕ್ಕೂ ತಪೋವನಕ್ಕೂ ಶ್ಲೇಷೆಯಿಂದ ಸಮಾನ ಧರ್ಮವನ್ನು ತಂದು ಆಕಾಶವೇ ತಪೋವನವೆಂದು ರೂಪಣೆ ಮಾಡಿದ್ದಾನೆ. ೨೩೮. ಆಕಾಶಗಂಗೆಯಲ್ಲಿ ಸ್ನಾನಮಾಡುವಿಕೆಯಿಂದ ಲೇಪಿಸಿದ್ದ ಸಿಂದೂರವೆಲ್ಲವೂ ತೊಳೆದುಹೋಗಲಾಗಿ ಪ್ರಕಾಶಿಸುವ ಐರಾವತದ ಕುಂಭಸ್ಥಳದಂತೆ ಚಂದ್ರಬಿಂಬವು ಕಾಣು

ಪ್ರಾಲೇಯಾಂಶುವಿಭೂಷಿತಂ ತರಳತಾರಾನೀಕ ಕಾಪಾಲಮಾ
ಲಾಲಂಕಾರಮೆನಲ್ಕೆ ಸಂದುದಯ ಶಂಭುವ್ಯೋಮ ಶೀರ್ಷಾಗ್ರದಿಂ
ಭೂಲೋಕಕ್ಕಿಳಿತಂದುದುಜ್ವಳಿಸುತಂ ದಿಕ್ಚಕ್ರಮಂ ಚಂದ್ರಿಕಾ
ಜಾಳಂ ದೇವನದೀಪ್ರವಾಹದವೊಲತ್ಯಾಶ್ಚರ್ಯಮಪ್ಪನ್ನೆಗಂ ೨೯೯

ಕುಳಿರ್ವಿಂದುವೆಂಬ ತಿಳಿಗೊಳ
ದೊಳಗೊಯ್ಯನೆ ಚಂದ್ರಿಕಾಂಬುವಂ ಕುಡಿಯಲ್ಕೆಂ
ದೊಳವೊಕ್ಕ ಮರ್ದಿನ ಕೋಟೆಗ್ಗಿಸ
ಱಿಸೊಳಟ್ಟುದೆನಿಸಿತ್ತು ನಿಭೃತಚರಣಂ ಹರಿಣಂ ೨೫೦

ಸುರಿವ ತುಷಾರದೊಳ್ಬೆರೆದರಲ್ವ ಸಿತಾಂಬುಜದಿವ್ಯಗಂಧದೊಳ್
ಪೊರೆದು ಮರಲ್ದು ತೂಂಕಡಿಪ ವನ್ಯಮೃಗಂಗಳ ಮಗ್ಗುಲೊಳ್ ತೆರಂ
ದಿರಿದು ಹಿಮಾಂಶುರಶ್ಮಿಗಳಿನುಜ್ವಳಿಸಿರ್ದುಟಜಾಂಗಣಂಗಳೊಳ್
ಪರಿದೆಸಗಿತ್ತತಿಪ್ರಮದಕಾರಣನೆಂದು ನಿಶಾಸಮೀರಣಂ ೨೫೧

ತ್ತಿತ್ತು. ೨೪೯. ಚಂದ್ರನಿಂದ ಅಲಂಕರಿಸಲ್ಪಟ್ಟಿರುವ, ಚಲಿಸುತ್ತಿರುವ ನಕ್ಷತ್ರಪುಂಜ ವೆಂಬ ಕಪಾಲಮಾಲಿಕೆಯಿಂದ ಶೋಭಿಸುತ್ತಿರುವ ಏಳಿಗೆಹೊಂದಿರುವ ಪರಮೇಶ್ವರ ನೆಂಬ ಆಕಾಶದ ಮೇಲಿಂದ ದಿಗಂತರಾಳವನ್ನು ಪ್ರಕಾಶಪಡಿಸುತ್ತಾ ದೇವಗಂಗಾನದಿಯ ಪ್ರವಾಹದಂತೆ ಇರುವ ಬೆಳದಿಂಗಳು ಅತ್ಯಾಶ್ಚರ್ಯವಾಗುವಂತೆ ಭೂಮಿಗೆ ಇಳಿದುಬಂತು. ಟಿ॥ ಆಕಾಶವೂ ಚಂದ್ರನಿಂದ ಅಲಂಕರಿಸಲ್ಪಟ್ಟಿದೆ. ಶಿವನ ತಲೆಯಲ್ಲೂ ಚಂದ್ರನಿದ್ದಾನೆ. ಆಕಾಶದಲ್ಲಿ ನಕ್ಷತ್ರಗಳಿವೆ. ಶಿವನ ತಲೆಯಲ್ಲಿ ಕಪಾಲಮಾಲೆಯಿದೆ. ಗಂಗಾನದಿಯು ಶಿವನ ತಲೆಯಿಂದ ಬೀಳುವಂತೆ ಬೆಳದಿಂಗಳು ಆಕಾಶದಿಂದ ಬೀಳುತ್ತದೆ. ೨೫೦. ಚಂದ್ರ ಮಂಡಲದ ಮಧ್ಯದಲ್ಲಿ ಜಿಂಕೆಯೊಂದು ಇರುವುದಷ್ಟೆ! ಅದು ಚಂದ್ರನೆಂಬ ತಿಳಿಗೊಳ ದಲ್ಲಿ ಬೆಳದಿಂಗಳೆಂಬ ನೀರನ್ನು ಕುಡಿಯುವುದಕ್ಕೆಂದು ಒಳಹೊಕ್ಕು ಅಮೃತವೆಂಬ ಗಟ್ಟಿ ಯಾದ ಕೆಸರಿನಲ್ಲಿ ಹೂತುಕೊಂಡ ಕಾಲುಳ್ಳದ್ದೋ ಎಂಬಂತೆ ಕಾಣಿಸುತ್ತಿತ್ತು. ೨೫೧. ಸುರಿಯುತ್ತಿರುವ ಮಂಜಿನಲ್ಲಿ ಸೇರಿಕೊಂಡು ಅರಳಿರುವ ಕನ್ನೈದಿಲೆಯ ಸೊಗಸಾದ ಪರಿ ಮಳದಿಂದ ವೃದ್ಧಿಹೊಂದಿ ತೂಕಡಿಸುತ್ತಿರುವ ಕಾಡುಮೃಗಗಳ ಪಕ್ಕದಲ್ಲಿ ಅವಕಾಶ ಮಾಡಿಕೊಂಡು, ಬೆಳದಿಂಗಳಿನಿಂದ ಪ್ರಕಾಶಿಸುತ್ತಿರುವ ಪರ್ಣಶಾಲೆಯ ಒಳಭಾಗದಲ್ಲಿ ಆವ ರಿಸಿಕೊಂಡು ಬಹಳ ಆನಂದವನ್ನುಂಟುಮಾಡುವ ರಾತ್ರಿಯ ಗಾಳಿಯು ಬೀಸುತ್ತಿತ್ತು.

ಅಂದಾ ಬೆಳ್ದಿಂಗಳೊಳಾ
ನಂದದಿನಾಂಬೆರಸು ಮುನಿಸಮಾಜಸಮೇತಂ
ತಂದೆಯ ಕೆಲಕ್ಕೆ ಮೆಲ್ಲನೆ
ಬಂದಂ ಹಾರೀತನುಚಿತ ವಿನಯೋಪೇತಂ ೨೪೨

ವ॥ ಆಗಳಾ ಜಾಲಪಾದನೆಂಬ ಶಿಷ್ಯಂ ತಾಳವೃಂತದಿಂ ಬೀಸುತ್ತಿರೆ ಸನ್ನಿಧಿಕೃತವೇತ್ರಾಸನರಾಗಿರ್ದ ಗುರುಗಳನೆಂದಂ–ನೀವೀ ವಿಹಂಗಶಿಶುವಿನ ವೃತ್ತಾಂತಮನಿರುಳ್ ಬೆಸಸಿದಪೆವೆಂದುದಱಿಂ ಮುನಿಸಮಾಜಂ ತತ್ಕಥಾಶ್ರವಣತತ್ಪರಮಾಗಿರ್ದುದೆಂಬುದುಂ ಜಾಬಾಲಿ ಮಹಾಮುನಿಗಳ್ ಪೇಟಲ್ ತಗುಳ್ದರದೆಂತೆನೆ

## ಕಥಾವತರಣಂ

ಸಮಾಪ್ತಂ

೨೪೨. ಅಂತಹ ಬೆಳ್ದಿಂಗಳಲ್ಲಿ ಹಾರೀತನು ಆನಂದದಿಂದ ನನ್ನನ್ನೂ ತೆಗೆದುಕೊಂಡು, ಮುನಿಗಳಿಂದ ಕೂಡಿ ಉಚಿತವಾದ ವಿನಯದಿಂದ ಶೋಭಿಸುತ್ತಾ ಮೆಲ್ಲನೆ ತಂದೆಯ ಹತ್ತಿರಕ್ಕೆ ಬಂದನು. ವ॥ ಅಲ್ಲೇ ಒಂದು ಬೆತ್ತದ ಪೀಠದಲ್ಲಿ ಕುಳಿತಿದ್ದ ತಂದೆಯನ್ನು ಕುರಿತು, “ಅಪ್ಪಾಜಿ, ತಾವು ಈ ಗಿಳಿಮರಿಯ ವೃತ್ತಾಂತವನ್ನು ರಾತ್ರಿ ಹೇಳುತ್ತೇವೆಂದು ಹೇಳಿದ್ದರಿಂದ ಮುನಿಗಳೆಲ್ಲರೂ ಆ ಕಥೆಯನ್ನು ಕೇಳಬೇಕೆಂಬ ಕುತೂಹಲವುಳ್ಳವರಾಗಿದ್ದಾರೆ” ಎಂದು ಅರಿಕೆಮಾಡಿದನು. ಆಗ ಜಾಬಾಲಿ ಮಹರ್ಷಿಗಳು ಹೇಳಲು ಪ್ರಾರಂಭಿಸಿದರು. ಹೇಗೆಂದರೆ,

## ಕಥಾವತರಣ

ಮುಗಿಯಿತು

# ೨. ಚಂದ್ರಾಪೀಡನ ಜನನ ಮತ್ತು ಬಾಲ್ಯ

ಪ್ರಿಯದಿಂದೆ ಮಹಾಕಾಳಾ
ಹ್ವಯನೀಶಂ ನೆಲಸೆ ನಗರಿಯೊಂದಧಿಕಖ್ಯಾ
ತಿಯಿನೆಸೆದುತೋರ್ಪುದುಜ್ಜಯಿ
ನಿಯೆಂಬ ಪೆಸರಿಂದವಂತಿವಿಷಯಾಂತರದೊಳ್ ೧

ಇದು ಕೃತಯುಗಕ್ಕೆ ನೆಲೆಯೆನಿ
ಸಿದ ಬೇಱೊಂದವನಿಯೆಂದು ಬಂದಂಬುಧಿ ಸು
ತ್ತಿದುದೆನಿಸಿ ನಗರಿಯಂ ಬಳ
ಸಿದುದು ರಸಾತಳಗಭೀರ ಪರಿಖಾವಳಯಂ ೨

ಭವನಿಕ್ಕೆದಾಣಮೆಂದೊಂ
ದು ವಿಶೇಷಪ್ರೀತಿಯಿಂದೆ ಕೈಲಾಸನಗೇಂ
ದ್ರವೆ ಬಳಸಿದುದೆಂಬಂತಿರೆ
ಧವಳಪ್ರಾಕಾರಮಲ್ಲಿ ಸೊಗಯಿಸಿ ತೋರ್ಕುಂ ೩

೧. ಅವಂತಿಯೆಂಬ ದೇಶದಲ್ಲಿ ಉಜ್ಜಯಿನಿಯೆಂಬ ಪಟ್ಟಣವು ಶೋಭಿಸುತ್ತಿದೆ. ಅಲ್ಲಿ "ಮಹಾಕಾಲೇಶ್ವರ"ನೆಂಬ ಹೆಸರಿನಿಂದ ಪ್ರಸಿದ್ಧನಾದ ಪರಮೇಶ್ವರನು ಬಹಳ ಪ್ರೀತಿಯಿಂದ ಲಿಂಗರೂಪವನ್ನು ತಾಳಿ ನೆಲೆಸಿದ್ದಾನೆ. ಆದ್ದರಿಂದ ಆ ನಗರವು ಜಗತ್ತಿನಲ್ಲಿ ಸುಪ್ರಸಿದ್ಧವಾಗಿದೆ. ಟಿ. ಭರತಖಂಡದಲ್ಲಿ ಸುಪ್ರಸಿದ್ಧವಾಗಿರುವ ಹನ್ನೆರಡು ಜ್ಯೋತಿರ್ಲಿಂಗಗಳಲ್ಲಿ ಉಜ್ಜಯಿನಿಯ ಮಹಾಕಾಳೇಶ್ವರಲಿಂಗವೂ ಒಂದು. ಆದ್ದರಿಂದ ಅದು ಪುಣ್ಯಕ್ಷೇತ್ರವೆನಿಸಿ ಈಗಲೂ ದೊಡ್ಡ ಯಾತ್ರಾಸ್ಥಳವಾಗಿದೆ. ೨. ಪಾತಾಳದಷ್ಟು ಆಳವಾದ ಕಂದಕವು ಆ ಪಟ್ಟಣವನ್ನು ಸುತ್ತುವರಿದಿದೆ. ಈ ಪಟ್ಟಣವು ಕೃತಯುಗಕ್ಕೆ ಆಶ್ರಯಸ್ಥಾನವಾಗಿದೆ. ಆದರಿಂದ ಬೇರೊಂದು ಭೂಮಿಯೋ ಎಂಬಂತೆ ಕಾಣುತ್ತದೆ. ಆದ್ದರಿಂದಲೇ ಬೇರೊಂದು ಸಮುದ್ರವೇ ಬಂದು ಇದನ್ನು ಸುತ್ತಿಕೊಂಡಿದೆಯೊ ಎಂಬಂತೆ ಈ ಕಂದಕವು ಕಾಣುತ್ತಿದೆ. ೩. ಇದು ಮಹಾಕಾಲನೆಂಬ ಹೆಸರಿನಿಂದ ಪ್ರಸಿದ್ಧನಾದ ಪರಮೇಶ್ವರನ ವಾಸಸ್ಥಾನವೆಂಬೊಂದು ಮಮತೆಯಿಂದ ಕೈಲಾಸಪರ್ವತವೇ ಬಂದು ಈ ಪುರವನ್ನು ಸುತ್ತುವರಿದಿದೆಯೋ ಎಂಬಂತೆ ಅದರ ಬಿಳುಪಾದ ಕೋಟೆಯು

ಜಲಧಿಯನಗಸ್ತ್ಯನೀಂಟಲ್
ತೊಳಗಿದಪ್ಪುವು ತಳದೊಳಖಿಳ ನಾನಾ ರತ್ನಂ
ಗಳೆನಲ್ಕೆ ಸಕಲರತ್ನಂ
ಗಳ ಪಸರದಿನೆಸೆದುವಲ್ಲಿ ವಿಪಣಪದಂಗಳ್ ೪

ಸುತ ದನುಜ ಸಿದ್ಧ ವಿದ್ಯಾ
ಧರ ಕಿನ್ನರ ಪನ್ನಗೋಪಯುಕ್ತ ವಿಮಾನೋ
ತ್ಕರಮಲ್ಲಿ ಗಗನದಿಂದವ
ತರಿಸಿದುದೆನೆ ಚಿತ್ರಶಾಲೆಗಳ್ ಸೊಗಯಿಸುಗುಂ ೫

ಕ್ಷೀರಸಮುದ್ರಮಂಥನದಿಂದೆ ಪಾಂಡುರಮಂ ತಳೆದಿರ್ದ ಮಂದರಾ
ಕಾರಮನಾಂತು ಕಾಂಚನಮಯಾಮಳ ಸಾರಸಶೇಖರಾಗ್ರವಿ
ಸ್ತಾರಿ ಸಿತಧ್ವಜಂಗಳೆಲರಿಂ ನಿಮಿರಲ್ಕಮರಾಪಗಾಪಯಃ
ಪೂರಮನಾಂತ ಹೈಮನಗದಂತಿರೆ ದೇವಕುಲಂಗಳೊಪ್ಪುಗುಂ ೬

ವಿತತೋದಂಚತ್ಪತಾಕಾವಸನವಿಲಸಿತಃ ವಿದ್ರುಮೋತ್ತಂಭಿತಸ್ತಂ
ಭತತೋದ್ಯಚ್ಚಾಮರೌಘಾಂಚಿತಮನಿಲರಣತ್ಕಾಂತ ಸೌಭಾಗ್ಯ ಘಂಟಾ
ನ್ವಿತಮಾಗಿರ್ದೊಪ್ಪಮಂ ತಾಳ್ದಿದ ಮಕರಪತಾಕಾಳಿಯಿಂ ಕೋದು ದೇವಾ
ಯತನಂಗಳ್ ಸುತ್ತಲುಂ ಕತ್ತಲಿಸುವ ವನದಿಂ ರಂಜಿಸುತ್ತಿರ್ಪುವೆತ್ತಂ ೭

ಬಹಳ ಅಂದವಾಗಿ ಕಾಣಿಸುತ್ತಿದೆ. ೪. ಅಗಸ್ತ್ಯಮಹರ್ಷಿಯು ಸಮುದ್ರವನ್ನು ಕುಡಿದು ಬಿಟ್ಟನಲ್ಲ, ಆಗ ಸಮುದ್ರದ ಅಡಿಯಲ್ಲಿರುವ ಬಗೆಬಗೆಯ ರತ್ನಗಳು ಹೊಳೆಯುತ್ತಿವೆಯೋ ಎಂಬಂತೆ ಕಾಣುವ ವ್ಯಾಪಾರಕ್ಕಾಗಿ ಹರಡಿರುವ ವಿಧವಿಧವಾದ ರತ್ನಗಳಿಂದ ಅಲ್ಲಿನ ಅಂಗಡಿಬೀದಿಗಳು ಶೋಭಿಸುತ್ತಿದ್ದುವು. ೫. ದೇವತೆಗಳು, ದನುಜರು, ಸಿದ್ಧರು, ವಿಧ್ಯಾಧರರು, ಕಿನ್ನರರು, ನಾಗರು ಮೊದಲಾದ ದೇವತೆಗಳಿಗೆ ಉಪಯುಕ್ತವಾದ ವಿಮಾನಗಳ ಸಾಲು ಆಕಾಶದಿಂದ ಭೂಮಿಗೆ ಇಳಿದುಬಂದಿದೆಯೋ ಎಂಬಂತೆ ಇರುವ ಚಿತ್ರಶಾಲೆಗಳು ರಂಜಿಸುತ್ತಿದ್ದುವು. ೬. ಕ್ಷೀರಸಮುದ್ರವನ್ನು ಕಡೆಯುವುದರಿಂದ ಬೆಳ್ಳಗಾಗಿರುವ ಮಂದರಪರ್ವತದಂತೆ ಅಲ್ಲಿನ ಧವಳವರ್ಣದ ದೇವಸ್ಥಾನಗಳು ಶೋಭಿಸುತ್ತಿದ್ದುವು. ಅವುಗಳಿಗೆ ಚಿನ್ನದಿಂದ ಮಾಡಿದ ನಿರ್ಮಲವಾದ ಹಾಗೂ ಶ್ರೇಷ್ಠವಾದ ಕಳಶಗಳಿದ್ದುವು. ಆ ಕಳಶಗಳಮೇಲೆ ಬಿಳಿಬಾವುಟಗಳು ಗಾಳಿಯಿಂದ ಅಲ್ಲಾಡುತ್ತಿದ್ದುವು. ಇದರಿಂದ ಆ ದೇವಾಲಯಗಳು ದೇವಗಂಗಾನದಿಯ ಪ್ರವಾಹಗಳಿಂದ ಕೂಡಿಕೊಂಡಿರುವ ಹಿಮಾಲಯಪರ್ವತದಂತೆ ರಂಜಿಸುತ್ತಿದ್ದುವು. ೭. ಅಲ್ಲಿನ ದೇವಾಲಯಗಳು ಹಾರಾಡುವ ಅಗಲವಾದ ಬಾವುಟಗಳಿಂದ ಶೋಭಿಸುತ್ತಿದ್ದುವು. ಕಂಭಗಳಿಗೆ ಬಿಗಿದುಕಟ್ಟಿರುವ ಹವಳಗಳಿಂದ ತುಂಬಿರುವ ಚಾಮರಗಳು ಮೇಲಕ್ಕೆ ಎದ್ದು ಕಾಣುತ್ತ ರಮಣೀಯವಾಗಿದ್ದುವು. ಅವುಗಳಿಗೆ ಮಂಗಳಸೂಚಕವಾದ ಗಂಟೆಗಳನ್ನು ಕಟ್ಟಿದ್ದರು. ಅವು ಗಾಳಿಯಿಂದ ಅಲ್ಲಾಡುತ್ತಾ ರಮ್ಯವಾಗಿ ದನಿಗೈಯು

ಮುರಜಧ್ವಾನಗಭೀರಮಪ್ಪ ರವದಿಂದಂ ರತ್ನಧಾರಾಗೃಹೋ
ತ್ಕರಧಾರಾಳಿಗಳಿಂದ್ರಚಾಪಲತಿಕಾಸಂದೋಹಮೆಂಬಂದದಿಂ
ಸುರಿಯಲ್ ಸೋಗೆಯ ಚೆಲ್ವ ಕಣ್ದೆಱೆದುದೋ ಪೇೞೆಂಬಿನಂ ಪೀಲಿಗಳ್
ತರದಿಂ ಕಣ್ಗೊಳಿಸಲ್ಕೆ ನರ್ತಿಸುಗುಮುದ್ಯಾನಂಗಳೊಳ್ ಸೋಗೆಗಳ್ ೮

ಅನಿಮಿಷರಮಣೀಯಂಗಳ್
ವಿನಿದ್ರ ಕುಮುದಾಯುತೋಜ್ಜ್ವಳಂಗಳ್ ಕೇಳೀ
ವನದೊಳ್ ಸರೋವರಂಗಳ್
ನೆನೆಯಿಪುವು ಸಹಸ್ರನೇತ್ರನಯನೋತ್ಕರಮಂ ೯

ಮಿಸುಪ ಕದಳೀವನಂಗಳ
ಪಸುರಿಂ ಬಾಸಣಿಸಿ ದೆಸೆಗೆ ಪೊಸನುಣ್ಪಿಳಗಂ
ಪಸರಿಸುವ ದಂತವಲಭಿ
ಪ್ರಸರಂಗಳಿನೆಸೆದು ನಗರಿ ಸೊಗಯಿಸಿ ತೋರ್ಕುಂ ೧೦

ತ್ತಿದ್ದುವು ಮತ್ತು ಮೊಸಳೆಯ ಆಕಾರದಂತಿರುವ ಧ್ವಜಗಳಿಂದ ಕೂಡಿಕೊಂಡಿರುವ ಆ ದೇವಾಲಯಂಗಳು ಶೋಭಿಸುತ್ತಿದ್ದುವು. ದಟ್ಟವಾದ ದೇವೋದ್ಯಾನಗಳಿಂದ ಅವು ಸುತ್ತುವರಿಯಲ್ಪಟ್ಟಿದ್ದುವು. ೮. ಅಲ್ಲಿನ ಉದ್ಯಾನವನಗಳಲ್ಲಿ ರತ್ನನಿರ್ಮಿತವಾದ ಕಾರಂಜಿಮನೆಗಳಲ್ಲಿ ಮದ್ದಳೆಧ್ವನಿಯಂತೆ ಗಂಭೀರವಾಗಿ ಧ್ವನಿಗಯ್ಯುತ್ತ ಜಲಧಾರೆಗಳು ಸುರಿಯುತ್ತಿದ್ದುವು. ಆ ಜಲಧಾರೆಗಳು (ಸೂರ್ಯನ ಕಿರಣಗಳ ಸಂಪರ್ಕವನ್ನು ಹೊಂದಿ) ಕಾಮನಬಿಲ್ಲೋ ಎಂಬ ಸಂಶಯವನ್ನು ಉಂಟುಮಾಡುತ್ತಿದ್ದುವು. ಇದ ರಿಂದ ಮಳೆಗಾಲವು ಪ್ರಾರಂಭವಾಯಿತೆಂಬ ಭ್ರಾಂತಿಯಿಂದ ನವಿಲುಗಳು ಕುಣಿಯು ತ್ತಿದ್ದುವು. ಹೀಗೆ ಜಾಗರವಾಡುವಾಗ ಗರಿಗಳನ್ನು ಬಿಚ್ಚಿಕೊಂಡಿದ್ದುವು. ಆಗ ಗರಿಯ ಸೊಬಗೇ ಕಣ್ಣು ತೆರೆದುಕೊಂಡಿರುವಂತೆ ಗರಿಯ ಕಣ್ಣುಗಳು ಶೋಭಿಸುತ್ತಿದ್ದುವು. ೯. ಅಲ್ಲಿನ ಕ್ರೀಡಾವನದಲ್ಲಿದ್ದ ಸರೋವರಗಳು ಇಂದ್ರನ ಸಾವಿರಾರು ಕಣ್ಣುಗಳನ್ನು ನೆನಪಿಗೆ ತರುತ್ತಿದ್ದುವು. ಹೇಗೆಂದರೆ, ಎರಡೂ "ಅನಿಮಿಷರಮಣೀಯಂಗಳ್" (೧. ಮೀನುಗಳಿಂದ ಸುಂದರವಾಗಿ, ೨. ರೆಪ್ಪೆಯಿಲ್ಲದೆ ಸುಂದರವಾಗಿ) ಇದ್ದುವು. ಹಾಗೆಯೆ ಎರಡೂ "ವಿನಿದ್ರ ಕುಮುದಾಯುತೋಜ್ಜ್ವಳಂಗಳ್ (೧. ಅರಳಿರುವ ಅಸಂ ಖ್ಯಾತ ನೈದಿಲೆಗಳಿಂದ ಪ್ರಕಾಶಮಾನವಾಗಿ, ೨. ಅರಳಿರುವ ಅಸಂಖ್ಯಾತ ನೈದಿಲೆ ಗಳಂತೆ ಪ್ರಕಾಶಮಾನವಾಗಿ) ಶೋಭಿಸುತ್ತಿದ್ದುವು. ೧೦. ಆ ಪಟ್ಟಣವು ದಂತಮಯ ವಾದ ಚಂದ್ರಶಾಲೆಗಳಿಂದ ಕೂಡಿಕೊಂಡು ಸೊಗಸಾಗಿ ಕಾಣುತ್ತಿತ್ತು. ಆ ಚಂದ್ರ ಶಾಲೆಗಳ ಸುತ್ತಲೂ ಬಾಳೆಯಮರಗಳು ದಟ್ಟವಾಗಿ ಬೆಳೆದಿದ್ದುವು. ಅವುಗಳ ಪಸಿರು ಕಾಂತಿಯಿಂದ ಮಿಳಿತವಾದ ಚಂದ್ರಶಾಲೆಗಳ ಧವಳಕಾಂತಿಯು ಸುತ್ತಲೂ

ಪದಪಿಂದಂ ತಾಳ್ದಿ ನಿಂದಳ್ ಗಗನನದಿ ಮಹಾಕಾಳ ದೇವೋತ್ತಮಾಂಗಾ
ಗ್ರದೊಳೆಂಬೊಂದೀರ್ಷೆಯಿಂದಂ ಭ್ರುಕುಟಿಗಳಿವೆ ಪೊಣ್ಮುತ್ತಮಿರ್ದಪ್ಪವೆಂಬಂ
ದದೆ ಮಾದ್ಯನ್ಮಾಳವೀ ಪೀವರಕುಚಕಲಶಾಲೋಲಕಲ್ಲೋಲದಿಂದಂ
ಪುದಿದೊಪ್ಪಂಬೆತ್ತ ಶಿಪ್ರಾನದಿ ಬಳಸಿರಲುಜ್ಜೈನಿ ಕಣ್ಗೊಪ್ಪಿ ತೋರ್ಕುಂ ೧೧

ತರದಿಂದಂ ವ್ಯೋಮದಿಂ ಬೆಳ್ಮುಗಿಲೊಗೆದುವೆನಲ್ ತೋರ್ಪ ಸೌಧಂಗಳೊಳ್ ಸುಂ
ದರಿಯರ್ ಪಾಡುತ್ತಿರಲ್ ಸೋಲ್ತವೊಲೆಳಸಿ ರಥಾಶ್ವವ್ರಜಂ ಮುಂದೆ ಮುಗ್ಗು
ತ್ತಿರೆ ಚಂಚದ್ವೈಜಯಂತೀಪಟವೆಳಲೆ ಮಹಾಕಾಳದೇವಂಗೆ ನಿಚ್ಚಂ
ಪಿರಿದಂ ಸದ್ಭಕ್ತಿಯಿಂ ಬಂದೆಱಗುವ ತೆಱದಿಂ ತೋರ್ಪನಂಭೋಜಮಿತ್ರಂ ೧೨

ಅಗಲವು ಚಕ್ರವಾಕಮಿಥುನಾವಳಿ ದೀಪನಿಕಾಯಕಾಂತಿಗಳ್
ಮಿಗಿಲೆನೆ ವಾರಕಾಂತೆಯರ ಭೂಷಣಕಾಂತಿಯ ಕೆಂಬಿಸಿಲ್ಗಳಾ
ವಗಮೆಸೆಯುತ್ತಿರಲ್ ವಿಷಮಬಾಣನ ತೀವ್ರ ಶರಾನಳಾರ್ಚಿಗಳ್
ತಗುಳ್ದುವೆನಲ್ಕೆ ತೋರ್ಪುವು ತಮಸ್ವಿನಿಗಳ್ ವಿಧುವಿಪ್ರಲಂಭದಿಂ ೧೩

ಪ್ರಸರಿಸಿತ್ತು. ೧೧. ಆ ಉಜ್ಜಯಿನೀನಗರದ ಸುತ್ತಲೂ ಸಿಪ್ರಾ ಎಂಬ ನದಿಯು ಹರಿಯುತ್ತಿದೆ. ಆ ನದಿಗೆ ಯೌವನದಿಂದ ಕೊಬ್ಬಿದ ಮಾಳವದೇಶದ ಮಹಿಳೆಯರು ಸ್ನಾನಕ್ಕಾಗಿ ಬರುತ್ತಿದ್ದರು. ಅವರ ಕೋರಮೊಲೆಗಳಿಂದ ಆಲೋಡಿತವಾದ ಅಲೆಗಳು ಚಲಿಸುತ್ತಿದ್ದುವು. ಅವು ಗಂಗಾನದಿಯು ಸಂಭ್ರಮದಿಂದ ಮಹಾಕಾಳೇಶ್ವರನ ತಲೆಯಮೇಲೆ ಮೆರೆಯುತ್ತಿದ್ದಾಳಲ್ಲ! ಎಂಬ ಒಂದು ಸ್ತ್ರೀಸಹಜವಾದ ಅಸೂಯೆಯಿಂದ ಸಿಪ್ರಾನದಿಯು ತೋರ್ಪಡಿಸುತ್ತಿರುವ ಹುಬ್ಬುಗಂಟುಗಳೋ ಎಂಬಂತೆ ಕಾಣುತ್ತಿದ್ದುವು. ೧೨. ಅಲ್ಲಿನ ಆಕಾಶದಲ್ಲಿ ಬಿಳಿಮೋಡಗಳು ಗುಂಡ್ಡೆಕಟ್ಟಿಕೊಂಡು ನಿಂತಿವೆಯೋ ಎಂಬಂತೆ ಕಾಣುತ್ತಿರುವ ಶುಭ್ರವಾದ ಹಾಗೂ ಎತ್ತರವಾದ ಉಪ್ಪರಿಗೆಮನೆಗಳಲ್ಲಿ ಸುಂದರಿಯರು ಹಾಡುತ್ತಿದ್ದರು. ಅವರ ಸಂಗೀತ ಮಾಧುರ್ಯಕ್ಕೆ ಮನಸೋತು ಸೂರ್ಯನ ಕುದುರೆಗಳು ಕೆಳಮುಖವಾಗಿ ಬಗ್ಗುತ್ತಿದ್ದುವು. ಆಗ ಅಲ್ಲಾಡುತ್ತಿರುವ ಬಾವುಟದ ಬಟ್ಟೆಯು ಕೆಳಗೆ ಜೋಲಾಡುತ್ತಿತ್ತು. ಇದರಿಂದ ಸೂರ್ಯದೇವನು ಮಹಾಕಾಳೇಶ್ವರನಿಗೆ ಬಹಳ ಭಕ್ತಿಯಿಂದ ನಮಸ್ಕರಿಸುತ್ತಿರುವಂತೆ ತೋರುತ್ತಿತ್ತು. ೧೩. ಆ ಪಟ್ಟಣದಲ್ಲಿ ರಾತ್ರಿಯಕಾಲದಲ್ಲಿ ದೀಪದ ಬೆಳಕು ಅತ್ಯಧಿಕವಾಗಿ ಎಲ್ಲೆಲ್ಲೂ ಹರಡಿಕೊಂಡಿತ್ತು. ಇದರಿಂದ ಚಕ್ರವಾಕದಂಪತಿಗಳು ಸೂರ್ಯನು ಇನ್ನೂ ಮುಳುಗಿಲ್ಲವೆಂದು ಭಾವಿಸಿಕೊಂಡು ಒಂದನ್ನೊಂದು ಅಗಲುತ್ತಿರಲಿಲ್ಲ. ಅಲ್ಲಿನ ಸೂಳೆಯರ ಒಡವೆಗಳ ಕೆಂಬಿಸಿಲಿನಂತಿರುವ ಕಾಂತಿ ಒಂದೇಸಮನೆ ಹೊಮ್ಮುತ್ತಿರಲಾಗಿ ಚಂದ್ರನ ವಿರಹದಿಂದ ಪರಿತಪಿಸುತ್ತಿರುವ ರಾತ್ರಿಯು ಮನ್ಮಥನ ತೀವ್ರವಾದ ಬಾಣಾಗ್ನಿಯಿಂದ ಆವರಿಸಲ್ಪಟ್ಟಿರುವಂತೆ ಕಾಣುತ್ತಿತ್ತು. ಟಿ. ರಾತ್ರಿಯಲ್ಲಿ ಚಕ್ರವಾಕದಂಪತಿಗಳು ಒಂದನ್ನೊಂದು ಅಗಲಿ ವ್ಯಥೆಯನ್ನು ಅನುಭವಿಸುತ್ತವೆ ಎಂಬುದು ಕವಿಸಮಯ.

ತೊಳಗುವ ಮಾಳವೀಮುಖ ಸರೋರುಹಕಾಂತಿಗೆ ಸೋಲ್ತು ಚಂದ್ರಮಂ
ಡಳದ ಕಳಂಕಮಂ ಕಳೆದಪಳ್ ನಗರೀಲಲಿತಾಂಗಿ ನಿಳ್ಕಿ ತೋ
ಳ್ಗಳಿನೆನೆ ಕೂಡೆ ಕಣ್ಗೊಳಿಸಿ ತೋರ್ಪುವು ಮಂದನಿಶಾಸಮೀರ ಸಂ
ಚಳನಚಳದ್ದುಕೂಲಪಟಪಲ್ಲವರಾಜಿತ ಕೇತನಾಳಿಗಳ್ ೧೪

ಎಳವೆಂಡಿರ್ ನೆಲೆವಾಡದೊ
ಳೆಳಸಿರೆ ನಡೆನೋಡಿ ಸೋಲ್ತುವೊಲ್ ಚಂದ್ರಂ ಮಾ
ರ್ಪೊಳೆವ ನೆವದಿಂ ಪೊರಳ್ವಂ
ಮಳಯುಜರಸಸಿಕ್ತ ರತ್ನಕುಟ್ಟಿಮತಳದೊಳ್ ೧೫

ವ॥ ಮತ್ತಂ ತರಳತೆ ಹಾರಂಗಳೊಳ್ ದ್ವಂದ್ವವಿಯೋಗಂ ಜಕ್ಕವಕ್ಕಿಗಳೊಳ್ ವರ್ಣಪರೀಕ್ಷೆ ಕನಕಂಗಳೊಳ್ ಚಂಚಲತ್ವಂ ಧ್ವಜಪತಾಕೆಗಳೊಳ್ ಮಿತ್ರದ್ವೇಷಂ ಕುಮುದಂಗಳೊಳಲ್ಲದಿಲ್ಲವೆಲ್ಲಿಯುಂ

೧೪. ಆ ಪಟ್ಟಣದಲ್ಲಿ ರಾತ್ರಿಯ ವೇಳೆಯಲ್ಲಿ ಗಾಳಿಯ ಬೀಸುವಿಕೆಯಿಂದ ಚಿಗುರಿನಂತೆ ನವಿರಾದ ಬಾವುಟದ ಬಟ್ಟೆಗಳು ಅಲ್ಲಾಡುತ್ತಿದ್ದುವು. ಇದನ್ನು ನೋಡಿದರೆ, ಈ ನಗರಿಯೆಂಬ ಮಹಿಳೆಯು ತನ್ನ ಪಟ್ಟಣದಲ್ಲಿ ವಾಸಿಸುತ್ತಿರುವ ಮಾಳವಸುಂದರಿಯರ ಮುಖಕಮಲದ ಶೋಭೆಗೆ ಸೋತು ಕಳಂಕವನ್ನು ಹೊಂದಿರುವ ಚಂದ್ರನ ಆ ಕಳಂಕವನ್ನು ತನ್ನ ತೋಳುಗಳನ್ನು ಚಾಚಿ ಒರೆಸುತ್ತಿದ್ದಾಳೋ ಎಂಬಂತೆ ಕಾಣುತ್ತಿತ್ತು. ೧೫. ಅಲ್ಲಿ ಗಂಧೋದಕವನ್ನು ಚಿಮುಕಿಸಿ, ರತ್ನದ ನೆಲಗಟ್ಟುಗಳನ್ನು ಸ್ವಚ್ಛಗೊಳಿಸಿದ್ದರು. ಅವುಗಳಲ್ಲಿ ಚಂದ್ರನ ಬಿಂಬವು ಪ್ರತಿಬಿಂಬಿಸಿತ್ತು. ಇದರಿಂದ ಅಲ್ಲಿನ ಮಹಡಿಗಳಲ್ಲಿ ಮಂಡಿಸಿರುವ ತರುಣಿಯರ ಚೆಲುವಿಗೆ ಪರವಶನಾದ ಚಂದ್ರನು ಕೆಳಗೆ ಬಂದು ಅವರ ಪಾದತಳದಲ್ಲಿ ಹೊರಳಾಡುತ್ತಿದ್ದಾನೋ ಎಂಬಂತೆ ಕಾಣುತ್ತಿತ್ತು. ವ॥ ತರಳತೆಯು (೧. ಮಧ್ಯಮಣಿಯಿರುವಿಕೆ, ೨. ಚಪಲಸ್ವಭಾವ) ಹಾರದಲ್ಲಿ ಮಾತ್ರ ಇತ್ತು. ದ್ವಂದ್ವವಿಯೋಗವು (೧. ಹೆಣ್ಣು ಗಂಡು ಪಕ್ಷಿಗಳ ಅಗಲುವಿಕೆ, ೨. ಗಂಡ ಹೆಂಡಿರ ವಿರಹ) ಚಕ್ರವಾಕಪಕ್ಷಿಗಳಲ್ಲಿ ಮಾತ್ರ ಇತ್ತು. ವರ್ಣಪರೀಕ್ಷೆಯು (೧. ಬಣ್ಣವನ್ನು ಒರೆಹಚ್ಚುವುದು ೨. ಇವನು ಶುದ್ಧಜಾತಿಯವನೆ, ಅಲ್ಲವೆ ಎಂಬ ಚರ್ಚೆ) ಚಿನ್ನದಲ್ಲಿ ಮಾತ್ರ ಇತ್ತು. ಚಂಚಲತ್ವವು (೧. ಅಲುಗಾಡುವಿಕೆ ೨. ಚಪಲಸ್ವಭಾವ) ಬಾವುಟದಲ್ಲಿ ಮಾತ್ರ ಇತ್ತು. ಮಿತ್ರದ್ವೇಷವು (ಸೂರ್ಯನ ಮೇಲೆ ದ್ವೇಷ ೨. ಸ್ನೇಹಿತರ ಮೇಲೆ ವೈರ) ಕನ್ನೈದಿಲೆಗಳಲ್ಲಿ ಮಾತ್ರ ಇತ್ತು. ಈ ಪಟ್ಟಣದಲ್ಲಿ ಇನ್ನು ಎಲ್ಲೂ

ಸ್ಮರಭಸ್ಮಾಲಂಕೃತಾಂಗಂ ರತಿವಲಯುಸಮಭ್ಯರ್ಚಿತಾಂಘ್ರಿದ್ವಯಂ ಭೀ
ಕರಶೂಲೋದ್ದಾರಿತಾಂಧಾಸುರ ನಗತನಯಾನೂಪುರೋದ್ಘೃಷ್ಟಜೂಟಂ
ಸುರವಂದ್ಯಂ ಸಂದ ಕೈಲಾಸಮುಮೆನಿಸಿ ನಿಂದಂ ಮಹಾಕಾಳನಾಮಂ
ಗಿರಿಶಂ ತಾನೆಂದೊಡುಜ್ಜೈನಿಯ ಮಹಿಮೆಯನೇಂ ಬಣ್ಣಿಸಲ್ ಬಲ್ಲನಾವಂ ೧೬

ವ|| ಅಂತಾ ನಗರಿಯೊಳ್ ನೃಗ ನಹುಷ ಯುಯಾತಿ ದುಂದುಮಾರ ಭಗೀರಥಪ್ರತಿಮನುಂ ನಿಜಭುಜಾರ್ಜಿತ ಭೂಮಂಡಲನುಂ ಫಲಿತಶಕ್ತಿತ್ರಯನುಂ ನೀತಿಶಾಸ್ತ್ರಾಭಿಪ್ರಾಯಬುದ್ಧಿಯುಮಧಿಗತ ಧರ್ಮಶಾಸ್ತ್ರನುಮನೇಕಸಪ್ತತಂತುಪೂತಮೂರ್ತಿಯುಮುಪಶಮಿತ ಜಗದುಪಪ್ಲವನುಮೆನಿಸಿ ಮಕರಧ್ವಜನಂತೆ ಸದಾಸನ್ನವಿಗ್ರಹನುಂ ದಶರಥನಂತೆ ಸುಮಿತ್ರೋಪೇತನುಂ ನಾಗರಾಜನಂತೆ ಕ್ಷಮಾಗುರುವುಂ ನರ್ಮದಾಪ್ರವಾಹದಂತೆ ಮಹಾವಂಶಪ್ರಭವನುಂ ಧರ್ಮಾವ

ಇರಲಿಲ್ಲ. ೧೬. ಮನ್ಮಥನ ಬೂದಿಯಿಂದ ಅಲಂಕರಿಸಲ್ಪಟ್ಟ ದೇಹವುಳ್ಳ, (ಅಂಗಲಾಚಿ ಬೇಡುತ್ತಿರುವ) ರತಿಯ ಕೈಯಿಂದ ಜಾರುತ್ತಿರುವ ಬಳೆಗಳಿಂದ ಪೂಜಿಸಲ್ಪಟ್ಟ ಪಾದಗಳುಳ್ಳ, ಭಯಂಕರವಾದ ಶೂಲದಿಂದ ಅಂಧಕಾಸುರನನ್ನು ಸೀಳಿದ, (ಪ್ರಣಯ ಕಲಹದಿಂದ ಮುನಿಸಿಕೊಂಡಿರುವ ಪಾರ್ವತಿಯನ್ನು ಸಮಾಧಾನಪಡಿಸಲು ಕಾಲಿಗೆ ಬಿದ್ದಾಗ) ಅವಳ ಕಾಲುಗಡಗದಿಂದ ಮರ್ದಿಸಲ್ಪಟ್ಟ ಜಡೆಗಂಟುಳ್ಳ ದೇವತೆಗಳಿಂದ ನಮಸ್ಕರಿಸಲ್ಪಡುವ ಮಹಾಕಾಳೇಶ್ವರನೆಂಬ ಹೆಸರುಳ್ಳ ಪರಮೇಶ್ವರನು ಕೈಲಾಸವೇ ಕೀಳು ಎಂದು ಭಾವಿಸಿ ಇಲ್ಲಿಗೆ ಬಂದು ನೆಲೆಸಿದ್ದಾನೆ ಎಂದ ಬಳಿಕ ಈ ಉಜ್ಜಯಿನಿಯ ಮಹಿಮೆಯನ್ನು ವರ್ಣಿಸಲು ಯಾರಿಗೆ ತಾನೆ ಸಾಧ್ಯವಾದೀತು ? ವ|| ಹಾಗಿರುವ ಆ ಪಟ್ಟಣದಲ್ಲಿ ನೃಗ, ನಹುಷ, ಯುಯಾತಿ, ದುಂದುಮಾರ, ಭಗೀರಥರಿಗೆ ಸಮಾನನಾದ, ತನ್ನ ಬಾಹುಬಲದಿಂದಲೇ ಭೂಮಂಡಲವನ್ನೆಲ್ಲಾ ಗೆದ್ದಿರುವ, ಪ್ರಭುಶಕ್ತಿ, ಮಂತ್ರಶಕ್ತಿ ಉತ್ಸಾಹಶಕ್ತಿಗಳೆಂಬ ಮೂರು ಶಕ್ತಿಗಳ ಫಲವನ್ನು ಚೆನ್ನಾಗಿ ಅನುಭವಿಸುತ್ತಿರುವ, ನೀತಿಶಾಸ್ತ್ರಗಳಿಗೆ ಅನುಸಾರವಾದ ಬುದ್ಧಿಯುಳ್ಳ, ಧರ್ಮಶಾಸ್ತ್ರಗಳನ್ನು ಚೆನ್ನಾಗಿ ತಿಳಿದುಕೊಂಡಿರುವ, ಅನೇಕ ಯಜ್ಞಯಾಗಗಳನ್ನು ಮಾಡುವುದರಿಂದ ಪರಿಶುದ್ಧವಾದ ದೇಹವುಳ್ಳ, ಜಗತ್ತಿನ ಕಷ್ಟಕೋಟಲೆಗಳನ್ನು ಪರಿಹರಿಸುವ ಮಹಾನುಭಾವನಾದ ತಾರಾಪೀಡನೆಂಬ ಮಹಾರಾಜನಿದ್ದನು. ಅವನು ಮನ್ಮಥನಂತೆ "ಸದಾಸನ್ನವಿಗ್ರಹ" (೧. ಯಾವಾಗಲೂ ಯುದ್ಧವಿಲ್ಲದವನು, ೨. ಯಾವಾಗಲೂ ಶರೀರವಿಲ್ಲದವನು) ನಾಗಿದ್ದನು. ದಶರಥನಂತೆ "ಸುಮಿತ್ರೋಪೇತ" (೧. ಒಳ್ಳೆಯ ಸ್ನೇಹಿತರಿಂದ ಕೂಡಿಕೊಂಡವನು, ೨. ಸುಮಿತ್ರೆಯೆಂಬ ರಾಣಿಯಿಂದ ಕೂಡಿಕೊಂಡವನು) ನಾಗಿದ್ದನು. ಆದಿಶೇಷನಂತೆ "ಕ್ಷಮಾಗುರು" (೧. ತಾಳ್ಮೆಯಿಂದ ಹಿರಿಮೆಯನ್ನು ಗಳಿಸಿದವನು. ೨. ಭೂಮಿಯನ್ನು ತಲೆಯಮೇಲೆ ಹೊತ್ತಿರುವುದರಿಂದ ಬಹಳ ತೂಕವುಳ್ಳವನು) ವಾಗಿ

ತಾರನುಂ ಪುರುಷೋತ್ತಮಪ್ರತಿನಿಧಿಯುಮೆನಿಸಿದ ಮಹಾನುಭಾವಂ ತಾರಾಪೀಡನಿರ್ಪನಾತನ ಮಹಿಮೆಯಂ ಪೇಳ್ಕೊಡೆ

ಬಿಸುಟು ಸರೋಜಿನಿಗಳನೇ
ಳಿಸಿ ಮಾಧವವಿಪುಳವಕ್ಷಮಂ ವೀರನೃಪ
ವ್ಯಸನದಿನಾ ನೃಪನೊಳ್ ಸಂ
ತಸದಿಂದಂ ರಾಜ್ಯಲಕ್ಷ್ಮಿ ಸಲೆ ನೆಲಸಿರ್ಪಳ್ ೧೭

ರಾವಣನೊತ್ತಿ ಕಿಟ್ತ ರಜತಾದ್ರಿಯನಶ್ರಮದಿಂದವಾ ಮಹಾ
ದೇವನದೆಂತು ಮುನ್ನಿರಿಸಿದಂ ಸ್ಥಿರಮಾಗಿರಲಂತಶೇಷ ದೋ
ಷಾವಿಳಮಪ್ಪವೊಂದು ಕಲಿಕಾಲಮದಾದವೆ ಕೀಟ್ತ ಧರ್ಮಮಂ
ಭೂವರನಾವಗಂ ನಿಲಿಸಿದಂ ನಿಖಿಲಾವನಿರಕ್ಷಣಕ್ಷಮಂ ೧೮

ಪತಿಯಗಲ್ದ ವೇಗದಿಂ ದುಃ
ಖಿತೆಯಾಗಿರೆ ಕಂಡು ಕರುಣವಗ್ಗಲಿಸಲುಮಾ
ಪತಿ ಪಡೆದಂ ಮತ್ತಂ ರತಿ
ಪತಿಯನೆನುತ್ತಿರ್ಪುದವನಿ ಜಗದಧಿಪತಿಯಂ ೧೯

ದ್ದನು. ನರ್ಮದಾಪ್ರವಾಹದಂತೆ "ಮಹಾವಂಶಪ್ರಭವ" (೧. ದೊಡ್ಡ ವಂಶದಲ್ಲಿ ಹುಟ್ಟಿದವನು. ೨. ದೊಡ್ಡ ಬಿದಿರುಮೆಳೆಯಿಂದ ಹೊರಡುವುದು) ನಾಗಿದ್ದನು. ಮತ್ತು ಈ ಮಹಾರಾಜನು ಧರ್ಮಪುರುಷನ ಅವತಾರವೋ ಎಂಬಂತಿದ್ದನು. ಶ್ರೀಮನ್ನಾರಾಯಣನ ಪ್ರತಿನಿಧಿಯೆನಿಸಿಕೊಂಡಿದ್ದನು. ಅವನ ಮಹಿಮೆಯನ್ನು ಬಣ್ಣಿಸಬೇಕಾದರೆ, ೧೭. ರಾಜಲಕ್ಷ್ಮಿಯು ಪರಾಕ್ರಮಶಾಲಿಯಾದ ರಾಜನನ್ನು ಆಶ್ರಯಿಸಬೇಕೆಂಬ ಆಸಕ್ತಿಯಿಂದ ತಾನು ವಾಸವಾಗಿದ್ದ ಕಮಲವನ್ನು ಬಿಟ್ಟು ಶ್ರೀಮನ್ನಾರಾಯಣನ ವಿಸ್ತಾರವಾದ ವಕ್ಷಸ್ಥಳವನ್ನೂ ತಿರಸ್ಕರಿಸಿ ಈ ಮಹಾರಾಜನಲ್ಲಿ ಬಹಳ ಸಂತೋಷದಿಂದ ಸ್ಥಿರವಾಗಿ ನೆಲೆಸಿದ್ದಾಳೆ. ಟಿ. ರಾಜ್ಯಸಂಪತ್ತನ್ನು ಅದರ ಅಧಿದೇವತೆಯಾದ ಲಕ್ಷ್ಮಿಯೊಂದಿಗೆ ಅಭೇದಮಾಡಿ ವರ್ಣಿಸಿದ್ದಾನೆ. ೧೮. ಹಿಂದೆ ರಾವಣನು ಕೈಲಾಸಪರ್ವತವನ್ನು ಕಿತ್ತು ಎತ್ತಿದನು. ಪರಮೇಶ್ವರನು ಅನಾಯಾಸವಾಗಿ ರಾವಣನ ಸೊಕ್ಕನ್ನು ಅಡಗಿಸಿ ಮೊದಲಿನಂತೆಯೇ ಅದನ್ನು ಸ್ಥಿರವಾಗಿರುವಂತೆ ನಿಲ್ಲಿಸಿದನು. ಅದೇ ರೀತಿ ಸಮಸ್ತ ಭೂಮಂಡಲವನ್ನೂ ಆಳಲು ಸಮರ್ಥನಾದ ತಾರಾಪೀಡನು ಬಹಳ ಪಾಪದಿಂದ ಕಲುಷಿತವಾದ ಕಲಿಕಾಲವು ಕಿತ್ತು ಹಾಕಿರುವ ಧರ್ಮವನ್ನು ಶಾಶ್ವತವಾಗಿ ಸ್ಥಿರವಾಗಿ ನಿಲ್ಲುವಂತೆ ಮಾಡಿದ್ದಾನೆ. ೧೯. ಗಂಡನಾದ ಮನ್ಮಥನನ್ನು ಸುಟ್ಟುಹಾಕಲು ಪತಿಯ ವಿರಹದ ಅಳಲಿನಿಂದ ದುಃಖಿತೆಯಾದ ರತಿಯನ್ನು ನೋಡಿ ಕರುಣೆಯು ಉಕ್ಕಿ ಬರಲು ಆ ಗೌರೀಪತಿಯು ಬೇರೊಬ್ಬ ಮದನನನ್ನು ಸೃಷ್ಟಿಮಾಡಿದ್ದಾನೋ ಎಂದು ಆ ರಾಜನನ್ನು ನೋಡಿದ ಜನರು ಭಾವಿಸು

ದಿನಪೇಂದುಪ್ರಚಯಾದ್ರಿಯಿಂದೆ ಜಳದೇವೀವಂದ್ಯರಾಮಕ್ರಮಾಂ
ಕನಿಕಾಯಾಂಚಿತಸೇತು ಚಕ್ರಧರಕೇಯೂರದ್ವಯೋದ್ಘೃಷ್ಟಮಂ
ಥನಶೈಲಂ ಧನದಾಂಗನಾಭರಣ ಲಕ್ಷ್ಮೀಚುಂಕನದ್ಗಂಧಮಾ
ದನಮೆಂಬಿಂತಿವು ಮೇರೆಯಾಗೆ ತಳೆದಂ ಭೂಚಕ್ರಮಂ ಭೂಭುಜಂ ೨೦

ಮಂದರಗಿರೀಂದ್ರನಿಂದೊಗೆ
ತಂದ ಸುಧಾಸಿಂಧುಲೇಖೆಯೆನೆ ನಿಖಿಳ ಜಗ
ನ್ಮಂಡಳಮಂ ಧವಳಿಸಿದ
ತ್ತಿಂದೂಜ್ವಳಕೀರ್ತಿ ಕೀರ್ತಿನಾರಾಯಣನಾ ೨೧

ವನನಿಧಿಪರೀತ ವಿಶ್ವಾ
ವನಿಪತಿಯ ಮಹಾಪ್ರತಾಪದಿಂ ಜೀರ್ದಪಳೆಂ
ಬಿನೆಗಂ ಛತ್ರಚ್ಛಾಯೆಯ
ನಿನಿಸಗಲದೆ ರಾಜ್ಯಲಕ್ಷ್ಮಿ ಸಲೆ ನೆಲಸಿರ್ದಳ್ ೨೨

ವ॥ ಅಂತಾ ನರೇಂದ್ರನರಸುತನದೊಳ್ ವಿಪಕ್ಷತೆ ಗಿರಿಗಳೊಳ್ ಪರತ್ವಂ ಪ್ರತ್ಯಯಂಗಳೊಳ್ ಇದಿರಪ್ಪುದು ಕನ್ನಡಿಯೊಳ್ ದುರ್ಗಾಶ್ರಯಂ ಶೂಲಪಾಣಿಯೊಳ್ ಉದ್ವೃತ್ತತೆ ಧ್ವಜಂತ್ತಿದ್ದರಂ.

೨೦. ಪೂರ್ವದಿಕ್ಕಿನಲ್ಲಿ ಸೂರ್ಯ ಚಂದ್ರರು ಉದಯಿಸುವ ಬೆಟ್ಟವೂ (ಉದಯಪರ್ವತವು) ದಕ್ಷಿಣದಲ್ಲಿ ಸಮುದ್ರದೇವತೆಯಿಂದ ನಮಸ್ಕರಿಸಲ್ಪಡುವ ಶ್ರೀರಾಮನ ಹೆಜ್ಜೆಯ ಗುರುತುಗಳಿಂದ ರಮ್ಯವಾದ ಸೇತುವೆಯೂ, ಪಶ್ಚಿಮದಲ್ಲಿ ಸಮುದ್ರವನ್ನು ಕಡೆಯುವಾಗ ಶ್ರೀಮನ್ನಾರಾಯಣನ ತೋಳುಬಂದಿಗಳಿಂದ ತೀಡಲ್ಪಟ್ಟ ಮಂದರಪರ್ವತವೂ, ಉತ್ತರದಲ್ಲಿ ಕುಬೇರನ ಮಹಿಳೆಯರ ಆಭರಣಗಳ ಸಂಪತ್ತಿನಿಂದ ಹೊಳೆಯುತ್ತಿರುವ ಗಂಧಮಾದನ ಪರ್ವತವೂ ಎಲ್ಲೆಯಾಗಿರುವ ಭೂಮಂಡಲವನ್ನು ಆ ಚಕ್ರವರ್ತಿಯು ಆಳುತ್ತಿದ್ದನು. ೨೧. ಮಂದರಪರ್ವತದ ಕಡೆತದಿಂದ ಹುಟ್ಟಿದ ಚಂದ್ರನ ಕಳೆಯೋ ಎಂಬಂತಿರುವ, ವಿಷ್ಣುವಿನಂತೆ ಕೀರ್ತಿಶಾಲಿಯಾದ ಈ ರಾಜನ ಚಂದ್ರನಂತೆ ಬೆಳಗುವ ಕೀರ್ತಿಯು ಈ ಭೂಮಂಡಲವನ್ನೆಲ್ಲಾ ಬೆಳ್ಳಗಾಗಿಸಿತ್ತು. ೨೨. ಸಮುದ್ರದಿಂದ ಸುತ್ತುವರಿಯಲ್ಪಟ್ಟಿರುವ ಈ ಭೂಮಂಡಲಕ್ಕೆ ಅಧಿಪತಿಯಾದ ಆ ಮಹಾರಾಜನ ಮಹಾಪ್ರತಾಪವೆಂಬ ಬಿಸಿಲಿನಿಂದ ಹೆದರುತ್ತಾಳೋ ಎಂಬಂತೆ ರಾಜಲಕ್ಷ್ಮಿಯು ಅವನ ಬಿಳಿಯ ಕೊಡೆಯ ನೆರಳನ್ನು ಸ್ವಲ್ಪವೂ ಅಗಲದೆ ಚೆನ್ನಾಗಿ ನೆಲೆಸಿದ್ದಳು. ವ॥ ಮತ್ತು ಆ ರಾಜನ ರಾಜ್ಯಭಾರದಲ್ಲಿ "ವಿಪಕ್ಷತೆಯು" (೧. ರಕ್ಕೆಗಳಿಲ್ಲದಿರುವಿಕೆ, ೨. ಶತ್ರುತ್ವ) ಪರ್ವತಗಳಲ್ಲಿ ಮಾತ್ರ ಇತ್ತು. "ಪರತ್ವವು" (೧. ಪ್ರಕೃತಿಯ ಮುಂದೆ ಇರುವಿಕೆ. ೨. ಪರಕೀಯರುವೆಂಬ ಭಾವನೆ). ಅನ್ನು, ಇಂದ ಮುಂತಾದ ಪ್ರತ್ಯಯಗಳಲ್ಲಿ ಮಾತ್ರ ಇತ್ತು. "ಇದಿರಪ್ಪುದು" (೧. ಎದುರಾಗಿ ನಿಲ್ಲುವುದು ೨. ಎದುರಿಸಿ ನಿಲ್ಲುವುದು) ಕನ್ನಡಿಯಲ್ಲಿ ಮಾತ್ರ ಇತ್ತು. "ದುರ್ಗಾಶ್ರಯವು"

ಗಳೊಳ್ ದುಶ್ಶಾಸನಾಪರಾಧಂ ಭಾರತದೊಳ್ ದಂಡಗ್ರಹಣಂ ವಯಃಪರಿಣತಿಯೊಳ್ ವಕ್ರತೆ ವನಿತಾಕುಚಪತ್ರಂಗಳೊಳ್ ಬಂಧನಂ ಕುಸುಮಂಗಳೊಳ್ ತುಲಾರೋಹಣಂ ಗ್ರಹಂಗಳೊಳ್ ಆಯತಿಭಂಗಂ ಕೇಶನಖಂಗಳೊಳ್ ಮಲಿನಾಂಬರತ್ವಂ ಜಲದಾಗಮದೊಳ್ ತಾರಕೋದ್ಧರಣಂ ಕುಮಾರಸ್ತುತಿಯೊಳ್ ಗ್ರಹಣಂ ಚಂದ್ರಾರ್ಕರೊಳ್ ಶೂನ್ಯಗೃಹದರ್ಶನಂ ನೆತ್ತದೊಳಲ್ಲದಿಲ್ಲ ವೆಲ್ಲಿಯುಂ

> ಆ ತಾರಾಪೀಡಭೂಭೃತ್ಪತಿಗೆ ಸಕಳಶಾಸ್ತ್ರಾನ್ವಿತಂ ವಿಪ್ರವಂಶ
> ಖ್ಯಾತಂ ನೀತಿಪ್ರಯೋಗಪ್ರಭು ನಿಖಿಳ ದಯೋದಾರ ಗಾಂಭೀರ್ಯನಾ ಬಾ
> ಲ್ಯಾತಿಪ್ರೇಮಾದ್ರಚಿತ್ತಂ ನಿಶಿತಮತಿ ಮಹಾಸತ್ವವೃತ್ತಂ ತ್ರಿವರ್ಗೋ
> ಪೇತಂ ಷಾಡ್ಗುಣ್ಯಶೀಲಂ ವರಬುಧನಿವಹಸ್ತೋತ್ರಪಾತ್ರಂ ಪ್ರಶಸ್ತಂ ೨೩.

(೧. ಪಾರ್ವತಿಯ ಜೊತೆಯಲ್ಲಿರುವಿಕೆ, ೨. ಕೋಟೆಯನ್ನು ಆಶ್ರಯಿಸುವುದು) ಶಿವನಲ್ಲಿ ಮಾತ್ರ ಇತ್ತು. "ಉದ್ವೃತ್ತತೆಯು" (೧. ಎತ್ತರವಾಗಿ ಇರುವಿಕೆ. ೨. ನೀತಿಯನ್ನು ಬಿಟ್ಟು ಇರುವಿಕೆ) ಬಾವುಟಗಳಲ್ಲಿಮಾತ್ರ ಇತ್ತು. "ದುಶ್ಶಾಸನಾಪರಾಧವು" (೧. ದುಶ್ಶಾಸನನು ಮಾಡಿದ ತಪ್ಪು ೨. ಕೆಟ್ಟ ಆಳಿಕೆಯ ದೋಷವು) ಮಹಾಭಾರತದಲ್ಲಿ ಮಾತ್ರ ಇತ್ತು. "ದಂಡಗ್ರಹಣವು" (೧. ಕೋಲು ಹಿಡಿಯುವುದು ೨. ಶಿಕ್ಷೆ ವಿಧಿಸುವುದು) ಮುಪ್ಪಿನಲ್ಲಿ ಮಾತ್ರ ಇತ್ತು. "ವಕ್ರತೆಯು" (೧. ಡೊಂಕು ಡೊಂಕಾಗಿರುವಿಕೆ. ೨. ಕುಟಿಲಸ್ವಭಾವ) ಹೆಂಗಸರ ಸ್ತನಗಳ ಮೇಲೆ ಬರೆದಿರುವ ಚಿತ್ರರಚನೆಯಲ್ಲಿ ಮಾತ್ರ ಇತ್ತು. "ಬಂಧನವು" (೧. ಕಟ್ಟುವುದು ೨. ಸೆರೆಹಿಡಿಯುವುದು) ಹೂವುಗಳಲ್ಲಿ ಮಾತ್ರ ಇತ್ತು. "ತುಲಾರೋಹಣವು" (೧. ತುಲಾರಾಶಿಗೆ ಬರುವಿಕೆ ೨. ಅಪರಾಧಿಯೋ ಅಲ್ಲವೋ ಎಂಬುದನ್ನು ಗೊತ್ತುಪಡಿಸಲು ತಕ್ಕಡಿಯಲ್ಲಿ ಕೂರಿಸಿ ತೂಗುವಿಕೆ) ಗ್ರಹಗಳಲ್ಲಿ ಮಾತ್ರ ಇತ್ತು. "ಆಯಂತಿಭಂಗವು" (೧. ಬೆಳೆಯುವುದನ್ನು ಕತ್ತರಿಸುವುದು ೨. ಭವಿಷ್ಯದ ಸುಖವನ್ನು ಕೆಡಿಸುವುದು) ಕೂದಲು ಉಗುರುಗಳಲ್ಲಿ ಮಾತ್ರ ಇತ್ತು. "ಮಲಿನಾಂಬರತ್ವವು" (೧. ಆಕಾಶವು ಕಾಂತಿಹೀನವಾಗಿರುವಿಕೆ ೨. ಕೊಳಕು ಬಟ್ಟೆಯನ್ನು ಹಾಕಿಕೊಂಡಿರುವುದು) ಮಳೆಗಾಲದಲ್ಲಿ ಮಾತ್ರ ಇತ್ತು. "ತಾರಕೋದ್ಧರಣ" (೧. ತಾರಕಾಸುರನನ್ನು ಕೊಲ್ಲುವುದು ೨. ಅಪರಾಧಕ್ಕಾಗಿ ಕಣ್ಣುಗುಡ್ಡೆ ಕೀಳಿಸುವುದು) ಕುಮಾರಸ್ವಾಮಿಯ ಸ್ತೋತ್ರದಲ್ಲಿ ಮಾತ್ರ ಇತ್ತು. "ಗ್ರಹಣವು" (೧. ರಾಹುಕೇತುಗಳು ಹಿಡಿಯುವುದು ೨. ಸೆರೆಹಿಡಿಯುವುದು) ಸೂರ್ಯ ಚಂದ್ರರಲ್ಲಿ ಮಾತ್ರ ಇತ್ತು. "ಶೂನ್ಯಗೃಹದರ್ಶನವು" (೧. ಖಾಲಿ ಮನೆಯನ್ನು ನೋಡುವುದು ೨. ಹಾಳುಬಿದ್ದ ಮನೆಯನ್ನು ನೋಡುವುದು) ಪಗಡೆ ಆಟದಲ್ಲಿ ಮಾತ್ರ ಇತ್ತು. ದೇಶದಲ್ಲಿ ಇನ್ನೆಲ್ಲಿಯೂ ಇರಲಿಲ್ಲ. ೨೩. ಆ ತಾರಾಪೀಡ ಚಕ್ರವರ್ತಿಗೆ ಸಕಲಶಾಸ್ತ್ರಪ್ರವೀಣನಾದ, ಪ್ರಸಿದ್ಧವಾದ ಬ್ರಾಹ್ಮಣವಂಶದಲ್ಲಿ ಹುಟ್ಟಿದ, ರಾಜನೀತಿಯನ್ನು ಕಾರ್ಯಗತ ಮಾಡುವುದರಲ್ಲಿ ನಿಸ್ಸೀಮನಾದ, ಸಂಪೂರ್ಣವಾದ ಕರುಣೆ, ಔದಾರ್ಯ ಗಾಂಭೀರ್ಯಗುಣ

ರಾಮಂಗೆ ಕುಶಿಕತನಯಂ
ವೈಮಾನಿಕನಾಯಕಂಗೆ ವಾಚಸ್ಪತಿಯಾ
ಭೀಮಂಗೆ ದಮನನೆನೆ ನಿ
ಸ್ಸೀಮಗುಣಂ ಮಂತ್ರಿಯೆನಿಸಿದಂ ಶುಕನಾಸಂ ೨೪

ನರಕೋಗ್ರಾಸುರ ಶಾತಶಸ್ತ್ರನಿವಹೋದಗ್ರಪ್ರಹಾರಾತಿ ಭೀ
ಕರಮುಂ ಮಂದರಘರ್ಷಣಾತಿಕಠಿಣೋತ್ತುಂಗಾಸಪೀಠಾತಿಬಂ
ಧುರಮುಂ ತಾನೆನಿಸಿರ್ದ ವಿಷ್ಣುವಿನ ವಕ್ಷೋಭಾಗದೊಳ್ ನಿಂದಳಂ
ಸಿರಿಯುಂ ತರ್ಪುದದಾವಗಾನವೆನಿಕುಂ ಪ್ರಜ್ಞಾಬಳಂ ಮಂತ್ರಿಯಾ ೨೫

ವ|| ಅಂತಾ ಮಂತ್ರಿಯೊಳ್ ಸಕಲ ರಾಜ್ಯಭಾರಮಂ ತಾರಾಪೀಡಂ ನಿಲಿಸಿ ನವಯುವ್ವನೋಚಿತ ಸುಖೋನ್ಮುಖನಾದನೆಂತೆನೆ

ಗಳಿಂದ ಕೂಡಿರುವ, ಸಣ್ಣವಯಸ್ಸಿನಿಂದಲೇ ಎಲ್ಲರಲ್ಲೂ ಪ್ರೀತಿಯಿಂದ ಮೃದುವಾದ ಚಿತ್ತವೃತ್ತಿಯುಳ್ಳ, ಬಹಳ ಚುರುಕಾದ ಬುದ್ಧಿಯುಳ್ಳ, ಬಹಳ ಧೀರಸ್ವಭಾವದವನಾದ, ಪ್ರಭುಶಕ್ತಿ, ಮಂತ್ರಶಕ್ತಿ, ಉತ್ಸಾಹಶಕ್ತಿಗಳಿಂದ ಪರಿಪೂರ್ಣನಾದ ಸಂಧಿ, ವಿಗ್ರಹ, ಯಾನ, ಆಸನ, ದ್ವೈಧ, ಆಸನಗಳೆಂಬ ರಾಜ್ಯಭಾರಕ್ಕೆ ಬೇಕಾದ ಆರು ಗುಣಗಳಿಂದ ಕೂಡಿರುವ, ಎಲ್ಲಾ ವಿದ್ಯಾವಂತರ ಹೊಗಳಿಕೆಗೆ ಪಾತ್ರನಾದ ಮತ್ತು ಶ್ರೇಷ್ಠನಾದ. ೨೪. ಅಮಿತ ಸದ್ಗುಣಗಳಿಂದ ಕೂಡಿದ ಶುಕನಾಸನೆಂಬುವನು ಶ್ರೀರಾಮನಿಗೆ ವಿಶ್ವಾಮಿತ್ರಮಹರ್ಷಿಯಂತೆಯೂ, ಇಂದ್ರನಿಗೆ ಬೃಹಸ್ಪತಿಯಂತೆಯೂ, ಭೀಮನೃಪಾಲನಿಗೆ ದಮನನಂತೆಯೂ ಮುಖ್ಯಮಂತ್ರಿಯಾಗಿದ್ದನು. ೨೫. ಲಕ್ಷ್ಮಿಯು ಇದುವರೆಗೆ ವಾಸವಾಗಿದ್ದುದು ವಿಷ್ಣುವಿನ ವಕ್ಷಸ್ಥಳದಲ್ಲಿ. ಅದು ನರಕನೆಂಬ ಕ್ರೂರನಾದ ರಾಕ್ಷಸನ ಹರಿತವಾದ ಆಯುಧಗಳ ಕಠೋರವಾದ ಹೊಡೆತಗಳಿಂದ ಜಡ್ಡುಗಟ್ಟಿ ಹೆದರಿಕೆಯನ್ನುಂಟುಮಾಡುತ್ತಿತ್ತು. ಮತ್ತು ಸಮುದ್ರಮಥನ ಕಾಲದಲ್ಲಿ ಮಂಧರಪರ್ವತದ ತಿಕ್ಕಾಟದಿಂದ ಬಹಳ ಒರಟಾಗಿ ಬಿಟ್ಟಿದೆ. ಇಂತಹ ಪ್ರಶಸ್ತವಲ್ಲದ ಕಡೆಯಲ್ಲಿ ವಾಸವಾಗಿರುವವಳನ್ನು ಈ ಸ್ಥಳಕ್ಕೆ ಕರೆತರುವುದು ಏನು ಮಹಾ ದೊಡ್ಡದು ? ಎಂಬಂತೆ ಆ ಮಂತ್ರಿಯ ಬುದ್ಧಿಶಕ್ತಿಯು ವಿರಾಜಿಸುತ್ತಿತ್ತು. ವ|| ತಾರಾಪೀಡನು ಅಂತಹ ಮಂತ್ರಿಯಲ್ಲಿ ಸಕಲ ರಾಜ್ಯಭಾರವನ್ನೂ ಇರಿಸಿ ಹೊಸದಾದ ಯೌವನಕ್ಕೆ ಉಚಿತವಾದ

ಪುಳಕನಿತಾಂತ ಜರ್ಝರಿತ ಕರ್ಣವತಂಸೆಯರಪ್ಪ ಕಾಂತೆಯು
ರ್ಕಳ ದರಹಾಸ ಚಂದನರಸಾಭಿಷವಂ ಮಣಿಭೂಷಣಾಂಶು ಸಂ
ಕುಳ ಪಟವಾಸರೇಣುತತಿ ಬಾಹುಲತಾದೃಢಬಂಧಮೀಕ್ಷಣೋ
ತ್ಪಳಹರಿ ತನ್ನೊಳೊಪ್ಪೆ ತಳೆದಂ ಮದನೋತ್ಸವಮಂ ಮಹೀಭುಜಂ ೨೭

ಸುರತಸ್ವೇದೋದಬಿಂದುಚ್ಯುತ ಮೃಗಮದಪತ್ರಂ ರದಸ್ಪೃಷ್ಟದಷ್ಟಾ
ಧರಬಿಂಬಂ ಪ್ರಸ್ಖಲತ್ಕಂಕಣರಣಿತ ಕಚಾಕರ್ಷಣೋತ್ಕೀರ್ಣ ಕರ್ಣಾ
ಭರಣಂ ಕಣ್ಗೊಪ್ಪಿ ಕಾಂತಾತತಿಯೊಳಿಸೆಯೆ ಸಂಭೋಗಮಂ ರಾಗದಿಂ ಬಿ
ತ್ತರಿಪಂ ಪ್ರೇಮಪ್ರಕೋಪಾಹತಿಚರಣತಳಾಲಕ್ತ ಲೇಖಾಲಲಾಮಂ ೨೮

ವ॥ ಅದಲ್ಲದೆಯುಂ

ತರುಣೀಸಂಕುಲಹಸ್ತಯಂತ್ರವಿಗಳತ್ಕಾಶ್ಮೀರಧಾರಾಪರಂ
ಪರೆಗಳ್ ಮನ್ಮಥಮುಕ್ತಹೇಮಮಯ ನಾರಾಚಾಳಿವೊಲ್ ಚೆಲ್ವನಾ
ವಂಸಲ್ ಚಂದನವಾರಿಬಿಂದು ವಿಲಸತ್ಕಸ್ತೂರಿಕಾಸೌರಭೋ
ತ್ಕರ ಚಂಚತ್ತನು ಹೇಮಶೃಂಗಜಳಕೇಳೀಲೀಲೆಯಂ ತಾಳ್ದಿದಂ ೨೯

ಸುಖಾನುಭವದಲ್ಲಿ ನಿರತನಾಗಿದ್ದನು. ಹೇಗೆಂದರೆ, ೨೭. ಆ ಅರಸನು ಕಾಮೋತ್ಸವ ವನ್ನು ಅನುಭವಿಸುತ್ತಿದ್ದನು. ಹೇಗೆಂದರೆ ರಮಣಿಯರ ಕಿವಿಯಮೇಲೆ ಮುಡಿದುಕೊಂಡಿರುವ ಚಿಗುರು ರೋಮಾಂಚನದಿಂದ ಜರ್ಝರಿತವಾಗುತ್ತಿತ್ತು. ಅಂತಹ ರಮಣಿಯರ ಮಂದಹಾಸವೆಂಬ ಗಂಧೋದಕದಿಂದ ಸ್ನಾನ ಮಾಡುತ್ತಿದ್ದನು. ಅವರ ರತ್ನಾಭರಣ ಗಳ ಕಾಂತಿಸಮೂಹವೆಂಬ ಸುಗಂಧದ ಪುಡಿಯು ಇವನ ಮೈಮೇಲೆ ಪಸರಿಸುತ್ತಿತ್ತು. ಅವರು ಬಳ್ಳಿತೋಳುಗಳಿಂದ ಇವನನ್ನು ಬಿಗಿಯಾಗಿ ಅಪ್ಪಿಕೊಳ್ಳುತ್ತಿದ್ದರು. ಅವರ ಕನ್ನೈದಿಲೆಯಂತಿರುವ ದೃಷ್ಟಿಯು ಇವನ ಮೇಲೆ ಬೀಳುತ್ತಿದ್ದುದರಿಂದ ಇವನ ಮೈ ಬಣ್ಣವು ಕಪ್ಪಾಗುತ್ತಿತ್ತು. ೨೮. ಈತನು ರಾಣೀವಾಸದ ಚೆಲುವೆಯರೊಂದಿಗೆ ಬಹಳ ಪ್ರೀತಿಯಿಂದ ಸಂಭೋಗಸುಖವನ್ನು ಅನುಭವಿಸುತ್ತಿದ್ದನು. ಅವರ ಮೈಮೇಲೆ ಬರೆದಿದ್ದ ಕಸ್ತೂರಿಯ ವರ್ಣಚಿತ್ರಗಳು ಸುರತಕಾಲದ ಬೆವರುಹನಿಗಳಿಂದ ಅಳಿಸಿಹೋಗುತ್ತಿದ್ದುವು. ಅವರ ಕೆಳದುಟಿಗಳು ದಂತಕ್ಷತಗೊಂಡಿರುವುದು ಸ್ಪಷ್ಟವಾಗಿ ಕಾಣುತ್ತಿತ್ತು. ಕೈಬಳೆಗಳು ಕೆಳಗೆ ಜಾರಿಬಿದ್ದು ಧ್ವನಿಗಯ್ಯುತ್ತಿದ್ದುವು. ಕೂದಲನ್ನು ಎಳೆಯುವಾಗ ಅವರ ಕರ್ಣಾಭರಣಗಳು ಒಡೆದುಹೋಗುತ್ತಿದ್ದುವು. ಅವರು ಪ್ರಣಯಕೋಪದಿಂದ ಇವನನ್ನು ಒದ್ದಾಗ ಅವರ ಕಾಲಿನಲ್ಲಿ ಲೇಪಿಸಿಕೊಂಡಿರುವ ಅರಗಿನ ರಸದಿಂದಾದ ಕಲೆಗಳಿಂದ ಅವನ ಹಣೆಯು ಶೋಭಿಸುತ್ತಿತ್ತು! ವ॥ ಅದೂ ಅಲ್ಲದೆ ೨೯. ಆ ರಾಜನು ಅಂತಃಪುರದ ಕಾಮಿನೀಜನರೊಂದಿಗೆ ಕೂಡಿಕೊಂಡು ಚಿನ್ನದ ಜೀರ್ಕೊಳವೆಗಳಿಂದ ಜಲಕ್ರೀಡೆಯಾಡುತ್ತಿದ್ದನು. ತರುಣಿಯರ ಕೈಗಳಲ್ಲಿರುವ ಜಲಯಂತ್ರದಿಂದ ಹೊರ ಬರುತ್ತಿರುವ ಕುಂಕುಮರಸದ ಧಾರಾಪರಂಪರೆಗಳು ಮನ್ಮಥನಿಂದ ಬಿಡಲ್ಪಟ್ಟ ಚಿನ್ನದ

ವ॥ ಮತ್ತಂ

ಲಲನಾಲಕ್ತಕಸಿಕ್ತ ಹಂಸಯುಗಳಂ ನೈತಂಬವಿಕ್ಷೋಭ ಸಂ
ಚಳಮುಚ್ಛಸ್ತನ ಚಂದನೋಜ್ವಳಮುದಂಚತ್ಕರ್ಣಪೂರೋತ್ಪಳಾ
ವಿಳಮಾಕೀರ್ಣಕಚಪ್ರಸೂನಶಬಳಂ ಮಾಟ್ಪಂ ಸರೋಜಾಕರಂ
ಗಳನಂತಃಪುರಕಾಮಿನೀ ಪರಿವೃತಂ ನೀಡುಂ ಜಳಕ್ರೀಡೆಯೊಳ್ ೨೯

ತಡೆದೈ ವಂಚಕ ಕೂರ್ತವೊಲ್ ಕುಱುಪುವೇಟ್ದಿಲ್ಲಿರ್ದೆಯೆಂದೊರ್ವೊದಲ್
ನಡುಗುತ್ತುಂ ಪ್ರಣಯಪ್ರಕೋಪಭರದಿಂದೆಯ್ತಂದು ಕಾಂತಾಜನಂ
ಪಿಡಿತಂದೊರ್ಮೆಯೆ ಕಂಕಣಂಗಳುಲಿಯಲ್ ಪೂಮಾಲೆಯಿಂ ಸೋಲೆ ಪೊ
ಯ್ವಡೆವಂ ಕೇಸರದಾಮಬದ್ಧ ಚರಣಂ ಶೃಂಗಾರಸಾರೋದಯಂ ೩೦

ವ॥ ಮತ್ತಮಶೋಕತರುವಿನಂತೆ ತರುಣೀಪದಪ್ರಹಾರಸಂಕ್ರಾಂತಾಲಕ್ತಕರಾಗಮಂ ತಾಳ್ದಿಯುಂ ಹಂಸನಂತೆ ರಮಣೀಯ ನೂಪುರನಿನಾದಾನಂದಿತ ಮಾನಸಸರೋವರದೊಳ್ ಚರಿಸಿಯುಂ ಭ್ರಮರದಂತೆ ಕುಸುಮಮಂಜರೀರಂಜಿತ ಲತಾಭವನಂಗಳೊಳ್ ಭ್ರಮಿಸಿಯುಂ

ಬಾಣಗಳಂತೆ ಶೋಭಿಸುತ್ತಿದ್ದುವು. ಅವನ ಅಂಗಾಂಗಗಳು ಗಂಧೋದಕದ ಹನಿಗಳಿಂದ ಚಂದಗಾಣುತ್ತಿದ್ದುವು. ಅವನ ಶರೀರವು ಕಸ್ತೂರಿಯ ಕಂಪಿನಿಂದ ರಂಜಿಸುತ್ತಿತ್ತು. ೨೯. ಆ ತರುಣಮಹಾರಾಜನಂ ಅಂತಃಪುರದ ಸುಂದರಿಯರಿಂದ ಪರಿವೃತನಾಗಿ ತಾವರೆಗೊಳದಲ್ಲಿ ನೀರಾಟವಾಡುತ್ತಿದ್ದನಂ. ಆಗ ಅಲ್ಲಿದ್ದ ಹಂಸಪಕ್ಷಿಗಳು ಹೆಂಗಸರ ಕಾಲಿನ ಅರಗಿನರಸದಿಂದ ತೊಯ್ದು ಕೆಂಬಣ್ಣವನ್ನು ಪಡೆಯುತ್ತಿದ್ದುವು, ಆ ಕೊಳವು ಸುಂದರಿಯರ ನಿತಂಬಗಳ ಹೊಡೆತದಿಂದ ಕಲಕಿಹೋಗುತ್ತಿತ್ತು. ಅವರ ತೋರಮೊಲೆಗಳ ಬಿಳಿಚಂದನದಿಂದ ನೀರು ಧವಳವರ್ಣದಿಂದ ಪ್ರಕಾಶಿಸುತ್ತಿತ್ತು. ಅವರು ಕಿವಿಯಲ್ಲಿ ಮುಡಿದಿದ್ದ ಕನ್ನೈದಿಲೆಗಳು ನೀರಿನಲ್ಲಿ ಬೀಳುತ್ತಿದ್ದುದರಿಂದ ನೀರು ಕಪ್ಪುಬಣ್ಣವನ್ನು ತಾಳುತ್ತಿತ್ತು. ಅವರ ತಲೆಗೂದಲುಗಳಿಂದ ಉದುರಿದ ಹೂವುಗಳಿಂದ ಸರೋವರವು ನಾನಾ ಬಣ್ಣವನ್ನು ತಾಳುತ್ತಿತ್ತು. ೩೦. ಅಂತಃಪುರದ ನಲ್ಲೆಯರು ಇವನನ್ನು ಹಿಡಿದುಕೊಂಡು ಎಲಾ ಎಲಾ ಮೋಸಗಾರ! ಇಷ್ಟುಹೊತ್ತು ಏಕಾಯಿತಂ? ಬಹಳ ಪ್ರೀತಿಯುಳ್ಳವನಂತೆ ಗುರುತುಗಳನ್ನು ಹೇಳಿಬಿಟ್ಟೆ ! ಇದುವರೆಗೂ ಎಲ್ಲಿದ್ದೆ? ಎಂದು ಮೂದಲಿಸುತ್ತಾ ವಕುಳಪುಷ್ಪದ ಮಾಲಿಕೆಯಿಂದ ಇವನನ್ನು ಕಟ್ಟಿ ಪ್ರಣಯಕೋಪಾತಿಶಯದಿಂದ ನಡುಗುತ್ತಾ ಕೈಬಳೆಗಳು ಉಲಿಯುತ್ತಿರಲಾಗಿ ಹೂವಿನ ಮಾಲೆಯಿಂದ ಹೊಡೆಯುತ್ತಿರಲು ಆ ರಾಜನು ಶೃಂಗಾರರಸದ ಸಾರವೇ ಉಕ್ಕುತ್ತಿರಲಾಗಿ ಪೆಟ್ಟುಗಳನ್ನು ತಿನ್ನುತ್ತಿದ್ದರು. ವ॥ ಮತ್ತು ಆ ತಾರಾಪೀಡನು ಅಶೋಕವೃಕ್ಷದಂತೆ ತರುಣಿಯರ ಕಾಲಿನ ಒದೆತದಿಂದ ಅಂಟಿಕೊಂಡಿರುವ ಅರಗಿನ ರಸದ ಕೆಂಪನ್ನು ತಾಳಿದವನಾಗಿಯೂ, ಹಂಸಪಕ್ಷಿಯಂತೆ ಮನೋಹರವಾದ ಕಾಲ್ಗಡದ ಧ್ವನಿಯಿಂದ ಆನಂದವನ್ನು ಅನುಭವಿಸುವ ಮನಸ್ಸೆಂಬ ಮಾನಸಸರೋವರದಲ್ಲಿ ಸಂಚರಿಸುತ್ತಲೂ, ಹಾಗೆಯೇ ದುಂಬಿಯಂತೆ

ಕಾಮಿನೀಜನದತ್ತ ಸಂಕೇತಸದನಂಗಳೊಳ್ ಭ್ರಮಿಸಿಯುಂ ಬಹುಳನಿಶಾಪ್ರದೋಷಂಗಳೊಳ್ ವಿಘಟಿತ ಕನನಕವಾಟವಾತಾಯನಂಗಳಪ್ಪ ಮಹಾಪ್ರಾಸಾದನಂಗಳೊಳ್ ಸುಟಿದುಂ ಪರಿಮಿತಾಪ್ತಜನದೊಡನಂತಃಪುರಕಾಮಿನೀಪರಿವೃತನನೇಕ ವೀಣಾ ವೇಣು ಮುರಜಮನೋಹರಂಗಳಪ್ಪ ಸಂಗೀತಂಗಳಂ ವಿಸ್ತರಿಸಿಯುಂ ಅತಿರಮಣೀಯಮಭಿಮತಮವಿರುದ್ಧಮೆನಿಪ ವಿಷಯಸುಖಾರ್ಣವದೊಳ್ ಮೂಡಿಮುಟ್ಟಾಡುತ್ತಮಿರ್ದನಂತುಮಲ್ಲದೆಯುಂ

ಪ್ರತಿಪಾಲಿಸಿ ವಸುಮತಿಯಂ
ಕೃತಾರ್ಥರೆನಲಿಂತು ವಿಷಯತತಿಗೆಳಸಲ್ ಭೂ
ಪತಿಗಳ ಭೂಷಣಮೆನಿಸುಗು
ಮಿತರರ್ಗಾ ವಿಷಯತತಿವಿಡಂಬನಮಲ್ತೇ ೩೧

ಎನಿತೊಳವು ವಿಷಯಸಮುದಯ
ಮನಿತಜಿೊಳಂದಂದು ಪರಮಸುಖಮಂ ಪಡೆದುಂ
ತನಯಮುಖಾಲೋಕನಸುಖ
ಮನದೊಂದನೆ ಪಡೆದನಿಲ್ಲ ತಾರಾಪೀಡಂ ೩೨

ಹೂವಿನ ಗೊಂಚಲುಗಳಿಂದ ರಂಜಿತವಾದ ಬಳ್ಳಿಮನೆಗಳಲ್ಲಿ ಸಂಚರಿಸುತ್ತಲೂ, ಕೃಷ್ಣ ಪಕ್ಷದ ರಾತ್ರಿಗಳಲ್ಲಿ ನಲ್ಲೆಯರಿಂದ ಸೂಚಿಸಲ್ಪಟ್ಟ ಸಂಕೇತಗೃಹಗಳಲ್ಲಿ ಸಂಚರಿಸುತ್ತಲೂ, ತೆರೆಯಲ್ಪಟ್ಟ ಚಿನ್ನದ ಬಾಗಿಲು ಮತ್ತು ಕಿಟಿಕಿಗಳುಳ್ಳ ದೊಡ್ಡ ದೊಡ್ಡ ಮಹಡಿ ಮನೆಗಳಲ್ಲಿ ಸುಳಿದಾಡುತ್ತಲೂ ಪರಿಮಿತರಾದ ಆಪ್ತಜನರೊಂದಿಗೆ ಅಂತಃಪುರದ ರಮಣಿಯರಿಂದ ಸುತ್ತುವರಿಯಲ್ಪಟ್ಟವನಾಗಿ, ಅನೇಕ ಬಗೆಯ ವೀಣೆ, ಕೊಳಲು, ಮೃದಂಗ ಮೊದಲಾದುವುಗಳಿಂದ ಇಂಪಾದ ಸಂಗೀತಗಳನ್ನು ಹೆಚ್ಚಿಸುತ್ತಲೂ, ಬಹಳ ರಮಣೀಯವಾದ, ಹಾಗೂ ಇಷ್ಟವಾದ, ಧರ್ಮಕ್ಕೆ ವಿರುದ್ಧವಲ್ಲದ ಸಂಸಾರಸುಖವೆಂಬ ಸಮುದ್ರದಲ್ಲಿ ಮುಳುಗಿ ಓಲಾಡುತ್ತಿದ್ದನು. ಅದಲ್ಲದೆ, ೩೧, ಭೂಮಿಯನ್ನು ಚೆನ್ನಾಗಿ ಆಳುತ್ತಾ ಕೃತಾರ್ಥರೆನಿಸಿಕೊಂಡಿರುವ ಮಹಾರಾಜರಿಗೆ ಈ ಬಗೆಯ ಸಂಸಾರಸುಖದಲ್ಲಿ ಓಲಾಡುವುದು ಭೂಷಣವೆನಿಸುತ್ತದೆ. ಆದರೆ ಇತರ ರಾಜರಿಗೆ ಅದು ಅಪಹಾಸ್ಯಕರವಾಗುತ್ತದೆ, ೩೨. ಈ ತಾರಾಪೀಡನು ಪ್ರಪಂಚದಲ್ಲಿ ಸಂಸಾರಸುಖಗಳು ಎಷ್ಟಿವೆಯೋ ಅಷ್ಟನ್ನೂ ಅನುಭವಿಸುತ್ತಾ ಪರಮಸುಖವನ್ನು ಪಡೆದಿದ್ದರೂ ಮಕ್ಕಳ

ಧರಣೀಪಾಲಸಹಸ್ರಸಂವೃತನೆನಲ್ ಸಂದಿರ್ದುಮೇಕಾಕಿಯುಂ
ತಿರೆ ಪೃಥ್ವೀವಲಯಾವಲಂಬನೆನೆ ಸಂದಿರ್ದುಂ ನಿರಾಲಂಬನಂ
ತಿರೆ ಕರ್ಣಾಂತ ವಿಶಾಲಲೋಚನನೆನಲ್ ಸಂದಿರ್ದುಮಂದಂಧನಂ
ತಿರೆ ತನ್ನಂ ಬಗೆವಂ ತನೂಜರಹಿತಂ ವಿಶ್ವಂಭರಾವಲ್ಲಭಂ ೩೩

ವ॥ ಮತ್ತಮಾ ಧರಾಧೀಶ್ವರಂಗೆ ಹರಜಟಾಕಲಾಪಕ್ಕೆ ಚಂದ್ರಲೇಖೆಯುಂತೆ ನಾರಾಯಣ ವಕ್ಷಸ್ಥಲಕ್ಕೆ ಕೌಸ್ತುಭಪ್ರಭೆಯುಂತೆ ದಿಗ್ಗಜಕ್ಕೆ ಮದಲೇಖೆಯುಂತೆ ವಸಂತಸಮಯಕ್ಕೆ ಕುಸುಮೋದ್ಗಮದಂತೆ ಮಾನಸಸರೋವರಕ್ಕೆ ಹಂಸಮಾಲೆಯುಂತೆ ಮಲಯಾಚಲಕ್ಕೆ ಚಂದ್ರನರಾಜಿಯಂತೆ ವಿಲಾಸವತಿಯೆಂಬಳಂತಃಪುರಪ್ರಧಾನೆಯೆನಿಸಿದ ಮಹಾದೇವಿಯರಮನೆಗೆ ದಿನದಿನಂ ತಾರಾಪೀಡನರೇಂದ್ರಂ ಬರುತ್ತಮಿರಲನ್ನೆಗಂ

ಪಡಿಯಱಿಕೆಯ ಸೀಗುರಿವಿಡಿ
ವಡಪದ ಕನ್ನಡಿಯ ಪಡಿಗದಾಕೆಗಳೆಲ್ಲಂ
ಮಿಡುಕಲಣಮಱಿಯದಿರ್ದಿ
ರ್ದೆಡೆಯೊಳ್ ಬೆಱಗಾಗಿ ಮೂಗರಂದದಿನಿರ್ದರ್ ೩೪

ಮುಖವನ್ನು ನೋಡುವ ಭಾಗ್ಯವೊಂದನ್ನು ಅವನು ಇನ್ನೂ ಪಡೆದಿರಲಿಲ್ಲ. ೩೩. ಆದ್ದರಿಂದ ಆ ಚಕ್ರವರ್ತಿಯು ಸಾವಿರಾರು ರಾಜರುಗಳಿಂದ ಓಲೈಸಲ್ಪಡುತ್ತಿದ್ದರೂ ಒಬ್ಬಂಟಿಗನಂತೆ ಆಗಿದ್ದನು. ಇಡೀ ಭೂಮಂಡಲಕ್ಕೆ ಆಶ್ರಯಭೂತನಾಗಿದ್ದರೂ ತಾನು ನಿರಾಶ್ರಯನಂತಿದ್ದನು. ಕಿವಿಯುವರೆಗೂ ಹರಡಿಕೊಂಡಿರುವ ವಿಶಾಲವಾದ ಕಣ್ಣುಗಳಿದ್ದರೂ ಕುರುಡನಂತಾಗಿದ್ದನು. ವ॥ ಮತ್ತು ಆ ಮಹಾರಾಜನಿಗೆ ಪರಮೇಶ್ವರನ ಜಡೆಯ ಗಂಟಿಗೆ ಚಂದ್ರನಕಳೆಯುಂತೆಯೂ, ಶ್ರೀಮನ್ನಾರಾಯಣನ ವಕ್ಷಸ್ಥಳಕ್ಕೆ ಕೌಸ್ತುಭಮಣಿಯ ಕಾಂತಿಯುಂತೆಯೂ, ದಿಗ್ಗಜಕ್ಕೆ ಮದೋದಕದ ಧಾರೆಯಂತೆಯೂ, ವಸಂತಕಾಲಕ್ಕೆ ಹೂವುಗಳ ಉತ್ಪತ್ತಿಯುಂತೆಯೂ, ಮಾನಸ ಸರೋವರಕ್ಕೆ ಹಂಸಮಾಲೆಯುಂತೆಯೂ, ಮಲಯಾಚಲಕ್ಕೆ ಗಂಧದ ಮರಗಳ ಪಂಕ್ತಿಯುಂತೆಯೂ ಅವನ ರಾಣಿವಾಸಕ್ಕೆ ವಿಲಾಸವತಿ ಎಂಬುವಳು ಪ್ರಧಾನೆಯಾಗಿದ್ದಳು. ಪಟ್ಟದರಾಣಿಯಾದ ಅವಳ ಅಂತಃಪುರಕ್ಕೆ ತಾರಾಪೀಡನು ಪ್ರತಿನಿತ್ಯವೂ ಬಂದು ಹೋಗುತ್ತಿದ್ದನು. ೩೪. ಹೀಗಿರಲು ಒಮ್ಮೆ ರಾಜನು ಬಂದಾಗ ಬಾಗಿಲುಕಾಯುವ, ಚಾಮರವನ್ನು ಹಿಡಿಯುವ, ತಾಂಬೂಲದ ಚೀಲವನ್ನು ಹಿಡಿಯುವ ಊಳಿಗದ ಹೆಂಗಸರೆಲ್ಲರೂ ಅಲುಗಾಡಲೂ ತಿಳಿಯದವರಾಗಿ

ವ॥ ಅಗಳಂತಃಪುರವೃದ್ಧಾಂಗನಾಶ್ವಾಸ್ಯಮಾನೆಯುಮವಿರಳಾಶ್ರುಬಿಂದುಧಾರಾರ್ದ್ರೀಕೃತ ದುಕೂಲೆಯುಮನಳಂಕೃತೆಯುಂ ವಾಮಕರತಳ ವಿನಿಹಿತ ಮುಖಕಮಳೆಯುಂ ಪರ್ಯಂಕೋಪವಿಷ್ಟೆಯುಮಾಗಳುತ್ತಿರ್ದ ವಿಳಾಸವತಿಮಹಾದೇವಿಯುಂ ತಾರಾಪೀಡನರೇಂದ್ರಂ ಕಂಡು ಕೃತಪ್ರತ್ಯುತ್ಥಾನೆಯಾದ ನಲ್ಲಳಂ ಮೆಲ್ಲನೆ ಕುಳ್ಳಿರಿಸಿ ತಾನುಂ ಮೆಲ್ಲನೆ ಕುಳ್ಳಿರ್ದಜ್ಞಾತ ಕಾರಣಂ ಬಾಷ್ಪವಿದೆಂದಾತ್ಮಕರತಳದಿಂದಾ ಕುಟಿಲಾಳಕಿಯ ನಯನಜಲಂಗಳಂ ತೊಡೆದು

ನಸುದೆಱೆಯುತ್ತಮಿರ್ದ ಪೊಸಮುತ್ತಿನ ಸಿಂಪಿನ ಸಂಪುಟಂಗಳಿಂ
ನುಸುಳ್ದು ಸುಪಾಣಿಯಾಗಿ ಪೊಱಪೊಣ್ಮುವ ಮುತ್ತಿನ ಮಾಲೆಯಂದದಿಂ
ಮಿಸುಗಿ ನಿರಂಜನಂಗಳೆನಿಪಕ್ಷಿಪುಟಾಂತರದಿಂದ ಮೇಕೆಪೇಟ್
ಪಸರಿಸಿ ನೀಳ್ದು ಪೊಣ್ಮದುವು ಕಣ್ಬನಿಗಳ್ ತರಳಾಯತೇಕ್ಷಣೇ ೩೫

ಕೆಂದಾವರೆ ಚೆಂಬಿಸಿಲಿಂ
ದೊಂದುವ ತೆಱದಿಂದೆ ನಿನ್ನ ಮೃದುಪದಯುಗಮುಂ
ದೆಂದಿನವೊಲಲಕ್ತಕರಸ
ದಿಂದಂ ಪೇಟೊಂದಿತಿಲ್ಲಿದೇನಿಂದುಮುಖೀ ೩೬

ಇದ್ದ ಇದ್ದ ಸ್ಥಳದಲ್ಲೇ ಮೂಗರಂತೆ ಇದ್ದರು. ವ॥ ಆಗ ರಾಣೀವಾಸದ ವೃದ್ಧಸ್ತ್ರೀಯರಿಂದ ಸಮಾಧಾನಗೊಳಿಸಲ್ಪಡುತ್ತಿರುವ, ಒಂದೇಸಮನೆ ಹರಿಯುತ್ತಿರುವ ಕಣ್ಣೀರಿನ ಹನಿಗಳ ಧಾರೆಯಿಂದ ಒದ್ದೆಯಾದ ರೇಷ್ಮೆಸೀರೆಯುಳ್ಳವಳಾದ, ಅಲಂಕಾರ ಮಾಡಿಕೊಳ್ಳದಿರುವ ತನ್ನ ಎಡ ಅಂಗೈಮೇಲೆ ಕಮಲದಂತಿರುವ ಮುಖವನ್ನು ಇಟ್ಟುಕೊಂಡಿರುವ, ಮಂಚದ ಮೇಲೆ ಕುಳಿತುಕೊಂಡಿರುವ, ಹಾಗೂ ಅಳುತ್ತಿರುವ ವಿಲಾಸವತಿ ಮಹಾರಾಣಿಯನ್ನು ತಾರಾಪೀಡಮಹಾರಾಜನು ಕಂಡು ತನ್ನನ್ನು ಕಂಡೊಡನೆ ಮೇಲಕ್ಕೆ ಎದ್ದುನಿಂತ ಮಡದಿಯನ್ನು ಮೆಲ್ಲಗೆ ಕುಳ್ಳಿರಿಸಿ ತಾನೂ ಕುಳಿತುಕೊಂಡು ಈ ಕಣ್ಣೀರಿಗೆ ಕಾರಣವೇ ತಿಳಿಯದೆಂದು ಹೇಳುತ್ತ ತನ್ನ ಕೈಯಿಂದ ಕೊಂಕುಕುರುಳಿನ ನಲ್ಲೆಯ ಕಣ್ಣೀರನ್ನು ಒರೆಸಿ ಹೀಗೆಂದನು. ೩೫. "ಎಲೌ, ಚಂಚಲವಾಗಿಯೂ ಅಗಲವಾಗಿಯೂ ಇರುವ ಕಣ್ಣುಳ್ಳವಳೆ, ಸ್ವಲ್ಪ ಮಟ್ಟಿಗೆ ಬಾಯಿಬಿಡುತ್ತಿರುವ ಹೊಸದಾದ ಮುತ್ತಿನ ಚಿಪ್ಪಿನ ಸಂಪುಟಗಳಿಂದ ನುಸುಳಿ ಮಿಂಚುತ್ತ ಹೊರಹೊಮ್ಮುತ್ತಿರುವ ಮುತ್ತಿನ ಮಾಲಿಕೆಯಂತೆ ಪ್ರಕಾಶಿಸುವ ಈ ಕಣ್ಣೀರುಗಳು ಕಾಡಿಗೆಯನ್ನು ಹಚ್ಚಿಕೊಳ್ಳದಿರುವ ಕಣ್ಣುಗಳಿಂದ ಏಕೆ ಹೀಗೆ ದೀರ್ಘವಾಗಿ ಹೊರಹೊಮ್ಮಿ ಹರಿಯುತ್ತಿವೆ ?. ೩೬. ಎಲೌ ಚಂದ್ರಮುಖಿಯೆ, ಕೆಂದಾವರೆಯು ಎಳೆಬಿಸಿಲಿನಿಂದ ಕೂಡಿಕೊಳ್ಳುವಂತೆ ನಿನ್ನ ಮೃದುವಾದ ಪಾದಗಳು

ಸ್ಮರರಾಜಕೇಳಿಕಮಲಾ
ಕರಕಳಹಂಸಗಳೆನಿಸಿ ಸೊಗಯಿಪ ಮಣಿನೂ
ಪುರಯುಗಳಂ ನಿನ್ನ ಪದಾಂ
ಬುರುಹಮನೊಂದಲ್ಕೆ ಪಡೆಯದಿಂದಿನ ತೆಜಿನೇಂ ೩೭.

ಊರುಯುಗಸ್ತಂಭೋದ್ಗತ
ತೋರಣಮೆಂಬಂತೆ ಮಿಸುಗುವುಡಿನೂಲಿಃದೇಂ
ಕಾರಣದಿಂ ಕಟ್ಟದು ನೀ
ರೇರುಹದಳನಯನೆ ನಿಜನಿತಂಬಸ್ಥಳದೊಳ್ ೩೮

ಮೃಗಲಾಂಛನಮಂಡಳದೊಳ್
ಮೃಗತನು ಮಿಸುಪಂತೆ ನಿನ್ನ ಕುಚಮಂಡಳದೊಳ್
ಮೃಗಮದ ವಿಚಿತ್ರಪತ್ರಂ
ಮೃಗಲೋಚನೆ ಬರೆಯದಿರ್ದುದಿಂದಿನ ತೆಜಿನೇಂ ೩೯

ಲಲಿತ ಲತಾಂಗುಲಿದಳಸಂ
ಕಲಿತಂ ಕರತಳಮಿದೇಕೆ ಕೋಮಳೆ ಕದಪಂ
ತಳೆದು ದರದಳಿತ ರಕ್ತೋ
ತ್ಪಲದಂದದೆ ಕರ್ಣಪೂರಮಾದತ್ತೀಗಳ್ ೪೦

ಎಂದಿನಂತೆ ಅರಗಿನರಸದ ಲೇಪನದಿಂದ ಏಕೆ ಕೂಡಿಕೊಂಡಿಲ್ಲ ? ೩೭. ಮನ್ಮಥನ ಕ್ರೀಡಾಸರೋವರದಲ್ಲಿ ಇರುವ ರಾಜಹಂಸಗಳಂತಿರುವ ರತ್ನದ ಕಾಲ್ಕಡಗಗಳು ನಿನ್ನ ಪಾದಕಮಲವನ್ನೇಕೆ ಇಂದು ಅಲಂಕರಿಸಿಲ್ಲ, ಇದೇಕೆ ಹೀಗೆ ? ೩೮. ನಿನ್ನ ತೊಡೆಗಳೆಂಬ ಕಂಭಗಳಿಗೆ ಕಟ್ಟಿರುವ ತೋರಣದಂತೆ ಶೋಭಿಸುವ ಒಡ್ಯಾಣವನ್ನು ಇಂದು ನಿನ್ನ ಸೊಂಟಕ್ಕೆ ಕಟ್ಟಿಲ್ಲವಲ್ಲ, ಇದಕ್ಕೆ ಕಾರಣವಾದರೂ ಏನು ?. ೩೯, ಎಲೌ ಜಿಂಕೆಗಣ್ಣಿನ ನಲ್ಲೆ ! ನಿನ್ನ ಸ್ತನಗಳ ಮೇಲೆ ಕಸ್ತೂರಿಯಿಂದ ವಿಚಿತ್ರವಾದ ಚಿತ್ರಗಳನ್ನು ಬರೆದಿದ್ದರೆ ಚಂದ್ರಮಂಡಲದಲ್ಲಿ ಜಿಂಕೆಯಿರುವಂತೆ ಪ್ರಕಾಶಿಸುತ್ತಿತ್ತು. ಇಂದು ಅದನ್ನು ಬರೆದಿಲ್ಲ ಅದೇಕೆ ?. ೪೦. ಎಲೌ ಕೋಮಲಾಂಗಿ, ನಿನ್ನ ಸುಂದರವಾದ ಬೆರಳುಗಳುಳ್ಳ ಈ ಅಂಗೈಯನ್ನು ಕೆನ್ನೆಯ ಮೇಲೆ ಏಕೆ ಇಟ್ಟುಕೊಂಡಿರುವೆ ? ಇದು ಸ್ವಲ್ಪ ಅರಳಿರುವ ಕೆಂದಾವರೆಯಂತೆ ಶೋಭಿಸುತ್ತ ನಿನ್ನ ಕಿವಿಗೆ ಒಡವೆಯಂತೆ ಆಗಿದೆ.

ಒಗೆತರ್ಪ ಬಹುಳಬಾಷ್ಪಾಂ
ಬುಗಳಿಂದಂ ಧೌತಮಾದಮೇಕೆಯೊ ನಿನ್ನೀ
ಸೊಗಯಿಪ ಕಪೋಲಪಾಳೀ
ಯುಗಳದ ಕಾಶ್ಮೀರಮಕರಿಕಾಪತ್ರಂಗಳ್ ೪೧

ಪೊಳೆವೆಳೆವೆಱೆಯಂ ತನ್ನೊಳ್
ತಳೆಯದ ಕಾರಿರುಳ ತೆಱದ ಕುಸುಮಾವಳಿಯಂ
ತಳೆಯದ ನಿನ್ನ ಬಳಲ್ಮುಡಿ
ಬಳಯಿಸಿದಪುದೆನ್ನ ಮನಕೆ ಖೇದಮನೀಗಳ್ ೪೨

ಒದವಿದ ನಿಜಖೇದಕ್ಕಾ
ವುದು ಕಾರಣಮತಿವಿರಕ್ತಮೆನಿಸಿರ್ದೆನ್ನೀ
ಹೃದಯಂ ನವಪಲ್ಲವದಂ
ದದೆ ಕಂಪಿಸಿದಪುದು ಕಂಡು ನಿನ್ನೀ ತೆಱಸಂ ೪೩

ಎನ್ನಿಂದಾದತ್ತೊ ಮೇಣೆನ್ನಯ ಪರಿಜನದಿಂದಾದುದೊ ನೋವು ನೋಳ್ಪಂ
ತೆನ್ನೊಳ್ ತಪ್ಪಪ್ಪುದೊಂದುಂ ಸಮನಿಸಿದುದನಾನೇನುಮಂ ಕಾಣೆನಿಂತಿ
ರ್ದೆನ್ನೀ ಸಾಮ್ರಾಜ್ಯಮುಂ ಜೀವಿತಮುಮಿವು ನಿನಗಾಯತ್ತಮಾಗಿರ್ದೊಡಂ
ಪೇಟ್
ನಿನ್ನೀ ಶೋಕಕ್ಕಿದೇಂ ಕಾರಣಮಱಿದಪೆನಿಲ್ಲೀಗಳಂಭೋಜನೇತ್ರೇ ೪೪

೪೧. ಕೆನ್ನೆಯ ಮೇಲೆ ಕುಂಕುಮಕೇಸರಿಯಿಂದ ಬರೆದಿರುವ ಮಕರಿಕಾಪತ್ರರಚನೆಯು ಒಂದೇಸಮನೆ ಸುರಿಯುತ್ತಿರುವ ಹೆಚ್ಚಾದ ಕಣ್ಣೀರುಗಳಿಂದ ತೊಳೆದುಹೋಗಿಬಿಟ್ಟಿದೆ. ಇದಕ್ಕೇನು ಕಾರಣ ?. ಟಿ. ಹಿಂದಿನಕಾಲದಲ್ಲಿ ಹೆಂಗಸರ ಎದೆ, ಕೆನ್ನೆಗಳ ಮೇಲೆ ಕುಂಕುಮಕೇಸರಿ ಮೊದಲಾದ ಬಣ್ಣಗಳಿಂದ ಮೊಸಳೆ, ಮೀನು ಮೊದಲಾದ ಚಿತ್ರಗಳನ್ನು ಬರೆಯುತ್ತಿದ್ದರು. ಇದಕ್ಕೆ ಮಕರಿಕಾಪತ್ರರಚನೆ, ಪತ್ರರಚನೆ ಎಂದು ಹೆಸರು. ೪೨. ಚಂದ್ರನಿದ್ದರಲ್ಲವೆ ರಾತ್ರಿಗೆ ಶೋಭೆ. ಹೂವಿನದಂಡೆಯನ್ನು ಮುಡಿದುಕೊಳ್ಳದಿರುವ ನಿನ್ನ ನೀಳವಾದ ಕೇಶಪಾಶವು ಹೊಳಹೊಳೆಯುತ್ತಿರುವ ಬಾಲಚಂದ್ರನು ಹುಟ್ಟದಿರುವಾಗ ಕಗ್ಗತ್ತಲೆಯಾಗುವ ರಾತ್ರಿಯಂತೆ ನನ್ನ ಮನಸ್ಸಿಗೆ ಖೇದವನ್ನುಂಟುಮಾಡುತ್ತಿದೆ. ೪೩. ಈಗ ನಿನಗೆ ಉಂಟಾಗಿರುವ ಮನೋವ್ಯಥೆಗೆ ಕಾರಣವೇನು ? ಹೊಸಚಿಗುರಿನಂತೆ "ವಿರಕ್ತವಾಗಿರುವ" (೧. ಕೆಂಪಗಿರುವ ೨. ಬೇಸರಿಕೆಯಿಂದ ಕೂಡಿರುವ) ನನ್ನ ಮನಸ್ಸು ನಿನ್ನ ಈ ಬಗೆಯನ್ನು ಕಂಡು ನಡುಗುತ್ತಿದೆ. ೪೪. ನಿನ್ನ ಈ ಮನೋವ್ಯಥೆಯು ನನ್ನ ದೆಸೆಯಿಂದ ಒದಗಿದೆಯೊ ? ಅಥವಾ ನನ್ನ ಪರಿಜನರ ದೆಸೆಯಿಂದ ಒದಗಿದೆಯೊ? ನೋಡಿದರೆ ನನ್ನಿಂದ ನಿನ್ನ ವಿಷಯದಲ್ಲಿ ಎಂದೂ ಯಾವ ತಪ್ಪೂ ಉಂಟಾಗಿರುವಂತೆ ನನಗೆ ಕಂಡುಬರುವುದಿಲ್ಲ. ಈ ನನ್ನ ಚಕ್ರಾಧಿಪತ್ಯವೂ ನನ್ನ ಪ್ರಾಣವೂ ನಿನಗೆ ಅಧೀನವಾಗಿದೆ. ಎಲೈ ಕಮಲನೇತ್ರೆ ! ನಿನ್ನ ಶೋಕಕ್ಕೆ ಏನು ಕಾರಣ ಎಂಬು

ವ|| ಎಂದು ಶೋಕಕಾರಣಮನೆನಿತುಂ ಬೆಸಗೊಂಡೊಡಂ ಪೇಟದೆ ವಿಳಾಸವತಿಮಹಾದೇವಿ ಬಾಷ್ಪಾಂಬುಸಂತತಿಯನೆ ಸುರಿಯುತ್ತುಮಿರ್ಪುದುಂ ಕೆಲದೊಳಿರ್ದ ಸಖೀಕದಂಬದ ಮೊಗಮಂ ನೋಡೆ ಸಂತತಸನ್ನಿಹಿತೆಯಪ್ಪ ತಾಂಬೂಲಕರಂಕವಾಹಿನಿ ಮಕರಿಕೆಯೆಂಬಳಿಂತೆದಳ್

ಅರಸಿಯ ನೆಗಟ್ತೆ ನೋಡಲ್
ಪಿರಿದುಂ ವಿಸ್ಮಯಮನಾಗಿಪುದು ದೇವ ಮನೋ
ಹರಮೆನಿಪ ರಾಜ್ಯವಿಭವದ
ಪರಮಸುಖಂ ತನಗೆ ವಿಫಳಮಾದವೊಲೀಗಳ್ ೪೫

ಮನೆಯೊಳ್ ಮಱುಗುತ್ತಿರೆ ಮ
ಜ್ಜನಭೋಜನಭೂಷಣಂಗಳೆಂಬಿವುಮಂ ಪ್ರಾ
ರ್ಥನೆಗೆಯ್ದು ದೇವ ನಿಚ್ಚಮು
ಮನುವಿಸಿ ನೆಗಟ್ಪುದು ಪರಿಜನಂ ಮಾನಿನಿಯಾ ೪೬

ವ|| ಅದಲ್ಲದೆಯುಮಿಂದುವರಂ ದೇವರ ಮನಂ ನೊಂದಪ್ಪುದೆಂದು ಮನಂದೋಱದಿರ್ಪಳಿಂದು ಮಹಾಕಾಳದೇವರಂ ಪೂಜಿಸುತ್ತುಮಿರ್ಪಲ್ಲಿ ಭಾರತಕಥಾಶ್ರವಣದೊಳ್ ಪುನ್ನಾಮ್ನೋ ನರಕಾತ್ತ್ರಾಯತ ಇತಿ ಪುತ್ರಃ ಅಪುತ್ರಾಣಾಂಕಿಲ ಗತಿರ್ನಾಸ್ತಿ ನಸಂತಿ ಲೋಕಾಃ ಶುಭಾಃ ಎಂಬೀ ವಾಕ್ಯಾರ್ಥಮಂ ಕೇಳ್ದು

ದನ್ನು ನನಗೆ ತಿಳಿಯಪಡಿಸು." ವ|| ಎಂದು ದುಃಖಕ್ಕೆ ಕಾರಣವನ್ನು ಎಷ್ಟು ಕೇಳಿದರೂ ಹೇಳದೆ ವಿಲಾಸವತಿ ಮಹಾರಾಣಿಯು ಕಣ್ಣೀರಿನ ಧಾರೆಯನ್ನು ಸುರಿಸುತ್ತಾ ಪಕ್ಕದೊಳಿದ್ದ ಗೆಳತಿಯರ ಮುಖವನ್ನು ನೋಡಲಾಗಿ ಯಾವಾಗಲೂ ಜೊತೆಯಲ್ಲೇ ಇರುವ ಹಡಪವಳತಿಯಾದ ಮಕರಿಕೆ ಎಂಬುವಳು ಹೀಗೆ ಹೇಳಿದಳು. ೪೫. "ಪ್ರಭುವೆ, ರಾಣಿಯ ಕೆಲಸವನ್ನು ನೋಡಿದರೆ ಬಹಳ ಆಶ್ಚರ್ಯವುಂಟಾಗುತ್ತದೆ. ಈ ಮನೋಹರವಾದ ರಾಜ್ಯಸಂಪತ್ತಿನ ಪರಮಸೌಖ್ಯವೆಲ್ಲವೂ ತನಗೆ ವ್ಯರ್ಥವಾದುತೆ ಅವಳು ಭಾವಿಸಿದ್ದಾಳೆ. ೪೬. ಹೀಗೆ ಅವಳು ಅರಮನೆಯಲ್ಲಿ ಮರುಗುತ್ತಾ ಇರುತ್ತಾಳೆ. ಅವಳಿಗೆ ಯಾವುದರಲ್ಲೂ ಆಸಕ್ತಿಯಿಲ್ಲ. ಪರಿಜನರು ಪ್ರತಿನಿತ್ಯವೂ ಪ್ರಾರ್ಥಿಸಿ ಸಮಾಧಾನಪಡಿಸಿ ಸ್ನಾನ, ಊಟ, ಅಲಂಕಾರಗಳನ್ನು ಮಾಡಿಸುತ್ತಾರೆ. ವ|| ಅದಲ್ಲದೆ ಇಲ್ಲಿಯವರೆಗೂ ಮಹಾಸ್ವಾಮಿಯವರ ಮನಸ್ಸಿಗೆ ನೋವಾಗುವುದೆಂದು ತನ್ನ ವ್ಯಥೆಯನ್ನು ತಮ್ಮೆದುರಿನಲ್ಲಿ ತೋರ್ಪಡಿಸಿಕೊಳ್ಳುತ್ತಿರಲಿಲ್ಲ. ಆದರೆ ಈದಿನ ಮಹಾಕಾಳೇಶ್ವರ ದೇವಾಲಯಕ್ಕೆ ಹೋಗಿ ಪೂಜೆ ಸಲ್ಲಿಸುತ್ತಿರಲಾಗಿ ಅಲ್ಲಿ ಮಹಾಭಾರತಕಥಾಶ್ರವಣದಲ್ಲಿ "ಪುತ್ ಎಂಬ ಹೆಸರುಳ್ಳ ನರಕದ ದೆಸೆಯಿಂದ ಕಾಪಾಡುವವನೇ ಪುತ್ರ. ಮಕ್ಕಳಿಲ್ಲದವರಿಗೆ ಸದ್ಗತಿ ಎಂಬುದಿಲ್ಲ ಮತ್ತು ಮಂಗಳಕರವಾದ ಪರಲೋಕವೂ ಇಲ್ಲ" ಎಂಬ

ಅಂತು ಮನೆಗಾಗಳೇ ಬಂ
ದಂತಸ್ಸಂತಾಪವೊದವೆ ಬಾಷ್ಪಾಂಬುವನೋ
ರಂತೆ ಸುರಿಯುತ್ತುಮಿರ್ದಪ
ಳೆಂತುಂ ಸಂತೈಸಲಾರ್ತೆನಿಲ್ಲವನಿಪತೀ ೪೭

ಇಲ್ಲಿಂದಿತ್ತಲ್ ದೇವರ್
ಬಲ್ಲಿರೆನುತ್ತುಸಿರದಿರ್ಪುದುಂ ಮಕರಿಕೆ ಭೂ
ವಲ್ಲಭನರಿದಾಗಳ್ ನಿಜ
ವಲ್ಲಭೆಯಂ ನೋಡಿ ದುಃಖದಿಂ ಬಿಸುಸುಯ್ದಂ ೪೮

ನಮಗೀತಾದುದು ದೈವಮಾತ್ಮಜಪರಿಷ್ವಾಂಗಾಮೃತಾಸ್ವಾದ ಸೌ
ಖ್ಯಮದೆಂತುಂ ದೊರೆಕೊಂಡಿತಿಲ್ಲ ಹೃದಯಕ್ಕೋರಂತೆ ಮುಂ ಪುಣ್ಯಕ
ರ್ಮಮನಂತಾಗಿರೆ ಮಾಡದೀಗಳಟಲಿಂ ಪೇಟೆಂತಟುತ್ತಿರ್ದಳ
ಕ್ಕುಮೆ ಬೇಡಂಗನೆ ಮಾಣ್ಬುದೆಂದುಸಿರ್ದಂ ತಾರಾಪೀಡಚಕ್ರೇಶ್ವರಂ ೪೯

ಗುರುಜನದಲ್ಲಿ ಮಾಡಧಿಕಭಕ್ತಿಯನರ್ಚಿಸು ದೇವರಂ ಮುನೀ
ಶ್ವರ ಪರಿಚರ್ಯೆಯೊಳ್ ಪಿರಿದುಮಾದ್ರತೆಯಾಗು ದಿಟಕ್ಕೆ ದಲ್ ಮುನೀ
ಶ್ವರರ್ಗಳೆ ದೈವಮೆಂದವರ ಪಾದಪಯೋರುಹ ಸೇವೆಯಲ್ಲಿ ತ
ತ್ಪರರೆನಿಪರ್ಗೆ ಪೇಟ್ ಪಡೆಯಲಾಜಿದುದೇಂ ತರಳಾಯತೇಕ್ಷಣೇ ೫೦

ವಾಕ್ಯದ ಅರ್ಥವನ್ನು ಕೇಳಿ, ೪೭. ಕೂಡಲೆ ಅಲ್ಲಿ ಒಂದು ಕ್ಷಣವೂ ನಿಲ್ಲದೆ ಅರಮನೆಗೆ ಬಂದು ಮನದೊಳಗೆ ಬೇಗುದಿಯುಂಟಾಗಲು ಒಂದೇಸಮನೆ ಕಣ್ಣೀರಂ ಸುರಿಸುತ್ತಾ ಇದ್ದಾರೆ. ಏನಾದರೂ ಸಮಾಧಾನಪಡಿಸಲು ಸಾಧ್ಯವಾಗುತ್ತಿಲ್ಲ, ಮಹಾಸ್ವಾಮಿ! ೪೮. ಇಲ್ಲಿಂದ ಮುಂದೆ ಪ್ರಭುಗಳ ಚಿತ್ತ" ಎಂದು ಮಕರಿಕೆಯು ಹೇಳುತ್ತಿರಲಾಗಿ ತಾರಾಪೀಡನು ವಿಷಯವನ್ನು ತಿಳಿದುಕೊಂಡು ತನ್ನ ಮಡದಿಯನ್ನು ನೋಡಿ ದುಃಖದಿಂದ ನಿಟ್ಟುಸಿರು ಬಿಟ್ಟನು. ೪೯. "ನಮ್ಮ ಅದೃಷ್ಟವೇ ಹೀಗಿದೆ ರಾಣಿ. ಮಕ್ಕಳನ್ನು ಎತ್ತಿ ತಬ್ಬಿಕೊಂಡು ಆನಂದವನ್ನು ಸವಿಯುವ ಭಾಗ್ಯವು ನಮ್ಮ ಹೃದಯಕ್ಕೆ ಲಭ್ಯವಾಗಿಲ್ಲ. ಹಿಂದೆ ಪುಣ್ಯಕರ್ಮಗಳನ್ನು ಮಾಡದೆ ಈಗ ಅಳಲಿನಿಂದ ಅಳುತ್ತಿದ್ದರೆ ಫಲವೇನು ? ಹೇಳು. ಬೇಡ, ಅಳುವುದನ್ನು ನಿಲ್ಲಿಸು" ಎಂದು ತಾರಾಪೀಡಚಕ್ರವರ್ತಿಯು ಹೇಳಿದನು. ೫೦. "ಚಂಚಲವಾದ ಹಾಗೂ ಅಗಲವಾದ ಕಣ್ಣುಳ್ಳ ಸುಂದರಿ, ಗುರುಹಿರಿಯರಲ್ಲಿ ಹೆಚ್ಚು ಭಕ್ತಿಯನ್ನು ಮಾಡು. ದೇವರನ್ನು ಭಕ್ತಿಯಿಂದ ಪೂಜಿಸು. ಮಹರ್ಷಿಗಳ ಸೇವೆಯಲ್ಲಿ ಹೆಚ್ಚು ನಿರತಳಾಗು. ಏಕೆಂದರೆ ನಿಜವಾಗಿಯೂ ಋಷಿಗಳೇ ದೇವರು. ಅವರ ಪಾದಕಮಲಸೇವೆಯಲ್ಲಿ ಆಸಕ್ತರಾದವರಿಗೆ ಪಡೆಯಲಾಗದುದು

ದನುಜಾರಿರಿಪು ಜರಾಸಂ
ಧನೆಂಬ ಸುತನತಿರಥಂ ಬೃಹದ್ರಥನಾವಾ
ವನಿಪಂಗೆ ಚಂಡಕೌಶಿಕ
ಮುನೀಂದ್ರನಿಂದಾದನೆಂಬುದಂ ಕೇಳ್ದರಿಯಾ ೫೧

[ಶರನಿಧಿ]ಯಂದದಿಂದತಿಗಭೀರಗುಣೋನ್ನತಿಯಿಂದ ಸಂದ ಮಂ
ದರಧರಬಾಹುಗಳ್ ವಸುಮತೀತಳರಕ್ಷಣದಕ್ಷರಪ್ಪ ನಾ
ಲ್ವರುಮವನೀಶರಂ ದಶರಥಂ ಪಡೆದಂ ತನುಜಾತರಂ ವಯಃ
ಪರಿಣತಿಯೊಳ್ ವಿಭಾಂಡಕ ಮಹಾಮುನಿಮುಖ್ಯವರಪ್ರಸಾದದಿಂ ೫೨

ವ॥ ಎನುತ್ತೆ ವಿಶ್ವಾನಂದಭವನನಪ್ಪಾತ್ಮಸಂಭವನನಾ ಮಹಾನುಭಾವಂ ಬಿಡದೆ ಭಾವಿಸಿ ನಿಜಪ್ರಾಣೇಶ್ವರಿಯ ಮೊಗಮಂ ನೋಡಿ

ಅಮೃತಕರನುದಯಮಾಗಲ್
ಸಮನಿಸೆ ತಳ್ತಿಂದ್ರದಿಗ್ವಧೂಮುಖದೊಳ್ ಬೆ
ಳ್ಪಮರ್ದಂತೆ ಗರ್ಭದಿಂದಂ
ಹಿಮಕರಮುಖಿಮುಖದೊಳೆಂದು ಬೆಳ್ಪೆಸೆದಪುದೋ ೫೩

ನಂದನ ಜನ್ಮೋತ್ಸವದೊದ
ವಿಂದಂ ಪರಿತಂದು ಪೂರ್ಣಪಾತ್ರಮನತ್ಯಾ
ನಂದವೊದವಲ್ಕೆ ಪರಿಜನ
ಮೆಂದೆಳೆಕುಳಿಗೊಳ್ವ ಸೈಪು ಸಮನಿಸಿದಪುದೋ ೫೪

ಯಾವುದೂ ಇಲ್ಲ. ೫೧. ಹಿಂದೆ ಬೃಹದ್ರಥನೆಂಬ ರಾಜನಿಗೆ ಚಂಡಕೌಶಿಕನೆಂಬ ಮುನೀಶ್ವರನ ವರದಿಂದ ಬಹಳ ಪರಾಕ್ರಮಶಾಲಿಯಾದ ಶ್ರೀಕೃಷ್ಣನನ್ನು ಗೆದ್ದಿದ್ದ ಜರಾಸಂಧನೆಂಬ ಮಗನು ಹುಟ್ಟಿದ್ದು ನಿನಗೆ ಗೊತ್ತಿಲ್ಲವೇ ? ೫೨. ದಶರಥ ಮಹಾರಾಜನು ಮುಪ್ಪಿನಲ್ಲಿ ವಿಭಾಂಡಕಮುನಿಗಳ ಪುತ್ರನಾದ ಋಷ್ಯಶೃಂಗ ಮಹರ್ಷಿಗಳ ವರಪ್ರಸಾದದಿಂದ ಸಮುದ್ರದಂತೆ ಬಹಳ ಗಂಭೀರವಾದ ಗುಣಗಳ ಸಮೃದ್ಧಿಯಿಂದ ಕೂಡಿರುವ, ವಿಷ್ಣುವಿನ ನಾಲ್ಕು ತೋಳುಗಳಂತಿರುವ, ಭೂಮಿಯನ್ನು ಕಾಪಾಡುವುದರಲ್ಲಿ ಸಮರ್ಥರಾದ ನಾಲ್ಕುಜನ ರಾಜಪುತ್ರರನ್ನು ಮಕ್ಕಳಾಗಿ ಪಡೆದನು" ವ॥ ಎಂದು ಹೇಳುತ್ತಾ ಸಮಸ್ತ ಸಂತೋಷಕ್ಕೂ ನೆಲೆಯಂತಿರುವ ಮಗನನ್ನು ಮಹಾನುಭಾವನಾದ ತಾರಾಪೀಡನು ಬಿಡದೆ ನೆನೆಸಿಕೊಳ್ಳುತ್ತಾ ತನ್ನ ಪ್ರಾಣಕಾಂತೆಯ ಮುಖವನ್ನು ನೋಡಿ, ೫೩. "ಚಂದ್ರೋದಯವಾದಾಗ ಪೂರ್ವದಿಕ್ಕೆಂಬ ಕಾಮಿನಿಯ ಮುಖದಲ್ಲಿ ಬಿಳುಪು ಹರಡುವಂತೆ ಗರ್ಭಧಾರಣೆಯಿಂದ ನಿನ್ನ ಮುಖದಲ್ಲಿ ಬಿಳುಪು ಯಾವಾಗ ಉಂಟಾಗುವುದೋ ಎಂದು ಚಿಂತಿಸುತ್ತಿದ್ದೇನೆ. ೫೪. ಪುತ್ರಜನ್ಮೋತ್ಸವವು ಸಂಭವಿಸಿರಲಾಗಿ ಅತ್ಯಾನಂದಭರಿತರಾದ ಪರಿಜನರು ಓಡಿಬಂದು ನನ್ನಿಂದ ಬಹುಮಾನವನ್ನು ಪಡೆದುಕೊಳ್ಳಲು ತವಕಿಸುತ್ತಿರುವುದನ್ನು ನೋಡುವ ಭಾಗ್ಯವು

ಇನಬಿಂಬಂ ಕಣ್ಗೊಳುಂಬಂ ತೊಳಗಿ ಬೆಳಗೆ ಬಾಲಾತಪಂ ಸುತ್ತಲುಂ ಕಂ
ಪಿನಸೊಂಪಂ ಬೀಱೆ ಕಣ್ಗೆಟ್ಟಳವೆನಿಪ ನಭೋಲಕ್ಷ್ಮಿಯೆಂಬಂತಿರುತ್ಸಂ
ಗನಿಷಣ್ಣಂ ನಂದನಂ ಕಣ್ಗೊಳಿಸುತಿರೆ ಪರಿದ್ರಾಂಶುಕಾಲಿಂಗಿತಾಂಗಂ
ತನಗೊಪ್ಪಲ್ಕೆಂದು ಮದ್ವಲ್ಲಭೆ ಮನಕೆ ಮಹೋತ್ಸಾಹಮಂ ಮಾಡಿದಪ್ಪಳ್ ೫೫

ಪನೆಗಳ್ ತೋರದ ಮಂದಹಾಸರುಚಿ ಮುದ್ದಂ ನಾಡೆಯುಂ ಬೀಱೆ ರೋ
ಚನದಿಂ ರಂಜಿಪ ನೂಲರಕ್ಕೆವಣಿಗಳ್ ಚೆಲ್ವಾಗೆ ವಿಸ್ಫಾರಲೋ
ಚನಯುಗ್ಮಂ ಮಿಸುಗಲ್ ಮಱಲ್ದೆಸೆವ ತೂಗುಂದೊಟ್ಟಿಲೊಳ್ ಪಟ್ಟ ಪು
ತ್ರನ ವಕ್ತ್ರೇಂದುವನಂಜನಾಂಕಿತಮನಾನಿನ್ನೆಂದು ಪೇೞ್ ಕಾಣ್ಬೆನೋ ೫೬

ಹೃದಯದೊಳೊದವಿದ ಕತ್ತಲೆ
ಚೆದುರುವಿನಂ ಮಂಗಳಪ್ರದೀಪದವೋಲ
ಭ್ಯುದಯಕರನೆನಿಪ ನಂದನ
ನದೆಂದು ತೊಳಗುವನೊ ಕಾಂತೆಯರ ಕರತಳದೊಳ್ ೫೭

ಸಂಗಡಿಸಿದ ಕಿಱುಜಡೆಗಳ
ತೊಂಗಲ್ಗಳಿನೊಪ್ಪೆ ಜಾನುಚಂಕ್ರಮಣಂ ಪ
ರ್ಮಾಂಗಣದೊಳೆಂದು ಸುೞಗುವೊ
ಸಿಂಗದಮಱಯಂತಿರೆಸೆದುತೋರ್ಪ ಕುಮಾರಂ ೫೮

ನನಗೆ ಎಂದು ಒದಗುತ್ತದೆಯೋ ? ೫೫. ಸೂರ್ಯಮಂಡಲವು ಆಗತಾನೆ ಉದಯಿಸಿ ಕಣ್ಣಿಗೆ ಆನಂದವಾಗುವಂತೆ ಚೆನ್ನಾಗಿ ಪ್ರಕಾಶಿಸುತ್ತಿರಲು ಮತ್ತು ಎಳೆಬಿಸಿಲು ಎಲ್ಲೆಲ್ಲೂ ಕೆಂಬಣ್ಣದ ಸೊಬಗನ್ನು ಹರಡುತ್ತಿರಲು ಕಣ್ಣಿಗೆ ಆಪ್ಯಾಯಮಾನವಾಗಿರುವ ಆಕಾಶದ ಶೋಭೆಯಂತೆ ತೊಡೆಯ ಮೇಲೆ ಮಲಗಿಕೊಂಡಿರುವ ಶಿಶು ಕಂಗೊಳಿಸುತ್ತಿರಲಾಗಿ ಅರಿಶಿನ ಕೆಂಬಣ್ಣದ ಸೀರೆಯನ್ನುಟ್ಟುಕೊಂಡಿರುವ ನನ್ನ ಪ್ರಾಣಕಾಂತೆಯು ಎಂದು ನನ್ನ ಮನಸ್ಸಿಗೆ ಹುರುಪನ್ನು ಉಂಟುಮಾಡುತ್ತಾಳೋ ! ೫೬. ಹಲ್ಲಿಲ್ಲದ ಬಾಯಿಯಲ್ಲಿ ಕಿರುನಗೆಯ ಕಾಂತಿಯು ಅತಿಶಯವಾದ ಸೊಬಗನ್ನು ಸೂಸುತ್ತಿರಲು, ಗೋರೋಚನದಿಂದ ರಂಜಿಸುತ್ತಿರುವ ರಕ್ಷಾಸೂತ್ರಮಣಿಗಳು ಕಂಠದಲ್ಲಿ ಶೋಭಿಸುತ್ತಿರಲು, ಅಗಲವಾದ ಎರಡು ಕಣ್ಣುಗಳು ಹೊಳೆಯುತ್ತಿರಲು, ತೂಗುವ ತೊಟ್ಟಿಲಿನಲ್ಲಿ ಮಲಗಿರುವ ಮಗುವಿನ ಕಾಡಿಗೆಬೊಟ್ಟಿನಿಂದ ರಂಜಿಸುವ ಮುಖಚಂದ್ರನನ್ನು ಯಾವತ್ತು ನೋಡುತ್ತೇನೊ ! ಹೇಳು. ೫೭. ನಮ್ಮ ಹೃದಯದಲ್ಲಿ ಆವರಿಸಿರುವ ನಿರಾಶೆಯೆಂಬ ಕಗ್ಗತ್ತಲೆಯನ್ನು ಪರಿಹಾರ ಮಾಡುವ ಮಂಗಳದೀಪದಂತೆ ನಮಗೆ ಏಳಿಗೆಯನ್ನುಂಟುಮಾಡುವ ಕುಮಾರನು ಅರಮನೆಯ ಹೆಂಗಸರ ಕೈಗಳನ್ನು ಎಂದು ಅಲಂಕರಿಸುತ್ತಾನೊ ! ೫೮. ಒಟ್ಟುಗೂಡಿಸಿರುವ ಕಿರುಜಡೆಗಳ ಗಂಟಿನಿಂದ ಶೋಭಿಸುವ, ಅಂಬೆಗಾಲಿಕ್ಕುವ, ಸಿಂಹದ ಮರಿಯಂತೆ ಮೆರೆಯುವ ಗಂಡುಕೂಸು ಅರಮನೆಯ ಹಜಾರದಲ್ಲಿ ಎಂದು ಸುಳಿದಾಡುತ್ತಾನೊ !

ಲಲನಾಮಂಜೀರನಾದಕ್ಕೆಳಸುವ ಕಳಹಂಸಂಗಳಂ ಕಂಡು ಬೆಂಬೆ
ನ್ನೊಳೆ ನೀಡುಂ ಪೋಪ ಕಾಂತಾಭವನ ಹರಿಣಶಾಬಂಗಳೆಟ್ಟಿಂದು ಚಂದ್ರೋ
ಪಳಭಿತ್ತಿಪ್ರಾಂತದೊಳ್ ಮಾರ್ಪೊಳೆಯಲೆನಗಿವಂ ತಂಮ ನೀನೀವುದೆಂದಾ
ಗಳುಮಾದಂ ದಾದಿಗಾಯಾಸಮನೊಡರಿಪಮುದ್ದಾತ್ಮಜಂಗೆಂದುತೋರ್ಕುಂ
೫೯

ಮದಲೇಖಾಮಂಡನಂ ಕಣ್ಗೊಳಿಸೆ ಕದಪಿನೊಳ್ ನೀಳ್ದ ಕಸ್ತೂರಿಕಾಪಂ
ಕದಿನಂಗುಲ್ಯಂಕುಶಾಕರ್ಷಣಮಮರೆ [ಶಿರಂದೂಗುತಂತೆ]ತ್ತಿ ಕೆಯ್ಯಂ
ಕೆದಱುತ್ತುಂ ಧೂಳಿಯಂ ಪ್ರೀತಿಯನೊದವಿಪ ಗಂಡೋಚ್ಚಲಡ್ಡಿಂಡಿ
ಸದಿನೆಂದೋ ಮುಂದೆ ಮನ್ನಂದನನೆಸೆವ ಗಜಕ್ರೀಡೆಯಿಂದಾಡುತಿರ್ಪಂ ೬೦

ತಳಿರಡಿಯಿಡುತಂ ಕುಟ್ಟಿಮ
ತಳದೊಳ್ ಮಾರ್ಪೊಳೆಯುತಿರೆ ನಿಜಪ್ರತಿಬಿಂಬಂ
ಗಳನೀಕ್ಷಿಸುತುರೆ ಕೌತುಕ
ಚಳನಯನದೆ ತನಯನೆಂದು ಬಟಿಸಂದಪನೋ ೬೧

೫೯. ಅರಮನೆಯ ಮಹಿಳೆಯರ ಕಾಲ್ಗಡಗಗಳ ಧ್ವನಿಗೆ ಮಾರುಹೋಗಿ ಬಂದಿರುವ ರಾಜಹಂಸಗಳನ್ನು ನೋಡಿ ಅವುಗಳ ಬೆನ್ನುಹತ್ತಿ ಬೆನ್ನುಹತ್ತಿ ಓಡಾಡುವ ಮತ್ತು ರಾಣೀವಾಸದ ಜಿಂಕೆಮರಿಗಳನ್ನು ಎಳೆದುಕೊಂಡು ಬಂದು ಚಂದ್ರಕಾಂತಶಿಲೆಯ ಗೋಡೆಯಲ್ಲಿ ಅವುಗಳ ಪ್ರತಿಬಿಂಬವನ್ನು ನೋಡಿ ಅವುಗಳನ್ನು ಜಿಂಕೆಯೆಂದೇ ಭ್ರಮಿಸಿ ಇವುಗಳನ್ನು ತನಗೆ ಕೊಡಬೇಕೆಂದು ಯಾವಾಗಲೂ ದಾದಿಯನ್ನು ಕಾಡಿಸಿ ಗೋಳುಗುಟ್ಟಿಸುವ ಮಗುವಿನ ಮುದ್ದಾಟವನ್ನು ನಾನು ಯಾವಾಗ ನೋಡುತ್ತೇನೋ ಕಾಣೆ. ೬೦. ಕೆನ್ನೆಯಲ್ಲಿ ಕಸ್ತೂರಿದ್ರವದಿಂದ ಬರೆದಿರುವ ಆನೆಯ ಮದರೇಖೆಯಂದದ ನೀಳವಾದ ಗೆರೆಯು ಕಂಗೊಳಿಸುತ್ತಿರಲು, ದಾದಿಯು ಅಂಕುಶದಂತಿರುವ ತನ್ನ ಕೈಬೆರಳುಗಳಿಂದ ತಿವಿಯಲು ಬರುವುದಿಲ್ಲವೆಂದು ಅಸಮ್ಮತಿಯನ್ನು ಸೂಚಿಸಲು ತಲೆಯನ್ನು ಅಳ್ಳಾಡಿಸುವ, ಕೈಯನ್ನು ಎತ್ತಿ ಧೂಳನ್ನು ಎರಚುತ್ತಿರುವ ಬಾಯಿಂದ ಹೊರಡುತ್ತಿರುವ ಡಿಂಡಿಮದಂತೆ ಇಂಪಾದ ಟ್ಲಟ್ಲ ಎಂಬ ಧ್ವನಿಯಿಂದ ಪ್ರೀತಿಯನ್ನುಂಟುಮಾಡುವ ಮುದ್ದುಗುವರನು ನನ್ನ ಮುಂದೆ ಆನೆಯ ಲೀಲೆಯನ್ನು ಎಂದು ತೋರಿಸುತ್ತಾನೋ ಟಿ. ಆನೆಯ ಕೆನ್ನೆಯ ಮೇಲೂ ಮದೋದಕದ ಧಾರೆಗಳು ಕಂಗೊಳಿಸುತ್ತವೆ. ಮಾವಟಿಗನು ಚುಚ್ಚುವ ಅಂಕುಶದಿಂದ ಅದೂ ತಲೆಯನ್ನು ಅಳ್ಳಾಡಿಸುತ್ತದೆ. ಅದೂ ಸೊಂಡಿಲನ್ನು ಮೇಲಕ್ಕೆತ್ತಿ ಧೂಳಿಯನ್ನು ಎರಚುತ್ತದೆ. ಅದರ ಬಾಯಿಂದಲೂ ಡಿಂಡಿಮಧ್ವನಿಯಂದದ ಶಬ್ದವು ಹೊರಡುತ್ತದೆ. ಹೀಗೆ ಮಗು ಗಜಲೀಲೆಯನ್ನು ಆಡುವುದನ್ನು ತಾನು ನೋಡಬೇಕೆಂದು ರಾಜನು ಹಂಬಲಿಸುತ್ತಾನೆ. ೬೧. ತಪ್ಪುಹೆಜ್ಜೆಗಳನ್ನಿಡುತ್ತಾ ನೆಲೆಗಟ್ಟಿನಲ್ಲಿ ಪ್ರತಿಫಲಿಸಿರುವ ತನ್ನ ಪ್ರತಿಬಿಂಬವನ್ನು ಕುತೂಹಲದಿಂದ ಚಂಚಲವಾದ ಕಣ್ಣುಗಳಿಂದ ನೋಡುತ್ತಾ ಮಗು ಯಾವಾಗ ನನ್ನ ಹತ್ತಿರಕ್ಕೆ ಬರು

ಬಾರೆಲೆ ತಂದೆ ಬಾರರಸ ಬಾ ಪೊರೆವಾಟ್ಟನೆ ಬಾಯೆನುತ್ತೆ ವಿ
ಸ್ತಾರಿತದೀರ್ಘಬಾಹುಯುಗಳರ್ ಪರಮೋತ್ಸವದಿಂದಶೇಷ ಧಾ
ತ್ರೀರಮಣರ್ ಮರಲ್ದು ಕರೆಯುತ್ತಿರೆಯುಂ ಮಣಿಭೂಷಣಾಂಶು ವಿ
ಸ್ತಾರಿತನೇತ್ರನೆಂದು ಸುಟಿದಪ್ಪನೊ ಮುಂದೆ ಸಭಾಂತರಾಳದೊಳ್ ೬೨

ವ॥ ಎಂದಿವು ಮೊದಲಾಗಿ ಪಲವುಂ ಮನೋರಥಂಗಳಂ ಚಿಂತಿಸುತ್ತುಮಿರ್ದು ಮತ್ತಂ ಪ್ರಿಯಮಧುರಂಗಳುಂ ಶೋಕಾಪನೋದನಿಪುಣಂಗಳುಂ ಧರ್ಮೋಪದೇಶಗರ್ಭಂಗಳುಮಪ್ಪ ವಚನನಿಚಯಂಗಳಿನೆಂತಾನುಂ ಸಂತೈಸಿ ನಿಜಪರಿಜನಂಬೆರಸರಸಂ ಬಿಜಯಂಗೆಯ್ದ ನಲ್ಲಿಂ ಬಟಿಕ್ಕಂ ವಿಳಾಸವತಿಮಹಾದೇವಿ ದುಃಖಮಂ ಪತ್ತುವಿಟ್ಟೆಂದಿನಂತಾಭರಣಂಗಳಂ ತೊಟ್ಟು

ಗುರುದೇವದ್ವಿಜಪೂಜಾ
ಪರಿಚರ್ಯೆಯನೆಸಗಿ ಭಕ್ತಿಯಿಂ ಮತ್ತುಂ ಪೇ
ಟ್ವರ ಮಾತೆಲ್ಲಂ ಕೇಳ್ದಾ
ದರದಿಂದಂ ಗರ್ಭತೃಷ್ಣೆಯಿಂದೊಡರಿಸಿದಳ್ ೬೩

ವಿವಿಧ ನವಪ್ರಸೂನ ಫಳಪುಣ್ಯನದೀಜಳ ನೂತರತ್ನಪ
ಲ್ಲವನಿವಹಂಗಳಿಂದೆಸೆವ ಪೊಂಗಳಸಂಗಳನೆತ್ತಿ ಸುತ್ತುಮು
ತ್ಸವದೊಳಿ ಬಂದು ಗೋಪವನಿತಾನಿಕರಂ ಮಿಸಿಸಲ್ಕವತ್ಸಧೇ
ನುವಿನಡಿಯೊಳ್ ವಿಲಾಸವತಿ ಮಾವಳನಾಕುಲ ಗೋಕುಲಂಗಳೊಳ್ ೬೪

ತ್ತಾನೋ. ೬೨. ಬಾರೋ ತಂದೆ, ಬಾ ದೊರೆ! ಕಾಪಾಡುವ ಒಡೆಯನೆ ಬಾಪ್ಪ! ಎಂದು ಕರೆಯುತ್ತಾ ತಮ್ಮ ನೀಳವಾದ ಎರಡು ತೋಳುಗಳನ್ನೂ ಚಾಚಿ ಸಾಮಂತರಾಜರೆಲ್ಲರೂ ಬಹಳ ಸಂತೋಷದಿಂದ ಮತ್ತೆ ಮತ್ತೆ ಕರೆಯುತ್ತಿರಲು ರತ್ನದ ಒಡವೆಗಳ ಬೆಳಕಿನಿಂದ ರಾಜರ ಕಣ್ಣುಗಳನ್ನು ಅಗಲವಾಗುವಂತೆ ಮಾಡುವ ಕುಮಾರನು ಆಸ್ಥಾನಮಂಟಪಕ್ಕೆ ಬಂದು ಎಂದು ನನ್ನ ಮುಂದೆ ಸುಳಿದಾಡುತ್ತಾನೋ" ವ॥ ಇವೇ ಮೊದಲಾದ ಹಲವಾರು ಮನೋರಥಗಳನ್ನು ಚಿತ್ರಿಸಿಕೊಳ್ಳುತ್ತಿದ್ದು ಮತ್ತೆ ಹಿತವಾಗಿಯೂ ಮಧುರವಾಗಿಯೂ ಇರುವ ಮನೋವ್ಯಥೆಯನ್ನು ನಿವಾರಿಸುವುದರಲ್ಲಿ ಸಮರ್ಥವಾದ ಧರ್ಮೋಪದೇಶದಿಂದ ಕೂಡಿಕೊಂಡಿರುವ ಮಾತುಗಳಿಂದ ರಾಣಿಯನ್ನು ಹೇಗೋ ಸಮಾಧಾನಪಡಿಸಿ ತನ್ನ ಪರಿವಾರದೊಂದಿಗೆ ರಾಜನು ತೆರಳಿದ ಮೇಲೆ ವಿಲಾಸವತಿಮಹಾರಾಣಿ ದುಃಖವನ್ನು ಬದಿಗೊತ್ತಿ ಎಂದಿನಂತೆ ಆಭರಣಗಳನ್ನು ತೊಟ್ಟು. ೬೩. ಮುಂದೆ ಗುರುಗಳ, ದೇವರ, ಬ್ರಾಹ್ಮಣರ ಸೇವೆಯನ್ನು ಬಹಳ ಭಕ್ತಿಯಿಂದ ಮಾಡತೊಡಗಿದಳು. ಅಲ್ಲದೆ ಯಾರು ಏನು ಹೇಳಿದರೂ ಅವೆಲ್ಲವನ್ನೂ ಬಸುರಿಯಾಗಬೇಕೆಂಬ ಹಂಬಲಿನಿಂದ ನೆರವೇರಿಸುತ್ತಿದ್ದಳು. ೬೪. ಬಳಿಕ ವಿಲಾಸವತಿಯು ನಾನಾ ವಿಧವಾದ ಹೂವುಗಳಿಂದಲೂ, ಹಣ್ಣುಗಳಿಂದಲೂ, ಪುಣ್ಯಕರವಾದ ನದೀಜಲಗಳಿಂದಲೂ ಹೊಸರತ್ನಗಳಿಂದಲೂ ಚಿಗುರುಗಳಿಂದಲೂ ಶೋಭಿಸುವ ಸುವರ್ಣಕಳಶಗಳನ್ನು ಎತ್ತಿ ಸುತ್ತಲೂ

ಸಲೆ ನಿಲೆ ಬೇವ ಗುಗ್ಗುಳದ ಕರ್ವೊಗೆಯಿಂದವಮುರ್ವಣಾಳ್ದು ಕ
ತ್ತಲಿಸುವ ಚಂಡಿಕಾಭವನದೊಳ್ ಧವಳಾಂಶುಕೆ ಶುದ್ಧಮೂರ್ತಿ ನಿ
ಶ್ಚಳತರಮಪ್ಪ ಭಕ್ತಿಯಿನುಪೋಷಿತೆಯಾಗಿ ಕುಶೋಪಧಾನಮಂ
ಗಳ ವಸುಧಾತಳೀಶಯನಸುವ್ರತಮಂ ಲಲಿತಾಂಗಿ ತಾಳ್ದಿದಳ್ ೬೫

ಪತಿಲಿಖಿತಮಂಡಲಸ್ಥಿತೆ
ಕೃತಾಷ್ಟದಿಗ್ದೇವತಾರ್ಚನಪ್ರಕರೆ ದೃಢ
ವ್ರತೆ ಬಹುಳ ಚತುರ್ದಶಿಯೊಳ್
ಚತುಷ್ಪಥಸ್ನಾನವಿಧಿಯನಿರುಳೊಳ್ ತಳೆದಳ್ ೬೬

ತಿಲಪಾತ್ರಪ್ರಕರಂಗಳಂ ಕುಡುವಳಶ್ವತ್ಥಾದಿ ಭೂಜಂಗಳೀ
ಬಲವರ್ಪೊಳ್ ಬಲಿಭುಗ್ವ್ರಜಕ್ಕೆ ಬಲಿಯಂ ತಾನಿಕ್ಕುವಳ್ ಮಾತೃಮಂ
ಡಳಮಂ ಪೂಜಿಸುವಳ್ ಪ್ರಸಿದ್ಧಮಿವು ಲೋಕಕ್ಕೆಂಬನಾಗಹ್ರದಂ
ಗಳೊಳಾ ಮಾನಿನಿ ಮಂಗಳಾಚರಣದಿಂ ಮೀವಳ್ ಮಹೋತ್ಸಾಹದಿಂ ೬೭

ಬೆಸಗೊಳ್ವಳ್ ಋಷಿಸಂಘಮಂ ನಯದೆ ಸಿದ್ಧಾದೇಶಮಾದಂತೆ ಮ
ನ್ನಿಸುವಳ್ ತಾನೊಲವಿಂ ಸಮಸ್ತಶಕುನಜ್ಞಾನೀಕಮಂ ಕೂಡೆ ನೋ
ಡಿಸುವಳ್ ವೃದ್ಧಪರಂಪರಾಗತ ರಹಸ್ಯಾಚಾರಮಂ ಮಾಣದಾ
ಗಿಸುವಳ್ ವೇದಸಮೂಹಮಂ ಪದಪಿನಿಂ ಕೇಳ್ವಳ್ ಪುರಾಣಂಗಳಂ ೬೮

ಗೊಲ್ಲರ ಹೆಂಗಸರು ಬಹಳ ಸಂಭ್ರಮದಿಂದ ಬಂದು ಸ್ನಾನಮಾಡಿಸಲಾಗಿ ಪ್ರಶಾಂತ ವಾದ ಗೊಲ್ಲರಹಳ್ಳಿಗಳಲ್ಲಿ ಕರುವಿನೊಂದಿಗಿರುವ ಗೋವಿನ ಅಡಿಯಲ್ಲಿ ಸ್ನಾನ ಮಾಡಿದಳು. ೬೫. ಅವಿಚ್ಛಿನ್ನವಾಗಿ ಉರಿಯುತ್ತಿರುವ ಗುಗ್ಗುಳದ ಕಪ್ಪು ಹೊಗೆಯಿಂದ ಅತಿಶಯುವನ್ನು ಪಡೆದು ಕತ್ತಲಾಗಿರುವ ಚಂಡಿಕಾದೇವಾಲಯದಲ್ಲಿ ಸ್ನಾನದಿಂದ ಪರಿಶುದ್ಧವಾದ ಶರೀರವುಳ್ಳವಳಾಗಿ ಬಿಳಿಯ ಸೀರೆಯನ್ನುಟ್ಟುಕೊಂಡು ನಿಚ್ಚಟವಾದ ಭಕ್ತಿಯಿಂದ ಕೂಡಿದವಳಾಗಿ ಉಪವಾಸಮಾಡಿ ದರ್ಭೆಯನ್ನು ಹಾಸಿರುವ ಶುಭಕರವಾದ ನೆಲದಲ್ಲಿ ಮಲಗುವ ವ್ರತವನ್ನು ಕೋಮಲಾಂಗಿಯಾದ ರಾಣಿಯು ಮಾಡಿದಳು. ೬೬. ಕೃಷ್ಣಪಕ್ಷದ ಚತುರ್ದಶಿಯ ರಾತ್ರಿಯಲ್ಲಿ ಗಂಡನಿಂದ ಬರೆಯಲ್ಪಟ್ಟ ದುಂಡುಗೆರೆ (ಮಂಡಲ)ಯ ಒಳಗೆ ಕುಳಿತು ಅಷ್ಟದಿಕ್ಪಾಲಕರಿಗೆ ವಿಶೇಷಪೂಜೆಯನ್ನು ಮಾಡಿ ನಾಲ್ಕು ಬೀದಿ ಸೇರುವ ಚೌಕದಲ್ಲಿ ಸ್ನಾನಮಾಡುವ ನೋಹಿಯನ್ನೂ ಮಾಡಿದಳು. ೬೭. ತಿಲಪಾತ್ರೆಯನ್ನು ಬ್ರಾಹ್ಮಣರಿಗೆ ದಾನಮಾಡಿದಳು. ಅಶ್ವತ್ಥವೇ ಮೊದಲಾದ ಪವಿತ್ರವೃಕ್ಷಗಳಿಗೆ ಪ್ರದಕ್ಷಿಣೆ ಮಾಡಿದಳು. ಕಾಗೆಗಳಿಗೆ ಬಲಿಯನ್ನು ಹಾಕುತ್ತಿದ್ದಳು. ಬ್ರಾಹ್ಮೀ, ಮಾಹೇಶ್ವರೀ ಮೊದಲಾದ ಸಪ್ತಮಾತೃಕೆಗಳ ಗುಡಿಗಳಿಗೆ ಹೋಗಿಬರುತ್ತಿದ್ದಳು. ಬಂಜೆತನವನ್ನು ಪರಿಹರಿಸುವ ವಿಷಯದಲ್ಲಿ ಹೆಸರುವಾಸಿಯಾದ ನಾಗರ ಮಡುವುಗಳಲ್ಲಿ ಸ್ನಾನ ಮಾಡಿದಳು. ೬೮. ಬಹಳ ವಿನಯದಿಂದ ಮಹರ್ಷಿಗಳನ್ನು ಪ್ರಶ್ನಿಸುತ್ತಿದ್ದಳು. ಅವರ ಮಾತನ್ನು ಸಿದ್ಧಪುರುಷರ ಭವಿಷ್ಯದಂತೆ ಗೌರವಿಸಿದಳು,

ವ॥ ಮತ್ತಂ ಗೋರೋಚನಾರಚಿತ ಭೂರ್ಜಪತ್ರಗರ್ಭರಕ್ಷಾಮಣಿಗಳಂ ತಾಳ್ದಿಯುಂ ಓಷಧಿಸೂತ್ರಚಯಮಮಂ ತಳೆದುಂ ಉಪಶ್ರುತಿಗಳಂ ಕೇಳ್ದುಮಧ್ವಂಗಳೊಳ್ ಜಂಬುಕಂಗಳ್ಗೆ ಮಾಂಸಬಲಿ ಸಮನ್ವಿತೋಪಹಾರಂಗಳಂ ಮಾಡಿಸಿಯುಮಿಂತನೇಕವಿಧದಿಂ ವಿಳಾಸವತಿಮಹಾದೇವಿ ಪುತ್ರೋತ್ಪತ್ತಿನಿಮಿತ್ತಂ ಪಲವು ದಿವಸಮಾಚರಿಸುತ್ತಮಿರ್ಪುದುಮೊಂದುದಿವಸಂ

ಸುರುಚಿರಸೌಧದೊಳ್ ನೆಲಸಿರಲ್ ನಿಜಕಾಂತೆಯ ವಕ್ತ್ರಬಿಂಬದೊಳ್
ಕರಿಣಿಯ ಸೃಕ್ವಮಂ ಪುಗುವ ನೀರಜಕಾಂಡಮೆನಲ್ಕಿಳಾಮನೋ
ಹರಶಶಿಮಂಡಳಂ ಪುಗುವುದಂ ವಸುಧಾಧಿಪನಂದು ಕಂಡನ
ಚ್ಚರಿಯೆನಿಸಿರ್ದುದಂ ನೆನಸುವೊಲ್ ಕನಸಂ ಬೆಳಗಪ್ಪ ಜಾವದೊಳ್ ೧೯

ಅರಸನತಿಹರ್ಷವಿಕಸಿತ
ಸುರುಚಿರಲೋಚನನಮಾತ್ಯಮುಖ್ಯನನಾಗಳ್
ಕರೆದು ನಿಜಸ್ವಪ್ನಮನಾ
ದರದಿಂ ಪೇಟಲ್ಕೆ ಪುಳಕಿತಾಂಗಂ ಸಚಿವಂ ೨೦

ಬಹಳ ಅಕ್ಕರೆಯಿಂದ ಶಕುನಜ್ಞರೆಲ್ಲರನ್ನೂ ಕಂಡು ಶಕುನ ನೋಡಿಸಿದಳು. ವೃದ್ಧಪರಂಪರೆಯಿಂದ ಬಂದ ಬಂಜೆತನದ ನಿವಾರಣೆಗಾಗಿ ಮಾಡುವ ಗುಟ್ಟಾದ ಆಚರಣೆಗಳನ್ನೆಲ್ಲಾ ಒಂದನ್ನೂ ಬಿಡದೆ ಮಾಡಿದಳು. ಬಹಳ ಉತ್ಸಾಹದಿಂದ ವೇದಗಳನ್ನೂ ಪುರಾಣಗಳನ್ನೂ ಕೇಳುತ್ತಿದ್ದಳು. ವ॥ ಮತ್ತು ಗೋರೋಚನದಿಂದ ಬರೆಯಲ್ಪಟ್ಟ ಭೂರ್ಜಪತ್ರವನ್ನಿಟ್ಟಿರುವ ಯಂತ್ರದ ತಾಯತಿಗಳನ್ನು ಕಟ್ಟಿಕೊಂಡಳು ಮತ್ತು ಮೂಲಿಕೆಗಳನ್ನು ಕಟ್ಟಿರುವ ಮಂಗಳಸೂತ್ರವನ್ನು ಕೈಗೆ ಕಟ್ಟಿಸಿಕೊಂಡಳು. ಉಪಾಸಕರನ್ನು ಕರೆಸಿ ಭವಿಷ್ಯವನ್ನು ಕೇಳಿದಳು. ದಾರಿಯಲ್ಲಿ ನರಿಗಳಿಗೆ ಮಾಂಸಬಲಿಯಿಂದ ಕೂಡಿದ ಆಹಾರವನ್ನು ಇಕ್ಕಿಸಿದಳು. ಹೀಗೆ ಮಕ್ಕಳಾಗುವುದಕ್ಕೆ ಸಾಧಕವಾದ ಬಗೆಬಗೆಯ ವಿಧಿಗಳನ್ನೆಲ್ಲಾ ಕೆಲವು ದಿನಗಳು ಆಚರಿಸುತ್ತಿದ್ದಳು. ಹೀಗಿರಲು ಒಂದುದಿನ, ೧೯. ತಾರಾಪೀಡನಿಗೆ ಕನಸುಬಿತ್ತು. "ವಸುಮತೀದೇವಿಯು ಬಹಳ ಮನೋಹರವಾದ ಉಪ್ಪರಿಗೆಯಮೇಲೆ ಕುಳಿತಿದ್ದಳು. ಆಗ ಹೆಣ್ಣಾನೆಯ ಕಟಬಾಯೊಳಕ್ಕೆ ಹೋಗುವ ತಾವರೆಯ ದಂಟೋ ಎಂಬಂತೆ ಜಗತ್ತಿನಲ್ಲೆಲ್ಲಾ ಪರಮಸುಂದರವಾದ ಪೂರ್ಣಚಂದ್ರಮಂಡಲವು ಅವಳ ಬಾಯನ್ನು ಪ್ರವೇಶಿಸಿತು." ಇಂತಹ ಅತ್ಯಾಶ್ಚರ್ಯಕರವಾದ ನಿಜವಾಗಿಯೂ ನಡೆದಂತೆಯೇ ಇದ್ದ ಸ್ವಪ್ನವನ್ನು ಮಹಾರಾಜನು ಬೆಳಗಿನ ಜಾವದಲ್ಲಿ ಕಂಡನು. ೨೦. ಎಚ್ಚರವಾಯಿತು. ಬಹಳ ಸಂತೋಷದಿಂದ ಅರಳಿದ ಸುಂದರವಾದ ಕಣ್ಣುಳ್ಳ ಅರಸನು ಪ್ರಧಾನಮಂತ್ರಿಯಾದ ಶುಕನಾಸನನ್ನು ಕರೆಸಿಕೊಂಡು ತನ್ನ ಸ್ವಪ್ನವನ್ನು ಬಹಳ ಉತ್ಸಾಹದಿಂದ ಹೇಳಿದನು. ಅದನ್ನು ಕೇಳಿ ಸಂತೋಷದಿಂದ ರೋಮಾಂಚಗೊಂಡ

ಪಲಕಾಲಕ್ಕೆ ಮನೋರಥಪ್ರಕರವಿಃಂದೆಮ್ಮೊಂದು ಪುಣ್ಯೋದಯಾ
ವಳಿಯಿಂದಂ ದೊರೆಕೊಂಡಃದಿಂದು ಭುವನಕ್ಕಾನಂದವಾದತ್ತು ಮುಂ
ಕೆಲವಾನುಂ ದಿವಸಕ್ಕೆ ದೇವ ಪಡೆವೈ ಶ್ರೀಮಂಡನಕ್ಷಾತ್ರಮಂ
ಡಲಮಾರ್ಗೋಚಿತಗಾತ್ರನಂ ಬಹುಕಳಾಸತ್ಪಾತ್ರನಂ ಪುತ್ರನಂ ೭೧

ವ॥ ಅದಲ್ಲದೆಯುಂ

ಭುವನಾಧೀಶ ನಿಶಾವಸಾನಸಮಯಪ್ರಾಗ್ಭಾಗದೊಳ್ ಶಾಂತರೂ
ಪವಿನುತ್ಯಂ ವಿಲಸದ್ದುಕೂಲವಸನಾಲಂಕಾರನೊರ್ವಂ ದ್ವಿಜ
ಪ್ರವರಂ ಮೌಕ್ತಿಕಮಾಲಿಕಾವಲಯಮುಂ ಪ್ರೋತ್ಫುಲ್ಲಮಂ ಪುಂಡರೀ
ಕವನಂದಲ್ತೆ ಮನೋರಮಾಂಕತಳದೊಳ್ ತಂದಿಕ್ಕಿದಂ ಸ್ವಪ್ನದೊಳ್ ೭೨

ವ॥ ಆನುಮೀ ಮಾರ್ಗದೊಳ್ ಕಂಡೆನಂತು ನಿಶಾವಸಾನಸಮಯದೊಳ್ ಕಂಡ ಕನಸುಗಳ ವಿತಥಂಗಳಪ್ಪುವದುಕಾರಣದಿಂ ನಿಖಿಳರಾಜಋಷಿಪ್ರಮೋದ ಹೇತುಭೂತನುಂ ರಾಜ ಮಾಂಧಾತನುಮೆನಿಪ ಜಗತ್ಪ್ರಖ್ಯಾತಂ ಜನಿಯಿಸುಗುಮದಲ್ಲದೆಯುಂ

ನವಕಮಲೋದ್ಗಮದಿಂದು
ತ್ಸವಮಂ ತಾಂ ಗಂಧಗಜಕೆ ಕಮಲಿನಿ ಮಾಳ್ಪಂ
ತೆವೊಲರಸ ನಿನಗೆ ಪರಮೋ
ತ್ಸವಮಂ ಮಾದೇವಿ ಮಾಳ್ಕುಮೀ ಕನಸಿಂದಂ ೭೩

ಮಂತ್ರಿಯು, ೭೧. "ಪ್ರಭುವೇ, ನಮ್ಮ ಪುಣ್ಯಪರಂಪರೆಯಿಂದ ಬಹಳಕಾಲವಾದ ಮೇಲಾದರೂ ಇಂದು ನಮ್ಮ ದೊಡ್ಡ ಇಷ್ಟಾರ್ಥವು ನೆರವೇರಿದಂತಾಯಿತು. ಈದಿನ ಪ್ರಪಂಚಕ್ಕೆ ಆನಂದವಾಗಿದೆ. ಮುಂದೆ ಕೆಲವು ದಿನಗಳಲ್ಲೇ ತೇಜಸ್ಸಿನಿಂದ ಶೋಭಿಸುವ ಮತ್ತು ಕ್ಷತ್ರಿಯಪರಂಪರೆಗೆ ಅನುಗುಣವಾದ ಶರೀರವುಳ್ಳ ಸಕಲ ಕಲಾಪರಿಪೂರ್ಣನಾದ ಸುಪುತ್ರನನ್ನು ಪಡೆಯುವೆ. ವ॥ ಅದಲ್ಲದೆ, ೭೨. ಎಲೈ ಮಹಾರಾಜನೆ, ನಾನೂ ಇಂದು ಬೆಳಗಿನ ಜಾವದಲ್ಲಿ ಒಂದು ಕನಸನ್ನು ಕಂಡೆ. ಏನೆಂದರೆ, ಬಹಳ ಪ್ರಶಾಂತವೂ ಪ್ರಶಸ್ತವೂ ಆದ ರೂಪವುಳ್ಳ ಪ್ರಕಾಶಮಾನವಾದ ರೇಷ್ಮೆಮುಗುಟವನ್ನು ಧರಿಸಿ ಮೆರೆಯುತ್ತಿರುವ ಒಬ್ಬ ಬ್ರಾಹ್ಮಣೋತ್ತಮನು ಒಂದು ಮುತ್ತಿನಸರವನ್ನೂ ಮತ್ತು ಅರಳಿರುವ ಒಂದು ಬಿಳಿಯ ತಾವರೆಯನ್ನೂ ನನ್ನ ಪತ್ನಿಯಾದ ಮನೋರಮೆಯ ತೊಡೆಯಮೇಲೆ ಇರಿಸಿದನು. ವ॥ ನಾನೂ ಈ ರೀತಿ ಕನಸನ್ನು ಕಂಡೆ. ಬೆಳಗಿನ ಜಾವದಲ್ಲಿ ಕಂಡ ಕನಸುಗಳು ಸುಳ್ಳಾಗುವುದಿಲ್ಲ. ಅದರಿಂದ ಸಮಸ್ತ ರಾಜರ್ಷಿಗಳಿಗೂ ಸಂತೋಷವನ್ನುಂಟುಮಾಡುವ ಮಾಂಧಾತಚಕ್ರವರ್ತಿಗೆ ಸರಿಸಮಾನನೆನಿಸುವ ಜಗದ್ವಿಖ್ಯಾತನಾಗುವ ಕುಮಾರನು ಹುಟ್ಟುವನು. ಅದಲ್ಲದೆ, ೭೩. ಈ ಕನಸಿನಿಂದಾಗಿ ತಾವರೆ ಬಳ್ಳಿಯು ಹೊಸದಾಗಿ ಬಿಟ್ಟ ಹೂವಿನಿಂದ ಮದ್ದಾನೆಗೆ ಸಂತೋಷವನ್ನುಂಟು ಮಾಡುವಂತೆ ಪಟ್ಟದರಾಣಿಯು ಪುತ್ರಸಂತಾನದಿಂದ ನಿನಗೆ ಪರಮಾನಂದ

ನಿನ್ನಯ ಸಂತಾನಮವಿ
ಚ್ಛಿನ್ನಂ ಕ್ಷಿತಿಭಾರಧಾರಣೋಚಿತ ಗುಣಸಂ
ಪನ್ನಮೆನಲ್ ನೆಗೞ್ಗಂ ಭೂ
ಪೋನ್ನತ ದಿಙ್ನಾಗದಾನದಂದದಿನೆಂದುಂ ೭೪

ವ॥ ಎಂದು ತಾರಾಪೀಡನರೇಂದ್ರನ ಕೆಯ್ಯಂ ಪಿಡಿದಂತಃಪುರಕ್ಕೆ ಪೋಗಿ ವಿಳಾಸವತಿ ಮಹಾದೇವಿಗೆ ತಾವಿರ್ವರುಂ ಕಂಡ ಕನಸುಗಳಂ ಪೇೞೆ ಕೇಳ್ದಾನಂದಪರಂಪರೆಯನೆಯ್ದಿ ಕೆಲವಾನುಂ ದಿವಸದೊಳ್

ವಿಲಸತ್ಪ್ರಭಾಳಿಶಶಿಮಂ
ಡಲಮಾ ಕುಮುದಾವಭಾಸಿಯೆನೆ ತಿಳಿಗೊಳದೊಳ್
ನೆಲಸುವ ತೆಱದಿಂ ಗರ್ಭಂ
ನೆಲಸಿದುದು ವಿಳಾಸವತಿಗೆ ಪುಣ್ಯೋದರದೊಳ್ ೭೫

ಅಂತು ಕೆಲದಿವಸದೊಳ್ ನಿಜ
ಕಾಂತಪ್ರತಿಬಿಂಬಮಂ ವಿಳಾಸದೆ ತಳೆದಳ್
ಕಾಂತೆ ಮಣಿದರ್ಪಣಶ್ರೀ
ಯಂತಿರೆ ಸಂಕ್ರಾಂತಮಪ್ಪ ಗರ್ಭದ ನೆವದೊಳ್ ೭೬

ವನ್ನುಂಟುಮಾಡುತ್ತಾಳೆ, ೭೪. ದಿಗ್ಗಜಗಳ ಮದೋದಕಧಾರೆಯಂತೆ ನಿನ್ನ ಸಂತಾನವು ಅವಿಚ್ಛಿನ್ನವಾಗಿ ಹರಿಯುತ್ತದೆ. ಅಲ್ಲದೆ ಭೂಭಾರವನ್ನು ಹೊರಲು ಯೋಗ್ಯವಾದ ಗುಣಗಳಿಂದ ಪರಿಪೂರ್ಣವಾಗಿರುತ್ತದೆ." ಟೀ॥ ದಿಗ್ಗಜಗಳ ಮದೋದಕವು ಅವುಗಳ ಶಕ್ತಿವಿಶೇಷವನ್ನು ಸೂಚಿಸುವುದರಿಂದ ಭೂಮಿಯನ್ನು ಹೊರಲು ವಿಶೇಷ ಸಾಮರ್ಥ್ಯವನ್ನು ಅವುಗಳಿಗೆ ಹೇಳಿದಂತಾಯಿತು ಎಂದು ಹೇಳಿ ತಾರಾಪೀಡಮಹಾರಾಜನ ಕಯ್ಯನ್ನು ಹಿಡಿದುಕೊಂಡು ಅಂತಃಪುರಕ್ಕೆ ಹೋಗಿ ವಿಳಾಸವತಿಮಹಾರಾಣಿಗೆ ತಾವಿಬ್ಬರೂ ಕಂಡ ಕನಸುಗಳನ್ನು ಹೇಳಲಾಗಿ, ಅವಳು ಅದನ್ನು ಕೇಳಿ ಆನಂದಪರಂಪರೆಯನ್ನು ಅನುಭವಿಸಿದಳು. ಕೆಲವು ದಿವಸಗಳಲ್ಲಿ ೭೫. ಕುಮುದಾವಭಾಸಿಯಾದ (ಕನ್ನೈದಿಲೆಗಳನ್ನು ಅರಳಿಸುವ) ಮತ್ತು ಕಾಂತಿಯಿಂದ ಪ್ರಕಾಶಿಸುವ ಚಂದ್ರಮಂಡಲವು ತಿಳಿಗೊಳದಲ್ಲಿ ಪ್ರತಿಬಿಂಬರೂಪವಾಗಿ ನೆಲೆಸುವಂತೆ ಕುಮುದಾವಭಾಸಿಯಾದ (ಪ್ರಪಂಚಕ್ಕೆ ಸಂತೋಷವನ್ನುಂಟುಮಾಡುವ) ಮತ್ತು ಕಾಂತಿಯಿಂದ ಪ್ರಕಾಶಿಸುವ ಗರ್ಭವು ವಿಲಾಸವತಿಯ ಪುಣ್ಯಕರವಾದ ಉದರದಲ್ಲಿ ನೆಲೆಸಿತು. ೭೬. ಹೀಗೆ ಕೆಲವು ದಿನಗಳಲ್ಲಿ ವಿಲಾಸವತಿದೇವಿಯು ಹೊಳಪಿನಿಂದ ಕೂಡಿದ ಕನ್ನಡಿಯಂತೆ ಗರ್ಭದ ನೆಪದಿಂದ ತನ್ನಲ್ಲಿ ಪ್ರತಿಫಲಿಸಿರುವ ಗಂಡನ ಪ್ರತಿಬಿಂಬವನ್ನು ಲೀಲೆಯಿಂದ ತಾಳಿದಳು (ಗರ್ಭವತಿಯಾದಳು). ಟಿ॥ "ಆತ್ಮಾವೈ ಪುತ್ರನಾಮಾಸಿ" (ತಾನೇ ಮಗನಾಗಿ ಹುಟ್ಟುತ್ತಾನೆ) ಎಂಬ ಶಾಸ್ತ್ರವು ಪತಿಯು ವೀರ್ಯರೂಪದಿಂದ ಪತ್ನಿಯ ಗರ್ಭವನ್ನು ಪ್ರವೇಶಿಸುತ್ತಾನೆ.

ಇನಿಸಿನಿಸಾ ಗರ್ಭಂ ಪ್ರತಿ
ದಿನವೊಯ್ಯನೆ ಬಳೆಯೆ ನಯದೆ ಪುಟವೇಱೆ ನಿತಂ
ಬಿನಿ ಕಾರೊಳೆಸೆವ ಕಾದಂ
ಬಿನಿಯಂದದೆ ಮಂದಮಂದಗಮನದೆ ನಡೆದಳ್ ೭೭

ಅಲಸಿಕೆ ಮೆಯ್ಯಾದುದು ಕ
ಣ್ಮಲರ್ ಮರಲ್ದೆಸೆದುವೊದವಿತಾಗುಳಿಕೆ ಶತಂ
ಪಲವುಂ ವಸ್ತುಗಳೊಳ್ ತನ
ಗೊಲವರವಾಯ್ತೆಯ್ದೆ ಕಾಂತೆಗಂದೆಳೆವಸಿಱೊಳ್ ೭೮

ಮೞೆಗಾಲದಂತೆ ಕಪ್ಪಂ
ತಳೆದು ಪಯೋಧರಮುಖಂಗಳೆಸೆಯುತ್ತಿರಲಾ
ಲಲನೆ ನವಗರ್ಭಪಾಂಡುರ
ವಿಳಾಸದಿಂ ಕೇತಕೀವಿಳಾಸಮನಾಂತಳ್ ೭೯

ವ॥ ಅಂತಚ್ಚರಿವಟ್ಟಂಗಿತಕುಶಲೆಯರಪ್ಪ ಪರಿಜನಂಗಳಱಿಯುತ್ತಿರ್ದಲ್ಲಿ

ವನಿತಾರತ್ನದ ಗರ್ಭಚಿಹ್ನಚಯಮಂ ನಿರ್ವ್ಯಾಕುಳಂ ಕಂಡು ಮ
ತ್ತೆನಗಿಂ ಮಾಣ್ದಿರಲೇಂ ಪ್ರಶಸ್ತಮೆನಿಸಿರ್ದೀ ರಾತ್ರಿಯೊಳ್ ಪೋಗಿ ಭೂ
ವನಿತೇಶಂಗಿದನೆಯ್ದೆ ಬಿನ್ನವಿಪೆನೆಂದಾನಂದದಿಂ ವಂಶವ
ರ್ಧನೆಯೆಂಬಾಕೆ ಮಹಾಮಹತ್ತರೆ ನರೇಂದ್ರಾಸ್ಥಾನಮಂ ಪೊರ್ದಿದಳ್ ೮೦

ಇದೇ ಗರ್ಭಧಾರಣೆ. ಈ ವೇದಾರ್ಥವು ಇಲ್ಲಿ ವರ್ಣಿಸಲ್ಪಟ್ಟಿದೆ. ೭೭. ಹೀಗೆ ಆ ಗರ್ಭವು ದಿನೇ ದಿನೇ ಸ್ವಲ್ಪ ಸ್ವಲ್ಪವಾಗಿ ಸ್ಪಷ್ಟವಾಗಿ ಬೆಳೆಯುತ್ತಿರಲಾಗಿ, ಕ್ರಮವರಿತು ದಪ್ಪ ವಾಗುತ್ತಿರುವ ಆ ರಾಣಿಯು ಮಳೆಗಾಲದಲ್ಲಿ ಶೋಭಿಸುವ ಮೋಡದಂತೆ ಮಂದಗಮನ ದಿಂದ ನಡೆಯತೊಡಗಿದಳು. ೭೮. ಈ ಎಳೆಬಸುರಿತನದಲ್ಲಿ ಅವಳಿಗೆ ಮೈಯಲ್ಲಿ ಸೋಮಾರಿತನವುಂಟಾಯಿತು. ಹೂವಿನಂತಿರುವ ಕಣ್ಣು ನಿದ್ರಾವೇಶದಿಂದ ವಕ್ರತೆಯನ್ನು ಪಡೆಯಿತು. ಬಹಳವಾಗಿ ಆಕಳಿಕೆಯುಂಟಾಯಿತು. ಕೆಲಕೆಲವು ಪದಾರ್ಥಗಳಲ್ಲಿ ಬಯಕೆ ಯುಂಟಾಯಿತು. ೭೯. ಅವಳ ಪಯೋಧರಮುಖವು (ಸ್ತನಾಗ್ರವು) ಮಳೆಗಾಲ ದಲ್ಲಿ ಪಯೋಧರಮುಖವು (ಮೋಡವು) ಕಪ್ಪಾಗುವಂತೆ ಕಪ್ಪುಬಣ್ಣಕ್ಕೆ ತಿರುಗಿ ಶೋಭಿಸುತ್ತಿರಲು, ಆ ರಮಣಿಯು ಹೊಸದಾದ ಬಸುರಿನಿಂದ ಉಂಟಾದ ಬಿಳಿಯ ಕಾಂತಿಯಿಂದ ಕೇದಗಿಹೂವಿನ ಸೊಬಗನ್ನು ಪಡೆದಳು. ವ॥ ಇದನ್ನು ನೋಡಿ ಆಶ್ಚರ್ಯಪಟ್ಟು ಇಂಗಿತವನ್ನು ಅರಿಯುವುದರಲ್ಲಿ ಕುಶಲರಾದ ಪರಿಜನರು ಗರ್ಭಿಣಿ ಯಾಗಿರುವಳೆಂದು ತಿಳಿದುಕೊಂಡರು. ಆಗ ೮೦. ವಂಶವರ್ಧನೆ ಎಂಬ ಪ್ರಧಾನ ಪರಿ ಚಾರಕಳು ರಾಣಿಯು ನಾನಾ ಬಗೆಯಾದ ಗರ್ಭಚಿಹ್ನೆಗಳನ್ನು ಸಂಶಯಕ್ಕೆ ಎಡೆಯಿಲ್ಲ ದಂತೆ ಖಚಿತಪಡಿಸಿಕೊಂಡು, ಇನ್ನು ಮಹಾರಾಜನಿಗೆ ತಿಳಿಸದಿರುವುದು ಸರಿಯಲ್ಲವೆಂದು ಭಾವಿಸಿ ಈದಿನ ರಾತ್ರಿಯೇ ಹೋಗಿ ಮಹಾರಾಜನಿಗೆ ಈ ವಿಷಯವನ್ನು ತಿಳಿಸ

ಉರಗಾಧೀಶಫಣಾಮಣಿಪ್ರಕರದಿಂ ತಳ್ತಿರ್ದ ಲಕ್ಷ್ಮೀಮನೋ
ಹರನೋ ತಾರಕಸಂಕುಳಂ ಬಳಸಿರಲ್ ಚೆಲ್ವಾದ ರಾತ್ರೀಮನೋ
ಹರನೋ ಪೇಟ್‌ವೆನಲ್ ಪ್ರದೀಪನಿವಹಂಗಳ್ ಸುತ್ತಲುಂ ಕೂಡಿತ
ಳ್ತಿರಲಾಸ್ಥಾನದೊಳಿರ್ದನಂದೆಸೆದು ತಾರಾಪೀಡಚಕ್ರೇಶ್ವರಂ ೮೧

ವ॥ ಅಂತಿರ್ದವನಿಪತಿಯಂ ಕಂಡು ಪೊಡೆವಟ್ಟು ವಂಶವರ್ಧನೆ ಕುಳ್ಳಿರ್ದು

ಅವಸರವಂ ಪಡೆದು ವಿಳಾ
ಸವತಿಯೊಳಾದೊಂದು ಗರ್ಭವೃತ್ತಾಂತಮನಾ
ಭುವನಾಧೀಶಂಗಿನಿಸಂ
ಕಿವಿಯುತ್ತಲ್ ಸಾರ್ದು ಮೆಲ್ಲನಱಿಪಿದಳಾಗಳ್ ೮೨

[ಆಗೆಪೋದಂತಿರ್ಪ ಪೂರ್ವಶ್ರುತ] ವಚನಸುಧಾಸಾರದಿಂ ಕಂಟಕಂಗಳ್
ನೆಗೆಯಲ್ ವಕ್ತ್ರಾಂಬುಜಾತಸ್ಮಿತಮೆಸೆಯೆ ಮನೋಜಾತಸಂತೋಷಮೆತ್ತಂ
ಮೊಗದೊಳ್ ತೋರ್ಪಂತೆ ದಂತಪ್ರಭೆ ಪಸರಿಸಲಾನಂದಬಾಷ್ಪಾಂಬುಗಳ್ ಕೆ
ಯ್ಮೆಗಲಾ ಲೋಲಾಯತಾಕ್ಷಂ ಸಚಿವನ ಮೊಗಮಂ ನೋಡಿದಂ ಭೂಮಿಪಾಲಂ
೮೩

ಬೇಕೆಂದು ತೀರ್ಮಾನಿಸಿ ಬಹಳ ಸಂತೋಷದಿಂದ ರಾಜನ ಒಡ್ಡೋಲಗಕ್ಕೆ ಬಂದಳು, ೮೧. ಆದಿಶೇಷನ ಸಾವಿರಹೆಡೆಗಳಲ್ಲಿರುವ ರತ್ನಸಮೂಹದಿಂದ ಸುತ್ತುವರಿಯಲ್ಪಟ್ಟಿರುವ ಶ್ರೀಮನ್ನಾರಾಯಣನೋ ನಕ್ಷತ್ರಗಳ ಪುಂಜದಿಂದ ಸುತ್ತುಗಟ್ಟಲ್ಪಟ್ಟಿರುವ ಸುಂದರನಾದ ಚಂದ್ರನೋ ಎಂಬಂತೆ ಸುತ್ತಲೂ ದೀಪಗಳ ಗುಂಪಿನಿಂದ ಕೂಡಿರುವ ತಾರಾಪೀಡಚಕ್ರವರ್ತಿಯು ಅಂದು ಒಡ್ಡೋಲಗದಲ್ಲಿ ಶೋಭಿಸುತ್ತಿದ್ದನು, ವ|| ಹಾಗೆ ಇದ್ದ ರಾಜನನ್ನು ನೋಡಿ ನಮಸ್ಕರಿಸಿ ವಂಶವರ್ಧನೆಯು ಕುಳಿತುಕೊಂಡು. ೮೨. ಅವಕಾಶವನ್ನು ಪಡೆದುಕೊಂಡು ರಾಜನ ಕಿವಿಯ ಹತ್ತಿರ ಬಂದು ವಿಲಾಸವತಿಯು ಗರ್ಭಿಣಿಯಾಗಿರುವ ವೃತ್ತಾಂತವನ್ನು ಮೆಲ್ಲನೆ ತಿಳಿಸಿದಳು. ೮೩. ಹೀಗೆ ಅಪೂರ್ವವಾಗಿ ಕೇಳಿದ ಮಾತೆಂಬ ಅಮೃತದಧಾರೆಗಳಿಂದ ಮೊಳಕೆಹೊರಟಂತಿರುವ ರೋಮಾಂಚಗಳು ಮೇಲಕ್ಕೆ ಏಳಲಾಗಿ, ಮುಖಕಮಲದಲ್ಲಿ ಮಂದಹಾಸವು ಶೋಭಿಸಲು, ಮನಸ್ಸಿನಲ್ಲಿ ಉದಯಿಸಿದ ಸಂತೋಷವು ಬಾಯಿಯಿಂದ ಹೊರಹೊಮ್ಮುವಂತೆ ಹಲ್ಲುಗಳ ಕಾಂತಿಗಳು ಹರಡುತ್ತಿರಲಾಗಿ, ಕಣ್ಣಿನಲ್ಲಿ ಆನಂದಬಾಷ್ಪವು ಅಧಿಕವಾಗಿ ಹೊರಡುತ್ತಿರಲು ಚಂಚಲವೂ ವಿಶಾಲವೂ ಆದ ಕಣ್ಣುಗಳುಳ್ಳ ಅರಸನು ಮಂತ್ರಿಯ ಮುಖವನ್ನು ನೋಡಿದನು,

ವ॥ ಅಂತು ನೋಟ್ಪುದುಂ ಶುಕನಾಸಮಂತ್ರಿ ಪೊರ್ದಿ ನರೇಂದ್ರನಂಗಿಂತೆಂದಂ

ಮನದನುರಾಗದಿಂದಮಲರ್ದೊಪ್ಪುವ ಕಣ್ಮಲರಾಂತ ವಂಶವ
ರ್ಧನೆಯ ವಚೋಮೃತಶ್ರವಣಕೌತುಕದಿಂದಮೆ ನಿನ್ನ ಲೋಲಲೋ
ಚನಮಿವು ನೀಳ್ದು ಕಣ್ಗೊಳಿಸಿ ತೋರ್ಪಸಿತೋತ್ಪಳಕರ್ಣಪೂರಮಂ
ನೆನೆಯಿಸಿದಪ್ಪುವಾ ಕನಸಿನೊಳ್ ಕಿಱಿದುಂ ದಿಟಮಾಯ್ತೆ ಭೂಪತೀ ೮೪

ಪವಣಲ್ಲದದೊಂದೌತ್ಸು
ಕ್ಯವನೊಳಕೊಂಡೆನ್ನ ಮನಮುಪಾರೂಢ ಮಹೋ
ತ್ಸವಮಂ ಕೇಳಲ್ಪದೆದಪು
ದವನೀಶ ನಿವೇದಿಸೆನಗಿದಂ ಬಿಡದೀಗಳ್ ೮೫

ವ॥ ಅಂತು ಶುಕನಾಸಂ ಬೆಸಗೊಳ್ವುದುಂ ದರಹಸಿತವದನಾರವಿಂದನಾಗಿ ನರೇಂದ್ರ ನಿಂತೆಂದಂ

ಇವಳೀಗಳ್ ಪೇಟ್ದ ಮಾತಾ ಕನಸನವಿತಥಂ ಮಾಟ್ಪ ಮಾತಪ್ಪುವಾಗಿ
ರ್ದುವವಂ ವಿಶ್ವಾಸಿಸಲ್ ಬಂದಪುದೆ ಪಿರಿದುಮಂತಪ್ಪುದಂ ಕೇಳ್ವ ಭಾಗ್ಯಂ
ನವಗೆಂತೀ ಮಾತ ಸಂಭಾವಿತದವೊಲೆನಗಾದಪ್ಪುದಂತಿಲ್ಲ ಸಂದೇ
ಹವಿದೇಕೇಟಿಬ್ ಪೋಗಿ ನಾವಲ್ಲಿಯೆ ದಿಟಮದು ತಾನೆಂಬುದಂ ನೋಟ್ಪಮಲ್ತೇ ೮೬

ವ॥ ಹಾಗೆ ನೋಡಲಾಗಿ ಶುಕನಾಸಮಂತ್ರಿಯು ರಾಜನಿಗೆ ಹೀಗೆ ಹೇಳಿದನು. ೮೪. ಮಹಾರಾಜನೆ, ವಂಶವರ್ಧನೆಯು ತನ್ನ ಮನಸ್ಸಿನಲ್ಲಿ ಉಕ್ಕುತ್ತಿರುವ ಹರ್ಷದಿಂದ ಅರಳಿ ರುವ ನೇತ್ರಕಮಲವುಳ್ಳವಳಾಗಿ ಹೇಳಿದ್ದಾಳೆ. ಅವಳ ಅಮೃತಕ್ಕೆ ಸಮಾನವಾದ ಮಾತನ್ನು ಆಲಿಸಬೇಕೆಂಬ ಕುತೂಹಲದಿಂದಲೋ ಎಂಬಂತೆ ನಿಮ್ಮ ಚಂಚಲವಾದ ಕಣ್ಣು ಅಗಲವಾಗಿ ಕಿವಿಯವರೆಗೂ ಹರಡಿಕೊಂಡು ಕಿವಿಗೆ ಆಭರಣವಾದ ಕನ್ನೈದಿಲೆಯನ್ನು ಜ್ಞಾಪಿಸುತ್ತಿವೆ, ಕನಸಿನಲ್ಲಿ ಏನಾದರೂ ಕೊಂಚ ನಿಜಾಂಶವಿದೆಯೆ ? ೮೫. ಅಳತೆ ಮೀರಿದ ಕುತೂಹಲವನ್ನು ತಳೆದಿರುವ ನನ್ನ ಮನಸ್ಸು ಈಗ ಒದಗಿರುವ ಮಹೋ ತ್ಸವದ ವಿಷಯವನ್ನು ತಿಳಿದುಕೊಳ್ಳಬೇಕೆಂದು ಕುತೂಹಲಗೊಂಡಿದೆ ಪ್ರಭುವೆ ! ನನಗೆ ಇದನ್ನು ತಿಳಿಸೋಣವಾಗಲಿ. ವ॥ ಹೀಗೆ ಶುಕನಾಸನು ಕೇಳಿಕೊಳ್ಳಲಾಗಿ ಮಹಾ ರಾಜನು ಮಂದಹಾಸದಿಂದ ರಂಜಿಸುವ ಮುಖಕಮಲವುಳ್ಳವನಾಗಿ ಹೀಗೆ ಹೇಳಿದನು. ೮೬. ಇವಳು ಈಗ ಹೇಳಿದ ಮಾತು ಆ ಕನಸನ್ನು ಸತ್ಯವನ್ನಾಗಿ ಮಾಡುವ ಮಾತಾಗಿ ದೆಯೆ ? ಅದನ್ನು ದೃಢವಾಗಿ ನಂಬಲು ಬರುತ್ತದೆಯೆ ? ಇದನ್ನು ಕೇಳುವ ಭಾಗ್ಯವು ನಮಗೆ ಇದೆಯೆ ? ಇದು ನನಗೆ ನಡೆಯತಕ್ಕದ್ದಲ್ಲವೆನಿಸುತ್ತಿದೆ. ಇಲ್ಲದಿದ್ದರೆ ಈ ಸಂಶಯವೇಕೆ ? ಏಳಿ, ನಾವು ಅಲ್ಲಿಗೇ ಹೋಗಿ ಇದು ನಿಜವೆ ? ಎಂಬುದನ್ನು ನೋಡಿ

ವ॥ ಎಂದು ನರೇಂದ್ರಂ ರಾಜಲೋಕಮಂ ವಿಸರ್ಜಿಸಿ ತನ್ನ ವಂಶವರ್ಧನೆಗಂಗಚಿತ್ತ ಮನಿತ್ತು ಶುಕನಾಸಂ ಬೆರಸಾಸ್ಥಾನಮಂಟಪದಿಂ ಪೊಱಮಡುವಾಗಳ್

ಚಲಿಯಿಸಿದಪುದಸಿತೋತ್ಪಲ
ದಳವೆಲರಲೆಪುಂಗಳಿಂದೆಂಬಿನೆಗಂ ಕೆ
ತ್ತಲೊಡರ್ಚಿದತ್ತು ಬಲಗ
ಣ್ಮಲರಾ ಭೂಪತಿಗೆ ಪಿರಿದುಮುತ್ಸವವಾಗಲ್ ೮೭

ಕರದೀಪಿಕಾನಿಕಾಯಂ
ತರದೀದಂ ಮುಂದೆ ತೊಲಗಿಸುತ್ತಿರೆ ಕಕ್ಷ್ಯಾಂ
ತರತಿಮಿರಮಂ ಧರಾಧೀ
ಶ್ವರನೊಯ್ಯನೆ ಪೋಗಿ ಪೊಕ್ಕನಂತಃಪುರಮಂ ೮೮

ವ॥ ಅಂತು ತತ್ಸಮಯ ಸೇವಾಸಮುಚಿತ ವಿರಳಪರಿಜನಾನುಗಮ್ಯಮಾನಂ ಶುಕ ನಾಸಂ ಬೆರಸೊಳಗಂ ಪೊಕ್ಕು ಸುಕೃತರಕ್ಷಾಸಂವಿಧಾನಮುಂ ನವಸುಧಾನುಲೇಪನಕಲಿತಮುಂ ಪ್ರಜ್ವಲಿತಮಂಗಳಪ್ರದೀಪಮುಂ ಪೂರ್ಣಕಲಶಾಧಿಷ್ಠಿತದ್ವಾರಪಕ್ಷಮುಂ ಪ್ರತ್ಯಗ್ರಲಿಖಿತ ಮಂಗಳಾಲೇಖ್ಯೋಜ್ವಳಭಿತ್ತಿಭಾಗಮುಂ ಉಪರಚಿತ ವಿತತಸಿತವಿತಾನ ಪರ್ಯಂತಸಕ್ತ ಮುಕ್ತಾ ಗುಣಮುಂ ಮಣಿಪ್ರದೀಪಾವಭಾಸಮುಮೆನಿಸಿದ ನಿವಾಸಭವನದೊಳ್

ಕೊಂಡು ಬರೋಣ. ವ॥ ಹೀಗೆ ಹೇಳಿ ಮಹಾರಾಜನು ಸಾಮಂತರಾಜರ ಸಮೂಹ ವನ್ನು ಬೀಳ್ಕೊಟ್ಟು ವಂಶವರ್ಧನೆಗೆ ಉಡುಗೊರೆಯನ್ನು ಕೊಟ್ಟು ಶುಕನಾಸನೊಂದಿಗೆ ಒಡ್ಡೋಲಗಶಾಲೆಯಿಂದ ಹೊರಡುತ್ತಿರುವಾಗ ೮೭. ಕನ್ನೈದಿಲೆಯ ಎಸಳು ಗಾಳಿ ಬೀಸುವುದರಿಂದ ಅಲುಗಾಡುತ್ತಿದೆಯೋ ಎಂಬಂತೆ ದೊರೆಯ ಅರಳಿರುವ ಹೂವಿನಂತಿ ರುವ ಬಲಗಣ್ಣು ದೊರೆಗೆ ಆನಂದವಾಗುವಂತೆ ಅದುರತೊಡಗಿತು. ೮೮. ಅರಮನೆಯ ಸೇವಕರು ಹಿಡಿದಿರುವ ಕೈದೀವಿಗೆಗಳು ಮಹಲುಗಳ ಕತ್ತಲೆಯನ್ನು ಪರಿಹರಿಸುತ್ತಿರ ಲಾಗಿ ಮಹಾರಾಜನು ಮೆಲ್ಲಮೆಲ್ಲನೆ ರಾಣಿವಾಸದೊಳಕ್ಕೆ ಹೋದನು. ವ॥ ಹಾಗೆ ಆ ಕಾಲದ ಊಳಿಗಕ್ಕೆ ತಕ್ಕಷ್ಟು ಸೇವಕರುಗಳಿಂದ ಹಿಂಬಾಲಿಸಲ್ಪಟ್ಟವನಾಗಿ ಶುಕನಾಸ ನೊಂದಿಗೆ ಒಳಕ್ಕೆ ಹೋಗಿ ಸುವ್ಯವಸ್ಥಿತವಾದ ಮಣಿ, ಮಂತ್ರ, ಔಷಧ ಮೊದಲಾದುವು ಗಳಿಂದ ಮಾಡಲ್ಪಟ್ಟ ರಕ್ಷೆಯುಳ್ಳ, ಹೊಸದಾಗಿ ಸುಣ್ಣವನ್ನು ಬಳಿದಿರುವ, ಉರಿಯುತ್ತಿ ರುವ ಮಂಗಳದೀಪಗಳುಳ್ಳ, ಬಾಗಿಲಿನಲ್ಲಿ ಪೂರ್ಣಕುಂಭವನ್ನಿಟ್ಟಿರುವ, ಹೊಸದಾಗಿ ಬರೆದಿರುವ ಮಂಗಳಕರವಾದ ಚಿತ್ರಗಳಿಂದ ಶೋಭಿಸುತ್ತಿರುವ ಗೋಡೆಗಳುಳ್ಳ, ಕಟ್ಟಿ ರುವ ಅಗಲವಾದ ಮತ್ತು ಶುಭ್ರವಾದ ಮೇಲ್ಕಟ್ಟಿನಲ್ಲಿ ತೂಗಾಡುತ್ತಿರುವ ಮುತ್ತಿನ

ಸತತಾಽಸನ್ನಸ್ಥನಿದ್ರಾ[ಕಲಶವಿಲ]ಸಿತಂ ಭೂತಿಸಿದ್ಧಾರ್ಥರಕ್ಷಾಂ
ಕಿತಮಾಕೀರ್ಣಪ್ರವಾಳಾವಳಿ ಲಲಿತಮಯಃಪಿಪ್ಪಲೀಪತ್ರಮಾಲಾಂ
ಚಿತಮುದ್ಯತ್ಪಾದಪೀಠಾನ್ವಿತಮತಿಧವಳ ಪ್ರಚ್ಛದಾಚ್ಛಾದಿತಂ ವಿ
ಸ್ತೃತಮಾದುತ್ತುಂಗ ಗರ್ಭೋಚಿತಶಯನದೊಳಾ ಕಾಂತೆ ಕಣ್ಗೆಡ್ಡಮಾದಳ್ ೮೯

ಕ್ಷಿತಿಧರಗರ್ಭಿತಾವನಿ ಮೃಗಾಧಿಪಗರ್ಭಿತ ಮೇರುಮೇಖಳಾ
ಕೃತಿ ಸುರದಂತಿಗರ್ಭಿತಸುರಾಪಗೆ ಪೂರ್ವನಗೋತ್ಥಭಾನುಗ
ರ್ಭಿತ ದಿನಲಕ್ಷ್ಮಿ ಪದ್ಮಭವಗರ್ಭಿತ ಪದ್ಮಿನಿ ಚಂದ್ರಬಿಂಬಗ
ರ್ಭಿತ ವರವಾರ್ಧಿವೀಚಿಯೆನೆ ಕಣ್ಗೆಸೆದಳ್ ಲಲಿತಾಂಗಿ ಗರ್ಭದಿಂ ೯೦

ವ॥ ಅಂತಿರ್ದಳಂ ಕಂಡು ನಿವಾಸಭವನಮಂ ಪುಗುತರ್ಪಾಗಳ್

ಪರಿಜನವೆಟ್ಟಿ ಕೆಯ್ಗುಡೆ ನಿತಂಬನಿ ಮೆಲ್ಲನೆ ವಾಮಜಾನುವಂ
ಕರತಳದಿಂದಮೂಱಿ ವಿಚಳನ್ಮಣಿಭೂಷಣಮಂಜುಳಸ್ವನಂ
ಪರೆಯೆ ತರಂಗಿತಾಂಗಮೆಸೆಯಲ್ಕತಿಸಂಭ್ರಮದಿಂದಮೇೞ್ ಬೇ
ಡಿರಿಮಿರಿಮೆಂದು ಕುಳ್ಳಿರಿಸಿದಂ ಪ್ರಿಯೆಯಂ ವಸುಧಾಧಿನಾಯಕಂ ೯೧

ಸರವುಳ್ಳ ರತ್ನದೀಪಗಳಿಂದ ಬೆಳಗುತ್ತಿರುವ ವಾಸದ ಮನೆಯಲ್ಲಿ ೮೯. ಯಾವಾಗಲೂ ತಲೆಯ ಪತ್ತಿರದಲ್ಲೇ ಇಟ್ಟಿರುವ ಪೂರ್ಣಕುಂಭದಿಂದ ವಿರಾಜಮಾನವಾದ, ವಿಭೂತಿ ಮತ್ತು ಬಿಳಿಯ ಸಾಸಿವೆಗಳ ರಕ್ಷೆಯಿಂದ ಕೂಡಿಕೊಂಡಿರುವ, ಅಲ್ಲಲ್ಲಿ ಹರಡಿರುವ ಚಿಗುರುಗಳಿಂದ ಸುಂದರವಾದ, ಕಬ್ಬಿಣದ ತುಂಡು ಮತ್ತು ಅರಳಿಎಲೆಗಳಿಂದ ಕಟ್ಟಿರುವ ಮೂಲಿಕೆಯಿಂದ ಶೋಭಿಸುತ್ತಿರುವ, ಇರಿಸಿರುವ ಪಾದಪೀಠದಿಂದ ರಂಜಿಸುತ್ತಿರುವ, ಬಹಳ ಬಿಳುಪಾದ ಹಚ್ಚಡವನ್ನು ಹಾಸಿರುವ, ಅಗಲವಾಗಿಯೂ ಎತ್ತರವಾಗಿಯೂ, ಬಸುರಿತನಕ್ಕೆ ಉಚಿತವಾಗಿಯೂ ಇರುವ ಹಾಸಿಗೆಯಲ್ಲಿ ವಿಲಾಸವತಿಯು ಶೋಭಿಸುತ್ತಿದ್ದಳು. ೯೦. ಪರ್ವತದಿಂದ ಕೂಡಿಕೊಂಡಿರುವ ಭೂಮಿಯಂತೆಯೂ, ಸಿಂಹದಿಂದ ಕೂಡಿಕೊಂಡಿರುವ ಮೇರುಪರ್ವತದ ಮಧ್ಯದಂತೆಯೂ, ಒಳಗೆ ಐರಾವತವಿರುವ ದೇವ ಗಂಗಾನದಿಯಂತೆಯೂ, ಉದಯಪರ್ವತದ ಮೇಲೆ ಇರುತ್ತಿರುವ ಸೂರ್ಯಮಂಡಲ ದಿಂದ ಕೂಡಿಕೊಂಡಿರುವ ದಿವಸದ ಶೋಭೆಯಂತೆಯೂ, ಬ್ರಹ್ಮನನ್ನು ಒಳಗೊಂಡಿರುವ ತಾವರೆಬಳ್ಳಿಯಂತೆಯೂ, ಚಂದ್ರಬಿಂಬದಿಂದ ಕೂಡಿಕೊಂಡಿರುವ ಕ್ಷೀರಸಮುದ್ರದ ಅಲೆಯಂತೆಯೂ ಗರ್ಭದಿಂದ ಕೂಡಿಕೊಂಡಿರುವ ಆ ಸುಂದರಾಂಗಿಯು ಕಣ್ಣಿಗೆ ಆನಂದವನ್ನುಂಟುಮಾಡುತ್ತಿದ್ದಳು. ವ॥ ಹಾಗೆ ಇರುವವಳನ್ನು ಕಂಡು ಒಳಕ್ಕೆ ಬರುತ್ತಿರಲಾಗಿ ೯೧. ಪರಿಜನರು ಎದ್ದು ಕೈಹಿಡಿದುಕೊಳ್ಳಲಾಗಿ ವಿಲಾಸವತಿಯು ಮೆಲ್ಲನೆ ಎಡಮೊಳಕಾಲಿನ ಮೇಲೆ ಅಂಗೈ ಅನ್ನು ಊರಿ ಚಲಿಸುತ್ತಿರುವ ರತ್ನದ ಒಡವೆ ಗಳ ಇಂಪಾದ ಧ್ವನಿಯು ಹೊರಡುತ್ತಿರಲಾಗಿ, ಚಂಚಲವಾದ ಹಾಗೂ ಬಳುಕುತ್ತಿರುವ ದೇಹವು ಶೋಭಿಸುತ್ತಿರಲು, ಬಹಳ ಸಡಗರದಿಂದ ಮೇಲಕ್ಕೇಳಲಾಗಿ 'ಬೇಡ, ಇರಿ'

ಒಲವಿಂದರಸಂ ಕಾಂತೆಯ
ಕೆಲದೊಳ್ ಕುಳ್ಳಿರೆ ಸಮೀಪದೊಳ್ ಹೇಮಮಯೋ
ಜ್ವಲಪಾದಮಂಡಿತಾಸನ
ದೊಳಲ್ಲಿ ಶುಕನಾಸಮಂತ್ರಿಯುಂ ಕುಳ್ಳಿರ್ದಂ ೯೨

ವ|| ಅನಂತರಮುಪಾರೂಢಗರ್ಭೆಯಪ್ಪ ನಿಜವಲ್ಲಭೆಯಂ ನೋಡಿ ಹರ್ಷನಿರ್ಭರ ಮಾನಸನರಸಂ ಪ್ರಸ್ತುತಪರಿಹಾಸವಚನದಿನಿಂತೆಂದಂ

ಮನದೊಂದುತ್ಸವದಿಂದೆ ಪೇೞ್ದಳೆಮಗಿಂದೇನಾನುಮಂ ವಂಶವ
ರ್ಧನೆ ಬಂದಂತುಟದಪ್ಪುದಲ್ತೆ ದಿಟವೆಂದಾನಂದದಿಂ ದೇವಿ ನಿ
ನ್ನನಮಾತ್ಯಂ ಬೆಸಗೊಂಡಪಂ ಬೆಸಸೆನಲ್ ಮಂದಸ್ಮಿತಂ ಪೊಣ್ಮೆ ಮಾ
ನಿನಿ ಲಜ್ಜಾವನತಾಸ್ಯಮಂ ದಶನಕಾಂತಿವ್ಯಾಜದಿಂ ಮುಚ್ಚಿದಳ್ ೯೩

ಮತ್ತೆಯುಮಂತೆ ಪೇೞೆನಲದೇನಱಿಯೆಂ ದಿಟದಿಂ ನರೇಂದ್ರ ಕಾ
ಡುತ್ತಿರಲೇಕೆ ಪೇೞೆನಗೆ ಮಾಣದೆ ಲಜ್ಜೆಯನಿಂತಿರಲ್ಕೆ ಮಾ
ಡುತ್ತಿರಲೆಂದು ಮೆಲ್ಲನುಸಿರುತ್ತುಮೆ ಸೈರಿಸದಂತೆಗೆಯ್ದು ಭೂ
ಪೋತ್ತಮನಂ ವಿನಮ್ರಮುಖಿ ವಾಮವಿಲೋಚನದಿಂದೆ ನೋಡಿದಳ್ ೯೪

ಎಂದು ವಿಲಾಸವತಿಯನ್ನು ರಾಜನು ಕುಳ್ಳಿರಿಸಿದನು. ೯೨. ಬಳಿಕ ರಾಜನು ಪ್ರೀತಿಯಿಂದ ಮಡದಿಯ ಪಕ್ಕದಲ್ಲಿ ಕುಳಿತುಕೊಂಡನು. ಸಮೀಪದಲ್ಲೇ ಮಿರುಗುವ ಚಿನ್ನದ ಕಾಲುಗಳಿಂದ ಶೋಭಿಸುವ ಆಸನದಲ್ಲಿ ಶುಕನಾಸನು ಕುಳಿತುಕೊಂಡನು. ವ|| ಅನಂತರ ರಾಜನು ಗರ್ಭಿಣಿಯಾದ ತನ್ನ ಹೆಂಡತಿಯನ್ನು ನೋಡಿ ಸಂತಸದಿಂದ ಹಾಸ್ಯಭರಿತವಾದ ಮಾತುಗಳಿಂದ ಹೀಗೆ ಹೇಳಿದನು. ೯೩. 'ದೇವಿ ! ಈ ದಿನ ವಂಶವರ್ಧನೆಯು ಬಂದು ಮನಸ್ಸಿನಲ್ಲಿ ಉಕ್ಕುತ್ತಿರುವ ಸಂತೋಷದಿಂದ ಏನೋ ಒಂದು ಸಂಗತಿಯನ್ನು ತಿಳಿಸಿದಳು. ಅದು ನಿಜತಾನೆ ? ಎಂದು ಮಂತ್ರಿಯು ಸಂತೋಷದಿಂದ ಕೇಳುತ್ತಿದ್ದಾನೆ. ಅವನಿಗೆ ಏನು ಹೇಳಬೇಕೋ ಹೇಳು' ಎಂದು ರಾಜನು ಹೇಳಲಾಗಿ ರಾಣಿಯು ಮುಖದಲ್ಲಿ ಮುಗುಳ್ನಗೆಯು ಹೊರಹೊಮ್ಮುತ್ತಿರಲಾಗಿ ನಾಚಿಕೆಯಿಂದ ತಗ್ಗಿದ ಮುಖವನ್ನು ಹಲ್ಲಿನ ಬೆಳಕೆಂಬ ವಸ್ತ್ರದಿಂದ ಮುಚ್ಚಿದಳು. ೯೪. ರಾಜನು ಮತ್ತೆ ಮತ್ತೆ ಹೇಳು, ಹೇಳು ಎಂದು ಕೇಳುತ್ತಲೇ ಇದ್ದನು. ಆಗ ವಿಲಾಸವತಿಯು 'ನಿಜವಾಗಿಯೂ ನನಗದೊಂದೂ ಗೊತ್ತಿಲ್ಲ. ನನ್ನನ್ನು ಏತಕ್ಕೆ ಸುಮ್ಮನೆ ಗೋಳುಗುಟ್ಟಿಸುತ್ತೀರಿ ? ನನಗೇಕೆ ನಾಚಿಕೆಯಾಗುವಂತೆ ಮಾಡುತ್ತಿದ್ದೀರಿ, ಹೇಳಿ' ಎಂದು ಮೆಲ್ಲನೆ ಹೇಳುತ್ತಾ ತಲೆ ಬಗ್ಗಿಸಿಕೊಂಡು ರಾಜನನ್ನು ಅಸಹನೆಯಿಂದಲೋ ಎಂಬಂತೆ ಎಡಗಣ್ಣಿ

ವ॥ ಅಂತು ನೋಟ್ಟುದುಂ ನರೇಂದ್ರಂ ನಸುನಗುತ್ತಮಿಂತೆಂದಂ

ಆಂ ನುಡಿದೀಗಳೀ ನುಡಿಗೆ ಲಜ್ಜಿಸಿದಪ್ಪೆ ಲತಾಂಗಿ ಮಾಣ್ದೆನಾ
ನಿನ್ನದನಂತದಿರ್ಕೆ ವಿಳಸನ್ನವಚಂಪಕ ಚಾರುಕಾಂತಿಯಿಂ
ದಂ ನೆಱೆದಿರ್ದು ಕಣ್ಗೊಳಿಪ ಕುಂಕುಮಪಂಕನವಾಂಗರಾಗದೊಳ್
ನಿನ್ನ ತನುಪ್ರಭಾಪ್ರಕರದಿಂದೆ ಬೆಳರ್ಪನದೇಕೆ ಮಾಡಿದಾ ೯೫

ಪಸರಿಸುವ ಗರ್ಭಸಂಪ್ರಾ
ಪ್ತಿಸುಧಾಸೇಚನೆಯೆ ಹೃದಯಶೋಕಾಗ್ನಿಯು ನಂ
ದಿಸೆ ಪೊಣ್ಮುತಿರ್ಪ ಧೂಮ
ಪ್ರಸರಮಿದೆನೆ ಕುಚದೊಳೇಕೆ ಕರ್ಪಂ ತಳೆದಾ ೯೬

ತೊಳಗುವ ತೆಳ್ಪಸಿಱೊಳ್ ಶಿಶು
ಬಳೆವಿನಮಭಿಷೇಕವಿಧಿಗೆ ನಿಲಿಸಿದ ನೀಲೋ
ತ್ಪಲಪಿಹಿತ ಹೇಮಕಲಶಂ
ಗಳಿವೆಸಿಸಿದವಲ್ತೆ [ನೀಲಮುಖಕುಚ]ಯುಗಳಂ ೯೭

ನಿಂದ ನೋಡಿದಳು. ವ॥ ಹಾಗೆ ನೋಡಲಾಗಿ ರಾಜನು ನಸುನಗುತ್ತಾ ಹೀಗೆ ಹೇಳಿದನು. ೯೫. 'ಎಲೌ ಬಳ್ಳಿಯಂತೆ ದೇಹವುಳ್ಳ ರಾಣಿಯೆ, ನಾನು ಈಗ ಹೇಳಿದ ಮಾತಿಗೆ ನೀನು ನಾಚಿಕೆಪಟ್ಟುಕೊಂಡರೆ ಹೋಗಲಿ ಬಿಡು! ನಾನು ಸುಮ್ಮನಾಗಿಬಿಡುತ್ತೇನೆ. ಆದರೆ ಪ್ರಕಾಶ ಮಾನವಾದ ಹೊಸದಾದ ಸಂಪಿಗೆಯ ಹೂವಿನಂತೆ ರಮಣೀಯವಾದ ಕಾಂತಿಯಿಂದ ತುಂಬಿ ಕಂಗೊಳಿಸುವ ಬಿಳಿಕುಂಕುಮದ ಹೊಸ ಲೇಪನದಲ್ಲಿ ನಿನ್ನ ಶರೀರದ ಕಾಂತಿ ಸಮೂಹದಿಂದ ಅತಿಶಯವಾದ ಬಿಳುಪನ್ನು ನೀನು ಏಕೆ ಉಂಟುಮಾಡಿದೆ ? ಟಿ. ಗರ್ಭ ಧಾರಣೆಯಿಂದ ಶರೀರವು ಬೆಳ್ಳಗಾಗುತ್ತದೆ. ೯೬. ಬೆಳೆಯುತ್ತಿರುವ ಗರ್ಭವೆಂಬ ಅಮೃತವೃಷ್ಟಿಯು ಹೃದಯದಲ್ಲಿರುವ ದುಃಖವೆಂಬ ಬೆಂಕಿಯನ್ನು ಆರಿಸಲಾಗಿ ಹೊರಡು ತ್ತಿರುವ ಹೊಗೆಯಿಂದ ಆವರಿಸಿದಂತೆ ಕಪ್ಪುಬಣ್ಣವನ್ನು ಸ್ತನಾಗ್ರದಲ್ಲಿ ಏಕೆ ಹೊಂದಿ ರುವೆ ? ಟಿ. ಸ್ತನಾಗ್ರವು (ಮೊಲೆಗಳ ತೊಟ್ಟು) ಕಪ್ಪಾಗುವುದೂ ಒಂದು ಗರ್ಭಲಕ್ಷಣ. ೯೭. ಹೀಗೆ ತುದಿಯಲ್ಲಿ ಕಪ್ಪನ್ನು ಹೊಂದಿರುವ ನಿನ್ನ ಎರಡು ಸ್ತನಗಳು ಶೋಭಿಸುವ ತೆಳುಬಸಿರಿನಲ್ಲಿ ಶಿಶು ಬೆಳೆಯುತ್ತಿದೆಯಲ್ಲ ! ಅದರ ಸ್ನಾನಕ್ಕಾಗಿ ಏರ್ಪಡಿಸಿರುವ ಕನ್ನೈ ದಿಲೆಯಿಂದ ಮುಚ್ಚಿರುವ ಎರಡು ಚಿನ್ನದ ಕೊಡಗಳಂತೆ ಕಾಣುತ್ತಿವೆಯಲ್ಲವೆ ? ಟಿ. ಗರ್ಭ ಧಾರಣೆಯಿಂದ ಕಪ್ಪನ್ನು ಹೊಂದಿರುವ ಕುಚಾಗ್ರವನ್ನು ಕನ್ನೈದಿಲೆಗಳಿಗೂ ಸ್ತನಗಳನ್ನು

ಉದರಾರ್ಭಕಂಗೆ ಮೇಲೆ
ತ್ತಿದ ಕುಚಯುಗಮೆಂಬ ಪೊನ್ನಮಳ್ಗೊಡೆಯಂ ತಾ
ಳ್ದಿದ ನೀಲದಂಡಮೆಂಬಂ
ದದೆ ಸೊಗಯಿಪ ಬಾಸೆಗರಸಿ ಲಜ್ಜಿಸವೇಡಾ ೯೮

ನುಡಿವೊಡೆ ನಾಚಿಕೆ ಗಡ ನಿನ
ಗೂಡಿನೊಳ್ ಬಿಗಿವಿನೆಗಮೀ ವಳಿತ್ರಯಮೀಗಳ್
ಕಿಡುತಿರ್ಪುದು ಬಡತನಮಂ
ಬಿಡುತಿರ್ಪುದು ನಡುವುಮಿಂತಿದಕ್ಕೇಗೆಯೌ ೯೯

ವ॥ ಎಂದು ತಾರಾಪೀಡಂ ಕಾಡುತಿರ್ಪುದುಮಂತರ್ನಿಗೂಢ ಹಾಸ್ಯಂ ಶುಕನಾಸನಿಂತೆಂದಂ

ಇನಿತಾಯಾಸಮನೇಕೆ ಮಾಡಿದಪೆ ನಾಣ್ಚುತ್ತಿರ್ದಪಳ್ ದೇವಿ ಭೂ
ವನಿತಾಧೀಶ್ವರ ನಿನ್ನ ಮಾತುಗಳಿನೀಗಳ್ ನಾಡೆಯುಂ ವಂಶವ
ರ್ಧನೆ ಪೇಟ್ದಲ್ಲಿಯ ಮಾತನೀಂ ಮಱೆಯೆನುತ್ತಲ್ಲಿಂದೆ ನರ್ಮಪ್ರಿಯಾ
ಭಿನುತಾಳಾಪದೆ ನೀಡುಮಿರ್ದು ಬೞಿಯಂ ಪೋದಂ ಪ್ರಧಾನೋತ್ತಮಂ ೧೦೦

ವ॥ ಇತ್ತಲ್ ಸನ್ನಿಹಿತಗರ್ಭದೋಹದ ಸಂಪಾದನದಿಂ ವಿಳಾಸವತೀಮಹಾದೇವಿಯುಂ ಪ್ರಮುದಿತೆಯಪ್ಪಂತು ನೆಗೞುತ್ತುಮಿರೆ ಕೆಲವಾನುಂ ದಿವಸದೊಳ್ ಪ್ರಸವಸಮಯ ಪೂಣ ದಿನಮಾಗೆ ಗಣಕಗಣಂ ಗೃಹೀತಛಾಯಾಮಾನರಾಗಿ ಶುಭಲಗ್ನಮಂ ಪಾರುತ್ತಿರ್ಪನ್ನೆಗಂ

ಚಿನ್ನದ ಕೊಡಗಳಿಗೂ ಹೋಲಿಸಿದ್ದಾನೆ. ೯೮. ನಿನ್ನ ಗರ್ಭದಲ್ಲಿರುವ ಮಗುವಿಗೆ ಎತ್ತಿ ಹಿಡಿದಿರುವ ಕುಚದ್ವಯ (ಎರಡು ಮೊಲೆ)ವೆಂಬ ಚಿನ್ನದ ಜೋಡಿ ಕೊಡೆಗೆ ಜೋಡಿಸಿರು ರುವ ಕಪ್ಪುಕೋಲಿನಂತಿರುವ ಸೊಗಸಾದ ಬಾಸೆಗೆ (ರೋಮರಾಜಿ) ನಾಚಿಗೆಯಾಗು ವುದಿಲ್ಲವೆ ? ಟಿ. ಹೆಂಗಸರ ಹೊಕ್ಕಳಿನಿಂದ ಮೇಲುಮುಖವಾಗಿ ಬೆಳೆದಿರುವ ಕೂದಲು ಸಾಲನ್ನು ಛತ್ರಿಯ ಕೋಲೆಂದು ವರ್ಣಿಸಿದ್ದಾನೆ. ೯೯. ಬಾಯಿಬಿಟ್ಟು ಹೇಳುವುದಕ್ಕೆ ನಿನಗೆ ನಾಚಿಕೆ ತಾನೆ ? ನಿನ್ನ ಒಡ್ಯಾಣವು ಬಿಗಿಯುತ್ತಿದೆ. ತ್ರಿವಳಿಗಳು ಮುಚ್ಚಿಹೋಗು ತ್ತಿವೆ. ಸೊಂಟವು ತೆಳುವನ್ನು ಬಿಡುತ್ತಾ ದಪ್ಪನಾಗುತ್ತಿದೆ. ಇದಕ್ಕೇನು ಹೇಳುತ್ತೀಯೆ?' ವ॥ ಎಂದು ತಾರಾಪೀಡನು ವಿಲಾಸವತಿಯನ್ನು ಗೇಲಿಮಾಡುತ್ತಿರಲಾಗಿ ಶುಕನಾಸನು ಹಾಸ್ಯಗರ್ಭಿತವಾಗಿ ಹೀಗೆ ಹೇಳಿದನು. ೧೦೦. 'ಪ್ರಭುವೆ, ಮಹಾರಾಣಿಯವರಿಗೆ ಇಷ್ಟು ತೊಂದರೆಯನ್ನು ಏಕೆ ಕೊಡುತ್ತೀರಿ ? ಅವರಿಗೆ ನಿಮ್ಮ ಮಾತುಗಳಿಂದ ಬಹಳ ನಾಚಿಕೆಯಾಗುತ್ತಿದೆ. ವಂಶವರ್ಧನೆ ಹೇಳಿದ ಮಾತುಗಳ ವಿಷಯವನ್ನು ಬಿಟ್ಟುಬಿಡಿ' ಎಂದನು. ಹೀಗೆ ಪರಿಹಾಸಗರ್ಭಿತವಾದ ಸರಸ ಸಲ್ಲಾಪಗಳಿಂದ ಬಹಳಕಾಲವನ್ನು ಕಳೆದು ಶುಕನಾಸನು ತನ್ನ ಮನೆಗೆ ತೆರಳಿದನು. ವ॥ ಈ ಕಡೆ ಬಸುರಿ ಬಯಕೆಯುಂಟಾದರೆ ಅವೆಲ್ಲವನ್ನೂ ಒದಗಿಸಿಕೊಡುವುದರಿಂದ ವಿಲಾಸವತಿಯು ಪರಮಾನಂದಭರಿತಳಾಗುವಂತೆ ಏರ್ಪಡಿಸಲಾಗಿತ್ತು. ಹೀಗೆ ಕೆಲವು ದಿನ ಕಳೆಯಿತು. ಮಂಗಳಕರವಾದ ಹೆರಿಗೆದಿನವೂ

ಒದವಲ್ ನಿಜತೇಜಂ ಘನ
ದೊದವಿಂ ನವಮೇಘಮಾಲೆಗುದಯಿಪ ತೆಱದಿಂ
ಪೃದಯಾನಂದಂ ಭುವನದೊ
ಳೊದವಲ್ಕೆ ವಿಳಾಸವತಿಗೆ ಸುತಸುದಯಿಸಿದಂ ೧೦೧

ವ॥ ಅಂತಾ ಮಹಾತ್ಮಜಾತಜನನೋತ್ಸವದೊಳ್ ಸರಭಸಪ್ರಧಾವಿತ ಪರಿಜನ ಚರಣ ಸಂಕ್ಷೋಭಕ್ಷುಣ್ಣ ಕ್ಷಿತಿತಳಮುಂ ಭೂಪಾಲಾಭಿಮುಖಪ್ರಸೃತ ಕಂಚುಕಿಸಹಸ್ರಸಮ್ಮರ್ದ ನಿಷ್ಪಿಷ್ಯಮಾಣ ಕುಬ್ಜವಾಮನಗಣಮುಂ ವಿಪ್ಯಾರ್ಯಮಾಣಾಂತಃಪುರಜನಾಭರಣ ಝಂಕಾರ ಮನೋಹರಮುಂ ಪೂರ್ಣಪಾತ್ರಹರಣವಿಲುಠ್ಯಮಾನವಸನಭೂಷಣಮುಂ ಸಂಕ್ಷೋಭಿತ ನಗರ ಮುಮೆನಿಸಿ ಮಹಾಸಂಭ್ರಮಂ ವಿಜೃಂಭಿಸುವುದುಮಂಭೋಧಿಗಂಭೀರ ದುಂದುಭಿಧ್ವಾನ ಪುರಸ್ಸರಮಾಗಿ ರಾಜಮಂದಿರದೊಳ್ ಮೃದುಮೃದಂಗ ಶಖಕಹಳಾರಾವ ನಿರ್ಭರಪಟಹರವಂ ಗಳೆಸೆಯೆ ಅನೇಕಸಹಸ್ರ ಜನಸಂಕುಲಂಗಳಿಂ ತ್ರಿಭುವನಮೆಲ್ಲಮುಂ ತೆಕ್ಕನೆ ತೀವ್ರವಾನಂದ ಬಹುಳ ಕೋಲಾಹಲಂ ನೆಗೆಯೆ ಸಮಸ್ತ ಸಾಮಂತಸಂತತಿಯುಮಶೇಷಾಂತಃಪುರಮುಮಖಿಳ ರಾಜ

ಬಂತು. ಅರಮನೆ ಜೋಯಿಸರು ಛಾಯಾಯಂತ್ರಗಳನ್ನು ಇಟ್ಟುಕೊಂಡು ಜನನ ಕಾಲದ ಶುಭಲಗ್ನವನ್ನು ಕಂಡುಹಿಡಿಯಲು ಉತ್ಸುಕರಾಗಿ ನಿರೀಕ್ಷಿಸುತ್ತಿದ್ದರು. ಅಷ್ಟರಲ್ಲಿ ೧೦೧. ಹೊಸದಾದ ಮೇಘಪಂಕ್ತಿಗೆ ಮಿಂಚಿನ ಹೊಳಪು ಹುಟ್ಟುವಂತೆ ಜಗತ್ತಿಗೆಲ್ಲ ಪರ ಮಾನಂದವುಂಟಾಗಲು ವಿಲಾಸವತಿಗೆ ಮಗನು ಹುಟ್ಟಿದನು. ವ॥ ಹೀಗೆ ಮಹಾಪುರು ಷನು ಹುಟ್ಟಿದ ಜನ್ಮೋತ್ಸವದಲ್ಲಿ ಅರಮನೆಯ ಊಳಿಗದವರು ಗಡಿಬಿಡಿಯಿಂದ ಜೋರು ಜೋರಾಗಿ ಓಡಾಡುತ್ತಿದ್ದರು. ಅವರ ಕಾಲುಗಳ ತುಳಿತದಿಂದ ನೆಲವು ಪುಡಿಪುಡಿ ಯಾಗುತ್ತಿತ್ತು. ಈ ಶುಭಸಮಾಚಾರವನ್ನು ತಿಳಿಸುವುದಕ್ಕಾಗಿ ರಾಜಮಹಾರಾಜರು ಗಳ ಹತ್ತಿರಕ್ಕೆ ಅನೇಕ ಕಂಚುಕಿಗಳು ಧಾವಿಸುತ್ತಿದ್ದರು. ಅವರ ಕಾಲಿನ ತುಳಿತದಿಂದ ಅರಮನೆಯ ಊಳಿಗಕ್ಕೆ ಸೇರಿದ್ದ ಅನೇಕ ಮಂದಿ ಕುಳ್ಳರು ಹಾಗೂ ಗುಜ್ಜಾರಿಗಳು ಅಜ್ಜಿಬಿಜ್ಜಿಯಾಗುತ್ತಿದ್ದರು. ರಾಣಿವಾಸದ ಹೆಂಗಸರ ಓಡಾಟದಿಂದ ಅವರ ಒಡವೆಗಳ ಮನೋಹರವಾದ ಝಂಕಾರಧ್ವನಿಯು ಎಲ್ಲೆಲ್ಲೂ ಹರಡುತ್ತಿತ್ತು. ಪರಿಜನರು ಉಡುಗೊರೆಗಳನ್ನು ಗಿಟ್ಟಿಸಿಕೊಳ್ಳುವುದಕ್ಕಾಗಿ ಬಟ್ಟೆಬರೆ ಒಡವೆವಸ್ತುಗಳನ್ನು ಸೆಳೆದು ಕೊಳ್ಳುತ್ತಿದ್ದರು. ಹೀಗೆ ಪಟ್ಟಣವು ಗಡಿಬಿಡಿಯಿಂದ ಅಲ್ಲೋಲಕಲ್ಲೋಲವಾಗಿತ್ತು. ಹೀಗೆ ದೊಡ್ಡ ಸಡಗರವು ಹೆಚ್ಚುತ್ತಿತ್ತು. ಅದೇ ಸಮಯದಲ್ಲಿ ಸಮುದ್ರಧ್ವನಿಯಂತೆ ಗಂಭೀರವಾದ ನಗಾರಿ ಶಬ್ದದಿಂದ ಕೂಡಿಕೊಂಡಿರುವ, ಇಂಪಾದ ಮೃದಂಗ, ಶಂಖ, ಕಾಳೆಧ್ವನಿಗಳಿಂದ ಮಿಳಿತವಾದ ಗಟ್ಟಿಯಾಗಿ ಬಾರಿಸುತ್ತಿರುವ ತಮಟೆ ಧ್ವನಿಗಳು ವಿಜೃಂ ಭಿಸಿದವು. ಹೀಗೆ ಅನೇಕ ಸಹಸ್ರಸಂಖ್ಯೆಯ ಜನಜಂಗುಳಿಯಿಂದ ಮೂರು ಲೋಕ

ಲೋಕಮುಂ ಆಬಾಲ ಗೋಪಾಲಪ್ರಕೃತಿಯೆಲ್ಲಮುಮತಿಹರ್ಷನಿರ್ಭರತೆಯಿಂ ಭೋರ್ಗರೆ ದಾರ್ದು ನಲಿದು ನರ್ತಿಸುತ್ತುಮಿರೆ

ಉದಯಿಸೆ ಚಂದ್ರಂ ನೆಲೆವೆ
ರ್ಚಿದರ್ಣವಂ ಘೂರ್ಣಿಪಂತೆ ಭೋರೆಂದೋರಂ
ದದೆ ಭುವನಮೈದೆ ಘೂರ್ಣಿಸಿ
ದುದದೆತ್ತಂ ರಾಜಪುತ್ರಜನನೋತ್ಸವದೊಳ್ ೧೦೨

ವ॥ ಅಂತಾ ಸಮಯದೊಳ್

ಶುಕನಾಸಸಮನ್ವಿತನು
ತ್ಸುಕಹೃದಯಂ ನೃಪತಿ ಸುತಮುಖಾವಲೋಕನಕೌ
ತುಕದಿಂ ಬಂದಂ ಮೌಹೂ
ರ್ತಿಕೋಪದಿಷ್ಟಪ್ರಶಸ್ತಲಗ್ನೋದಯದೊಳ್ ೧೦೩

ವ॥ ಆಗಳ್ ಮಣಿಮಯಕಲಶವಿಲಸಿತಮುಂ ವಿವಿಧ ಪುತ್ರಿಕಾವಿಚಿತ್ರಮುಂ ಪಲ್ಲವ ನಿವಹನಿರಂತರಮುಂ ಕಾಂಚನಮಯಕಮಲ ಮುಸಲಪಲಕಲಿತಮುಂ ಸಿತಕುಸುಮಮಿಶ್ರಿತ ದೂರ್ವಾಪ್ರವಾಳಾಲಂಕೃತಮುಂ ವ್ಯಾಘ್ರಚರ್ಮಸಾಂದ್ರಮುಂ ವಂದನಮಾಲಾಂತರಾಳ ಘಟಿತ ಘಂಟಾಗಣಮುಮೆನಿಸಿದ ಸೂತಿಕಾಭವನದ್ವಾರದೇಶದೊಳ್ ನಿವಾರಿತ ಪರಿವಾರನಾಗಿ ಶುಕನಾಸ

ವನ್ನೆಲ್ಲಾ ಸಂಪೂರ್ಣವಾಗಿ ವ್ಯಾಪಿಸುವ ಆನಂದಭರಿತವಾದ ಕಲಕಲಧ್ವನಿಯು ಹೊರ ಹೊಮ್ಮುತ್ತಿತ್ತು. ಸಮಸ್ತರಾದ ಸಾಮಂತರಾಜರೂ, ರಾಣಿವಾಸದ ಎಲ್ಲಾ ಜನರೂ ಮಕ್ಕಳು ಗೊಲ್ಲರು ಮೊದಲಾದ ಸಮಸ್ತಪ್ರಜೆಗಳೂ ಆನಂದಾತಿರೇಕದಿಂದ ಭೋರ್ಗ ರೆದು ಕೂಗಿ ಕುಪ್ಪಿಟ್ಟು ಕುಣಿಯುತ್ತಿರಲಾಗಿ, ೧೦೨. ಚಂದ್ರನು ಉದಯಿಸಲು ದಡ ಮೀರಿದ ಸಾಗರವು ಅಲ್ಲೋಲಕಲ್ಲೋಲವಾಗುವಂತೆ ರಾಜಕುಮಾರನ ಜನ್ಮೋತ್ಸವ ದಲ್ಲಿ ಲೋಕವು ಒಂದೇಸಮನೆ ಬಹಳವಾಗಿ ಭೋರೆಂದು ಗದ್ದಲದಿಂದ ಆವರಿಸಲ್ಪಟ್ಟಿತ್ತು. ವ॥ ಆ ಸಮಯದಲ್ಲಿ, ೧೦೩. ರಾಜನು ಮಗನ ಮುಖವನ್ನು ನೋಡಬೇಕೆಂಬ ಕುತೂಹಲದಿಂದ ಜೋಯಿಸರು ತಿಳಿಸಿದ ಪ್ರಶಸ್ತವಾದ ಲಗ್ನದಲ್ಲಿ ಶುಕನಾಸನೊಂದಿಗೆ ತವಕಗೊಂಡ ಮನಸ್ಸಿನಿಂದ ಬಂದನು. ವ॥ ಆಗ ರತ್ನಖಚಿತವಾದ ಪೂರ್ಣಕಲಶಗಳಿಂದ ಕೂಡಿಕೊಂಡಿರುವ, ಬಗೆಬಗೆಯಾದ ಬೊಂಬೆಗಳಿಂದ ಶೋಭಿಸುತ್ತಿರುವ, ಚಿಗುರೆಲೆ ಗಳಿಂದ ತುಂಬಿರುವ, ಚಿನ್ನದ ತಾವರೆ ನೇಗಿಲು ಒನಕೆಗಳನ್ನು ಇರಿಸಿರುವ, ಬಿಳಿಯ ಹೂವುಗಳಿಂದ ಕೂಡಿರುವ, ಎಳೆಯ ಗರಿಕೆಗಳಿಂದ ಶೋಭಿಸುವ, ಹುಲಿಯ ಚರ್ಮವನ್ನು ಇಟ್ಟಿರುವ, ತೋರಣದ ಮಧ್ಯದಲ್ಲಿ ಜೋಡಿಸಿರುವ ಗಂಟೆಗಳುಳ್ಳ ಹೆರಿಗೆಮನೆಯ

ಸಮನ್ವಿತಂ ಪುಗುವಲ್ಲಿ ಉತ್ತಾನವಿನಿಹಿತವರಾಟಕಪ್ರಕರದಂತುರಂಗಳುಂ ವಿವಿಧ ವರ್ಣರಾಗ ರುಚಿರ ಕಾರ್ಪಾಸಕುಸುಮಲಾಂಛಿತಾಂಗಳುಂ ಕುಸುಂಭಕೇಸರಲವಾಶ್ಲೇಷಲೋಹಿತ ಮುಖಂಗಳು ಮಾಗಿ ರಂಜಿಸುವ ರಂಗವಲ್ಲಿಗಳುಮಂ ವಿಕಚಪಕ್ಷಮಂಡಿತ ಶಿಖಂಡಿವಾಹನನುಂ ಆಲೋಲಲೋಹಿತ ಪಟಪತಾಕನುಂ ಉಲ್ಲಸಿತಶಕ್ತಿದಂಡನುಮೆನಿಸಿದ ಕಾರ್ತಿಕೇಯನುಮಂ ಅಲಕ್ತಕಪಟಲ ಪಾಟಳ ರಪ್ಪ ಸೂರ್ಯಚಂದ್ರಮಸರುಮಂ ಕುಂಕುಮಪಂಕಪಿಂಜರೀಕೃತಂಗಳುಂ ಊರ್ಧ್ವಪ್ರೋತ ಕನಕಮಯಯವನಿಕರಂಗಳುಂ ಅವಿರಳಗೌರ ಸಿದ್ಧಾರ್ಥಪ್ರಕರಂಗಳುಮೆನಿಸಿದ ಮೃಣ್ಮ ಯಂಗಳಪ್ಪ ಘಟಿಕಾಕದಂಬಂಗಳುಮಂ ಚಂದನರಸಧವಳಿತ ಭಿತ್ತಿಭಾಗಾಂಚಿತ ಪಂಚರಾಗವಿಚಿತ್ರ ಚೇಲಕಳಾಪಚಿಪ್ನಂಗಳುಮಂ ವರ್ಧಮಾನಕಪರಂಪರೆಗಳುಮಂ ಇನ್ನುಮನೇಕ ಪ್ರಸವಗೃಹ ಮಂಡನಂಗಳುಮಂ ಸಂಪಾದಿಸುವ ಪುರಂಧ್ರಿಯರೊಳಂ ಗುಗ್ಗುಳಫಣಿಕಂಚುಕವಿಷಾಣರೇಣು ಗಳಿಂದೆ ಕರ್ವೊಗೆಯಿಡುವ ಸರ್ವರಕ್ಷಾಧೂಪಧೂಮಂಗಳೊಳಂ ಶಾಂತ್ಯುದಕಮಂ ತಳಿವವನೀ ವೃಂದಾರಕ ವೇದಘೋಷಣಂಗಳೊಳಂ ಮಾತೃಗಣ ಪೂಜಾವಿಧಾನತತ್ಪರರಾದ ಧಾತ್ರೀ ಜನಂಗಳೊಳಂ ಮಂಗಳಮಂ ಪಾಡುವ ಶುದ್ಧಾಂತವೃದ್ಧಾಂಗನೆಯರೊಳಂ ಕನಕದಂಡಾಗ್ರ

ಬಾಗಿಲಲ್ಲಿ ಊಳಿಗದವರನ್ನು ನಿಲ್ಲುವಂತೆ ಹೇಳಿ ಶುಕನಾಸನೊಂದಿಗೆ ಒಳಕ್ಕೆ ಬಂದನು. ಅಲ್ಲಿ ಮುತ್ತೈದೆಯರು ನೆರೆದಿದ್ದರು. ಅವರಲ್ಲಿ ಕೆಲವರು ರಂಗೋಲೆಯಿಂದ ಸ್ವಸ್ತಿಕಾ ಕಾರವನ್ನು ಬರೆದು ಅದರ ಮೇಲೆ ಕವಡೆಗಳನ್ನು ಮೇಲುಮುಖವಾಗಿ ಇಡಬೇಕಾದ ಕಡೆಗಳಲ್ಲಿ ಇಟ್ಟು ನಾನಾ ಬಣ್ಣಗಳಿಂದ ರಂಜಿತವಾದ ಮತ್ತು ಸುಂದರವಾದ ಹತ್ತಿಹೂವು ಗಳನ್ನು (ಹೂಬತ್ತಿ) ? ಪಿರಿಸಿ ಕುಸುಬೆಹೂವಿನ ಕೇಸರಗಳನ್ನು ಚೂರು ಚೂರು ಮಾಡಿ ಅದರ ಮೇಲೆ ಉದುರಿಸಿ ಕೆಂಪಗಾಗುವಂತೆ ಮಾಡುತ್ತಿದ್ದಾರೆ. ಮತ್ತೆ ಕೆಲವರು ಅಕ್ಕಿ ಹಿಟ್ಟಿನಿಂದ ಬಿಚ್ಚಿದ ರೆಕ್ಕೆಯುಳ್ಳ ನವಿಲಿನ ಮೇಲೆ ಕುಳಿತುಕೊಂಡಿರುವ, ಹಾರಾಡುತ್ತಿ ರುವ ಕೆಂಬಟ್ಟೆಯ ಬಾವುಟವುಳ್ಳ ಶಕ್ತಿ ಎಂಬ ಆಯುಧವನ್ನು ಹಿಡಿದುಕೊಂಡಿರುವ ಕುಮಾರಸ್ವಾಮಿಯ ಆಕಾರವನ್ನು ಬರೆಯುತ್ತಿದ್ದಾರೆ. ಮತ್ತೊಂದು ಕಡೆ ಮತ್ತೆ ಕೆಲವರು ಅರಗಿನರಸದಿಂದ ಮಧ್ಯದಲ್ಲಿ ಕೆಂಬಣ್ಣವನ್ನು ಅಳವಡಿಸಿ ಚಂದ್ರ ಸೂರ್ಯ ಮಂಡಲಗಳನ್ನು ಚಿತ್ರಿಸುತ್ತಿದ್ದಾರೆ. ಹಲವರು ಹಳದಿ ಕುಂಕುಮದ ಲೇಪನದಿಂದ ಹೊಂಬಣ್ಣವಾದ ಕುಡಿಕೆಗಳನ್ನಿರಿಸಿ ಅವುಗಳ ಮೇಲೆ ಚಿನ್ನದಿಂದ ಮಾಡಿದ ಜವೆಗೋಧಿ ಸಸಿಗಳನ್ನು ನೆಟ್ಟು ಬಿಳಿಸಾಸುವೆಗಳನ್ನು ದಟ್ಟವಾಗಿ ಹರಡುತ್ತಿದ್ದಾರೆ. ಮತ್ತೆ ಕೆಲವರು ಗೋಡೆಯ ಮೇಲೆ ಚಂದನರಸದ ಲೇಪನದಿಂದ ಬಿಳುಪಾದ ಮಣ್ಣಿನ ಶರಾವೆಗಳನ್ನು ಸಾಲಾಗಿ ಇರಿಸಿ ಅವುಗಳನ್ನು ಪಂಚವರ್ಣಗಳಿಂದ ರಂಜಿತವಾದ ವಸ್ತ್ರ ಖಂಡಗಳಿಂದ ಅಲಂಕರಿಸುತ್ತಿದ್ದಾರೆ. ಇದೇ ರೀತಿಯಲ್ಲಿ ಹೆರಿಗೆಮನೆಯಲ್ಲಿ ಮಾಡಬೇಕಾದ ಅನೇಕ ಬಗೆಯ ಅಲಂಕಾರಗಳನ್ನೆಲ್ಲಾ ಮುತ್ತೈದೆಯರು ಮಾಡುತ್ತಿರುವರು. ಗುಗ್ಗುಳ, ಹಾವಿನಪೊರೆ, ಕುರಿಕೊಂಬಿನ ಪುಡಿಗಳನ್ನು ಹಾಕುವುದರಿಂದ ಕಪ್ಪುಹೊಗೆ ಬರುತ್ತಿರುವ

ಮಂಡಿತವಾಗಿ ಬೆಳಗುವ ಮಂಗಳಪ್ರದೀಪಂಗಳೊಳಂ ಉತ್ಖಾತಾಸಿಲತಾಸನಾಥಪಾಣಿಗಳಪ್ಪ ರಕ್ಷಾಪುರುಷರೊಳವೆಸೆವ ಸೂತಿಕಾಗೃಹಮಂ ತಾರಾಪೀಡನರೇಂದ್ರಂ ಪುಗುವುದುಂ ಪ್ರಸವ ಪರಿಕ್ಷಾಮಪಾಂಡುಮೂರ್ತಿಯಪ್ಪ ವಿಳಾಸವತೀಮಹಾದೇವಿಯುತ್ಸಂಗದೊಳ್ ತನ್ನ ಬೆಳಗೆ ಬೆಳಗಾಗೆ

ಉದಯದ ಕೆಂಪಿನಿಂ ಪುದಿದದೊಂದಿನಬಿಂಬವೊ ಸಂಜೆಗೆಂಪಿನಿಂ
ಪುದಿದ ಸುಧಾಂಶುಮಂಡಳವೊ ಮೇಣೆವರಲ್ಕೆಯೊಳಾದ ರಾಗದಿಂ
ಪುದಿದರುಣಾರವಿಂದಚಯಮೋ ತಳಿರ್ಗೊಂಚಲ ತಳ್ತ ಕೆಂಪಿನಿಂ
ಪುದಿದಮರಾವನೀರುಹವೊ ಪೇಳೆನೆ ಬಾಲಕನಾದವೊಪ್ಪಿದಂ ೧೦೪

ಎಳವಿಸಿಲಿಂ ಪವಳದ ಕುಡಿ
ದಳಿರಿಂ ಮಾಣಿಕದ ಬೆಳಗಿನಿಂ ನಿರ್ಮಿಸಿದಂ
ನಳಿನಭವನೆಂಬಿನಂ ಕ
ಣ್ಗೊಳಿಸಿರ್ದಂ ಜಿತಕುಮಾರನೆಂಬ ಕುಮಾರಂ ೧೦೫

ರಕ್ಷಾಧೂಪದ ಅಗ್ನಿಯು ಒಂದು ಕಡೆಯಲ್ಲಿ ಉರಿಯುತ್ತಿದೆ. ಬ್ರಾಹ್ಮಣರು ನೆರೆದು ವೇದ ಘೋಷಪೂರ್ವಕವಾಗಿ ಶಾಂತ್ಯುದಕವನ್ನು ಪ್ರೋಕ್ಷಿಸುತ್ತಿದ್ದಾರೆ. ದಾದಿಯರು ಸಪ್ತ ಮಾತೃಕೆಯರ ಪೂಜೆಯಲ್ಲಿ ನಿರತರಾಗಿದ್ದಾರೆ. ರಾಣಿವಾಸದ ವೃದ್ಧಮಹಿಳೆಯರು ಹೆರಿಗೆಮನೆಯಲ್ಲಿ ಹೇಳಬೇಕಾದ ಸೋಬಾನೆಹಾಡುಗಳನ್ನು ಹಾಡುತ್ತಿದ್ದಾರೆ. ಚಿನ್ನದ ಕಟ್ಟಿಗೆಯ ಮೇಲೆ ಮಂಗಳದೀಪಗಳು ಬೆಳಗುತ್ತಿವೆ. ಬಿಚ್ಚುಗತ್ತಿಯನ್ನು ಹಿಡಿದು ಕಾವಲಿನ ಭಟರು ಪಹರೆ ಕಾಯುತ್ತಿದ್ದಾರೆ. ಹೀಗೆ ವಿರಾಜಮಾನವಾದ ಸೂತಿಕಾಗೃಹವನ್ನು ತಾರಾ ಪೀಡಮಹಾರಾಜನು ಒಳಹೊಕ್ಕು ಹೆರಿಗೆಯಿಂದ ಕೃಶವಾದ ಹಾಗೂ ಬಿಳುಪಾದ ದೇಹ ವುಳ್ಳ ವಿಲಾಸವತೀಮಹಾರಾಣಿಯ ತೊಡೆಯ ಮೇಲೆ ತನ್ನೊಂದು ದೇಹಪ್ರಭೆಯೆ ಇತರ ದೀಪಗಳ ಬೆಳಕನ್ನು ಮುಚ್ಚಿ ತಾನೇ ತಾನಾಗಿ ಬೆಳಗುತ್ತಿರಲಾಗಿ, ೧೦೪. ಉದಯ ಕಾಲದ ಕೆಂಬಣ್ಣದಿಂದ ಕೂಡಿಕೊಂಡಿರುವ ಸೂರ್ಯಮಂಡಳದಂತೆಯೂ, ಸಂಜೆಗೆಂಪಿನಿಂದ ಕೂಡಿಕೊಂಡಿರುವ ಚಂದ್ರಬಿಂಬದಂತೆಯೂ, ಅರಳಿರುವುದರಿಂದ ಕೆಂಪನ್ನು ಹೊಂದಿರುವ ಕೆಂದಾವರೆಯ ಗುಂಪಿನಂತೆಯೂ, ಚಿಗುರಿನ ಗೊಂಚಲುಗಳ ಕೆಂಪಿನಿಂದ ಕೂಡಿರುವ ಕಲ್ಪ ವೃಕ್ಷದಂತೆಯೂ ಆ ಶಿಶು ಬಹಳ ಸೊಗಸಾಗಿ ಶೋಭಿಸುತ್ತಿತ್ತು. ೧೦೫. ಕುಮಾರ ಸ್ವಾಮಿಯನ್ನು ಮೀರಿಸಿರುವ ಈ ಕುಮಾರನು "ಬ್ರಹ್ಮನು ಎಳೆಬಿಸಿಲು, ಹವಳದ ಬಳ್ಳಿಯ ಕುಡಿಚಿಗುರು ಮತ್ತು ಮಾಣಿಕ್ಯದ ಕಾಂತಿ, ಇವುಗಳನ್ನು ಕೂಡಿಸಿ ಸೃಷ್ಟಿಸಿದ್ದಾನೋ

ಸಹಜವಿಭೂಷಣದಂತಿರೆ
ಮಹನೀಯಾಕ್ಷುಣ್ಣಲಕ್ಷಣಂ ಮಿಸುಗೆ ಶುಭಾ
ವಹನೆನಿಸಿದನಂ ಕಂಡಂ
ಮಹಾತ್ಮನಂ ಸುತನನಕ್ಕಱಿಂದಾ ಮಹಿಪಂ ೧೦೩

ವ॥ ಅಂತು ಕಂಡು

ಅಡಿಗಡಿಗಾನಂದಾಶ್ರುಗ
ಳಿಡೆವಿಡದುಣ್ಮುತ್ತಿರಲ್ಕೆ ನಿಡು[ಗಣ್ಮಲರಿಂ]
ಪಿಡಿವಂದದೆ ಕುಡಿವಂದದೆ
ನುಡಿವಂದದೆ ಸುತನನಕ್ಕಱಿಂದೀಕ್ಷಿಸಿದಂ ೧೦೭

ವ॥ ಆಗಳ್ ಶುಕನಾಸಂ ಕುಮಾರನಂಗಪ್ರತ್ಯಂಗಂಗಳಂ ಪ್ರೀತಿವಿಸ್ತಾರಿತಲೋಚನನಾಗಿ ನೋಡಿ ನರೇಂದ್ರಂಗಿಂತೆಂದಂ

ದೇವ ಪೆಱತಾವುದವ್ಯ
ಕ್ತಾವಯವದೊಳಂ ಕುಮಾರನುನ್ನತಿಕೆಯನು
ದ್ಭಾವಿಸುತಿರ್ದಪ್ಪು[ದಂ ಪರಿ]
ಭಾವಿಸು ನೀಂ ಚಕ್ರವರ್ತಿಚಿಹ್ನೋತ್ಕರಮಂ ೧೦೮

ಪೆಱೆನೊಸಲೊಳ್ ಬಿಸತಂತುವ
ತೆಱದಿಂ [ಮಿಱುಗಿದಪುದೂರ್ಣೆ] ಭ್ರುವನಾಂತರಮಂ
ನೆಱೆ ಧವಳಿಸುತಿರ್ದಪುದೀ
ತುಱುಗೆಮೆಗಣ್ಬೆಳಗು ಪುಂಡರೀಕೇಕ್ಷಣನಾ ೧೦೯

ಎಂಬಂತೆ ಕಣ್ಗೊಳಿಸುತ್ತಿದ್ದನು. ೧೦೩. ಆ ಕುಮಾರನಲ್ಲಿ ಮಹಾಪುರುಷರಲ್ಲಿ ಕಂಡು ಬರುವ ಲಕ್ಷಣಗಳೆಲ್ಲ ನೈಜವಾದ ಅಲಂಕಾರದಂತೆ ಪ್ರಕಾಶಿಸುತ್ತಿದ್ದುವು. ಅಂತಹ ಮಂಗಳಕರನಾದ ಮಹಾತ್ಮನಂತಿರುವ ಮಗನನ್ನು ರಾಜನು ಬಹಳ ಅಕ್ಕರೆಯಿಂದ ನೋಡಿದನು. ವ॥ ಹಾಗೆ ನೋಡಿ ೧೦೭. ಪ್ರತಿಕ್ಷಣದಲ್ಲೂ ಆನಂದಬಾಷ್ಪವು ಒಂದೇಸಮನೆ ಉಕ್ಕುತ್ತಿರಲಾಗಿ ಮಹಾರಾಜನು ತನ್ನ ವಿಸ್ತಾರವಾದ ಅರಳಿದ ಕಣ್ಣುಗಳಿಂದ ತನ್ನ ಮಗನನ್ನು ಹಿಡಿದುಕೊಳ್ಳುವಂತೆಯೂ ಕುಡಿದುಬಿಡುವವನಂತೆಯೂ ಮಾತಾಡಿಸುವಂತೆಯೂ ಪ್ರೀತಿಯಿಂದ ನೋಡಿದನು. ವ॥ ಆಗ ಶುಕನಾಸನು ಕುಮಾರನ ಅಂಗೋಪಾಂಗಗಳನ್ನು ಪ್ರೀತಿಯಿಂದ ಅಗಲವಾದ ಕಣ್ಣುಳ್ಳವನಾಗಿ ನಿರೀಕ್ಷಿಸಿ ರಾಜನನ್ನು ಕುರಿತು ಹೀಗೆ ಹೇಳಿದನು. ೧೦೮. ಈಗತಾನೆ ಜನಿಸಿರುವುದರಿಂದ ಲಕ್ಷಣಗಳು ಚೆನ್ನಾಗಿ ತೋರದಿರುವ ಈ ಎಳೆ ಮೈಯಲ್ಲೂ ಕುಮಾರನ ಪೆಂಪನ್ನು ಪ್ರಕಾಶಪಡಿಸುವ ಚಕ್ರವರ್ತಿಲಕ್ಷಣಗಳ ಸಮೂಹವನ್ನು ತಾವು ಪರಾಂಬರಿಸಬೇಕು. ೧೦೯. ಬೆಳ್ದಾವರೆಯಂತೆ ಕಣ್ಣುಳ್ಳ ಈ ಕುಮಾರನ ಬಾಲಚಂದ್ರನಂತಿರುವ ಹಣೆಯಲ್ಲಿ ತಾವರೆದಂಟಿನ ಎಳೆಯಂತಿರುವ ಚಕ್ರವರ್ತಿಲಕ್ಷಣವನ್ನು ಸೂಚಿಸುವ ಹುಬ್ಬುಗಳ ನಡುವಿನ ಕೂದಲುಸುಳಿಯು ಚೆನ್ನಾಗಿ ಕಾಣುತ್ತಿದೆ.

ದರದಳಿತ ಕಮಲಕುಟ್ಮಳ
ಪರಿಮಳವೆನಿಸಿರ್ದ ಸಹಜಮುಖಸೌರಭಮಂ
ಬರೆ ಪೀರುತಿರ್ಪುದೆಂಬಂ
ತಿರೆ ನಾಸಿಕ ನೀಳ್ಪುವೆತ್ತುದೀ ಬಾಲಕನಾ ೧೧೦

ಅರುಣೋತ್ಪಲದಳಲೋಹಿತ
ಕರಂಗಳೊಳ್ ಶಂಖಚಕ್ರಚಿಹ್ನಂಗಳನಾಂ
ತಿರೆ ಮುರವೈರಿಯ ಕರದಂ
ತಿರೆ ಕರಮೆಸೆದಪುದು ಕರಯುಗಂ ಬಾಲಕನಾ ೧೧೧

ಕರಿ ತುರಗಾತಪತ್ರ ಶತಪತ್ರಪರಿಸ್ಫುಟರೇಖೆಗಳ್ ಮನೋ
ಹರತರಮಾಗೆ ಕಲ್ಪತರು ಕೋಮಲಪಲ್ಲವದಂತೆ ಮೆಲ್ಪಿನಿಂ
ಪೊರೆದ ನರೇಂದ್ರವೃಂದ ಮಣಿಮೌಳಿಕದಂಬಕಚುಂಬನೋಚಿತಂ
ಚರಣಯುಗಂ ಮನಂಗೊಳಿಸುತಿರ್ದಪುದಿಂತಿದೆನಲ್ ಕುಮಾರನಾ ೧೧೨

ನಂದನರುದಿತಂ ಹೃದಯಾ
ನಂದಮನೆನಗೊದವಿಸುತ್ತಮಿರ್ದಪುದಿಂತೀ
ದುಂದುಭಿಗಭೀರನಾದದಿ
ನೆಂದಿಂತಾ ಮಂತ್ರಿ ಪೇಳುತಿರೆ ತತ್‌ಕ್ಷಣದೊಳ್ ೧೧೩

ಅಲ್ಲದೆ ಒತ್ತುರೆಪ್ಪೆಗೂದಲುಳ್ಳ ಕಣ್ಣುಗಳ ಬೆಳಕು ಈ ಸೂತಿಕಾಗೃಹವನ್ನು ಬೆಳಗುತ್ತಿದೆ ೧೧೦. ಸ್ವಲ್ಪ ಅರಳಿರುವ ತಾವರೆಮೊಗ್ಗಿನ ಸುವಾಸನೆಯನ್ನು ಹೋಲುವ ಬಾಯಿಯ ಸಹಜವಾದ ಪರಿಮಳವನ್ನು ಚೆನ್ನಾಗಿ ಹೀರುತ್ತಿವೆಯೋ ಎಂಬುತೆ ಈ ಬಾಲಕನ ಮೂಗು ಉದ್ದವಾಗಿದೆ. ೧೧೧. ಕೆಂದಾವರೆಯ ಎಸಳುಗಳಂತೆ ಕೆಂಪಾದ ಈ ಎರಡು ಕೈಗಳು ಶಂಖ, ಚಕ್ರರೇಖೆಗಳನ್ನು ಹೊಂದಿರಲಾಗಿ ಶ್ರೀಮನ್ನಾರಾಯಣನ ಕೈಗಳಂತೆ ಶೋಭಿಸುತ್ತಿವೆ. ೧೧೨. ಈ ಶಿಶುವಿನ ಎರಡು ಕಾಲುಗಳಲ್ಲಿ ಆನೆ, ಕುದುರೆ, ಛತ್ರಿ, ಕಮಲರೇಖೆಗಳು ಬಹಳ ಮುದ್ದಾಗಿಯೂ ಸ್ಪಷ್ಟವಾಗಿಯೂ ಕಾಣುತ್ತಿವೆ. ಕಲ್ಪವೃಕ್ಷದ ಕೋಮಲವಾದ ಚಿಗುರಿನಂತೆ ಮೃದುವಾದ ಕಾಲಿಗೆರಗುವ ಅಸಂಖ್ಯಾತರಾಜರ ಕಿರೀಟಗಳ ತಗಲುವಿಕೆಗೆ ಪಾತ್ರವಾಗುವ ಈ ಚರಣಯುಗಳವು ಬಹಳ ಮನೋಹರವಾಗಿದೆ. ೧೧೩. ಈ ಮಗುವಿನ ದುಂದುಭಿಧ್ವನಿಯಂತೆ ಗಂಭೀರವಾದ ಅಳುವ ಶಬ್ದವು ನನ್ನ ಹೃದಯಕ್ಕೆ ಬಹಳ ಆನಂದವನ್ನುಂಟುಮಾಡುತ್ತದೆ ಎಂಬುದಾಗಿ ಆ ಮಂತ್ರಿಯು ಹೇಳುತ್ತಿರಲಾಗಿ,

ವ॥ ಅಂತಃಪುರದ್ವಾರದೇಶದೊಳಿರ್ದ ರಾಜಲೋಕಮೆಲ್ಲಮಂ ಸಂಭ್ರಮಂಬೆರಸು ತೊಲಗಲೊರ್ವ ಪುರುಷಂ ಪ್ರಹೃಷ್ಟವದನಃ ತ್ವರಿತಗತಿಯಿಂ ಬಂದು ಪೊಡಮಟ್ಟು ಬಿನ್ನಪಮಂ ದಿಂತೆಂದಂ

ದೈವವಿದಿರ್ಚಿಬಂದುದು ಜಗಜ್ಜಯಮಂ ತಳೆ ದೇವ ರೇಣುಕಾ
ದೇವಿಗೆ ರಾಮನುತ್ಸವದೆ ಪುಟ್ಟಿದವೋಲ್ ಶುಕನಾಸಮಂತ್ರಿ ಸಂ
ಭಾವಿತೆಯಪ್ಪ ಪಾರ್ವತಿ ಮನೋರಮೆಗತ್ತ ಭವತ್ಪ್ರಸಾದದಿಂ
ದೀವರಲಗ್ನದೊಳ್ ತನಯನತ್ಯಧಿಕೋತ್ಸವವಾಗೆ ಪುಟ್ಟಿದಂ ೧೧೪

ಅರಸಂ ಕಲ್ಯಾಣಪರಂ
ಪರೆ ಸಮನಿಸಿತೆಂದು ತೆಗೆದು ತಳ್ಕೈಸುತ್ತುಂ
ಸರಭಸಮೊಲವಿಂ ಸಚಿವೋ
ತ್ತರೀಯಮಂ ಪೂರ್ಣಪಾತ್ರಮೆನೆ ಕೊಂಡಂ ೧೧೫

ವ॥ ಅನಂತರಮೊಸಗೆವಾತಂ ಪೇಟ್ದವಂಗೆ ಮಚ್ಚುಗೊಟ್ಟಲ್ಲಿಂದೆಟ್ದು ಪೊಱಮಟ್ಟು ನೋಟ್ಪನ್ನೆಗಮಲ್ಲಿ ಕ್ವಣಿತಮಣಿನೂಪುರ ಸಹಸ್ರಮುಖರಿತ ದಿಗಂತಮುಂ ಅತಿರಭಸೋಪ ಚಲಿತ ಮಣಿವಲಯಾವಳೀವಿಳಸಿತ ಭುಜಲತಾಪ್ರತಾನಮುಮುತ್ತಾನ ಕರತಳನಳಿನಮುಂ ಮ್ರುದಿತ ಕರ್ಣಪೂರಪಲ್ಲವಮುಂ ಅನ್ಯೋನ್ಯಾಂಗದ ಸಂಘಟ್ಟನನಂದಪ್ಪಪಾಟಿತೋತ್ತರೀಯಮುಂ

ಆ ಕೂಡಲೆ ವ॥ ರಾಣೀವಾಸದ ಬಾಗಿಲಿನಲ್ಲಿ ನೆರೆದಿದ್ದ ರಾಜರ ಸಂದಣಿಯನ್ನು ಗಡಿಬಿಡಿಯಿಂದ ದಾರಿ ಬಿಡಿಸಿಕೊಳ್ಳುತ್ತಾ ಒಬ್ಬ ಮನುಷ್ಯನು ಅರಳಿದ ಮುಖವುಳ್ಳವನಾಗಿ ಬಹಳ ವೇಗದಿಂದ ಬಂದು ನಮಸ್ಕರಿಸಿ ಹೀಗೆ ಅರಿಕೆ ಮಾಡಿದನು. ೧೧೪. 'ಮಹಾಪ್ರಭುಗಳಿಗೆ ಅದೃಷ್ಟವು ಕೂಡಿಬಂದಿದೆ. ಜಗತ್ತಿನಲ್ಲಿ ಸರ್ವೋತ್ಕೃಷ್ಟರೆನಿಸಿ ಮೆರೆಯಿರಿ. ಪ್ರಭುವೆ, ರೇಣುಕಾದೇವಿಗೆ ಪರಶುರಾಮನು ಸಂಭ್ರಮದಿಂದ ಹುಟ್ಟಿದಂತೆ ಶುಕನಾಸಮಂತ್ರಿಗಳ ಧರ್ಮಪತ್ನಿಯವರಾದ ಮನೋರಮಾಮ್ಮನವರಿಗೆ ತಮ್ಮ ಅನುಗ್ರಹದಿಂದ ಈ ಶುಭಲಗ್ನದಲ್ಲಿ ಎಲ್ಲರಿಗೂ ಪರಮಾನಂದವಾಗುವಂತೆ ಗಂಡು ಮಗು ಹುಟ್ಟಿದೆ. ೧೧೫. ತಾರಾಪೀಡಮಹಾರಾಜನು ಈ ಮಾತುಗಳನ್ನು ಕೇಳಿ 'ಶುಭ ಪರಂಪರೆಯು ಬಂದೊದಗುತ್ತಾ ಇದೆ' ಎಂದು ಹೇಳುತ್ತಾ ತಟ್ಟನೆ ಪ್ರೀತಿಯಿಂದ ಮಂತ್ರಿಯನ್ನು ಗಾಢವಾಗಿ ತಬ್ಬಿಕೊಂಡು "ಇನಾಮು" ಎಂದು ಹೇಳುತ್ತಾ ಅವನ ಮೇಲುದವನ್ನು ಕಸಿದುಕೊಂಡನು. ವ॥ ಬಳಿಕ ಈ ಶುಭಸಮಾಚಾರವನ್ನು ಹೇಳಿದವನಿಗೆ ಬಳುವಳಿಯನ್ನು ಕೊಟ್ಟು ಅಲ್ಲಿಂದ ಎದ್ದು ಹೊರಟುಬಂದು ನೋಡುತ್ತಿರಲಾಗಿ ಅಂತಃಪುರದ ಲಲನೆಯರು ಆನಂದದಿಂದ ನಲಿದಾಡುತ್ತಿದ್ದರು. ಅವರ ರತ್ನಖಚಿತವಾದ ಅಸಂಖ್ಯಾತ ಕಾಲ್ಗಡಗಗಳ ಕಣಕಣಧ್ವನಿಯು ದಿಗಂತವನ್ನು ಶಬ್ದಮಯವಾಗಿ ಮಾಡುತ್ತಿತ್ತು. ಅವರ ಬಳ್ಳಿದೋಳುಗಳಲ್ಲಿ ರನ್ನಗಡಗಗಳು ಬಹಳ ವೇಗದಿಂದ ಚಲಿಸುತ್ತಿದ್ದುವು.

ನಿಜಾಂಗರಾಗರಂಜಿತವಸನಮುಂ ಕಿಂಚಿದವಶಿಷ್ಟ ಮಕರಿಕಾಪತ್ರಲೇಖಿಮುಂ ಆಲೋಲ ಹಾರಲತಾಸ್ಫಾಲಿತ ಕುಚಕುಂಭಸ್ಥಳಮುಂ ಸಿಂಧೂರತಿಲಕಾರುಣಿತ ಚಿಕುರನಿಕರಮುಂ ಪಿಷ್ಟಾತ ಪಾಂಸುಪುಂಜಪಿಂಜರಿತ ಕೇಶಪಾಶಮುಂ ಪ್ರನೃತ್ತ ಖಂಜ ಮೂಕ ಕುಬ್ಜ ವಾಮನ ಕಿರಾತಜನ ಪುರಸ್ಸರಮುಂ ಉತ್ತರೀಯಾಂಶುಕಾಕೃಷ್ಟ ಜರತ್ಕಂಚುಕನಿಕಾಯಮುಂ ವೀಣಾವೇಣುಮುರಜ ಕಾಂಸ್ಯತಾಳಲಯಾನುಗತಮೆನಿಸಿದಂತಃಪುರವಿಳಾಸಿನೀಜನಮುಂ ಪ್ರಚಲನ್ಮಣಿಕುಂಡಲಾಹತ ಗಂಡಮಂಡಲಮುಂ ಘೂರ್ಣಮಾನ ಕರ್ಣೋತ್ಪಲಮುಂ ಅಧೋವಿಗಳಿತವಿಲೋಲಶೇಖರಮುಂ ಡೋಲಾಯಮಾನ ವೈಕಕ್ಷಿಕುಸುಮಮಾಲಮುಂ ಭೇರೀ ಮೃದಂಗ ಮರ್ದಳ ಪಟಹ ಕಹಳಾ ಶಂಖರವಜನಿತ ರಭಸಮುಮೆನಿಸಿದ ರಾಜಪರಿವಾರಮುಂ ನೃತ್ಯಪ್ರವೃತ್ತ ಚಾರಣಗಣಮು ಮೊಸಗೆ ಮರುಳ್ಗೊಂಡು ಭೋರ್ಗರೆದು ನಲಿದು ನರ್ತಿಸುತ್ತುಮೊಡನೆ ಬರೆವರೆ

ಅವರು ತಾವರೆಯಂದದ ತಮ್ಮ ಅಂಗೈಗಳನ್ನು ಮೇಲಕ್ಕೆತ್ತುತ್ತಿದ್ದರು. ಕಿವಿಯಲ್ಲಿ ಮುಡಿದಿದ್ದ ಚಿಗುರುಗಳು ಹಿಸುಕಿಹೋಗಿದ್ದುವು. ತೋಳುಬಂದಿಗಳ ಪರಸ್ಪರ ತಿಕ್ಕಾಟ ದಲ್ಲಿ ಸಿಕ್ಕಿಕೊಂಡು ಮೇಲುದುಗಳು ಹರಿದುಹೋಗುತ್ತಿದ್ದುವು. ಅವರು ಲೇಪಿಸಿಕೊಂಡಿದ್ದ ಶ್ರೀಗಂಧವೇ ಮೊದಲಾದುವುಗಳು ಸೀರೆಗೆ ರಂಗಳಿಸಿಕೊಂಡಿದ್ದುವು. ಬರೆದುಕೊಂಡಿದ್ದ ಪತ್ರರಚನೆಯು ಬೆವರಿನಿಂದ ಅಳಿಸಿಹೋಗಿ ಸ್ವಲ್ಪ ಮಾತ್ರ ಉಳಿದುಕೊಂಡಿತ್ತು. ಅಳ್ಳಾಡುತ್ತಿರುವ ಹಾರವು ಸ್ತನಗಳಿಗೆ ಪದೇ ಪದೇ ಬಡಿಯುತ್ತಿತ್ತು. ಕುಂಕುಮದ ತಿಲಕವು ಕರಗಿ ಮುಂಗುರುಳುಗಳನ್ನೆಲ್ಲಾ ಕೆಂಪಗೆ ಮಾಡುತ್ತಿತ್ತು. ಬುಕ್ಕಿಹಿಟ್ಟಿನ ಪುಡಿ ಗಳ ಎರಚಾಟದಿಂದ ಅವರ ತಲೆಗೂದಲುಗಳು ಹೊಂಬಣ್ಣವಾಗಿದ್ದುವು. ಊಳಿಗದ ಕುಂಟ, ಮೂಗ, ಗೂನ, ಕುಳ್ಳರು ಕುಣಿಯುತ್ತಿದ್ದರು. ತಮಾಶೆಗಾಗಿ ಮುದಿ ಕಂಚು ಕಿಗಳನ್ನು ಮೇಲುದದಿಂದ ಕಟ್ಟಿ ಎಳೆದಾಡುತ್ತಿದ್ದರು. ವೀಣೆ, ಕೊಳಲು, ಮುರಜ, ಕಂಚಿನ ತಾಳಗಳ ಲಯಕ್ಕೆ ಅನುಸಾರವಾಗಿ ಅಂತಃಪುರದ ರಮಣಿಯರು ಕುಣಿಯು ತ್ತಿದ್ದರು. ಪರಿವಾರದ ಜನರು ನರ್ತಿಸುತ್ತಿರಲಾಗಿ ಅವರ ಮಣಿಕುಂಡಲಗಳು ಕೆನ್ನೆಗೆ ಪದೇ ಪದೇ ಬಡಿಯುತ್ತಿದ್ದುವು. ಕಿವಿಯಲ್ಲಿ ಮುಡಿದಿರುವ ತಾವರೆಯು ಜೋಲಾಡುತ್ತಿತ್ತು. ತಲೆಯಲ್ಲಿ ಮುಡಿದುಕೊಂಡಿರುವ ಹೂವಿನದಂಡೆ ಅಳ್ಳಾಡಿ ಕೆಳಗೆ ಬೀಳುತ್ತಿತ್ತು. ಅವರು ಉಪವೀತದಂತೆ ಹಾಕಿಕೊಂಡಿರುವ ಹೂವಿನ ಮಾಲೆಯು ತೂಗಾಡುತ್ತಿತ್ತು. ಭೇರಿ, ಮೃದಂಗ, ಮದ್ದಳೆ, ತಮ್ಮಟೆ, ಕಾಳೆ, ಶಂಖ ಧ್ವನಿಗಳ ರಭಸವು ಬಹಳ ಜೋರಾಗಿತ್ತು. ಹೀಗೆ ರಾಜಪರಿವಾರದ ಜನರು ಕುಣಿದಾಡು ತ್ತಿದ್ದರು. ಅರಮನೆಯ ಕಲಾವಿದರು ನೃತ್ಯವಾಡುತ್ತಿದ್ದರು. ಇವರೆಲ್ಲರೂ ಸಂತೋಷ ದಿಂದ ಪರವಶರಾಗಿ ಭೋರಾಡುತ್ತಾ ನಲಿದು ನರ್ತಿಸುತ್ತಾ ಜೊತೆಯಲ್ಲಿ ಬರುತ್ತಿರಲಾಗಿ

ವಿವಿಧವಿಲಾಸಮಂ ತಳೆದು ಮಂಗಳಕೇಳಿಯನಟ್ಟಿವಟ್ಟು ಮಾ
ನವಪತಿ ನೋಡುತಂ ಸಚಿವಮಂದಿರಮಂ ಪುಗುತಂದು ಸೂತಿಕಾ
ಭವನಮನೆಯ್ದಿ ಪೆರ್ಮೆಗನುರೂಪಮೆನಲ್ ನಿಜಮಂದಿರೋದ್ಗತೋ
ತ್ಸವಕಿದು ನಾಡೆಯುಂ ದ್ವಿಗುಣಮೆಂಬಿನಮುತ್ಸವಮಂ ನೆಗಟ್ಚಿದಂ ೧೧೬

ವ॥ ಅಂತು ನೆಗಟ್ಚಿ ದಶಮದಿನಪುಣ್ಯಸುಮುಹೂರ್ತದೊಳ್ ಸುವರ್ಣಕೋಟಿಗಳಂ ದ್ವಿಜೋತ್ತಮರ್ಗಿತ್ತು ತದನಂತರದೊಳ್

ಮೊದಲೊಳ್ ಬಂದಟ್ಕಟಿಂದೀತನ ಜನನಿಯ ವಕ್ತ್ರಾಬ್ಜದೊಳ್ ಚಂದ್ರಮಂ ಪೊ
ಕ್ಕುದನಲ್ತೆ ಕಂಡೆನಾಂ ಸ್ವಪ್ನದೊಳೆನುತೆ ಮನಂಗೊಂಡು ತತ್ಸ್ವಪ್ನಸಾದೃ
ಶ್ಯದೆ ಚಂದ್ರಾಪೀಡನೆಂಬೀ ಮೊದಲ ಪೆಸರನಿಟ್ಟಂ ತನೂಜಂಗೆ ಮೂಲೋ
ಕದೊಳಂ ಮಾಂಗಲ್ಯತೂರ್ಯಧ್ವನಿ ಪಸರಿಸಿ ಪರ್ವುತ್ತಿರಲ್ ಸಾರ್ವಭೌಮಂ ೧೧೭

ಮನುಮಾರ್ಗದೊಳೇಕಾದಶ
ದಿನದೊಳ್ ತನಯಂಗೆ ವಿಪ್ರಜನಸಮುಚಿತಮಾ
ಯ್ತನೆ ಸಚಿವಂ ವೈಶಂಪಾ
ಯನನೆಂಬೀ ಪೆಸರನಿಟ್ಟನಧಿಕೋತ್ಸವದಿಂ ೧೧೮

ವ॥ ಅನಂತರಮೇಟ್ಕಿಗೆವಡೆದ ಪಾಡಿವದ ಚಂದ್ರಮನಂತೆ ಚಂದ್ರಾಪೀಡಂ ಪ್ರತಿದಿನಂ ಪ್ರವೃದ್ಧಮಾನನಾಗೆ ಚೂಡಾಕರಣಾದಿ ಕ್ರಿಯಾಕಲಾಪಮುಮಂ ಮಾಡುತ್ತುಮಿರೆ ಶೈಶವಂ

೧೧೬. ಹೀಗೆ ಲೀಲೆಯನ್ನು ತಾಳಿದ ಮಂಗಳಕ್ರೀಡೆಯನ್ನು ಬಹಳ ಆಸಕ್ತಿಯಿಂದ ನೋಡುತ್ತಾ ಮಹಾರಾಜನು ಮಂತ್ರಿಯ ಮನೆಗೆ ಬಂದು ಹೆರಿಗೆಮನೆಗೆ ಹೋಗಿ ತನ್ನ ಹೆಮ್ಮೆಗೆ ಅನುಗುಣವಾಗಿದೆ ಎಂಬಂತೆ ತನ್ನ ಅರಮನೆಯಲ್ಲಿ ನಡೆದ ಉತ್ಸವಕ್ಕೆ ಇದು ಎರಡರಷ್ಟು ಎಂಬಂತೆ ಉತ್ಸವವನ್ನು ಮಾಡಿಸಿದನು. ವ॥ ಹಾಗೆ ಮಾಡಿಸಿ ಹತ್ತನೆಯ ದಿನ ಶುಭಮುಹೂರ್ತದಲ್ಲಿ ಬ್ರಾಹ್ಮಣೋತ್ತಮರಿಗೆ ಕೋಟಿಗಟ್ಟಲೆ ಚಿನ್ನವನ್ನು ದಾನ ಮಾಡಿ ಬಳಿಕ, ೧೧೭. ಹಿಂದೆ ತಾನು ಈ ಶಿಶುವಿನ ತಾಯಿಯ ಬಾಯೊಳಕ್ಕೆ ಚಂದ್ರನು ಆಸಕ್ತಿಯಿಂದ ಪ್ರವೇಶಮಾಡಿದ್ದನ್ನು ಕಂಡನಲ್ಲವೆ ? ಇದನ್ನು ಮನಸ್ಸಿನಲ್ಲಿಟ್ಟುಕೊಂಡು ಆ ಸ್ವಪ್ನದ ಸಾಮ್ಯದಿಂದ ಮಹಾರಾಜನು. ತನ್ನ ಮಗನಿಗೆ "ಚಂದ್ರಾಪೀಡ"ನೆಂದು ನಾಮಕರಣವನು. ಮಾಡಿದನು ಆಗ ಮಂಗಳಕರವಾದ ತುತ್ತೂರಿಯ ಧ್ವನಿಯು ಮೂರು ಲೋಕಗಳಲ್ಲೂ ಹರಡುತ್ತಿತ್ತು. ೧೧೮. ಶುಕನಾಸನು ಮನುಧರ್ಮಶಾಸ್ತ್ರದಂತೆ ಹನ್ನೊಂದ ನೆಯ ದಿವಸ ಬ್ರಾಹ್ಮಣಜಾತಿಗೆ ಉಚಿತವಾಗುವ ಹಾಗೆ ಬಹಳ ವಿಜೃಂಭಣೆಯಿಂದ ನಾಮಕರಣಮಹೋತ್ಸವವನ್ನು ನೆರವೇರಿಸಿ ವೈಶಂಪಾಯನನೆಂಬ ಹೆಸರನ್ನಿಟ್ಟನು. ವ॥ ಆಮೇಲೆ ಬೆಳೆಯುತ್ತಿರುವ ಶುಕ್ಲಪಕ್ಷದ ಪಾಡ್ಯದ ಚಂದ್ರನಂತೆ ಚಂದ್ರಾಪೀಡನು ದಿನೇ

ಪತ್ತುವಿಡುವುದುಂ ಕ್ರೀಡಾವ್ಯಸನಮಗಲ್ವಂತು ಬಹಿರ್ನಗರದೊಳಮರಮಂದಿರಾನುಕಾರಿಯಪ್ಪ ವಿದ್ಯಾನಿಕೇತನಮಂ ಮಾಡಿಸಿ ನಿಖಿಳವಿದ್ಯಾಚಾರ್ಯರುಮಂ ಮಹಾಪ್ರಯತ್ನದಿಂ ನಿಲಿಸಿ ಶುಭದಿನದೊಳ್ ಧವಳಮಂಗಳಪ್ರಸಾಧನಾಲಂಕೃತನುಮಾಚಾರ್ಯಕುಲಪರಿವೃತನುಮಪ್ಪ ನಿಜನಂದನನಂ ವೈಶಂಪಾಯನಂಬೆರಸು ವಿದ್ಯಾಧಿಗಮನದೊಳ್ ಸಮರ್ಪಿಸಿ ಪಂಜರಸ್ಥಿತ ಮದಕೇಸರಿಕಿಶೋರಕವಂತೆಗೆಯ್ದಖಿಳ ವಿದ್ಯಾಭ್ಯಾಸಂಗೆಯ್ಯುತ್ತಮಿರೆ

ಪೊಳೆದೆಸೆವ ರತ್ನದರ್ಪಣ
ದೊಳಗೆ ತಳತ್ತಳಿಪ ತರಣಿಕಿರಣಾವಳಿವೊಲ್
ತೊಳಗಿ ಬೆಳಗಿದುವು ವಿದ್ಯಾ
ವಳಿ ನಿಜ[ನಂದನನ] ವದನಮಣಿದರ್ಪಣದೊಳ್ ೧೧೯

ವ॥ ಅಂತು ಸಕಲಕಳಾಕಳಾಪಮನಪ್ಪುಗೆಯ್ದು ಶಸ್ತ್ರಶಾಸ್ತ್ರದೊಳತ್ಯಂತಪರಿಣತನಾಗುತ್ತುಮಿರೆಯಿರೆ

ವಿರಳ ಪರಿವಾರಪರಿವೃತ
ನರಸಂ ಮಾದೇವಿವೆರಸು ನಿಚ್ಚಂ ಬಂದಾ
ದರದಿಂದೆ ನೋಡಿ ಪೋಪಂ
ಗುರುಜನ ಪರಿವೃತನೆನಿಪ್ಪ ನಿಜನಂದನನಂ ೧೨೦

ದಿನೇ ಬೆಳೆಯುತ್ತಿರಲಾಗಿ ಮಹಾರಾಜನು ಚೌಲವೇ ಮೊದಲಾದ ಸಂಪ್ರದಾಯದ ವಿಧಿಗಳನ್ನು ನೆರವೇರಿಸಿದನು. ಪಸುಳೆತನವು ಕಳೆಯಿತು. ಹುಡುಗಾಟಿಕೆಗಳೆಲ್ಲಾ ನಿಂತು ಹೋದುವು. ಆಗ ಚಕ್ರವರ್ತಿಯು ಪಟ್ಟಣದ ಹೊರವಲಯದಲ್ಲಿ ಅರಮನೆಗೆ ಸಮಾನವಾದ ಒಂದು ಪಾಠಶಾಲೆಯನ್ನು ಕಟ್ಟಿಸಿದನು. ಅಲ್ಲಿ ಅನೇಕ ವಿದ್ಯೆಗಳಲ್ಲಿ ಪಾರಂಗತರಾದ ಉಪಾಧ್ಯಾಯರನ್ನು ಬಹಳ ಪ್ರಯತ್ನದಿಂದ ಆರಿಸಿ ಕರೆದುಕೊಂಡುಬಂದು ಅವರಿಗೆ ವಸತಿಯನ್ನು ಕಲ್ಪಿಸಿದನು. ಬಳಿಕ ಒಂದು ಶುಭದಿವಸದಲ್ಲಿ ಶುಭ್ರವಾದ ಹಾಗೂ ಮಂಗಳಕರವಾದ ಉಡಿಗೆ ತೊಡಿಗೆಗಳಿಂದ ಅಲಂಕೃತನಾದ ಮತ್ತು ಗುರುಗಳ ಸಮೂಹದಿಂದ ಕೂಡಿಕೊಂಡಿರುವ ತನ್ನ ಮಗನನ್ನು ವೈಶಂಪಾಯನನ ಜೊತೆಯಲ್ಲಿ ವಿದ್ಯಾಭ್ಯಾಸಕ್ಕೆ ಮೊದಲು ಮಾಡಿಸಿದನು. ಆಗ ರಾಜಕುಮಾರನನ್ನು ಪಂಜರದಲ್ಲಿರುವ ಕೊಬ್ಬಿದ ಸಿಂಹದಮರಿಯಂತೆ ಮಾಡಿ ಎಲ್ಲಾ ವಿದ್ಯೆಗಳನ್ನೂ ಕಲಿಸುತ್ತಿದ್ದನು. ೧೧೯. ಮಿರುಗುತ್ತಿರುವ ರನ್ನಗನ್ನಡಿಯಲ್ಲಿ ತಳತಳಿಸುವ ಸೂರ್ಯಕಿರಣಗಳಂತೆ ಆ ರಾಜಕುಮಾರನ ಬಾಯೆಂಬ ರನ್ನಗನ್ನಡಿಯಲ್ಲಿ ಎಲ್ಲಾ ವಿದ್ಯೆಗಳೂ ಪ್ರತಿಫಲಿಸಿ ಪ್ರಕಾಶಿಸಿದುವು. ವ॥ ಹೀಗೆ ಸಮಸ್ತ ಕಲೆಗಳನ್ನೂ ಕಲಿತು ಶಸ್ತ್ರವಿದ್ಯೆಯಲ್ಲಿಯೂ ಶಾಸ್ತ್ರವಿದ್ಯೆಯಲ್ಲಿಯೂ ಬಹಳಮಟ್ಟಿಗೆ ಪಾರಂಗತನಾಗುತ್ತಿರಲಾಗಿ, ೧೨೦. ಮಹಾರಾಜನು ಮಿತಪರಿವಾರಸಮೇತನಾಗಿ ಮಹಾರಾಣಿಯೊಂದಿಗೆ ಪ್ರತಿನಿತ್ಯವೂ ಭೇಟಿಕೊಡುತ್ತಾ ಉಪಾಧ್ಯಾಯವರ್ಗದಿಂದ ಕೂಡಿಕೊಂಡಿರುವ ತನ್ನ ಮಗನನ್ನು ನೋಡಿ

ಸಕಲಶ್ರಮಂಗಳಿಂದಂ
ವೃಕೋದರನ ತೆಜದಿನಂದು ಶೈಶವದೊಳ್ [ಲೋ
ಕಕೆ ಚಿತ್ರಮಪ್ಪಿನಂ] ರಾ
ಜಕುಮಾರಂ ತಾಳ್ದಿದಂ ಮಹಾಪ್ರಾಣತೆಯಂ ೧೨೧

ಲೀಲೆಯೊಳೆ ಪಿಡಿದು ನಿಲಿಪಂ
ವ್ಯಾಳೇಭಮನೊಂದುಪೊಯ್ಲಿನಿಂ[ದಮೆ ಕಡಿವಂ
ತಾಳಗಳ]ನುರ್ಚಿಸುವಂ
ಶೈಲಶಿಲಾತಳಮನೆಳವೆಯೊಳ್ ನೃಪತನಯಂ ೧೨೨

ಗುಣಮುಂ ರೂಪುಂ ವಿದ್ಯಾ
ಗುಣಮುಂ ತಳ್ತೊಪ್ಪಿದ್ದು ತನ್ನೊಳೆಸೆಯಲ್ ವಿಬುಧಾ
ಗ್ರಣಿಯೆನಿಪ ಕುಮಾರನೊಳಂ
ದೆಣೆಯಾದಂ ಸಚಿವತನಯನಾ ಕ್ರಮದಿಂದಂ ೧೨೩

ಶುಕನಾಸಾರ್ಯಗುರುತ್ವದಿಂದೆ ಸಹಪಾಂಸುಕ್ರೀಡನಾಭ್ಯಾಸದಿಂ
ದೆ ಕಳಾಜ್ಞಾನವಿಶೇಷದಿಂದುಚಿತಸೇವಾಜಾತ ಚಾತುರ್ಯದಿಂ
ದೆ ಕರಂ ಚಿತ್ತಮನಪ್ಪುಗೆಯ್ದಖಿಳ ವಿಸ್ರಂಭಕ್ಕಮಾವಾಸಮಾ
ಗಿ ಕುಮಾರಂಗೆ ಮಹಾಪ್ರಧಾನತನಯಂ ಮಿತ್ರತ್ವಮಂ ತಾಳ್ದಿದಂ ೧೨೪

ಕೊಂಡುಂ ಹೋಗುತ್ತಿದ್ದನು. ೧೨೧. ರಾಜಕುಮಾರನು ಎಳೆತನದಲ್ಲೇ ಬಗೆಬಗೆಯ ವ್ಯಾಯಾಮಗಳಿಂದ ಜನರೆಲ್ಲರೂ ಆಶ್ಚರ್ಯಪಡುವಂತೆ ಭೀಮಸೇನನಹಾಗೆ ಬಹಳ ಶಕ್ತಿಯನ್ನು ಪಡೆದನು. ೧೨೨. ರಾಜಪುತ್ರನು ಸಣ್ಣವಯಸ್ಸಿನಲ್ಲೇ ಕೊಬ್ಬಿದ ಆನೆಯನ್ನು ಅನಾಯಾಸವಾಗಿ ಹಿಡಿದು ನಿಲ್ಲಿಸಿಬಿಡುತ್ತಿದ್ದನು. ತಾಳೆಮರವನ್ನು ಒಂದೇ ಏಟಿನಿಂದಲೇ ತುಂಡರಿಸುತ್ತಿದ್ದನು. ಬೆಟ್ಟದ ಬಂಡೆಗಳನ್ನು ಎಳೆದುಹಾಕುತ್ತಿದ್ದನು. ೧೨೩. ಮಂತ್ರಿಪುತ್ರನಾದ ವೈಶಂಪಾಯನನಲ್ಲಿ ವಿನಯವೇ ಮೊದಲಾದ ಗುಣಗಳೂ. ರೂಪೂ, ವಿದ್ಯೆಯೂ ಕೂಡಿಕೊಂಡು ಪ್ರಕಾಶಿಸುತ್ತಿದ್ದುವು. ಆದ್ದರಿಂದ ಅವನು ಸರ್ವ ವಿದ್ಯಾಪಾರಂಗತನಾದ ಚಂದ್ರಾಪೀಡನಿಗೆ ಸಮಜೋಡಿಯಾಗಿದ್ದನು. ೧೨೪. ರಾಜಕುಮಾರನಾದ ಚಂದ್ರಾಪೀಡನಿಗೆ ಪ್ರಧಾನಮಂತ್ರಿಯ ಮಗನಾದ ವೈಶಂಪಾಯನನು ಶುಕನಾಸಮಂತ್ರಿಯ ಮೇಲಿರುವ ಪೂಜ್ಯಭಾವನೆಯಿಂದಲೂ, ಒಟ್ಟಾಗಿ ಧೂಳಿನಲ್ಲಿ ಆಡುತ್ತಿದ್ದ ಕಾಲದಿಂದಲೂ ಬಂದ ಒಡನಾಡಿತನದಿಂದಲೂ, ಕಲಾಪ್ರವೀಣತೆಯಿಂದಲೂ ಉಚಿತರೀತಿಯಲ್ಲಿ ಓಲೈಸುತ್ತಾ ಬರುವುದರೊಳಗಿದ್ದ ಜಾಣತನದಿಂದಲೂ ಮನಸ್ಸಿಗೆ ವಿಶೇಷವಾಗಿ ಅಚ್ಚುಮೆಚ್ಚಾಗಿದ್ದನು, ಎಲ್ಲಾ ಅಂತರಂಗವಿಷಯಕ್ಕೂ ನೆಲೆಯಾಗಿದ್ದನು. ಹೀಗೆ ಚಂದ್ರಾಪೀಡನಿಗೆ ವೈಶಂಪಾಯನನು

ದಿನಪತಿಯುಂ ದಿನಮುಂ ಬಿಡ
ದನುಬಂಧದಿನಗಲದಂತೆವೊಲ್ ಚಂದ್ರಾಪೀ
ಡನುಮಂತಾ ವೈಶಂಪಾ
ಯನನುಂ ಪದಪಿಂದವೊರ್ವರೊರ್ವರನಗಲರ್ ೧೨೫

ಕಮಲವನಕ್ಕಿನೋದಯಮಿರುಳ್ಗಮೃತಾಂಶುಸಮುದ್ಗಮಂ ಸುರ
ದ್ರುಮಕೆ ನವಪ್ರಸೂನವಿಭವಂ ನವಿಲಿಂಗೆ ಕಲಾಪವರ್ಣಮಂ
ತಮರ್ದ ಮುಗಿಲ್ಗೆ ಶಕ್ರಧನುವೋಲ್ ಭುವನತ್ರಯಮಂಗಳಾಭಿರಾ
ಮಮಿದೆನೆ ರಾಜಸೂನುಗೆಸೆದತ್ತೆನಿಸುಂ ನವಯವ್ವನೋದಯಂ ೧೨೬

ಅವಸರಮಿದೆನಗೆನುತ್ತಭಿ
ನವಸೇವಕನಂತೆ ಮೆಲ್ಲಮೆಲ್ಲನೆ ಮದನಂ
ನವಯೌವನವಿಶ್ರುತ ಪೂ
ರ್ಣವಿಳಾಸಮನಂದು ಪೊರ್ದಲುದ್ಯತನಾದಂ ೧೨೭

ಸಿರಿಯೊಡನೊಂದಿ ಬಿತ್ತರಿಸಿದತ್ತುಮುರಸ್ಥಳಮನ್ಯ ಭೂಮಿಪೋ
ತ್ಕರದೊಡನಾದವೊಂದಿ ತನುವಾದುದು ಮಧ್ಯಮುದಾರತಾ ನಿರಂ
ತರತೆಯೊಳೊಂದಿ ನೀಳ್ದುದು ಭುಜದ್ವಿತಯಂ ಭುವನಾವಭಾಸಿ ಸ
ಚ್ಚರಿತದೊಳೊಂದಿ ಚೆಲ್ವನೊಳಕೊಂಡವು ಕಣ್ಮಲರ್ಗಳ್ ಕುಮಾರನಾ ೧೨೮

ನಚ್ಚಿನ ಗೆಳೆಯನಾಗಿದ್ದನು. ೧೨೫. ಹಗಲಿಗೆ ಒಡೆಯನಾದ ಸೂರ್ಯನೂ ಹಗಲೂ ಪರಸ್ಪರ ಬಿಟ್ಟಿರದೆ ಒಟ್ಟಿಗಿರುವಂತೆ ಚಂದ್ರಾಪೀಡನೂ ವೈಶಂಪಾಯನನೂ ಪ್ರೀತಿಯಿಂದ ಒಬ್ಬರನ್ನೊಬ್ಬರು ಅಗಲದೆ ಇರುತ್ತಿದ್ದರು. ೧೨೬. ತಾವರೆಯ ಗುಂಪಿಗೆ ಸೂರ್ಯೋದಯವಾದಂತೆಯೂ, ಇರುಳಿಗೆ ಚಂದ್ರೋದಯವಾದಂತೆಯೂ, ಕಲ್ಪವೃಕ್ಷಕ್ಕೆ ಹೊಸ ಹೂವುಗಳ ಸಮೃದ್ಧಿಯುಂಟಾದಂತೆಯೂ, ನವಿಲಿಗೆ ಸೋಗೆಗಳು ಮೂಡುವಂತೆಯೂ, ಮೇಘಕ್ಕೆ ಕಾಮನಬಿಲ್ಲು ಮೂಡುವಂತೆಯೂ, ರಾಜಕುಮಾರನಿಗೆ ಮೂರು ಲೋಕಗಳಿಗೂ ಮಂಗಳಕರವಾದ ಸೊಬಗೆನಿಸಿದ ನವತಾರುಣ್ಯವು ರಾಜಕುಮಾರನಿಗೆ ಪ್ರಾರಂಭವಾಗಿ ಕಂಗೊಳಿಸುತ್ತಿತ್ತು. ೧೨೭. ಆಗ ಮನ್ಮಥನು ಹೊಸ ಸೇವಕನಂತೆ ಇದು ಓಲೈಸಲು ಸಕಾಲವೆಂದು ಮೆಲ್ಲಮೆಲ್ಲನೆ ಬಂದು ಕೂಡಿದನು. ಹಾಗೂ ಹೊಸಪ್ರಾಯದಲ್ಲಿ ಸರ್ವವಿದಿತವಾದ ತನ್ನ ಸಂಪೂರ್ಣ ಚಟುವಟಿಕೆಯನ್ನು ಪ್ರದರ್ಶಿಸಲು ಪ್ರಾರಂಭಿಸಿದನು. ೧೨೮. ಆಗ ಚಂದ್ರಾಪೀಡನ ಎದೆಯು ಶರೀರ ಕಾಂತಿಯೊಂದಿಗೆ ವಿಸ್ತಾರವಾಯಿತು. ಸೊಂಟವು ಶತ್ರುರಾಜರ ಜೊತೆಯಲ್ಲಿ ಕೃಶವಾಗಿ ಬಿಟ್ಟಿತು. ಎರಡು ತೋಳುಗಳು ಔದಾರ್ಯದ ಜೊತೆಯಲ್ಲೇ ನೀಳವಾದುವು. ಜಗತ್ತನ್ನು ಬೆಳಗುವ ಸಚ್ಚರಿತ್ರೆಯೊಂದಿಗೆ ಕಣ್ಣುಗಳೂ ಸೊಬಗನ್ನು ಪಡೆದವು. ಟಿ. ಸಹೋಕ್ತಿ ಎಂಬ ಅಲಂಕಾರ. ಶರೀರಕಾಂತಿಯೂ ಎದೆಯೂ ವಿಸ್ತಾರವಾಯಿತು

ತೊಳತೊಳತೊಳಗುವ ಷೋಡಶ
ಕಳೆಯಿಂ ಕಣ್ಗೊಳಿಪ ಚಂದ್ರನಂದದಿನತ್ಯು
ಜ್ವಳತನು ಷೋಡಶವರ್ಷಂ
ಗಳಿಂದೆ ಕಣ್ಗೆಸೆದನಂದು ಚಂದ್ರಾಪೀಡಂ ೧೨೫

## ಚಂದ್ರಾಪೀಡನ ಜನನ ಮತ್ತು ಬಾಲ್ಯ

ಸಮಾಪ್ತ

ಎಂಬುದು ವಿವಕ್ಷಿತಾರ್ಥ. ೧೨೫. ತಳತಳಿಸುತ್ತಿರುವ ಹದಿನಾರು ಕಲೆಗಳಿಂದ ಕಂಗೊಳಿಸುವ ಚಂದ್ರನಂತೆ ಉಜ್ವಳಿಸುವ ಶರೀರವುಳ್ಳ ಚಂದ್ರಾಪೀಡನು ಹದಿನಾರು ವರ್ಷಗಳು ತುಂಬಲು ಬಹಳ ಚೆನ್ನಾಗಿ ಕಂಗೊಳಿಸುತ್ತಿದ್ದನು.

## ಚಂದ್ರಾಪೀಡನ ಜನನ ಮತ್ತು ಬಾಲ್ಯ

ಮುಗಿಯಿತು.

# ೩. ಚಂದ್ರಾಪೀಡನ ಜೈತ್ರಯಾತ್ರೆ

ವ॥ ಅಂತುಪಾರೂಢ ನವಯೌವನೋದಯನುಂ ಪರಿಸಮಾಪ್ತ ಸಕಲಕಲಾವಿಜ್ಞಾನನುಮಾದ ನಿಜನಂದನನಪ್ಪ ಚಂದ್ರಾಪೀಡನಂ ತಾರಾಪೀಡನರೇಂದ್ರಂ ಬರಿಸಲೆಂದು ಬಲಾಧಿಕೃತನಪ್ಪ ಬಲಾಹಕನೆಂಬನಂ ಪೆಸಸೆ ಬಹುತುರಂಗ ಪದಾತಿಬಲಪರಿವೃತನಾಗಿ ಬಲಾಹಕಂ ಕುಮಾರನಿರ್ದ ವಿದ್ಯಾನಿಕೇತನಕ್ಕೆವಂದು ದೌವಾರಿಕನಿವೇದಿತಂ ಪೊಕ್ಕು ವಿಬುಧಚಿಂತಾಮಣಿಯಂ ಕಂಡವನಿತಳನಿಹಿತ ಚೂಡಾಮಣಿಯಾಗಿ ಪೊಡವಟ್ಟು ಸಮುಚಿತಾಸನದೊಳ್ ಕುಳ್ಳಿರ್ದು ವಿನಯಪುರಸ್ಸರನಿಂತೆಂದಂ

ಎನ್ನ ಮನೋರಥಕ್ಕೆ ಪರಿಪೂರ್ತಿಯನೆಯ್ದಿಸೆ ಶಸ್ತ್ರಶಾಸ್ತ್ರಸಂ
ಪನ್ನತೆಯಿಂ ವಿರಾಜಿಸಿ ನಿರೀಕ್ಷಿಸಲು[ತ್ಸುಕೆಯರ್ಕಳಾದಪ]ರ್
ತನ್ನಯ ತಾಯ್ವಿರೆಂದು ಜನಕಂ ಬೞಿಯಟ್ಟಿದನಟ್ಟಿೞಿಂ ಪುರ
ಕ್ಕೆನ್ನಡೆತಂದು ದೇವಪಡೆ ಪೌರಜನಂಗಳ ಕಣ್ಗೆ ಪರ್ವಮಂ ೧

ವ॥ ಹೀಗೆ ನವತಾರುಣ್ಯವನ್ನು ಪಡೆದಿರುವ, ಸಮಸ್ತ ಶಾಸ್ತ್ರಗಳಲ್ಲಿ ಪರಿಪೂರ್ಣವಾದ ಪಾಂಡಿತ್ಯವನ್ನು ಗಳಿಸಿರುವ ತನ್ನ ಮಗನಾದ ಚಂದ್ರಾಪೀಡನನ್ನು ತಾರಾಪೀಡಮಹಾರಾಜನು ಮನೆಗೆ ಕರೆಸಿಕೊಳ್ಳಬೇಕೆಂದು ನಿಶ್ಚಯಿಸಿದನು. ಅಂತೆಯೆ ತನ್ನ ಸೇನಾಪತಿಯಾದ ಬಲಾಹಕನಿಗೆ ಅಪ್ಪಣೆಮಾಡಿದನು. ಅವನು ಅನೇಕ ಕುದುರೆ ಮತ್ತು ಕಾಲಾಳುಗಳ ದಂಡಿನಿಂದ ಕೂಡಿಕೊಂಡವನಾಗಿ ರಾಜಕುಮಾರನಿದ್ದ ಪಾಠಶಾಲೆಗೆ ಬಂದು ತನ್ನ ಆಗಮನವನ್ನು ದ್ವಾರಪಾಲಕನಿಗೆ ತಿಳಿಸಿದನು. ದ್ವಾರಪಾಲಕನು ಒಳಗೆ ಹೋಗಿ ಅನುಮತಿ ಪಡೆದು ಸೇನಾಪತಿಯನ್ನು ಒಳಕ್ಕೆ ಕರೆದುಕೊಂಡು ಹೋದನು. ಅಲ್ಲಿ ಪಂಡಿತಪ್ರಕಾಂಡನೆನಿಸಿದ ರಾಜಕುಮಾರನನ್ನು ಕಂಡು ತನ್ನ ತಲೆಮಣಿಯು ಭೂಮಿಗೆ ತಾಕುವಂತೆ ದೀರ್ಘದಂಡನಮಸ್ಕಾರವನ್ನು ಮಾಡಿ ಉಚಿತವಾದ ಪೀಠದಲ್ಲಿ ಕುಳಿತುಕೊಂಡು ವಿನಯಪೂರ್ವಕವಾಗಿ ಹೀಗೆ ಅರಿಕೆಮಾಡಿದನು. ೧. "ರಾಜಕುಮಾರ, ನಿನ್ನ ತಂದೆಯವರು 'ಮಗು, ನೀನು ನನ್ನ ಮನಸ್ಸಿಗೆ ತೃಪ್ತಿಯಾಗುವಂತೆ ಆಯುಧವಿದ್ಯೆಯಲ್ಲೂ ಉಳಿದ ಎಲ್ಲಾ ಶಾಸ್ತ್ರಗಳಲ್ಲೂ ಪಾಂಡಿತ್ಯವನ್ನು ಗಳಿಸಿಕೊಂಡು ವಿರಾಜಮಾನನಾಗಿರುವೆ. ಇಂತಹ ನಿನ್ನನ್ನು ನೋಡಲು ನಿನ್ನ ತಾಯಂದಿರು ಬಹಳವಾಗಿ ಹಂಬಲಿಸುತ್ತಿದ್ದಾರೆ' ಎಂದು ಪ್ರೀತಿಯಿಂದ ಹೇಳಿ ಕಳುಹಿಸಿದ್ದಾರೆ. ಆದ್ದರಿಂದ ಇನ್ನು ಪಟ್ಟಣಕ್ಕೆ ಬಂದು ಪಟ್ಟಣೆ

ಅದೆ ಪೊಱಗಿಂದ್ರಾಯುಧಮೆಂ
ಬುದೊಂದು ದಿವ್ಯಾಶ್ವಮಟ್ಟಿದಂ ನಿನಗೇಱಿ
ಲ್ಕದನನಿಲಗರುಡಜವಮೆನಿ
ಸಿದುದಂ ತ್ರಿಜಗಕ್ಕೆ ರತ್ನಮಂ ನಿಜಜನಕಂ ೨

ಜಲನಿಧಿಜಲದಿಂ ಪೊಱಮ
ಟ್ಟಿಳೆಗವತರಿಸಿದುದಯೋನಿಸಂಭವವೀ ಮಂ
ಗಳಹಯಮೆಂದೋಲ್ಸೈಸಿದ
ನಿಳಾಧಿನಾಥಂಗೆ ಪಾರಶೀಕಾಧೀಶಂ ೩

ವ॥ ಅಲ್ಲದೆಯುಂ ಮೂರ್ಧಾಭಿಷಿಕ್ತ ಪಾರ್ಥಿವಕುಲಪ್ರಸೂತರುಂ ವಿನಯೋಪಪನ್ನರುಂ ಕೋವಿದರುಂ ಕುಲಕ್ರಮಾಗತರುಮಪ್ಪ ರಾಜಪುತ್ರಸಹಸ್ರಮುಮಂ ನಿನಗೆ ಪರಿವಾರಾರ್ಥ ಮಟ್ಟಿದನವರೆಲ್ಲರುಂ ಪೊಱಗೆ ತುರಗಾರೂಢರ್ ಪ್ರಣಾಮಲಾಲಸರಾಗಿ ಬಾಗಿಲೊಳ್ ಪಾರ್ದಿ ಪ್ಪರೆಂದು ಬಲಾಹಕಂ ಬಿನ್ನವಿಸುವುದುಂ ನೃಪರೂಪಚಂದ್ರಂ ತಂದೆಯಾಜ್ಞೆಯಂ ತಲೆಯೊಳ್ ತಾಳ್ದು ಪೊಱಮಡಲೆಂದಭಿನವಜಳಧರಧ್ವಾನಗಭೀರವಚನದಿನಿಂದ್ರಾಯುಧಮಂ ಪುಗಿಸೆಂದು ಬೆಸಸಿದಾಗಳ್

ಗರ ಕಣ್ಣಿಗೆ ಹಬ್ಬವನ್ನುಂಟುಮಾಡು. ೨. ಅದಲ್ಲದೆ ನಿನ್ನ ತಂದೆಯವರು ನಿನ್ನ ಸವಾರಿ ಗಾಗಿ ವಾಯುವಿನಂತೆಯೂ ಗರುಡನಂತೆಯೂ ವೇಗವುಳ್ಳ, ಮೂರು ಲೋಕದಲ್ಲೂ ಶ್ರೇಷ್ಠಪದಾರ್ಥವೆನಿಸಿಕೊಂಡಿರುವ ಇಂದ್ರಾಯುಧವೆಂದು ಹೆಸರುಳ್ಳ ಒಂದು ದಿವ್ಯಾಶ್ವ ವನ್ನು ಕಳುಹಿಸಿಕೊಟ್ಟಿದ್ದಾರೆ. ಅದು ಹೊರಗೆ ನಿಂತಿದೆ. ೩. ಆ ಕುದುರೆಯು ಸಮುದ್ರದ ನೀರಿನಿಂದ ಮೇಲಕ್ಕೆ ಬಂದು ಭೂಮಿಯಲ್ಲಿ ಅವತರಿಸಿದೆ. ಅದು ಅಯೋನಿಜ. ಇಂತಹ ಶುಭಲಕ್ಷಣಗಳಿಂದ ಕೂಡಿರುವ ಕುದುರೆಯನ್ನು ಪಾರಸೀಕರಾಜನು ನಮ್ಮ ಪ್ರಭುಗಳಿಗೆ ಕಾಣಿಕೆಯಾಗಿ ಒಪ್ಪಿಸಿದ್ದಾನೆ. ವ॥ ಅದಲ್ಲದೆ ಪಟ್ಟಾಭಿಷಿಕ್ತರಾದ ರಾಜ ವಂಶದಲ್ಲಿ ಹುಟ್ಟಿರುವ ವಿನಯವಂತರಾದ ಮತ್ತು ಪ್ರಾಜ್ಞರಾದ ನಮಗೆ ವಂಶಪರಂಪರೆ ಯಿಂದ ನಡೆದುಕೊಂಡುಬಂದಿರುವ ಸಾವಿರಾರು ಅರಸುಮಕ್ಕಳನ್ನು ನಿನಗೆ ಪರಿವಾರ ಕ್ಕೆಂದು ಮಹಾರಾಜರು ಕಳುಹಿಸಿದ್ದಾರೆ. ಅವರೆಲ್ಲರೂ ಹೊರಗಡೆ ಅಶ್ವಾರೂಢರಾಗಿ ನಿಮಗೆ ನಮಸ್ಕರಿಸಲು ಆಸೆಯುಳ್ಳವರಾಗಿ ಹೊರಬಾಗಿಲಲ್ಲಿ ನಿರೀಕ್ಷಿಸುತ್ತಿದ್ದಾರೆ" ಎಂದು ಬಲಾಹಕನು ಅರಿಕೆಮಾಡಲಾಗಿ ಆ ರಾಜನಾಗಿ ಅವತರಿಸಿರುವ ಚಂದ್ರನು ತಂದೆಯ ಅಪ್ಪಣೆಯನ್ನು ತಲೆಯಲ್ಲಿ ಧರಿಸಿ ಪ್ರಯಾಣಕ್ಕಾಗಿ ಹೊಸಮೋಡದಂತೆ ಗಂಭೀರವಾದ ಧ್ವನಿಯಿಂದ "ಇಂದ್ರಾಯುಧವನ್ನು ಕರೆತನ್ನಿ" ಎಂದು ಅಪ್ಪಣೆಮಾಡಿ

ಎರಡುಂ ಪಕ್ಕಂಗಳೊಳ್ ಕಾಂಚನಕಟಕ[ಖಲೀ]ನಾಗ್ರಸಂಲಗ್ನರೀರ್ವರ್
ಭರದಿಂದಂ ಕೀಟನೇಣಂ ತೆಗೆದುಬರೆ ಮಹೋದಗ್ರದೇಹಪ್ರಮಾಣಂ
ಬರೆ ಪೀರ್ವಂತೆತ್ತಮಾಕಾಶಮನನಿಲಜವೋದ್ರೇಕದಿಂ [ಪಾಱ ನೀಡುಂ
ಖುರಘಾತೋದ್ಧೂತಧಾತ್ರೀರಜಮತಿರುಚಿರಂ] ಬಂದುದಿಂದ್ರಾಯುಧಾಶ್ವಂ ೪

ಪಿರಿದೆನಿಪ ಭರದೆ ನಡೆಯಲ್
ಘುರುಘುರಿಸಲ್ ಘೋರಘೋಣವಿವರಂ ಕಿ[ಳಿರ
ಬ್ಬರದಿಂ] ತೀವಿದುದಾಶಾಂ
ತರಮಂ ಜವದಿಂದೆ ಗರುಡನಂ ತರ್ಜಿಪವೋಲ್ ೫

ಸುರಚಾಪದಂತೆ ಸುಮನೋ
ಹರವರ್ಣಂ ತನ್ನೊಳೊಪ್ಪುತ್ತಿರೆ ರನ್ನದ ಪ
ಕ್ಕರೆಯಿಂದಂ ಕಣ್ಗೊಳಿಸುವ
ಕರಿಕಳಭದ ತೆಱದಿನೆಸೆದುದಾ ದಿವ್ಯಾಶ್ವಂ ೬

ಜಲಧಿಯೊಳಿರ್ದಮರ್ದಿನ ಮು
ಕ್ಕುಳನುಗುಳುತ್ತಿಳೆಗೆವಂದುದೆನಿಸಿ ಖಲೀನ
ಸ್ಖಲನಭವ ಬಹುಳ ಲಾಲಾ
ಜಲಮುಗುತಿರೆ ತುರಗರತ್ನಮೆಸೆದತ್ತಾಗಳ್ ೭

ದನು. ೪. ಎರಡು ಕಡೆಗಳಲ್ಲೂ ಚಿನ್ನದ ಕಡಿವಾಣದ ಬಳೆಯ ತುದಿಯನ್ನು ಹಿಡಿದುಕೊಂಡಿರುವ ಇಬ್ಬರು ತಮ್ಮ ಬಲವನ್ನೆಲ್ಲಾ ಉಪಯೋಗಿಸಿ ಕಡಿವಾಣದ ಹಗ್ಗವನ್ನು ಜಗ್ಗಿಸಿ ಎಳೆದುಹಿಡಿದುಕೊಂಡಿರಲಾಗಿ ಬಹಳ ಎತ್ತರವಾದ ಆಕಾರವುಳ್ಳ, ಅಗಲವಾದ ಆಕಾಶವನ್ನು ಕುಡಿದುಬಿಡುವಂತೆ ಕಾಣುವ ಇಂದ್ರಾಯುಧವೆಂಬ ಕುದುರೆಯು ಗಾಳಿಗಿಂತ ಮಿಗಿಲಾದ ವೇಗದಿಂದ ನೆಗೆಯುತ್ತಾ ಗೊರಸಿನ ಹೊಡೆತದಿಂದ ಧೂಳನ್ನು ಎಬ್ಬಿಸುತ್ತಾ ಬಂದಿತು. ೫. ಆ ಕುದುರೆಯು ಬಹಳ ಹೆಚ್ಚಾದ ರಭಸದಿಂದ ಬರುತ್ತಿತ್ತು. ಅದರ ಕಠೋರವಾದ ಮೂಗಿನ ಹೊಳ್ಳೆಗಳಿಂದ ಘೀರ ಘುರಧ್ವನಿ ಹೊರಡುತ್ತಿತ್ತು. ಅದು ತನ್ನ ವೇಗದ ಹೆಚ್ಚಳದಿಂದ ಗರುಡನನ್ನೇ ಧಿಕ್ಕರಿಸುವಂತೆ ಅಬ್ಬರಿಸಿ ಕೆನೆಯುತ್ತಿರಲಾಗಿ ಆ ಧ್ವನಿಯು ಆಕಾಶವನ್ನೆಲ್ಲಾ ತುಂಬುತ್ತಿತ್ತು. ೬. ಕಾಮನಬಿಲ್ಲಿನಂತೆ ಮನೋಹರವಾದ ಬಣ್ಣದಿಂದ ರಮಣೀಯವಾದ ಆ ದಿವ್ಯಾಶ್ವವು ರತ್ನದ ಜೂಲಿನಿಂದ ಕಂಗೊಳಿಸುವ ಆನೆಯಮರಿಯಂತೆ ಶೋಭಿಸುತ್ತಿತ್ತು. ೭. ಬಾಯಿಯಲ್ಲಿರುವ ಕಡಿವಾಣದ ಚಲನದಿಂದ ಉಂಟಾದ ಜೊಲ್ಲುನೀರು ಬಹಳವಾಗಿ ಸೋರುತ್ತಿತ್ತು. ಇದರಿಂದ ಆ ಕುದುರೆಯು ತಾನು ಸಮುದ್ರದಲ್ಲಿದ್ದಾಗ ಕುಡಿದಿದ್ದ ಅಮೃತವನ್ನು ಉಗುಳುತ್ತಾ

ತೊಡರ್ದುವು ಸಮುದ್ರದಿಂ ಪೊಱ
ಮಡುವವಸರದಲ್ಲಿ ಮೌಕ್ತಿಕಪ್ರಕರಮೆನಲ್
ಕಡುಪಿಂದೆ ರೋಮರೋಮದೆ
ಬಿಡದೆಸೆದುವು ಪರಿಗೆ ಬೆಮರಬಿಂದುಗಳಾಗಳ್ ೮

ಮೊಗದಿಂದುಂ ನೇರ್ಪನಾಳ್ದಂತುರದಿನಗಲಿತಾದಂತೆ ಪಾರ್ಶ್ವಂಗಳಿಂ ನೂ
ಲ್ದೆಗೆದತ್ತೆಂಬಂತೆ ಪಾ[ಶ್ಚಾತ್ಯದೆ] ಸವಡಿಸಿತೆಂಬಂತಿರುದ್ಗ್ರೀವದಿಂ ಪ
ರ್ವುಗೆವೆತ್ತಂತಂಗಕಾಂತಿಪ್ರಕರದೆ ಪಸರಿಪ್ಪಂತೆ ಮುಂಗಾಲ್ಗಳಿಂದಂ
ಮುಗಿಲಂ ಮುಟ್ಟಿಪ್ಪುದೆಂಬಂತತಿಜವಮಿದಿರೊಳ್ ಬಂದುದಿಂದ್ರಾಯುಧಾಶ್ವಂ ೯

[ಪಿರಿದೆಂದಾಯಿಂದ್ರನುಚ್ಚೈಃಶ್ರವಮನೆ ನಡೆನೋಡುತ್ತಮಿರ್ಕೆಂದು ರತ್ನಾ
ಕರಮುಲ್ಲೋಲಂಗಳಿಂದಂ ಮಱೆಯಿಸಿ ಜನಪಂಗಿಂದ್ರಚಾಪಪ್ರಭಾಭಾ
ಸುರಮಂ ತ್ರೈಲೋಕ್ಯಸಾಮ್ರಾಜ್ಯದ ಫಳಮೆನಿಪೀ ವಾಜಿಯಂ ಕೊಟ್ಟನೆಂದಾ
ದರದಿಂದಂ ನೋಡಿದಂ ವಿಸ್ಮಯಮೊದವುವಿನಂ ಚಿತ್ತದೊಳ್ ರಾಜಪುತ್ರಂ ೧೦

ಭೂಮಿಗೆ ಬಂದಿದೆಯೋ ಎಂಬಂತೆ ಶೋಭಿಸುತ್ತಿತ್ತು. ೮. ಬಹಳ ಬಲಶಾಲಿ ಯಾದ ಆ ಕುದುರೆಗೆ ರಾವುತರು ತನ್ನ ವೇಗಕ್ಕೆ ಅಡ್ಡಿಪಡಿಸುತ್ತಿರುವುದರಿಂದ ರೋಷವುಂಟಾಗಿ ಮೈಬೆವರಿ ರೋಮ ರೋಮಗಳಲ್ಲೂ ಬೆವರುಹನಿಗಳು ಅಂಟಿಕೊಂಡಿದ್ದುವು. ಇದನ್ನು ನೋಡಿದರೆ ಅದು ಸಮುದ್ರದಿಂದ ಮೇಲಕ್ಕೆ ಏಳುವಾಗ ಅಲ್ಲಿದ್ದ ಮುತ್ತುಗಳು ಕೂದಲುಗಳಲ್ಲಿ ಸಿಕ್ಕಿಕೊಂಡಿರುವಂತೆ ಕಾಣುತ್ತಿತ್ತು. ೯. ಬ್ರಹ್ಮನು ತನ್ನನ್ನು ಸೃಷ್ಟಿಸುವಾಗ ಮುಖದಿಂದ ಅಂದವನ್ನು ಪಡೆದಂತೆಯೂ, ಎದೆ ಯಿಂದ ವಿಸ್ತಾರವಾದಂತೆಯೂ, ಪಕ್ಕಗಳಿಂದ ಸೂತ್ರವನ್ನು ಹಿಡಿದು ಸಮಮಾಡಿ ದಂತೆಯೂ ಹಿಂಭಾಗದಿಂದ (ರುಂಡಿ) ದ್ವಿಗುಣಿತವಾದಂತೆಯೂ, ಎತ್ತರವಾದ ಕತ್ತಿನಿಂದ ವಿಸ್ತೀರ್ಣತೆಯನ್ನು ಪಡೆದಂತೆಯೂ, ಶರೀರದ ಹೊಳಪಿನಿಂದ ಪ್ರಸಾರವನ್ನು ಪಡೆ ದಂತೆಯೂ, ಮುಂಗಾಲುಗಳಿಂದ ಮುಗಿಲನ್ನು ಮುಟ್ಟುತ್ತಿರುವಂತೆಯೂ ಇರುವ ಬಹಳ ವೇಗದಿಂದ ಕೂಡಿದ ನಡಗೆಯುಳ್ಳ ಇಂದ್ರಾಯುಧವು ಎದುರಿಗೆ ಬಂದಿತು. (ಇಂದ್ರಾ ಯುಧದ ಮುಖವು ಸುಂದರವಾಗಿಯೂ ಎದೆಯು ವಿಶಾಲವಾಗಿಯೂ ಪಕ್ಕಗಳು ಸಮ ನಾಗಿಯೂ ರುಂಡಿಯು ದಪ್ಪನಾಗಿಯೂ ಕತ್ತು ನೀಳವಾಗಿಯೂ ಶರೀರದ ಕಾಂತಿಯು ಉಜ್ವಲವಾಗಿಯೂ ಇತ್ತು. ಅದು ಮುಂಗಾಲುಗಳನ್ನು ಎತ್ತಿಕೊಂಡಿತ್ತು ಎಂಬುದು ಈ ವರ್ಣನೆಯ ತಾತ್ಪರ್ಯ) ೧೦. ರಾಜಪುತ್ರನು ಆ ಕುದುರೆಯನ್ನು ನೋಡಿದನು. ಅವನಿಗೆ ಬಹಳ ಆಶ್ಚರ್ಯವುಂಟಾಯಿತು. ಆಗ ತನ್ನ ಮನಸ್ಸಿನಲ್ಲಿ "ಇಂದ್ರನು ಈ ಕುದುರೆಗಿಂತ ಮೊದಲು ಹುಟ್ಟಿದ ಉಚ್ಚೈಃಶ್ರವಸ್ಸೆಂಬ ಕುದುರೆಯನ್ನೇ ಬಹಳ ದೊಡ್ಡ ದೆಂದು ತಿಳಿದುಕೊಂಡು ಅದನ್ನೇ ಚೆನ್ನಾಗಿ ನೋಡಿಕೊಂಡಿರಲಿ" ಎಂದು ಸಮುದ್ರರಾಜನು ಈ ಕಾಮನಬಿಲ್ಲಿನಂತೆ ಕಾಂತಿಯಿಂದ ಪ್ರಕಾಶಿಸುವ ಮತ್ತು ಮೂರುಲೋಕದ ಚಕ್ರಾಧಿ ಪತ್ಯಕ್ಕೆ ಮುಖ್ಯಫಲದಂತಿರುವ ಈ ಕುದುರೆಯನ್ನು ದೊಡ್ಡ ದೊಡ್ಡ ಅಲೆಗಳಿಂದ ಇಂದ್ರ

ಪರಿಹರಿಸಿದನಿಲ್ಲಿನ್ನುಂ
ಗರುಡನನೇಱುವುದನಜಿತನೆಂದಿಂದೆನಗ
ಚ್ಚರಿಯಾಗುತಿ[ರ್ಪುದಿಲ್ಲೀ
ಹರಿಯಂ ತಾನಱಿದನಾ]ಗದಿರ್ಕುಮೆ ಪಿರಿದುಂ ೧೧

ಭುವನತ್ರಯದುರ್ಲಭಮೆನಿ
ಸುವ ವಸ್ತುಗಳಿನ್ನುವೊಳವೆ ಭುವನದೊಳಿಂತ
ಕ್ಕುವೆ ದಿವಿಜರಾಜವಿಭವ
ಕ್ಕೆವಿದಗ್ಗಳಮೆನಿಸಿದತ್ತು ತಂದೆಯ ವಿಭವಂ ೧೨

ಇದಱ ಮಹಾಪ್ರಾಣತೆಗಿ
ನ್ನಿದಱಿಂದವಿದ ತೇಜದೇಟಕ್ಕೆಗಚ್ಚರಿಯಾಗಿ
ರ್ದುದು ದೇವತಾತ್ಮನೊ ಪೇ
ಟೞಿದು ದಿಟಮೇಱಲ್ಕೆ ಶಂಕೆ ಪುಟ್ಟಿದುದೀಗಳ್ ೧೩

ವ॥ ಮುನ್ನಂ ಸ್ಥೂಳಶಿರನೆಂಬ ತಾಪಸನಿತ್ತ ಶಾಪದಿನಖಿಳಲೋಕದೊಳ್ ರೂಪಿಂದಚ್ಚರಿಯಾದಚ್ಚರಿಯಪ್ಪ ರಂಭೆ ಸುರಲೋಕಮಂ ಬಿಟ್ಟು ಮೃತ್ತಿಕಾವತಿಯೆಂಬ ರಾಜಧಾನಿಯೊಳಿರ್ಪ ಶತಧನ್ವನೆಂಬರಸನ ಮನೆಯೊಳ್ ಗೋಳಿಗೆಯಾಗಿ ಪಲವುಕಾಲಮಿರ್ದಳದುಮಲ್ಲದೆಯುಂ

ನಿಗೆ ಕಾಣಿಸದಂತೆ ಮರೆಮಾಡಿ ಭೂಲೋಕದ ಚಕ್ರವರ್ತಿಯಾದ ನನ್ನ ತಂದೆಗೆ ಕಾಣಿಕೆಯಾಗಿ ಕೊಟ್ಟಿರಬೇಕು ! ಎಂದು ಆಲೋಚಿಸುತ್ತಾ ಬಹಳ ಆದರದಿಂದ ಅದನ್ನೇ ನೋಡುತ್ತಿದ್ದನು. ೧೧. "ಈ ಕುದುರೆ ಇರುವುದು ಶ್ರೀಮನ್ನಾರಾಯಣನಿಗೆ ಗೊತ್ತೇ ಇರಲಿಲ್ಲವೆಂದು ತೋರುತ್ತದೆ. ಇಲ್ಲದಿದ್ದರೆ ಆ ಗರುಡನ ಮೇಲೆ ಸವಾರಿ ಮಾಡುವುದನ್ನು ಬಿಡದೇ ಇರುತ್ತಿದ್ದನೆ ? ನನಗೇನೋ ಬಹಳ ಆಶ್ಚರ್ಯವಾಗುತ್ತಿದೆ ! ೧೨. ಮೂರುಲೋಕಗಳಲ್ಲೂ ದುರ್ಲಭವೆನಿಸಿರುವ ಇಂತಹ ವಸ್ತು ಜಗತ್ತಿನಲ್ಲಿ ಬೇರೆ ಇದೆಯೇ ? ಇಂತಿಂತಹ ಅಮೋಘ ಪದಾರ್ಥಗಳನ್ನು ಹೊಂದಿರುವ ತಂದೆಯವರ ಸಂಪತ್ತು ಸ್ವರ್ಗಾಧಿಪತಿಯ ಐಶ್ವರ್ಯಕ್ಕಿಂತಲೂ ಮಿಗಿಲಾದುದೆನಿಸಿಕೊಂಡಿದೆ. ೧೩. ಇದರ ಅತ್ಯಧಿಕವಾದ ಶಕ್ತಿಗೂ ಇದರ ಪ್ರಭಾವದ ಹಿರಿಮೆಗೂ ಬಹಳ ಆಶ್ಚರ್ಯವುಂಟಾಗುತ್ತದೆ. ಇದೊಂದು ದೇವತಾಕಾರವೇ ಇರಬಹುದೆ ? ನಿಜವಾಗಿಯೂ ಇದನ್ನು ಈಗ ಏರುವುದಕ್ಕೆ ಅಳುಕೇ ಉಂಟಾಗುತ್ತಿದೆ. ವ॥ ಹಿಂದೆ ಸ್ಥೂಲಶಿರನೆಂಬ ಮಹರ್ಷಿಯು ಕೊಟ್ಟ ಶಾಪದಿಂದ ಜಗತ್ತಿನಲ್ಲೆಲ್ಲಾ ಅದ್ಭುತವಾದ ರೂಪಸಂಪತ್ತುಳ್ಳ ರಂಭೆಯು ದೇವಲೋಕವನ್ನು ಬಿಟ್ಟು ಮೃತ್ತಿಕಾವತಿಯೆಂಬ ರಾಜಧಾನಿಯಲ್ಲಿರುವ ಶತಧನ್ವನೆಂಬ

ಪಲಬರ್ ಮಹಾತ್ಮರ್ ಮಹಾಮುನಿಜನಶಾಪದಿಂ[ಪರಿಹೃತಪ್ರಭಾವರಾಗಿ] ಪಲವು ಮಾಕೃತಿಗಳಂ ತಳೆದು ಮರ್ತ್ಯಲೋಕದೊಳ್ ಚರಿಯಿಸುತಿರ್ಪರೆಂಬುದುಮಂ ಕೇಳ್ದುದಿಲ್ಲಕ್ಕುಮೆ ಎನುತ್ತಮಾ ದಿವ್ಯಾಶ್ವಮನಚ್ಚರಿವಟ್ಟು ನೋಡುತ್ತಮಿರ್ದು

ಇದು ಸಾಮಾನ್ಯದ ವಾಜಿಯಲ್ತು ಪಿರಿದುಂ ನೋಡಲ್ ಮುನೀಂದ್ರೋಗ್ರಶಾ
ಪದಿನೊರ್ವಂ ದಿವಿಜಂ ನಿಜಾಕೃತಿಯುನಾದಂ ಬಿಟ್ಟು ದಿವ್ಯಾಶ್ವರೂ
ಪದನೀಲೋಕದೊಳಿರ್ದನೆಂದು ಬಗೆಯುತ್ತಲ್ಲಿಂದಮೆಟ್ಟಿಂದನಂ
ದುದಿತಾರ್ಕಪ್ರಭನೇಱಲೆಂದು ಹಯುನಂ ರಾಜಾಧಿರಾಜಾತ್ಮಜಂ ೧೪

ಕ್ಷಮೆಯಂ ಮಾ[ಡಶ್ವ ನೀನಾರ]ಱಿಯೆನದಱಿನಿಂತೀ ಮದಾರೋಹಣಾತಿ
ಕ್ರಮಕೆಂದಾಮಂತ್ರಣಂಗೆ[ಯ್ವುದುಮದು ಬಗೆಗೊಂಡಂತಿರಾ ಕೇಕರಾಲೋ]
ಕಮುಖಂ ನೋಡುತ್ತಮೇಱಲ್ ಕರೆವ ತೆಱದೆ ಹೇಷಾರವಂ ಪೊಣ್ಮೆ ಭೂಭಾ
ಗಮನತ್ಯುತ್ಸಾಹದಿಂ ದಕ್ಷಿಣಖುರದೆ ಬೆಱಂಟಿತ್ತು ದಿವ್ಯಾಶ್ವಮಾಗಳ್ ೧೫

ಘನಹೇಷಿತದಿಂ ದತ್ತಾ
ಭ್ಯನುಜ್ಞನಾದಂತೆ ಲಘುತೆಯಿಂದೇಱಿದನಾ
ಸನದೃಢತೆ ರೂಪುವಡೆದ
ತ್ತೆನಲಿಂದ್ರಾಯುಧಮನಂದು ಚಂದ್ರಾಪೀಡಂ ೧೬

ರಾಜನ ಅರಮನೆಯಲ್ಲಿ ಹೆಣ್ಣುಕುದುರೆಯಾಗಿ ಕೆಲವು ಕಾಲ ಇದ್ದಳು. ಅಲ್ಲದೆ ಅನೇಕ ಮಹಾಪುರುಷರು ಮಹರ್ಷಿಗಳ ಶಾಪದಿಂದ ತಮ್ಮ ಪ್ರಭಾವವನ್ನು ಕಳೆದುಕೊಂಡವರಾಗಿ ಬೇರೆ ಬೇರೆ ಆಕಾರವನ್ನು ತಾಳಿ ಭೂಲೋಕದಲ್ಲಿ ಸಂಚರಿಸುತ್ತಿದ್ದಾರೆ ಎಂಬುದನ್ನು ನಾವು ಕೇಳಿಲ್ಲವೆ ?" ಎನ್ನುತ್ತಾ ಆ ದಿವ್ಯಾಶ್ವವನ್ನು ನೋಡುತ್ತಾ ಇದ್ದು, ೧೪. 'ಇದು ನಾಡಾಡಿ ಕುದುರೆಯಂತೂ ಅಲ್ಲವೇ ಅಲ್ಲ. ಸರಿಯಾಗಿ ನೋಡಿದರೆ ಯಾವನೋ ಒಬ್ಬ ಮಹರ್ಷಿಯ ಕಠೋರವಾದ ಶಾಪದಿಂದ ಯಾವನೋ ಒಬ್ಬ ದೇವತಾಪುರುಷನು ತನ್ನ ನಿಜರೂಪವನ್ನು ಮರೆಸಿ ದಿವ್ಯಾಶ್ವದ ರೂಪವನ್ನು ತಾಳಿ ಈ ಲೋಕಕ್ಕೆ ಬಂದಿದ್ದಾನೆ' ಎಂದು ಆಲೋಚಿಸುತ್ತಾ ಆ ಚಕ್ರವರ್ತಿಕುಮಾರನು ಬಾಲಸೂರ್ಯನಂತೆ ತೇಜಸ್ಸುಳ್ಳ ಆ ಕುದುರೆಯನ್ನು ಏರಬೇಕೆಂದು ಬಂದನು. ೧೫. "ಎಲೈ ಕುದುರೆಯೆ. ನಿಜವಾಗಿ ನೀನು ಯಾರೆಂದು ನನಗೆ ತಿಳಿಯದು. ಈಗ ನಿನ್ನನ್ನು ಹತ್ತಲು ಬಂದಿದ್ದೇನೆ. ಈ ತಪ್ಪನ್ನು ಕ್ಷಮಿಸು" ಎಂದು ಕುದುರೆಯನ್ನು ಸಂಬೋಧಿಸಲಾಗಿ, ಅದು ಅರ್ಥಮಾಡಿಕೊಂಡಂತೆ ಓರೆಗಣ್ಣಿನಿಂದ ರಾಜಕುಮಾರನನ್ನು ನೋಡುತ್ತಾ, ಹತ್ತಲು ಕರೆಯುವಂತೆ ಕೆನೆಯುವ ದನಿಯನ್ನು ಹೊರಪಡಿಸುತ್ತಾ, ಬಹಳ ಹುರುಪಿನಿಂದ ಕೂಡಿ ಬಲಗಾಲಿನಿಂದ ಭೂಮಿಯನ್ನು ಕೆರೆಯಲಾರಂಭಿಸಿತು. ೧೬. ಆಗ ಚಂದ್ರಾಪೀಡನು ಇಂದ್ರಾಯುಧದ ಗಂಭೀರವಾದ ಕೆನೆಯುವ ಧ್ವನಿಯನ್ನು ಕೇಳಿ, ಅದು ಏರಲು ತನಗೆ ಅನುಮತಿ ಕೊಟ್ಟಿತೆಂದು ಭಾವಿಸಿದನು. ಬಳಿಕ ಕುಳಿತು

ವ॥ ಅಂತದನೇಱಿ ದಿವ್ಯವಾಜಿಯ ಮಹಾಜವಮಂ ಕಂಡು ಭುವನತ್ರಯಮಂ ಪ್ರಾದೇಶಮಾತ್ರಮಾಗಿ ಬಗೆದು ಪೊಱಮಡುವನ್ನೆಗವಲ್ಲಿ

ಮಿಸುಗುವ ರವಿಬಿಂಬಂಗಳ್
ಮಸೆದಲಗುಗಳಂ ಪಳಂಚಿ ಮಿಂಚುವ ಕಾಂತಿ
ಪ್ರಸರದೆ ನೀಲೋತ್ಪಲಕುಮು
ದಸಮೂಹಮನಿಟ್ಟಿಸಿ ಪೊಳೆದುವಂಬರತಳದೊಳ್ ೧೭

ಪಿರಿದೆನಿಪ ಲಯಸಮುದ್ರದ
ತೆರೆಗಳ್ ನೊರೆವೆರೆದು ನೆರೆದು ನೆಗೆದಪುವೆಂಬಂ
ತಿರೆ ಫೇನಪುಂಜಧವಳಿತ
ತುರಂಗಸಂದೋಹಸೈನ್ಯಮೆಸೆದತ್ತಾಗಳ್ ೧೮

ವ॥ ಅಂತು ಚಂದ್ರೋದಯಕ್ಷುಭಿತಸಾಗರದಂತೆ ಬಾಗಿಲೊಳ್ ಘೂರ್ಣಿಸುತಿರ್ದ ರಾಜಲೋಕಮಹಮಹಮಿಕೆಯಿಂ ಪ್ರಣಾಮಲಾಲಸರಾಗೆ ಬಲಾಧಿಕಾರಿಯಪ್ಪ ಬಲಾಹಕನವರವರ ಪೆಸರ್ಗೊಂಡು ಪೊಡಮಡಿಸೆ

ಕೊಳ್ಳಲು ಅನುಕೂಲವಾದ ಸ್ಥಿರವಾದ ಪೀಠವೇ ಈ ರೂಪವನ್ನು ತಾಳಿರುವುದೋ ಎಂಬಂತಿರುವ ಆ ಕುದುರೆಯನ್ನು ಚುರುಕಿನಿಂದ ಏರಿದನು. ವ॥ ಹೀಗೆ ಅದನ್ನು ಹತ್ತಿ ಆ ದಿವ್ಯವಾದ ಕುದುರೆಯ ಮಿಗಿಲಾದ ವೇಗವನ್ನು ಕಂಡು ಮೂರುಲೋಕವನ್ನೂ ಒಂದೇ ಗೇಣುದ್ದವೆಂದು ತಿಳಿದು ಹೊರಡುತ್ತಿರುವಲ್ಲಿ, ೧೭. ಕುದುರೆಯ ಸವಾರರು ಭರ್ಜಿ ಗಳನ್ನು ಎತ್ತಿಹಿಡಿದಿದ್ದರು. ಅವುಗಳ ಮಸೆದಿರುವ ಅಲಗುಗಳಲ್ಲಿ ಸೂರ್ಯಮಂಡ ಲವು ಸಂಕ್ರಾತವಾಗುತ್ತಿತ್ತು. ಇದರಿಂದ ಉಂಟಾದ ಮಿಂಚುವ ಹೊಳಪಿನಿಂದ ಅವು ಆಕಾಶದಲ್ಲಿ ಕನ್ನೈದಿಲೆ ಮತ್ತು ನೈದಿಲೆಗಳ ಸಮೂಹವನ್ನು ಕೀಳುಮಾಡಿ ಶೋಭಿಸುತ್ತಿ ದ್ದುವು. ಟಿ. ಸರೋವರದಲ್ಲಿ ಕನ್ನೈದಿಲೆ ಮತ್ತು ನೈದಿಲೆಗಳು ಶೋಭಿಸುವಂತೆ ಆಕಾಶದಲ್ಲಿ ಕುಂತಗಳು ಶೋಭಿಸುತ್ತಿದ್ದುವು. ೧೮. ಆ ಸೈನ್ಯದ ಬಾಯಿಂದ ಹೊರಡು ತ್ತಿರುವ ನೊರೆಗಳಿಂದ ಬೆಳ್ಳಗೆ ಕಾಣುತ್ತಿರುವ ಕುದುರೆಗಳ ಗುಂಪು ಪ್ರಳಯಕಾಲದಲ್ಲಿ ನೊರೆಗಳನ್ನು ಉಗುಳುತ್ತಾ ತುಂಬಿ ತುಳುಕಾಡಿ ನೆಗೆಯುತ್ತಿರುವ ಸಮುದ್ರದ ಅಲೆಗಳಂತೆ ಶೋಭಿಸುತ್ತಿತ್ತು. ವ॥ ಹೀಗೆ ಚಂದ್ರೋದಯದಿಂದ ಅಲ್ಲೋಲಕಲ್ಲೋಲವಾದ ಸಾಗರದಂತೆ ಬಾಗಿಲಲ್ಲಿ ಗದ್ದಲಮಾಡುತ್ತಿರುವ ರಾಜರುಗಳ ಗುಂಪು ನಾನು ಮುಂದು ತಾನು ಮುಂದು ಎಂದು ನಮಸ್ಕರಿಸಲು ಆಸಕ್ತಿಯನ್ನು ಹೊಂದಿರಲಾಗಿ ದಳವಾಯಿ ಯಾದ ಬಲಾಹಕನು ಅವರ ಪರಿಚಯ ಮಾಡಿಸಿ ನಮಸ್ಕಾರಮಾಡಿಸುತ್ತಿದ್ದನು,

ಎಱಗುವ ನರೇಂದ್ರನಿಕರದ
ಮಿಱುಗುವ ಮಣಿಮೌಳಿ[ಮಂಜುಳ]ಪ್ರಭೆ ತನ್ನೊಳ್
ತುಱುಗೆ ನೃಪನಂದನಂ ಕೆ
ನ್ನಱಿಮುಗಿಲೊಳ್ ಪೊಳೆವ ಚಂದ್ರಮಂಗೆಣೆಯಾದಂ ೧೯

ವ॥ ತದನಂತರಮಾ ನರೇಂದ್ರಚಂದ್ರಮಂ ಯಥಾಕ್ರಮದಿಂ ತುರಂಗಾರೂಢನಪ್ಪ ವೈಶಂಪಾಯನಂಬೆರಸು ಪುರಾಭಿಮುಖನಾಗಿ ಬಿಜಯಂಗೆಯ್ವಾಗಳ್

ಇದು ರಾಜದ್ರಾಜಲಕ್ಷ್ಮೀನಿವಸನವಿಲಸತ್ಪುಂಡರೀಕೋದಯಂ ಮೇ
ಣಿದು ನಾನಾಕ್ಷೋಣಿಪಾಲೇಕ್ಷಣಕುಮುದವಿಕಾಸೇಂದುಬಿಂಬೋದಯಂ ಮೇ
ಣಿದು ಭೂಭಾರಾರ್ಪಣಪ್ರೋದ್ಧತಫಣಿಪಫಣಾಮಂಡಲಾಭೋಗಮೆಂಬಂ
ದದೆ ರಾಜೇಂದ್ರಾತ್ಮಜಂಗೆತ್ತಿದುದು ಮಣಿಮಯಾದಭ್ರಶುಭ್ರಾತಪತ್ರಂ ೨೦

ಅಲರ್ದಿರ್ದ ಪುಂಡರೀಕದ
ಕೆಲದೊಳ್ ವರ್ತಿಸುವ ಹಂಸಯುಗಮೆನೆ ಭೂಭೃ
ತ್ತಿಲಕನ ಸಿತಾತಪತ್ರದ
ಕೆಲದೊಳ್ ನರ್ತಿಸಿತು ಧವಳಚಾಮರಯುಗಳಂ ೨೧

೧೯. ನಮಸ್ಕರಿಸುವ ರಾಜರ ಸಮೂಹದ ಹೊಳೆಯುವ ರತ್ನಕಿರೀಟದ ಹೊಳಪು ತನ್ನ ಮೇಲೆ ಆವರಿಸಲಾಗಿ ರಾಜಕುಮಾರನು ಕೆಂಬಣ್ಣದಿಂದ ಕೂಡಿರುವ ಮೇಘಗಳ ಮಧ್ಯದಲ್ಲಿ ಹೊಳೆಯುವ ಚಂದ್ರನಂತೆ ಕಾಣುತ್ತಿದ್ದನು. ವ॥ ಬಳಿಕ ಆ ಚಂದ್ರಾಪೀಡನು ತನ್ನಂತೆಯೆ ಕುದುರೆಯನ್ನು ಏರಿರುವ ವೈಶಂಪಾಯನನೊಂದಿಗೆ ರಾಜಧಾನಿಯ ಕಡೆಗೆ ಪ್ರಯಾಣಮಾಡುತ್ತಿರಲಾಗಿ, ೨೦. ಆ ಚಕ್ರವರ್ತಿಕುಮಾರನಿಗೆ ರತ್ನನಿರ್ಮಿತವಾದ ದಂಡದಿಂದ ಕೂಡಿರುವ ದೊಡ್ಡದಾದ ಬಿಳಿಯ ಕೊಡೆಯನ್ನು ಎತ್ತಿಹಿಡಿದಿದ್ದರು. ಅದು ಪ್ರಕಾಶಿಸುವ ರಾಜಲಕ್ಷ್ಮಿಯ ನಿತ್ಯವಾಸಕ್ಕೆ ಯೋಗ್ಯವಾದ ಬಿಳಿಯ ಕಮಲವು ಉದಯಿಸಿದಂತೆಯೂ, ಅನೇಕ ರಾಜರುಗಳ ಕಣ್ಣುಗಳೆಂಬ ಕನ್ನೈದಿಲೆಗಳನ್ನು ಅರಳಿಸುವ ಚಂದ್ರಬಿಂಬವು ಉದಯಿಸಿದಂತೆಯೂ, ಈ ರಾಜಕುಮಾರನಿಗೆ ಭೂಭಾರವನ್ನು ಒಪ್ಪಿಸಲು ಮೇಲಕ್ಕೆದ್ದು ಬಂದಿರುವ ಆದಿಶೇಷನ ವಿಸ್ತಾರವಾದ ಹೆಡೆಗಳ ವರ್ತುಲದಂತೆಯೂ ಶೋಭಿಸುತ್ತಿತ್ತು. ೨೧. ಅರಳಿರುವ ಬಿಳಿಯ ಕಮಲದ ಹತ್ತಿರ ಕುಣಿದಾಡುತ್ತಿರುವ ಅವಳಿಹಂಸಗಳೋ ಎಂಬಂತೆ ಚಂದ್ರಾಪೀಡನ ಬಿಳಿಯಕೊಡೆಯ ಹತ್ತಿರ ಎರಡು

ಚಮರೀಜಕಾಂತೆಯರ್ ಸಿತ
ಚಮರದ ವಿಕ್ಷೇಪದಿಂದಮೆಸೆದರ್ ಭೂಪೋ
ತ್ತಮನವರತನುವಿಂದಮಾತಿ
ಕ್ರಮಿಸುವ ಲಾವಣ್ಯರಸದೊಳೋಲಾಡುವವೋಲ್ ೨೨

ವ॥ ಅದಲ್ಲದೆಯುಂ ಪಲತೆಱದ ಪಱೆಗಳೆಡೆಯೊಳ್ ಬಾಜಿಸುವ ಪದಿರಪಱೆಗಳು ಮೊತ್ತುವ ಸನ್ನೆಗಾಳೆಗಳುಂ ಪೂರಿಸುವ ಶಂಖಂಗಳುಂ ಓದುವ ವಂದಿಮಾಗಧರ ಜಯಜಯಾದಿ ಮಧುರರವಂಗಳುಮೆಸೆಯೆ ರಾಜಧಾನಿಗಭಿಮುಖನಾಗಿ ಮನುಜೇಂದ್ರಚಂದ್ರನೆಟ್ಟಿಪಾರ್ಗಳ್

ಭುವನಜನಮೆಲ್ಲಮೊರ್ಮೆಯೆ
ಕವಿದುದೆನಲ್ ತಮ್ಮತಮ್ಮ ನಿಖಿಲವ್ಯಾಪಾ
ರವ[ನುಱಿದ]ರಸನ ನೋಡುವ
ತವಕದೆ ಮಿಗೆ ನಗರಲೋಕಮೆಯ್ದಿತ್ತಾಗಳ್ ೨೩

ಸುದತೀರತ್ನ ಕರೀಂದ್ರರತ್ನ ಹಯರತ್ನಾನೀಕರತ್ನಾದಿರ
ತ್ನದ ಮೇಳಾಪಕದಿಂದ ವೀಕ್ಷಣಸಮುತ್ಥಾನೇಕಸಂಮರ್ದ ಸಂ
ಮದಕೋಲಾಹಲದಿಂದಮಾ ನಗರಿ [ನಾನಾ] ಕ್ಷ್ಮಾಧರಕ್ಷೋಭಮು
ಣ್ಮದ ರತ್ನಾಕರಲಕ್ಷ್ಮಿವೋಲ್ ನೃಪವರಂ ಬರ್ಪಾಗಳೇನೊಪ್ಪಿತೋ ೨೪

ಚಾಮರಗಳು ನರ್ತಿಸುತ್ತಿದ್ದುವು. ೨೨. ಅವನ ಇಕ್ಕೆಲದಲ್ಲೂ ಚಾಮರವನ್ನು ಬೀಸುತ್ತಿದ್ದ ರಮಣಿಯರು ಅವನ ಸುಂದರವಾದ ಶರೀರದಿಂದ ಹೊರಹೊಮ್ಮುತ್ತಿರುವ ಸೌಂದರ್ಯವೆಂಬ ನೀರಿನಲ್ಲಿ ಈಜಾಡುವವರಂತೆ ಕಾಣುತ್ತಿದ್ದರು. ವ॥ ಅದಲ್ಲದೆ ಹಲವು ವಿಧವಾದ ತಮ್ಮಟೆಗಳ ಹತ್ತಿರವೇ ಬಾರಿಸಲ್ಪಡುತ್ತಿರುವ ಪದಿರಪರೆ[1]ಗಳೂ ಧ್ವನಿಗೈಯುವ ಸನ್ನೆಗಾಳೆಗಳೂ ಊದಲ್ಪಡುವ ಶಂಖಗಳೂ ಹಾಡುತ್ತಿರುವ ಹೊಗಳುಭಟ್ಟರ ಜಯಕಾರದ ಇಂಪಾದ ಧ್ವನಿಗಳೂ ಶೋಭಿಸುತ್ತಿರಲು ರಾಜಧಾನಿಯನ್ನು ಕುರಿತು ಚಂದ್ರಾಪೀಡನು ಬರುತ್ತಿರಲಾಗಿ, ೨೩. ಪ್ರಪಂಚದ ಜನರೆಲ್ಲ ಒಟ್ಟಿಗೆ ಸೇರಿಬಿಟ್ಟರೋ ಎಂಬಂತೆ ಆ ಪಟ್ಟಣದ ಜನರೆಲ್ಲರೂ ತಮ್ಮ ತಮ್ಮ ಕೆಲಸಗಳನ್ನೆಲ್ಲ ಬಿಟ್ಟು ರಾಜಕುಮಾರನನ್ನು ನೋಡಬೇಕೆಂಬ ತವಕದಿಂದ ಕೂಡಿದರು. ೨೪. ರಾಜಕುಮಾರನು ಬರುತ್ತಿರುವಾಗ ಸ್ತ್ರೀರತ್ನ, ಗಜರತ್ನ, ಅಶ್ವರತ್ನ, ಸೈನ್ಯರತ್ನ ಹೀಗೆ ಅನೇಕ ರತ್ನಗಳ ಒಂದೇ ಕಡೆ ಸೇರುವಿಕೆಯಿಂದಲೂ, ರಾಜಕುಮಾರನನ್ನು ನೋಡಬೇಕೆಂಬ ಕುತೂಹಲದಿಂದ ಉಂಟಾದ ನೂಕುನುಗ್ಗಲಿನ ಗದ್ದಲದಿಂದಲೂ ಕೂಡಿದ ಆ ರಾಜಧಾನಿಯು, ಮಂದರಪರ್ವತದಿಂದ ಕಡೆಯುವಾಗ ಬಗೆಬಗೆಯ ಕಲಕಾಟವು ಹೆಚ್ಚುತ್ತಿರುವ ಸಮುದ್ರದ ಚೆಲುವಿನಂತೆ ಶೋಭಿಸುತ್ತಿತ್ತು. ಟಿ. ರತ್ನ = ವಜ್ರ ಮುಂತಾದ ರತ್ನ ; ಶ್ರೇಷ್ಠವಸ್ತು. (ಸ್ತ್ರೀ

---

[1], ಒಂದು ಬಗೆಯ ವಾದ್ಯ

ಶರದಭ್ರಾಕಾರ ಸೌಧಪ್ರಕಟವಿಘಟಿತಾಭ್ಯರ್ಣ ನಾನಾ ಗವಾಕ್ಷೋ
ತ್ಕರದಿಂದಂ ನೋಡುವಂತುದ್ಗತ ವಿತತಪತಾಕಾಂಚಲಾನೀಕದಿಂದಂ
ಕರೆವಂತಾಬದ್ಧ ಶೋಣೋಪಲರುಚಿ ವಿಲಸತ್ತೋರಣಾನೀಕನಿರ್ಯ
ತ್ಕರದಿಂದಾಲಿಂಗಿಪಂತಾ ನಗರಿ ನೃಪವರಂಗೆಡ್ಡಮಾಗಿರ್ದುದಾಗಳ್ ೨೫

ವ॥ ಅಂತೆಸೆವ ನಗರೀರತ್ನರಚಿತೋತ್ತುಂಗ ಮಂಗಳತೋರಣಂಗಳಂ ನುಸುಳುತ್ತುಂ ಬರ್ಪ ರೂಪವಿದ್ಯಾಧರನಂ ನೋಡಲೆಂದು ನೆಲೆಮಾಡಂಗಳನೇಱಿದ ನೀಱೆಯರಲಕ್ತಕರಾಗ ರಂಜಿತ ಪದಪಲ್ಲವಂಗಳಿನವನಿತಳಮೆಲ್ಲಂ ಪಲ್ಲವಿಸಿದಂತೆಯುಂ ಆ ನಿತಂಬಿನಿಯರ ವದನೇಂದು ಬಿಂಬ ನಿಕುರುಂಬದಿನಂಬರತಳಂ ಚಂದ್ರಮಂಡಲಮಾದಂತೆಯುಂ ಆ ಲಾವಣ್ಯವತಿಯ ರಾತಪಕ್ಕೆತ್ತಿದ ಕೆಂದಳಂಗಳ ಸಂದಣಿಯಿಂ ದಿಕ್ಚಕ್ರಮೆಲ್ಲಂ ಕೆಂದಾವರೆಗೊಳನಲರ್ದಂತೆಯುಮಾ ರಮಣೀಯ ರಮಣಿಯರಾಭರಣಕಿರಣಕಳಾಪಂಗಳಿಂ ತರಣಿಕಿರಣಂಗಳೆಲ್ಲಮಿಂದ್ರಚಾಪಲತಾ ವಿತಾನದಂತೆಯುಮಾ ಕಾಮಿನಿಯರ ಕಮನೀಯಲೋಚನಮರೀಚಿಗಳಿಂದಂದಿನಂ ವಿಕಸಿತನೀಲ ನೀರಜಾಕರದಂತಿರೆಯುಮತಿಕೌತುಕದಿಂದೀಕ್ಷಿಸುವಲ್ಲಿ

ರತ್ನ= ಶ್ರೇಷ್ಠಸ್ತ್ರೀ). ೨೫. ಆ ಮಹಾ ನಗರಿಯು ಶರತ್ಕಾಲದ ಮೇಘದಂತೆ ಶುಭ್ರ ವಾದ ಮಹಡಿಮನೆಗಳಲ್ಲಿ ವಿಶಾಲವಾಗಿ ತೆರೆದಿರುವ ಅನೇಕ ಕಿಟಿಕಿಗಳಿಂದ ರಾಜ ಕುಮಾರನನ್ನು ನೋಡುವಂತೆಯೂ, ಎತ್ತಿಕಟ್ಟಿರುವ ಹಾಗೂ ಹರಡಿಕೊಂಡಿರುವ ಬಾವುಟಗಳ ಅಂಚಿನಿಂದ ಕರೆಯುವಂತೆಯೂ, ಕೆಂಪುಶಿಲೆಗಳಿಂದ ನಿರ್ಮಿತವಾದ ಹೆಬ್ಬಾಗಿಲುಗಳಿಂದ ಹೊರಡುವ ಕಾಂತಿಯಿಂದ ತಬ್ಬಿಕೊಳ್ಳುವಂತೆಯೂ ರಾಜ ಕುಮಾರನಿಗೆ ಮನೋಹರವಾಗಿ ಕಾಣಿಸಿತು. ಟಿ. ಇಲ್ಲಿ ನಗರಿಯು ರಮಣಿಯೆಂದೂ ಧ್ವಜಪಟ ಮತ್ತು ಕಿರಣಗಳು ಕೈಯೆಂದೂ ವ್ಯಂಗ್ಯವಾಗಿದೆ. ವ॥ ಹೀಗೆ ಶೋಭಿಸುತ್ತಿ ರುವ ಆ ದಿವ್ಯವಾದ ಪಟ್ಟಣದಲ್ಲಿ ಅಲ್ಲಲ್ಲಿ ಕಟ್ಟಿರುವ ಎತ್ತರವಾದ ಮಂಗಳತೋರಣ ಗಳನ್ನು ಹಾಯ್ದು ಬರುತ್ತಿರುವ ವಿದ್ಯಾಧರನಂತೆ ಪರಮಸುಂದರನಾದ ರಾಜಕುಮಾರ ನನ್ನು ನೋಡಬೇಕೆಂದು ಮಹಡಿಗಳನ್ನು ಹತ್ತಿರುವ ಮಹಿಳೆಯರ ಅರಗಿನ ಕಂಪಿನಿಂದ ರಂಜಿಸುವ ಹಾಗೂ ಚಿಗುರಿನಂತಿರುವ ಹೆಜ್ಜೆಗಳಿಂದ ಭೂಮಿಯೆಲ್ಲವೂ ಚಿಗುರಿದಂತೆಯೇ ಶೋಭಿಸುತ್ತಿತ್ತು. ಆ ಸುಂದರಿಯರ ಚಂದ್ರಮಂಡಲಕ್ಕೆ ಸದೃಶವಾದ ಮುಖಗಳಿಂದ ಆಕಾಶವೆಲ್ಲವೂ ಚಂದ್ರಮಂಡಲಮಯವಾಗಿ ಕಾಣುತ್ತಿತ್ತು. ಆ ಚೆಲುವೆಯರು ಬಿಸಿ ಲನ್ನು ತಪ್ಪಿಸಿಕೊಳ್ಳಲು ಮೇಲೆ ಎತ್ತಿಹಿಡಿದಿರುವ ಕೆಂಬಣ್ಣದ ಕರತಲಗಳಿಂದ ದಿಕ್ಕು ಗಳೆಲ್ಲವೂ ಅರಳಿದ ತಾವರೆಗಳುಳ್ಳ ತಾವರೆಗೊಳದಂತೆಯೂ ಕಾಣುತ್ತಿತ್ತು. ಆ ಸುಂದರಿಯರಾದ ಹೆಂಗಳ ಆಭರಣಗಳ ಕಾಂತಿಪುಂಜದಿಂದ ಸೂರ್ಯಕಿರಣಗಳೆಲ್ಲ ಕಾಮನಬಿಲ್ಲೆಂಬ ಬಳ್ಳಿಯ ರಾಶಿಯಂತೆಯೂ, ಆ ಕಾಮಿನಿಯರ ಸುಂದರವಾದ ಕಣ್ಣು ಗಳ ಹೊಳಪಿನಿಂದ ಹಗಲೆಲ್ಲ ಅರಳಿದ ಕನ್ನೈದಿಲೆಗಳುಳ್ಳ ಸರೋವರದಂತೆಯೂ

ನೆಲೆವೊಲೆಯಿಂದಂ ಮೇಲುದು
ತೊಲಗಲ್ ಹಾರಾಂಶುವಂ ನಿಜಾಂಶುಕವೆಂದಂ
ದಲಘುಕುಚೆ ಮೇಲ್ಕೊಳುತ್ತಾ
ಕುಲತೆಯಿನೆಯ್ತಂದು ನೋಡಿದಳ್ ನೃಪವರನಂ ೨೬

ವ॥ ಮತ್ತಮುಪರಿಸಮಾಪ್ತಪ್ರಸಾದನೆಯರಾಗಿ ಬಂದು ನೋಡುವಲ್ಲಿ ಮತ್ತಮೊರ್ವಳ್

ಉಡೆ ಜೋಲಲ್ ನೂಲ್ ಸಡಿಲಲ್
ಮುಡಿ ಪರೆಯಲ್ ಹಾರಲತೆಯನಕ್ಷಾವಳಿಯಂ
ಪಿಡಿದಂತೆ ಪಿಡಿದು ತುರಿಪದೆ
ನಡೆತಂದಳ್ ಕಾಮಯೋಗಿನೀವಿಭ್ರಮದಿಂ ೨೭

ಪಿರಿದುಮೆರ್ದೆ ಡವಕೆ ವಾಜಿಸು
ತಿರೆ ಭಂಗಂಬೆತ್ತು ಹಾರಲತೆ ಘನಕುಚದೊಳ್
ಕರವಿಕ್ಷೇಪದೆ ನರ್ತಿಸೆ
ನರೇಂದ್ರನಂದನನನೊಲ್ದು ನೋಡಿದಳೊರ್ವಳ್ ೨೮

ಮಂದಾನಿಲ ರಗಳೆ॥ ಇನಿತಂ ಪಾಟಿಸ್ನಂ ತ್ವರಿತಗತಿಕೆ
ಪಿಡಿ ಮೇಲುದನೀಗಳ್ ಲಲಿತಲತಿಕೆ

ಸೋರ್ಮುಡಿಯಂ ಸಾವಗಿಸಕ್ಕ ನಿನ್ನ
ಜೋಲ್ದುಡೆಯಂ ನೋಡೆಲೆ ಮರುಳೆ ಮುನ್ನ

ಕಾಣುತ್ತಿತ್ತು. ಹೀಗೆ ಬಹಳ ಕುತೂಹಲದಿಂದ ನೋಡುತ್ತಿರಲಾಗಿ, ೨೬. ಅವರಲ್ಲಿ ತೋರವೊಲೆಯ ಒಬ್ಬಳು ತನ್ನ ಗಡುಸು ಮೊಲೆಗಳಿಂದ ಹೊದ್ದುಕೊಂಡಿದ್ದ ಬಟ್ಟೆಯು ಜಾರಿಹೋದರೂ ಮುತ್ತಿನಸರದ ಕಾಂತಿಯನ್ನೇ ನಿಜವಾದ ಬಟ್ಟೆಯೆಂದು ಭ್ರಮಿಸಿ, ಅದನ್ನೇ ಮೇಲಕ್ಕೆ ಎಳೆದುಕೊಳ್ಳುತ್ತಾ ಬಹಳ ಗಡಿಬಿಡಿಯಿಂದ ಓಡಿಬಂದು ರಾಜಪುತ್ರನನ್ನು ನೋಡಿದಳು. ವ॥ ಆರಂಭಮಾಡಿದ್ದ ಅಲಂಕಾರಗಳನ್ನು ಪೂರ್ತಿಯಾಗಿ ಮಾಡಿಕೊಳ್ಳದೆ ಬಂದು ನೋಡುತ್ತಿರಲಾಗಿ, ೨೭. ಸೀರೆಯು ಜೋಲುತ್ತಿತ್ತು. ಡಾಬು ಸಡಿಲವಾಯಿತು. ತಲೆಗೂದಲು ಚೆದುರಿಹೋಗಿತ್ತು. ಹಾರವನ್ನೇ ಜಪಸರದಂತೆ ಕೈಯಲ್ಲಿ ಹಿಡಿದುಕೊಂಡಿದ್ದಾಳೆ. ಹೀಗೆ ಕಾಂತನ ವಿರಹದಿಂದ ಯೋಗಿನಿಯಾದಂತೆ ಕಾಣುತ್ತಾ ಮತ್ತೊಬ್ಬಳು ಬಹಳ ಆತುರದಿಂದ ಬಂದಳು. ೨೮. ಮತ್ತೊಬ್ಬಳು ಓಡಿಬಂದ ಆಯಾಸದಿಂದ ಎದೆ ಡವಕೆಯಂತೆ ಬಡಿದುಕೊಳ್ಳುತ್ತಿರಲು, ಬಳ್ಳಿಯಂತಿರುವ ಹಾರವು ಕೈಗಳ ತೂಗಾಟದಿಂದ ತೋರವೊಲೆಗಳಲ್ಲಿ ಕುಣಿಯುತ್ತಿರಲು ರಾಜಪುತ್ರನನ್ನು ನೋಡಲು ಬಹಳ ಆಸೆಯಿಂದ ಬಂದು ನೋಡಿದಳು. ೨೯. "ಏನೇ ಎಷ್ಟು ಜೋರಾಗಿ ಓಡಿಹೋಗುತ್ತಿದ್ದೀಯೆ? ನಾನೂ ಬರುತ್ತೇನೆ. ಸ್ವಲ್ಪ ನಿಂತುಕೊಳ್ಳೆ. ಲೇ ಲಲಿತಲತಿಕೆ,

ಶರದಭ್ರಾಕಾರ ಸೌಧಪ್ರಕಟವಿಘಟಿತಾಭ್ಯರ್ಣ ನಾನಾ ಗವಾಕ್ಷೋ
ತ್ಕರದಿಂದಂ ನೋಡುವಂತುದ್ಗತ ವಿತತಪತಾಕಾಂಚಲಾನೀಕದಿಂದಂ
ಕರೆವಂತಾಬದ್ಧಶೋಣೋಪಲರುಚಿ ವಿಲಸತ್ತೋರಣಾನೀಕನಿರ್ಯ
ತ್ಕರದಿಂದಾಲಿಂಗಿಪಂತಾ ನಗರಿ ನೃಪವರಂಗೆಡ್ಡಮಾಗಿರ್ದುದಾಗಳ್ ೨೫

ವ॥ ಅಂತೆಸೆವ ನಗರೀರತ್ನರಚಿತೋತ್ತುಂಗ ಮಂಗಳತೋರಣಂಗಳಂ ನುಸುಳುತ್ತುಂ ಬರ್ಪ ರೂಪವಿದ್ಯಾಧರನಂ ನೋಡಲೆಂದು ನೆಲೆಮಾಡಂಗಳನೇಱಿದ ನೀಱೆಯರಲಕ್ತಕರಾಗ ರಂಜಿತ ಪದಪಲ್ಲವಂಗಳಿನವನಿತಳಮೆಲ್ಲಂ ಪಲ್ಲವಿಸಿದಂತೆಯುಂ ಆ ನಿತಂಬಿನಿಯರ ವದನೇಂದು ಬಿಂಬ ನಿಕುರುಂಬದಿನಂಬರತಳಂ ಚಂದ್ರಮಂಡಲಮಾದಂತೆಯುಂ ಆ ಲಾವಣ್ಯವತಿಯ ರಾತಪಕ್ಕೆತ್ತಿದ ಕೆಂದಳಂಗಳ ಸಂದಣಿಯಿಂ ದಿಕ್ಚಕ್ರಮೆಲ್ಲಂ ಕೆಂದಾವರೆಗೊಳನಲರ್ದಂತೆಯುಮಾ ರಮಣೀಯ ರಮಣಿಯರಾಭರಣಕಿರಣಕಳಾಪಂಗಳಿಂ ತರಣಿಕಿರಣಂಗಳೆಲ್ಲಮಿಂದ್ರಚಾಪಲತಾ ವಿತಾನದಂತೆಯುಮಾ ಕಾಮಿನಿಯರ ಕಮನೀಯಲೋಚನಮರೀಚಿಗಳಿಂದಂದಿನಂ ವಿಕಸಿತನೀಲ ನೀರಜಾಕರದಂತಿರೆಯುಮತಿಕೌತುಕದಿಂದೀಕ್ಷಿಸುವಲ್ಲಿ

ರತ್ನ= ಶ್ರೇಷ್ಠಸ್ತ್ರೀ). ೨೫. ಆ ಮಹಾ ನಗರಿಯು ಶರತ್ಕಾಲದ ಮೇಘದಂತೆ ಶುಭ್ರವಾದ ಮಹಡಿಮನೆಗಳಲ್ಲಿ ವಿಶಾಲವಾಗಿ ತೆರೆದಿರುವ ಅನೇಕ ಕಿಟಕಿಗಳಿಂದ ರಾಜಕುಮಾರನನ್ನು ನೋಡುವಂತೆಯೂ, ಎತ್ತಿಕಟ್ಟಿರುವ ಹಾಗೂ ಹರಡಿಕೊಂಡಿರುವ ಬಾವುಟಗಳ ಅಂಚಿನಿಂದ ಕರೆಯುವಂತೆಯೂ, ಕೆಂಪುಶಿಲೆಗಳಿಂದ ನಿರ್ಮಿತವಾದ ಹೆಬ್ಬಾಗಿಲುಗಳಿಂದ ಹೊರಡುವ ಕಾಂತಿಯಿಂದ ತಬ್ಬಿಕೊಳ್ಳುವಂತೆಯೂ ರಾಜಕುಮಾರನಿಗೆ ಮನೋಹರವಾಗಿ ಕಾಣಿಸಿತು. ಟಿ. ಇಲ್ಲಿ ನಗರಿಯು ರಮಣಿಯೆಂದೂ ಧ್ವಜಪಟ ಮತ್ತು ಕಿರಣಗಳು ಕೈಯೆಂದೂ ವ್ಯಂಗ್ಯವಾಗಿದೆ. ವ॥ ಹೀಗೆ ಶೋಭಿಸುತ್ತಿರುವ ಆ ದಿವ್ಯವಾದ ಪಟ್ಟಣದಲ್ಲಿ ಅಲ್ಲಲ್ಲಿ ಕಟ್ಟಿರುವ ಎತ್ತರವಾದ ಮಂಗಳತೋರಣಗಳನ್ನು ಹಾಯ್ದು ಬರುತ್ತಿರುವ ವಿದ್ಯಾಧರನಂತೆ ಪರಮಸುಂದರನಾದ ರಾಜಕುಮಾರನನ್ನು ನೋಡಬೇಕೆಂದು ಮಹಡಿಗಳನ್ನು ಹತ್ತಿರುವ ಮಹಿಳೆಯರ ಅರಗಿನ ಕಂಪಿನಿಂದ ರಂಜಿಸುವ ಹಾಗೂ ಚಿಗುರಿನಂತಿರುವ ಹೆಜ್ಜೆಗಳಿಂದ ಭೂಮಿಯೆಲ್ಲವೂ ಚಿಗುರಿದಂತೆಯೇ ಶೋಭಿಸುತ್ತಿತ್ತು. ಆ ಸುಂದರಿಯರ ಚಂದ್ರಮಂಡಲಕ್ಕೆ ಸದೃಶವಾದ ಮುಖಗಳಿಂದ ಆಕಾಶವೆಲ್ಲವೂ ಚಂದ್ರಮಂಡಲಮಯವಾಗಿ ಕಾಣುತ್ತಿತ್ತು. ಆ ಚೆಲುವೆಯರು ಬಿಸಿಲನ್ನು ತಪ್ಪಿಸಿಕೊಳ್ಳಲು ಮೇಲೆ ಎತ್ತಿಹಿಡಿದಿರುವ ಕೆಂಬಣ್ಣದ ಕರತಲಗಳಿಂದ ದಿಕ್ಕುಗಳೆಲ್ಲವೂ ಅರಳಿದ ತಾವರೆಗಳುಳ್ಳ ತಾವರೆಗೊಳದಂತೆಯೂ ಕಾಣುತ್ತಿತ್ತು. ಆ ಸುಂದರಿಯರಾದ ಹೆಂಗಳ ಆಭರಣಗಳ ಕಾಂತಿಪುಂಜದಿಂದ ಸೂರ್ಯಕಿರಣಗಳೆಲ್ಲ ಕಾಮನಬಿಲ್ಲೆಂಬ ಬಳ್ಳಿಯ ರಾಶಿಯಂತೆಯೂ, ಆ ಕಾಮಿನಿಯರ ಸುಂದರವಾದ ಕಣ್ಣುಗಳ ಹೊಳಪಿನಿಂದ ಹಗಲೆಲ್ಲ ಅರಳಿದ ಕನ್ನೈದಿಲೆಗಳುಳ್ಳ ಸರೋವರದಂತೆಯೂ

ನೆಲೆಮೊಲೆಯಿಂದಂ ಮೇಲುದು
ತೊಲಗಲ್ ಹಾರಾಂಶುವಂ ನಿಜಾಂಶುಕವೆಂದಂ
ದಲಘುಕುಚೆ ಮೇಲ್ಕೊಳುತ್ತಾ
ಕುಲತೆಯಿನೆಯ್ತಂದು ನೋಡಿದಳ್ ನೃಪವರನಂ ೨೬

ವ॥ ಮತ್ತಮುಪರಿಸಮಾಪ್ತಪ್ರಸಾದನೆಯುರಾಗಿ ಬಂದು ನೋಡುವಲ್ಲಿ ಮತ್ತಮೊರ್ವಳ್
ಉಡೆ ಜೋಲಲ್ ನೂಲ್ ಸಡಿಲಲ್
ಮುಡಿ ಪರೆಯಲ್ ಹಾರಲತೆಯನಕ್ಷಾವಳಿಯಂ
ಪಿಡಿದಂತೆ ಪಿಡಿದು ತುರಿಪದೆ
ನಡೆತಂದಳ್ ಕಾಮಯೋಗಿನೀವಿಭ್ರಮದಿಂ ೨೭

ಪಿರಿದುಮೆರ್ದೆ ದವಕೆ ವಾಜಿಸು
ತಿರೆ ಭಂಗಂಬೆತ್ತು ಹಾರಲತೆ ಘನಕುಚದೊಳ್
ಕರವಿಕ್ಷೇಪದೆ ನರ್ತಿಸೆ
ನರೇಂದ್ರನಂದನನನೊಲ್ದು ನೋಡಿದಳೊರ್ವಳ್ ೨೮

ಮಂದಾನಿಲ ರಗಳೆ॥ ಇನಿತಂ ಪಾಜಿನ್ನಂ ತ್ವರಿತಗತಿಕೆ
ಪಿಡಿ ಮೇಲುದನೀಗಳ್ ಲಲಿತಲತಿಕೆ

ಸೋರ್ಮುಡಿಯಂ ಸಾವಗಿಸಕ್ಕ ನಿನ್ನ
ಜೋಲ್ದುಡೆಯಂ ನೋಡೆಲೆ ಮರುಳೆ ಮುನ್ನ

ಕಾಣುತ್ತಿತ್ತು. ಹೀಗೆ ಬಹಳ ಕುತೂಹಲದಿಂದ ನೋಡುತ್ತಿರಲಾಗಿ, ೨೬. ಅವರಲ್ಲಿ ತೋರವೊಲೆಯ ಒಬ್ಬಳು ತನ್ನ ಗಡುಸು ಮೊಲೆಗಳಿಂದ ಹೊದ್ದುಕೊಂಡಿದ್ದ ಬಟ್ಟೆಯು ಜಾರಿಹೋದರೂ ಮುತ್ತಿನಸರದ ಕಾಂತಿಯನ್ನೇ ನಿಜವಾದ ಬಟ್ಟೆಯೆಂದು ಭ್ರಮಿಸಿ, ಅದನ್ನೇ ಮೇಲಕ್ಕೆ ಎಳೆದುಕೊಳ್ಳುತ್ತಾ ಬಹಳ ಗಡಿಬಿಡಿಯಿಂದ ಓಡಿಬಂದು ರಾಜಪುತ್ರನನ್ನು ನೋಡಿದಳು. ವ॥ ಆರಂಭಮಾಡಿದ್ದ ಅಲಂಕಾರಗಳನ್ನು ಪೂರ್ತಿಯಾಗಿ ಮಾಡಿಕೊಳ್ಳದೆ ಬಂದು ನೋಡುತ್ತಿರಲಾಗಿ, ೨೭. ಸೀರೆಯು ಜೋಲುತ್ತಿತ್ತು. ಡಾಬು ಸಡಿಲವಾಯಿತು. ತಲೆಗೂದಲು ಚೆದುರಿಹೋಗಿತ್ತು. ಹಾರವನ್ನೇ ಜಪಸರದಂತೆ ಕೈಯಲ್ಲಿ ಹಿಡಿದುಕೊಂಡಿದ್ದಾಳೆ. ಹೀಗೆ ಕಾಂತನ ವಿರಹದಿಂದ ಯೋಗಿನಿಯಾದಂತೆ ಕಾಣುತ್ತಾ ಮತ್ತೊಬ್ಬಳು ಬಹಳ ಆತುರದಿಂದ ಬಂದಳು. ೨೮. ಮತ್ತೊಬ್ಬಳು ಓಡಿಬಂದ ಆಯಾಸದಿಂದ ಎದೆ ಡವಕೆಯಂತೆ ಬಡಿದುಕೊಳ್ಳುತ್ತಿರಲು, ಬಳ್ಳಿಯಂತಿರುವ ಹಾರವು ಕೈಗಳ ತೂಗಾಟದಿಂದ ತೋರವೊಲೆಗಳಲ್ಲಿ ಕುಣಿಯುತ್ತಿರಲು ರಾಜಪುತ್ರನನ್ನು ನೋಡಲು ಬಹಳ ಆಸೆಯಿಂದ ಬಂದು ನೋಡಿದಳು. ೨೯. "ಏನೇ ಎಷ್ಟು ಜೋರಾಗಿ ಓಡಿಹೋಗುತ್ತಿದ್ದೀಯೆ? ನಾನೂ ಬರುತ್ತೇನೆ. ಸ್ವಲ್ಪ ನಿಂತುಕೊಳ್ಳೆ. ಲೇ ಲಲಿತಲತಿಕೆ,

ಆವೊಕ್ಕಪುದೆಲೆ ಮದನಾಂಧೆ ಮುಂದೆ
ಮೌಕ್ತಿಕನಿಕರಂ ನಿಜಹಾರದಿಂದೆ

ಕಾಂಚೀದಾಮಮನೋಸರಿಸು ಮುಗ್ಧೆ
ಬಿಡದೆ [ನೀನೆನಿಸೀಕ್ಷಿಸುವೆ ವಿದಗ್ಧೆ]

ತೊಲಗುತ್ತಿದೆ ಘನಕುಚಯುಗಳದಿಂದೆ
ನೋಡಿದೆ [ಸಿಚಯಂ] ನಿನ್ನಯ ಮುಂದೆ

ಎರ್ದೆ ಪಡಪಡ ಪಾರ್ದಪುದೇಕೆ ಕೆಳದಿ
ತೋಳುಗಳಂ ಪಿಡಿ ಮೃದುಹಸ್ತತಳದಿ

ನೆಡಪಿದಪೆ ತನ್ವಿ ಪೂವಲಿಗಳಲರ
ಆಸವಮದದಿಂ ನಗಿಸಿದಪೆ ಪಲರ

ನವ[ಯೌವನೆ ಮರುಳಾದೆಯೀತಂಗೆ]
ಗುಱಿಮಾಡಿದಪೆ ನಿನ್ನ ಮನುಮತಂಗೆ

ಮನದೊಳ್ ಸಂಕಲ್ಪಿತ ಸುರತಸುಖಮ
ನನುಭವಿಸುವೆಯದಱಿಂ ನೋಡು ಮುಖಮ

ನುಸುರಿಕ್ಕುವುದುಮನೇಂ ಮಱೆತೆ ಕಾಂತೆ
ಬಂದಪನದೆ ಮುಂದೆ ಜಯಂತನಂತೆ

ಮುತ್ತಿನ ಬೆಳ್ಗೊಡೆಗಳ ಬಳಗದೊಳಗೆ
ಚಾಮರತತಿ ಕೆಲದೊಳೆ ವಿಳಿರ್ದು ತೊಳಗೆ

ಸೊಗಯಿಸುತುಂ ಚಂದ್ರಾಪೀಡದೇವ
ನುದಿತಾರ್ಕಸಹಸ್ರಸಮಪ್ರಭಾವ

ನನ್ನ ಉತ್ತರೀಯವನ್ನು ಸ್ವಲ್ಪ ಹಿಡಿದುಕೊಳ್ಳೆ. ಅಕ್ಕ, ನಿನ್ನ ಬಿಚ್ಚಿಹೋಗಿ ಜೋಲಾಡು ತ್ತಿರುವ ಕೂದಲನ್ನು ಸರಿಪಡಿಸಿಕೊ, ಲೇ ! ಹುಚ್ಚಿ ! ಜಾರಿಹೋಗುತ್ತಿರುವ ಸೀರೆ ಯನ್ನು ಮೊದಲು ಸರಿಪಡಿಸಿಕೊಳ್ಳೆ. ಎಲೇ ! ಕಾಮಾಂಧಳೆ, ನಿನ್ನ ಸರ ಕಿತ್ತುಹೋಗಿ ಮುತ್ತುಗಳೆಲ್ಲ ಚಲ್ಲಾಪಿಲ್ಲಿಯಾಗುತ್ತಿವೆಯಲ್ಲೆ. ಲೇ ದಡ್ಡೆ, ನಿನ್ನ ಸೊಂಟದ ಡಾಬನ್ನು ಸರಿಮಾಡಿಕೊ ! ಲೇ ರಸಿಕಳೆ, ನೀನೊಬ್ಬಳೆ ಎಷ್ಟು ನೋಡುತ್ತೀಯೆ ? ನೋಡೆ, ನಿನ್ನ ಸ್ತನಗಳ ಮೇಲಿನ ಹೊದಿಕೆಯು ಜಾರಿಹೋಗಿದೆ ! ಎಲೆ ಗೆಳತಿ ! ನಿನ್ನ ಎದೆಯು ಡವ ಡವ ಎಂದು ಏಕೆ ಹೊಡೆದುಕೊಳ್ಳುತ್ತಿದೆ ? ನಿನ್ನ ಮೃದುವಾದ ಕೈಗಳಿಂದ ನನ್ನ ತೋಳನ್ನು ಸ್ವಲ್ಪ ಹಿಡಿದುಕೊ. ನೆಲದಮೇಲೆ ಚೆಲ್ಲಿರುವ ಹೂವುಗಳನ್ನು ತುಳಿದು ಕೊಂಡೇ ಹೋಗುತ್ತಿರುವೆಯಲ್ಲೆ ! ಮದ್ಯದ ಅಮಲಿನಿಂದ ಎಲ್ಲರನ್ನೂ ನಗಿಸುತ್ತೀ ಯಲ್ಲ ! ಎಲೆ ಹೊಸಹರೆಯದವಳೆ, ಇವನನ್ನು ನೋಡಿ ಮರುಳಾಗಿಬಿಟ್ಟಿದ್ದೀಯಾ ? ನೀನು ಕಾಮಪರವಶಳಾಗಿರುವೆಯಾ ? ಮನಸ್ಸಿನಲ್ಲೇ ಇವನೊಂದಿಗೆ ಬೆರೆತಂತೆ ಕಲ್ಪಿಸಿ

ನಾ ನೋಡಿದಪನಿತ್ತು ನೃಪಕುಮಾರ
ನಾ ಲಾವಣ್ಯರೂಪ ಜಿತಕುಮಾರ

ನಾ ವೈಶಂಪಾಯನನೊಡನೆ ನೋಡ
ನಸುನಗೆ ದಶನಪ್ರಭೆಯಿಂದ ಕೂಡ

ಲಾ ದೆಸೆ ಧವಳಿಸಿದವೊಲಾಯ್ತು ರಯ್ಯ
ನಾ ವೀಳಯಕೆ ನೀಡಿದಪಂ ಕಯ್ಯ

ನೀ ಕಮಳಾಂಕಿತ ಕರತಳಮನಾವ
ಸುಂದರಿ ಪಿಡಿವಳೊ ಧನ್ಯೆಯವಳೀ ವ

ಸುಂಧರೆಯೊಳೆನುತ್ತುಂ ರಾಗದಿಂದೆ
ಮೆಯ್ಯಱಿಯದೆ ಪಲರುತ್ಕಂಠೆಯಿಂದೆ

ಸವಿಳಾಸ ಸೋನ್ಮಾದ ಸಾಭ್ಯಸೂಯ
ಸಸ್ಪೃಹ ಸೇರ್ಷ್ಯಾದಿ ರಸಾನುಮೇಯ

ರಮಣೀಯಾಳಾಪಕಳಾಪದಿಂದ
ಮೆಸೆದುದು ರಮಣೀತತಿ ಚೆಲ್ವಿನಿಂದ ೨೯

ಕೊಂಡು ಸಂಭೋಗಸುಖವನ್ನು ಅನುಭವಿಸುತ್ತಿದ್ದೀಯೆ ! ಆದರಿಂದಲೇ ನೋಡು, ನಿನ್ನ ಬಾಯಿ ಏನನ್ನೋ ಗೊಣಗುತ್ತಿದೆ ! ಏನನ್ನು ಮರೆತುಬಂದಿರುವೆ? ಚೆಲುವೆ, ಅಲ್ಲಿ ನೋಡು ; ಮುಂದೆ ಇಂದ್ರನ ಮಗನಾದ ಜಯಂತನಂತೆ ಮುತ್ತಿನ ಬಿಳಿಯ ಕೊಡೆಗಳ ಗುಂಪಿನೊಡನೆ ಚಾಮರಗಳು ಪಕ್ಕಗಳಲ್ಲಿ ಚಲಿಸುತ್ತಾ ಶೋಭಿಸುತ್ತಿರಲು, ಅನೇಕ ಬಾಲ ಸೂರ್ಯರಿಗೆ ಸಮಾನನಾದ ಚಂದ್ರಾಪೀಡನು ಬರುತ್ತಿದ್ದಾನೆ ! ಆಹಾ ! ಲಾವಣ್ಯಭರಿತ ವಾದ ರೂಪವುಳ್ಳ ಆ ರಾಜಕುಮಾರನು ಈ ಕಡೆಗೇ ನೋಡುತ್ತಿದ್ದಾನೆ ! ಆಹಾ ! ಲಾವಣ್ಯಪೂರ್ಣವಾದ ರೂಪದಿಂದ ಕುಮಾರಸ್ವಾಮಿಯನ್ನು ಮೀರಿಸಿದ್ದಾನೆ. ಆ ವೈಶಂಪಾಯನನ ಜೊತೆಯಲ್ಲಿದ್ದಾನೆ. ಅಲ್ಲಿ ನೋಡು, ಮಂದಹಾಸವು ಹಲ್ಲಿನ ಕಾಂತಿ ಯಿಂದ ಕೂಡಿಕೊಂಡಿರಲಾಗಿ ಆ ದಿಕ್ಕಿಗೆ ದಿಕ್ಕೇ ಬೆಳ್ಳಗಾದಂತಾಗಿಬಿಟ್ಟಿದೆ. ಜನರು ನೀಡುವ ವೀಳೆಯಕ್ಕೆ ಎಷ್ಟು ಸೊಗಸಾಗಿ ಕೈ ಚಾಚುತ್ತಿದ್ದಾನೆ ! ಈ ಕಮಲರೇಖೆಯಿಂದ ಶೋಭಿಸುವ ಕಯ್ಯನ್ನು ಯಾವ ಸುಂದರಿಯು ಹಿಡಿಯುತ್ತಾಳೋ ಅವಳೇ ಈ ಜಗತ್ತಿ ನಲ್ಲಿ ಪುಣ್ಯವಂತೆ !" ಇವೇ ಮೊದಲಾದ ಮಾತುಗಳನ್ನಾಡುತ್ತಾ, ಬಹಳ ಪ್ರೀತಿಯಿಂದ ಪಟ್ಟಣದ ಮಹಿಳೆಯರು ಪರವಶರಾಗಿದ್ದಾರೆ. ಕೆಲವರು ಹೆಬ್ಬಯಕೆಯಿಂದ ಮೈಮರೆ ತಿದ್ದಾರೆ. ಹೀಗೆ ಲೀಲೆಯಿಂದ ಕೂಡಿದ, ಪರವಶತೆಯಿಂದ ಕೂಡಿದ, ಅಸೂಯೆಯಿಂದ ಕೂಡಿದ, ಆಸೆಯಿಂದ ಕೂಡಿದ, ಹುರುಡಿನಿಂದ ಕೂಡಿದ, ಹೀಗೆ ನಾನಾ ಮನೋಭಾವ ಗಳನ್ನು ತೋರ್ಪಡಿಸುವ ಬಹಳ ರಮಣೀಯವಾದ ಮಾತುಗಳಿಂದಲೂ ಸೊಬಗಿ

ವ॥ ಮತ್ತಲ್ಲಿ

ಕರೆದಪರೊಲ್ದು ಭೂಷಣಗಣಧ್ವನಿಯಿಂ ನವರತ್ನರಂಜಿತಾ
ಭರಣನಿಕಾಯರಶ್ಮಿತತಿಯಿಂ ಬರೆಸುತ್ತಿಪರಾಕುಲೇಕ್ಷಣೋ
ತ್ಕರಪುಟದಿಂದೆ ಪೀರ್ದಪರೆನಲ್ ನಗರಾಂಗನೆಯರ್ ಮಹೋತ್ಸವಂ
ದೊರೆದುದೆನುತ್ತಲಂಪು ಮಿಗೆ ನೋಡಿದರಾ ಮನುಜೇಂದ್ರಚಂದ್ರನಂ ೩೦

ಒಲವಿಂ ನೋಡುವ ಭಾವಿಪ
ಲಲನಾಸಂಕುಲದ ಹೃದಯದೊಳ್ ನೆಲಸಿದುದು
ಜ್ವಲಮಣಿದರ್ಪಣತಲದೊಳ್
ನೆಲಸುವವೊಲ್ ರೂಪು ರೂಪವಿದ್ಯಾಧರನಾ ೩೧

ವ॥ ಮತ್ತಮಾ ಲತಾಂಗಿಯರ್ ಸೂಸುವ ಕುಸುಮಮಿಶ್ರಲಾಜಾಂಜಲಿಗಳನಿದಿರ್ಗೊಳುತ್ತಂ ಜನಗಿರೀಂ[ದ್ರಮಾಲಾಮಲಿನ] ಕುಂಜರಘಟಾಭಿರಂಜಿತಮುಂ ಉದ್ದಂಡಧವಳಾತಪತ್ರ ಸಂಛನ್ನಮುಮನೇಕ ದ್ವೀಪಾಂತರಾಗತದೂತ ಸಮಾಕುಳಮುಮಪ್ಪ ರಾಜಭವನದ್ವಾರದೊಳಿಂದ್ರಾಯುಧದಿಂದವನಿತಳಕ್ಕವತರಿಸಿ ವೈಶಂಪಾಯನ ಕರಕಮಲನಿಕ್ಷಿಪ್ತಪ್ರಕೋಷ್ಠನುಂ [ಬ]ಲಾಹಕೋಪದಿಶ್ಯಮಾನಮಾರ್ಗನುಮಾಗಿ ಪೊಕ್ಕನೇಕಸಹಸ್ರಜನಸಂಕುಳಮಪ್ಪ ಸಪ್ತಕಕ್ಷ್ಯಾಂತರಗಳನತಿಕ್ರಮಿಸಿ ಬರ್ಪಲ್ಲಿ

ನಿಂದಲೂ ಆ ಪಟ್ಟಣದ ಹೆಂಗಸರ ತಂಡವು ಶೋಭಿಸುತ್ತಿತ್ತು. ವ॥ ಮತ್ತು ಅಲ್ಲಿ ೩೦. ಆಭರಣಧ್ವನಿಯಿಂದ ಪ್ರೀತಿಸಿ ಕರೆಯುವಂತೆಯೂ ನವರತ್ನಶೋಭಿತವಾದ ಆಭರಣಗಳ ಕಾಂತಿಯಿಂದ ಬರಮಾಡಿಕೊಳ್ಳುತ್ತಿರುವಂತೆಯೂ ದೊನ್ನೆಗಣ್ಣುಗಳಿಂದ ಕುಡಿಯುತ್ತಿರುವಂತೆಯೂ ಆ ಪಟ್ಟಣದ ಹೆಂಗಸರು ದೊಡ್ಡ ಹಬ್ಬವೇ ಒದಗಿದಂತೆ ಹರ್ಷವು ಹೆಚ್ಚುತ್ತಿರಲು ಆ ರಾಜಕುಮಾರಚಂದ್ರನನ್ನು ನೋಡುತ್ತಿದ್ದರು. ೩೧. ಪ್ರೀತಿಯಿಂದ ನೋಡುತ್ತಾ ಮನಸ್ಸಿನಲ್ಲಿ ನೆನಸಿಕೊಳ್ಳುತ್ತಾ ಇದ್ದ ಮಹಿಳೆಯರ ಮನಸ್ಸಿನಲ್ಲಿ ರನ್ನಗನ್ನಡಿಯಲ್ಲಿ ಪ್ರತಿಬಿಂಬಿಸುವಂತೆ ಚಂದ್ರಾಪೀಡನ ರೂಪು ನೆಲೆಸಿತು. ವ॥ ಮತ್ತು ಆ ಲಲನೆಯರು ಹೂವುಗಳಿಂದ ಮಿಶ್ರವಾದ ಅರಳುಗಳನ್ನು ಎರಚುತ್ತಿರಲು ಅವುಗಳನ್ನು ತಾಳುತ್ತ, ಅಂಜನಪರ್ವತದ ಶ್ರೇಣಿಯಂತೆ ಕಪ್ಪುಬಣ್ಣವನ್ನು ತಳೆದಿರುವ ಆನೆಗಳ ಗುಂಪಿನಿಂದ ಮನೋಹರವಾದ, ಎತ್ತಿಹಿಡಿದಿರುವ ಬಿಳಿಯ ಛತ್ರಿಗಳಿಂದ ಆವೃತವಾಗಿರುವ, ಅನೇಕ ದ್ವೀಪಾಂತರಗಳಿಂದ ಬಂದಿರುವ ರಾಯಭಾರಿಗಳಿಂದ ತುಂಬಿರುವ, ಅರಮನೆಯ ಬಾಗಿಲಲ್ಲಿ ಇಂದ್ರಾಯುಧದಿಂದ ಭೂಮಿಗೆ ಇಳಿದು ವೈಶಂಪಾಯನನು ಹಸ್ತಲಾಘವವನ್ನು ಕೊಡುತ್ತಿರಲಾಗಿ, ಬಲಾಹಕನು ದಾರಿಯನ್ನು ತೋರಿಸುತ್ತಿರಲಾಗಿ ಒಳಹೊಕ್ಕು ಜನನಿಬಿಡವಾದ ಏಳು ತೊಟ್ಟಿಗಳನ್ನು ದಾಟಿ ಚಂದ್ರಪೀಡನು ಬರು

ಸುರಚಾಪಾಕಾರ ನಾನಾ ಮಣಿಮಯವಿಲಸತ್ತೋರಣಂ ಚಿತ್ರ ಚೀನಾಂ
ಬರರಮ್ಯಂ ಚಂದ್ರಶಾಲಾಪ್ರಕರಪರಿವೃತಂ [ವೇದಿಕಾ]ನೀಕ ಶೋಭಾ
ಕರಮಾತ್ತೋದಾತ್ತಕೂಟಂ ವಿಘಟಿತಮಣಿವಾತಾಯನಾತ್ಯಂತಕಾಂತಂ
ಕರುಮಾಡಂ ನಾಡೆ ಚೆಲ್ವಂ ತಳೆದುದು ಪಲವುಂ ಬಳ್ಳಿಮಾಡಂಗಳಿಂದಂ ೩೨

ಕರುಮಾಡದ ಬಾಗಿಲನೆ
ಯ್ದುರೆ ತಂದೆಯು ಕೆಲದೊಳೆಸೆವ ರಾಜಕುಮಾರೋ
ತ್ಕರಮಾ ನರೇಂದ್ರತನಯಂ
ಗಿರದಿದಿರೇಟ್ಟಿತ್ತು ರಭಸವೊದವಲ್ಕಾಗಳ್ ೩೩

ಅಹಮಹಮಿಕೆಯಿಂದೆಱಗುವ
ಮಹೀಶಶತಮುಕುಟಕಾಂತಿ ತನ್ನ ಪದಾಂಭೋ
ರುಹಲಕ್ಷ್ಮಿಯಿಂದೆ ಶೋಭಾ
ವಹಮಾಗೆ ನರೇಂದ್ರನಂದನಂ ಪುಗುತಂದಂ ೩೪

ಲಲನಾಸಂವೀಜನೋದ್ಯಚ್ಚಮರರುಹಚಯೋದ್ಭಾಸಿತಂ ರಾಜಹಂಸೋ
ಜ್ವಲ ಚೀನಪ್ರಚ್ಛದಾಚ್ಛಾದಿತ ಶಯನತಲಾಲಂಕೃತಂ ಲೋಲವೀಚೀ
ಲುಳಿತ ಸ್ವರ್ವಾಹಿನೀವಾರಿಯೊಳಮರಗಜಂ ಕೇಳಿಯಿಂದಿರ್ಪವೊಲ್ಕಂ
ಗೊಳಿಸಿರ್ದಂ ಚಂಡಬಾಹಾಬಲನಿಭೃತ ಮಹೀಮಂಡಲಂ ಸಾರ್ವಭೌಮಂ ೩೫

ತ್ತಿರುವಲ್ಲಿ, ೩೨. ಕಾಮನಬಿಲ್ಲಿನಂತಿರುವ ನಾನಾ ಬಗೆಯ ರತ್ನಗಳಿಂದ ಖಚಿತವಾದ ಹೆಬ್ಬಾಗಿಲು ರೇಷ್ಮೆಬಟ್ಟೆಯ ತೋರಣಗಳಿಂದ ಶೋಭಿಸುತ್ತಿರಲು, ಅನೇಕ ಶಿರೋಗೃಹ ಗಳಿಂದ ಕೂಡಿರುವ ಮತ್ತು ಜಗುಲಿಗಳಿಂದ ಶೋಭಾಕರವಾದ, ಎತ್ತರವಾದ ಶಿಖರ ಗಳಿಂದ ರಂಜಿಸುವ, ಚೊಕ್ಕವಾಗಿ ಅಲ್ಲಲ್ಲಿ ಇಡಿಸಿರುವ ರತ್ನದ ಚೌಕಟ್ಟಿನ ಕಿಟಕಿಗಳಿಂದ ಬಹಳ ಸುಂದರವಾದ ದೊಡ್ಡ ಉಪ್ಪರಿಗೆಮನೆಯು ಅನೇಕ ಕಿರುಮಹಡಿಗಳಿಂದ ಕೂಡಿ ಬಹಳ ಸುಂದರವಾಗಿತ್ತು. ೩೩. ಹೀಗೆ ಆ ಮಹಲಿನ ಬಾಗಿಲಿಗೆ ಬರಲಾಗಿ ತಂದೆಯ ಸಮೀಪದಲ್ಲಿ ಶೋಭಿಸುವ ಅರಸುಮಕ್ಕಳು ಚಂದ್ರಾಪೀಡನನ್ನು ತಟ್ಟನೆ ಎದುರು ಗೊಂಡು ಸುತ್ತುಗಟ್ಟಿದರು. ೩೪. ನಾನು ಮುಂದು ತಾನು ಮುಂದು ಎಂದು ನಮಸ್ಕ ರಿಸುವ ಅನೇಕ ರಾಜರ ಕಿರೀಟಗಳ ಹೊಳಪು ತನ್ನ ಪಾದಕಮಲದ ಕಾಂತಿಯಿಂದ ಅತಿ ಶಯವಾಗಿ ಶೋಭಿಸುತ್ತಿರಲು ಚಂದ್ರಾಪೀಡನು ಒಳಹೊಕ್ಕನು. ೩೫. ಅಲ್ಲಿ ತನ್ನ ತೀಕ್ಷ್ಣವಾದ ತೋಳುಬಲದಿಂದ ಇಡೀ ಭೂಮಂಡಲವನ್ನು ಕೈವಶದಲ್ಲಿಟ್ಟುಕೊಂಡಿರುವ ತಾರಾಪೀಡಚಕ್ರವರ್ತಿಯು, ಹೆಂಗಸರು ಬೀಸುವುದಕ್ಕಾಗಿ ಎತ್ತಿಹಿಡಿದಿರುವ ಚಾಮರ ಗಳ ಸಮೂಹದಿಂದ ಪ್ರಕಾಶಮಾನನಾಗಿ ಅರಸಂಚೆಯಂತೆ ಬಿಳುಪಾದ ಪಟ್ಟೆವಸ್ತ್ರಗಳನ್ನು ಹಾಸಿರುವ ಹಾಸಿಗೆಯಲ್ಲಿ ಚಲಿಸುತ್ತಿರುವ, ಅಲೆಗಳಿಂದ ಕಲಕಲ್ಪಟ್ಟ ದೇವಗಂಗಾನದಿಯ

ವ॥ ಅಂತಿರ್ದ ನಿಜಜನಕನಂ ನಯರತ್ನಾಕರಂ ದೂರದೊಳೆ ಕಂಡವನಿತಳನಿಹಿತ ಚೂಡಾಮಣಿಯಾಗಿ ಪೊಡಮಡುವುದುಂ

ಪರಮಾಶೀರ್ವಾದದಿಂದಂ ಪರಸಿ ಮಗನನಾನಂದದಿಂ ಕಂದ ಬಾಯೆಂ
ದಿರದಾನಂದಾಶ್ರುಬಿಂದುಪ್ರತತಿ ಸುರಿಯೆ ರೋಮೋದ್ಗಮಂ ಕೂಡೆ ಪೊಣ್ಮು
ತ್ತಿರೆ ಬಾಹುದ್ವಂದ್ವದಿಂದಂ ಬರೆತೆಗೆದುಱಿ ತಳ್ಕೈಸೆಯುಂ ತಾತಪಾದಾಂ
ಬುರುಹಕ್ಕಾನಮ್ರನಾದಂ ನಿಖಿಳನೃಪಸಭಾಂಭೋಜನೀರಾಜಹಂಸಂ ೩೬

ವ॥ ಅಂತು ವಿನಯೋನ್ನತಿವೆತ್ತ ನಿಜನಂದನನನರ್ಧಾಸನದೊಳಾ ನೃಪಂ ಕುಳ್ಳಿರಿಸೆಯು ಮೆಂತುಮೊಲ್ಲದಾತ್ಮೀಯ ತಾಂಬೂಲಕರಂಕವಾಹಕ ಪ್ರಸಾರಿತಾಂಬರಾಂಚಲಮುಮಂ ಚರಣಾಗ್ರದಿಂ ನೂಂಕಿ ಚಂದ್ರಾಪೀಡಂ ನೆಲದೊಳ್ ಕುಳ್ಳಿರೆ

ವಿನಯದಿನಾ ವೈಶಂಪಾ
ಯನನೆಱಗೆ ನರೇಂದ್ರನಟ್ಕಱಿಂದಪ್ಪಲ್ಕಾ
ತನುಮಾಗಳ್ ತಾರಾಪೀ
ಡನರೇಂದ್ರಾತ್ಮಜನ ಪಕ್ಕದೊಳ್ ಕುಳ್ಳಿರ್ದಂ ೩೭

ನೀರಿನಲ್ಲಿ ಐರಾವತವು ವಿನೋದವಾಗಿರುವಂತೆ ಮುಂಡಿಸಿದ್ದನು. ವ॥ ಹಾಗೆ ಕುಳಿತಿದ್ದ ತನ್ನ ತಂದೆಯನ್ನು ವಿನಯಗುಣಕ್ಕೆ ಸಮುದ್ರಪ್ರಾಯನಾದ ಚಂದ್ರಾಪೀಡನು ದೂರದಲ್ಲೇ ನೋಡಿ ತಲೆಮಣಿಯು ನೆಲಕ್ಕೆ ತಾಕುವಂತೆ ದೀರ್ಘದಂಡ ನಮಸ್ಕಾರವನ್ನು ಮಾಡಲಾಗಿ ೩೬. ತಂದೆಯು ಮಗನನ್ನು ಅಮೋಘವಾದ ಆಶೀರ್ವಾದಗಳಿಂದ ಹರಸಿ ಆನಂದಭರಿತನಾಗಿ ಕಣ್ಣುಗಳಿಂದ ಆನಂದಬಾಷ್ಪಬಿಂದುಗಳು ಸುರಿಯುತ್ತಿರಲು, ಮೈನಿಮಿರುತ್ತಿರಲು 'ಬಾ ! ಕಂದ !' ಎಂದು ಎರಡು ತೋಳುಗಳಿಂದ ಗಟ್ಟಿಯಾಗಿ ಬಾಚಿ ತಬ್ಬಿಕೊಂಡನು. ಆಗ ಆಸ್ಥಾನಮಂಡಪವೆಂಬ ತಾವರೆಗೊಳದಲ್ಲಿ ರಾಜಹಂಸನಂತಿರುವ ಚಂದ್ರಾಪೀಡನು ತಂದೆಯ ಪಾದಕಮಲಗಳಿಗೆ ತಲೆಬಾಗಿ ನಿಂತುಕೊಂಡನು. ವ॥ ಹಾಗೆ ವಿನಯವನ್ನು ತೋರ್ಪಡಿಸುತ್ತಿರುವ ತನ್ನ ಮಗನನ್ನು ಮಹಾರಾಜನು ಅರ್ಧಾಸನದಲ್ಲಿ ಕುಳ್ಳಿರಿಸಿಕೊಳ್ಳಲು ಪ್ರಯತ್ನಿಸಿದರೂ ಅದಕ್ಕೆ ಒಪ್ಪದೆ ತನ್ನ ವೀಳೆಯಸಂಪುಟವನ್ನು ಹಿಡಿಯುವ ಸೇವಕನು ಹಾಸಿದ ಬಟ್ಟೆಯ ಅಂಚನ್ನು ಕಾಲಿನ ತುದಿಯಿಂದ ಸರಿಸಿ ಚಂದ್ರಾಪೀಡನು ನೆಲದಮೇಲೆ ಕುಳಿತುಕೊಂಡನು. ೩೭. ಹಾಗೆಯೆ ವೈಶಂಪಾಯನನೂ ವಿನಯದಿಂದ ನಮಸ್ಕರಿಸಲಾಗಿ ಮಹಾರಾಜನು ಬಹಳ ಅಕ್ಕರೆಯಿಂದ ಅವನನ್ನು ಬಾಚಿ ತಬ್ಬಿಕೊಂಡನು. ಬಳಿಕ ಅವನೂ ರಾಜಕುಮಾರನ ಪಕ್ಕದಲ್ಲೇ ನೆಲದ ಮೇಲೆ ಕುಳಿತು

ಅಡಿಗಡಿಗಾತ್ಮನಂದನನ ಮುಖೇಂದುವನುತ್ಸವದಿಂದೆ ನೋಡುತಂ
ನುಡಿಯುತಮಾ ನೃಪಂ ಕರಸರೋರುಹದಿಂ ಚುಬುಕಾಗ್ರಭಾಗಮಂ
ಪಿಡಿದು ನಿಜಾಂಬಿಕಾಪದಪಯೋಜಮನೀಕ್ಷಿಸು ಪೋಗು ಸಂತಸಂ
ಬಡಿಸು ವಿಲೋಕನೋತ್ಸುಕಿಯರಂ ವಿನಯಾರ್ಣವ ನಿನ್ನ ತಾಯ್ವಿರಂ ೩೮

ವ॥ ಎಂದು ನಿಜಜನಕಂ ಬೆಸಸಲಂತೆಗೆಯ್ವೆನೆಂದು ವೈಶಂಪಾಯನದ್ವಿತೀಯನಂ ಅಂತಃಪುರಪ್ರವೇಶಯೋಗ್ಯಪರಿಮಿತ ಪರಿಜನೋಪದಿಶ್ಯಮಾನಮಾರ್ಗನುಮಾಗಿ ಶುದ್ಧಾಂತ ಕಾಂತಾಪ್ರಧಾನೆಯುಪ್ಪ ನಿಜಾಂಬಿಕೆಯ ಮನೆಯಂ ಪುಗುವಲ್ಲಿ ವಸನಾಭರಣಕುಸುಮಪಟವಾಸ ತಾಂಬೂಲ ತಾಳವೃಂತಾಂಗರಾಗ ಭೃಂಗಾರುಧಾರಿಣಿಯರಪ್ಪ ವಾರವಿಳಾಸಿನಿಯರೊಳಂ ಉಭಯ ಪಾರ್ಶ್ವೋದ್ಧೂತ ಧವಳಚಾಮರೆಯರಪ್ಪ ಚಮರೀಜಕಾಂತೆಯರೊಳಂ ಪುರಾಣಕಥಾ ಕಥನತತ್ಪರ ಪರಿವ್ರಾಜಕಾಸಮೂಹದೊಳಮುಪಾಸ್ಯಮಾನೆಯಾಗಿರ್ದಳಂತುಮಲ್ಲದೆಯುಂ

ಎರಡುಮಚಲಂಗಳೆಡೆಯೊಳ್
ಪರಿವಮರನದೀಪ್ರವಾಹದಿಂದೆಸೆವ ವಸುಂ
ಧರೆಯಂದದಿನಲಘುಪಯೋ
ಧರವಿಲಸಿತಹಾರಲತಿಕೆ ಸತಿ ಸೊಗಯಿಸಿದಳ್ ೩೯

ಕೊಂಡನು. ೩೮. ಬಳಿಕ ಮಹಾರಾಜನು ಮಗನ ಚಂದಿರನಂದದ ಮುಖವನ್ನು ಬಹಳ ಸಂತೋಷದಿಂದ ನೋಡುತ್ತಾ, ಅವನನ್ನು ಮಾತನಾಡಿಸುತ್ತಾ, ತನ್ನ ತಾವರೆ ಯಂದದ ಕೈಗಳಿಂದ ಅವನ ಗಲ್ಲದ ತುದಿಯನ್ನು ಹಿಡಿದುಕೊಂಡು "ಮಗು ನೀನು ವಿನಯಗುಣಕ್ಕೆ ಸಮುದ್ರದಂತಿರುವೆ ಹೋಗಪ್ಪ ! ನಿನ್ನ ತಾಯಿಯ ಪಾದಕಮಲವನ್ನು ನೋಡಿಕೊಂಡು ಬಾ ! ನಿನ್ನ ತಾಯಂದಿರು ನಿನ್ನನ್ನು ನೋಡಬೇಕೆಂದು ಬಹಳ ಕುತೂ ಹಲದಿಂದ ಕೂಡಿದ್ದಾರೆ. ಅವರನ್ನೆಲ್ಲಾ ಹೋಗಿ ಸಂತೋಷಪಡಿಸು." ಟಿ. ರಾಜನಿಗೆ ಚಂದ್ರಾಪೀಡನ ತಾಯಿಯಲ್ಲದೆ ಇನ್ನೂ ಹಲವರು ಪತ್ನಿಯರಿದ್ದರು. ಆದ್ದರಿಂದ ತಾಯಂದಿರೆಂದು ಬಹುವಚನವನ್ನು ಪ್ರಯೋಗಿಸಿದ್ದಾನೆ. ವ॥ ಹೀಗೆ ತನ್ನ ತಂದೆಯು ಅಪ್ಪಣೆಮಾಡಲಾಗಿ ಚಂದ್ರಾಪೀಡನು ವೈಶಂಪಾಯನನ ಜೊತೆಯಲ್ಲಿ ಅಂತಃಪುರದ ಒಳಕ್ಕೆ ಹೋಗಲು ಅರ್ಹರಾದ ಮಿತವಾದ ಪರಿಜನರಿಂದ ತೋರಿಸಲ್ಪಡುವ ದಾರಿ ಯುಳ್ಳವನಾಗಿ ರಾಣಿವಾಸದ ಮಹಿಳಾಜನರಲ್ಲಿ ಪ್ರಧಾನೆಯೆನಿಸಿದ ತನ್ನ ತಾಯಿಯ ವಾಸಭವನಕ್ಕೆ ಬರುವಲ್ಲಿ ಬಟ್ಟೆ, ಒಡವೆ, ಹೂವು, ಸುವಾಸನೆಪುಡಿ, ವೀಳೆಯ, ಬೀಸ ಣಿಗೆ, ಲೇಪನದ್ರವ್ಯ, ಚಿನ್ನದ ಬಟ್ಟಲು ಮೊದಲಾದುವುಗಳನ್ನು ಹಿಡಿದುಕೊಂಡಿರುವ ಗಣಿಕೆಯರಿಂದಲೂ, ಎರಡುಕಡೆಯಲ್ಲೂ ಚಾಮರವನ್ನು ಬೀಸುತ್ತಿರುವ ಚಾಮರಧಾರಿಣಿ ಯರಿಂದಲೂ, ಪುರಾಣಪುಣ್ಯಕಥೆಗಳನ್ನು ಹೇಳುವುದರಲ್ಲಿ ಆಸಕ್ತರಾಗಿರುವ ಸಂನ್ಯಾಸಿನಿ ಯರ ಗುಂಪಿನಿಂದಲೂ ಸೇವಿಸಲ್ಪಡುತ್ತಿದ್ದ ತಾಯಿಯನ್ನು ಕಂಡನು. ಅಲ್ಲದೆ, ೩೯. ಎರಡು ಬೆಟ್ಟಗಳ ಮಧ್ಯದಲ್ಲಿ ಹರಿಯುತ್ತಿರುವ ಗಂಗಾನದಿಯ ಪ್ರವಾಹದಿಂದ ಶೋಭಿಸುವ ಭೂಮಿಭಾಗದಂತೆ ತೋರವೊಲೆಗಳ ಮಧ್ಯದಲ್ಲಿ ಶೋಭಿಸುತ್ತಿರುವ

ಪೊಳೆವ ರವಿಬಿಂಬದೊಳ್ ಬಂ
ದೊಳಪೊಕ್ಕಮೃತಾಂಶುಬಿಂಬಮೆನೆ ನಿಜಶಯ್ಯಾ
ತಳನಿಹಿತ ರತ್ನದರ್ಪಣ
ತಳದೊಳ್ ಮಾರ್ಪೊಳೆದುದಾನನಂ ಮಾನಿನಿಯಾ ೪೦

ವ॥ ಅಂತಿರ್ದಳಂ ಗೆಂಟಿನೊಳ್ ಕಂಡು ವಿನಯರತ್ನಾಕರಂ ಸಾಷ್ಟಾಂಗಪ್ರಣತನಾಗೆ

ಅರಸಿ ನಲವರಿಕೆಯಿಂದಂ
ಪರಸುತ್ತಿಂದೆನ್ನ ತಂದೆ ಬಂದನೆನುತ್ತಂ
ತೊರೆದೆನಸುಂ ಮೊಲೆವಾಲುಗು
ತರೆ ತನಯನನಪ್ಪುಕೆಯ್ದಮುಪ್ಪಿದಳಾಗಳ್ ೪೧

ವ॥ ಅನಂತರಂ ವೈಶಂಪಾಯನನುಮಪ್ಪುಕೆಯ್ದಂ ತಳ್ಕೈಸಿ ವಿಳಾಸವತಿಮಹಾದೇವಿ ಕುಳ್ಳಿರ್ದು ವಿನಯದಿಂ ನೆಲದೊಳ್ ಕುಳ್ಳಿರ್ದ ವೈಶಂಪಾಯನನುಮಂ ಮಗುಳೆ ತೆಗೆದು ತಳ್ಕೈಸುತ್ತಮಿರ್ದು

ವಿನಯದೆ ನಿನ್ನ ತಂದೆಯ ಪ್ರಸಾದದಿನಿಂತು ಸಮಸ್ತ ಸತ್ಕಳಾ
ವನಿತೆಯರೊಳ್ ಮಹೋತ್ಸವದೆ ಕೂಡಿದಿರಿಂತಿರೆ ಬೇಗದಿಂ ವಧೂ
ಜನದೊಡಗೂಡಿಮೆಂದು ಪಿರಿದಪ್ಪುಕೆಯ್ನೊಳ್ ಪರಸುತ್ತಮಾತ್ಮನಂ
ದನ ಶುಕನಾಸನಂದನನನಾ ಸತಿ ಕಣ್ಮಲರಾರೆ ನೋಡಿದಳ್ ೪೨

ಮುತ್ತಿನಸರದಿಂದ ವಿಲಾಸವತಿಯು ಕಂಗೊಳಿಸುತ್ತಿದ್ದಳು. ೪೦. ತಳತಳಿಸುವ ಸೂರ್ಯ ಬಿಂಬದಲ್ಲಿ ಪ್ರವೇಶಿಸಿರುವ ಚಂದ್ರಮಂಡಲದಂತೆ ತನ್ನ ಹಾಸಿಗೆಯಲ್ಲಿ ಇಟ್ಟಿರುವ ಮಣಿ ಗನ್ನಡಿಯಲ್ಲಿ ವಿಲಾಸವತಿಯ ಮುಖವು ಪ್ರತಿಫಲಿಸಿತು. ವ॥ ಹೀಗೆ ಇದ್ದ ತಾಯಿ ಯನ್ನು ಬಹಳ ವಿನಯವಂತನಾದ ಚಂದ್ರಾಪೀಡನು ದೂರದಿಂದಲೇ ಕಂಡು ಸಾಷ್ಟಾಂಗ ನಮಸ್ಕಾರವನ್ನು ಮಾಡಲಾಗಿ, ೪೧. ಮಹಾರಾಣಿಯು ಬಹಳ ಪ್ರೀತಿಯಿಂದ ಆಶೀ ರ್ವದಿಸುತ್ತಾ 'ಈದಿನ ನನ್ನಪ್ಪ ಬಂದನಲ್ಲ' ಎಂದು ಹೇಳುತ್ತಾ, ಮೊಲೆಹಾಲು ಒಸರು ತ್ತಿರಲು ಮಗನನ್ನು ಬಹಳ ಅಕ್ಕರೆಯಿಂದ ತಬ್ಬಿಕೊಂಡಳು. ವ॥ ಬಳಿಕ ವೈಶಂಪಾಯನ ನನ್ನು ಪ್ರೀತಿಯಿಂದ ಆಲಿಂಗಿಸಿ ವಿನಯದಿಂದ ನೆಲದಮೇಲೆ ಕುಳಿತುಕೊಂಡಿದ್ದ ಅವ ನನ್ನು ಮತ್ತೆ ಮತ್ತೆ ಬಾಚಿ ತಬ್ಬಿಕೊಳ್ಳುತ್ತಿದ್ದು, ೪೨. "ಮಗು, ನಿನ್ನ ತಂದೆಯ ಅನು ಗ್ರಹದಿಂದ ನೀವಿಬ್ಬರೂ ವಿನಯವಂತರಾಗಿ ಸಮಸ್ತವಿದ್ಯೆಗಳೆಂಬ ಕನ್ಯೆಯರನ್ನು ಬಹಳ ಸಂತೋಷದಿಂದ ಪಡೆದಿರಿ. ಇನ್ನು ಅದಷ್ಟುಬೇಗನೆ ಹೆಂಡತಿಯರನ್ನೂ ಕೈಹಿಡಿಯಿರಿ" ಎಂದು ಬಹಳ ಮಮತೆಯಿಂದ ಆಶೀರ್ವದಿಸುತ್ತಾ ತನ್ನ ಮಗನನ್ನೂ ಮಂತ್ರಿಯ ಮಗ

ವ॥ ತದನಂತರಂ ಸಮಸ್ತ ಜನನಿಯರುಮಂ ಯಥಾಕ್ರಮದಿನಭಿವಂದಿಸಿ ರಾಜ ಮಂದಿರಮಂ ಪೊಱಮಟ್ಟು ಸಕಲ ರಾಜಲೋಕಂಬೆರಸು ಮಹಾಮಾತ್ಯ ಶುಕನಾಸನರಮನೆಗೆ ವಂದು

ತಂದೆಗೆ ತಾಯ್ಗೆ ಮಹೋತ್ಸವ
ದಿಂದಂ ಪೊಡಮಡುವ ತೆಱದೆ ಸಚಿವಂಗಂ ತ
ತ್ಸುಂದರಿ ಮನೋರಮೆಗಮಾ
ನಂದದೆ ಪೊಡಮಟ್ಟನಂದು ಚಂದ್ರಾಪೀಡಂ ೪೩

ವ॥ ಅಂತು ಪೊಡವಟ್ಟು ಪರಮಾಶೀರ್ವಾದಂಗಳನಾಂತು ತದನಂತರದೊಳ್ ಪೊಱ ಮಟ್ಟು ಬರ್ಪಾಗಳ್

ತನಗೆಂದು ಬೇಱೆ ಮುನ್ನಮೆ
ಜನಕಂ ಮಾಡಿಸಿದ ನೆಲೆಯ ಕರುಮಾಡಂ ಕಾಂ
ಚನಕಲಶತತಿಯಿನೆಸೆದುದು
ಕನಕಾದ್ರಿಯನಲ್ಲಿ ಕಡೆದು [ತಂದಿರಿ]ಸಿದವೋಲ್ ೪೪

ವ॥ ಅದಲ್ಲದೆಯುಮಾಬದ್ಧವಂದನಮಾಲಾಭಿರಂಜಿತಮುಮುದ್ಗತ ಸಿತಪತಾಕಾ ಸಹಸ್ರಸಂಕುಳಮುಮಭ್ಯಾಹತ ಮಂಗಳಪಟುಪಟಹರವಾಪೂರಿತಮುಂ ಉಪಪಾದಿತಾಶೇಷ ಗೃಹಪ್ರವೇಶಮಂಗಳಮುಮಪ್ಪ ನಿಜಮಂದಿರಮಂ ಪೊಕ್ಕು ನರೇಂದ್ರಚಕ್ರಮಂ ಯಥಾಕ್ರಮದಿಂ ಮನ್ನಿಸಿ ಮಜ್ಜನಭೋಜನಾದಿ ದಿವಸವ್ಯಾಪಾರಮಂ ತೀರ್ಚಿ

ನನ್ನೂ ರಾಣಿ ಕಣ್ಣು ತಣಿಯುವಂತೆ ನೋಡಿದಳು. ವ॥ ಬಳಿಕ ತಾಯಂದಿರನ್ನು ಕ್ರಮವರಿತು ನಮಸ್ಕರಿಸಿ, ಅರಮನೆಯಿಂದ ಹೊರಕ್ಕೆ ಬಂದು ಸಮಸ್ತ ಸಾಮಂತರಿಂದ ಕೂಡಿಕೊಂಡು ಮುಖ್ಯಮಂತ್ರಿಯಾದ ಶುಕನಾಸನ ಮಹಲಿಗೆ ಬಂದು, ೪೩. ಚಂದ್ರಾ ಪೀಡನು ತನ್ನ ತಾಯಿತಂದೆಗಳಿಗೆ ಹೇಗೆ ಸಂತೋಷದಿಂದ ನಮಸ್ಕರಿಸುತ್ತಾನೋ ಅದೇ ರೀತಿ ಮಂತ್ರಿಗೂ ಅವನ ಪತ್ನಿಯಾದ ಮನೋರಮೆಗೂ ಆನಂದದಿಂದ ನಮಸ್ಕರಿಸಿದನು. ವ॥ ಹಾಗೆ ನಮಸ್ಕರಿಸಿ ಅಮೋಘವಾದ ಆಶೀರ್ವಾದಗಳನ್ನು ಪಡೆದು ಹೊರಟುಬರು ತ್ತಿರಲಾಗಿ, ೪೪. ಮಹಾರಾಜನು ಮೊದಲೇ ಇವನ ವಾಸಕ್ಕೆಂದು ಹೊಸದಾಗಿ ಒಂದು ಉಪ್ಪರಿಗೆಮನೆಯನ್ನು ಕಟ್ಟಿಸಿದ್ದನು. ಅದು ಮೇರುಪರ್ವತವನ್ನೇ ಕಡೆದು ತಂದಿರಿಸಿರು ವಂತೆ ಚಿನ್ನದ ಕಲಶಗಳಿಂದ ಶೋಭಿಸುತ್ತಿತ್ತು. ವ॥ ಅಲ್ಲದೆ ಕಟ್ಟಿರುವ ತೋರಣದಿಂದ ರಮ್ಯವಾಗಿರುವ, ಎತ್ತಿಕಟ್ಟಿರುವ ಸಾವಿರಾರು ಬಿಳಿಯ ಬಾವುಟಗಳಿಂದ ನಿಬಿಡವಾಗಿರುವ, ಬಾರಿಸುತ್ತಿರುವ ಮಂಗಳಕರವಾದ ತಮಟೆಯ ದೊಡ್ಡ ಧ್ವನಿಯಿಂದ ತುಂಬಿಕೊಂಡಿರುವ, ಗೃಹಪ್ರವೇಶಕ್ಕೆ ಸಂಬಂಧಪಟ್ಟ ಶುಭಕಾರ್ಯಗಳನ್ನೆಲ್ಲಾ ಮಾಡಿ ಮುಗಿಸಿರುವ ತನ್ನ ವಾಸಭವನವನ್ನು ಸೇರಿ, ರಾಜರ ಸಮೂಹವನ್ನು ಕ್ರಮವರಿತು ಗೌರವಿಸಿ ಸ್ನಾನ,

ಭುವನತ್ರಯಮುಮಂ ಕೈಸಾ
ರ್ಗುವಿದಱಿನೆಂಬಂತೆ ತನ್ನ ಮಣಿಮಯಶಯ್ಯಾ
ಭವನಾಂತರಾಳದೊಳ್ ಕ
ಟ್ಟುವೇೞ್ದನಿಂದ್ರಾಯುಧಾಶ್ವಮಂ ನೃಪತನಯಂ ೪೫

ವ॥ ಅಂತು ತುರಗರತ್ನಮನೆ ನೋಡಿ ಪೊೞ್ತುಗಳೆಯುತ್ತಮಿರ್ಪುದುಂ

ದಿನಲಕ್ಷ್ಮೀಕಾಂತೆ ಮೆಯ್ಯುವ್ವಟಿದು ಗಗನರಂಗಾಗ್ರದಿಂ ವಾರುಣೀಸೇ
ವನೆಗೆಯ್ತರ್ಪಲ್ಲಿ ಕಾಲಿಂ ನವಮಣಿಮಯಮಂಜೀರಕಂ ನುಣ್ಚುತಂ ತೀ
ವಿ ನಿಜಪ್ರದ್ಯೋತದಿಂ ಪಶ್ಚಿಮಶಿಖರಿಶಿರೋಭಾಗದೊಳ್ ಬೀೞ್ದುದೆಂಬಂ
ತಿನಬಿಂಬಂ ರಂಜಿಸಿತ್ತಸ್ತಮಯಸಮಯದೊಳ್ ಮುಕ್ತಪಾದಾವಲಂಬಂ ೪೬

ಇನನ ರಥಚಕ್ರಮಾರ್ಗಮ
ನನುಸರಿಸಿ ಜಲಪ್ರವಾಹಮೇ ಪರಿದಪುದೆಂ
ಬಿನಮೆಸೆದತ್ತಪರದಿಶಾಂ
ಗನೆಯತ್ತಲ್ ರಾಗರುಚಿರ ದಿವಸಾಲೋಕಂ ೪೭

ಭೋಜನ ಮೊದಲಾದ ದಿನಚರಿ ಕೆಲಸವನ್ನೆಲ್ಲಾ ಮುಗಿಸಿದನು. ೪೫. 'ಇದೊಂದು ದೊರಕಿರುವುದರಿಂದ ಮೂರು ಲೋಕವನ್ನೂ ಕೈವಶಮಾಡಿಕೊಳ್ಳಬಹುದು' ಎಂಬಂತಿರುವ ಇಂದ್ರಾಯುಧವನ್ನು ತನ್ನ ರತ್ನಮಯವಾದ ಮಲಗುವ ಮನೆಯ ಒಳಗಡೆಯಲ್ಲೇ ಕಟ್ಟಿಹಾಕಬೇಕೆಂದು ಅಪ್ಪಣೆ ಮಾಡಿದನು. ವ॥ ಹೀಗೆ ಆ ಅಶ್ವರತ್ನವನ್ನೇ ನೋಡುತ್ತಾ ನೋಡುತ್ತಾ ಕಾಲವನ್ನು ಕಳೆಯುತ್ತಿರಲಾಗಿ, ೪೬. ಸಂಧ್ಯಾಕಾಲದಲ್ಲಿ ಸೂರ್ಯಮಂಡಲವು ಕಿರಣಗಳ ಸಂಪರ್ಕವನ್ನು ಕಳೆದುಕೊಂಡು ಕಳೆಗುಂದಿ ಕೆಳಗಿಳಿಯುತ್ತಿತ್ತು. ಆಗ ಅದು 'ದಿನಲಕ್ಷ್ಮಿ'ಎಂಬ ಮಹಿಳೆಯು ಯಾವ ಆಳುಕೂ ಇಲ್ಲದೆ ಆಕಾಶಪ್ರದೇಶದಿಂದ "ವಾರುಣೀ ಸೇವನೆಗಾಗಿ" (೧. ಪಶ್ಚಿಮದಿಕ್ಕನ್ನು ಸೇರುವುದಕ್ಕಾಗಿ, ೨. ಮದ್ಯಪಾನಕ್ಕಾಗಿ) ಬರುತ್ತಿರಲಾಗಿ ಅವಳ ಕಾಲಿನಿಂದ ಹೊಸದಾದ ಪದ್ಮರಾಗಮಣಿಯ ಕಾಲ್ಗಡಗವು ಜಾರಿ ತನ್ನೊಂದು ಪ್ರಭೆಯಿಂದ ಮಧ್ಯರಂಧ್ರವನ್ನು ಮುಚ್ಚಿ ಏಕಾಕಾರವಾಗಿ ಮುಳುಗುವ ಬೆಟ್ಟದ ಮೇಲುಭಾಗದಲ್ಲಿ ಬೀಳುತ್ತಿದೆಯೋ ಎಂಬಂತೆ ಕಾಣುತ್ತಿತ್ತು ! ೪೭. ಸೂರ್ಯನ ರಥಚಕ್ರದ ದಾರಿಯನ್ನು ಅನುಸರಿಸಿ ಜಲಪ್ರವಾಹವೇ ಹರಿಯುತ್ತಿದೆಯೋ ಎಂಬಂತೆ ಸಂಜೆಗೆಂಪಿನಿಂದ ಸುಂದರವಾದ ಹಗಲಿನ ಬೆಳಕು ಪಶ್ಚಿಮದಿಕ್ಕೆಂಬ ಹೆಂಗಸಿನ ಕಡೆಗೆ ಸಾಗಿಹೋಗು

ನಳಿನೀಪರಿಮಳ ಪರಿಚಿತ
ಲುಳಿತ ಭ್ರಮರಾಳಿ ಕಾಲಪಾಶಂಗಳವೋಲ್
ಬಳಸೆ ಕೊರಲಂ ರಥಾಂಗಂ
ಗಳನಗಲ್ದುವು ವಿರಹತಾಪವಿಪ್ಪಲಿತಂಗಳ್ ೪೮

ತೆಗೆದಂಬುಜಮಧುರಸಮಂ
ಪಗಲೆಲ್ಲಂ ಕರಪುಟಂಗಳಿಂ ಪೀರ್ದುದನಾ
ಗಗನಪಥಶ್ರಮದಿಂ ರವಿ
ಮಗುಟ್ಚಿದಂತಾಯ್ತು ವಿಸುಪ ಕೆಂಬಿಸಿಲುಗಳುಂ ೪೯

ರವಿಮಂಡಲಂ ಪ್ರತೀಚೀ
ಯುವತೀಕರ್ಣಾವತಂಸರಕ್ತೋತ್ಪಲದಂ
ತೆವೊಲಿರೆ ಚೆನ್ನೈದಿಲ್ಗೊಳ
ದಂತೆವೊಲಾಯ್ತು ಸಂಜೆಗೆಂಪಿನಿಂ ಗಗನತಳಂ ೫೦

ಇನನಿನಿಯನೆನಿಪನಗಲಲು
ಮನಿತಜಿಗೊಳಂ ಪುಗಿಸಿ ಮುಚ್ಚಿ ಮಧುಕರನೊಳ್ ಪ
ದ್ಮಿನಿ ನೆರೆದಳೆಂದೊಡೇಂ ಕಾ
ಮಿನಿಯೊಲವಂ ನಚ್ಚುವವನೆ ಗಾವಿಲನಲ್ತೇ ೫೧

ತ್ತಿತ್ತು. ೪೮. ಆ ಸಮಯದಲ್ಲಿ ತಾವರೆಯ ಸುವಾಸನೆಯ ಮೇಲಿರುವ ಅತ್ಯಧಿಕವಾದ ಲೋಭದಿಂದ ಮುತ್ತಿಕೊಂಡಿದ್ದ ದುಂಬಿಗಳ ಸಾಲು ಅದು ಮುಚ್ಚಿಕೊಂಡ ಮೇಲೆ ಚೆಲ್ಲಾಪಿಲ್ಲಿಯಾಗಿ ಚಕ್ರವಾಕದಂಪತಿಗಳ ಕೊರಳನ್ನು ಸುತ್ತುಗಟ್ಟಿದವು. ಆಗ ವಿರಹವ್ಯಥೆಯಿಂದ ಕಳವಳಗೊಂಡ ಅವು ಯಮಪಾಶದಿಂದ ಸೆಳೆಯಲ್ಪಟ್ಟಂತೆ ಒಂದಕ್ಕೊಂದು ಅಗಲಿ ಹೋದುವು. ಟಿ. ಸೂರ್ಯಾಸ್ತಮಯವಾದ ಕೂಡಲೆ ಚಕ್ರವಾಕಪಕ್ಷಿಗಳು ಪರಸ್ಪರ ಅಗಲಿ ವಿರಹವೇದನೆಯಿಂದ ಸಂತಾಪಗೊಳ್ಳುತ್ತವೆ. ೪೯. ಸೂರ್ಯನು ಹಗಲೆಲ್ಲ ಕಮಲದಲ್ಲಿರುವ ಹೂವಿನ ರಸವನ್ನು ತನ್ನ ಕಿರಣಗಳೆಂಬ ಕೈಬೊಗಸೆಯಿಂದ ತೆಗೆದು ತೆಗೆದು ಕುಡಿಯುತ್ತಿದ್ದನು. ಈಗ ದೀರ್ಘಪ್ರಯಾಣದ ಆಲಸಿಕೆಯಿಂದ ಹೊಟ್ಟೆ ಕೆಡಲು ಅವುಗಳನ್ನೆಲ್ಲ ಕಕ್ಕುತ್ತಿದ್ದಾನೆ ಎಂಬಂತೆ ಕೆಂಬಿಸಿಲು ಶೋಭಿಸುತ್ತಿತ್ತು. ೫೦. ಆಗ ಸೂರ್ಯಮಂಡಲವು, ಪಶ್ಚಿಮದಿಕ್ಕೆಂಬ ರಮಣಿಯು ಕಿವಿಯಲ್ಲಿ ಮುಡಿದುಕೊಂಡಿರುವ ಕೆಂದಾವರೆಯಂತೆ ಕಾಣುತ್ತಿತ್ತು. ಸಂಜೆಗೆಂಪಿನಿಂದ ಆಕಾಶಪ್ರದೇಶವು ಕೆಂದಾವರೆಯ ಕೊಳದಂತೆ ಕಾಣುತ್ತಿತ್ತು. ೫೧. ಪದ್ಮಿನಿ(ತಾವರೆ)ಗೆ ಪ್ರೀತಿಪಾತ್ರನಾದ ಸೂರ್ಯನು ಅಗಲಿಹೋದನು. ಕೂಡಲೆ ಅವಳು ಮಧುಕರ(ದುಂಬಿ)ನನ್ನು ತನ್ನೊಳಗೆ ಸೇರಿಸಿಕೊಂಡು ಮುಚ್ಚಿ ಅವನೊಂದಿಗೆ ಬೆರೆತುಕೊಂಡುಬಿಟ್ಟಳು. ಕಾಮಿನಿಯರ ಪ್ರೀತಿಯನ್ನು ನಂಬುವವನು ಶುದ್ಧ ಮೂರ್ಖನಲ್ಲವೆ ? ಟಿ. ಸೂರ್ಯನು ಮುಳುಗಿದ ಕೂಡಲೆ ತಾವರೆ ಮುಚ್ಚಿಕೊಳ್ಳುತ್ತದೆ. ಆಗ ಬಂಡನ್ನು ಕುಡಿಯಲು ಬಂದಿದ್ದ ದುಂಬಿಯೂ ಒಳಗೆ

ವ॥ ತದನಂತರಂ ಕೃಷ್ಣಾಗರುಪಂಕಪತ್ರಲತೆಗಳಂತೆ ತಿಮಿರರೇಖೆಗಳ್ ನಿಮಿರೆಯುಂ ಪ್ರಾಸಾದಲಕ್ಷ್ಮಿಯ ಕರ್ಣೋತ್ಪಲಂಗಳಂತೆ ವಾತಾಯನವಿವರಂಗಳೊಳ್ ಪಾರಾವತಂಗಳೆಸೆಯೆಯುಂ ಚಂಪಕದೊಳ್ಮಾರಂಗಳಂತೆ ದೀಪಿಕಾಸಹಸ್ರಂಗಳ್ ಮಣಿಬದ್ಧಭೂಮಿಭಾಗಂಗಳೊಳ್ ಮಾರ್ಪೊಳೆಯೆಯುಂ ರವಿವಿರಹಾರ್ತ ನಳಿನೀವಿನೋದನಾಗತ ಬಾಲಾತಪಂಗಳಂತೆ ದೀಪಿಕಾಲೋಕಂಗಳ್ ಭವನದೀರ್ಘಿಕೆಗಳೊಳ್ ಪ್ರಜ್ವಳಿಸೆಯುಂ ಯಾಮಿಕನಂತಾರೋಪಿತಚಾಪನಾಗಿ ಕುಸುಮಶರನಂತಃಪುರಮಂ ತೊಳಲೆಯುಂ ನವಪಲ್ಲವಂಗಳಂತೆ ಸರಾಗಂಗಳಾದ ದೂತೀವಚನಂಗಳ್ ಕಾಂತಾಜನಕ್ಕೆ ಕರ್ಣಪೂರಂಗಳಾಗೆಯುಂ ಆ ನಿಶಾಸಮಯದೊಳ್ ನೃಪರೂಪಚಂದ್ರಂ ಸಂಧ್ಯಾಸಮಯೋಚಿತನಿಯಮಮುಮಂ ನಿರ್ವರ್ತಿಸಿ ಮಣಿಮಯಮಂಟಪದೊಳ್ ವೈಶಂಪಾಯನದ್ವಿತೀಯನೋಲಗದೊಳಿರೆ

ಗುಣನಿಧಿಯಂ ನೋಡಲ್ಕಾ
ಫಣೀಂದ್ರನುತ್ಕಂಠನಾಗೆ ತಲೆದೋರ್ಪ ಫಣಾ
ಮಣಿರುಚಿಗಳಂತೆ ಪೊಳೆದುವು
ಮಣಿಭೂಮಿಯೊಳೆಸೆವ ದೀಪಿಕಾಪ್ರಕರಂಗಳ್ ೫೨

ಸೇರಿಬಿಡುವುದುಂಟು. ಇಲ್ಲಿ ಪದ್ಮಿನಿಯನ್ನು ಕಾಮಿನಿಯೆಂದೂ ಸೂರ್ಯನನ್ನು ನಿಜವಾದ ನಲ್ಲನೆಂದೂ ದುಂಬಿಯನ್ನು ವಿಟನೆಂದೂ ಚಿತ್ರಿಸಿದ್ದಾನೆ. ವ॥ ಬಳಿಕ ಕಾಲಾಗರುದ್ರವದಿಂದ ಬರೆಯಲ್ಪಟ್ಟಿರುವ ಪತ್ರರಚನೆಯಂತಿರುವ ಅಂಧಕಾರ ಪರಂಪರೆಗಳು ಹರಡುತ್ತಿರಲಾಗಿ, ಅರಮನೆಯ ಗೃಹದೇವತೆಯಾದ ಲಕ್ಷ್ಮಿಯ ಕಿವಿಯಲ್ಲಿರುವ ಕನ್ನೈದಿಲೆಗಳಂತೆ ಕಿಟಕಿ ಗೂಡುಗಳಲ್ಲಿ ಪಾರಿವಾಳಗಳು ಶೋಭಿಸುತ್ತಿರಲಾಗಿ, ಸಂಪಿಗೆಹೂವಿನ ಒಳ್ಳೆಯ ಮಾಲೆಯಂತೆ ಸಾವಿರಾರು ದೀಪಗಳು ರತ್ನದ ನೆಲೆಗಟ್ಟುಗಳಲ್ಲಿ ಪ್ರತಿಬಿಂಬಿಸಿರಲಾಗಿ, ಸೂರ್ಯನ ಅಗಲುವಿಕೆಯಿಂದ ವೇದನೆಯನ್ನು ಅನುಭವಿಸುವ ನಳಿನಿಯ (ತಾವರೆಯ) ಬೇಸರವನ್ನು ಕಳೆಯುವುದಕ್ಕಾಗಿ ಬಂದಿರುವ ಎಳೆಬಿಸಿಲುಗಳಂತೆ ದೀಪಗಳ ಬೆಳಕು ಅರಮನೆಯ ಸರೋವರಗಳಲ್ಲಿ ಬೆಳಗುತ್ತಿರಲಾಗಿ, ಕಾವಲುಗಾರನಂತೆ ಮನ್ಮಥನು ಹೆದೆಯೇರಿಸಿದ ಬಿಲ್ಲನ್ನು ಹಿಡಿದುಕೊಂಡು ರಾಣಿವಾಸಕ್ಕೆ ಹೋಗಿ ಸುತ್ತಾಡುತ್ತಿರಲಾಗಿ, ಹೊಸಚಿಗುರಿನಂತೆ "ಸರಾಗಂಗಳಾದ" (೧. ಕಾಮೋದ್ದೀಪಕವಾದ, ೨. ಕೆಂಪಿನಿಂದ ಕೂಡಿರುವ) ನಲ್ಲನ ಕಡೆಯಿಂದ ಬಂದ ದೂತಿಯ ಮಾತುಗಳು ನಲ್ಲೆಯರಿಗೆ ಕರ್ಣಾಭರಣಗಳಂತೆ ಸೊಗಸನ್ನುಂಟುಮಾಡುತ್ತಿರಲಾಗಿ, ಆ ರಾತ್ರಿಯ ವೇಳೆಯಲ್ಲಿ ಚಂದ್ರಾವತಾರನಾದ ರಾಜಪುತ್ರನು ಸಂಧ್ಯಾಕಾಲಕ್ಕೆ ಉಚಿತವಾದ ನಿಯಮಗಳನ್ನು ಮುಗಿಸಿ ರತ್ನಮಂಟಪದಲ್ಲಿ ವೈಶಂಪಾಯನನ ಜೊತೆಯಲ್ಲಿ ಮಾತುಕತೆ ನಡೆಸುತ್ತಿರಲಾಗಿ, ೫೨. ಗುಣನಿಧಿಯಾದ ಈ ರಾಜಕುಮಾರನನ್ನು ನೋಡುವುದಕ್ಕಾಗಿ ಆತ್ಯಾಸೆಪಟ್ಟು ಆದಿಶೇಷನು ಪಾತಾಳಲೋಕದಿಂದ ಮೇಲಕ್ಕೆ ತಲೆನೀಡಲಾಗಿ

ವ॥ ಅಂತಾ ಸಮಯದೊಳ್

ಉದಿತೇಂದುಪ್ರಭೆ ರಾಹುವಿಂಗಗಿದು ಕಾಂತಾರೂಪಮಂ ತಾಳ್ದಿ ಬಂ
ದುದೊ ಮೇಣ್ ರಾಜಕುಲಾಧಿದೇವತೆಯೆ ಬಂದಳ್ ಮೂರ್ತಿಗೊಂಡೆಂಬಿನಂ
ಸುದತೀರತ್ನಮದೊರ್ವಳೆಟ್ಟಿರುತಮಿರ್ದಳ್ ಸುತ್ತಲುಂ ನಾಡೆ ಪೊ
ಣ್ಮಿದ ಲಾವಣ್ಯದೆ ಕಾಂಚನಾಕರರಜೋವಿಸ್ತಾರಮಂ ಮಾಳ್ಪವೋಲ್ ೫೩

ಲಲಿತ ರಣನ್ಮಣಿನೂಪುರ
ವಿಲಸಿತ ಪದಯುಗಳದಿಂದೆ ಸುಂದರಿ ಕೂಜ
ತ್ಕಲಹಂಸಾಕುಲ ಕಮಲಾ
ಕಲಿತ ಸರೋಜಿನಿಯ ತೆಱದಿನೆಟ್ಟಿರುತಿರ್ದಳ್ ೫೪

ಲಲಿತಾಂಗಿ ಮೆಲ್ಲಮೆಲ್ಲನೆ
ನಳಿತೋಳಂ ಬೀಸೆ ಮಿಸುಗುವಸಿಯುಗುರ್ಗಳ ನು
ಣ್ಬೆಳಗು ನಿಮಿರ್ದೆಸೆದುವೊಗೆದ
ಗ್ಗಲಿಸುವ ಲಾವಣ್ಯರಸದ ಧಾರಾವಳಿವೋಲ್ ೫೫

ಮಿಸುಗುವ ಬೆಳ್ದಿಂಗಳ್ ದೆಸೆ
ದೆಸೆಯೊಳ್ ಪಸರಿಸುವ ತೆಱದೆ ಹಾರಮರೀಚಿ
ಪ್ರಸರಂ ಬಳಸುತ್ತಿರೆ ಬ
ರ್ಪಸಿಯಳ್ ಪಾಲ್ಗಡಲೊಳೆಸೆವ ಸಿರಿಯಂ ಪೋಲ್ತಳ್ ೫೬

ಅವನ ಸಾವಿರ ಹೆಡೆಗಳಲ್ಲಿರುವ ರತ್ನಗಳ ಕಾಂತಿಯಂತೆ ಮಣಿಮಯವಾದ ನೆಲೆಗಟ್ಟಿನಲ್ಲಿ ಪ್ರತಿಬಿಂಬಿಸಿರುವ ದೀಪಗಳು ಹೊಳೆಯುತ್ತಿದ್ದುವು. ವ॥ ಆ ಸಮಯದಲ್ಲಿ ೫೩. ಬಾಲಚಂದ್ರನ ಕಳೆಯು ರಾಹುವಿಗೆ ಹೆದರಿಕೊಂಡು ಸ್ತ್ರೀರೂಪವನ್ನು ತಾಳಿ ಬಂದಿರುವಂತೆಯೂ ಅರಮನೆಯ ಅಧಿದೇವತೆಯು ಮೂರ್ತೀಭವಿಸಿ ಬಂದಿರುವಂತೆಯೂ ಶೋಭಿಸುವ ಒಬ್ಬ ಶ್ರೇಷ್ಠ ತರುಣಿಯು ಅವನ ಸಮೀಪಕ್ಕೆ ಬರುತ್ತಿದ್ದಳು. ಸುತ್ತಲೂ ಹೊಮ್ಮುತ್ತಿರುವ ಅವಳ ಲಾವಣ್ಯದಿಂದ ಚಿನ್ನದ ಗಣಿಯ ಧೂಳಿ ಎಲ್ಲೆಲ್ಲೂ ಹರಡುತ್ತಿರುವಂತೆ ಕಾಣುತ್ತಿತ್ತು. ೫೪. ಇಂಪಾಗಿ ದನಿಮಾಡುತ್ತಿರುವ ರತ್ನಖಚಿತವಾದ ಎರಡು ಕಾಲ್ಗಡಗಗಳನ್ನು ಹಾಕಿಕೊಂಡು ಬರುತ್ತಿರುವ ಆ ಚೆಲುವೆಯು ಕೂಗುತ್ತಿರುವ ರಾಜಹಂಸಗಳಿಂದ ತುಂಬಿಕೊಂಡಿರುವ ತಾವರೆಗಳುಳ್ಳ ತಾವರೆಬಳ್ಳಿಯಂತೆ ಶೋಭಿಸುತ್ತಿದ್ದಳು. ೫೫. ಆ ಕೋಮಲಾಂಗಿಯು ಬರುತ್ತಿರುವಾಗ ಅವಳ ಕೋಮಲವಾದ ತೋಳುಗಳು ಮೆಲ್ಲಮೆಲ್ಲನೆ ಹಿಂದಕ್ಕೂ ಮುಂದಕ್ಕೂ ಚಲಿಸುತ್ತಿದ್ದುವು. ಆಗ ತೆಳುವಾದ ಉಗುರುಗಳ ತಂಬೆಳಗು ಹರಡುತ್ತಿತ್ತು. ಅದು ಹೆಚ್ಚುತ್ತಿರುವ ಸೌಂದರ್ಯರಸದ ಧಾರೆಗಳ ಪರಂಪರೆಯಂತೆ ಶೋಭಿಸುತ್ತಿತ್ತು. ೫೬. ಪ್ರಕಾಶಿಸುವ ಬೆಳ್ದಿಂಗಳು ದಿಕ್ಕುದಿಕ್ಕಿಗೂ ಹರಡುವ ರೀತಿಯಲ್ಲಿ ಮುತ್ತಿನಸರದ ಕಾಂತಿಸಮೂಹವು ಅವಳ ಸುತ್ತಲೂ ವ್ಯಾಪಿಸಿರಲು ಬರುತ್ತಿರುವ ಆ ಸುಂದರಿಯು ಕ್ಷೀರಸಮುದ್ರದಲ್ಲಿ ಶೋಭಿ

ಗಿರಿರಾಜಂ ಗೌರಿಯನಾ
ಹರಂಗೆ ಶುಶ್ರೂಷೆಗೆಯಿಸಲೊಡಗೊಂಡೊಯ್ವಂ
ತಿರೆ ಸಖಿಯ ಪೆಱಗೆ ಕಿಱಿದಂ
ತರದೊಳ್ ಕೈಲಾಸನೆಂಬ ಕಂಚುಕಿ ಬಂದಂ ೫೭

ವ॥ ಅಂತಾ ಕಾಂತೆವೆರಸು ಕಂಚುಕಿ ಬಂದು ಪೊಡವಟ್ಟು ಕೈಗಳಂ ಮುಗಿದು ದೇವಾ ಬಿನ್ನಪಮೇದಿಂತೆಂದಂ

ಮುನಿಸಿಂ ತ್ವಜ್ಜನಕಂ ಕುಳೂತಪುರಮಂ ನಿರ್ಮೂಲಿಪಂದಾ ಕುಳೂ
ತನರೇಂದ್ರಂ ಭಯದಿಂ ಕಳತ್ರಸಹಿತಂ ಪೋಗಲ್ ಕುಳೂತೇಶನಂ
ದನೆಯಂ ಮತ್ತಮನೇಕರಂ ಸೆಱೆಗೆ ತಂದಿಟ್ಟಲ್ಲಿ ತದ್ರಾಜನಂ
ದನೆಯಂ ಕನ್ನೆಯನಟ್ಕಱಿಂ ನಡಪಿದಳ್ ಮಾದೇವಿ ಕಾರುಣ್ಯದಿಂ ೫೮

ವ॥ ಅಂತು ನಡಪುತ್ತಮಿರ್ದು

ಪಿರಿದುಂ ಮನ್ನಿಸಿ ನಡಪು
ತ್ತಿರೆ ಪರಮರಹಸ್ಯಭೂಮಿಯೆನಿಸಿದಳಿಂತೀ
ಪರಿಚಾರಿಕೆ ತನಗೆಂದಾ
ದರದಿಂ ನಿಜಜನನಿ ಬೆಸಸಿಯಟ್ಟಿದಳೀಗಳ್ ೫೯

ಸುವ ಲಕ್ಷ್ಮಿಯಂತೆ ಕಾಣುತ್ತಿದ್ದಳು. ೫೭. ಹಿಮವಂತನು ತನ್ನ ಮಗಳಾದ ಗೌರಿಯನ್ನು ಪರಮೇಶ್ವರನ ಸೇವೆಗಾಗಿ ಕರೆದುಕೊಂಡು ಬರುತ್ತಿರುವಂತೆ ಆ ಹುಡುಗಿಯ ಹಿಂದೆ ಸ್ವಲ್ಪ ದೂರದಲ್ಲಿ ಕೈಲಾಸನೆಂಬ ಕಂಚುಕಿ ಬರುತ್ತಿದ್ದನು. ವ॥ ಹೀಗೆ ಆ ಕನ್ನಿಕೆಯೊಂದಿಗೆ ಕಂಚುಕಿಯು ಬಂದು ನಮಸ್ಕರಿಸಿ ಕೈಮುಗಿದು "ಬುದ್ಧೀ ! ಅರಿಕೆ" ಎಂದು ಹೀಗೆ ಹೇಳಿದನು. ೫೮. "ನಿಮ್ಮ ತಂದೆಯವರು ಹಿಂದೆ ಕುಳೂತದೇಶದ ರಾಜನು ಮಾಡಿದ ಅಪರಾಧಕ್ಕಾಗಿ ಅವನ ಮೇಲೆ ಕೋಪಗೊಂಡು ಅವನ ರಾಜಧಾನಿಯನ್ನು ಜಯಿಸಬೇಕೆಂದು ದಂಡೆತ್ತಿಹೋಗಿ ಅವನನ್ನು ಸೋಲಿಸಿದರು. ಆಗ ಅವನು ಭಯದಿಂದ ರಾಣೀವಾಸದ ಸಮೇತ ಓಡಿಹೋದನು. ಆಗ ನಮ್ಮವರು ಅವನ ಮಗಳನ್ನೂ ಮತ್ತೆ ಕೆಲವರೊಂದಿಗೆ ಸೆರೆಹಿಡಿದುಕೊಂಡು ಬಂದರು. ಆಗ ನಮ್ಮ ಮಹಾರಾಣಿಯವರು ಆ ರಾಜನ ಮಗಳನ್ನು ನೋಡಿ ಅಂತಃಪುರದಲ್ಲಿಟ್ಟುಕೊಂಡು ಬಹಳ ಪ್ರೀತಿಯಿಂದ ಸಾಕುತ್ತಿದ್ದಾರೆ. ವ॥ ಹಾಗೆ ಕಾಪಾಡುತ್ತಿದ್ದು ೫೯. ಬಹಳ ಮಮತೆಯಿಂದ ಸಾಕುತ್ತಿದ್ದು ಈಗ ನಿಮಗೆ ಇವಳು ಬಹಳ ನಂಬಿಕೆಗೆ ಪಾತ್ರಳಾದ ಪರಿಚಾರಿಕೆಯಾಗುತ್ತಾಳೆಂದು ಆದರದಿಂದ ನಿಮ್ಮ ಹತ್ತಿರಕ್ಕೆ ಕಳುಹಿಸಿಕೊಟ್ಟಿದ್ದಾರೆ.

ಧರೆಯೊಳ್ ನೆಗಟ್ದ ಕುಳೂತೇ
ಶ್ವರನ ಮಗಳ್ ಪತ್ರಲೇಖೆಯೆಂಬುದು ಪೆಸರಿಂ
ಪರಿಜನ ಸಾಮಾನ್ಯದೆ ನೀಂ
ಪರೀಕ್ಷಿಸಲ್ವೇಡ ಸತಿಯನೀ ಗುಣವತಿಯಂ                                                    ೬೦

ವ॥ ಎಂದು ಪೊಡವಡಿಸೆ ಪತ್ರಲೇಖೆಯು ವಿಚಿತ್ರರೂಪನಾ ಕ್ಷತ್ರಿಯಪುತ್ರಂ ವಿಸ್ಮಯಾಕ್ಷಿಪ್ತಚಿತ್ತನಾಗಿ ನೋಡುತಿರ್ದು ದೇವಿಯರ್ ಬೆಸಸಿದಂತೆ ನೆಗಟ್ವೆನೆಂದು ಕಂಚುಕಿಯಂ ಕಟಿಪಲಿತ್ತ ಪತ್ರಲೇಖೆಯುಭಿನವ ಸಮುಪಜಾತ ಸೇವಾರಸದಿನೊಂದು ಪೊತ್ತಗಲದೋಲಗಿಸುತ್ತಿರಲಾಕೆಯ ಶೀಲಾಚಾರವಿನಯಮಂ ಕಂಡು ತಾಂಬೂಲಕರಂಕವಾಹಿನಿಯಂ ಮಾಡಿ ನೃಪರೂಪಚಂದ್ರಂ ನಿಜಜನನೀಜನಕರನೋಲಗಿಸುತ್ತಿರ್ದನನ್ನೆಗಮತ್ತಂ

ಯುವರಾಜಪಟ್ಟಬಂಧೋ
ತ್ಸವಮಂ ಮಾಡಲ್ಕೆವೇಟ್ಕುಮಿನ್ನಿರದೆ ವಿಲಾ
ಸವತೀಸುತಂಗೆನುತ್ತಂ
ದವನೀಶಂ ಸಚಿವನೊಳ್ ಸಮಾಲೋಚಿಸಿದಂ                                                    ೬೧

ವ॥ ಅಂತಾ ಮಹಾಮಾತ್ಯನೊಳ್ ಸಮಾಲೋಚಿಸಿ ತತ್ಕಾರ್ಯನಿಶ್ಚಯಂಗೆಯ್ದು ಗೃಹಮಹತ್ತರರಂ ಕರೆದಲ್ಲಿಗೆತಕ್ಕ ಮಂಗಳೋಪಕರಣಂಗಳಂ ಸಮಕಟ್ಟವೊಂದು ಬೆಸಸಿದಾಗಳವ

೬೦. ಇವಳು ಭೂಮಿಯಲ್ಲಿ ಹೆಸರುವಾಸಿಯಾದ ಕುಳೂತೇಶ್ವರನ ಮಗಳು. ಇವಳ ಹೆಸರು ಪತ್ರಲೇಖೆ. ಬಹಳ ಶೀಲವಂತೆ. ಇವಳನ್ನು ನಾಡಾಡಿ ಪರಿಚಾರಿಕೆಯಂತೆ ನೋಡಿಕೊಳ್ಳಬೇಡ." ವ॥ ಹೀಗೆ ಹೇಳಿ ನಮಸ್ಕಾರಮಾಡಿಸಲಾಗಿ ಪತ್ರಲೇಖೆಯು ಬೆರಗನ್ನುಂಟುಮಾಡುವ ಸೌಂದರ್ಯವನ್ನು ಆ ಕ್ಷತ್ರಿಯಕುಮಾರನು ಆಶ್ಚರ್ಯದಿಂದ ಆಕರ್ಷಿಸಲ್ಪಟ್ಟ ಮನಸ್ಸುಳ್ಳವನಾಗಿ ನೋಡುತ್ತಿದ್ದು "ಮಹಾರಾಣಿಯವರು ಅಪ್ಪಣೆ ಮಾಡಿದಂತೆಯೇ ನಡೆದುಕೊಳ್ಳುತ್ತೇನೆಂದು" ಹೇಳಿ ಕಂಚುಕಿಯನ್ನು ಕಳುಹಿಸಿದನು. ಈ ಕಡೆ ಪತ್ರಲೇಖೆಯು ಹೊಸದಾಗಿ ಒದಗಿದ ಈ ಸೇವೆಯನ್ನು ಬಹಳ ಒಲುಮೆಯಿಂದ ಕೈಗೊಂಡು ಒಂದು ಕ್ಷಣವೂ ರಾಜಕುಮಾರನನ್ನು ಬಿಟ್ಟಿರದೆ ಓಲೈಸುತ್ತಿದ್ದಳು, ರಾಜಕುಮಾರನು ಆಕೆಯ ಗುಣ, ಆಚಾರ, ವಿನಯವೇ ಮೊದಲಾದ ಸದ್ಗುಣಗಳಿಗೆ ಮಾರುಹೋಗಿ ಅವಳನ್ನು ತನ್ನ ವೀಳೆಯದ ಸಂಪುಟವನ್ನು ಹಿಡಿಯುವ ಊಳಿಗದವಳನ್ನಾಗಿ ಮಾಡಿಕೊಂಡು ತನ್ನ ಮಾತಾಪಿತೃಗಳ ಸೇವೆಯಲ್ಲಿ ನಿರತನಾಗಿದ್ದನು. ೬೧. ಹೀಗಿರಲು ಚಕ್ರವರ್ತಿಯು ತನ್ನ ಪಟ್ಟದ ರಾಣಿಯ ಪುತ್ರನಾದ ಇವನಿಗೆ ಇನ್ನು ವಿಳಂಬಮಾಡದೆ ಯುವರಾಜಪಟ್ಟಾಭಿಷೇಕವನ್ನು ಮಾಡಿಬಿಡಬೇಕೆಂದು ಮಂತ್ರಿಯೊಂದಿಗೆ ಆಲೋಚಿಸಿದನು. ವ॥ ಹೀಗೆ ಮುಖ್ಯಮಂತ್ರಿಯೊಂದಿಗೆ ಮಂತ್ರಾಲೋಚನೆಯನ್ನು ಮಾಡಿ ಆ ಕಾರ್ಯವನ್ನು ನಿಶ್ಚಯಿಸಿ, ಮನೆವಾರ್ತೆಗಾರರನ್ನು ಕರೆದು

ರಂತೆಗೆಯ್ವೆವೆಂದವರ್ಗಳ್ ನೆಗೞುತ್ತಮಿರ್ದರ್ ಇತ್ತ ಯುವರಾಜಾಭಿಷೇಕಂ ಸಮೀಪಮೆನಲ್ಕೆಂದಿ ನಂದದಿನೋಲಗಿಸಲೆಂದು ಬಂದ ವಿನಯರತ್ನಾಕರನನಟ್ಟಕ್ಕಱಿಂ ತೆಗೆದು ತಟ್ಟೆಕ್ಕೈಸಿ ಕೆಲಕ್ಕೆ ಕರೆದು ಕುಳ್ಳಿರಿಸಿ

ವಿನಯಾರ್ಣವನಂ ಮಂದಾ
ಕಿನಿ ಕೂಡಿದುದೆನಿಸಿ ವಿಶದದಶನದ್ಯುತಿ ತ
ಳ್ತನವರತಂ ಬೆಳಗಲ್ ಮಂ
ತ್ರನಿಧಾನಂ ನುಡಿದನಾ ನರೇಂದ್ರಾತ್ಮಜನಂ ೬೨

ವ॥ ಅದೆಂತೆನೆ ವಿದಿತವೇದಿತವ್ಯನುಮಧೀತ ಸಕಲ ಶಾಸ್ತ್ರನುಮೆನಿಪ್ಪ ನಿನಗುಪದೇಶಿಸ ಲ್ವೇೞ್ಪುದೊಂದುಮಿಲ್ಲದೊಡಂ

ಕೆಯ್ದೀವಿಗೆಗಳ ಬೆಳಗಿಂ
ಕಾಯ್ದುಸೆವ ಸಹಸ್ರಕಿರಣನಿಂ ಭೇದಿಸಲೇ
ಗೆಯ್ದುಂ ಬಾರದು ದಲ್ ತವೆ
ಮಾಯ್ದೀ ಜವ್ವನದೊಳೊಡಲೊಳಿಡಿದಿರ್ದ ತಮಂ ೬೩

ಸಿರಿಯೆಂಬ ಸೊರ್ಕು ತಿಳಿಯದು
ಪರಿಣಾಮದಿನಂಜನಂಗಳಿಂದಮದೆಂತುಂ
ಪರಿಹರಿಸಲರಿದೆನಿಪ್ಪುದು
ಪರಮೈಶ್ವರ್ಯಪ್ರಭೂತ ತಿಮಿರಾಂಧತ್ವಂ ೬೪

ಪಟ್ಟಾಭಿಷೇಕಕ್ಕೆ ಬೇಕಾದ ಮಂಗಳಪದಾರ್ಥಗಳನ್ನೆಲ್ಲಾ ಅಣಿಮಾಡಬೇಕೆಂದು ಆಜ್ಞಾಪಿಸಿದನು. ಅವರು "ಅಪ್ಪಣೆ" ಎಂದು ಬಿನ್ನವಿಸಿ ಹಾಗೆಯೆ ಏರ್ಪಾಡು ಮಾಡುತ್ತಿದ್ದರು. ಹೀಗೆ ಚಂದ್ರಾಪೀಡನ ಯುವರಾಜಪಟ್ಟಾಭಿಷೇಕದ ಶುಭದಿವಸವು ಸಮೀಪಿಸುತ್ತಿತ್ತು. ಒಂದುದಿನ ಎಂದಿನಂತೆ ಭೇಟಿಗಾಗಿ ಬಂದ ವಿನಯಗುಣಕ್ಕೆ ಸಮುದ್ರಪ್ರಾಯನಾದ ಚಂದ್ರಾಪೀಡನನ್ನು ಮಂತ್ರಿಯಾದ ಶುಕನಾಸನು ಪ್ರೀತಿಯಿಂದ ಬಾಚಿ ತಬ್ಬಿಕೊಂಡು ಹತ್ತಿರಕ್ಕೆ ಕರೆದು ಕುಳ್ಳಿರಿಸಿ, ೬೨. ವಿನಯಗುಣಕ್ಕೆ ಸಮುದ್ರವಾದ ಈ ರಾಜಕುಮಾರನನ್ನು ಗಂಗಾನದಿಯು ಸಂಗಮಿಸುತ್ತಿದೆಯೋ ಎಂಬಂತೆ ಶುಭ್ರವಾದ ಹಲ್ಲುಗಳ ಕಾಂತಿಯು ಹೊರಹೊಮ್ಮಿ ಒಂದೇಸಮನೆ ಪ್ರಕಾಶಿಸುತ್ತಿರಲು ರಾಜನೀತಿಜ್ಞನಾದ ಮುಖ್ಯಮಂತ್ರಿಯು ರಾಜಪುತ್ರನನ್ನು ಕುರಿತು ಹೀಗೆ ಹೇಳಲಾರಂಭಿಸಿದನು. ವ॥ "ಅಪ್ಪ ! ಚಂದ್ರಾಪೀಡ ! ನೀನು ತಿಳಿದುಕೊಳ್ಳಬೇಕಾದುದನ್ನೆಲ್ಲ ಚೆನ್ನಾಗಿ ತಿಳಿದುಕೊಂಡಿರುವೆ. ನಿನಗೆ ಉಪದೇಶಿಬೇಕಾದುದೇನೂ ಇಲ್ಲ. ಆದರೂ ೬೩. ಯೌವನ ಕಾಲದಲ್ಲಿ ಒಂದು ಬಗೆಯ ಕೆಟ್ಟ ಕತ್ತಲೆಯು ಶರೀರದೊಳಗೆಲ್ಲ ತುಂಬಿಕೊಳ್ಳುತ್ತದೆ. ಅದನ್ನು ಪರಿಹರಿಸಲು ಕೈದೀವಿಗೆಗಳ ಬೆಳಕಿನಿಂದಾಗಲಿ ಉರಿಯುತ್ತಿರುವ ಸೂರ್ಯನಿಂದಾಗಲಿ ಏನು ಮಾಡಿದರೂ ಖಂಡಿತವಾಗಿಯೂ ಆಗುವುದಿಲ್ಲ ! ಟಿ. ಇಲ್ಲಿ ಕತ್ತಲೆಯೆಂದರೆ ಅಜ್ಞಾನ. ೬೪. ಐಶ್ವರ್ಯಮದವು ಮನುಷ್ಯನ ಕೊನೆಯ ಗಳಿಗೆಯವ

ಶಿಶಿರೋಪಚಾರದಿಂದಂ
ವಶಮಲ್ಲದು ತೀವ್ರಮಪ್ಪ ದಾಹಜ್ವರಮಂ
ಕುಶಸಾಧ್ಯಮಲ್ಲದಿಂದ್ರಿಯ
ದಿಶಾಗಜಪ್ರಕರಮೆಂದುಮವಿನಯ ನಿಯತಂ ೬೫

ವಿಷಮವಿಷಂಗಳ್ಗಂ ಪ್ರತಿ
ವಿಷಮೆನಿಸುವ ಮಂತ್ರನಿಚಯದೊಳವಾರ್ಗೆಂದುಂ
ವಿಷಯುವೆ ಮಾಣಿಸಲಿಂತೀ
ವಿಷಯ ವಿಷಾಸ್ವಾದಮೋಹಮಂ ನಿರ್ವಿಷಯಂ ೬೬

ಅರಸಾಗಲೊಡಂ ಮೆಯ್ಮಱೆ
ದು ರಾಜ್ಯಸುಖಸನ್ನಿಪಾತನಿದ್ರೆಯ ಕೆಯ್ಕೊಂ
ಡಿರುಳುಂ ಪಗಲುಂ ಜಾಡ್ಯದೆ
ಮರವಟ್ಟೆಚ್ಚಱುವರಲ್ಲವೇತುಂ ಭೂಪರ್ ೬೭

ವ॥ ಅದಲ್ಲದೆಯುಂ

ಪಿತೃಗಳುಪಾರ್ಜಿಸಿಟ್ಟ ಸಿರಿ ಜವ್ವನದೇಟ್ಗೆ ಪೆಱಂಗಿದಿಲ್ಲೆನಿ
ಪ್ಪತಿಶಯರೂಪು ಶಕ್ತಿಗಳಿವಲ್ಲವೆ ಹಾನಿಯ ಬಳ್ಳಿವಳ್ಳಿ ನಿ
ಶ್ಚಿತಮಿವನೊಂದನೊಂದನೆ ವಿಚಾರಿಪೊಡುಳ್ಳ ವಿನೀತಿಗೆಲ್ಲಮಾ
ಯತನಮೆನಿಪ್ಪುದೋರ್ವನೊಳಿವೆಲ್ಲಮಿರಲ್ ಬಟಿಕೇನನೆಂಬುದೋ ೬೮

ರೆಗೂ ಇಳಿಯುವುದಿಲ್ಲ ಮತ್ತು ಸಿರಿಯಿಂದಾಗಿ ಕಣ್ಣಿಗೆ ಬರುವ ಈ ಹೊಸ ಪರೆಯ ಕತ್ತಲೆಯು ಯಾವ ಅಂಜನಚಿಕಿತ್ಸೆಯಿಂದಲೂ ನಿವಾರಣೆಯಾಗುವುದಿಲ್ಲ. ೬೫. ಸಿರಿತನದಿಂದ ಬರುವ ಭಯಂಕರವಾದ ದರ್ಪವೆಂಬ ದಾಹಜ್ವರವು ಯಾವ ಶೈತ್ಯೋಪಚಾರದಿಂದಲೂ ಹತೋಟಿಗೆ ಬರುವುದಿಲ್ಲ, ಅಲ್ಲದೆ ಸ್ವೇಚ್ಛಾಚಾರದಿಂದ ಕೂಡಿರುವ ಇಂದ್ರಿಯಗಳೆಂಬ ದಿಗ್ಗಜಗಳು ಎಷ್ಟು ಪ್ರಯಾಸಪಟ್ಟರೂ ಯಾವ ಅಂಕುಶಕ್ಕೂ ಜಗ್ಗತಕ್ಕುವುಗಳಲ್ಲ. ೬೬. ಬಹಳ ಭಯಂಕರವಾದ ಕಾಲಕೂಟವೇ ಮೊದಲಾದ ವಿಷಗಳನ್ನು ಮೀರಿಸಿರುವ ಈ ಸಂಸಾರಸುಖವೆಂಬ ವಿಷವನ್ನು ಪಾನ ಮಾಡುವುದರಿಂದ ಉಂಟಾಗುವ ಮೈಮರವೆಯನ್ನು ಸಂಪೂರ್ಣವಾಗಿ ಗುಣಪಡಿಸಲು ಯಾರಿಗೂ ಯಾವಾಗಲೂ ಸಾಧ್ಯವೇ ಇಲ್ಲ. ೬೭. ರಾಜರಿಗೆ ಅರಸುತನ ಬಂದುಬಿಟ್ಟರೆ ಸಾಕು, ಶರೀರದ ಮೇಲೆ ಪ್ರಜ್ಞೆಯೇ ತಪ್ಪಿಹೋಗುತ್ತದೆ. ರಾಜ್ಯಸುಖಾನುಭವವೆಂಬ ಗಾಢನಿದ್ರೆಯನ್ನು ಹೊಂದಿ ಹಗಲೂ ರಾತ್ರಿಯೂ ಜಡತನದಿಂದ ನಿಶ್ಚೇಷ್ಟಿತರಾಗಿ ಎಚ್ಚರಗೊಳ್ಳುವುದೇ ಇಲ್ಲ. ವ॥ ಅದಲ್ಲದೆ ೬೮. ಪಿತ್ರಾರ್ಜಿತವಾಗಿ ಬಂದ ಐಶ್ವರ್ಯ, ಏರುತ್ತಿರುವ ಯವ್ವನ ಬೇರೆ ಯಾರಿಗೂ ಇಲ್ಲವೆನಿಸಿರುವ ಅತಿಶಯವಾದ ಸೌಂದರ್ಯ ಮತ್ತು ಪರಾಕ್ರಮ ಇವುಗಳು ಕೆಡಕಿನ ಪರಂಪರೆ. ವಿಚಾರಮಾಡಿ ನೋಡಿದರೆ ಇವುಗಳಲ್ಲಿ ಒಂದೊಂದೂ ದುರಭ್ಯಾಸಗಳಿಗೆಲ್ಲಕ್ಕೂ ಮನೆಯಂತಿವೆ. ಹೀಗಿರಲು ಒಬ್ಬ

ಇರದೊಯ್ವುದು ತನ್ನಿಚ್ಛೆಗೆ
ವರಯುವ್ವನದಂದು ಪುರುಷನಂ ಪ್ರಕೃತಿ ರಜಂ
ಬೊರೆದು ತಿರುಪುತ್ತೆ ಸುಟ್ಟುಱಿ
ತೆರಳ್ಚಿ ತಱಗೆಲೆಯನುಯ್ವ ತೆಱದಿಂದೆತ್ತಂ ೧೯

ವಿಷಯಮೆನಿಪುಪ್ಪುನೀರುಂ
ಕಷಾಯಿತಾಸ್ಯಂಗೆ ಮಧುರತರಮಪ್ಪಂತಾ
ವಿಷಯಂಗಳೆ ನವಯೌವನ
ಕಷಾಯಿತಾತ್ಮನ ಮನಕ್ಕತಿಮಧುರಂಗಳ್ ೨೦

ಮಿಗೆ ತೃಷ್ಣೆ ಪುಟ್ಟಲಿಂದ್ರಿಯ
ಮೃಗಂಗಳಂ ಭೋಗಮೆಂಬ ಮೃಗತೃಷ್ಣಿಕೆ ಮೆ
ಯ್ದೆಗೆಯಲ್ಕೆ ಬಾರದಂತಿರೆ
ಕೆಗೆದೊಡಗೊಂಡೊಯ್ವುದೆಂಬುದೊಂದಚ್ಚರಿಯೇ ೨೧

ಅಱಿವುಗೆಡಿಸುತ್ತುಮೆಲ್ಲಾ
ತೆಱದಿಂ ದೆಸೆಗೆಡಿಸದಿರದು ವಿಷಯಸಮೂಹ
ಕ್ಕೆಱಗಿ ಬಿಡದಂತೆ ಪತ್ತುವ
ಮಱುಕಂ ದಿಙ್ಮೋಹದಂದದಿಂ ಮಾನಿಸರಂ ೨೨

ನಲ್ಲೇ ಇವೆಲ್ಲವೂ ಇದ್ದುಬಿಟ್ಟರೆ ಆಮೇಲೆ ಹೇಳಬೇಕಾದ್ದೇ ಇಲ್ಲ. ೧೯. ಸುಂಟರ ಗಾಳಿಯು ಧೂಳಿಯನ್ನೆಬ್ಬಿಸಿ ತರಗೆಲೆಯನ್ನು ತಿರುಗಿಸಿ ಎಲ್ಲಿಗೋ ಕೊಂಡೊಯ್ಯುವಂತೆ ಹೊಸಯವ್ವನನಲ್ಲಿ ಸ್ವಭಾವವು ಮನುಷ್ಯನನ್ನು ರಜೋಗುಣದಿಂದ ಉಂಟಾಗುವ ಭ್ರಮೆಯನ್ನು ಹೆಚ್ಚಿಸಿ, ತನಗೆ ತೋರಿದ ಕಡೆಗೆ ತೂರಿಕೊಂಡು ಹೋಗುತ್ತದೆ. ಟಿ. ರಜ=ಧೂಳು ; ರಜೋಗುಣ. ೨೦. ನೆಲ್ಲಿಕಾಯಿ ಮೊದಲಾದುವನ್ನು ತಿಂದು ಒಗರಾಗಿರುವ ಬಾಯುಳ್ಳವನಿಗೆ ರುಚಿಯಿಲ್ಲದ ಉಪ್ಪುನೀರೂ ಬಹಳ ಸಿಹಿಯಾಗಿ ಕಾಣುವುದಿಲ್ಲವೆ ? ಅದೇರೀತಿ ಹೊಸಪ್ರಾಯದಿಂದ ವಿಕಾರಗೊಂಡ ಮನಸ್ಸುಳ್ಳವನಿಗೆ ಹುರುಳಿಲ್ಲದ ಆ ವಸ್ತುಗಳೇ ಬಹಳ ಸವಿಯಾಗಿ ಕಾಣುತ್ತವೆ. ೨೧. ನೀರಡಿಕೆಯುಂಟಾದರೆ ಜಿಂಕೆಗಳನ್ನು ಬಿಸಿಲ್ಗುದುರೆಯು ಬಹಳ ದೂರ ಒಯ್ಯುವಂತೆ ಅತ್ಯಾಸಕ್ತಿಯುಂಟಾದರೆ ಇಂದ್ರಿಯಗಳನ್ನು (ಸಂಗೀತ ಮೊದಲಾದ) ವಿಷಯಗಳ ಅಭಿಲಾಷೆಯು ತಪ್ಪಿಸಿಕೊಳ್ಳುವುದಕ್ಕೆ ಆಗದಂತೆ ಸೆಳೆದುಕೊಂಡುಹೋಗುತ್ತದೆ. ಇದೇನೂ ಆಶ್ಚರ್ಯವಲ್ಲ. ೨೨. ಕಾಮಿನಿ, ಕಾಂಚನ ಮೊದಲಾದ ವಿಷಯಗಳ ಸಮೂಹಗಳಿಗೆ ಬಿದ್ದು ಬಿಡದಂತೆ ಅಂಟಿಕೊಳ್ಳುವ ಮೋಹವು ಮನುಷ್ಯರನ್ನು ದಿಗ್ಭ್ರಮೆಯಂತೆ ತಿಳಿವಳಿಕೆ

ವ॥ ಆದಱಿಂ ಸದುಪದೇಶಂಗಳ್ಗೆ ನಿನ್ನೊಂದಿಗರೆ ಭಾಜನಮಪ್ಪರದೆಂತೆನೆ

ತೊಳಗುವ ಚಂದ್ರಾಂಶುಗಳಾ
ಪಳುಕಿನ ಶಿಲೆಯೊಳಗೆ ಪೊಳೆದುಪುಗುವಂತಿರೆ ನಿ
ರ್ಮಳಹೃದಯುದೊಳಗೆ ಪುಗುಗುಂ
ವಿಳಸಚ್ಛಿಷ್ಟೋಪದೇಶಗುಣನಿವಹಂಗಳ್ ೭೩

ವ॥ ಅದಲ್ಲದೆಯುಂ

ಗುರುಗಳ ವಚನಂ ನಿರ್ಮಳ
ತರಮಾಗಿಯುಮಚ್ಛಸಲಿಲದಂತಿರೆ ಭವ್ಯೇ
ತರನಪ್ಪನ ಕಿವಿಯೊಳ್ ಪುಗೆ
ಪಿರಿದೆನಿಸುವ ಕರ್ಣಶೂಲೆಯಂ ಪುಟ್ಟಿಸುಗುಂ ೭೪

ವಿನಯುಮನಾಗಿಸಲ್ ನೆಱೆಯದನ್ವಯುಮುಂ ಶ್ರುತಮುಂ ಸ್ವಭಾವದು
ರ್ಜನನೆನಿಪಂಗದಂತುಟೆ ವಲಂ ಶಿಶಿರೈಕನಿಧಾನಮಪ್ಪ ಚಂ
ದನದೊಳೆ ಪುಟ್ಟಿ ಕಿಚ್ಚು ಸುಡದಿರ್ಪುದೆ ತತ್ಪ್ರಶಮೈಕಕಾರಣಂ
ವನನಿಧಿಯಾದೊಡೇನುರಿಯದಿರ್ಪುದೆ ದಳ್ಳಿಸಿ ಬಾಡಬಾನಲಂ ೭೫

ಯನ್ನು ಹಾಳುಮಾಡಿ ಎಲ್ಲಾ ಬಗೆಯಿಂದಲೂ ದಿಕ್ಕಿಡಿಸದೆ ಇರುವುದಿಲ್ಲ. ವ॥ ಆದ್ದರಿಂದ ಸದುಪದೇಶಕ್ಕೆ ನಿನ್ನಂತಹವರೇ ಅರ್ಹರು. ಹೇಗೆಂದರೆ ೭೩. ಪ್ರಕಾಶಿಸುವ ಚಂದ್ರ ಕಿರಣಗಳು ಸ್ಫಟಿಕಶಿಲೆಯಲ್ಲಿ ಪ್ರತಿಬಿಂಬಿಸಿ ಹೊಳೆಯುವಂತೆ ಉತ್ತಮವಾದ ಗುರುಹಿರಿಯರ ಉಪದೇಶದ ಗುಣಗಳು ಪರಿಶುದ್ಧವಾದ ಮನಸ್ಸಿಗೆ ಬಹಳ ಚೆನ್ನಾಗಿ ಹಿಡಿಯುತ್ತವೆ. ವ॥ ಅದಲ್ಲದೆ, ೭೪. ನೀರು ಎಷ್ಟು ಸ್ವಚ್ಛವಾಗಿದ್ದರೂ ಕಿವಿಯೊಳಕ್ಕೆ ಸೇರಿದರೆ ನೋವನ್ನುಂಟುಮಾಡುವಂತೆ ಗುರುಗಳ ಉಪದೇಶವು ಯಾವ ದೋಷವೂ ಇಲ್ಲದಿದ್ದರೂ ದುರ್ಜನರ ಕಿವಿಗೆ ಬಿದ್ದರೆ ಮಾತ್ರ ಕಿವಿನೋವನ್ನೇ ಉಂಟುಮಾಡುತ್ತದೆ. ಟಿ. ನೀಚರಿಗೆ ಗುರೂಪದೇಶವು ಹಿಡಿಸುವುದಿಲ್ಲ ಎಂದು ಅಭಿಪ್ರಾಯ. ೭೫. ಕೆಟ್ಟ ಸ್ವಭಾವವುಳ್ಳವನಿಗೆ ಅವನ ಕುಲವಾಗಲಿ ವಿದ್ಯೆಯಾಗಲಿ ವಿನಯುವನ್ನುಂಟುಮಾಡಲು ಕಾರಣವಾಗುವುದಿಲ್ಲ. ಇದು ಖಂಡಿತ. ಹೇಗೆಂದರೆ ಬಹಳ ತಂಪಿಗೆ ಆಧಾರಭೂತವಾದ ಚಂದನಮರದಲ್ಲಿ ಹುಟ್ಟಿದ ಮಾತ್ರಕ್ಕೆ ಬೆಂಕಿಯು ಸುಡದೆ ಇರುತ್ತದೆಯೆ ? ಹಾಗೆಯೆ ಬಡಬಾಗ್ನಿಯು ಬೆಂಕಿಯುನ್ನು ಆರಿಸಲು ಮುಖ್ಯ ಸಾಧನವಾದ ನೀರಿಗೆ ನೆಲೆಯೆನಿಸಿದ ಸಮುದ್ರದಲ್ಲಿ ಹುಟ್ಟಿದ್ದರೂ ಅಲ್ಲೆ ಧಗಧಗನೆ ಉರಿಯುತ್ತಲೇ ಇರುವುದಿ

ಜನಪತಿಗಳ್ ನುಡಿಯಲ್ ಮಾ
ರ್ದನಿಯಂತನುವದಿಸಿ ಬರ್ದುಕಲ್ಲೊಲ್ಲದೆ ಪೂರ್ಕೊಂ
ಡನುಚಿತಮಿದೆಂದು ವಾಣಿಪ
ಮನುಜೋತ್ತಮರೆಲ್ಲಿಯಾನುಮಿರ್ಪರೆ ಜಗದೊಳ್ ೭೬

ವ॥ ಎತ್ತಲಾನುಮುಪದೇಶಿಸುವರುಳ್ಳೊಡೆ

ಅಲರಂಬಿಂ ಬಿರಿದೆರ್ದೆಯೊಳ್
ನಿಲಲಱಿಗುಮೆ ಸದ್ಗುರೂಪದೇಶಾಮೃತಮೇಂ
ಸಲೆ ತೀವುತಿರ್ದೊಡಂ ಪೇೞ್
ನಿಲಲಱಿಗುಮೆ ಭಿನ್ನಭಾಂಡದೊಳ್ ನೀರಿನಿತುಂ ೭೭

ವ॥ ಅದಱಿನೇಗೆಯ್ದೊಡಂ ಕೇಳ್ವರಲ್ಲಂ

ಮೊಱೆದು ಹಿತೋಪದೇಶಮನೆ ಕೇಳಲೊಡಂ ಸಿಡಿಲೇಟ್ಗೆಯೆರ್ದು ಮು
ಯ್ಮುಱುಗಿ ನಯಂ ಕಿಡಲ್ಗಜನಿಮೀಲನದಿಂದವಧೀರಿಸುತ್ತೆ ತ
ಮ್ಮುಱಿತಮಿದೇತಕೆಂದು ಗುರುಸಂಕುಳಮಂ ಮಱೆದಿಂತು ಮಮ್ಮಲಂ
ಮಱುಗಿಪರಲ್ತೆ ತಮ್ಮ ನಿಜಗರ್ವದೆ ಮಾಯ್ದು ನೃಪರ್ ಧರಿತ್ರಿಯೊಳ್ ೭೮

ಲ್ಲವೆ ? ೭೬. ರಾಜರುಗಳು ಏನನ್ನಾದರೂ ಹೇಳಿದರೆ ಪ್ರತಿಧ್ವನಿಯಂತೆ ಅದನ್ನೇ ಅನುವಾದಮಾಡಿ, ಅಂದರೆ 'ಅದೇ ಸರಿ, ಮಹಾಸ್ವಾಮಿ' ಎಂದು ಹೇಳುತ್ತಾ ಹೊಟ್ಟೆ ಹೊರೆಯುವುದನ್ನು ಬಿಟ್ಟು, ಎದುರಿಸಿ ಇದು ಸರಿಯಲ್ಲ ಎಂದು ಪ್ರತಿಭಟಿಸಿ (ಕೆಟ್ಟದಾರಿಯಿಂದ) ತಪ್ಪಿಸುವ ಧೀರನಾದ ನರಶ್ರೇಷ್ಠನು ಈ ಲೋಕದಲ್ಲಿ ಎಲ್ಲಿಯಾದರೂ ಇದ್ದಾನೆಯೆ ? ವ॥ ಎಲ್ಲಾದರೂ ಉಪದೇಶ ಮಾಡುವವರಿದ್ದರೂ, ೭೭. ಮನ್ಮಥನ ಹೂವಿನ ಬಾಣದಿಂದ ಸೀಳಿಹೋಗಿರುವ ಎದೆಯಲ್ಲಿ ಸದ್ಗುರುಗಳ ಉಪದೇಶಾಮೃತವು ಉಳಿಯಲು ಸಾಧ್ಯವಾಗುತ್ತದೆಯೆ? ಒಡೆದ ಮಡಕೆಯಲ್ಲಿ ಎಷ್ಟು ತುಂಬುತ್ತಿದ್ದರೂ ನೀರು ಏನಾದರೂ ಸ್ವಲ್ಪ ನಿಲ್ಲಲು ಸಾಧ್ಯವೆ ? ವ॥ ಆದ್ದರಿಂದ ಪ್ರಭುಗಳು ಏನೂಮಾಡಿದರೂ ಕೇಳುವವರೇ ಇಲ್ಲ. ೭೮. ಈ ಭೂಮಿಯಲ್ಲಿ ನೀಚರಾದ ರಾಜರು ಗುರುಹಿರಿಯರು ಒಂದು ವೇಳೆ ಹಿತೋಪದೇಶವನ್ನು ಮಾಡಿದರೆ ಅದನ್ನು ಕೇಳಿದ ಕೂಡಲೆ ಸಿಡಿಲಂತೆ ಆರ್ಭಟಿಸಿ ಎದ್ದು ಸಿಡಿಮಿಡಿಗೊಳ್ಳುತ್ತಾರೆ ; ಇಲ್ಲವೆ ಅವಿನಯವನ್ನು ತೋರ್ಪಡಿಸಿ ದುರಹಂಕಾರದಿಂದ ಆನೆಯಂತೆ ಕಣ್ಣು ಮುಚ್ಚಿಕೊಂಡು ತಿರಸ್ಕರಿಸಿ "ನಾನೇಕೆ ತಿಳುವಳಿಕೆಯಿಲ್ಲದೆ ಇವನಿಗೆ ಬುದ್ಧಿ ಹೇಳಲು ಹೊರಟೆ ?" ಎಂದು ಅವರು

ಸ್ಥಿರೆಯಲ್ಲದವಳನತಿನಿ
ಷ್ಠುರೆಯುಂ ಭಟಖಡ್ಗಮಂಡಲೋತ್ಪಲವನದೊಳ್
ತಿರುಪಾಱಿಡಿಯುಂ ನಚ್ಚಿನ
ಸಿರಿಯುಂ ಭಾವಿಪುದು ಮುನ್ನಮೇ ಶುಭಕಾಮಂ ೭೯

ವ॥ ಅದೆಂತೆಂದೊಡೆ

ಸುರೆಯಿಂ ಸೊರ್ಕುಂ ಸುರೋರ್ವೀರುಹಕಿಸಲಯದಿಂ ರಾಗಮಂ ಕೌಸ್ತುಭಪ್ರ
ಸ್ತರದಿಂ ನೈಷ್ಠುರ್ಯಮಂ ದುರ್ವಿಷಮವಿಷದಿನುನ್ಮೋಹಮಂ ಮುಗ್ಧದೋಷಾ
ಕರನಿಂ ವಕ್ರತ್ವಮಂ ದುಶ್ಚ್ಯವನನ ಹಯದಿಂ ವೇಗಮಂ ತಾಳ್ದಿ ನೀರಾ
ಕರದಿಂದೇಟ್ರಂದಳಂತಾ ಸಿರಿ ಸಹಭವರಂ ಪೋಲ್ವುದೇಂ ಚೋದ್ಯಮಾಯ್ತೇ ೮೦

ವಾರಿಧಿಯೊಳ್ ಮಂದರಗಿರಿ
ಘೋರೆನೆ ತಿರುಗುತ್ತಿರಲ್ಕೆ ಪುಟ್ಟಿದ ಬಹುಸಂ
ಸ್ಕಾರಮದಿನ್ನುಂ ಬಿಡದವೊ
ಲೋರಂತಿರೆ ಕೂಡೆ ಲಕ್ಷ್ಮಿ ತಿಱ್ರನೆ ತಿರುಪಳ್ ೮೧

ಮನಸ್ಸಿನಲ್ಲಿ ಬಹಳವಟ್ಟಿಗೆ ನೊಂದುಕೊಳ್ಳುವಂತೆ ಮಾಡುತ್ತಾರೆ. ೭೯. ತನ್ನ ಶ್ರೇಯಸ್ಸನ್ನು ಬಯಸತಕ್ಕವನು ಚಂಚಲಳಾದ, ಬಹಳ ಕಠಿನಸ್ವಭಾವದವಳಾದ ಹಾಗೂ ವೀರಯೋಧರ ಕತ್ತಿಗಳ ಸಮೂಹವೆಂಬ ನೈದಿಲೆಯ ಗುಂಪಿನಲ್ಲಿ ಅತ್ತ ಇತ್ತ ಅಲೆಮಾರಿ ದುಂಬಿಯಂತಿರುವ, ವಿಶ್ವಾಸಪಾತ್ರಳೆಂದು ತಾನು ನಂಬಿಕೊಂಡಿರುವ ಲಕ್ಷ್ಮಿಯ ವಿಷಯವನ್ನು ಮೊದಲು ಪರ್ಯಾಲೋಚಿಸಬೇಕು. ವ॥ ಅದು ಹೇಗೆಂದರೆ, ೮೦. ಈ ಲಕ್ಷ್ಮಿಯು ಸಮುದ್ರದಲ್ಲಿ ಹುಟ್ಟಿದವಳು. ಅಲ್ಲಿ ಅವಳು ಇದ್ದಾಗ ತನ್ನ ಒಡಹುಟ್ಟಿದವರಲ್ಲಿ ಒಬ್ಬೊಬ್ಬರಿಂದ ಒಂದೊಂದು ಗುಣವನ್ನು ಕಲಿತುಕೊಂಡು ಮೇಲಕ್ಕೆ ಬಂದಿದ್ದಾಳೆ! ಹೇಗೆಂದರೆ ಮದ್ಯದಿಂದ ಸೊಕ್ಕನ್ನೂ ಕಲ್ಪವೃಕ್ಷದ ಚಿಗುರಿನಿಂದ ರಾಗವನ್ನೂ (ಕೆಂಪು, ಅನುರಾಗ) ಕೌಸ್ತುಭಮಣಿಯಿಂದ ನೈಷ್ಠುರ್ಯವನ್ನೂ (ಕಠಿನತ್ವ, ದಯಾಹೀನತೆ) ಬಹಳ ತೀಕ್ಷ್ಣವಾದ ವಿಷದಿಂದ ಉನ್ಮೋಹವನ್ನೂ (ಮೂರ್ಛೆ, ಇತರರನ್ನು ಮರುಳುಮಾಡುವಿಕೆ) ಸುಂದರನಾದ ಚಂದ್ರನಿಂದ ವಕ್ರತ್ವವನ್ನೂ (ಡೊಂಕು, ಕುಟಿಲತನ) ಉಚ್ಚೈಃಶ್ರವಸ್ಸೆಂಬ ಕುದುರೆಯಿಂದ ವೇಗವನ್ನೂ (ಜೋರು, ಚಂಚಲತ್ವ) ತೆಗೆದುಕೊಂಡು ಮೇಲಕ್ಕೆ ಎದ್ದಿದ್ದಾಳೆ. ಲೋಕದಲ್ಲಿ ಸಹೋದರರ ಹೋಲಿಕೆ ಇರುವುದು ಆಶ್ಚರ್ಯವೇನೂ ಅಲ್ಲ. ೮೧. ಸಮುದ್ರದಲ್ಲಿ ಮಂದರ ಪರ್ವತವು ಘೋರೆಂದು ತಿರುಗುವಾಗ ಉಂಟಾದ ಒಂದು ದೊಡ್ಡ ಸಂಸ್ಕಾರವನ್ನು ಇನ್ನೂ ಬಿಟ್ಟಿಲ್ಲವೋ ಎಂಬಂತೆ ಒಂದೇಸಮನಾಗಿ ತಿರಂಗುತ್ತಲೇ ಇರುತ್ತಾಳೆ!

ಶ್ರುತಮಂ ಕೆಯ್ಕೊಳ್ಳಳಾಚಾರಮನವಧರಿಸಳ್ ಸತ್ಯಮಂ ಬಾರ್ತೆಗೆಯ್ಯಳ್
ಮತಿಯಂ ಬಿಪ್ಪಂಡಿಪಳ್ ಲಕ್ಷಣಮನೆಣಿಸಳೌದಾರ್ಯಮಂ ಚಿಂತಿಸಳ್ ಸಂ
ಗತಿಯಂ ವಿಶ್ವಾಸಿಸಳ್ ಸುಂದರತರವಪುವಂ ನೋಡಳೆಂತುಂ ವಿಶೇಷ
ಜ್ಞತೆಯಂ ತಾನೇತಕೆಂಬಳ್ ಸಿರಿಯುನಱಿವುತಂ ಬಣ್ಣಿಪಂ ಗಾಂಪನಲ್ತೇ ೮೨

ವ॥ ಅಂತುಮಲ್ಲದೆಯುಂ

ಅಕ್ಕರ॥ ಧೀರನಪ್ಪನುಮಂ ಹಾಸ್ಯಂ ಮಾಳ್ಪಳ್ ಮರುಳೆಂಬಿನಂ ಪಾವೆಂದು ದಾಂಟುವಳ ಭಿಜಾತನಂ
ವೀರನರಿಗುಮೇದೊಲ್ಲಳುದಾರನಪ್ಪನಂ ಗಟಪನೇದಿಟಿಪಳ್ ಪುರುಡಿಂ
ಭಾರತೀಶನಂ ಸೋಂಕಳ್ ದಾನಿಯಂ ಮುಟ್ಟಳಸ್ಪೃಶ್ಯನೆಂದು ವಿನೀತನಂ
ದೂರದಿಂ ನೋಡಿ ಪಾತಕನಿವನೆಂದು ತೀದು ಪೋಗಳೆಂದಿರೆ ನಂಬದಿರ್ ೮೩

ವ॥ ಮತ್ತಂ ಪಯೋರಾಶಿಯೊಳ್ ಪುಟ್ಟಿಯುಂ ತೃಷ್ಣಾಕರೆಯುಂ ಅಮರ್ದಿನೊಡ ವುಟ್ಟಿಯುಂ ಕಟುವಿಪಾಕೆಯುಂ ಪುರುಷೋತ್ತಮಾರತೆಯಾಗಿಯುಂ ದುರ್ಜನಪ್ರಿಯೆಯುಮೆನಿಸಿ

೮೨. ಈ ಲಕ್ಷ್ಮಿಯು ತಾನು ಒಲಿಯುವಾಗ ಶಾಸ್ತ್ರಜ್ಞಾನವನ್ನು ಅಂಗೀಕರಿಸುವುದಿಲ್ಲ. ಆಚಾರವನ್ನು ಮನಸ್ಸಿಗೆ ತಂದುಕೊಳ್ಳುವುದಿಲ್ಲ, ಸತ್ಯವನ್ನು ಲೆಕ್ಕಿಸುವುದಿಲ್ಲ, ಬುದ್ಧಿಯನ್ನು ದೂಷಿಸುತ್ತಾಳೆ, ಲಕ್ಷಣ[1]ವನ್ನು ಲಕ್ಷ್ಯಮಾಡುವುದಿಲ್ಲ, ಔದಾರ್ಯವನ್ನು ಯೋಚಿಸುವುದಿಲ್ಲ, ಪರಿಚಯವನ್ನು ನಂಬುವುದಿಲ್ಲ, ಬಹಳ ಸುಂದರವಾದ ಶರೀರವನ್ನು ಕಣ್ಣೆತ್ತಿ ನೋಡುವುದಿಲ್ಲ, ಸರ್ವಕಲಾಸಂಪನ್ನತೆಯನ್ನು ಇದೇತಕ್ಕೆ ? ಎನ್ನುತ್ತಾಳೆ. ಆದ್ದರಿಂದ ಲಕ್ಷ್ಮಿಯನ್ನು ತಿಳಿದೂ ತಿಳಿದೂ ಹೊಗಳುವುದಕ್ಕೆ ಹೊರಡುವವನು ದಡ್ಡನೇ ಸರಿ. ವ॥ ಆದಲ್ಲದೆ ೮೩. ಲಕ್ಷ್ಮಿಯು ಧೈರ್ಯವಂತನನ್ನು ಹುಚ್ಚನೆಂದು ಹಾಸ್ಯಮಾಡುತ್ತಾಳೆ, ಸತ್ಕುಲಪ್ರಸೂತನನ್ನು ಹಾವೆಂದು ದಾಟಿಹೋಗುತ್ತಾಳೆ, ಶೂರನನ್ನು ಕತ್ತರಿಸಿಬಿಡುವನೆಂಬ ಶಂಕೆಯಿಂದ ಒಪ್ಪುವುದಿಲ್ಲ, ಮಹಾಶಯನನ್ನು ತಲೆಹರಟೆಯುವನೆಂದು ಹೀಯಾಳಿಸುತ್ತಾಳೆ, ಸರಸ್ವತಿಯ ಒಡೆಯನನ್ನು (ವಿದ್ವಾಂಸನನ್ನು) ಅವಳ ಮೇಲಿನ ಅಸೂಯೆಯಿಂದ ಮುಟ್ಟುವುದೂ ಇಲ್ಲ, ದಾನಿಯನ್ನು ಅಸ್ಪೃಶ್ಯನೆಂದು ಭಾವಿಸಿ ಸ್ಪರ್ಶಮಾಡುವುದಿಲ್ಲ, ವಿನಯವಂತನನ್ನು ದೂರದಿಂದಲೇ ನೋಡಿ ಪಾಪಿಷ್ಠನೆಂದು ಹತ್ತಿರಕ್ಕೆ ಸುಳಿಯುವುದಿಲ್ಲ ! ಇವಳನ್ನು ನಂಬಬೇಡ. ವ॥ ಮತ್ತು ಇವಳು ಜಲನಿಧಿಯಲ್ಲಿ ಹುಟ್ಟಿದ್ದರೂ ಬಾಯಾರಿಕೆಯನ್ನು ಹೆಚ್ಚಿಸುತ್ತಾಳೆ (ದುರಾಸೆಯನ್ನು ಹೆಚ್ಚಾಗಿ ಉಂಟುಮಾಡುತ್ತಾಳೆ), ಅಮೃತದ ಜೊತೆಯಲ್ಲಿ ಹುಟ್ಟಿದ್ದರೂ ಕಹಿ

---

1 ಲಕ್ಷಣ–ಸಾಮುದ್ರಿಕಶಾಸ್ತ್ರದಲ್ಲಿ ಹೇಳಿರುವ ಮಹಾಪುರುಷ ಲಕ್ಷಣ ; ಛತ್ರ, ಚಾಮರಾದಿ ರೇಖೆಗಳು.

ಪರಸ್ಪರವಿರೋಧಿಯಪ್ಪ ನಿಜಚರಿತ್ರಮುಂ ಇಂದ್ರಜಾಲಮಂ ತೋರ್ಪಂತೆ ಮೆಱೆಯುತ್ತಿರ್ಪ ಳಂತುಮಲ್ಲದೆಯುಂ

ಎಂತೆಂದು ತೊಳಗಿ ಬೆಳಗುವ
ಳಂತಂತತಿಮಲಿನಕಜ್ಜಳೋಪಮ ಕರ್ಮ
ಭ್ರಾಂತಿಯ ಮಾಳ್ಪಳ್ ಲಕ್ಷ್ಮೀ
ಕಾಂತೆ ಕರಂ ಚಪಳೆ ಸೊಡರ ಕುಡಿಯಂ ಪೋಲ್ವಳ್ ೮೪

ವ॥ ಅದಲ್ಲದೆಯುಂ

ಪಿರಿಯಕ್ಕರ॥ ಎಸೆವ ಗುಣವೆಂಬ ಕಳಹಂಸನಿಕರಕ್ಕಕಾಲದ ಪೆರ್ಮುಗಿಲ್ ವಿಷಯೇಂದ್ರಿಯ
ಪ್ರಸರಮೆಂಬ ಮೃಗಪ್ರಕರಕ್ಕೆ ಗೋವಿಯದನಿ ಸಚ್ಚರಿತ್ರಂಗಳೆಂಬ
ಮಿಸುಪ ಚಿತ್ರಕ್ಕೆ ಕಂದಿಪ ಕರ್ಪೊಗೆ ಧರ್ಮಮೆಂಬಿಂದುಮಂಡಲಕ್ಕೆ
ಮುಸುಕುವ ಕಾಳರಾಹುವಿನ ನಾಲಿಗೆಯೆನಿಪ ಸಿರಿಯಂ ಬಣ್ಣಿಪಂ ಗಾಂಪನಲ್ತೇ
೮೫

ಲಲಿತರಗಳೆ॥ ಗಂಧರ್ವನಗರಲೇಖೆಯ ತೆಱದೆ ಕಂಡಂತೆ
ಕಾಣಲ್ಕೆ ಬಾರಳಿರ್ದಾಯೆಡೆಯೊಳಿರ್ದಂತೆ

ಯಾದ ರಸವನ್ನುಂಟುಮಾಡುತ್ತಾಳೆ (ಕೆಟ್ಟ ಪರಿಣಾಮವನ್ನುಂಟುಮಾಡುತ್ತಾಳೆ.) ಪುರುಷೋತ್ತಮನಲ್ಲಿ (ಶ್ರೀಮನ್ನಾರಾಯಣನಲ್ಲಿ ಶ್ರೇಷ್ಠನಾದ ಮನುಷ್ಯನಲ್ಲಿ) ಅನುರಕ್ತಳಾಗಿದ್ದರೂ ದುರ್ಜನರನ್ನು ಪ್ರೀತಿಸುತ್ತಾಳೆ. ಈ ರೀತಿ ಪರಸ್ಪರ ವಿರೋಧಿಯಾದ ತನ್ನ ನಡವಳಿಕೆಯನ್ನು ಇಂದ್ರಜಾಲವನ್ನು ತೋರಿಸುವಂತೆ ತೋರ್ಪಡಿಸುತ್ತಾಳೆ. ಅದಲ್ಲದೆ, ೮೪. ಈ ಲಕ್ಷ್ಮಿಯೆಂಬ ಹೆಂಗಸು ಬಹಳ ಚಂಚಲಳು. ದೀಪದ ಕುಡಿಯನ್ನು ಹೋಲುತ್ತಾಳೆ. ಹೇಗೆಂದರೆ-ದೀಪದ ಕುಡಿಯು ಎಷ್ಟು ಎಷ್ಟು ಹೆಚ್ಚಾಗಿ ಪ್ರಕಾಶಮಾನವಾಗಿ ಉರಿಯುತ್ತದೆಯೋ ಅಷ್ಟು ಅಷ್ಟು ಹೆಚ್ಚಾಗಿ ಬಹಳ ಕಪ್ಪಾದ ಕಾಡಿಗೆಯನ್ನು ಹೊರಕ್ಕೆ ಹಾಕುತ್ತದೆ. ಅದೇ ರೀತಿ ಲಕ್ಷ್ಮಿಯು ಎಷ್ಟು ಎಷ್ಟು ಹೆಚ್ಚಾಗಿ ಒಂದು ಕಡೆ ಸೇರಿ ಬೆಳಕಿಗೆ ಬರುತ್ತಾಳೋ ಅಷ್ಟು ಅಷ್ಟು ಹೆಚ್ಚಾಗಿ ಅಲ್ಲಿ ಪರಹಿಂಸೆ ಪರಸ್ತ್ರೀಹರಣ ಮೊದಲಾದ ಹೇಸಿಗೆಕೆಲಸವನ್ನು ಮಾಡಿಸುತ್ತಾ ತಾವು ಮಾಡುವುದು ಸರಿಯೆಂಬ ಭ್ರಾಂತಿಯನ್ನು ಹುಟ್ಟಿಸುತ್ತಾಳೆ. ವ॥ ಅದಲ್ಲದೆ ೮೫. ಇವಳು ಪ್ರಕಾಶಮಾನವಾದ ಸದ್ಗುಣಗಳೆಂಬ ಹಂಸಗಳ ಗುಂಪಿಗೆ ಅಕಾಲದಲ್ಲಿ ಬರುವ ದೊಡ್ಡ ಮಳೆಯಂತಿದ್ದಾಳೆ. ಚಪಲಸ್ವಭಾವದ ಇಂದ್ರಿಯಗಳೆಂಬ ಜಿಂಕೆಗಳಿಗೆ ಕೊಳಲಿನ ದನಿಯಂತಿದ್ದಾಳೆ. ಒಳ್ಳೆಯ ನಡತೆಯೆಂಬ ಪ್ರಕಾಶಮಾನವಾದ ಚಿತ್ರಕ್ಕೆ ಕಳೆಗುಂದಿಸುವ ಕಪ್ಪು ಹೊಗೆಯಂತಿದ್ದಾಳೆ. ಧರ್ಮವೆಂಬ ಚಂದ್ರಬಿಂಬಕ್ಕೆ ಆವರಿಸುವ ಭಯಂಕರವಾದ ರಾಹುವಿನ ನಾಲಿಗೆಯಂತಿದ್ದಾಳೆ. ಇಂತಹ ಲಕ್ಷ್ಮಿಯನ್ನು ಹೊಗಳುವವನು ಶುದ್ಧ ಮುಠ್ಠಾಳನಲ್ಲವೆ ? ೮೬. ಇವಳು ಆಕಾಶದಲ್ಲಿ ಕಾಣಬರುವ ಗಂಧರ್ವನಗರದ ಸಾಲಿ

ವಿಷಯವಿಷವಲ್ಲಿಯುಂ ಪೆರ್ಚಿಸುವ ಜಳಧಾರೆ
ಸಾಧುತ್ವಮಂ ಕೆಡಿಸಿ ನಡಸುವ ದುರಾಚಾರೆ
ಕಪಟನಾಟಕತತಿಗೆ ತಾನೆ ನೆಲೆಯೆನಿಸುವಳ್
ಕೋಪಗ್ರಹಾವೇಶ ಜನ್ಮನಿಧಿಯೆನಿಸುವಳ್
ಶಾಸ್ತ್ರದೃಷ್ಟಿಗೆ ತಿಮಿರಪಟಲತತಿಯೆನಿಸುವಳ್
ದೋಷವೆಂಬಾಶೀವಿಷಕ್ಕೆ ಪುತ್ತೆನಿಸುವಳ್
ಚಿತ್ರಗತೆಯಾಗಿಯುಂ ನೋಡೆ ಸಂಚರಿಸುವಳ್
ಕರುವಿಟ್ಟೊಡಂ ನಿಲಿಸಲರಿದೆನಿಸಿ ಚಿದಱುವಳ್
ಕಂಡರಸಿದೊಡವಲ್ಲಿ ನಿಲಲಾಱಳೆನಿಸುವಳ್
ಕೇಳ್ದೊಡಂ ತನ್ನನನುಭವಿಪುದರಿದೆನಿಸುವಳ್
ಒಲ್ದು ಜಾನಿಸಿದೊಡಂ ತಕ್ಷಣದೆ ವಂಚಿಪಳ್ ೮೬

ವ॥ ಇಂತು ಚಂಚಲೆಯಪ್ಪ ಸಿರಿ ತಮಗೆ ವಿಧಿವಶದಿನೆತ್ತಲಾನುವಪ್ಪುದುಂ

ಮೊದಲೊಳ್ ರಾಜ್ಯಾಭಿಷೇಕಪ್ರಬಲಜಲಮೆ ಕರ್ಚಿತ್ತು ದಾಕ್ಷಿಣ್ಯಮಂ ಹೋ
ಮದ ಧೂಮಂ ಚಿತ್ತದೊಳ್ ತೊಟ್ಟನೆ ಮಲಿನತೆಯಂ ಪೊರ್ದಿಸಿತ್ತೊಪ್ಪಿರಲ್ ಕ
ಟ್ಟಿದ ಪಟ್ಟಂ ಬರ್ಪ ಮುಪ್ಪಂ ಮಱಿಯಿಸಿತಧಿಕಕ್ಷಾಂತಿಯಂ ವಿಪ್ರವರ್ಗಾ
ಸ್ಪದ ದರ್ಭಾನೀಕ ಸಮ್ಮಾರ್ಜನಿ ಕಳೆದುದೆನಲ್ ದುಷ್ಪರಪ್ಪರ್ ನೃಪಾಲರ್ ೮೭

ನಂತೆ ಒಂದುಕಡೆ ಕಂಡಂತೆ ಕಾಣುವುದಿಲ್ಲ, ಇದ್ದಂತೆ ಇರುವುದಿಲ್ಲ. ಇವಳು ಕಾಮಿನಿ ಕಾಂಚನವೇ ಮೊದಲಾದುವುಗಳ ಆಸೆಯೆಂಬ ನಂಜಿನ ಬಳ್ಳಿಯನ್ನು ಬೆಳೆಸುವ ಜಲ ಧಾರೆಯಂತೆ ಇದ್ದಾಳೆ. ಇವಳು ಒಳ್ಳೆಯತನವನ್ನು ಕೆಡಿಸಿ ಹಾಳುಮಾಡುವ ಕೆಟ್ಟ ನಡತೆಯುಳ್ಳವಳು. ಬೂಟಾಟಿಕೆಯೆಂಬ ನಾಟಕಗಳಿಗೆ ರಂಗಮಂಟಪದಂತಿದ್ದಾಳೆ. ಕೋಪವೆಂಬ ಪಿಶಾಚಿಯು ಹಿಡಿಯುವುದಕ್ಕೆ ತೌರುಮನೆಯಂತಿದ್ದಾಳೆ. ಶಾಸ್ತ್ರವೆಂಬ ಕಣ್ಣಿನ ದೃಷ್ಟಿಯನ್ನು ಹಾಳುಮಾಡುವ ತಿಮಿರವೆಂಬ ಬೇನೆಯಂತಿದ್ದಾಳೆ. ದೋಷ ವೆಂಬ ಹಾವಿಗೆ ಹುತ್ತದಂತಿದ್ದಾಳೆ. ನೋಡಿದರೆ ಚಿತ್ರದಲ್ಲಿ ಬರೆದಿಟ್ಟಿದ್ದರೂ ಮತ್ತೆ ಲ್ಲಿಗೋ ಹೊರಟುಬಿಡುತ್ತಾಳೆ. ಎರಕಹೊಯ್ದು ನಿರ್ಮಾಣ ಮಾಡಿದ್ದರೂ ಒಂದು ಕಡೆ ನಿಲ್ಲದೆ ಬೇರೆ ಕಡೆಗೆ ಕಾಲುಕೀಳುತ್ತಾಳೆ. ಕೊರೆದು ಪ್ರತಿಮೆ ಮಾಡಿಸಿಟ್ಟಿದ್ದರೂ ಒಂದು ನಿಲ್ಲಲಾರಳೆನಿಸಿದ್ದಾಳೆ. ಹೆಸರು ಕೇಳಿದರೂ ಸಾಕು ದಕ್ಕತಕ್ಕವಳಲ್ಲ ಎನಿಸಿರು ವಳು. ಪ್ರೀತಿಯಿಂದೊಮ್ಮೆ ನೆನೆಸಿಕೊಂಡರೂ ವಂಚಿಸುತ್ತಾಳೆ. ವ॥ ಹೀಗೆ ಒಂದು ಕಡೆ ನಿಲ್ಲದ ಸಿರಿಯು ತಮಗೆ ಅದೃಷ್ಟವಶದಿಂದ ಎಲ್ಲಾದರೂ ಒದಗಿಬಿಟ್ಟರೆ ೮೭. ರಾಜರಿಗೆ ಮೊದಲು ಪಟ್ಟಾಭಿಷೇಕಕಾಲದಲ್ಲಿ ಅಭಿಷೇಕ ಮಾಡುವ, ಮೇಲಿಂದ ವೇಗವಾಗಿ ಇಳಿ ಯುವ ನೀರೇ ಅವರ ದಾಕ್ಷಿಣ್ಯಗುಣ (ಇನ್ನೊಬ್ಬರ ಮನಸ್ಸಿಗೆ ನೋವನ್ನುಂಟುಮಾಡ ಬಾರದೆಂಬ ಮನೋಭಾವ)ವನ್ನು ತೊಳೆದುಬಿಡುತ್ತದೆ, ಪಟ್ಟಾಭಿಷೇಕ ಸಮಯದಲ್ಲಿ ಮಾಡುವ ಹೋಮದ ಹೊಗೆಯೆ ತಟ್ಟನೆ ಮನಸ್ಸಿನಲ್ಲಿ ಮಲಿನತೆಯನ್ನುಂಟುಮಾಡು

ಪರಲೋಕಾಲೋಕನಮಂ
ಪರಿಹರಿಸಿದೆವಲ್ತೆ ನೋಡಿಮೆಂದೀಗಳಃದಾ
ಪರಿಸುವ ತೆಱದಿಂ ಪಿಡಿಯಿಪ
ರರಸುಗಳೆಡೆವಿಡದೆ ಮೇಘಡಂಬರತತಿಯಂ ೮೮

ಪಡೆವಳ್ಳರ್ ನೃಪಗುಣಮಂ
ಬಿಡೆ ನಾಳ್ಗಡಿಗಳೆವ ತೆಱದೆ ನಡೆನಡೆಯೆಂಬರ್
ಜಡಿವರ್ ಸಾಧೂಕ್ತಿಗಳಂ
ನುಡಿವವರಂ ಮಾಣಿಪಂದದಿಂ ಪಡಿಯಾಱರ್ ೮೯

ಬಿಡೆ ಬಿಡಿಸುವಂತೆ ನೃಪರೊ
ಳ್ನುಡಿಯಂ ಬೀಸುವುದು ಚಾಮರಾವಳಿ ಜಸಮಂ
ತೊಡೆವಂತೆ ವೈಜಯಂತಿಗ
ಳೆಡೆವರಿಯದೆ ಮುಂದೆ ಮಿಳಿರ್ದು ಮೇಳಿಸಿ ತೋರ್ಕುಂ ೯೦

ವ|| ಮತ್ತಂ

ಪಲತೆಱದ ವಿಷಯದತ್ತಲ್
ತಲೆವಟ್ಟಿರ್ದಿಂದ್ರಿಯಂಗಳೈದಾಗಿರ್ದುಂ
ಸಲೆ ಶತಸಹಸ್ರಸಂಖ್ಯೆಯಿ
ನಲೆಯದೆ ಮಾಣ್ದಪುವೆ ಮಾಯ್ದು ಸಿರಿಯುಳ್ಳವರಂ ೯೧

ತ್ತದೆ. ಚಂದವಾಗುವಂತೆ ತಲೆಗೆ ಕಟ್ಟಿರುವ ರೇಷ್ಮೆಯ ವಸ್ತ್ರವೇ ಮುಂದೆ ಬರುವ ಮುಪ್ಪನ್ನು ಮರೆಸುತ್ತದೆ. ಬ್ರಾಹ್ಮಣರ ಕೈಯಲ್ಲಿರುವ ದರ್ಭೆಯು ಕಂತೆಯೆಂಬ ಕಸ ಪರಿಕೆಯು ಕ್ಷಮಾಗುಣವನ್ನು ತೊಡೆದುಹಾಕುತ್ತದೆ. ಹೀಗಾಗಿ ರಾಜರು ದುಷ್ಟರಾಗು ತ್ತಾರೆ. ೮೮. ಇನ್ನು ನಾವು ಮೇಲಿರುವ ಪರಲೋಕವನ್ನು ನೋಡಬೇಕಾದ್ದಿಲ್ಲ. ಅದನ್ನು ಮುಚ್ಚಿಬಿಟ್ಟಿದ್ದೇವೆ. ನೋಡಿ ಈಗ ಎಂದು ತೋರಿಸುವುದಕ್ಕೋ ಎಂಬಂತೆ ಅರಸುಗಳು ತಮ್ಮ ತಲೆಯಮೇಲೆ ಒಂದೇಸಮನೆ ಶ್ವೇತಚ್ಛತ್ರಗಳನ್ನು ಹಿಡಿಸಿಕೊಳ್ಳುತ್ತಾರೆ ! ೮೯. ದಳಪತಿಗಳು ರಾಜನ ಗುಣಗಳನ್ನು ಪುನಃ ಮರಳದಂತೆ ರಾಷ್ಟ್ರದ ಗಡಿಯಿಂದಾಚೆಗೆ ಓಡಿಸಿಬಿಡುವರೊ ಎಂಬಂತೆ 'ನಡೆಯಿರಿ, ನಡೆಯಿರಿ' ಎಂದು ದಾರಿಬಿಡಿಸುವಾಗ ಕೂಗುತ್ತಿರುತ್ತಾರೆ! ಒಳ್ಳೆಯ ಮಾತುಗಳನ್ನು ಆಡಲು ಬಂದವರನ್ನು ತಡೆಯುವವರಂತೆ ದ್ವಾರಪಾಲಕರು ಗದರಿಸುತ್ತಿರುತ್ತಾರೆ ! ೯೦. ರಾಜರುಗಳ ಒಳ್ಳೆಯ ಮಾತುಗಳನ್ನು ಸಂಪೂರ್ಣವಾಗಿ ಹಾರಿಸಿಬಿಡುವಂತೆ ಚಾಮರಗಳು ಬೀಸು ತ್ತಿರುತ್ತವೆ ! ಅವರ ಕೀರ್ತಿಯನ್ನು ತೊಡೆದುಬಿಡುವಂತೆ ಬಾವುಟಗಳು ತಡೆಯಿಲ್ಲದೆ ಒಟ್ಟಿಗೆ ಹಾರಾಡುತ್ತಿರುತ್ತವೆ ! ವ|| ಮತ್ತೆ ೯೧. ಅನೇಕ ವಿಧವಾದ ವಿಷಯಗಳ ಕಡೆಗೆ ಆಸಕ್ತವಾಗಿರುವ ಮತ್ತು ಹೆಸರಿಗೆ ಐದೇ ಆಗಿದ್ದರೂ ಲಕ್ಷಾಂತರ ಸಂಖ್ಯೆಯನ್ನು ಪಡೆ ದಂತಿರುವ ಇಂದ್ರಿಯಗಳು ನೀಚರಾದ ಶ್ರೀಮಂತರನ್ನು ಹಿಂಸೆಮಾಡದೆ ಬಿಡುತ್ತವೆಯೆ ?

ತನಗೆಡವಿಡದತಿಚಪಲಂ
ಮನಮದು ನೋಡೊಂದೆ ನೂಱು ಸೂರ್ಚಾಸಿರಮಾ
ಯ್ತೆನೆ ಬಿಡದೆ ಪಿಡಿದು ನೃಪರಂ
ಕನಲ್ಚಿ ತನ್ನಿಚ್ಚೆಗೊಯ್ವುದೊಂದಚ್ಚರಿಯೇ ೯೨

ಪಿರಿದುಮಧರ್ಮದೆ ಗತಿಗೆ
ಟ್ಟರಸುಗಳಿಲೆ ಪೆಳವುಗೊಂಡರೆಂಬಂತೆ ವಲಂ
ಕರವಿಡಿದು ಸಾರ್ಚುವೆತ್ತುವ
ತುರಿಪದೆ ಕೆಯ್ಗುಡುವುದಕ್ಕೆ ಲಜ್ಜಿಸರರೆಬರ್ ೯೩

ಇರದೀಗಳ್ ಸತ್ತಪರೆನಿ
ಪರವೋಲ್ ನಂಟರುಮನಱಿವರಲ್ಲರ್ ಭೂಪರ್
ಪಿರಿದುಂ ಕಣ್ಗಾಣದರಂ
ತಿರೆ ಕಾಣಲ್ಕಾಱರಲ್ತೆ ತೇಜಸ್ವಿಗಳಂ ೯೪

ಪುಸಿನುಡಿಯ ವಿಷವಿಪಾಕದ
ಮುಸಕದೆ ಮುಖರೋಗಮಾದವೋಲಿನಿತಾನುಂ
ಬಸವಲ್ಲದುಸಿರ್ವರೆಂದುಂ
ಪೊಸಸಿರಿಯಿಂ ಮೈಮೆವೆತ್ತ ಮಾಯ್ದ ಮನುಷ್ಯರ್ ೯೫

೯೨.ವಿಚಾರ ಮಾಡಿದರೆ ಬಹಳ ಚಪಲಸ್ವಭಾವದ ಮನಸ್ಸು ತಾನು ಒಂದೇ ಆದರೂ ನೂರಾರು ಸಾವಿರವಾಗಿ ಬಿಟ್ಟಿದೆಯೋ ! ಎಂಬಂತೆ ತೋರುತ್ತಾ ರಾಜರನ್ನು ತಪ್ಪಿಸಿ ಕೊಳ್ಳಲು ಅವಕಾಶವನ್ನೇ ಕೊಡದೆ ಕಾಡಿಸಿ ತನ್ನ ಇಷ್ಟಕ್ಕೇ ಒಳಪಡಿಸಿಕೊಳ್ಳುತ್ತದೆ. ಇದೇನೂ ಆಶ್ಚರ್ಯವಲ್ಲ. ೯೩. ಮತ್ತೆ ಕೆಲವರು ಬಹಳ ಪಾಪ ಮಾಡುವುದರ ಫಲ ವಾಗಿ ನಡಗೆ ಉಡುಗಿಹೋಗಿ ನಿಜವಾಗಿಯೂ ಹೆಳವರಾಗಿಬಿಟ್ಟರೋ ಎಂಬಂತೆ ಅಯ್ಯೋ ಪಾಪ ! ಬೇರೆಯವರು ಕೈಹಿಡಿದು ಬೇಗನೆ ನಡೆಸಲೆಂದು ಅವರಿಗೆ ತಮ್ಮ ಕೈಯನ್ನು ಕೊಡುವುದಕ್ಕೂ ನಾಚಿಕೆಪಡುವುದಿಲ್ಲ ! ಟಿ॥ ರಾಜರುಗಳನ್ನು ಪರಿಜನರು ಹಸ್ತಲಾಘವ ಕೊಟ್ಟು ಕರೆದುಕೊಂಡು ಹೋಗುತ್ತಾರೆ. ಅದನ್ನು ಕವಿ ಈ ರೀತಿ ಪರಿ ಹಾಸ್ಯ ಮಾಡಿದ್ದಾನೆ. ೯೪, ಅರಸರು ಈಗಲೆ ಮರಣಕಾಲವೊದಗಿಬಂದವರಂತೆ ನೆಂಟರಿಷ್ಟರನ್ನೂ ಗುರುತಿಸಲಾರರು ಮತ್ತು ತೇಜಸ್ವಿಗಳನ್ನು ನೋಡುವುದಕ್ಕೆ ಕುರುಡ ರಂತೆ ಅಸಮರ್ಥರಾಗುತ್ತಾರೆ. ಟಿ॥ ಇಲ್ಲಿ ಸಂಸ್ಕೃತಮೂಲಕ್ಕೆ ಅನುಸಾರವಾಗಿ "ಕಣ್ಣು ಬೇನೆ ಬಂದವರಂತೆ" ಎಂದು ಭಾವಿಸಬೇಕು. ೯೫. ಸುಳ್ಳುಮಾತೆಂಬ ವಿಷದ ದೊಡ್ಡ ದಾದ ಕೆಟ್ಟ ಪಾಪದಿಂದ ಬಾಯಿಬೇನೆ ಬಂದವರಂತೆ ಹೇಗೋ ಕಷ್ಟಪಟ್ಟು ತೊದಲುತ್ತಾ

ಪೊಡೆದುದು ಗರವತಿಕೋಪದೆ
ಪಿಡಿದುದು ಪುಲಿ ಗಾಳಿ ಸೋಂಕಿದತ್ತು ಪಿಶಾಚಂ
ತೊಡರ್ದುದು ಭೂತಂ ಬನ್ನಂ
ಬಡಿಸಿದುದೆನೆ ಸಿರಿಯೊಳರಸುಗಳ್ ಮೆಯ್ಯಱಿಯರ್ ೯೬

ಜನಪತಿಗಳ್ ನೋಡಲ್ಕತಿ
ಮನೋಹರಾಕೃತಿಗಳಾಗಿಯುಂ ನಾಡೆ ಜಗ
ಜ್ಜನಸಂಕುಲಕ್ಕೆ ಪಿರಿದುಂ
ವಿನಾಶಹೇತುಗಳಕಾಲಫಲಕುಸುಮದವೊಲ್ ೯೭

ವ॥ ಅಂತು ಗರ್ವಪರ್ವತಾರೂಢರಪ್ಪುರ್ವರಾಧೀಶ್ವರರ ಸರ್ವಸ್ವಮಂ ವಂಚಿಸಿ ಕೊಳಲೆಂದವರ್ಗಳ ಸಮೀಪದೊಳಗಾಮಿಷಕೆಱಗುವ ಪದ್ದುಗಳುಮಾಸ್ಥಾನಮೆಂಬ ಕೊಳದೊಳಗೆ ಪಾರ್ವ ಬಕಂಗಳುಮೆನಿಪಂತಿರ್ದು ತಮ್ಮ ಕಜ್ಜಕ್ಕೆ ಕೆಲರ್ ಧೂರ್ತರರಸುಗಳಂ ಪ್ರತಾರಿಸುತಿರ್ಪ ರದೆಂತೆನೆ

ಪಿರಿಯಕ್ಕರ॥ ಗುರುಃವನಿದಿರಿಪುದೆ ನಿಜಪ್ರಭುತೆ ಜೂದು ವಿನೋದಂ ಕಳ್ಮಿಡಿವುದೆ ವಿಲಾಸಂ
ಪಿರಿದು ಬೇಂಟೆಯಾಡುವುದೆ ಶಕ್ತಿಗೆ ಹೇತು ಕುಲವಧೂತ್ಯಾಗಮೆ ನಿರ್ವ್ಯಸನಂ
ನೆರೆದು ಪರದಾರಮಂ ಕಲಿವುದೆ ಚತುರತ್ವಂ ಸೊಕ್ಕುವುದೆ ಬಂಟುತನವನ್ಯರ್
ಪರಿಭವಿಸಿದೊಡಂಜುವುದೆ ಸೈರಣೆ ತರಳತೆಯೆ ನೋಡುತ್ಸಾಹಮೆಂಬರ್
ಧೂರ್ತರ್ ೯೮

ತೊದಲುತ್ತಾ ಮಾತನಾಡುತ್ತಾರೆ. ೯೬. ಗ್ರಹ ಬಡಿದಂತೆಯೂ ಹುಲಿಯು ಬಹಳ ಕೋಪದಿಂದ ಹಿಡಿದಂತೆಯೂ ದೆವ್ವ ಹಿಡಿದಂತೆಯೂ ಪಿಶಾಚಿ ಅಮರಿಕೊಂಡಂತೆಯೂ ಭೂತವು ಉಪದ್ರವ ಕೊಡುತ್ತಿರುವಂತೆಯೂ ಅರಸುಗಳು ಐಶ್ವರ್ಯದಿಂದ ಮೈಮರೆಯುತ್ತಾರೆ. ೯೭. ರಾಜರು ನೋಡುವುದಕ್ಕೇನೋ ಬಹಳ ರಮ್ಯವಾದ ಆಕಾರವುಳ್ಳವರಾಗಿ ತೋರುತ್ತಾರೆ. ಆದರೂ ಅಕಾಲಪುಷ್ಪದಂತೆ ಪ್ರಜಾವರ್ಗದ ವಿನಾಶಕ್ಕೆ ಬಹಳಮಟ್ಟಿಗೆ ಕಾರಣರಾಗುತ್ತಾರೆ. ಟಿ॥ ಯಾವುದಾದರೂ ಗಿಡಮರಗಳಲ್ಲಿ ಅಕಾಲದಲ್ಲಿ ಹೂಬಿಟ್ಟರೆ ಅದು ದೇಶಕ್ಕೆ ಅನಿಷ್ಟಸೂಚನೆಯೆಂದು ಹೇಳಲ್ಪಟ್ಟಿದೆ. ವ॥ ಹೀಗೆ ಅಹಂಕಾರವೆಂಬ ಪರ್ವತವನ್ನು ಏರಿಕುಳಿತಿರುವ ರಾಜರುಗಳ ಸರ್ವಸ್ವವನ್ನೂ ಮೋಸಮಾಡಿ ಸುಲಿದುಕೊಳ್ಳಬೇಕೆಂದು ಅವರ ಹತ್ತಿರದಲ್ಲಿ ಮಾಂಸಕ್ಕೆ ಎರಗುವ ಹದ್ದುಗಳಂತೆಯೂ ಆಸ್ಥಾನವೆಂಬ ಕೊಳದೊಳಗೆ ಹಾರಾಡುವ ಬಕಗಳಂತೆಯೂ ಇರುವ ಕೆಲವರು ಧೂರ್ತರು ಸ್ವಾರ್ಥಕ್ಕಾಗಿ ರಾಜರುಗಳನ್ನು ಮೋಸಗೊಳಿಸುತ್ತಿರುತ್ತಾರೆ. ಹೇಗೆಂದರೆ ೯೮. ಆ ಮೋಸಗಾರರು ಗುರುಗಳನ್ನು ಎದುರಿಸಿನಿಲ್ಲುವುದನ್ನು ಸ್ವಾತಂತ್ರ್ಯವೆನ್ನುತ್ತಾರೆ. ಜೂಜನ್ನು ವಿನೋದವೆನ್ನುತ್ತಾರೆ. ಹೆಂಡಕುಡಿಯುವುದನ್ನು ವಿಲಾಸ ಎನ್ನುತ್ತಾರೆ. ಹೆಚ್ಚು ಹೆಚ್ಚು ಬೇಟೆಯಾಡುವುದನ್ನು ಶಕ್ತಿವರ್ಧಕವೆನ್ನುತ್ತಾರೆ.

ವ॥ ಅದಲ್ಲದೆಯುಂ ಪಲವುಂ ದೋಷಂಗಳಂ ಗುಣಂಗಳಾಗೇಱಿಸಿ ತಮ್ಮೊಳ್ ಕೈವೊಯ್ದು ನಗುತ್ತುಂ ಪ್ರತಾರಣಕುಶಲರಪ್ಪ ವಂಚನಾಕರರ ಮಾನುಷೋಚಿತಮಪ್ಪ ಪೊಗೞ್ತೆ ಯಿಂ ಪೊಗೞುತ್ತುವಿರಲದನವಿತಥಮೆಂದು ಬಗೆದು ಮಿಥ್ಯಾಮಾಹಾತ್ಮ್ಯಗರ್ವನಿರ್ಭರರಾಗಿ

ಮುನಿದೊಡೆ ಭಸ್ಮಮಾದಪುದು ಲೋಕಮೆನಲ್ ನೊಸಲೊಳ್ ತೃತೀಯಲೋ
ಚನಮೆಮಗುಂಟು ತೋಲಮುಱಿಯಿಂದದು ತೋಱಿಪುದಿಲ್ಲೆನುತ್ತುಮೀ
ಮನುಜರ ಗೆಯ್ತಮಂ ಬಿಸುಟು ದೇವರೆಮೆಂಬಭಿಮಾನಮೇಱಿ ಮು
ಯ್ವೊನೆಗಳ ನೋಟ್ಟಪರಿನ್ನೆರಡು ತೋಳೊಳವೆಂಬವೊಲುರ್ವರೇಶ್ವರರ್ ೯೯

ಮೊದಲೊಳ್ ತಮ್ಮನೆ ನೋಡಲಿತ್ತ ಪದದೊಳ್ ಕೈಕೊಂಡವರ್ ತಾಮೆ ನೋ
ಡಿದೊಡೋರಂತುಪಕಾರಮಂ ಮೆಱೆದವರ್ ಮಾತಾಡಿದಂದರ್ಧರಾ
ಜ್ಯದ ಪೆಂಪಂ ದಯೆಗೆಯ್ದವರ್ ಬೆಸಸಿದಂದಾಗಳ್ ವರಂಗೊಟ್ಟವರ್
ಪದಪಿಂ ಮುಟ್ಟಿದರೈದೆ ರಕ್ಷಿಸಿದವರ್ ಭೂಪರ್ ಧರಾಚಕ್ರದೊಳ್ ೧೦೦

ಕೈಹಿಡಿದ ಕುಲೀನಳಾದ ಪತ್ನಿಯನ್ನು ತೊರೆಯುವುದನ್ನು ವೈರಾಗ್ಯವೆನ್ನುತ್ತಾರೆ. ಪರಸ್ತ್ರೀಯೊಂದಿಗೆ ಬೆರೆಯುವ ಭಂಡತನವನ್ನು ನಿಪುಣತನವೆನ್ನುತ್ತಾರೆ. ಕೊಬ್ಬುವು ದನ್ನು ಪರಾಕ್ರಮವೆನ್ನುತ್ತಾರೆ, ಇತರರು ಅವಮಾನ ಮಾಡಿದಾಗ ಹೆದರಿಕೊಂಡು ಸುಮ್ಮನಾಗುವುದನ್ನು ಸೈರಣೆಯೆನ್ನುತ್ತಾರೆ. ಚಪಲತೆಯನ್ನು ಉತ್ಸಾಹವೆನ್ನುತ್ತಾರೆ. ನೋಡಪ್ಪ ! ವ॥ ಅಲ್ಲದೆ ಅವರ ಕೆಲವು ದೋಷಗಳನ್ನೇ ಗುಣಗಳೆಂದು ಹೊಗಳಿ, ಹಿಂದುಗಡೆಯಲ್ಲಿ ಚಪ್ಪಾಳೆ ತಟ್ಟಿಕೊಂಡು ನಗುತ್ತಾ, ಮೋಸದಲ್ಲಿ ನಿಪುಣರಾದ ವಂಚಕರು ತಾವು ಮಾನವನ ಶಕ್ತಿಗೂ ಮೀರಿರುವ ಮಹಿಮೆಯುಳ್ಳ ಪವಾಡಪುರುಷರೆಂದು ಹೊಗಳುತ್ತಿದ್ದರೆ ಅದೆಲ್ಲವನ್ನೂ ನಿಜವೆಂದೇ ನಂಬಿ ಈ ಆರೋಪಿತವಾದ ಪವಾಡದ ಜಂಭದಿಂದ ತುಂಬಿದವರಾಗಿ, ೯೯. 'ನಾವು ಕೋಪಿಸಿಕೊಂಡರೆ ಲೋಕವೆಲ್ಲವೂ ಸುಟ್ಟು ಬೂದಿಯಾಗುವುದು. ನಮಗೆ ಪರಮೇಶ್ವರನಿಗಿರುವಂತೆ ಹಣೆಯಲ್ಲಿ ಮೂರನೆಯ ಕಣ್ಣು ಇದೆ ! ಅದು ಚರ್ಮದ ಅಡಿಯಲ್ಲಿರುವುದರಿಂದ ಕಾಣಿಸುವುದಿಲ್ಲ!' ಎಂದು ಭಾವಿಸಿ ಕೊಳ್ಳುತ್ತ, ಸಾಮಾನ್ಯಮನುಷ್ಯರಂತೆ ಕೆಲಸಕಾರ್ಯಗಳನ್ನು ಮಾಡುವುದನ್ನು ಬಿಟ್ಟು, ಅಮಾನುಷಕಾರ್ಯಗಳನ್ನು ಮಾಡಲು ತೊಡಗುತ್ತಾರೆ. ನಾವೇ ದೇವರು ಎಂಬ ದುರಭಿಮಾನವು ಹೆಚ್ಚಲಾಗಿ ತಮಗೂ ಶ್ರೀಮನ್ನಾರಾಯಣನಂತೆ ಇನ್ನೂ ಎರಡು ತೋಳುಗಳಿವೆಯೋ ಎಂಬಂತೆ ತಮ್ಮ ಹೆಗಲುಗಳನ್ನು ತೂಗಾಡಿಸುತ್ತ ನೋಡಿಕೊಳ್ಳು ತ್ತಾರೆ ! ೧೦೦. ಮೊದಲು ಯಾರಿಗಾದರೂ ಭೇಟಿಗೆ ಅವಕಾಶವನ್ನು ಕೊಟ್ಟುಬಿಟ್ಟರೆ ಸಾಕು, ಅವರಿಗೆ ದೊಡ್ಡ ಅನುಗ್ರಹಮಾಡಿಬಿಟ್ಟೆವೆಂದು ಭಾವಿಸಿಕೊಳ್ಳುತ್ತಾರೆ. ತಾವು ಅವರನ್ನು ನೋಡಿಬಿಟ್ಟರೆ ಪರಮೋಪಕಾರವನ್ನು ಮಾಡಿಬಿಟ್ಟೆವೆಂದು ಭಾವಿಸುತ್ತಾರೆ. ಯಾರೊಂದಿಗಾದರೂ ಮಾತಾಡಿಬಿಟ್ಟರೆ ಅವರಿಗೆ ಅರ್ಧರಾಜ್ಯದ ವೈಭವವನ್ನು ದಾನ ಮಾಡಿಬಿಟ್ಟವರಂತೆ ಶಿಳಿದುಕೊಳ್ಳುತ್ತಾರೆ. ಯಾರಿಗಾದರೂ ಅಪ್ಪಣೆಮಾಡಿದರೆ ವರವನ್ನೇ

ವ॥ ಅಂತುಮಲ್ಲದೆಯುಂ

ಗುರುಗಿದಿರೇಳ್ವರೆ ಪೊಡವಡು
ವರೆ ದೇವರನರ್ಚಿಸುವರೆ ಪಾರ್ವರನಱಿದಾ
ದರಿಪರೆ ಮಾನ್ಯರ ಮನ್ನಿಸು
ವರೆ ಪೂಜ್ಯರ ಪಿರಿದೆನಿಸುವ ಗರ್ವದೆ ಭೂಪರ್ ೧೦೧

ಮಱಿಯುದಹೋರಾತ್ರಂ ಕ
ಯ್ಮಱಿದಿಲ್ಲದ ಗುಣಮನಂತೆ ಬಿಡದೇಱಿಸಿ ಪೊ
ಚ್ಚಱಿಸುತ್ತಮಿರ್ಪ ಪಿಡ್ಗ
ರ್ಗೆಱಗುವರಱಿವಿಲ್ಲದವನಿಪಾಲರ್ ಜಗದೊಳ್ ೧೦೨

ಅವರನೆ ಪೊರೆವರ್ ಪೆರ್ಚಿಪ
ರವರನೆ ಸಾರಿರ್ಪಿರವರನವರೊಳೆ ನುಡಿ ನೋ
ಡವರ್ಗಳೆ ನಂಟರ್ ಕೂಡುವ
ರವರೊಳೆ ಮನ್ನಿಪುದುಮವರನವರೊಳೆ ಕೂಟಂ ೧೦೩

ವ॥ ಅಂತೆನಿಸಿದರಸುಮಕ್ಕಳ್ಗತಿನೃಶಂಸಮಪ್ಪ ಕೌಟಿಲ್ಯಶಾಸ್ತ್ರಪ್ರಮಾಣದಿನುಪಾಂಶು ವಧೋಪದೇಶಮಂ ಮಾಳ್ಪ ನಿಪುಣನೇ ಪರಮಪಂಡಿತನೆನಿಸಃಗುಂ ಅಭಿಚಾರಕ್ರಿಯಾಕ್ರೂರ

ಕೊಟ್ಟಂತೆ ತಿಳಿದುಕೊಳ್ಳುತ್ತಾರೆ. ಒಂದು ವೇಳೆ ಪ್ರೀತಿಯಿಂದ ಮುಟ್ಟಿದರೆ ಅವರನ್ನು ಉದ್ಧಾರಮಾಡಿಬಿಟ್ಟೆವೆಂದು ತಿಳಿದುಕೊಂಡುಬಿಡುತ್ತಾರೆ. ವ॥ ಅದಲ್ಲದೆ ೧೦೧. ಮಿಗಿಲಾದ ಅಹಂಕಾರದಿಂದ ಕೂಡಿದ ರಾಜರು ಗುರುಹಿರಿಯರು ಬಂದರೆ ಎದ್ದು ನಿಲ್ಲುತ್ತಾರೆಯೆ ? ದೇವರಿಗೆ ನಮಸ್ಕಾರ ಮಾಡುತ್ತಾರೆಯೆ ? ಬ್ರಾಹ್ಮಣರನ್ನು ಅವರ ಯೋಗ್ಯತೆಯನ್ನು ತಿಳಿದು ಪೂಜಿಸುತ್ತಾರೆಯೆ ? ಮಾನ್ಯರನ್ನು ಆದರಿಸುತ್ತಾರೆಯೆ ? ಪೂಜ್ಯರನ್ನು ಮನ್ನಿಸುತ್ತಾರೆಯೆ ? ೧೦೨. ಕೆಲವರು ವಿಟರು ಹಗಲೂ ರಾತ್ರಿ ಅದೇ ಜ್ಞಾನದಿಂದ ಆಶ್ಚರ್ಯವನ್ನು ಸೂಚಿಸುತ್ತಾ ಇಲ್ಲದ ಗುಣವನ್ನು ಆರೋಪಿಸಿ ಅವರನ್ನು ಉಬ್ಬಿಸುತ್ತಾರೆ. ಈ ಪ್ರಪಂಚದಲ್ಲಿ ತಿಳುವಳಿಕೆಯಿಲ್ಲದ ರಾಜರು ಅಂತಹವರಿಗೇ ತಲೆಬಾಗುತ್ತಾರೆ. ೧೦೩. ಅಂತಹವರನ್ನೇ ಕಾಪಾಡುತ್ತಾರೆ. ಅವರನ್ನೇ ಹೆಚ್ಚಿಸುತ್ತಾರೆ. ಅವರನ್ನೇ ಸಮೀಪದಲ್ಲಿರಿಸಿಕೊಳ್ಳುತ್ತಾರೆ. ಅವರೊಡನೆಯೇ ಮಾತನಾಡುತ್ತಾರೆ. ಅವರೇ ಇವರಿಗೆ ನಂಟರು. ಅವರೊಂದಿಗೇ ಬೆರೆಯುತ್ತಾರೆ. ಅವರನ್ನೇ ಗೌರವಿಸುತ್ತಾರೆ. ಅವರೊಂದಿಗೇ ಸ್ನೇಹದಿಂದಿರುತ್ತಾರೆ, ನೋಡಪ್ಪ.! ವ॥ ಇಂತಹ ರಾಜಪುತ್ರರಿಗೆ ಕೌಟಿಲ್ಯನಿಂದ ರಚಿಸಲ್ಪಟ್ಟಿರುವ ಪರಹಿಂಸೆಯನ್ನೇ ಬೋಧಿಸುವ ಅರ್ಥಶಾಸ್ತ್ರದ ಪ್ರಮಾಣದಿಂದ ನಿಗೂಢಕೊಲೆಯನ್ನು ಉಪದೇಶಿಸುವ ನಿಪುಣನೇ ಉದ್ದಾಮಪಂಡಿತನೆನಿಸಿಕೊಳ್ಳುತ್ತಾನೆ. ಮಾಟ ಕೂಟಗಳನ್ನು ಮಾಡಿಸುವ ಸ್ವಭಾವತಃ ನಿರ್ದಯನಾದ

ಪ್ರಕೃತಿಯಪ್ಪ ಪುರೋಹಿತನೆ ಗುರುವೆನಿಸುಗುಂ ಪರದಾರಾಭಿಗಮನವಮಂ ನಿಯೋಜಿಸುವ ದುಷ್ಟನೇ ವಿಶ್ವಾಸಭೂಮಿಯೆನಿಸಿದ ಮಿತ್ರನೆನಿಸುಗುಂ ಸ್ನೇಹಾರ್ದ್ರಹೃದಯ ನಿರ್ಮಲರುಮಪ್ಪ ಸಹೋದರರುಮಂ ನಿನಗವರ್ ಪಗೆವರೆಂದವರ್ಗೆ ಭಂಗಮಂ ಮಾಡಿ ಕಿಟ್ಟಿ ಕಳೆಯಿಸುವ ಮಹಾ ಪಾತಕನೇ ಸಚಿವೋತ್ತಮನೆನಿಸುಗುಂ ಅದಱಿನಿಂತಪ್ಪ ದುಷ್ಟಚೇಷ್ಟಾಸಹಸ್ರದಾರುಣಮಪ್ಪ ರಾಜ್ಯತಂತ್ರದೊಳೆಂತಪ್ಪನುಂ ಮೋಹಿಸದಿರನದು ಕಾರಣದಿಂ

ಬೆಸನಂಗಳ್ ತನುವಿಚ್ಚೆಗೊಯ್ವುವದಱಿಂ ಲಕ್ಷ್ಮೀವಿಡಂಬಂ ವಿಡಂ
ಬಿಸದಂತಾಗಿರೆ ಮಾನ್ಯರೆಲ್ಲ ತೆಱದಿಂದಂ ಪೊಕ್ಕು ನಿನ್ನಂ ಚಟೂ
ಕ್ತಿಸದಂತಾಗಿರೆ ಕಾಮಿನೀತತಿ ವಿಲಾಸಾಪಾಂಗದಿಂದಂ ಪ್ರತಾ
ರಿಸದಂತಾಗಿರಲಾತ್ಮವಂತನೆನಿಸೆಂದುಂ ರಾಜವಿದ್ಯಾಧರಾ ೧೦೪

ವ॥ ಅದಲ್ಲದೆಯುಂ ಯುವರಾಜ್ಯಾಭಿಷೇಕಮಂ ಕೆಯ್ಕೊಂಡು ಕುಲಕ್ರಮಾಗತ ರಾಜ್ಯ ಭಾರಧೌರೇಯನಾಗಿ ಸಕಲದಿಗ್ವಿಜಯೋದ್ಯೋಗಂಗೆಯ್ದು ಸಪ್ತದ್ವೀಪಾಲಂಕಾರೆಯಪ್ಪ ವಸುಂಧರೆಯನೇಕಚ್ಛತ್ರಮಪ್ಪಂತಿರಾಳ್

ಪುರೋಹಿತನೇ ಗುರುವೆನಿಸಿಕೊಳ್ಳುತ್ತಾನೆ. ಹಾದರವನ್ನು ಬೋಧಿಸುವ ದುಷ್ಟನೇ ನಚ್ಚಿನ ಗೆಳೆಯನೆನಿಸಿಕೊಳ್ಳುತ್ತಾನೆ. ಸಹೋದರಸ್ನೇಹದಿಂದ ಮೃದುವಾದ ಹಾಗೂ ಕಲ್ಮಷ ವಿಲ್ಲದ ಮನಸ್ಸುಳ್ಳ ಅಣ್ಣತಮ್ಮಂದಿರನ್ನು ಅವರು ನಿಮಗೆ ಶತ್ರುಗಳೆಂದು ಹೇಳಿಕೊಟ್ಟು ತೊಂದರೆಗೀಡುಮಾಡಿಸಿ ಸ್ಥಾನಭ್ರಷ್ಟರನ್ನಾಗಿ ಮಾಡಿಸುವ ಮಹಾಪಾಪಿಷ್ಠನೇ ಶ್ರೇಷ್ಠ ಮಂತ್ರಿ ಎನಿಸುತ್ತಾನೆ. ಆದ್ದರಿಂದ ಈ ಪರಿಯಾದ ಸಾವಿರಾರು ದುರ್ವ್ಯವಹಾರಗಳಿಂದ ಭಯಂಕರವಾದ ರಾಜಕೀಯದಲ್ಲಿ ಎಂತಹವನಾದರೂ ಭ್ರಾಂತನಾಗದಿರುವುದಿಲ್ಲ. ಅ ಕಾರಣದಿಂದ ೧೦೪. ಎಲೈ ರಾಜನೀತಿಜ್ಞನೆ, ಕೆಟ್ಟ ಚಟಗಳು (ಮನುಷ್ಯನನ್ನು)ಶರೀ ರದ ವಿಷಯಭೋಗಗಳ ಕಡೆಗೆ ಸೆಳೆಯುತ್ತವೆ. ಆದ್ದರಿಂದ ಸಿರಿಯ ಆಣಕವು ನಿನ್ನನ್ನು ಮೋಸಗೊಳಿಸದಂತೆ ನೋಡಿಕೊ. ಅಯೋಗ್ಯರು ನಾನಾ ರೀತಿಯಿಂದ ಒಳಗೆ ಸೇರಿ ನಿನ್ನನ್ನು ಮುಖಸ್ತುತಿಮಾಡುವುದಕ್ಕೆ ಅವಕಾಶವನ್ನು ಕೊಡಬೇಡ. ಹೆಂಗಸರ ಗುಂಪು ತಮ್ಮ ಬಿನ್ನಾಣದ ಕುಡಿನೋಟದಿಂದ ನಿನ್ನನ್ನು ಮೋಸಗೊಳಿಸದಂತೆ ಯಾವಾಗಲೂ ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡಿರು. ವ॥ ಅದಲ್ಲದೆ ಯುವರಾಜಪಟ್ಟಾ ಭಿಷೇಕವನ್ನು ಮಾಡಿಸಿಕೊಂಡು, ವಂಶಪರಂಪರೆಯಿಂದ ಬಂದ ರಾಜ್ಯದ ಹೊರೆಯನ್ನು ಹೊತ್ತು, ದಿಕ್ಕುಗಳನ್ನೆಲ್ಲ ಗೆದ್ದುಕೊಂಡು ಬರಲು ವಿಜಯಪ್ರಯಾಣ ಬೆಳಸಿ ಏಳು ಕಡಲುಗಳಿಂದ ಸುತ್ತುವರಿಯಲ್ಪಟ್ಟಿರುವ ಈ ಭೂಮಿಯನ್ನೆಲ್ಲಾ ನಿನ್ನ ಸಾಮ್ರಾಜ್ಯಕ್ಕೆ

ನಗದಂತು ಜಗಂ ಗುರುಗಳ್
ಪೊಗಟ್ವಿಂತನುಜೀವಿಗಳ್ಗೆ ಶುಭಮಪ್ಪಂತು
ಬ್ಬೆಗವಮಾಗದಂತು ನಂಟ
ರ್ಗಗಣಿತಗುಣನೆನಿಸಿ ನಿಲ್ವುದಾಕಲ್ಪಾಂತಂ ೧೦೫

ವ॥ ಎಂದು ನುಡಿದ ಶುಕನಾಸೋಪದೇಶ ವಚನಾಮೃತನಿಚಯದಿಂ ಪ್ರಕ್ಷಾಳಿತ ನಾದಂತೆಯುಂ ಕಣ್ದೆಱೆದಂತೆಯುಮಲಂಕೃತನಾದಂತೆಯುಂ ಪವಿತ್ರೀಕೃತನಾದಂತೆಯು ಮತಿಪ್ರೀತಿಹೃದಯನಾಗಿ ಕಿಱಿದುಬೇಗಮಿರ್ದು ನಿಜಮಂದಿರಕ್ಕೆ ಚಂದ್ರಾಪೀಡಂ ಪೋಪುದು ಮಿತ್ತಲ್ ಗೃಹಮಹತ್ತರರ್ ಮುನ್ನಮೆ ಸಮಕಟ್ಟಿದ ಮಣಿಕುಟ್ಟಿಮದ ನಟ್ಟನಡುವೆ ಪೊಳೆವ ಪಟ್ಟವಣೆಯ ನಾಲ್ದೆಸೆಯೊಳೆಸೆವ ರತ್ನಭೃಂಗಾರುಘಟಂಗಳಿಂ ಪಸುರ್ಪೆಸೆದು ನಿಮಿರ್ದ ಜಾಗ ರಂಗಳಿಂ ತೊಳಗುವ ಮಣಿದರ್ಪಣಾಲಂಕೃತಗಳಪ್ಪ ಕಾಂಚನದ್ರೋಣಿಗಳಿಂ ಸುರಭಿಸಲಿಲ ಪರಿಮಳಕ್ಕೆಱಪ ಮಱಿದುಂಬಿಯ ಬಂಬಲಿಂ ನೀಲಾಂಬರದಿಂ ಬಾಸಣಿಸಿದಂತಿರ್ದ ಶಾತಕುಂಭ ಕಲಶಂಗಳಿನಭಿಷೇಕವಿಲಾಸಮಂ ನೋಡಲೆಂದಿೞಿತಂದ ವಿದ್ಯಾಧರವಿಳಾಸವತಿಯರೆನಿಪ ವಾರ ವಿಳಾಸಿನಿಯರಿಂ ಬಳಸಿದ ಗಾಯಕ ವಾದಕ ವಾಂಶಿಕ ವೈಣಿಕ ವೈತಾಳಿಕ ವಾಗ್ಮಿಕನಿಕಾಯದಿಂದೆಸೆ ವಭಿಷೇಕಮಂಟಪದೊಳ್ ಸಕಲ ರಾಜಲೋಕಮುಂ ಮಂತ್ರಿಮಂಡಲಮುಂ ಸಾಮಂತನಿ ಕಾಯಮುಂ ಮೌಹೂರ್ತಿಕಪ್ರಕರಮುಂ ನೆಱೆದಿರೆ

ಒಳಪಡಿಸಿಕೊಂಡು ಆಳು. ೧೦೫. ಲೋಕವು ನಗದಂತೆಯೂ, ಗುರುಹಿರಿಯರು ಹೊಗಳುವಂತೆಯೂ, ಪರಿಜನರಿಗೆ ಶುಭವಾಗುವಂತೆಯೂ, ನೇಂಟರಿಪ್ಪರಿಗೆ ವ್ಯಥೆಯಾಗ ದಂತೆಯೂ ಇದ್ದುಕೊಂಡು ಬಹಳ ಒಳ್ಳೆಯವನೆನಿಸಿಕೊಂಡು ಬಹಳಕಾಲ ಸುಖವಾಗಿ ರಾಜ್ಯಭಾರಮಾಡಿಕೊಂಡಿರು.” ವ॥ ಹೀಗೆ ಹೇಳಿದ ಶುಕನಾಸನ ಉಪದೇಶವಚನ ಗಳೆಂಬ ಅಮೃತದಿಂದ ತೊಳೆಯಲ್ಪಟ್ಟವನಾದಂತೆಯೂ, ಕಣ್ಣು ಬಿಟ್ಟವನಂತೆಯೂ, ಅಲಂಕರಿಸಲ್ಪಟ್ಟವನಂತೆಯೂ, ಪವಿತ್ರನಾದಂತೆಯೂ ಬಹಳ ಸಂತೋಷಗೊಂಡ ಮನಸ್ಸುಳ್ಳವನಾಗಿ ಸ್ವಲ್ಪಕಾಲವಿದ್ದು ಚಂದ್ರಾಪೀಡನು ತನ್ನ ಮನೆಗೆ ಹೋದನು. ಈಕಡೆ ಮೊದಲೆ ಏರ್ಪಡಿಸಿದ್ದ ರತ್ನಮಯವಾದ ನೆಲಗಟ್ಟಿನ ನಟ್ಟನಡುವೆ ಶೋಭಿಸುತ್ತಿರುವ ಸಿಂಹಾಸನದ ನಾಲ್ಕು ದಿಕ್ಕುಗಳಲ್ಲೂ ಪ್ರಕಾಶಿಸುವ ರತ್ನಖಚಿತವಾದ ಸುವರ್ಣ ಕುಂಭಗಳಿಂದಲೂ, ಹಸುರಿನಿಂದ ಶೋಭಿಸುತ್ತಾ, ಬೆಳೆದು ಹರಡಿಕೊಂಡಿರುವ ಅಂಕು ರಾರ್ಪಣದ ಸಸಿಗಳಿಂದಲೂ ಪ್ರಕಾಶಿಸುವ ಮತ್ತು ರನ್ನಗನ್ನಡಿಗಳಿಂದ ಸಿಂಗರಿಸಲ್ಪಟ್ಟಿ ರುವ ಚಿನ್ನದ ದೊನ್ನೆಗಳಿಂದಲೂ, ಸುವಾಸನೆಯಾದ ನೀರಿನ ವಾಸನೆಗೆ ಮುತ್ತುವ ಮರಿದುಂಬಿಗಳ ಗುಂಪಿನಿಂದ ಕಪ್ಪುಬಟ್ಟೆಯಿಂದ ಮುಚ್ಚಿದಂತಿರುವ ಸುವರ್ಣಕಲಶ ಗಳಿಂದಲೂ, ಪಟ್ಟಾಭಿಷೇಕದ ವಿನೋದವನ್ನು ನೋಡುವುದಕ್ಕಾಗಿ ಇಳಿದುಬಂದಿರುವ ವಿದ್ಯಾಧರರಮಣಿಯರಂತಿರುವ ಗಣಿಕೆಯರಿಂದಲೂ, ಸುತ್ತುವರಿದಿರುವ ಹಾಡುಗಾರರು

ತಾರಾಪೀಡಂ ನರೇಂದ್ರಪ್ರಕರಪರಿವೃತಂ ಯೌವರಾಜ್ಯಾಭಿಷೇಕ
ಪ್ರಾರಂಭಪ್ರೀತಿಯಿಂದಟ್ಟಿದ ಬಟಿಗೆ ಮಗಂ ಬರ್ಪುದುಂ ಮಂಗಳವ್ಯಾ
ಪಾರಂ ಪಾರ್ದಿರ್ಪುದುಂ ತಂದೆಯ ಪದಯುಗಮಂ ಬಂದು ಕಂಡಂ ಮನೋಜಾ
ಕಾರಂ ಮುಗ್ಧಾಂಗನಾಪೀವರಕುಚವಿಲಸತ್ತಾರಹಾರಂ ಕುಮಾರಂ ೧೦೬

ವ॥ ಅಂತು ಬಂದ ನಿಜನಂದನನಂ ಶುಭಲಗ್ನೋದಯದೊಳನೇಕ ಮಂಗಳಭೇರೀ ಮೃದಂಗಪಟಹಪಟುರವಂಗಳೆಸೆಯೆ ನೃಪೇಂದ್ರಂ ಮಜ್ಜನಪೀಠಮನಲಂಕರಿಸಿದಾಗಳ್

ನವರತ್ನವ್ರಾತ ಸರ್ವೌಷಧಿಫಲಮಿಳಿತಾಂಭೋಧಿತೀರ್ಥಾಪಗಾ ವಾ
ರಿವಿರಾಜಚ್ಚಂದ್ರಕಾಂತೋಪಲಕಲಶಮನಂದೆತ್ತಿ ಭೂಪಾಲಕಂಠೀ
ರವನಾನಂದಾಶ್ರುಧಾರಾತತಿ ನಿಮಿರ್ವಿನೆಗಂ ಯೌವರಾಜ್ಯಾಭಿಷೇಕೋ
ತ್ಸವಮಂ ಪುತ್ರಂಗಮಾತ್ಯಪ್ರಕರಪರಿವೃತಂ ಮಾಡಿದಂ ಸಾರ್ವಭೌಮಂ ೧೦೭

ಮರದಿಂ ಮರಕ್ಕೆ ದಾಂಗುಡಿ
ವರಿವೆಳಲತೆಯಂತೆ ನೀತಿಮಾಂಧಾತನೊಳಾ
ವರಿಸಿರ್ದ ರಾಜವಿದ್ಯಾ
ಧರನಲ್ಲಿಗೆ ರಾಜ್ಯಲಕ್ಷ್ಮಿ ನಿಲುಕಿದಳಾಗಳ್ ೧೦೮

ವಾದ್ಯಗಾರರು, ಕೊಳಲೂದುವವರು, ವೀಣೆ ಬಾರಿಸುವವರು, ಹೊಗಳುಭಟ್ಟರು, ವಾಚಾಳಿಗಳು ಮುಂತಾದವರಿಂದ ಶೋಭಿಸುವ ಪಟ್ಟಾಭಿಷೇಕಮಂಡಪದಲ್ಲಿ ಸಮಸ್ತ ರಾಜ ಸಮೂಹವೂ, ಅಧೀನರಾಜರೂ ಜೋಯಿಸರತಂಡವೂ ನೆರೆದಿರಲಾಗಿ, ೧೦೬. ರಾಜ ಸಮೂಹದಿಂದ ಕೂಡಿಕೊಂಡಿರುವ ತಾರಾಪೀಡಮಹಾರಾಜನು ಯುವರಾಜಪಟ್ಟಾಭಿ ಷೇಕವಿಧಿಯನ್ನು ಪ್ರಾರಂಭಿಸಬೇಕೆಂಬ ಅಭಿಲಾಷೆಯಿಂದ ಬರುವಂತೆ ದೂತರ ಮೂಲಕ ಹೇಳಿಕಳುಹಿಸಲು, ಮಂಗಳಕಾರ್ಯಗಳು ನಡೆಯಲು ಅವನನ್ನೇ ನಿರೀಕ್ಷಿಸುತ್ತಿರಲಾಗಿ ಸುಂದರಿಯರ ತೋರಮೊಲೆಗಳ ಮೇಲೆ ವಿಶೇಷವಾಗಿ ಶೋಭಿಸುವ ಶುಭ್ರವಾದ ಹಾರ ವುಳ್ಳ ಮನ್ಮಥನಂತಿರುವ ರಾಜಕುಮಾರನು ಬಂದು ತಂದೆಯ ಚರಣಗಳನ್ನು ಕಂಡನು, ವ॥ ಹಾಗೆ ಬಂದ ತನ್ನ ಮಗನನ್ನು ಸುಮುಹೂರ್ತದಲ್ಲಿ ಅನೇಕವಾದ ಮಂಗಳಕರವಾದ ನಗಾರಿ, ಮೃದಂಗ, ತಮಟೆಗಳ ದೊಡ್ಡ ಧ್ವನಿಯು ವ್ಯಾಪಿಸುತ್ತಿರಲು ಚಂದ್ರಾಪೀಡನು ಅಭಿಷೇಕಪೀಠವನ್ನು ಅಲಂಕರಿಸಿದಾಗ, ೧೦೭. ರಾಜಾಧಿರಾಜನಾದ ತಾರಾಪೀಡ ಚಕ್ರವರ್ತಿಯು ಮಂತ್ರಿಗಳಿಂದ ಕೂಡಿಕೊಂಡವನಾಗಿ ಆನಂದಬಾಷ್ಪಧಾರೆಗಳು ಕಣ್ಣುಗಳಿಂದ ಇಳಿಯುತ್ತಿರಲು, ಒಂಭತ್ತು ಬಗೆಯ ರತ್ನಗಳು, ಬಗೆಬಗೆಯಾದ ಗಿಡ ಮೂಲಿಕೆಗಳು ಮತ್ತು ಫಲಗಳಿಂದ ಕೂಡಿಕೊಂಡಿರುವ, ಸಮುದ್ರ ಮತ್ತು ಗಂಗಾದಿ ಮಹಾನದಿಗಳ ನೀರುಗಳಿಂದ ತುಂಬಿರುವ, ಚಂದ್ರಕಾಂತಶಿಲಾನಿರ್ಮಿತವಾದ ಕುಂಭ ಗಳನ್ನು ಎತ್ತಿ ತನ್ನ ಮಗನಿಗೆ ಯುವರಾಜಪಟ್ಟಾಭಿಷೇಕವನ್ನು ಮಾಡಿದನು. ೧೦೮. ಒಂದು ಮರದಲ್ಲಿ ಹಬ್ಬಿದ್ದು ಆ ಮರವನ್ನೂ ಬಿಡದೆ ಮತ್ತೊಂದು ಮರಕ್ಕೆ ಹಬ್ಬುವ ಎಳೆಬಳ್ಳಿಯಂತೆ, ಮಾಂಧಾತಚಕ್ರವರ್ತಿಗೆ ಸಮಾನನಾದ ನೀತಿವಂತನೆಂದು ಹೆಸರಾಂತ

ಪುದಿದೆಳೆಮಿಂಚುಗಳ್ ಪೊಳೆದವೋಲ್ ಸುಲಿಪಲ್ಗಳ ಕಾಂತಿ ಪೊಣ್ಮೆ ಪೂ
ಸಿದ ಸಿರಿಕಂದಮುಜ್ವಳಿಪ ಲೋಚನಮುಟ್ಟ ಸಿತಾಂಬರಂ ತುಱುಂ
ಬಿದ ನವಮಾಲಿಕಾಕುಸುಮಮಿಕ್ಕಿದ ಮುತ್ತಿನಲಂಬಣಂ ತೊಡ
ರ್ಚಿದ ಕುಸುಮಾವತಂಸಮುಮುರಲ್ಕೆಸೆದಂ ನೃಪರೂಪಚಂದ್ರಮಂ ೧೧೯

ಜನತಾಶೀರ್ವಾದಮುಂ ಮಂಗಳಪಟಹರವಾಟೋಪಮುಂ ವಿಪ್ರವೇದ
ಧ್ವನಿಯುಂ ಭೋರೆಂದು ಪೊಣ್ಮುತ್ತಿರೆ ನಿಜಜನಕಾದೇಶದಿಂ ಬಂದು ಸಿಂಹಾ
ಸನದೊಳ್ ಕುಳ್ಳಿರ್ದನಾನಂದಿತ ಗುರುನಿಕರಂತರ್ಪಿತಾಶೇಷ ವಿದ್ವ
ಜ್ಜನನತ್ಯುತ್ಸಾಹಿ ತೋರ್ವೀ ಭುವನಪತಿ ಸಭಾಂಭೋಜಿನೀರಾಜಹಂಸಂ ೧೨೦

ವ॥ ಅಂತು ಕಿಱಿದುಬೇಗಮಿರ್ಪುದುಂ ಆಗಳ್ ದಿಗ್ವಿಜಯಪ್ರಯಾಣಸೂಚಕಮು ಮರಿಕುಲಪ್ರಳಯನಿವೇದಕಮುಮೆನಿಸಿ

ಪೊಡೆದತ್ತುರ್ವರೆಯುಂ ಯುಗಾಂತದ ಸಿಡಿಲ್ಮೇಘಂ ತಟಿದ್ದಂಡದಿಂ
ಬಡಿದತ್ತಾದಿವರಾಹಘೋಣಹತಿಯಿಂ ಪಾತಾಳಗರ್ಭಂ ಸಿಡಿ
ಲ್ದೊಡೆದತ್ತಬ್ಧಿಯೊಳಿಂದು ಮಂದರನಗಂ ಬಿರ್ದತ್ತೆನಲ್ ಲೋಕದೊಳ್
ಬಿಡಮುಣ್ಮುತ್ತು ಸುವರ್ಣಕೋಣಹತಿಯಿಂ ಪ್ರಸ್ಥಾನಭೇರೀರವಂ ೧೨೧

ತಾರಾಪೀಡನಲ್ಲಿ ನೆಲೆಸಿದ್ದ ರಾಜ್ಯಲಕ್ಷ್ಮಿಯು ಅವನನ್ನೂ ತ್ಯಜಿಸದೆಯೇ ವಿದ್ಯಾಧರನಿಗೆ ಸಮಾನನೆನಿಸಿದ ಚಂದ್ರಾಪೀಡನನ್ನು ಬಂದು ಸೇರಿದಳು. ೧೧೯. ಹರಡುತ್ತಿರುವ ಬಳ್ಳಿಮಿಂಚುಗಳು ಹೊಳೆಯುವಂತೆ ಶುಭ್ರವಾದ ಹಲ್ಲುಗಳ ಹೊಳಪು ಹರಡುತ್ತಿರಲು, ಮೈಗೆ ಲೇಪಿಸಿರುವ ಚಂದನವೂ. ಉಟ್ಟುಕೊಂಡಿರುವ ಬಿಳಿಯ ರೇಷ್ಮೆಪಂಚೆಯೂ, ಮುಡಿದುಕೊಂಡಿರುವ ಹೆಜ್ಜಾಜಿಯ ಹೂವೂ, ಧರಿಸಿಕೊಂಡಿರುವ ಮುತ್ತಿನ ಹಾರವೂ, ಕಿವಿಯಲ್ಲಿ ಮುಡಿದುಕೊಂಡಿರುವ ಹೂವೂ ಹೊಂದಿಕೊಂಡಿರಲಾಗಿ ಚಂದ್ರನಿಗೆ ಸಮಾನ ನಾದ ರಾಜಪುತ್ರನು ಶೋಭಿಸುತ್ತಿದ್ದನು. ೧೨೦. ಪ್ರಜಾಸಮುದಾಯದ 'ಜಯ ! ಜಯ !' ಎಂಬ ಆಶಿರ್ವಾದಧ್ವನಿಯೂ, ಮಂಗಳಕ್ಕಾಗಿ ಬಾರಿಸುತ್ತಿರುವ ತಮಟೆಗಳ ಆಡಂಬರವೂ, ಬ್ರಾಹ್ಮಣರ ವೇದಘೋಷವೂ ಭೋರೆಂದು ಹರಡುತ್ತಿರಲಾಗಿ, ಗುರು ಹಿರಿಯರಿಗೆ ಆನಂದವನ್ನುಂಟುಮಾಡುವ, ನೆರೆದಿದ್ದ ವಿದ್ವಾಂಸರನ್ನೆಲ್ಲಾ ಯಥೋಚಿತ ಸಂಭಾವನೆಗಳಿಂದ ತೃಪ್ತಿಪಡಿಸಿದ, ಉತ್ಸಾಹಭರಿತರಾದ ಭೂಮಂಡಲದ ಸಮಸ್ತ ರಾಜರ ಸಮೂಹವೆಂಬ ತಾವರೆಗೊಳದಲ್ಲಿ ರಾಜಹಂಸದಂತೆ ವಿರಾಜಮಾನನಾದ ಯುವ ರಾಜ ಚಂದ್ರಾಪೀಡನು ತಂದೆಯ ಅಪ್ಪಣೆಯಂತೆ ಬಂದು ಸಿಂಹಾಸನದಲ್ಲಿ ಮಂಡಿಸಿದನು. ವ॥ ಹೀಗೆ ಸ್ವಲ್ಪಕಾಲವಿರಲಾಗಿ ದಿಗ್ವಿಜಯಪ್ರಯಾಣಕ್ಕೆ ಸೂಚಕವಾದ, ಶತ್ರುಗಳ ಸಮೂಹಕ್ಕೆ ಪ್ರಳಯಕಾಲವು ಸನ್ನಿಹಿತವಾಗಿರುವುದನ್ನು ಸೂಚಿಸುವಂತಿರುವ ೧೨೧. ಪ್ರಳಯಕಾಲದಲ್ಲಿ ಸಿಡಿಲು ಭೂಮಿಗೆ ಬಿದ್ದಂತೆಯೂ, ಮಿಂಚೆಂಬ ಕೋಲಿನಿಂದ ಮೇಘವು ಹೊಡೆಯಲ್ಪಟ್ಟಂತೆಯೂ, ಆದಿವರಾಹನ ಮೂಗಿನ ಹೊಡೆತದಿಂದ ಪಾತಾಳದ ಮಧ್ಯ

ವ॥ ಅಂತಾ ತ್ರೈಲೋಕ್ಯಕ್ಷೋದಕಾರಿಯಪ್ಪ ಭೇರೀರವಂ ಪೊಣ್ಮಲೊಡನೆ

ದೆಸೆದೆಸೆಯೊಳ್ ಭೇರೀರವ
ಮೆಸೆವುತ್ತಿರೆ ರತ್ನರಚಿತ ಸಿಂಹಾಸನದಿಂ
ವಸುಧಾಧಿಪನೆಟ್ದಂ ರಿಪು
ವಸುಧಾಧಿಪತತಿಯ ಲಕ್ಷ್ಮಿಯೊಡನೇಟ್ಪಿನೆಗಂ ೧೧೨

ವ॥ ಅಂತೇಟ್ಪುದುಮಾಗಳ್ ಸರಭಸದಿಂದೊಡನೇಟ್ಪ ರಾಜಲೋಕದ ಪರಸ್ಪರಸಂಘಟ್ಟನದಿಂ ವಿಘಟಿತವಾಗಿ ದಿಗ್ವಿಜಯದೊಳ್ ಸೂಸುವ ಮಂಗಳಲಾಜವರ್ಷದಂತ ಹಾರನಿಕರಂಗಳಿಂದುಚ್ಚಳಿಸುತ್ತುಮಲ್ಲೊಗುವ ಮೌಕ್ತಿಕನಿಕಾಯದ ನಡುವೆ

ಬಿಳಿಯ ಮುಗುಳ್ಗಳಂ ಸುರಿವ ಕಲ್ಪಮಹೀರುಹಮಾಲೆ ಸುತ್ತಿ ಕ
ಣ್ಗೊಳಿಸುವ ಪಾರಿಜಾತಮೆನೆ ಸೀಕರಮುಣ್ಮುವ ದಿಗ್ಗಜವ್ರಜಂ
ಬಳಸಿದ ದಿವ್ಯದಂತಿಯೆನೆ ನೀರ್ವನಿಯಂ ಸುರಿವಂಬುದಾಳಿ ಮಂ
ಡಳಿಸಿದ ಮೇಘಕಾಲಮೆನೆ ಕಣ್ಗೆಸೆದಂ ನೃಪರೂಪಚಂದ್ರಮಂ ೧೧೩

ಪ್ರದೇಶವು ಭೇದಿಸಲ್ಪಟ್ಟಂತೆಯೂ, ಸಮುದ್ರದಲ್ಲಿ ಮಂದರಪರ್ವತವು ಬಿದ್ದಂತೆಯೂ ಚಿನ್ನದ ಕೋಲಿನಿಂದ ಹೊಡೆಯಲ್ಪಟ್ಟ ಪ್ರಯಾಣಕಾಲದ ನಗಾರಿಯ ಶಬ್ದವು ಒಂದೇ ಸಮನೆ ಭೂಮಿಯಲ್ಲಿ ಹೊರಹೊಮ್ಮಿ ಹರಡುತ್ತಿತ್ತು. ವ॥ ಹಾಗೆ ಮೂರುಲೋಕವನ್ನೂ ಅಲ್ಲೋಲಕಲ್ಲೋಲಗೊಳಿಸುವ ನಗಾರಿಧ್ವನಿಯು ಹರಡುತ್ತಿರಲಾಗಿ ಕೂಡಲೆ, ೧೧೨. ದಿಕ್ಕುದಿಕ್ಕುಗಳಲ್ಲೂ ಭೇರೀಶಬ್ದವು ಮೊಳಗುತ್ತಿರಲು ಯುವರಾಜನು ರತ್ನಖಚಿತವಾದ ಸಿಂಹಾಸನದಿಂದ ಶತ್ರುಗಳ ರಾಜ್ಯಲಕ್ಷ್ಮಿಯೂ ಜೊತೆಯಲ್ಲಿಯೇ ಮೇಲಕ್ಕೇಳುತ್ತಿರಲು ಎದ್ದನು. ಟಿ॥ ಇವನು ಎದ್ದು ದಂಡಯಾತ್ರೆ ಮಾಡುವುದರಿಂದ ಶತ್ರುಗಳ ರಾಜ್ಯಲಕ್ಷ್ಮಿಯು ಅಲ್ಲಿಂದ ಎದ್ದು ಹೊರಡುತ್ತಾಳೆ. ಅಂದರೆ ಕೈಬಿಟ್ಟುಹೋಗುತ್ತಾಳೆ ಎಂದು ಅಭಿಪ್ರಾಯ. ವ॥ ಹಾಗೆ ಏಳಲು ಆಗ ಬೇಗಬೇಗನೆ ಜೊತೆಯಲ್ಲೇ ಏಳುತ್ತಿರುವ ರಾಜರುಗಳ ಗುಂಪಿನ ಪರಸ್ಪರ ತಿಕ್ಕಾಟದಿಂದ ಕಿತ್ತುಹೋಗಿರುವ, ಹಾರಗಳಿಂದ ಹೊರಬಿದ್ದು ಚೆಲ್ಲಾಡುತ್ತಿರುವ, ಆದರಿಂದಲೇ ದಿಗ್ವಿಜಯಕಾಲದಲ್ಲಿ ಮಂಗಳಾರ್ಥವಾಗಿ ಎರಚುವ ಅರಳಿನ ಮಳೆಯೋ ಎಂಬಂತೆ ಕಾಣುತ್ತಿರುವ ಮುತ್ತಿನ ಸಮೂಹದ ಮಧ್ಯದಲ್ಲಿ ೧೧೩. ಬಿಳಿಯ ಹೂವುಗಳನ್ನು ಸುರಿಸುವ ಕಲ್ಪವೃಕ್ಷಗಳ ಸಾಲಿನಿಂದ ಸುತ್ತುವರಿಯಲ್ಪಟ್ಟು ಕಂಗೊಳಿಸುತ್ತಿರುವ ಪಾರಿಜಾತವೃಕ್ಷದಂತೆಯೂ, ನೀರಿನ ತುಂತುರುಗಳನ್ನು ಹೊರಸೂಸುವ ದಿಗ್ಗಜಗಳ ಗುಂಪಿನಿಂದ ಸುತ್ತುವರಿಯಲ್ಪಟ್ಟ ಐರಾವತದಂತೆಯೂ, ಹಾಗೆಯೇ ನೀರಿನ ಹನಿಗಳನ್ನು ಸುರಿಸುವ ಮೋಡಗಳ ಸಾಲಿನಿಂದ ಸುತ್ತುವರಿಯಲ್ಪಟ್ಟ ವರ್ಷಕಾಲದಂತೆಯೂ ಚಂದ್ರಾಪೀಡನು ಶೋಭಿಸಿದನು.

ವ॥ ಅನಂತರಂ ನಿಜಜನನೀಜನಕರ ಚರಣಕಮಲಕ್ಕೆಱಗಿ ಪರಮಾಶೀರ್ವಾದಗಳನಾಂತು ಪತ್ರಲೇಖಾಸಮಾಧ್ಯಾಸಿತೋತ್ತರಾಸನೆಯುಂ ಪ್ರಸ್ಥಾನೋಚಿತ ಮಂಗಳಾಲಂಕಾರೆಯುಮಪ್ಪ ಪಿಡಿಯಂ ಚಂದ್ರಾಪೀಡನೇಱಿದಾಗಳ್

ಮಂದರದಿಂ ಕಡೆದಿಂಗಡ
ಲಿಂದುಣ್ಮಿದ ಸುೞಿಯಿದೆನೆ ದಶಾಸ್ಯನ ಕರದೊಳ್
ನಿಂದ ರಜತಾದ್ರಿಯೆನೆ ನೃಪ
ನಂದನಧವಳಾತಪತ್ರಮೆಸೆದತ್ತಾಗಳ್ ೧೧೪

ವ॥ ಅಂತು ಬಿಜಯಂಗೆಯ್ವುತ್ತಮಿರೆ ರಾಜಮಂದಿರದ್ವಾರದಿಂ ಪೊಱಗೆ

ಭುವನಾಧೀಶಪ್ರತಾಪಾನಲಬಹಳಶಿಖಾಜಾಲಮೋ ವೈರಿನಾಶೋ
ದ್ಭವ ಸರ್ವವ್ಯಾಪಿದಿಗ್ದಾಹಮೊ ನೃಪವರನಾನಂದದಿಂ ಬರ್ಪದೊಂದು
ತ್ಸವದಿಂ ಭೂಕಾಂತೆ ರಾಗಾತ್ಮಿಕೆಯೆನಿಸಿದಳೋ ಪೇೞಿಮೆಂಬಂತೆ ಭೂಭೃ
ನ್ನಿವಹವ್ಯಾಕೀರ್ಣ ನಾನಾ ಮಕುಟಮಣಿಗಣದ್ಯೋತಿ ಪರ್ವಿತ್ತದಾಗಳ್ ೧೧೫

ವ॥ ಅನಂತರಂ ನರೇಂದ್ರನಂದನಪ್ರಕರಂ ಚಂದ್ರಾಪೀಡಂಗಹಮಹಮಿಕೆಯಿಂ ಪ್ರಣಾಮಲಾಲಸರಾಗೆ

ವ॥ ಬಳಿಕ ತನ್ನ ತಾಯಿತಂದೆಗಳ ಅಡಿದಾವರೆಗಳಿಗೆ ಪ್ರಣಾಮವನ್ನು ಮಾಡಿ ಶ್ರೇಷ್ಠವಾದ ಆಶೀರ್ವಾದಗಳನ್ನು ಪಡೆದು, ಒಳಗಿನ ಪೀಠದಲ್ಲಿ ಪತ್ರಲೇಖೆಯು ಕುಳಿತುಕೊಳ್ಳಲು ಮಂಗಳಾಲಂಕಾರಗಳಿಂದ ಶೋಭಿಸುತ್ತಿರುವ ಹೆಣ್ಣಾನೆಯನ್ನು ಏರಿದನು. ೧೧೪. ಮಂದರಪರ್ವತವನ್ನು ಕಡೆದಾಗ ಉತ್ಪನ್ನವಾದ ಕ್ಷೀರಸಮುದ್ರದ ಸುಳಿಯಂತೆಯೂ, ರಾವಣನು ಕೈಯಲ್ಲಿ ಎತ್ತಿಹಿಡಿದಿದ್ದ ಕೈಲಾಸಪರ್ವತದಂತೆಯೂ ಇರುವ ಬಿಳಿಯ ಛತ್ರಿಯು ಅವನ ತಲೆಯ ಮೇಲೆ ಶೋಭಿಸುತ್ತಿತ್ತು. ವ॥ ಹಾಗೆ ಬಿಜಯ ಮಾಡು ತ್ತಿರಲಾಗಿ ಅರಮನೆಯ ಬಾಗಿಲಿನ ಹೊರಗೆ, ೧೧೫. ಹೊರಗಡೆ ದರ್ಶನಕ್ಕಾಗಿ ಕಾದು ಕೊಂಡಿರುವ ರಾಜರುಗಳ ಗುಂಪಿನ ಕಿರೀಟಗಳಲ್ಲಿ ಶೋಭಿಸುವ ನಾನಾಬಗೆಯ ರತ್ನಗಳ ಕಾಂತಿಯು ಹರಡುತ್ತಿತ್ತು. ಅದು ಯುವರಾಜನ ಪ್ರತಾಪವೆಂಬ ಅಗ್ನಿಯ ಅತ್ಯಧಿಕ ವಾದ ಜ್ವಾಲೆಗಳ ಸಮೂಹದಂತೆಯೂ, ಸನ್ನಿಹಿತವಾಗುತ್ತಿರುವ ಶತ್ರುನಾಶವನ್ನು ಸೂಚಿಸುವ ಎಲ್ಲಾ ಕಡೆಯಲ್ಲೂ ಹರಡಿರುವ ದಿಕ್ಕುಗಳಲ್ಲಿ ಏಳುತ್ತಿರುವ ಬೆಂಕಿಯಂತೆಯೂ ಮತ್ತು ಪಟ್ಟಾಭಿಷೇಕವಾದ ಮೇಲೆ ಅವನನ್ನು ಸೇರಲು ಸಂತೋಷದಿಂದ ಬರುವ ಭೂಮಿಯೆಂಬ ರಮಣಿಯು ಆನಂದದಿಂದ ರಾಗ (ಪ್ರೀತಿ ಕೆಂಪು) ವನ್ನು ತಾಳಿಬಿಟ್ಟಳೋ ಎಂಬಂತೆ ಕಾಣುತ್ತಿತ್ತು. ವ॥ ಬಳಿಕ ರಾಜಪುತ್ರರ ಸಮೂಹವು ಚಂದ್ರಾಪೀಡನಿಗೆ ನಾನು ಮುಂದೆ ತಾನು ಮುಂದೆ ಎಂದು ನಮಸ್ಕಾರ ಮಾಡಲು ಆಸಕ್ತಿಯುಳ್ಳವರಾಗು

ವಿನಯದಿನೆಱಗುವ ಭೂಪಾ
ಲನಿಚಯಚೂಡಾಮಣಿಪ್ರಭಾಮಂಡಳಮಂ
ದಿನಮಂಡಲ ಸಮುದಯದಿಂ
ದೆ ನಿಮಿರ್ವ ಕೆಂಗದಿರ್ಗಳೆಸಕಮಂ ಮಸುಳಿಸುಗುಂ ೧೧೬

ವ॥ ಅಂತೆಱಗಿದ ನರಪತಿಸಹಸ್ರಮಂ ನಿಮ್ಮ ನಿಮ್ಮ ವಾಹನಂಗಳನೇಱಿಮೆಂದು ಬೆಸಸಿ ಬಿಜಯಂಗೆಯ್ವಲ್ಲಿ ಪೆಱಗೆ ಢಕ್ಕಾರವದಿಂ ಬಧಿರಿತ ದಿಗಂತರಾಳಮೆನಿಸಿ ಬರುತ್ತಂ

ಎಳವಿಸಿಲಿಂದಲಂಕರಿಸಿ ಚಾಂದೊಱೆಯೊಳ್ಪೊನಲಿಂದಮೊಂದಿ ಮಂ
ಡಳಿಸಿದ ಧಾರೆಯಿಂ ತೊಳಪ ಶೃಂಗದಿನೊಪ್ಪುವ ಮೇರುವಿಲ್ಲಿ ಬಂ
ದೆಳಸಿತೆನಲ್ಕೆ ಸಿಂಧುರದ ಹಾರದ ಮಾಲೆಯ ಕಾಂತಿ ತಳ್ತು ಪ
ಜ್ವಳಿಸುವ ಕುಂಭಮಂ ತಳೆದು ಪಿಂತೆಸೆದಿರ್ದುದು ಗಂಧಸಿಂಧುರಂ ೧೧೭

ವ॥ ಅದಲ್ಲದೆಯುಂ

ತೊಳಗುವ ರತ್ನಾಭರಣಂ
ಗಳ ರುಚಿ ನಿಜರೋಮಕಾಂತಿಯೊಳ್ ತಳ್ತು ತೆಱಂ
ಬೊಳೆಯಲ್ಕಿಂದ್ರಾಯುಧಮೇಂ
ಪೊಳೆದುದೊ ನೃಪಸುತನ ಮುಂದೆ ತೆಗೆದುಬರುತ್ತಂ ೧೧೮

ತ್ತಿರಲಾಗಿ ೧೧೬. ವಿನಯಪೂರ್ವಕವಾಗಿ ನಮಸ್ಕರಿಸುವ ರಾಜರುಗಳ ತಲೆಮಣಿಗಳ ಕಾಂತಿಮಂಡಲದಿಂದ, ಸೂರ್ಯಮಂಡಲದಿಂದ ಹೊರಡುತ್ತಿರುವ ಕೆಂಬೆಳಗುಗಳ ಪ್ರಸಾರವು ಮುಚ್ಚಿಹೋಗುತ್ತಿತ್ತು. ವ॥ ಹಾಗೆ ನಮಸ್ಕರಿಸುವ ಸಾವಿರಾರು ಅರಸುಗಳನ್ನು ನಿಮ್ಮ ನಿಮ್ಮ ವಾಹನಗಳನ್ನು ಹತ್ತಿರಿ ಎಂದು ಅಪ್ಪಣೆ ಮಾಡಿ ಪ್ರಯಾಣ ಮಾಡುತ್ತಿರುವಲ್ಲಿ ಹೊರಗೆ ಢಕ್ಕೆಗಳ ಧ್ವನಿಯಿಂದ ದಿಕ್ಕುಗಳ ಮಧ್ಯಪ್ರದೇಶವೆಲ್ಲ ಕಿವುಡುಬಿದ್ದಂತೆ ಆಗುತ್ತಿರಲು ಮುಂದುವರಿಯುತ್ತ ಇರಲಾಗಿ ೧೧೭. ಹಿಂಭಾಗದಲ್ಲಿ ಒಂದು ಮದ್ದಾನೆಯು ಬರುತ್ತಿತ್ತು. ಅದರ ಕುಂಭಸ್ಥಳವು ಚಂದ್ರದ ಲೇಪನದಿಂದಲೂ, ಶುಭ್ರವಾದ ಮುತ್ತಿನಸರದಿಂದಲೂ, ಬಿಳಿಯ ಹೂವಿನಮಾಲಿಕೆಯಿಂದಲೂ ಪ್ರಕಾಶಿಸುತ್ತಿತ್ತು. ಇದರಿಂದ ಆ ಆನೆಯು ಎಳೆಯ ಬಿಸಿಲಿನಿಂದ ಶೋಭಿಸುವ ಮತ್ತು ದೇವಗಂಗಾನದಿಯ ಪ್ರವಾಹಧಾರೆಗಳಿಂದ ಸುತ್ತುವರಿಯಲ್ಪಟ್ಟಿರುವ ಶಿಖರವುಳ್ಳ ಮೇರುಪರ್ವತವೇ ಬಯಸಿ ಬಂದು ಹಿಂಬಾಲಿಸುತ್ತಿರುವಂತೆ ಕಾಣುತ್ತಿತ್ತು. ವ॥ ಅದಲ್ಲದೆ, ೧೧೮. ನಿಗಿನಿಗಿಗುಟ್ಟುವ ರತ್ನಾಭರಣಗಳ ಬೆಳಕು ತನ್ನ ರೋಮರಾಜಿಯ ಕಾಂತಿಯೊಂದಿಗೆ ಕೂಡಿ ಚೆನ್ನಾಗಿ ಪ್ರಕಾಶಿಸುತ್ತಿರಲು ರಾಜಕುಮಾರನ ಮುಂದುಗಡೆ ಹೋಗು

ವ॥ ಅನಂತರಮೆರಡನೆಯ ಯುವರಾಜನಂತೆ ಪಿಡಿಯನೇಱಿ ಬಲಗೆಲದೊಳಿರ್ದ ವೈಶಂಪಾಯನಂ ನಾಲ್ದೆಸೆಯೊಳಂ ಮದಗಜಾರೂಢರಾಗಿ ಪರಿವೇಷ್ಟಿಸಿರ್ದ ನರಪತಿಸಹಸ್ರಂ ಬೆರಸು ನೃಪರೂಪಚಂದ್ರಂ ಚಂದ್ರಾಪೀಡದೇವಂ ಪಿಡಿಯನೇಱಿ ಇಂದ್ರದಿಶಾಭಿಮುಖನಾಗೆ

ಎಡವಿಡದೆ ನೂಂಕಿ ಗಜಘಟೆ
ನಡೆಯಲ್ ಮೇಲೆಸೆದುವಾಂತ ಬೆಳ್ಗೊಡೆಗಳ್ ಪೆ
ರ್ಗಡಲ ತೆರೆದಂಡುಗಲೊಳ್ ನೂ
ರ್ಮಡಿಯೆನೆ ಮಾರ್ತೊಳಗುವಿಂದುಮಂಡಲತತಿವೋಲ್ ೧೧೯

ತುರಗಮಯಂ ನೆಲಂ ಚಮರಜಾಲಮಯಂ ದಿನಮಾತಪತ್ರ ಪಾಂ
ಡುರಮಯಮಂತರಿಕ್ಷಮಿಭಯೂಥಮಯಂ ದೆಸೆ ಸೃಷ್ಟಿಭೂತಳೇ
ಶ್ವರಮಯಮಾತಪಂ ಮಣಿಕಿರೀಟಮಯಂ ಭುವನತ್ರಯಂ ಜಯ
ಸ್ವರಮಯಮಂಬರಂ ಧ್ವಜಮಯಂ ಮದಗಂಧಮಯಂ ಸಮೀರಣಂ ೧೨೦

ವ॥ ಆಗಳಾ ನರೇಂದ್ರನಂದನನ ಮುಂದೆ ಪರಿವ ಪಲತೆಱದ ಪಡೆಯ ಬಹಳ ಕೋಲಾಹಲಂಗಳುಂ ಎಡೆಯೆಡೆಯೊಳೆಸೆವ ಬಹುವಿಧಕಹಳಾರವಂಗಳುಂ ತಮ್ಮ ನೆಟಿಲ್ಗೆ ತಾವೆ

ತ್ತಿರುವ ಇಂದ್ರಾಯುಧವು ಬಹಳ ಚೆನ್ನಾಗಿ ಕಾಣುತ್ತಿತ್ತು. ವ॥ ಬಳಿಕ ಎರಡನೆಯ ಯುವರಾಜನೋ ಎಂಬಂತೆ ಹೆಣ್ಣಾನೆಯನ್ನು ಹತ್ತಿ ಬಲಗಡೆಯಲ್ಲೇ ಬರುತ್ತಿರುವ ವೈಶಂಪಾಯನನಿಂದಲೂ ನಾಲ್ಕು ಕಡೆಗಳಲ್ಲೂ ಮದ್ದಾನೆಗಳನ್ನೇರಿ ಸುತ್ತುಗಟ್ಟಿ ಬರು ತ್ತಿರುವ ಸಾವಿರಾರು ರಾಜರುಗಳಿಂದಲೂ ಕೂಡಿಕೊಂಡು ಚಂದ್ರಾವತಾರನಾದ ಚಂದ್ರಾ ಪೀಡನು ಹೆಣ್ಣಾನೆಯನ್ನೇರಿ ಪೂರ್ವದಿಕ್ಕಿಗೆ ಹೊರಟನು. ೧೧೯. ಆನೆಗಳ ಗುಂಪು ಒಂದೇ ಸಮನೆ ಮುಂದುವರಿದು ಪ್ರಯಾಣ ಮಾಡುತ್ತಿತ್ತು. ಅವುಗಳಮೇಲೆ ಕಟ್ಟಿರುವ ಬಿಳಿಯ ಕೊಡೆಗಳು ಸಾಗರದ ತೆರೆಗಳ ಸಮೂಹದಲ್ಲಿ ನೂರುಮಡಿಯಾಗಿ ಮಾರ್ಪೊಳೆವ ಚಂದ್ರಮಂಡಲದ ಪ್ರತಿಬಿಂಬಗಳ ಸಮೂಹದಂತೆ ಶೋಭಿಸುತ್ತಿದ್ದುವು. ೧೨೦. ನೆಲ ವೆಲ್ಲವೂ ಕುದುರೆಗಳಿಂದ ತುಂಬಿರುವಂತೆಯೂ, ಹಗಲೆಲ್ಲ ಚಾಮರಗಳಿಂದ ತುಂಬಿರು ವಂತೆಯೂ, ಆಕಾಶವೆಲ್ಲ ಛತ್ರಿಗಳ ಬಿಳುಪಿನಿಂದ ತುಂಬಿರುವಂತೆಯೂ, ದಿಕ್ಕುಗಳೆಲ್ಲ ಆನೆಗಳ ಹಿಂಡಿನಿಂದ ತುಂಬಿರುವಂತೆಯೂ, ಸೃಷ್ಟಿಯೆಲ್ಲ ಬರೀ ರಾಜರುಗಳಿಂದಲೇ ತುಂಬಿರುವಂತೆಯೂ, ಬಿಸಿಲೆಲ್ಲ ರತ್ನಕಿರೀಟಗಳಿಂದ ತುಂಬಿರುವಂತೆಯೂ, ಮೂರು ಲೋಕವೆಲ್ಲ ಜಯಕಾರದಿಂದ ತುಂಬಿರುವಂತೆಯೂ, ಆಕಾಶವೆಲ್ಲ ಬಾವುಟಗಳಿಂದ ತುಂಬಿ ರುವಂತೆಯೂ ಆಗಿಬಿಟ್ಟಿತು. ವ॥ ಆಗ ಆ ರಾಜಕುಮಾರನ ಮುಂದೆ ಚಲಿಸುತ್ತಿರುವ ಪಲವು ಬಗೆಯ ಸೈನ್ಯದ ಅತ್ಯಧಿಕವಾದ ಗದ್ದಲಗಳೂ, ಅಲ್ಲಲ್ಲಿ ನಾದಿಸುವ ಬಗೆಬಗೆಯ ಕಾಳೆಯ ಧ್ವನಿಗಳೂ, ತಮ್ಮ ನೆರಳಿಗೆ ತಾವೆ ಹೆದರಿ ಲಕ್ಷಣವಾಗಿ ನೆಗೆದು ಮುಂದುವರಿ

ಪೆಳಱಿ ಬೆರ್ಚೆ ಪೊಳೆದುಚ್ಚಳಿಸುವ ತುರಂಗಮಂಗಳ ಹೇಷಾರವಂಗಳುಂ ಕುಲಪರ್ವತಂಗಳೆನಿಪ ಗಜಂಗಳ ಬೃಂಹಿತಂಗಳುಂ ಗತಿವಶದಿನುಣ್ಮುವ ಘಣಘಣಾಯಮಾನ ಘಂಟಾರವಂಗಳುಂ ಜಯಘಂಟಾರವಸಮ್ಮಿಳಿತ ಢಕ್ಕಾರವಂಗಳುಂ ಪಾಂಚಜನ್ಯಾನುಕಾರಿ ಶಂಖರವಸಂವರ್ಧಿತ ಪ್ರಯಾಣಪಟಹರವಂಗಳುಮೊಂದೊಂದಱೊಳ್ ತಳ್ತು ಸಕಲ ಭುವನಮುಂ ಶಬ್ದಾತ್ಮಕ ಮಾದಂತಿರ್ದುದಾಗಳ್

ಒಂದೆಡೆ ಜೀರ್ಣಮೀನತನುಧೂಮ್ರಮದೊಂದೆಡೆ ರಲ್ಲಕಾಭಮಂ
ತೊಂದೆಡೆಯೂರ್ಣತಂತು ಪರಿಪಾಂಡುರಮುಷ್ಟ್ರಸಟಾವಭಾಸಿ ಮೇ
ಣೊಂದೆಡೆ ಮತ್ತಮೊಂದೆಡೆ ಜರತ್ಕಪಿಕೇಸರಜಾಲಪಿಂಗಮಾ
ಗಂದೊಗೆದತ್ತನೇಕವಿಧವರ್ಣ ಧರಾತಲರೇಣುಸಂಚಯಂ ೧೨೧

ವ॥ ಮತ್ತಂ

ಕ್ಷೀರೋದಫೇನಮಾಲಾ
ಗೌರಕ್ಷಿತಿರೇಣುಗಣದಿನಿಡಿದಂಬರಮೇಂ
ರಾರಾಜಿಸಿದುದೊ ವಿಕಸಿತ
ಕೈರವವನದಂತಿರೀಕ್ಷಿಪರ್ಗಿರದಾಗಳ್ ೧೨೨

ಯುವ ಕುದುರೆಗಳ ಕೆನೆಯುವ ಧ್ವನಿಗಳೂ, ಕುಲಪರ್ವತಗಳಂತಿರುವ ಆನೆಗಳ ಘೀಂಕಾರ ಗಳೂ, ಪ್ರಯಾಣದ ಅಲುಗಾಟದಿಂದ ಘಣಘಣ ಧ್ವನಿಮಾಡುವ ಗಂಟೆಗಳ ಶಬ್ದಗಳೂ, ಜಯಗಂಟೆಗಳ ಧ್ವನಿಯಿಂದ ಮಿಳಿತವಾದ ಢಕ್ಕೆಗಳ ಧ್ವನಿಗಳೂ ಪಾಂಚಜನ್ಯಕ್ಕೆ ಸಮಾನ ವಾದ ಶಂಖಧ್ವನಿಯಿಂದ ಹೆಚ್ಚಿಸಲ್ಪಟ್ಟ ಪ್ರಯಾಣಕಾಲದಲ್ಲಿ ಬಾರಿಸುವ ತಮ್ಮಟೆಗಳ ಧ್ವನಿಗಳೂ ಒಂದರೊಳಗೊಂದು ಸೇರಿಕೊಂಡು ಇಡೀ ಜಗತ್ತೇ ಶಬ್ದಮಯವಾದಂ ತಿದ್ದಿತು. ಆಗ, ೧೨೧, ನಾನಾ ಬಣ್ಣದ ಭೂಮಿಯ ಬಗೆಬಗೆಯ ಧೂಳುಗಳ ಗುಂಪು ಒಂದು ಕಡೆ ಮುದಿಮೀನಿನ ದೇಹದಂತೆ ಧೂಮ್ರವರ್ಣವಾಗಿಯೂ, ಒಂದು ಕಡೆ ರಲ್ಲಕವೆಂಬ ಜಿಂಕೆಯ ಕೂದಲಿನಂತೆ ಶ್ಯಾಮವರ್ಣವಾಗಿಯೂ, ಮತ್ತೊಂದು ಕಡೆ ಉಣ್ಣೆಯದಾರದಂತೆ ಶುಭ್ರವಾಗಿಯೂ, ಇನ್ನೊಂದು ಕಡೆ ಒಂಟೆಯ ಕೂದಲಿಗೆ ಸಮಾನವಾಗಿಯೂ, ಬೇರೊಂದು ಕಡೆ ಮುದಿಕೋತಿಯ ಕೊರಳುಕೂದಲಿನಂತೆ ಬಿಳುಪುಮಿಶ್ರವಾದ ಕೆಂಬಣ್ಣವುಳ್ಳದ್ದಾಗಿಯೂ ಶೋಭಿಸುತ್ತಿತ್ತು. ವ॥ ಮತ್ತು ೧೨೨. ಕ್ಷೀರಸಮುದ್ರದ ನೊರೆಗಳ ಸಾಲಿನಂತೆ ಶುಭ್ರವಾದ ಧೂಳುಗಳ ಗುಂಪಿನಿಂದ ಪರಿಪೂರ್ಣ ವಾದ ಆಕಾಶವು ನೋಡುವವರಿಗೆ ಅರಳಿರುವ ಬಿಳಿಯ ತಾವರೆಯ ಗುಂಪಿನಂತೆ ವಿರಾಜಿ

ವ॥ ಇಂತೊಗೆದು ಪರೆದ ಪಾಂಸುಪಟಲಂ ಕರಿಕರಾಗ್ರಶೀಕರಾಸಾರದೊಳಮೊಸರ್ವ ದಾನಧಾರೆಯೊಳಮೊಕ್ಕ ಕುದುರೆಗಳ ಲಾಲಾಜಲಜಾಲಕದೊಳಂ ಪರಿಪಡಲೊಡಂ ಕಡಲನಡುವಿಂ ಮೊಗೆತಂದಂತಿರಳವಿಗಳಿದ ದಳಮುನವಲೋಕಿಸಿ ವಿಸ್ಮಯಂಬೆತ್ತು ವೈಶಂಪಾಯನಂ ಚಂದ್ರಾಪೀಡಂಗಿಂತೆಂದಂ

ಆಡಲದೇಂ ನರಪತಿಕುಲ
ಚೂಡಾಮಣಿಯೆನೆ ನೆಗಟ್ತೆವೆರಸಿದ ತಾರಾ
ಪೀಡಂ ನೀಡುಂ ಜೈಸದ
ನಾಡೊಳವೆ ಅದಾವ ನಾಡ ಗೆಲಲಾಟಿಸುವೈ ೧೨೩

ಮಣಿಯುದ ಮಾನವಾಧಿಪರದಾರ್ ತಲೆಯೊಳ್ ತಳೆದಬ್ಜಕುಟ್ಮಲ
ಕ್ಕೆಣೆಯೆನೆ ರಂಜಿಪಂಜಲಿಯು ಸೇವಿಸದಿರ್ಪರಸರ್ಕಳಾರ್ ಶಿಖಾ
ಮಣಿಗಣಮುಂ ತ್ವದಂಘ್ರಿಯುಗಪೀಠದ ಸಾಣೆಯನಿಕ್ಕದಿರ್ದ ಧಾ
ರಿಣಿಯೊರೆಯರ್ಕಳಾರೊಳರಿಳಾತಳದೊಳ್ ಯುವರಾಜಶೇಖರಾ ೧೨೪

ಉಸಿರಲ್ಕರಿದೆನೆ ಪತ್ತುಂ
ದೆಸೆಗಳನಾವರಿಸಿ ಮುಸಗುವೀ ನೃಪಸೇನಾ
ಪ್ರಸರಂ ತಳ್ತೋಲಗಿಸುಗು
ಮೆಸಕಂ ಮಿಗೆ ನಿನ್ನನವನಿಪಾಲಲಲಾಮಾ ೧೨೫

ಸುತ್ತಿತ್ತು. ವ॥ ಹೀಗೆ ಮೇಲಕ್ಕೆದ್ದು ಹರಡುತ್ತಿರುವ ಧೂಳುಗಳ ಸಮೂಹವು ಆನೆಗಳ ಸೊಂಡಲಿನ ತುದಿಯಿಂದ ಸುರಿಯುವ ತುಂತುರುಗಳ ಧಾರೆಗಳಲ್ಲೂ ಮತ್ತು ಸುರಿಯುತ್ತಿರುವ ಮದೋದಕದ ಪ್ರವಾಹದಲ್ಲೂ ಕುದುರೆಗಳ ಬಾಯಿಂದ ಹೊರಬೀಳುತ್ತಿರುವ ಜೊಲ್ಲುಗಳ ಸಮೂಹದಲ್ಲೂ ಬಿದ್ದು ಅಡಗಲಾಗಿ ಆಗತಾನೆ ಸಮುದ್ರದ ಮಧ್ಯದಿಂದ ಹೊರಕ್ಕೆ ಬಂದಂತೆ ಮುಚ್ಚಿಹೋಗಿರುವ ಸೈನ್ಯವು ಕಣ್ಣಿಗೆ ಬೀಳಲು ಗಣನೆಗೆ ಸಿಲುಕದ ಮಹಾಸೈನ್ಯವನ್ನು ನೋಡಿ ಆಶ್ಚರ್ಯಪಟ್ಟು ವೈಶಂಪಾಯನನು ಚಂದ್ರಾಪೀಡನನ್ನು ಕುರಿತು ಹೀಗೆ ಹೇಳಿದನು. ೧೨೩. "ಯುವರಾಜ, ಭೂಪತಿಗಳ ಸಮೂಹಕ್ಕೆ ತಲೆಮಣಿಯೆನಿಸಿ ಹೆಸರುವಾಸಿಯಾದ ತಾರಾಪೀಡಮಹಾರಾಜರಿಂದ ಜಯಿಸಲ್ಪಡದಿರುವ ದೇಶವು ಯಾವುದಿದೆ ? ನೀನು ಯಾವ ದೇಶವನ್ನು ಗೆಲ್ಲಬೇಕಾಗಿದೆ? ಅದನ್ನು ಹೇಳಬೇಕಾದ್ದೇ ಇಲ್ಲ. ೧೨೪. ಯುವರಾಜ, ನಿನಗೆ ತಲೆಬಾಗದ ಅರಸರು ಯಾರಿದ್ದಾರೆ? ತಮ್ಮ ತಲೆಯಲ್ಲಿ ಮುಡಿದುಕೊಂಡಿರುವ ತಾವರೆಯ ಮೊಗ್ಗಿಗೆ ಸಮಾನವೆನಿಸಿ ಶೋಭಿಸುವ ಪುಣಾಮಾಂಜಲಿಯಿಂದ ಕೂಡಿ ನಿನ್ನನ್ನು ಓಲೈಸದ ರಾಜರು ಯಾರಿದ್ದಾರೆ ? ೧೨೫. ಎಲೈ ರಾಜಶ್ರೇಷ್ಠನೆ, ಬಣ್ಣಿಸಲು ಅಸಾಧ್ಯವೆನಿಸಿ, ಹತ್ತು ದಿಕ್ಕುಗಳನ್ನೂ ಆವರಿಸಿ ವಿಜೃಂಭಿಸುತ್ತಿರುವ ಈ ರಾಜಸೈನ್ಯವು ಒಟ್ಟುಗೂಡಿ ನಿನ್ನನ್ನು ಶಕ್ತಿಮೀರಿ ಸೇವಿ

ಕುಲಶೈಲಸಂಧಿಬಂಧಂ
ಕಳಚದುದುಂ ಸೈನ್ಯಭರದಿನಿಳಿದಳೆದಾ ಕುಂ
ಡಲಿಪನ ವಿಪುಲಫಣಾಮಂ
ಡಲಿ ಬಿರಿಯದುದುಂ ಸಮಂತು ಚಿತ್ರಮಿದಲ್ತೇ ೧೨೬

ಬಲಭರ ಸಂಕ್ಷೋಭಭಯಂ
ದಳೆದಂಬರಕೊಗೆದ ನದಿಗಳೆನೆ ನಿಖಿಲ ದಿಶಾ
ಕುಲಮಂ ಬಾಸಣಿಸುಗುಮು
ತ್ಪಲಬಾಂಧವಧವಳಮೆನಿಸಿದೀ ಧ್ವಜಪಟಲಂ ೧೨೭

ವ॥ ಇಂತುಸಿರ್ದುದನಾಲಿಸುತ್ತಮೆ ಸಮುಚ್ಛ್ರಿತತೋರಣಮುಮನೇಕಪಟಮಂಟ ಪೋಪಶೋಭಿತಮುಮಪ್ಪ ನಿವಾಸಭೂಮಿಯಂ ಪೊಕ್ಕರಸುಗಜ್ಜಮಂ ತೀರ್ಚಿ ಪಿತೃವಿಯೋಗಖಿನ್ನ ಮಾನಸಂ ಚಂದ್ರಾಪೀಡನಮಾತ್ಯನರಪತಿಗಳ್ವೆರಸು ಬಿನದಂ ಮಿಗೆ ಪಗಲಂ ಕಳೆದಾಯಿರುಳೆಡೆ ವಟ್ಟಿರ್ದ ವೈಶಂಪಾಯನನೊಳಂ ಪತ್ರಲೇಖೆಯೊಳಂ ಜನನೀಜನಕರ ಸಂಬಂಧಿಯಪ್ಪಾಲಾಪಂ ಗೆಯ್ಯುತ್ತಮಿರ್ದು ಕಿಱಿದುಂ ನಿದ್ರೆಗೆಯ್ದು ಬೆಳಗಪ್ಪುದುಮೆೞ್ದು

ಧರೆಯುಂ ಪೊಳ್ಳ್ಗಿಸುತ್ತಂ ನಡುಗಿಸುತಮಗವ್ರಾತಮಂ ತುಳ್ಕಿಸುತ್ತಂ
ತೊರೆಯುಂ ದುರ್ಗಂಗಳಂ ಪಾೞ್ಗೊಳಿಸುತಮಟವೀವ್ರಾತಮಂ ಚೂರ್ಣಿಸುತ್ತಂ
ನೆರಪುತ್ತಂ ನಿಮ್ನಮಂ ನಿಮ್ನಮತೆಮರನೊಡರ್ಚುತ್ತಮಾತ್ಮೀಯಸೈನ್ಯೋ
ತ್ಕರದಿಂದಂ ರಾಜವರ್ಗಂ ಬೆರಸಿರೆ ಪೊಱಮಟ್ಟಂ ಮಹೀಭೃನ್ಮಹೇಂದ್ರಂ ೧೨೮

ಸುತ್ತಿದೆ. ೧೨೬. ಈ ಮಹಾಸೈನ್ಯದ ಭಾರದಿಂದ ಕುಲಪರ್ವತಗಳ ಕೀಲು ಕಳಚಿ ಬೀಳದಿರುವುದೂ, ಭೂಮಿಯನ್ನು ಹೊತ್ತಿರುವ ಆದಿಶೇಷನ ವಿಶಾಲವಾದ ಹೆಡೆಗಳ ಸಮೂಹವು ಒಡೆದುಹೋಗದಿರುವುದೂ ಬಹಳ ಆಶ್ಚರ್ಯಕರವಾಗಿದೆ. ೧೨೭. ದೊಡ್ಡ ಸೈನ್ಯದಿಂದ ಉಂಟಾಗುವ ಕಲಕಾಟಕ್ಕೆ ಹೆದರಿ ಆಕಾಶಕ್ಕೆ ನೆಗೆದುಹೋಗಿರುವ ನದಿಗಳಂತಿರುವ ಈ ಚಂದ್ರನಂತಿರುವ ಬಾವುಟಗಳು ದಿಕ್ಕುಗಳನ್ನೆಲ್ಲಾ ಮುಚ್ಚಿಬಿಟ್ಟಿವೆ" ವ॥ ಹೀಗೆ ವೈಶಂಪಾಯನನು ಹೇಳಿದ್ದನ್ನು ಕೇಳುತ್ತಾ ಚಂದ್ರಾಪೀಡನು ಎತ್ತರವಾದ ಹೆಬ್ಬಾಗಿಲುಗಳುಳ್ಳ ಅನೇಕ ಡೇರೆಗಳಿಂದ ಶೋಭಿಸುತ್ತಿರುವ ಪಾಳೆಯವನ್ನು ಸೇರಿ ರಾಜಕಾರ್ಯಗಳನ್ನು ಮುಗಿಸಿದನು ಹಾಗೆಯೇ ತಾಯಿತಂದೆಗಳ ಅಗಲುವಿಕೆಯಿಂದ ಬೇಜಾರುಗೊಂಡಿದ್ದ ಆ ಚಂದ್ರಾಪೀಡನು ಮಂತ್ರಿಗಳಿಂದಲೂ ಸಾಮಂತರಾಜರುಗಳಿಂದಲೂ ಕೂಡಿಕೊಂಡು ಬೇಜಾರು ಕಳೆಯುವಂತೆ ವಿನೋದವಾಗಿದ್ದು ರಾತ್ರಿ ಜೊತೆಯಲ್ಲೇ ಮಲಗಿದ್ದ ವೈಶಂಪಾಯನನೊಂದಿಗೂ ಪತ್ರಲೇಖೆಯೊಂದಿಗೂ ತನ್ನ ತಾಯಿತಂದೆಗಳಿಗೆ ಸಂಬಂಧಿಸಿದ ಮಾತುಕತೆಗಳನ್ನಾಡುತ್ತಾ ಇದ್ದು, ಸ್ವಲ್ಪ ನಿದ್ರೆಮಾಡಿ ಬೆಳಗಾದ ಕೂಡಲೆ ಎದ್ದು, ೧೨೮. ಸೈನ್ಯದ ಭಾರದಿಂದ ಭೂಮಿಯನ್ನು ಶಿಥಿಲಗೊಳಿಸುತ್ತಲೂ, ಬೆಟ್ಟಗಳ ಸಮೂಹವನ್ನು ನಡುಗಿಸುತ್ತಲೂ, ನದಿಗಳನ್ನು ತುಳುಕಾಡಿಸುತ್ತಲೂ, ಶತ್ರುಗಳ ಕೋಟೆಗಳನ್ನು ಹಾಳುಗೆಡುವುತ್ತಲೂ, ಕಾಡುಗಳನ್ನು ಇಡಿಪುಡಿ

ದುರುಳರನೊಕ್ಕಲಿಕ್ಕಿ ಮಱೆವೊಕ್ಕರ ರಕ್ಷಿಸಿ ದೇಶದೇಶದೋ
ಳರಗುವರರ್ಗೊಡರ್ಚಿ ನೃಪಪಟ್ಟವನಾರ್ಜಿಸಿ ರತ್ನರಾಶಿಯಂ
ನಿರವಿಸಿ ನಾಡನೇರ್ಪ ನಿಜಮುದ್ರೆಯನೇಱಿಸಿ ಶಾಸನಂಗಳಂ
ಬರೆಸಿ ಬುಧರ್ಗೆ ಬಿತ್ತರಿಸಿದಂ ಜಸಮಂ ಯುವರಾಜಚಂದ್ರಮಂ ೧೨೯

ನೆಲನೆಲ್ಲಂ ಬಲವಂದು ಗೆಲ್ದಖಿಲಧಾತ್ರೀನಾಥರಂ ತನ್ನ ದೋ
ರ್ಬಲದಿಂ ಪೂರ್ವಸಮುದ್ರತೀರದೆ ನಿವಾಸಂಗೆಯ್ದಿರಂ ವ್ಯಾಧರಂ
ಪಲರಂ ಪೊಂದಿಸಿ ತತ್ಸುವರ್ಣಪುರಮಂ ಕೈಲಾಸಶೈಲಾಂತರ
ಸ್ಥಲದೊಳ್ ಶೋಭಿಸುತಿರ್ಪುದಂ ನೃಪಸುತಂ ಕೈಕೊಂಡನುತ್ಸಾಹದಿಂ ೧೩೦

ಜಲನಿಧಿಪರಿವೃತ ಧಾತ್ರೀ
ತಲಮಂ ಬಲವಂದು ಪಿರಿದುಮಾಸತ್ತಬಲಂ
ನಿಲವೇಟ್ಕುಮೆಂದು ನೃಪಕುಲ
ಲಲಾಮನಂತಲ್ಲಿ ಪಲವು ದಿವಸಮನಿರ್ದಂ ೧೩೧

## ಚಂದ್ರಾಪೀಡನ ಜೈತ್ರಯಾತ್ರೆ
### ಸಮಾಪ್ತ

ಮಾಡುತ್ತಲೂ, ಹಳ್ಳವನ್ನು ತಿಟ್ಟುಮಾಡುತ್ತಲೂ, ಬೆಟ್ಟಗಳನ್ನು ಹಳ್ಳಗೆಡವುತ್ತಲೂ, ತನ್ನ ದೊಡ್ಡ ಸೈನ್ಯದಿಂದಲೂ ರಾಜರ ಸಮೂಹದಿಂದಲೂ ಕೂಡಿಕೊಂಡು ಆ ರಾಜೇಂದ್ರನು ವಿಜಯಯಾತ್ರೆಯನ್ನು ಬೆಳಸಿದನು. ೧೨೯. ಚಂದ್ರಾಪೀಡನು ದುಷ್ಟರನ್ನು ಮಟ್ಟಹಾಕಿ ಶರಣುಬಂದವರನ್ನು ಕಾಪಾಡಿ, ದೇಶದೇಶಗಳಲ್ಲಿ ರಾಜಕುಮಾರರಿಗೆ ಪಟ್ಟಗಟ್ಟಿ ರತ್ನರಾಶಿಯನ್ನು ಸಂಗ್ರಹಿಸಿ, ದೇಶಗಳಲ್ಲಿ ಸುವ್ಯವಸ್ಥೆಯನ್ನು ಕಲ್ಪಿಸಿ ತನ್ನ ರಾಜಚಿಹ್ನೆಯನ್ನು ಸ್ಥಾಪಿಸಿ, ವಿದ್ವಾಂಸರಿಗೆ ಶಾಸನಗಳನ್ನು ಬರೆಸಿ ತನ್ನ ಕೀರ್ತಿಯನ್ನು ವಿಸ್ತರಿಸಿದನು. ೧೩೦. ಹೀಗೆ ಭೂಪ್ರದಕ್ಷಿಣೆಮಾಡಿ ರಾಜರೆಲ್ಲರನ್ನೂ ತನ್ನ ಬಾಹುಬಲದಿಂದ ಗೆದ್ದು ಪೂರ್ವ ಸಮುದ್ರತೀರದಲ್ಲಿ ವಾಸವಾಗಿದ್ದ ಕಿರಾತರನ್ನು ಗೆದ್ದು ಕೈಲಾಸಪರ್ವತದ ಸಮೀಪದಲ್ಲಿ ಶೋಭಿಸುತ್ತಿದ್ದ ಸುವರ್ಣಪುರವೆಂಬ ಪಟ್ಟಣವನ್ನು ಉತ್ಸಾಹದಿಂದ ಸಾಧಿಸಿದನು. ೧೩೧. ರಾಜವಂಶದಲ್ಲಿ ಶ್ರೇಷ್ಠನಾದ ಚಂದ್ರಾಪೀಡನು ಹೀಗೆ ಸಮುದ್ರಗಳಿಂದ ಸುತ್ತುವರಿಯಲ್ಪಟ್ಟಿರುವ ಈ ಭೂಮಂಡಲವನ್ನು ಪ್ರದಕ್ಷಿಣೆ ಮಾಡಿ ಬಹಳವಾಗಿ ಆಯಾಸಗೊಂಡಿರುವ ತನ್ನ ಸೈನ್ಯಕ್ಕೆ ವಿಶ್ರಾಂತಿಯನ್ನು ಕೊಡಬೇಕೆಂದು ಕೆಲವು ದಿನಗಳು ಅಲ್ಲಿ ಬಿಡಾರ ಮಾಡಿದನು.

## ಚಂದ್ರಾಪೀಡನ ಜೈತ್ರಯಾತ್ರೆ
### ಮುಗಿಯಿತು

# ೪. ಮಹಾಶ್ವೇತೆಯ ಸಂದರ್ಶನ

ವ॥ ಅಂತಿರುತ್ತಮೊಂದು ದಿವಸಂ ಯುವರಾಜನಿಂದ್ರಾಯುಧಮನೇಱಿ ಬೇಂಟೆಯ ವಿನೋದದಿಂ ತೊಟಲುತ್ತಮಿರೆಯಿರೆ

ಪಿರಿದಪ್ಪಾಶ್ಚರ್ಯಪರಂ
ಪರೆ ಸಮನಿಸಲದ್ರಿಶಿಖರದಿಂದಿೞಿದಾಡು
ತ್ತಿರೆಯಿರೆ ನಿಜೇಚ್ಛೆಯಿಂ ಕಿ
ನ್ನರಮಿಥುನಮನವನಿಪಾಲತನಯಂ ಕಂಡಂ ೧

ವ॥ ಆಗಳ್ ಸಮುಪಜಾತಕುತೂಹಲಂ ವಿಸ್ಮಯಕ್ಷಿಪ್ತಚಿತ್ತನಾಗಿ

ಜಗದೊಳಗಪೂರ್ವಮೆಂಬೀ
ಬಗೆಯಿಂ ತಾಂ ಪಿಡಿವ ತವಕದಿಂ ಭೋಂಕನೆ ಬಂ
ದಗಣಿತ ಜವಮಂ ಕಿನ್ನರ
ಯುಗದ ಸಮೀಪಕ್ಕೆ ಬಿಟ್ಟನಿಂದ್ರಾಯುಧಮಂ ೨

ವ॥ ಆಗಳ್ ತಮ್ಮೆಡೆಗೆಯ್ತರ್ಪುದಂ ಕಂಡದೃಷ್ಟಪೂರ್ವಮಪ್ಪುದಱಿಂ ಕಿನ್ನರದ್ವಯ ಮತಿಭೀತಿಯಿಂ ಪರಿಯೆ

ವ॥ ಹೀಗಿರಲು ಒಂದು ದಿನ ಯುವರಾಜನು ಇಂದ್ರಾಯುಧವನ್ನು ಹತ್ತಿ ಬೇಟೆಯಾಡುತ್ತಾ ವಿನೋದದಿಂದ ಸಂಚರಿಸುತ್ತಿರಲಾಗಿ, ೧. ಒಂದು ಅತ್ಯಾಶ್ಚರ್ಯಕರವಾದ ಸನ್ನಿವೇಶವು ಒದಗಿಬಂತು. ಬೆಟ್ಟದ ತುದಿಯಿಂದ ಕಿನ್ನರಜಾತಿಗೆ ಸೇರಿದ ದಂಪತಿಗಳು ಸ್ವೇಚ್ಛೆಯಿಂದ ಇಳಿದುಬರುತ್ತಿರುವುದನ್ನು ರಾಜಕುಮಾರನು ನೋಡಿದನು. ವ॥ ಆಗ ಅವನಿಗೆ ಬಹಳ ಕುತೂಹಲವುಂಟಾಯಿತು. ಆಶ್ಚರ್ಯದಿಂದ ಪ್ರೇರಿಸಲ್ಪಟ್ಟ ಮನಸ್ಸುಳ್ಳವನಾಗಿ, ೨. ಈ ಜಗತ್ತಿನಲ್ಲಿ ಬಹಳ ದುರ್ಲಭವಾದ ಈ ದೇವಜಾತಿಯ ಜೋಡಿಯನ್ನು ಹಿಡಿಯಬೇಕೆಂಬ ತವಕದಿಂದ ಕೂಡಲೆ ಮಹಾವೇಗವುಳ್ಳ ಇಂದ್ರಾಯುಧವನ್ನು ಅವರ ಹತ್ತಿರಕ್ಕೆ ಬಿಟ್ಟನು. ವ॥ ಆಗ ಆ ಕಿನ್ನರಯುಗ್ಮವು ತಮ್ಮ ಹತ್ತಿರಕ್ಕೆ ಬರುತ್ತಿದ್ದ ರಾಜಕುಮಾರನನ್ನು ಕಂಡು ಹಿಂದೆಂದೂ ಕಾಣದೆಯಿರುವುದರಿಂದ ಭಯಗೊಂಡು

ಪಿಡಿದಪನೀಗಳೀ ಪಿಡಿಯಲೆಯ್ದಿದನಾ ಪಿಡಿದಪ್ಪನೀಗಳೀ
ಪಿಡಿದನೆ ಕಿನ್ನರದ್ವಯಮನೆಂಬಿನೆಗಂ ಬೞಿಸಂದು ತನ್ನ ಸಂ
ಗಡದವರುಂ ಪರಿಗ್ರಹಮುಮೆಯ್ತರಲಾಱದೆ ಪಿಂದೆ ನಿಲ್ವಿನಂ
ಕಡುಪಿನೊಳಂದು ಬಿಟ್ಟನತಿಶೀಘ್ರದೆ ವಾಜಿಯನಾ ನೃಪೋತ್ತಮಂ ೩

ಮಡದಲಿ ನೂಂಕೆ ವಾಜಿ ಗರುಡಂಗಮದಿರ್ಮಡಿ ವಾಯುವಿಂಗೆ ಮೂ
ರ್ಮಡಿಯೆನಿಪ್ಪೊಂದು ತನ್ನ ಜವದಿಂ ಪರಿಯಲ್ಕೆ ಮುಹೂರ್ತಮಾತ್ರದೊಳ್
ಗಡಪದಿನೈದುಃಯೋಜನಮನೊರ್ವನೆ ಸಂಧಿಸಿ ಪೋದನಂದು ಪೇ
ರಡವಿಯೊಳಾ ತುರಂಗವದನರ್ಕಳ ಬೆಂಬೞಿಯಂ ಮಹೀಭುಜಂ ೪

ಛಲದಿಂದರಸಂ ತಾಂ ಬೆ
ನ್ನೊಳೆ ಪರಿದೆಟ್ಟಟ್ಟ ಪಿಡಿಯಲನುಗೆಯ್ವುದುಮ
ಸ್ಖಲಿತಂ ಮುಂದಣ ತಾರಾ
ಚಲಶಿಖರಮನೇಱಿದತ್ತು ಕಿನ್ನರಮಿಥುನಂ ೫

ಏಕೆ ನಿರರ್ಥಕಂ ಮಗುವಿನಂದದೆ ಕೋಟಲೆಗೊಂಡೆನಕ್ಕಟಿಂ
ತೇಕೆಯೊ ಕಿನ್ನರದ್ವಯದ ಬೆಂಬೞಿಯಂ ತಗುಳುತ್ತೆ ಬಂದೆನಿಂ
ತೇಕೆಯೊ ಮೂರ್ಖನಂತೆ ಮತಿಗೆಟ್ಟೆನಿದಂ ಪಿಡಿವಲ್ಲಿ ಬರ್ಪುದೇಂ
ವ್ಯಾಕುಲನಾಗುತಂ ಪಿಡಿಯದಿರ್ದೊಡೆ ಪೇೞ್ ಕಿಡುವೊಂದು ವಸ್ತುವೇಂ ೬

ಓಡಲಾಗಿ, ೩. ಆ ಜೋಡಿಯನ್ನು ಈಗ ಹಿಡಿಯುತ್ತಾನೆ ! ಅಗೋ ! ಹಿಡಿಯಲು ಹೋದನು. ಅಗೋ ! ಹಿಡಿಯುತ್ತಾನೆ. ಅಗೋ ! ಹಿಡಿದೇಬಿಟ್ಟನಲ್ಲ ! ಎಂಬಂತೆ ಹತ್ತಿರಕ್ಕೆ ಬರುತ್ತ, ತನ್ನ ಜೊತೆಯವರೂ ಪರಿವಾರದವರೂ ಹಿಂಬಾಲಿಸಲಾರದೆ ಹಿಂದೆ ನಿಲ್ಲಲಾಗಿ ಯುವರಾಜನು ಶಕ್ತಿಮೀರಿ ಬಹಳ ವೇಗದಿಂದ ಇಂದ್ರಾಯುಧವನ್ನು ಬಿಡುತ್ತಿದ್ದನು. ೪. ಅವನು ಕುದುರೆಯನ್ನು ಹಿಮ್ಮಡಿಯಿಂದ ತಿವಿಯುತ್ತಿದ್ದನು. ಅದು ಗರುಡನ ವೇಗಕ್ಕೆ ಎರಡರಷ್ಟು, ವಾಯುವಿಗೆ ಮೂರರಷ್ಟು ಎಂಬ ತನ್ನೊಂದು ವೇಗದಿಂದ ಧಾವಿಸುತ್ತಿತ್ತು. ಯುವರಾಜನು ಮುಹೂರ್ತಮಾತ್ರದಲ್ಲಿ ಆ ದೊಡ್ಡ ಕಾಡಿನಲ್ಲಿ ವೇಗದಿಂದ ಕಿನ್ನರರನ್ನು ಹಿಂಬಾಲಿಸುತ್ತ ಐದು ಯೋಜನದಷ್ಟು ದೂರವನ್ನು ಒಬ್ಬನೆ ಅತಿಕ್ರಮಿಸಿ ಬಂದುಬಿಟ್ಟನು. ೫. ಹೀಗೆ ಯುವರಾಜನು ಹಟದಿಂದ ಹಿಂಬಾಲಿಸಿ ಓಡಿ ಹಿಡಿಯಲು ಪ್ರಯತ್ನಿಸುತ್ತಿರಲು ಆ ಕಿನ್ನರದಂಪತಿಗಳು ತಡೆಯಿಲ್ಲದೆ ಮುಂದಿರುವ ಕೈಲಾಸಪರ್ವತದ ಶಿಖರವನ್ನು ಏರಿಬಿಟ್ಟರು. ೬. ಅಯ್ಯೋ ! ಏಕೆ ಹೀಗೆ ಮಗುವಿನಂತೆ ವ್ಯರ್ಥವಾಗಿ ತೊಂದರೆಪಟ್ಟೆನು ? ಏಕೆ ಈ ಕಿನ್ನರ ದಂಪತಿಗಳನ್ನು ಹಿಂಬಾಲಿಸಿ, ಓಡಿಬಂದೆನು ? ಹೀಗೇಕೆ ಮೂರ್ಖನಂತೆ ಬುದ್ಧಿಗೆಟ್ಟೆನು ?

ಏನಾನೊಂದನೆ ಮಾಡಿದೆಂ ಮಗುವಿನಂತೇನಾನುಮೊಂದಕ್ಕೆ ಪೇ
ಟಿನೋ ಕೌತುಕದಿಂದ ಬಂದೆನೆನಗೀ ದುರ್ವೋಹದುದ್ಯೋಗದಿಂ
ತೇನಾನೊಂದನೊಡರ್ಚಿತಿಂತಿದೆನುತಂ ತದ್ವೇಗದಿಂ ವಿಸ್ಮಯ
ಧ್ಯಾನಾಧೀನಮನಸ್ಕನೊಂದಿನಿಸುಬೇಗಂ ನಿಂದನುರ್ವೀಶ್ವರಂ ೭

ವ॥ ಅಂತು ನಿಂದು

ಪಿರಿದು ಜವಮುಳ್ಳುದಱಿನೀ
ಹರಿ ನಿಮಿಷಕೆ ಪಿರಿದುವರಿಗುಮನಿತಱೊಳೆನಿತಂ
ತರಮನೆಡೆವರಿಗುಮೋ ಬೆ
ಚ್ಚರದಿಂ ಬೞಸಂದು ಮಱುಗಿ ಬರ್ಪೆನ್ನ ಬಲಂ ೮

ತಱಗೆಲೆ ಬಳ್ಳಿಯೆಂಬಿವಱ ತಿಂತಿಣಿಯೊಳ್ ತುರಗಾತಿವೇಗದಿಂ
ದಱಿಯಲೆ ಬಂದುದಿಲ್ಲ ಪಥಮುಂ ಬರುತಂ ಮಗುಳ್ವಂದಮೆಂತೊ ಮೇ
ಣ್ಮಱೆದುವರಣ್ಯದೊಳ್ ಸುೞವನಿಲ್ಲ ನರಂ ಸರದೋಱುವನ್ನನೇ
ತೆಱದೊಳಮೆಂತು ಪೋಪೆನೊ ಸುವರ್ಣಪುರಕ್ಕೆನುತಂ ನರಾಧಿಪಂ ೯

ವ॥ ಅಂತು ಚಿಂತಿಸುತಮಿರ್ಪುದುಂ

ವಸುಧೆಯ ಬಡಗಣ ದೇಶ
ಕ್ಕೆ ಸೀಮೆಯೆನಿಪುದು ಸುವರ್ಣಪುರಮುತ್ತಲ್ ಮಾ
ನಿಸರಿಲ್ಲದಡವಿ ಬೞಕ
ತ್ತೆಸೆವುದು ಕೈಲಾಸಮೆಂಬುದಾ ನಗಮಿದಿರೊಳ್ ೧೦

ಇದನ್ನು ಹಿಡಿಯುವುದರಿಂದ ಬರುವ ಲಾಭವೇನು ? ಇಷ್ಟು ಆಯಾಸಪಟ್ಟು ಕೊಂಡಾದರೂ ಹಿಡಿಯಬೇಕಾದ್ದೇನು ? ಹಿಡಿಯದಿದ್ದರೆ ಏನು ಕೆಟ್ಟುಹೋಗುತ್ತಿತ್ತು ? ೭. ಎಳೆಯ ಮಗುವಿನಂತೆ ಏನೋ ಒಂದನ್ನು ಮಾಡಿಬಿಟ್ಟೆ. ಏನು ಬೇಕಾದರೂ ಆಗಿ ಹೋಗಲಿ. ಏನೋ ಒಂದು ಕುತೂಲದಿಂದ ಬಂದೆ. ಈ ಅಳಿಯಾಸೆಯ ಕೆಲಸವು ಹೀಗೆ ಏನನ್ನೋ ಮಾಡಿಬಿಟ್ಟಿತು ಎಂದು ಹೇಳುತ್ತ, ಅದೇ ಕಳವಳದಿಂದ ಅಚ್ಚರಿ ಮತ್ತು ಚಿಂತೆಗೆ ಒಳಗಾದ ಮನಸ್ಸುಳ್ಳವನಾಗಿ ರಾಜಕುಮಾರನು ಸ್ವಲ್ಪ ನಿಂತಿದ್ದನು. ವ॥ ಹಾಗೆ ನಿಂತು ೮. ಈ ಕುದುರೆಯು ಬಹಳ ಚುರುಕಾಗಿರುವುದರಿಂದ ಒಂದೇ ನಿಮಿಷಕ್ಕೆ ಬಹಳ ದೂರ ಬಂದುಬಿಡುತ್ತದೆ. ಇಷ್ಟುಹೊತ್ತಿಗಾಗಲೆ ಗಾಬರಿಪಟ್ಟು ಅವಸರದಿಂದ ಹಿಂಬಾಲಿಸಿ ಬರುತ್ತಿರುವ ನನ್ನ ಸೈನ್ಯವು ಎಷ್ಟು ದೂರ ಹಿಂದೆ ಬಿದ್ದಿದೆಯೊ ? ೯. ಬರುವಾಗ ಕುದುರೆಯ ವೇಗದಿಂದ ತರಗೆಲೆ ಮತ್ತು ಬಳ್ಳಿಗಳ ಗುಂಪಿನಲ್ಲಿ ದಾರಿಯೂ ಗೊತ್ತಾಗಲಿಲ್ಲ. ಈಗ ಹಿಂದಕ್ಕೆ ಹೋಗುವುದು ಹೇಗೆ ? ಈ ಕಾಡಿನಲ್ಲಿ ದಾರಿತೋರಿಸಲು ಮರೆತಾದರೂ ಒಂದು ನರಪಿಳ್ಳೆ ಕೂಡ ಸುಳಿಯುತ್ತಿಲ್ಲವಲ್ಲ! ಸುವರ್ಣಪುರಕ್ಕೆ ಯಾವ ರೀತಿಯಲ್ಲಿ ಹೇಗೆ ಹೋಗಲಿ ? ಎಂದು ಆ ಯುವರಾಜನು ಚಿಂತಿಸುತ್ತಿದ್ದನು. ವ॥ ಹಾಗೆ ಚಿಂತಿಸುತ್ತಿದ್ದು ೧೦. 'ಭೂಮಿಯ ಉತ್ತರಪ್ರದೇಶಕ್ಕೆ ಸುವರ್ಣ

ಅದಱಿಂದೊರ್ವನೆ ತೆಂಕಲಾವುದೆನುತಂ ನೋಡುತ್ತಮಿಂ ಪೋಗವೇ
ಟ್ಟುದಿದಂತಲ್ಲದೆ ಬೇಱುಪಾಯಮಣಮಿಲ್ಲಂತಲ್ತೆ ತಂತಮ್ಮ ಮಾ
ಡಿದುದಂ ತಾಮುಣವೇಟ್ಕುಮೆಂದು ಪಿರಿದೊಂದುದ್ವೇಗದಿಂದಂ ಮಗು
ಟ್ಚಿದನಿಂದ್ರಾಯುಧಮಂ ನೃಪಾಲತನುಜಂ ರಾಜಾಧಿರಾಜಾತ್ಮಜಂ ೧೧

ವ॥ ಅಂತು ಕುದುರೆಯುಂ ಮಗುಟ್ಚಿ ಮತ್ತಮಿಂತೆಂದಂ

ದಿನಲಕ್ಷ್ಮೀರಸನೈಕ ಮಧ್ಯಮಣಿಯಾದಂ ಭಾಸ್ಕರಂ ಶ್ರಾಂತಿಯುಂ
ಘನಮಾದತ್ತು ತುರಂಗಮಕ್ಕದಱಿನಾಂ ನೀರ್ದಾಣಮಂ ನೋಡಿ ಮೆ
ಲ್ಲನೆ ಸಾರ್ದಲ್ಲಿ ಬಟಲ್ಕೆಯಂ ಕಳೆದು ಪೋಪೆಂ ಬಟಿಕ್ಕೆಂದು ವಾ
ರಿನಿವಾಸಂಗಳನಲ್ಲಿ ನಾಲ್ದೆಸೆಗಳೊಳ್ ನೋಟ್ಕುಂ ಮಹೀವಲ್ಲಭಂ ೧೨

ವ॥ ಅಂತು ನೋಡುತ್ತುಮಿರೆಯಿರೆ

ಕೊಳದಿಂದಂ ತೆಗೆದೊಟ್ಟಿಕೊಂಡ ಕುಮುದಾಂಭೋಜಾತ ಕಲ್ಹಾರ ಕು
ಟ್ಮಲಶಾಲೂಕ ಮೃಣಾಳಜಾಲಮನಿಡುತ್ತೀಡಾಡುತಂ ಪಾದಪಂ
ಗಳ ಪುಷ್ಪಸ್ತಬಕಂಗಳಂ ಮುಱಿವುತಂ ಪೋಗಲ್ ಮದೇಭಂಗಳಾ
ಗಳದೇಂ ತೀಡಿದುದೋ ಸುಗಂಧಬಹುಳಂ ಬಂದೊಂದು ಮಂದಾನಿಲಂ ೧೩

ಪುರವೇ ಗಡಿಯಾಗಿದೆ. ಅಲ್ಲಿಂದ ಮುಂದೆ ಮನುಷ್ಯರಿಲ್ಲದ ಕಾಡು, ಅದಕ್ಕಿಂತ ಮುಂದೆ ಕೈಲಾಸಪರ್ವತವಿದೆ' ಎಂದು ಹೇಳುತ್ತಾರೆ. ಆ ಕೈಲಾಸವೇ ಎದುರಿಗೆ ಕಾಣುತ್ತಿದೆ. ೧೧. ಆದರಿಂದ ಇನ್ನು ಒಬ್ಬನೆ ದಕ್ಷಿಣದಿಕ್ಕು ಯಾವುದೆಂದು ನೋಡುತ್ತಾ ಹಿಂದಿರುಗ ಬೇಕು, ಹಾಗಿಲ್ಲದೆ ಬೇರೆ ಯಾವ ಉಪಾಯವೂ ಇಲ್ಲವಲ್ಲ! ಜನರು ತಾವು ಮಾಡಿದ ಕೆಲಸದ ಫಲವನ್ನು ತಾವೇ ಅನುಭವಿಸಬೇಕು," ಎಂದು ಬಹಳ ವ್ಯಥೆ ಯಿಂದ ಆ ಚಕ್ರವರ್ತಿಕುಮಾರನು ಇಂದ್ರಾಯುಧವನ್ನು ಹಿಂದಿರುಗಿಸಿದನು. ವ॥ ಹಾಗೆ ಕುದುರೆಯನ್ನು ಹಿಂದಿರುಗಿಸಿ ಮತ್ತೆ ಹೇಳಿದನು. ೧೨. "ಸೂರ್ಯನು ಹಗಲಿನ ಭಾಗ್ಯ ದೇವತೆಯ ಡಾಬಿನ ಮಧ್ಯದ ರತ್ನದಂತೆ ಕಾಣುತ್ತಿದ್ದಾನೆ. ಕುದುರೆಗೆ ಬಹಳ ಆಯಾಸ ವಾಗಿದೆ. ಆದ್ದರಿಂದ ನಾನು ನೀರಿರುವ ಸ್ಥಳವನ್ನು ಕಂಡುಹಿಡಿದು ಮೆಲ್ಲನೆ ಹೋಗಿ ಬಳಲಿಕೆಯನ್ನು ಪರಿಹರಿಸಿಕೊಂಡು ಬಳಿಕ ಹಿಂದಿರುಗುತ್ತೇನೆ"–ಎಂದು ಯೋಚಿಸಿ ಎಲ್ಲಾ ದರೂ ನೀರಿದೆಯೆ ? ಎಂದು ಆ ಯುವರಾಜನು ನಾಲ್ಕು ದಿಕ್ಕುಗಳಲ್ಲೂ ಹುಡುಕಾಡಿ ದನು. ವ॥ ಹಾಗೆ ಹುಡುಕುತ್ತಿರಲಾಗಿ ೧೩. ಕೊಳದಿಂದ ಕಿತ್ತು ರಾಶಿಹಾಕಿರುವ ಬಿಳಿ ಕಮಲ, ಕೆಂದಾವರೆ, ನೈದಿಲೆಗಳ ಮೊಗ್ಗು, ಗಡ್ಡೆ, ದಂಟುಗಳನ್ನು ಕಿತ್ತು ಬಿಸಾಡುತ್ತ ಬಿಸಾಡುತ್ತ, ಮರಗಳ ಹೂಗೊಂಚಲುಗಳನ್ನು ಮುರಿದುಹಾಕುತ್ತ ಮದ್ದಾನೆಗಳು ಆಗ ತಾನೆ ಹೊರಟುಹೋಗಿರಲು ಸುವಾಸನೆಯಿಂದ ತುಂಬಿದ ಮಂದಮಾರುತವು ಆಗ

ವ॥ ಅಂತು ನಿರೀಕ್ಷಿಸುತ್ತಂ ಬಂದ ಸುರಭಿಗಂಧವಹ ಸೂಚ್ಯಮಾನ ಗಜಾಯುಧಮಾರ್ಗಂ ಬಿಡಿದನೇಕ ಚಮತ್ಕಾರಿಯಪ್ಪ ಕೈಲಾಸತಟದೊಳ್ ಪೋಗೆವೋಗೆ

ಗಿರಿಶಾದ್ರೀಂದ್ರದ ಪೂರ್ವೋ
ತ್ತರದಿಶೆಯೊಳ್ ಕಾರ್ಮುಗಿಲ್ಗಳೆಱಗಿದುವೆನೆ ಕಾ
ರಿರುಳೆಳಸಿತೆನೆ ಕಱಂಗಿದ
ತರುಷಂಡಮನವನಿಪಾಲತನಯಂ ಕಂಡಂ ೧೪

ವ॥ ಅಂತು ನಿರೀಕ್ಷಿಸುತ್ತಂ ಪೋಗೆವೋಗೆ

ಕುಮುದರಜಂಗಳೊಳ್ ಪೊರೆದು ವಾಃಕಣಜಾಲಮನಾಂತು ಕೂಡೆ ವಿ
ಶ್ರಮಿಸಿ ತರಂಗಮಾಲಿಕೆಗಳೊಳ್ ಕಲಹಂಸನಿನಾದಬಂಭ್ರಮ
ದ್ಭ್ರಮರರವಂಗಳೊಳ್ ಬೆರಸಿ ಮಾರುತನೊಯ್ಯನೊಯ್ಯನೆ ಬಂದು ತೀಡಿದ
ತ್ತಮರ್ದೊಸೆದಪ್ಪಿಕೊಂಡು ಕರೆವಂತೆವೊಲಾ ಮನುಜೇಂದ್ರಚಂದ್ರನಂ ೧೫

ವ॥ ಅಂತಾ ತರುಷಂಡಮಂ ನೋಟ್ಪನ್ನೆಗಮಲ್ಲಿ

ಎಲೆ ತಾರಾಗಂ ಹರಂ ಕಣ್ಣಡೆ ಕರಗಿದುದಂತಲ್ತು ರುದ್ರಾಟ್ಟಹಾಸಂ
ಜಲಮಾದತ್ತಲ್ತು ಚಂದ್ರಾತಪಮಮೃತರಸಾಕಾರಮಾಯ್ತಲ್ತು ಹೈಮಾ
ಚಲಮಂಭೋರೂಪದಿಂದಂ ಪರಿಣಮಿಸಿದುದಂತಲ್ತು ನೈರ್ಮಲ್ಯಶೋಭಾ
ಕಲಿತಂ ತ್ರೈಲೋಕ್ಯಲಕ್ಷ್ಮೀಮಣಿಮುಕುರಮೆನಲ್ ಚೆಲ್ವದಾಯ್ತಬ್ಜಷಂಡಂ ೧೬

ಬೀಸಲು ಪ್ರಾರಂಭಿಸಿತು. ವ॥ ಹಾಗೆಯೆ ನೋಡುತ್ತಿರಲು ಬೀಸುತ್ತಿರುವ ಸುವಾಸನೆಯಾದ ಗಾಳಿಯಿಂದ ಸೂಚಿತವಾಗಿರುವ ಆನೆಯ ಹಿಂಡಿನ ದಾರಿಯನ್ನು ಹಿಡಿದು ಬಹಳ ಆಶ್ಚರ್ಯಕರವಾದ ಕೈಲಾಸಪರ್ವತದ ತಪ್ಪಲಿನಲ್ಲೇ ಹೋಗುತ್ತಿರಲಾಗಿ ೧೪. ಆ ಕೈಲಾಸಪರ್ವತದ ಈಶಾನ್ಯದಿಕ್ಕಿನಲ್ಲಿ ಕಪ್ಪುಮೋಡಗಳು ಕವಿದಂತೆಯೂ ಕಗ್ಗತ್ತಲೆಯು ಆವರಿಸಿದಂತೆಯೂ ಕಪ್ಪಾಗಿರುವ ಮರಗಳ ಗುಂಪನ್ನು ರಾಜಕುಮಾರನು ನೋಡಿದನು. ವ॥ ಹಾಗೆ ನಿರೀಕ್ಷಿಸುತ್ತ ಹೋಗುತ್ತಿರಲಾಗಿ ೧೫. ತಾವರೆಯ ಧೂಳುಗಳಲ್ಲಿ ವೃದ್ಧಿಯಾಗಿ, ನೀರಿನ ತುಂತುರುಗಳನ್ನು ಹೊಂದಿ, ಅಲೆಗಳ ಸಾಲುಗಳಲ್ಲಿ ಸೇರಿ ವಿಶ್ರಾಂತಿ ಪಡೆದು, ಕಲಹಂಸಪಕ್ಷಿಗಳ ಧ್ವನಿಗಳಲ್ಲಿ ಸುತ್ತಾಡಿ, ದುಂಬಿಗಳ ಧ್ವನಿಯೊಂದಿಗೆ ಬೆರೆದು, ಬಂದ ಗಾಳಿಯು ಮೆಲ್ಲಗೆ ಬಂದು ಆ ರಾಜಕುಮಾರನನ್ನು ಪ್ರೀತಿಯಿಂದ ಗಾಢವಾಗಿ ತಬ್ಬಿಕೊಂಡು ಕರೆಯುವಂತೆ ಬೀಸಿತು. ವ॥ ಹಾಗೆ ಆ ಮರದಗುಂಪನ್ನು ನೋಡುತ್ತಿರುವಾಗ ಅಲ್ಲಿ ೧೬. ಪರಮೇಶ್ವರನು ಹಣೆಗಣ್ಣಿನಿಂದ ನೋಡಲಾಗಿ ಬೆಳ್ಳಿಯ ಬೆಟ್ಟವು ಕರಗಿ ನೀರಾಗಿರುವಂತೆಯೂ, ರುದ್ರಮೂರ್ತಿಯ ಅಟ್ಟಹಾಸವು ಜಲರೂಪವನ್ನು ಪಡೆದಂತೆಯೂ, ಬೆಳದಿಂಗಳು ಅಮೃತದ್ರವದ ರೂಪನ್ನು ತಾಳಿದಂತೆಯೂ, ಹಿಮಾಲಯವು ಜಲಾಕಾರವಾಗಿ ಪರಿಣಮಿಸಿರುವಂತೆಯೂ ಇರುವ ಸ್ವಚ್ಛವಾದ ಶೋಭೆಯಿಂದ ಕೂಡಿಕೊಂಡಿರುವ, ಮೂರುಲೋಕದ ಭಾಗ್ಯದೇವತೆಯ ರನ್ನಗನ್ನಡಿಯಂತಿ

ವ॥ ಅದಲ್ಲದೆಯುಂ

ವಸುಧೆಯ ಚಂದ್ರಕಾಂತಮಣಿಭೂಗೃಹಮೆನ್ನದೆ ಘೂರ್ಣಿತಾರ್ಣವ
ಪ್ರಸವ ಸಮಗ್ರನಿರ್ಗಮನಮಾರ್ಗಮಿದೆನ್ನದೆ ನೋಡೆ ಪರ್ವಿದಾ
ಗಸದವತಾರಮೆನ್ನದೆ ಜಗತ್ರಯಸಂಚಿತ ಪುಣ್ಯಸಂಚಯಂ
ರಸಮಯಮಾದುದೆನ್ನದೆ ಸರೋವರಮಂ ಪೆಱತೇನನೆಂಬುದೋ ೧೭

ವ॥ ಮತ್ತಮದು ತೆಕ್ಕನೆತೀವಿಯುಮತಿನಿರ್ಮಲತೆಯಿಂ ರಿಕ್ತಮಾದಂತಿರ್ಪುದಂ ತಿರ್ಪು ದಂತುಮಲ್ಲದೆಯುಂ

ಎಸಗುವ ಮಂದಾನಿಲನಿಂ
ಕುಸುಮರಜಂಬೊರೆದು ಪೊಣ್ಮಿ ವಳಿದೆರೆಗಳಿನೇ
ನೆಸೆದುದೊ ಸುರಚಾಪಂಗಳ್
ಪಸರಿಸಿದಂಬರಮೆನಲ್ ಸರೋವರಮಾಗಳ್ ೧೮

ಪ್ರತಿಬಿಂಬದ ನೆಪದಿಂ ವನ
ತತಿ ಶೈಲಗ್ರಹನಿಕಾಯ ತಾರಾಂಕ ಜಗ
ತ್ರಿತಯಮುನಬ್ಜೋದರನಾ
ಕೃತಿಯಂ ತನ್ನೊಳಗೆ ತಳೆದು ತಿಳಿಗೊಳನೆಸೆಗುಂ ೧೯

ತಡಿವಿಡಿದೊಪ್ಪಿ ತೋಱುವ ತಮಾಲವನಂಗಳ ಮರ್ವು ಪರ್ವಿ ಕ
ರ್ಮಡುಗಳೊಳೆಯ್ದೆ ಮಾತೊರ್ಳಗೆ ನೀಲಸರೋಜವನಂಗಳಲ್ಲಿ ತ
ಳ್ತಿಡಿದಿರೆ ಕಾಳಗತ್ತಲೆ ತಗುಳ್ದಿರುಳಾದುದೆ ಗೆತ್ತು ತಮ್ಮೊಳಿ
ರ್ದೆಡೆಯಿನಗಲ್ವಮಂಜಿ ಕೆಲವುಂ ಪೊಣರ್ವಕ್ಕಿಗಳಬ್ಜಷಂಡದೊಳ್ ೨೦

ರುವ ಒಂದು ತಾವರೆಗೊಳವು ಬಹಳ ಮನೋಹರವಾಗಿತ್ತು. ವ॥ ಅದಲ್ಲದೆ ೧೭. ಇದು ಭೂದೇವಿಯ ಚಂದ್ರಕಾಂತಶಿಲಾಮಯವಾದ ನೆಲಮಾಳಿಗೆಯಂತಿದೆ. ಉಕ್ಕುತ್ತಿರುವ ಸಮುದ್ರಗಳು ಪಾತಾಳಲೋಕದಿಂದ ಭೂಮಿಯ ಮೇಲಕ್ಕೆ ಏಳುವ ದೊಡ್ಡ ಜಲಮಾರ್ಗದಂತಿದೆ. ವಿಸ್ತಾರವಾದ ಆಕಾಶವು ಜಲರೂಪದಿಂದ ಕೆಳಗಿಳಿದು ಬಂದಂತಿದೆ. ಮೂರು ಲೋಕದ ಪುಣ್ಯಸಮೂಹವು ಜಲಮಯವಾಗಿ ಪರಿಣ ಮಿಸಿದಂತಿದೆ ಎಂದು ಹೇಳಬೇಕಲ್ಲದೆ ಬೇರೆ ರೀತಿಯಲ್ಲಿ ಹೇಳುವಂತೆಯೇ ಇಲ್ಲ. ವ॥ ಮತ್ತು ಅದು ಸಂಪೂರ್ಣವಾಗಿ ಜಲಭರಿತವಾಗಿದ್ದರೂ ತನ್ನ ನಿರ್ಮಲತೆಯಿಂದ ನೀರೇ ಇಲ್ಲವೇನೊ ! ಎಂಬಂತೆ ಕಾಣುತ್ತಿತ್ತು ೧೮. ಮಂದಮಾರುತದ ಚಲನೆಯಿಂದ ಹೂವಿನ ಪುಡಿಗಳಿಂದ ಮಿಶ್ರಿತವಾಗಿ ಹರಡುತ್ತಿರುವ ಸಣ್ಣಸಣ್ಣ ತೆರೆಗಳಿಂದ ಕೂಡಿರುವ ಈ ಸರೋವರವು ಅನೇಕ ಕಾಮನಬಿಲ್ಲುಗಳಿಂದ ಕೂಡಿಕೊಂಡಿರುವ ಆಕಾಶದಂತೆ ವಿರಾಜಿಸುತ್ತಿತ್ತು. ೧೯. ಆ ತಿಳಿಗೊಳದಲ್ಲಿ ಕಾಡು, ಬೆಟ್ಟ, ಗ್ರಹ, ನಕ ತ್ರಗಳಿಂದ ಕೂಡಿರುವ ಮೂರುಲೋಕಗಳೂ ಪ್ರತಿಬಿಂಬರೂಪದಿಂದ ಕಾಣುತ್ತಿದ್ದುವು. ಇದರಿಂದ ಅದು ವಿಶ್ವಂಭರನೆನಿಸಿರುವ ಶ್ರೀಮನ್ನಾರಾಯಣನ ಆಕಾರವನ್ನು ಧರಿಸಿರುವಂತೆ ಶೋಭಿಸುತ್ತಿತ್ತು. ೨೦. ಅದರ ಸುತ್ತಲೂ ದಡದಲ್ಲಿ ಹೊಂಗೆಮರಗಳು ಬೆಳೆದಿದ್ದುವು. ಅವು ಸರೋವರದ ಮಡುವಿನಲ್ಲಿ

ಅದೊಂದೆಡೆ ಜಲೇಶಹಂಸಮುಖದಾರಿತಾಂಭೋಜಮಂ
ತದೊಂದೆಡೆ ದಿಶೇಭಜರ್ಝರಿತ ನೀಲನೀರೇಜಮಂ
ತದೊಂದೆಡೆ ವೃಷಾಂಕಪುಂಗವವಿಘಟ್ಟಿತೋತ್ತೀರಮಂ
ತದೊಂದೆಡೆ ಕೃತಾಂತಸೈರಿಭವಿಕೀರ್ಣಫೇನೋತ್ಕರಂ ೨೧

ವ|| ಅಂತುಮಲ್ಲದೆಯುಂ

ವಿರಹಿಗಳಂತೆ ಮೃಣಾಳೋ
ತ್ಕರ ವಲಯಾಂಕಿತವರೇಣ್ಯದಂತೆ ವಿಜೃಂಭೋ
ದ್ಧುರ ಪುಂಡರೀಕ ಸಂಕುಳ
ಮುರಗಾನ್ವಯದಂತನಂತಪದ್ಮೋಪೇತಂ ೨೨

ದಿವಿಜರಗೇಂದ್ರದಿಂ ಕಡೆದ ಪಾಲ್ಗಡಲಂತಿರೆ ನೀಲಕಂಠಪೀ
ತ ವಿಷಮನಂಗಕೇತನದವೊಲ್ ಮಕರಾಂಕಿತಮೂರ್ವರೇಶ್ವರಾಂ
ಘ್ರಿವೊಲನಿಮೇಷಕೂರ್ಮಲಲಿತಂ ಮಲಯಾದ್ರಿನಿಕುಂಜದೇಶದಂ
ತವೊಲತಿಸೌರಭಾಕಲಿತ ಚಂದನಶೀತವನಂ ಸರೋವರಂ ೨೩

ಪ್ರತಿಬಿಂಬಿಸುತ್ತಿದ್ದುವು. ಇದರಿಂದ ಸರೋವರದೊಳಗೆ ಕತ್ತಲೆಯು ಹರಡಿದಂತಿತ್ತು. ಹಾಗೆಯೆ ಕನ್ನೈದಿಲೆಗಳ ಗುಂಪು ಕಪ್ಪುಛಾಯೆಯಿಂದ ಕತ್ತಲೆಯನ್ನುಂಟುಮಾಡುತ್ತಿದ್ದುವು ಇದರಿಂದ ತಾವರೆಪೊದೆಗಳಲ್ಲಿದ್ದ ಹಲವಾರು ಚಕ್ರವಾಕದಂಪತಿಗಳು ಇರುಳಾಯಿತೆಂಬ ಭ್ರಾಂತಿಯಿಂದ ಪರಸ್ಪರ ಅಗಲಿಹೋಗುತ್ತಿದ್ದುವು. ೨೧. ಆ ಸರೋವರವು ಒಂದು ಕಡೆ ವರುಣನ ವಾಹನವಾದ ಹಂಸಪಕ್ಷಿಯ ಕೊಕ್ಕಿನಿಂದ ಸೀಳಲ್ಪಟ್ಟ ಕಮಲಗಳುಳ್ಳದ್ದಾಗಿಯೂ, ಮತ್ತೊಂದು ಕಡೆ ದಿಗ್ಗಜಗಳಿಂದ ಛಿದ್ರಛಿದ್ರ ಮಾಡಲ್ಪಟ್ಟ ಕನ್ನೈದಿಲೆಗಳುಳ್ಳದ್ದಾಗಿಯೂ, ಮತ್ತೊಂದು ಕಡೆ ಪರಮೇಶ್ವರನ ವಾಹನವಾದ ವೃಷಭನಿಂದ ಇರಿದುಹಾಕಿರುವ ದಡಗಳುಳ್ಳದ್ದಾಗಿಯೂ, ಬೇರೊಂದು ಕಡೆ ಯಮನ ವಾಹನವಾದ ಕೋಣನಿಂದ ಚೆಲ್ಲಾಪಿಲ್ಲಿ ಮಾಡಲ್ಪಟ್ಟಿರುವ ನೊರೆಗಳ ಗುಂಪುಳ್ಳದ್ದಾಗಿಯೂ ಇತ್ತು. ವ|| ಅದಲ್ಲದೆ ೨೨. ಆ ಸರೋವರವು ವಿರಹಿಗಳಂತೆ "ಮೃಣಾಳೋತ್ಕರವಲಯಾಂಕಿತ" (೧. ತಾವರೆದಂಟುಗಳ ಗುಂಪಿನಿಂದ ಕೂಡಿಕೊಂಡಿರುವುದು ೨. ಶೈತ್ಯೋಪಚಾರಕ್ಕಾಗಿ ತಾವರೆಯದಂಟುಗಳಿಂದ ಮಾಡಿದ ಬಳೆಗಳುಳ್ಳದ್ದು) ವಾಗಿದ್ದಿತು. ಕಾಡಿನಂತೆ "ವಿಜೃಂಭೋದ್ಧುರ ಪುಂಡರೀಕಸಂಕುಳ" (೧. ಅರಳುತ್ತಿರುವ ಶ್ರೇಷ್ಠವಾದ ಬಿಳಿಕಮಲಗಳ ಗುಂಪುಳ್ಳದ್ದು ೨. ಆಕಳಿಸುತ್ತಿರುವ ನಿರಾತಂಕವಾಗಿರುವ ಹುಲಿಗಳುಳ್ಳದ್ದು) ವಾಗಿದ್ದಿತು. ಸರ್ಪಗಳ ವಂಶದಂತೆ "ಅನೇಕಪದ್ಮೋಪೇತ" (೧ ಅನೇಕ ಕಮಲಗಳುಳ್ಳದ್ದು, ೨. ಪದ್ಮ ಎಂಬ ನಾಗರುಳ್ಳದ್ದು) ವಾಗಿದ್ದಿತು. ೨೩. ಆ ಸರೋವರವು ದೇವತೆಗಳು ಮಂದರಪರ್ವತದಿಂದ ಕಡೆದ ಕ್ಷೀರಸಮುದ್ರದಂತೆ "ನೀಲಕಂಠಪೀತವಿಷ" (೧ ನವಿಲುಗಳಿಂದ ಕುಡಿಯಲ್ಪಟ್ಟ ನೀರುಳ್ಳದ್ದು, ೨. ಪರಮೇಶ್ವರನಿಂದ ಕುಡಿಯಲ್ಪಟ್ಟ ನಂಜುಳ್ಳದ್ದು) ವಾಗಿದ್ದಿತು. ಮನ್ಮಥನ ಬಾವುಟದಂತೆ "ಮಕರಾಂಕಿತ" (೧. ಮೊಸಳೆಗಳಿಂದ

ಆವುವುಟಿದೆಡೆಗಳೆಂದು ಸ
ರೋವರಮಂ ನೋಡುತಿರ್ಪ ಬಗೆಯಿಂ ಕೈಲಾ
ಸಾವಾಸಮಂ ಬಿಡಂ ಗೌ
ರೀವಲ್ಲಭನೆಂದೊಡಾರಿದಂ ನೆಱೆ ಪೊಗಟಿರ್ ೨೪

ಆಳವಱಿಯದೆ ತುರಗಮುಖ
ರ್ಕಳ ಬಟಿವಟಿಯನೆ ತಗಳ್ದು ಬಂದುದುಮೀಗಳ್
ಫಳಮಾದತ್ತೊಂದಱೊಳೀ
ಕೊಳನಂ ಕಂಡುದಱೊಳೆನುತೆ ಮತ್ತಂ ಭೂಪಂ ೨೫

ವ॥ ಆಗಳುಮಾವಲ್ಲಭಪದಪದ್ಮಮುದ್ರಾಂಕಿತಮುಂ ದಿವಿಜರಾಜ ಗಜಗಂಡಸ್ಥಳಗಳಿತ ಮದಜಲಸಿಕ್ತಮುಂ ಭಗವತೀಸಿಂಹಾವತರಣಮಾರ್ಗಮುಮಪ್ಪ ದಕ್ಷಿಣತೀರದ ಕುಸುಮಲತಾ ಮಂಟಪದ ಮುಂದೆ ತುರಂಗದಿಂದವನಿತಳಕ್ಕವತರಿಸಿ ಪಲ್ಲಣಮಂ ಬಿಟ್ಟು ತದನಂತರದೊಳ್

ಮಹಿತಳ ಲುಠಿತೋತ್ಥಿತಮಂ
ಗೃಹೀತ ಕತಿಪಯ ತೃಣಾಂಕುರಗ್ರಾಸಮನಾ
ಮಹಿಪಂ ಪೀತಾಂಬುವನಂ
ದು ಹಯುವನಾಸನ್ನವಿಟಪಿಯೊಳ್ ನಿಯಮಿಸಿದಂ ೨೬

ಕೂಡಿರುವುದು, ೨. ಮೊಸಳೆಯ ಚಿಹ್ನೆಯುಳ್ಳದ್ದು) ವಾಗಿದ್ದಿತು. ರಾಜರ ಕಾಲುಗಳಂತೆ "ಅನಿಮೇಷ, ಕೂರ್ಮಲಲಿತ." (೧. ಮೀನು ಮತ್ತು ಆಮೆಗಳಿಂದ ಸುಂದರವಾದುದು, ೨. ಮತ್ಸ್ಯರೇಖೆ, ಕೂರ್ಮರೇಖೆಗಳಿಂದ ಶೋಭಿಸುತ್ತಿರುವುದು) ವಾಗಿದ್ದಿತು. ಮಲಯಪರ್ವತದ ತೋಪಿನಂತೆ "ಅತಿಸೌರಭಾಕಲಿತ ಚಂದನ ಶೀತವನ" (೧. ಬಹಳ ಸುವಾಸನೆಯುಳ್ಳ ಗಂಧದಮರಗಳಿಂದ ತಂಪಾದ ನೀರುಳ್ಳದ್ದು. ೨. ಬಹಳ ಸುವಾಸನೆಯಾದ ಗಂಧದಮರಗಳಿಂದ ಕೂಡಿದ ತಂಪಾದ ಕಾಡುಳ್ಳದ್ದು) ವೆನಿಸಿ ಶೋಭಿಸುತ್ತಿತ್ತು. ೨೪. ಈ ಸರೋವರವನ್ನು ಬಿಟ್ಟರೆ ಮತ್ತಾವ ಸುಂದರವಾದ ಪ್ರೇಕ್ಷಣೀಯ ಸ್ಥಳಗಳಿವೆ ? ಎಂದು ಪರಮೇಶ್ವರನು ಇದನ್ನು ನೋಡಿಕೊಂಡಿರಬೇಕೆಂಬ ಉದ್ದೇಶದಿಂದಲೇ ಕೈಲಾಸವಾಸವನ್ನು ಬಿಡುವುದಿಲ್ಲ ಎಂದ ಮೇಲೆ ಇದನ್ನು ಯಾರು ತಾನೆ ಹೆಚ್ಚಾಗಿ ವರ್ಣಿಸದೆ ಇರುತ್ತಾರೆ? ೨೫. ಆಗ ಚಂದ್ರಾಪೀಡನು ನಾನು ನನ್ನ ಶಕ್ತಿಯನ್ನೇ ತಿಳಿದುಕೊಳ್ಳದೆ ಆ ಕಿನ್ನರರ ಬೆನ್ನುಹತ್ತಿ ಬಂದುದು ಈಗ ಈ ಸರೋವರವನ್ನು ಕಂಡುದರಿಂದ ಒಂದು ರೀತಿಯಲ್ಲಿ ಸಾರ್ಥಕವೇ ಆಯಿತು ಎಂದು ಆಲೋಚಿಸುತ್ತಿದ್ದನು. ವ॥ ಆಗ ಪರಮೇಶ್ವರನ ಪಾದಕಮಲಗಳ ಗುರುತಿನಿಂದ ಕೂಡಿಕೊಂಡಿರುವ, ದೇವೇಂದ್ರನ ವಾಹನವಾದ ಐರಾವತದ ಕೆನ್ನೆಗಳಿಂದ ಸುರಿಯುತ್ತಿರುವ ಮದೋದಕದಿಂದ ನೆನೆಸಲ್ಪಟ್ಟಿರುವ, ದುರ್ಗಾದೇವಿಯ ಸಿಂಹದ ನೀರಿಗಿಳಿಯುವ ದಾರಿಯಾದ ದಕ್ಷಿಣತೀರದ ಪುಷ್ಪಭರಿತವಾದ ಲತಾಮಂಡಪದ ಮುಂದೆ ಕುದುರೆಯಿಂದ ಭೂಮಿಗಿಳಿದು ಜೀನನ್ನು ಕೆಳಗಿಳಿಸಿದನು. ಬಳಿಕ ೨೬. ನೆಲದ ಮೇಲೆ ಹೊರ

ಲಲಿತ ನಿಜಕನಕಮಯ ಶೃಂ
ಖಲೆಯಿಂ ಹರಿಚರಣಯುಗಳಮಂ ನಿಯಮಿಸಿ ಶಾ
ಡ್ವಲತೃಣತತಿಯಂ ಖಡ್ಗದಿ
ನಿಳಾಧಿಪಂ ಕೊಯ್ದು ಮುಂದೆ ಸಾರ್ಚಿದನಾಗಳ್ ೨೭

ವ॥ ಅನಂತರಮಾ ವಿಬುಧಕಮಳಾಕರರಾಜಹಂಸನಾ ಕಮಳಾಕರದೊಳ್ ಕರಚರಣ ವದನಪ್ರಕ್ಷಾಲನಂಗೆಯ್ದು ಚಾತಕನಂತೆ ಕೃತಜಲಾಹಾರನಾಗಿ ಚಕ್ರಾಹ್ವಯದಂತೆ ಮೃಣಾಳ ನಾಳಂಗಳಂ ಮೆಲ್ದು ವಿಯೋಗಿಯಂತೆ ನಳಿನದಳಂಗಳನುರದೊಳೊತ್ತಿಕೊಂಡು ತನ್ನೊಳಿಂತೆಂದಂ

ಅಂಚೆಗಳಿಂಚರದಿಂ ತ
ಣ್ಪಂ ಚೆಲ್ವಿಂ ಸವಿಯಿನಬ್ಜಘನಸೌರಭದಿಂ
ಕಾಂಚನಕಮಳಾಕರಮಿದು
ಪಂಚೇಂದ್ರಿಯಸುಖಮನೆನಗೆ ಪಡೆದಪುದೀಗಳ್ ೨೮

ವ॥ ಎನುತಮಲ್ಲಿಂ ಪೊಱಮಟ್ಟು

ಲಲಿತಲತಾಗೃಹದಿಂದೂ
ಪಲಮಂ ಸಾರ್ದುಱಿಡೆಸುತ್ತಿ ಮೇಲುದನಾಗಳ್
ತಲೆಗಿಂಬುಮಾಡಿ ನೃಪಕುಲ
ತಿಲಕಂ ಪಟ್ಟಿರ್ದನಿರ್ಪುದುಂ ತತ್‌ಕ್ಷಣದೊಳ್ ೨೯

ಳಾಡಿ ಮೇಲಕ್ಕೆದ್ದು, ಕೆಲವು ಚಿಗುರುಹುಲ್ಲಿನ ಕವಳವನ್ನು ಮೆದ್ದು ನೀರು ಕುಡಿದ ಆ ಕುದುರೆಯನ್ನು ರಾಜಕುಮಾರನು ಸಮೀಪದಲ್ಲಿದ್ದ ಮರಕ್ಕೆ ಕಟ್ಟಿಹಾಕಿದನು. ೨೭. ತರುವಾಯ ಸುಂದರವಾದ ಚಿನ್ನದ ಸರಪಣಿಯಿಂದ ಕುದುರೆಯ ಎರಡು ಕಾಲುಗಳನ್ನು ಕಟ್ಟಿದನು. ಆಮೇಲೆ ಕತ್ತಿಯಿಂದ ಹುಲ್ಲುಗಳನ್ನು ಕೊಯ್ದು ಕುದುರೆಯ ಮುಂದೆ ಹಾಕಿದನು, ವ॥ ಆಮೇಲೆ ವಿದ್ವಾಂಸರೆಂಬ ತಾವರೆಗೊಳದಲ್ಲಿ ಅರಸಂಚೆಯಂತೆ ವಿರಾಜಿಸುವ ಆ ರಾಜಪುತ್ರನು ಆ ತಾವರೆಗೊಳದಲ್ಲಿ ಕೈಕಾಲು ಮುಖಗಳನ್ನು ತೊಳೆದು ಕೊಂಡು ಚಾತಕಪಕ್ಷಿಯಂತೆ ಜಲಾಹಾರಮಾಡಿ, ಚಕ್ರವಾಕಪಕ್ಷಿಯಂತೆ ತಾವರೆಯ ದಂಟುಗಳನ್ನು ಮೆದ್ದು, ವಿರಹಜ್ವರಪೀಡಿತನಂತೆ ತಾವರೆಯ ಎಲೆಗಳನ್ನು ಎದೆಗೆ ಅಮುಚಿಕೊಂಡು ಹೀಗೆ ಆಲೋಚಿಸಿದನು. ೨೮. ಹಂಸಪಕ್ಷಿಗಳ ಇಂಪಾದ ಧ್ವನಿ ಯಿಂದಲೂ, ತಂಪಿನಿಂದಲೂ, ಸೊಬಗಿನಿಂದಲೂ, ರುಚಿಯಿಂದಲೂ, ಶ್ರೇಷ್ಠವಾದ ತಾವರೆಯ ವಾಸನೆಯಿಂದಲೂ ಕೆಂದಾವರೆಯ ಈ ಕೊಳವು ನನಗೆ ಈಗ ಪಂಚೇಂದ್ರಿಯ ಗಳಿಗೂ ಸುಖವನ್ನುಂಟುಮಾಡುತ್ತಿದೆ. ವ॥ ಎನ್ನುತ್ತ ಅಲ್ಲಿಂದ ಹೊರಟು, ೨೯. ಆ ರಾಜವಂಶಕ್ಕೆ ತಿಲಕಪ್ರಾಯನಾದ ಚಂದ್ರಾಪೀಡನು ಸುಂದರವಾದ ಬಳ್ಳಿಮಾಡದ ಚಂದ್ರಕಾಂತಶಿಲೆಯೊಂದನ್ನು ಸೇರಿ, ತನ್ನ ಹೊದೆಯುವ ಬಟ್ಟೆಯನ್ನು ಉಂಡೆಸುತ್ತಿ

ಮುರಿದ ಕೊರಲ್ ಬಟಲ್ದೆಳಪಲಾಟಿಪ ಮೆಯ್ ಕಟವಾಯ ಲೋಳೆಯೊಳ್
ಪೊರೆದುಗುತರ್ಪ ಪಚ್ಚ ಪಸಿಯುಚ್ಚಗಱಂಕೆ ಮರಲ್ದ ದಿಟ್ಟಿ ಕ
ತ್ತರಿವೊನೆಗೊಂಡೆಟಲ್ದ ಕಿವಿ ಸೂಚಿದಪ್ಪುದು ಸೋಲ್ತ ಭಾವಮಂ
ತುರಗಮಿದೇನನಾಲಿಸುತಮಿರ್ದಪುದೆಂದು ನರೇಂದ್ರಚಂದ್ರಮಂ ೩೦

ವ॥ ಅಂದದನಚ್ಚರಿವಟ್ಟು ವೀಣಾವಿದ್ಯಾಧರಂ ಭಾವಿಸಿ ನೋಡುತ್ತಮಿರ್ದನನ್ನೆಗಂ

ಎಲೆ ಪೆಣ್ದುಂಬಿಯ ಗಾವರಂಬೊರೆದು ಪೊಣ್ಮುತ್ತಿರ್ದ ಪುಷ್ಪಾಸ್ತ್ರ ಚಾ
ಪಲತಾ ಜ್ಯಾರವದಂತಮಾನುಷಮೆನಿಪ್ಪೊಂದೋಜೆಯೊಳ್ ಸಂದ ಕಾ
ಕಲಿಯಿಂದಂ ಪುದಿದೊಯ್ಯನೊಯ್ಯನೆ ವಿಪಂಚೀನಾದಮೀಗಳ್ ಪಳಂ
ಚಲೆವುತ್ತಿರ್ದಪುದಲ್ತೆ ಸಾಲ್ವುದಿದೆ ತದ್ಗಂಧರ್ವರಂ ಸೋಲಿಸಲ್ ೩೧

ಇದು ಮನುಜರ್ಗಗೋಚರಮೆನಿಪ್ಪ ಹರಾದ್ರಿಯ ತಪ್ಪಲಲ್ಲಿ ಗೇ
ಯದ ದನಿ ನುಣ್ಪುವೆತ್ತೆಸೆಯುತಿರ್ದಪುದೀಗಳೆ ಪೋಗಿ ನೋಟ್ಪೆನಾ
ನಿದನೆನುತಂ ಕುತೂಹಲಿಮಾನಸನಂದು ನರೇಂದ್ರನಂದನಂ
ಕುದುರೆಯ ಬೆಂಗೆವಂದು ನಡೆದಂ ಮೃಗಸೂಚಿತ ಗೇಯಮಾರ್ಗದಿಂ ೩೨

ತಲೆದಿಂಬು ಮಾಡಿಕೊಂಡು ಸ್ವಲ್ಪ ಹೊತ್ತು ಮಲಗಿದ್ದನು. ೩೦. ಆಗ ಈ ಕುದುರೆಯು ತಿರುಗಿಕೊಂಡಿರುವ ಕತ್ತು, ಬಳಲಿ ಏನನ್ನೋ ಬಯಸಲು ತವಕಿಸುತ್ತಿರುವ ಶರೀರ, ಕಟವಾಯಿಯಿಂದ ಸುರಿಯುತ್ತಿರುವ ಜೊಲ್ಲಿನಲ್ಲಿ ಸೇರಿಕೊಂಡು ಬರುತ್ತಿರುವ ಹಸುರಾದ ಗರಿಕೆಹುಲ್ಲು, ಅರಳಿರುವ ಕಣ್ಣು, ಕತ್ತರಿಯ ಮೊನೆಯಂತೆ ನೆಟ್ಟನೆ ನಿಂತು ಆಲಿಸುತ್ತಿರುವ ಕಿವಿ, ಇವುಗಳಿಂದ ತಾನು ಪರವಶವಾಗಿರುವ ಮನಸ್ಸನ್ನು ಪ್ರಕಟಪಡಿಸುತ್ತಿದೆ. ಇದು ಏನನ್ನು ಕೇಳುತ್ತಿದೆ ? ಎಂದು ಆ ಚಂದ್ರಾಪೀಡನು ಆಶ್ಚರ್ಯಪಟ್ಟನು. ವ॥ ವೀಣಾ ವಾದನದಲ್ಲಿ ಪಾರಂಗತನಾದ ಆ ರಾಜಕುಮಾರನು ಹಾಗೆ ಆಶ್ಚರ್ಯದಿಂದ ಗಮನವಿಟ್ಟು ನೋಡುತ್ತಿರಲಾಗಿ, ೩೧. ಹೆಣ್ಣುದುಂಬಿಯ ಧ್ವನಿಯಿಂದ ಕೂಡಿಕೊಂಡು ಹರಡು ತ್ತಿರುವ ಮನ್ಮಥನ ಬಿಲ್ಲಿನ ನಾಣುದನಿಯಂತೆ ಇರುವ, ದೇವತೆಗಳ ಕಂಠದ ರೀತಿಯಿಂದ ಕೂಡಿಕೊಂಡಿರುವ, ಮಧುರಗೀತದಿಂದ ಕೂಡಿಕೊಂಡಿರುವ ಈ ವೀಣಾನಾದವು ನಿಧಾನ ವಾಗಿ ಕಿವಿಗೆ ಬೀಳುತ್ತಿದೆ. (ದೇವತೆಗಳ ಕಂಠದಂತೆ ತೋರುವ) ಗಂಧರ್ವರನ್ನು ಕೀಳುಮಾಡಲು ಇಷ್ಟೆ ಸಾಕು. ೩೨. ಇದು ಮನುಷ್ಯರ ದೃಷ್ಟಿಗೆ ಗೋಚರವಾಗದಿರುವ ಕೈಲಾಸಪರ್ವತದ ತಪ್ಪಲು. ಇಂತಹ ಸ್ಥಳದಲ್ಲಿ ಸಂಗೀತದ ಧ್ವನಿಯು ಇಂಪಾಗಿ ಕೇಳಿ ಬರುತ್ತಿದೆ. ನಾನು ಈಗಲೆ ಹೋಗಿ ಇದನ್ನು ನೋಡುತ್ತೇನೆ—ಎಂದು ಕುತೂಹಲದಿಂದ ಕೂಡಿದ ಮನಸ್ಸುಳ್ಳ ರಾಜಕುಮಾರನು ಕುದುರೆಯು ತೋರಿಸುವ ಗೀತವು ಕೇಳಿಬರು

ವ॥ ಅಂತು ಪೋಗೆವೋಗೆ

ಗಿರಿಜಾಕರ್ಣಾವತಂಸೋತ್ಪಲಮನಲೆಯುತಂ ಪಾರಿಜಾತಪ್ರಸೂನೋ
ದರದಿವ್ಯಾಮೋದಮಂ ಬೀಱುತುಮಭವವೃಷಾಧೀಶರೋಮಂಥಫೇನೋ
ತ್ಕರದೊಳ್ ತಳ್ಪೊಯ್ಯುತಂ ಧೂರ್ಜಟಿನಿಬಿಡಜಟಾಹೀಂದ್ರಪೀತಾವಶೇಷಂ
ಪರಮಾನಂದಾವಹಂ ಬಂದೆಸಗಿದುದಭವಾದ್ರೀಂದ್ರಚಾರಂ ಸಮೀರಂ ೩೩

ವ॥ ಅಂತು ಬಂದ ಮಂದಮಾರುತನಂ ನರೇಂದ್ರನಂದನನಿದಿರ್ಗೊಂಡು ಪೋಗೆವೋಗೆ .ತದ್ಗಿರೀಂದ್ರಚಂದ್ರಪ್ರಭಮೆಂಬುಪಾಂತಪರ್ವತದ ಪಶ್ಚಿಮಪ್ರಾಂತದೊಳ್ ವಿಕೀರ್ಯಮಾಣ ಬಹುಳ ಕುಸುಮಂಗಳಪ್ಪ ಕನಕಕೇತಕೀವ್ರಜಂಗಳೊಳಂ ಮತ್ತಮಧುಕರ ಝಂಕಾರಂಗಳಪ್ಪ ಸಹಕಾರಂಗಳೊಳಂ ಪರಿವೇಷ್ಟಿತ ಮಧುವ್ರತಂಗಳಪ್ಪ ತಮಾಲಂಗಳೊಳಂ ಅನ್ಯೋನ್ಯ ಕಲಹಕುಪಿತ ಕಪೋತ ಪೋತಪಾತಿತಂಗಳಪ್ಪ ಪೂಗಳೊಳಂ ನಯನಾನಂದಂಗಳಪ್ಪ ಚಂದನಂಗಳೊಳಂ ಶುಕನಿಕರಾವೃತಂಗಳಪ್ಪ ಫಲಭರಿತ ದಾಡಿಮೀ ನೀಡಂಗಳೊಳಂ ವಸಂತಸಾಮಜಘಟಾಪಿನದ್ಧ ಕದಳಿಕಾನಿಕಾಯಕಾಯಮಾನಂಗಳಪ್ಪ ಕದಳೀವನಂಗಳೊಳಂ ಹರಿದ್ವಿತಾನೋಪಮಾನಂಗಳಪ್ಪ ಲತಾಪ್ರತಾನಂಗಳೊಳಂ ನಿಜಸೌರಭಾಕೃಷ್ಟ ಮಧುಕರಕುಲಂಗಳಪ್ಪ ವಕುಳಂಗಳೊಳಂ

ತ್ತಿರುವ ದಾರಿಯಿಂದಲೆ ಅದನ್ನು ಹಿಂಬಾಲಿಸುತ್ತ ಮುಂದೆ ಹೋದನು. ವ॥ ಹಾಗೆ ಹೋಗುತ್ತಿರಲಾಗಿ, ೩೩. ಪಾರ್ವತೀದೇವಿಯ ಕಿವಿಯಲ್ಲಿ ಮುಡಿದುಕೊಂಡಿರುವ ಕಮಲ ಪುಷ್ಪದಲ್ಲಿ ಸಂಚರಿಸುತ್ತ, ಪಾರಿಜಾತಪುಷ್ಪದ ದಿವ್ಯವಾದ ಸುವಾಸನೆಯನ್ನು ಬೀರುತ್ತ, ಪರಮೇಶ್ವರನ ವಾಹನವಾದ ವೃಷಭದ ಮೆಲಕುನೊರೆಗಳಲ್ಲಿ ಸಂಪರ್ಕಹೊಂದುತ್ತಾ, ಪರಶಿವನ ದಟ್ಟವಾದ ಜಡೆಯಲ್ಲಿರುವ ಸರ್ಪರಾಜನಿಂದ ಸೇವಿಸಿ ಉಳಿದಿರುವ ಪರಮಾನಂದವನ್ನುಂಟುಮಾಡುವ ಕೈಲಾಸಪರ್ವತದಲ್ಲಿ ಸಂಚರಿಸುವ ಗಾಳಿಯು ಬೀಸುತ್ತಿತ್ತು. ವ॥ ಹಾಗೆ ಬಂದ ಮಂದಮಾರುತವನ್ನು ರಾಜಕುಮಾರನು ಎದುರುಗೊಂಡು ಮುಂದೆ ಹೋಗುತ್ತಿರಲಾಗಿ, ಆ ಕೈಲಾಸದ ನೆರೆಬೆಟ್ಟವಾದ ಚಂದ್ರಪ್ರಭ ಪರ್ವತದ ಪಶ್ಚಿಮಭಾಗದಲ್ಲಿ ಹೂವುಗಳನ್ನು ಚೆಲ್ಲುತ್ತಿರುವ, ಹೊಂಗೇದಗೆ ಮರಗಳಿಂದಲೂ, ಕೊಬ್ಬಿದ ದುಂಬಿಗಳ ಝೇಂಕಾರದಿಂದ ಕೂಡಿರುವ ಸಿಹಿಮಾವಿನ ಮರಗಳಿಂದಲೂ, ದುಂಬಿಗಳಿಂದ ಸುತ್ತುವರಿಯಲ್ಪಟ್ಟಿರುವ ಹೊಂಗೆಮರಗಳಿಂದಲೂ, ಪರಸ್ಪರ ಜಗಳದಿಂದ ರೇಗಿರುವ ಪಾರಿವಾಳಮರಗಳಿಂದ ಬೀಳಿಸಲ್ಪಟ್ಟ ಹೂವುಗಳುಳ್ಳ ರಮಣೀಯವಾದ ಗಂಧದಮರಗಳಿಂದಲೂ, ಗಿಳಿವಿಂಡಿನಿಂದ ಆವರಿಸಲ್ಪಟ್ಟಿರುವ ಹಣ್ಣುಗಳಿಂದ ತುಂಬಿರುವ ದಾಳಿಂಬೆಮರಗಳಿಂದಲೂ, ವಸಂತಋತುವೆಂಬ ಆನೆಯ ಹಿಂಡಿನ ಮೇಲೆ ಕಟ್ಟಿರುವ ಬಾವುಟಗಳಂತಿರುವ ಬಾಳೆಯಮರದ ಗುಂಪುಗಳಿಂದಲೂ ಹಸಿರುಬಣ್ಣದ ಮೇಲುಕಟ್ಟುಗಳಂತಿರುವ ಬಳ್ಳಿಯ ಪೊದರುಗಳಿಂದಲೂ, ಸುವಾಸನೆಯಿಂದ ದುಂಬಿವಿಂಡನ್ನು ಸೆಳೆಯುತ್ತಿರುವ ವಕುಳವೃಕ್ಷಗಳಿಂದಲೂ, ರೋಮಾಂಚನವನ್ನುಂಟು

ಕೃತ ಪುಲಕಂಗಳಪ್ಪ ತಿಲಕಂಗಳೊಳಂ ಕಂಗೊಳಿಪ ಕೈಲಾಸತರಂಗಿಣೀತರಂಗಿತ ಕಾಂಚನ ಸಿಕತಿಲ ಭೂಭಾಗದೊಳ್ ಸೂರ್ಯಕಾಂತ ಮಣಿಮಯಶೂಲಪಾಣಿದೇವಾಯತನಮಿರ್ದುದನನತಿದೂರ ದೊಳೆ ನೋಡಿ

ಇದು ಸಿದ್ಧಾಯತನಂ ಮನಂಗೊಳಿಸಿ ತೋರುತ್ತಿರ್ಪುದಿಲ್ಲಿಂದೆ ಬಂ
ದುದು ವೀಣಾಧ್ವನಿ ತಪ್ಪದೀಯೆಡೆಯೊಳಿರ್ದಾರ್ ಬಾಜಿಸುತ್ತಿರ್ದಪರೆಂ
ಬುದನಾಂ ನೋಡುವೆನೀಗಳೆಂದು ಮನದೊಳ್ ನಿಶ್ಚೈಸುತಂ ಮೆಲ್ಲನೆ
ಯ್ದಿದನಾಸ್ಥಾನಮನಂದನಂತಮಹಿಮಂ ಭೂಪಾಲವಿದ್ಯಾಧರಂ ೩೪

ವ॥ ಅಂತದನೆಯ್ದಿ ನೋಟ್ಪನ್ನೆಗಮಲ್ಲಿ

ಹರಹಾಸಾವಯವಂಗಳಂತಿರಲನಂತಾನಂತ ಭೋಗಂಗಳಂ
ತಿರೆ ಪೂರ್ಣೇಂದ್ರುಕಲಾಳಿಯಂತಿರೆ ಸಿತಾಬ್ಜಾನೀಕಮೊಪ್ಪಲ್ ಶಿಖಾಂ
ತರದೊಳ್ ನಿರ್ಮಲ ದಿವ್ಯಮೌಕ್ತಿಕಶಿಲಾಲಿಂಗಂ ಚತುರ್ವಕ್ತ್ರಸಂ
ದರಮಲ್ಲಿರ್ದುದು ರತ್ನಪೀಠಘಟಿತಂ ದೇದೀಪ್ಯಮಾನಪ್ರಭಂ ೩೫

ವ॥ ಅಂತಿರ್ದ ಚರಾಚರಗುರುವಪ್ಪ ಶೂಲಪಾಣಿದೇವರಂ ಕಾಣ್ಬುದುಮಾ ಪರಮೇಶ್ವರನ ಸಕಳಜಗದಭೀಪ್ಸಫಲದಾಯಕಮಪ್ಪ ದಕ್ಷಿಣಾಮೂರ್ತಿಯನಾಶ್ರಯಿಸಿ

ಮಾಡುವ ತಿಲಕವೃಕ್ಷಗಳಿಂದಲೂ ಕಂಗೊಳಿಸುತ್ತಿರುವ ಕೈಲಾಸಪರ್ವತದಿಂದ ಹರಿದು ಬರುತ್ತಿರುವ ನದಿಯೊಂದರ ವಿಸ್ತಾರವಾದ ಹೊಂಬಣ್ಣದ ಮರಳುನೆಲದಲ್ಲಿ ಸೂರ್ಯ ಕಾಂತಶಿಲಾನಿರ್ಮಿತವಾದ ಪರಮೇಶ್ವರನ ದೇವಾಲಯವಿರುವುದನ್ನು ಸಮೀಪದಲ್ಲೆ ಕಂಡನು. ೩೪. "ಇಲ್ಲಿ ಒಂದು ದೇವಸ್ಥಾನವು ಮನೋಹರವಾಗಿ ಕಾಣುತ್ತಿದೆ. ನಿಜ ವಾಗಿಯೂ ವೀಣಾಧ್ವನಿಯು ಇಲ್ಲಿಂದಲೇ ಕೇಳಿಬರುತ್ತಿದೆ. ಇಲ್ಲಿದ್ದುಕೊಂಡು ಯಾರು ನುಡಿಸುತ್ತಿದ್ದಾರೆ ಎಂಬುದನ್ನು ನಾನು ಈಗ ನೋಡುತ್ತೇನೆ" ಎಂದು ಮನಸ್ಸಿನಲ್ಲಿ ತೀರ್ಮಾನಿಸಿ ಆ ಮಹಾಪ್ರಭಾವಶಾಲಿಯಾದ ರಾಜಕುಮಾರನು ಮೆಲ್ಲನೆ ಅಲ್ಲಿಗೆ ಹೋದನು. ವ॥ ಹಾಗೆ ಅಲ್ಲಿಗೆ ಹೋಗಿ ನೋಡುತ್ತಿರಲಾಗಿ, ಅಲ್ಲಿ ೩೫. ಪರ ಮೇಶ್ವರನ ಅಟ್ಟಹಾಸದ ಅವಯವಗಳಂತೆಯೂ, ಆದಿಶೇಷನ ಅನೇಕ ಹೆಡೆಗಳಂತೆಯೂ, ಪೂರ್ಣಚಂದ್ರನ ಕಳೆಗಳ ಪಂಕ್ತಿಯಂತೆಯೂ ಇರುವ ಬಿಳಿಯ ಕಮಲಗಳ ರಾಶಿಯು ತಲೆಯ ಮೇಲೆ ಶೋಭಿಸುತ್ತಿರಲು, ರತ್ನಪೀಠದಲ್ಲಿ ಪ್ರತಿಷ್ಠಿಸಲ್ಪಟ್ಟಿರುವ ಪ್ರಕಾಶಮಾನ ವಾದ ಕಾಂತಿಯುಳ್ಳ, ನಾಲ್ಕು ಮುಖಗಳಿಂದ ಶೋಭಿಸುವ ಮೌಕ್ತಿಕಶಿಲೆಯಿಂದ ನಿರ್ಮಿತ ವಾದ ಶುಭ್ರವಾದ ಶಿವಲಿಂಗವೊಂದು ಇರುವುದು ಕಂಡುಬಂದಿತು. ಟಿ॥ ಸಾಮಾನ್ಯ ವಾಗಿ ಪರಮೇಶ್ವರನು ಐದುಮುಖವುಳ್ಳವನೆಂದು ಪ್ರಸಿದ್ಧಿಯಿದ್ದರೂ ನಾಲ್ಕುಮುಖ ವುಳ್ಳವನೆಂದೂ ಪುರಾಣಗಳಲ್ಲಿ ಹೇಳಲ್ಪಟ್ಟಿದೆ. ವ॥ ಹಾಗೆ ಇದ್ದ ಚರಾಚರಾತ್ಮಕವಾದ

ಅಮೃತಾಂಭೋರಾಶಿಪೂರಪ್ರತಿಮ ನಿಜತಪಸ್ಸಂಚಯಂ ಪರ್ವಿತೋ ಲೋ
ಕಮನೆಂಬಂತಿರ್ದ ದೇಹಾಂಶುಗಳ ಬಳಗದಿಂ ಕಾನನಾನೀಕಮಂ ದಂ
ತಮಯಂ ಮಾಟ್ಪಂತೆ ತಾರಾಚಳಮನಸದಳಂ ನುಣ್ಣಪಂತೊರ್ವಳತ್ಯು
ತ್ತಮ ದಿವ್ಯಾಕಾರೆ ಕುಳ್ಳಿರ್ದತನುಪರನನಾರಾಧಿಸುತ್ತಿರ್ದಳಾಗಳ್ ೩೬

ವ॥ ಅಂತುಮಲ್ಲದೆಯುಂ

ತಳತಳಿಸಿ ಪೊಳೆವ ಪಳುಕಿನ
ನಿಲಯದೊಳಮೃತಾಬ್ಧಿಜಲದೊಳಭ್ರಕಪಟಲಂ
ಗಳ ಮಱೆಯೊಳಿರ್ದಳೆನೆ ಮೆ
ಯ್ವೆಳಗಿಂ ನೆಱೆಯಱಿಯಲಾದುದಿಲ್ಲಂಗನೆಯುಂ ೩೭

ಸೊಗಯಿಸವೆಂದು ಪೃಥಿವ್ಯಾ
ದಿಗಳೆನಿಸುವ ಪಂಚಭೂತಮೆಲ್ಲವನುೞಿದಾ
ವಗಮುಜ್ವಳಾಂಗಿಯಂ ಧವ
ಳಗುಣದೆ ನಿರ್ಮಿಸಿದನಾಗವೇಟ್ಕುಂ ಧಾತ್ರಂ ೩೮

ಜಗತ್ತಿಗೆ ಗುರುವೆನಿಸಿದ ತ್ರಿಶೂಲಧರನನ್ನು ಕಂಡನು. ಆ ಪರಮೇಶ್ವರನ ಸಮಸ್ತ ಜನರ ಇಷ್ಟಾರ್ಥಗಳನ್ನೂ ನೆರವೇರಿಸುವ ದಕ್ಷಿಣದಿಕ್ಕಿನ ಮುಖದ ಎದುರುಗಡೆ ಕುಳಿತುಕೊಂಡು, ೩೬. ಕ್ಷಿರಸಮುದ್ರದ ಪ್ರವಾಹಕ್ಕೆ ಸಮಾನವಾದ ತನ್ನ ತಪಸ್ಸಿನ ಸಮೃದ್ಧಿಯು ಜಗತ್ತಿನಲ್ಲಿ ಹರಡುತ್ತಿದೆಯೋ ಎಂಬಂತೆ ಇರುವ ತನ್ನ ಶರೀರದ ಕಾಂತಿಗಳ ಸಮೂಹದಿಂದ ಆ ಕಾಡುಗಳನ್ನೆಲ್ಲಾ ದಂತಮಯವನ್ನಾಗಿ ಮಾಡುವಂತೆಯೂ. ಕೈಲಾಸಪರ್ವತವನ್ನೇ ಅತಿಶಯವಾಗಿ ಬಿಳುಪು ಮಾಡುವಂತೆಯೂ ಇರುವ ಬಹಳ ಪ್ರಶಸ್ತವೂ ದಿವ್ಯವೂ ಆದ ಸ್ವರೂಪವುಳ್ಳ ಒಬ್ಬಳು ಕುಳಿತುಕೊಂಡು ನಿರಾಕಾರನಾದರೂ ಭಕ್ತರಿಗಾಗಿ ಆಕಾರವನ್ನು ತಾಳಿರುವ ಆ ಪರಮೇಶ್ವರನನ್ನು ಪೂಜಿಸುತ್ತಿದ್ದಳು. ವ॥ ಅದಲ್ಲದೆ ೩೭. ತಳತಳನೆ ಹೊಳೆಯುತ್ತಿರುವ ಶರೀರದ ಕಾಂತಿಯಿಂದ ಕೂಡಿದ ಅವಳು ಸ್ಫಟಿಕಶಿಲಾಗೃಹದಲ್ಲಿ ಇರುವವಳಂತೆಯೂ, ಕ್ಷೀರಸಮುದ್ರದ ನೀರಿನಲ್ಲಿ ಮುಳುಗಿರುವವಳಂತೆಯೂ, ಬಿಳಿಯ ಮೋಡಗಳ ಆವರಣದ ಮರೆಯಲ್ಲಿ ಇರುವವಳಂತೆಯೂ ಕಾಣುತ್ತಿದ್ದಳು. ಇದರಿಂದ ಅವಳನ್ನು ಚೆನ್ನಾಗಿ ಗುರುತಿಸಲು ಆಗುತ್ತಿರಲಿಲ್ಲ. ೩೮. ಬ್ರಹ್ಮನು ಇತರರನ್ನು ಸೃಷ್ಟಿಮಾಡುವಂತೆ ಪೃಥಿವಿ ಮೊದಲಾದ ಪಂಚಭೂತಗಳಿಂದ ಸೃಷ್ಟಿಮಾಡಿದರೆ ಚಂದಗಾಣುವುದಿಲ್ಲವೆಂದು ತಿಳಿದು ಪ್ರಕಾಶಮಾನವಾದ ಶರೀರ ಕಾಂತಿಯುಳ್ಳ ಇವಳನ್ನು ಬರಿಯ ಧವಳಗುಣದಿಂದಲೇ ಸೃಷ್ಟಿಸಿರಬೇಕು,

ವ॥ ಅಂತುಮಲ್ಲದೆಯುಂ

ಪತಿಯನೆ ಬೇಡಿ ರುದ್ರನ ಸಮೀಪದೊಳುಗ್ರತಪಕ್ಕೆ ನಿಂದಳೋ
ರತಿ ಶಶಿಲೇಖೆಯಂ ನೆನೆದು ಬಂದಳೋ ಮೇಣಮೃತಾರ್ಣವಾಧಿದೇ
ವತೆ ಶಿತಿಕಂಠಕಂಠತಮಮಂ ಕಳೆವಾಗ್ರಹದಿಂದೆ ಬಂದಳೋ
ಕ್ಷಿತಿಗಮೃತಾಂಶುಮೂರ್ತಿಯೆನಲೇನೆಸೆದಿರ್ದುದೊ ರೂಪು ಕಾಂತೆಯಾ ೩೯

ಹರಹಾಸದ್ಯುತಿ ಮೂರ್ತಿಗೊಂಡುದೊ ವಿರಿಂಚಿಖ್ಯಾತಿ ಲೋಕಂಗಳೊಳ್
ಪರಿದಾಯಾಸದೆ ನಿಂದುದೋ ಕಲಿಯುಗಂ ನಿರ್ಮೂಲಿಸಲ್ ಧರ್ಮಮಂ
ಪಿರಿದುಂ ಶೋಕದೊಳಾ ತ್ರಯೀವಧು ವನಂಬೊಕ್ಕಿರ್ದಳೋ ಪೇಟಿಮ
ಚ್ಚರಿಯೆಂಬಂತಿರೆ ದಿವ್ಯಸುಂದರಿ ಮನಕ್ಕಾನಂದಮಂ ಮಾಡಿದಳ್ ೪೦

ಬರಲಿರ್ದ ಕೃತಯುಗದ ಬೀ
ಜರುಚಿರಕಳೆ ಪೆಣ್ಣರೂಪದಿಂದಿರ್ದುದೊ ಭಾ
ಸುರಶೇಷದೇಹರುಚಿ ತಾಂ
ಧರೆಗವತರಿಸಿರ್ದುದೆನೆ ಕರಂ ಸೊಗಯಿಸಿದಳ್ ೪೧

ವ॥ ಅದಲ್ಲದೆ, ೩೯. ರತಿದೇವಿಯು ಗಂಡನನ್ನು ಬದುಕಿಸಬೇಕೆಂದು ಪರಮೇಶ್ವರನ ಸಮೀಪದಲ್ಲಿ ಕಠಿಣವಾದ ತಪಸ್ಸನ್ನು ಮಾಡುತ್ತಿರುವಳೊ ಎಂಬಂತೆಯೂ, ಕ್ಷೀರ ಸಮುದ್ರದ ಅಧಿದೇವತೆಯು ಶಿವನ ತಲೆಯಲ್ಲಿ ನೆಲೆಸಿರುವ ಚಂದ್ರನ ಕಲೆಯನ್ನು ನೆನಸಿ ಕೊಂಡು ನೋಡಬಯಸಿ ಬಂದಿರುವಳೊ ಎಂಬಂತೆಯೂ, ನೀಲಕಂಠನ ಕೊರಳಲ್ಲಿರುವ ಕತ್ತಲೆ (ಕಪ್ಪು) ಯನ್ನು ಪರಿಹರಿಸಬೇಕೆಂಬ ತವಕದಿಂದ ಚಂದ್ರಮೂರ್ತಿಯು ಭೂಮಿಗೆ ಬಂದಿರುವುದೊ ಎಂಬಂತೆಯೂ ಆ ತರುಣಿಯ ರೂಪವು ಶೋಭಿಸುತ್ತಿತ್ತು. ೪೦. ಪರಮೇಶ್ವರನ ಅಟ್ಟಹಾಸದ ಕಾಂತಿಯು ಸ್ತ್ರೀರೂಪವನ್ನು ತಾಳಿ ಬಂದಿರುವಂತೆಯೂ, ಬ್ರಹ್ಮನ ಕೀರ್ತಿಯು ಲೋಕಗಳಲ್ಲೆಲ್ಲಾ ಸಂಚರಿಸಿ ಆಯಾಸದಿಂದ ಇಲ್ಲಿಗೆ ಬಂದು ವಿಶ್ರ ಮಿಸಿಕೊಳ್ಳುತ್ತಿರುವಂತೆಯೂ, ಕಲಿಯುಗವು ಧರ್ಮವನ್ನು ನಾಶಪಡಿಸಲಾಗಿ ಬಹಳ ದುಃಖದಿಂದ ವೇದಾಧಿದೇವತೆಯು ವನವಾಸಕ್ಕೆ ಬಂದಿರುವಂತೆಯೂ ಇರುವ ಆಶ್ಚರ್ಯ ವನ್ನುಂಟುಮಾಡುವ ಆ ದಿವ್ಯಸುಂದರಿಯು ರಾಜಕುಮಾರನ ಮನಸ್ಸಿಗೆ ಆನಂದ ವನ್ನುಂಟುಮಾಡಿದಳು ೪೧. ಮುಂದೆ ಬರಲಿರುವ ಕೃತಯುಗದ ಸುಂದರವಾದ ಮೂಲಾಂಶವು ಸ್ತ್ರೀರೂಪವನ್ನುತಾಳಿ ಬಂದಿರುವಂತೆಯೂ, ಪ್ರಕಾಶಮಾನವಾದ ಆದಿ ಶೇಷನ ಶರೀರಕಾಂತಿಯು ಸ್ತ್ರೀರೂಪದಿಂದ ಭೂಮಿಗೆ ಬಂದಿರುವಂತೆಯೂ ಇರುವ ಅವಳು ಬಹಳ ಮನೋಹರಳಾಗಿದ್ದಳು. ಟಿ. ಕೃತಯುಗವು ಪುಣ್ಯಮಯವಾದುದು. ಕಲಿಸಮಯದಲ್ಲಿ ಪುಣ್ಯವು ಬಿಳುಪು. ಅದಕ್ಕೆ ಉಪಾದಾನಕಾರಣವಾದ ಅಂಶವೂ

ದಶವದನೋನ್ಮೂಲನಭಯ
ವಶದಿಂ ಕೈಲಾಸಲಕ್ಷ್ಮಿ ಬಂದಳೊ ಬಳಭ
ದ್ರಶರೀರಕಾಂತಿ ಮಧುಮದ
ವಿಶೇಷ ಘೂರ್ಣನದಿನಳ್ಕಿ ಬಂದಿರ್ದಪಳೋ ೪೨

ದ್ವೀಪಾಂತರಮಂ ಶ್ವೇತ
ದ್ವೀಪಸ್ತ್ರೀ ನೋಡಲೆಂದು ಬಂದಳೊ ಭುವನ
ವ್ಯಾಪಿ ಸಿತಪಕ್ಷಸಂತತಿ
ರೂಪಂ ಕೈಕೊಂಡು ನಿಂದುದೆನೆ ಸೊಗಯಿಸುಗುಂ ೪೩

ಕಡೆದರೊ ಶಂಖದಿಂ ತೆಗೆದರೋ ನವಮೌಕ್ತಿಕದಿಂ ಮೃಣಾಳದಿಂ
ಪಡೆದರೊ ದಂತದಿಂದೆಸೆಯೆ ಮಾಡಿದರೋ ರುಚಿರೋಜ್ವಲಾಂಗಮಂ
ಬಿಡದಮೃತಾಂಶುರಶ್ಮಿಗಳ ಕುಂಚಿಗೆಯಿಂದಮೆ ಕರ್ಚಿ ಪಾರದಂ
ದೊಡೆದರೊ ಪೇಟಿನಲ್ ಕರಮೆ ಕಣ್ಗೆಸೆದಿರ್ದುದು ರೂಪು ಕಾಂತೆಯಾ ೪೪

ಪೊಳೆವ ರಜತಾಭ್ರಕದ್ಯುತಿ
ಗಳಿನಮೃತರಸಪ್ರವಾಹದಿಂದಭಿಷವಮು
ಗ್ಗಳಿಸೆ ತಳತಳಿಸಿ ತೊಳಗುವ
ಪಳುಕಿನ ಪುತ್ಥಳಿಕೆಯಂತೆ ಕರಮೆಸೆದಿರ್ದಳ್ ೪೫

ಬಿಳುಪಾಗಿದೆ ಎಂಬ ಅಭಿಪ್ರಾಯದಿಂದ ವರ್ಣಿಸಿದ್ದಾನೆ. ೪೨. ರಾವಣನು ಕಿತ್ತುಹಾಕಿ ಬಿಟ್ಟಾನೆಂಬ ಭಯದಿಂದ ಕೈಲಾಸಾಧಿದೇವತೆಯು ಇಲ್ಲಿಗೆ ಬಂದು ನೆಲೆಸಿರುವಂತೆಯೂ ಬಲರಾಮನ ಶರೀರಕಾಂತಿಯು ಅವನು ಮಾಡುವ ಮದ್ಯಪಾನದ ಮದದಿಂದ ಉಂಟಾಗುವ ದೊಡ್ಡ ಒಲೆತಕ್ಕೆ ಹೆದರಿ ಸ್ತ್ರೀರೂಪದಿಂದ ಇಲ್ಲಿಗೆ ಬಂದಿರುವಂತೆಯೂ ಅವಳು ಕಾಣುತ್ತಿದ್ದಳು. ಟಿ॥ ಬಲರಾಮನ ಶರೀರಕಾಂತಿಯು ಬಿಳುಪು. ೪೩. ದ್ವೀಪಾಂತರಗಳನ್ನು ನೋಡಬೇಕೆಂಬ ಕುತೂಹಲದಿಂದ ಶ್ವೇತದ್ವೀಪದೇವತೆಯು ಬಂದಿರುವಂತೆಯೂ, ಜಗತ್ತಿನಲ್ಲಿ ವ್ಯಾಪಿಸಿರುವ ಶುಕ್ಲಪಕ್ಷ ಪರಂಪರೆಯು ಮಹಿಳಾಕಾರವನ್ನು ತಾಳಿ ನಿಂತಿರುವಂತೆಯೂ ಅವಳು ಮನೋಹರಳಾಗಿದ್ದಳು. ೪೪. ಬೆಳ್ಳಗೆ ತಳತಳಿಸುವ ಅವಳ ಶರೀರವು ಶಂಖದಿಂದ ಕಡೆದು ಮಾಡಿರುವಂತೆಯೂ, ಹೊಸಮುತ್ತುಗಳಿಂದ ನಿರ್ಮಾಣಗೊಂಡಂತೆಯೂ, ತಾವರೆಯ ದಂಟುಗಳಿಂದ ನಿರ್ಮಿಸಲ್ಪಟ್ಟಂತೆಯೂ, ದಂತಗಳಿಂದ ಒಪ್ಪವಾಗಿ ಮಾಡಿರುವಂತೆಯೂ ಶೋಭಿಸುತ್ತಿತ್ತು. ಅಲ್ಲದೆ ಅವಳ ರೂಪು ಚಂದ್ರಕಿರಣಗಳೆಂಬ ಕುಂಚದಿಂದ ತೊಳೆದು ಪಾದರಸದಿಂದ ಲೇಪನಮಾಡಿರುವಂತೆಯೂ ಶೋಭಿಸುತ್ತಿತ್ತು. ೪೫. ಪ್ರಕಾಶಿಸುವ ಬೆಳ್ಳಿ ಮತ್ತು ಕಾಗೆಬಂಗಾರಗಳ ರಸಗಳಿಂದಲೂ ಅಮೃತರಸದ ಪ್ರವಾಹದಿಂದಲೂ ಸ್ನಾನ ಮಾಡಿಸಿದರೆ ತಳತಳಿಸಿ ಹೊಳೆಯುವ ಸ್ಫಟಿ

ಪೊಳೆವೆಳನೇಸಱಂ ತೆಗೆದ ರಶ್ಮಿಗಳಂತೆ ಮಡಲ್ತು ಕಾಂತಿಯಿಂ
ತಳೆದೆಳಮಿಂಚಿನೊಳ್ದಳಿರ್ಗಳಂತೆ ಕವಲ್ತು ಮೃಗಾಂಕಮೌಳಿ ನಿ
ರ್ಮಳಪದಭಸ್ಮರೇಣುಗಳೆನಲ್ ನವಮಜ್ಜನ ವಾಃಕಣಂಗಳಂ
ತಳೆದು ಪೆಗಲ್ವರಂ ಬಳೆದು ರಂಜಿಸುಗುಂ ಜಡೆಗಳ್ ಮೃಗಾಕ್ಷಿಯಾ ೪೬

ಶಿವನಾಮಾಂಕಿತಮಂ ರ
ತ್ನವಿರಚಿತಮನುತ್ತಮಾಂಗದೊಳ್ ಪಾದೂಯು
ಗ್ಮವನೆಸೆಯೆ ತಳೆದು ಭಕ್ತಿಯೆ
ಭವಸನ್ನಿಧಿಯಲ್ಲಿ ರೂಪುಗೊಂಡಂತಿರ್ದಳ್ ೪೭

ತೊಳಗುವ ತಾರಾಚೂರ್ಣೋ
ಜ್ವಳ ಭಸಿತಲಲಾಮದಿಂದೆ ಪೆಱೆವೆರಸು ತಳ
ತ್ತಳಿಸುವ ಹೈಮಾಚಳಮೋ
ಬಳೆಯಂತಿರೆ ಕಾಂತೆ ಕಣ್ಗೆ ಕರಮೆಸೆದಿರ್ದಳ್ ೪೮

ಪಿರಿದೆನಿಪ ಭಕ್ತಿಭರದಿಂ
ದರಲ್ದ ಸಿರಿ ನೆಲಸಿತೋರ್ಪ ಕಣ್ಮಲರ್ಗಳ್ ನ
ಟ್ಟಿರೆ ಮಗುಟಿ ದೇವನಂ ಪು
ಡರೀಕಮಾಲೆಗಳಿನರ್ಚಿಪಂತೆಸೆದಿರ್ದಳ್ ೪೯

ಕದ ಬೊಂಬೆಯಂತೆ ಅವಳು ಚೆನ್ನಾಗಿ ಶೋಭಿಸುತ್ತಿದ್ದಳು. ೪೬. ಆ ತರುಣಿಯ ಜಡೆಗಳು ಹೊಳೆಯುವ ಬಾಲಸೂರ್ಯನ ಕಿರಣಗಳನ್ನು ಸಂಗ್ರಹಿಸಿ ಮಾಡಿರುವಂತೆ ಹರಡಿದ್ದುವು ; ಹೊಸಹೊಸದಾಗಿ ಮೂಡುತ್ತಿರುವ ಮಿಂಚಿನ ದಳಗಳಂತೆ ಕೆಂಬಣ್ಣವನ್ನು ತಾಳಿ ಬೆಳೆದಿದ್ದುವು. ಹೀಗೆ ಹೆಗಲಿನವರೆಗೂ ಬೆಳೆದಿದ್ದ ಅವಳ ಜಡೆಗಳು ಮನೋಹರವಾಗಿದ್ದುವು. ಅವಳು ಆಗತಾನೆ ಸ್ನಾನ ಮಾಡಿದ್ದರಿಂದ ನೀರಿನ ಹನಿಗಳು ಅಲ್ಲಿ ಸೇರಿಕೊಂಡಿದ್ದುವು. ಅವು ನಮಸ್ಕಾರ ಮಾಡುವಾಗ ಅಂಟಿಕೊಂಡಿರುವ ಪರಮೇಶ್ವರನ ಪವಿತ್ರವಾದ ಪಾದಗಳ ವಿಭೂತಿಕಣಗಳಂತೆ ಶೋಭಿಸುತ್ತಿದ್ದುವು. ೪೭. ಅವಳು ಎರಡು ಶಿವಪಾದಪ್ರತಿಮೆಗಳನ್ನು ತಲೆಯಲ್ಲಿ ಧರಿಸಿದ್ದಳು. ಸಾಕ್ಷಾತ್ ಶಿವಭಕ್ತಿಯೇ ಸ್ತ್ರೀರೂಪವನ್ನು ಧರಿಸಿ ಬಂದಿರುವಂತೆ ಅವಳು ಪರಮೇಶ್ವರನ ಸನ್ನಿಧಾನದಲ್ಲಿ ಶೋಭಿಸುತ್ತಿದ್ದಳು. ೪೮. ಸೂರ್ಯನ ರಥದ ಕುದುರೆಗಳ ಗೊರಸುಗಳ ತುದಿಯಿಂದ ಹೊಡೆಯಲ್ಪಟ್ಟ ನಕ್ಷತ್ರಗಳ ಪುಡಿಯಂತಿರುವ, ವಿಭೂತಿಯಿಂದ ಕೂಡಿಕೊಂಡಿರುವ ಹಣೆಯುಳ್ಳ ಆ ಸುಂದರಿಯು ಚಂದ್ರನ ಕಳೆಯಿಂದ ತಳತಳಿಸುವ ಹಿಮಾಚಲದ ಮಧ್ಯಭಾಗದಂತೆ ಚಂದಗಾಣುತ್ತಿದ್ದಳು. ೪೯. ಮಿಗಿಲಾದ ಭಕ್ತಿಯ ಅತಿಶಯದಿಂದ ಅರಳಿರುವ ಮತ್ತು ಕಾಂತಿಗೆ ನೆಲೆಯಾಗಿರುವ ಅವಳ ಕಣ್ಣಿನ ನೋಟಗಳು ಆ ಶಿವಲಿಂಗದಲ್ಲೇ ನೆಟ್ಟಿರಲಾಗಿ, ಮತ್ತೆ ದೇವರನ್ನು ಬಿಳಿಯ ಕಮಲಗಳ ಮಾಲಿಕೆಯಿಂದ ಪೂಜಿಸುತ್ತಿರುವಂತೆ ಅವಳು ಶೋಭಿಸುತ್ತಿದ್ದಳು. ೬॥ ಕವಿಸಮಯದಲ್ಲಿ ದೃಷ್ಟಿಯು ಬಿಳುಪು. ಆದ್ದರಿಂದ ಬಿಳಿಯ

ರಸವೊಸರ್ವಂತು ಪಾಡುತಿರೆ ಶುದ್ಧಮನೋಮಣಿದೀಪ್ತಿ ಪೊಣ್ಮಿ ರಾ
ಜಿಸಿದಪುದೋ ಸ್ತುತಿಪ್ರಕರನಿರ್ಮಳವರ್ಣಸಮೂಹವೊತ್ತುಗೊಂ
ಡೆಸೆವುದೊ ಪೇೞನಲ್ ಪೊಳೆವ ದಂತಮರೀಚಿಗಳಿಂದಮೀಶ್ವರಂ
ಗೊಸೆದಭಿಷೇಕಮಂ ಮಗುೞ ಮಾಡುವವೊಲ್ ಬಗೆಗೊಪ್ಪಿತೋಱಿದಳ್ ೫೦

ವನರುಹನಾಭನಾಭಿಸಿತಪಂಕಜಬೀಜಮೊ ಪದ್ಮಗರ್ಭನಾ
ನನದೆ ಪೊದಟ್ದ ವೇದವಿಮಲಾಕ್ಷರಮಾಲೆಯೊ ಕೆಯ್ಯ ಸೋಂಕು ಪಾ
ವನತರಮೆಂದು ಸಪ್ತಮುನಿಮಂಡಲಮಿರ್ಪುದೊ ಬಂದು ಪೇೞನೆಲ್
ವನಿತೆಯ ಮೌಕ್ತಿಕಾಕ್ಷವಲಯಂ ಕೊರಲೊಳ್ ಕರಮೊಪ್ಪಿ ತೋಱುಗುಂ ೫೧

ತೊಳಗುವ ಮೋಕ್ಷದ್ವಾರದ
ಕಳಸಂಗಳಿವೆನಿಸಿ ತೋರ್ಪ ಕುಚಯುಗದಿಂ ಕೋ
ಮಳೆ ಹಂಸಮಿಥುನದಿಂದಂ
ವಿಳಸಿತಮಾದಮರನದಿಯನನುಕರಿಸಿರ್ದಳ್ ೫೨

ಕಮಲವೆಂದು ವರ್ಣಿಸಿದ್ದಾನೆ. ಸಿರಿ ಅಂದರೆ ಕಾಂತಿ ಹಾಗೂ ಲಕ್ಷ್ಮಿಯೆಂಬ ಅರ್ಥವೂ ಇದೆ. ಕಣ್ಣುಗಳು ಕಾಂತಿಗೆ ನೆಲೆಯಾಗಿವೆ. ಪುಂಡರೀಕವು ಲಕ್ಷ್ಮಿಗೆ ನೆಲೆಯಾಗಿದೆ. ಹೀಗೆ ಕಣ್ಣೂ ಬಿಳುಪಾಗಿದೆ. ಪುಂಡರೀಕವೂ ಬಿಳುಪಾಗಿದೆ. ಎರಡೂ ಸಿರಿಗೆ ನೆಲೆಯಾಗಿವೆ. ಆದ್ದರಿಂದ ಹೋಲಿಕೆಯು ಒಪ್ಪುತ್ತದೆ. ೫೦. ಅವಳು ರಸವು ಹರಿಯುವಂತೆ ಹಾಡುತ್ತಿದ್ದಳು. ಆಗ ಅವಳ ಶುದ್ಧವಾದ ಮನಸ್ಸೆಂಬ ರತ್ನದ ಬೆಳಕು ಹೊರಹೊಮ್ಮಿ ಪ್ರಕಾಶಿಸುತ್ತಿರುವಂತೆಯೂ, ಶಿವಸ್ತೋತ್ರಗಳ ನಿರ್ಮಲವಾದ ಅಕ್ಷರಗಳು ಒಟ್ಟುಸೇರಿ ಶೋಭಿಸುತ್ತಿರುವಂತೆಯೂ ಪ್ರಕಾಶಿಸುವ ಹಲ್ಲುಗಳ ಕಾಂತಿಯಿಂದ ಪರಮೇಶ್ವರನ ಲಿಂಗಕ್ಕೆ ಮತ್ತೊಮ್ಮೆ ಭಕ್ತಿಯಿಂದ ಅಭಿಷೇಕವನ್ನು ಮಾಡುತ್ತಿರುವಂತೆ ಅವಳು ಮನೋಹರವಾಗಿ ಕಾಣುತ್ತಿದ್ದಳು. ೫೧. ಶ್ರೀಮನ್ನಾರಾಯಣನ ಹೊಕ್ಕುಳಲ್ಲಿ ಬೆಳೆದಿರುವ ಬಿಳಿದಾವರೆಯ ಬೀಜದಂತೆಯೂ, ಬ್ರಹ್ಮನ ಮುಖಗಳಿಂದ ಹೊರಗೆ ಬರುತ್ತಿರುವ ಸ್ವಚ್ಛವಾದ ವೇದಾಕ್ಷರಮಾಲಿಕೆಯೆಂಬಂತೆಯೂ, ಇವಳು ಕೈಯಿಂದ ಮುಟ್ಟಿದರೆ ಪವಿತ್ರತೆಯುಂಟಾಗುವುದೆಂದು ಭಾವಿಸಿ ಸಪ್ತರ್ಷಿಮಂಡಲಾಂತರ್ಗತ ನಕ್ಷತ್ರಗಳು ಈ ರೂಪವನ್ನು ತಾಳಿ ಬಂದಿರುವಂತೆಯೂ ಇರುವ ಮುತ್ತಿನ ಜಪಸರವು ಅವಳ ಕೊರಳಲ್ಲಿ ಬಹಳ ಚೆನ್ನಾಗಿ ತೋರುತ್ತಿತ್ತು. ೫೨. ಮೋಕ್ಷವೆಂಬ ಪಟ್ಟಣದ ಹೆಬ್ಬಾಗಿಲಿನಲ್ಲಿ ಪ್ರಕಾಶಿಸುವ ಕಳಶಗಳಂತಿರುವ ಕುಚದ್ವಯದಿಂದ ಶೋಭಿಸುವ ಆ ಕೋಮಲೆಯು

ಎಳವೆಱೆಯೊಳ್ಗದಿರ್ಗಳ್ ಬಂ
ದೆಳಸಿದವೀಶ್ವರನ ಸನ್ನಿಧಾನದೊಳೆಸೆವೀ
ಲಲಿತಾಂಗಿಯುನೆಂಬಿನೆಗಂ
ಪೊಳೆಯುತ್ತಂ ಬ್ರಹ್ಮಸೂತ್ರಮೇನೊಪ್ಪಿದುದೋ ೫೩

ಸತಿ ಪದ್ಮಾಸನದೊಳಿರ
ಲ್ಕತಿರುಚಿರೋತ್ತಾನ ಚರಣತಳರುಚಿಯಿಂ ಲೋ
ಹಿತವಾದ ದುಗುಲದಿಂದಂ
ನಿತಂಬವಿಸ್ತಾರಮೇಂ ಮನಂಗೊಳಿಸಿದುದೋ ೫೪

ವ॥ ಮತ್ತಂ ಹಾರಲತೆಯಂತೆ ಕಂಠಯೋಗ್ಯಮುಂ ಗ್ರಹಪಂಕ್ತಿಯಂತೆ ಧ್ರುವಪ್ರತಿಬದ್ಧಮುಂ ಮತ್ತಳಂತೆ ಘೂರ್ಣಿತಮಂದ್ರತಾರಮುಂ ಮೀಮಾಂಸೆಯಂತೆ ಭಾವನಾಬದ್ಧಮುಮಪ್ಪ ಗೀತೆಯಿಂ ವೀಣೆಯುಂ ಬಾಜಿಸುತ್ತಿರ್ದಳಂತುಮಲ್ಲದೆಯುಂ

ಹಂಸಯುಗಳದಿಂದ ಶೋಭಿಸುವ ಗಂಗಾನದಿಗೆ ಸರಿಸಮಾನಳಂತಿದ್ದಳು. ೫೩. ಅವಳ ಕೊರಳಿನಲ್ಲಿ ಯಜ್ಞೋಪವೀತವು ಪ್ರಕಾಶಮಾನವಾಗಿ ಶೋಭಿಸುತ್ತಿತ್ತು. ಅದು ಬಾಲ ಚಂದ್ರನ ಒಳ್ಳೆಯ ಕಿರಣಗಳು ಬಂದು ಪರಮೇಶ್ವರನ ಸನ್ನಿಧಾನದಲ್ಲಿ ಶೋಭಿಸುವ ಈ ಕೋಮಲಾಂಗಿಯನ್ನು ಆಶ್ರಯಿಸಿಕೊಂಡಿವೆ ಎಂಬಂತೆ ಕಾಣುತ್ತಿತ್ತು. ೫೪. ಆ ಮಹಿಳೆಯು ಪದ್ಮಾಸನದಲ್ಲಿ ಮಂಡಿಸಿದ್ದಳು. ಮೇಲುಮುಖವಾಗಿದ್ದ ಬಹಳ ರಮಣೀಯವಾದ ಅಂಗಾಲಿನ ಕಾಂತಿಯಿಂದ ಅವಳು ಉಟ್ಟಿದ್ದ ಬಿಳಿಯ ರೇಷ್ಮೆಸೀರೆಯು ಕೆಂಬಣ್ಣವನ್ನು ತಾಳಿದ್ದಿತು. ಇದರಿಂದ ಅವಳ ಪಿರ್ರೆಗಳು ಬಹಳ ಮನೋಹರವಾಗಿ ಕಾಣುತ್ತಿದ್ದುವು. ವ॥ ಮತ್ತು ಅವಳು ಮುತ್ತಿನಸರದಂತೆ "ಕಂಠಯೋಗ್ಯವಾದ" (೧. ದನಿಗೆ ಯೋಗ್ಯವಾದ, ೨. ಕೊರಳಿಗೆ ಯೋಗ್ಯವಾದ) ನಕ್ಷತ್ರಪಂಕ್ತಿಯಂತೆ "ಧ್ರುವಪ್ರತಿಬದ್ಧವಾದ" (೧. ಧ್ರುವವೆಂಬ ತಾಳವಿಶೇಷದಿಂದ ಕೂಡಿಕೊಂಡಿರುವ ೨. ಧ್ರುವನಕ್ಷತ್ರದಿಂದ ಕೂಡಿಕೊಂಡಿರುವ)ಮದವೇರಿದವಳಂತೆ "ಘೂರ್ಣಿತ ಮಂದ್ರತಾರ"ವಾದ(೧. ಸುತ್ತಲೂ ಹರಡಿರುವ ಮೃದುವಾದ ಮತ್ತು ದೀರ್ಘವಾದ ಸ್ವರವುಳ್ಳ, ೨. ಮದೋದ್ರೇಕದಿಂದ ತಿರುಗುತ್ತಿರುವ ಮಂದವಾದ ಕಣ್ಣುಗುಡ್ಡೆಯುಳ್ಳ) ಪೂರ್ವಮೀಮಾಂಸಶಾಸ್ತ್ರದಂತೆ "ಭಾವನಾಬದ್ಧ"ವಾದ (೧. ಮೂರ್ಛನೆಗಳಿಂದ ಕೂಡಿಕೊಂಡಿರುವ, ೨. ಶಾಬ್ದೀ, ಆರ್ಥೀ ಎಂಬ ಎರಡು ಬಗೆಯ ಭಾವನೆಗಳಿಂದ (ವ್ಯಾಪಾರಗಳಿಂದ) ಕೂಡಿಕೊಂಡಿರುವ) ಗೀತೆ

ಪಳುಕಿನ ಭಿತ್ತಿಗಳೊಳ್ ಮಾ
ರ್ತೋಳಗುವ ನಿಜತನುಗಳಿಂದೆ ತನ್ನಂದದ ಕೋ
ಮಳೆಯರ್ವೆರಸೀಶನ ಪದ
ನಳಿನಮನಾರಾಧಿಪಂತೆ ಸತಿ ಸೊಗಯಿಸಿದಳ್ ೫೫

ಒದವಿದ ಭಕ್ತಿಯಿನೀಶನ
ಹೃದಯದೊಳಿರ್ದಪಳೆನಲ್ಕೆ ನವಮೌಕ್ತಿಕಲಿಂ
ಗದ ನಡುವೆ ರೂಪು ಮಾರ್ತೊಳ
ಗಿದುದೆತ್ತಂ ವಿಮಲ ಕಮಲದಳಲೋಚನೆಯಾ ೫೬

ದಿವಿಜತೆಯಿಂ ದಿವಸಂಗಳ
ಪವಣಱಿಯಲ್ ಬಾರದಾದೊಡಂ ಸೊಗಯಿಸಿ ತೋ
ರ್ಪವಯವದಿಂದಂ ಪದಿನೆ
ಣ್ಬರಿಸದಾಕೃತಿಯಿನಬ್ಜಮುಖಿ ಕಣ್ಗೆಸೆದಳ್ ೫೭

ವ॥ ಅಂತು ವಿರೂಪಾಕ್ಷದೇವರನಾರಾಧಿಸುತ್ತುಮಿರ್ದ

ಅತಿಗಂಭೀರೆಯನೂರ್ಜಿತ
ಮತಿಯಂ ನಿರ್ಮಳೆಯನಮಳಧೈರ್ಯಾದಿಗುಣಾ
ನ್ವಿತೆಯಂ ದೃಢಪಾಶುಪತ
ವ್ರತೆಯಂ ಕನ್ಯಕೆಯನೆಂದು ಕಂಡಂ ಕ್ಷಿತಿಪಂ ೫೮

ಯಿಂದ ವೀಣೆಯನ್ನು ಬಾರಿಸುತ್ತಿದ್ದಳು. ಅದಲ್ಲದೆ ೫೫. ಸ್ಫಟಿಕಶಿಲಾಮಯವಾದ ಗೋಡೆಗಳಲ್ಲಿ ಅವಳ ಶರೀರವು ಪ್ರತಿಫಲಿಸಿ ಅನೇಕವಾಗಿ ಕಾಣುತ್ತಿತ್ತು. ಇದರಿಂದ ಅವಳು ತನ್ನಂತೆಯೆ ಇರುವ ಅನೇಕ ಮಹಿಳೆಯರೊಂದಿಗೆ ಸೇರಿ ಪರಮೇಶ್ವರನ ಪಾದ ಕಮಲಗಳನ್ನು ಪೂಜಿಸುತ್ತಿರುವಂತೆ ಶೋಭಿಸುತ್ತಿದ್ದಳು. ೫೬. ನಿರ್ಮಲವಾದ ಕಮಲದ ಎಸಳುಗಳಂತೆ ಕಣ್ಣುಳ್ಳ ಆ ಸುಂದರಿಯ ಆಕಾರವು ಹೊಸಮುತ್ತಿನ ಆ ಶಿವ ಲಿಂಗದ ಮಧ್ಯದಲ್ಲಿ ಪ್ರತಿಬಿಂಬಿಸಿದ್ದಿತು. ಇದರಿಂದ ಅವಳು ಅತಿಶಯವಾದ ಭಕ್ತಿ ಯಿಂದ ಪರಮೇಶ್ವರನ ಹೃದಯವನ್ನೆ ಪ್ರವೇಶಿಸಿರುಳೋ ಎಂಬಂತೆ ಕಾಣುತ್ತಿದ್ದಳು. ೫೭. ದೇವಜಾತಿಯಲ್ಲಿ ಹುಟ್ಟಿದವಳಾದುದರಿಂದ ಅವಳ ವಯಸ್ಸು ಇಷ್ಟೆ ಎಂದು ಹೇಳಲು ಆಗುವಂತಿರಲಿಲ್ಲ. ಆದರೂ ಮನೋಹರವಾಗಿ ತೋರುವ ಅಂಗಗಳಿಂದ ಹದಿ ನೆಂಟು ವರ್ಷದವಳಿರಬಹುದೆಂದು ಹೇಳಬಹುದಾದ ಆಕಾರದಿಂದ ಆ ತಾವರೆ ಮೊಗದ ಸುಂದರಿಯು ಕಂಗೊಳಿಸುತ್ತಿದ್ದಳು. ವ॥ ಹೀಗೆ ವಿರೂಪಾಕ್ಷಲಿಂಗವನ್ನು ಪೂಜಿಸು ತ್ತಿದ್ದ ೫೮. ಬಹಳ ಗಂಭೀರಸ್ವಭಾವದ, ಸ್ಥಿರಬುದ್ಧಿಯುಳ್ಳ, ಪವಿತ್ರಳಾದ ಕುಂದಿ ಲ್ಲದ ಧೈರ್ಯಾದಿಗುಣಗಳಿಂದ ಕೂಡಿಕೊಂಡಿರುವ, ದೃಢವಾದ ಪಾಶುಪತವ್ರತವನ್ನು

ವ॥ ಅಂತು ಕಂಡವನಿತಳಕ್ಕವತರಿಸಿ ತುರಂಗಮನೊಂದು ತರುಶಾಖೆಯೊಳ್ ಕಟ್ಟಿ ಭಗವದಿಂದುಮೌಳಿಯ ಪುರೋಭಾಗದೊಳ್ ನಿಂದು ಪೊಡಮಟ್ಟು ದಿವ್ಯಕಾಂತೆಯ ರೂಪ ಸಂಪತ್ತಿಗಂ ಕಾಂತಿಗಮುಪಶಾಂತಿಗಂ ವಿಸ್ಮಯಂಬಟ್ಟು ನೋಡುತ್ತಮಿರ್ದು

ಕಿನ್ನರಯುಗ್ಮಮೆತ್ತ ಮನಮೆತ್ತ ಸರೋರುಹಷಂಡಮೆತ್ತ ಗೀ
ತಂ ನಯದಿಂದ ಬಂದೆಸೆವುದೆತ್ತ ಭವಾಲಯಮೆತ್ತ ಭೋಂಕನೀ
ಕನ್ನೆಯ ಕಾಣ್ಕೆಯೆತ್ತ ಮನುಜಂಗೆನಗೆಂದು ನರೇಂದ್ರನಂದನಂ
ತನ್ನೊಳೆ ತಾನು ವಿಸ್ಮಯದೆ ಭಾವಿಸುತಿರ್ದನದೊಂದು ಜಾವಮಂ ೫೯

ವ॥ ಅಂತು ಭಾವಿಸುತ್ತಮಿರ್ದು

ಮನುಜನನೆನ್ನನೀಕ್ಷಿಸಿ ಭವಾದ್ರಿಯನೇಱದೆ ನಾಡೆ ನೋಡಿ ತೊ
ಟ್ಟನೆ ಕೊಳೆ ಮಾಯಮಾಗದೆ ನಭಕ್ಕೊಗೆದಾಗಳೆ ಪೋಗದಿರ್ದೊಡೊ
ಯ್ಯನೆ ಬೆಸಗೊಳ್ವೆನಾರ್ಗೆ ಸತಿ ನೀಂ ಪೆಸರೇಂ ನಿನಗಿಂತು ತೋರ್ಪ ಜ
ವ್ವನದೊಳಗೀ ತಪಕ್ಕೆ ಗುಱಿಮಾಡಿಸಿದುಬ್ಬೆಗಮಾವುದೆಂಬುದಂ ೬೦

ವ॥ ಎಂದು ಭಾವಿಸುತ್ತಮಾ ರಮಣೀಯ ದೇವಾಯತನ ನೂತ್ನಸ್ತಂಭವಂ ನೆಮ್ಮಿ ನಿಂದಿರ್ದು ತದಂಗನಾ ಗೀತಾವಸಾನಸಮಯಮಂ ಪಾರುತ್ತಮಿರ್ಪುದುಂ

ತಾಳಿರುವ ಆ ದಿವ್ಯಕನ್ನಿಕೆಯನ್ನು ರಾಜಕುಮಾರನು ನೋಡಿದನು. ವ॥ ಹೀಗೆ ನೋಡಿ ನೆಲಕ್ಕೆ ಇಳಿದು ಕುದುರೆಯನ್ನು ಒಂದು ಮರದ ಕೊಂಬೆಗೆ ಕಟ್ಟಿ, ಚಂದ್ರ ಮೌಳೀಶ್ವರನ ಮುಂದೆ ನಿಂತು ನಮಸ್ಕರಿಸಿ, ಆ ದಿವ್ಯವನಿತೆಯ ರೂಪಸಂಪತ್ತನ್ನೂ ಕಾಂತಿಯನ್ನೂ ಶಾಂತಿಯನ್ನೂ ಕಂಡು ಆಶ್ಚರ್ಯಪಟ್ಟು ನೋಡುತ್ತಿದ್ದು, ೫೯. ಕುದುರೆ ಮೊಗದವರ ಆ ಜೋಡಿಯೆಲ್ಲಿ ! ಈ ಕಾಡೆಲ್ಲಿ ! ತಾವರೆಗೊಳವೆಲ್ಲಿ ! ಮಧುರವಾದ ಸಂಗೀತವು ಕೇಳಿಬರುವುದೆಲ್ಲಿ ! ಈ ಶಿವಾಲಯವೆಲ್ಲಿ ! ಈ ಹುಡುಗಿಯನ್ನು ಕಾಣುವು ದೆಲ್ಲಿ ! ಮನುಷ್ಯನಾದ ನನಗೆ ಇದೆಲ್ಲಾ ಹೇಗೆ ಒದಗಿಬಿಟ್ಟಿತು ! ಎಂಬುದಾಗಿ ಆ ರಾಜ ಕುಮಾರನು ತನ್ನಲ್ಲಿಯೆ ತಾನು ಆಶ್ಚರ್ಯದಿಂದ ಸ್ವಲ್ಪಹೊತ್ತು ಆಲೋಚಿಸುತ್ತಿದ್ದನು. ವ॥ ಹೀಗೆ ಆಲೋಚಿಸುತ್ತಿದ್ದು ೬೦. ಮನುಷ್ಯನಾದ ನನ್ನನ್ನು ನೋಡಿ ನಾನು ವಿಚಾರಿಸುವುದಕ್ಕೆ ಮೊದಲೇ ತಟ್ಟನೆ ಕೈಲಾಸಪರ್ವತವನ್ನೇರಿ ಹೋಗದಿದ್ದರೆ ಹಾಗೂ ಮಾಯವಾಗದಿದ್ದರೆ ಆಕಾಶಕ್ಕೆ ಹಾರಿಹೋಗದಿದ್ದರೆ ಮೆಲ್ಲನೆ ಎಲೌ ಮಹಿಳೆಯೆ ನೀನು ಯಾರು ? ನಿನ್ನ ಹೆಸರೇನು ? ಈ ಹೊಸ ಹರಯದಲ್ಲಿಯೆ ಈ ರೀತಿ ನಿನ್ನನ್ನು ತಪಸ್ಸಿಗೆ ಗುರಿಮಾಡಿದ ಮನೋವ್ಯಥೆಯಾದರೂ ಯಾವುದೆಂದು ಕೇಳುತ್ತೇನೆ. ವ॥ ಎಂದು ಆಲೋಚಿಸುತ್ತ ಆ ಸುಂದರವಾದ ದೇವಸ್ಥಾನದ ಹೊಸದಾಗಿ ಕಾಣುತ್ತಿರುವ ಕಂಭ ವನ್ನು ಒರಗಿಕೊಂಡು ನಿಂತು, ಅವಳ ಸಂಗೀತವು ಮುಗಿಯುವ ಕಾಲವನ್ನು ನೋಡುತ್ತ

ಮೃದುಮಧುರ ವಲ್ಲಕೀಗೇ
ಯಂದ ದನಿ ಮಾಣಲ್ಕೆ ಗೀತದವಸಾನದೊಳು
ನ್ಮದ ಮಧುಕರಸ್ವನಂ ಮಾ
ಣ್ದದ ಕುಮುದಿನಿಯಂತೆ ಕಾಂತೆ ಕಣ್ಗೆಸೆದಿರ್ದಳ್ ೬೧

ವ॥ ಅನಂತರಮಾ ತ್ರೈಲೋಕ್ಯರಕ್ಷಾಮಣಿಯುಂ ಪ್ರದಕ್ಷಿಣೀಕರಣಪೂರ್ವಕಂ ನಮಸ್ಕರಿಸಿ

ಒಸೆದಾಶ್ವಾಸಿಸುವಂತೆ ಪುಣ್ಯತತಿಯಿಂದಂ ಮುಟ್ಟುವಂತಚ್ಛತೀ
ರ್ಥಸಮೂಹಾಂಬುಗಳಿಂದವಂದಭಿಷವಂ ಮಾಳ್ಪಂತೆ ಪೂತತ್ವಮಂ
ಪಸರಿಪ್ಪಂತೆ ಬರಂಗಳಂ ಪದಪಿನಿಂದೀವಂತೆ ದೃಕ್ತೃಪ್ತಿ ರಾ
ಜಿಸೆ ದಿವ್ಯಾಂಗನೆ ನೋಡಿದಳ್ ತಗುಳ್ದು ಚಂದ್ರಾಪೀಡಭೂಪಾಲನಂ ೬೨

ಸ್ವಾಗತಮೇ ನಿನಗೆ ಮಹಾ
ಭಾಗನೆ ಮದ್ಭೂಮಿಗೆಂತು ಬಂದಯ್ ನೀನ
ಭ್ಯಾಗತನಾಗಲ್ವೇಟ್ಕುಂ
ದಾಗಳ್ ನೃಪಸುತನನಟ್ಕಱಿಂ ಸತಿ ನುಡಿದಳ್ ೬೩

ವ॥ ಅಂತು ನುಡಿದನಿತಱೊಳೆ ಕೃತಾರ್ಥನಾದೆನೆಂದು ಬಗೆಯುತ್ತಂ ದೇವಿಯರ್ ಬೆಸಸಿದಂತೆಗೆಯ್ವೆನೆಂದು ಆ ಕಾಂತೆಯ ಬೆಂಬಟ್ಟಿವಿಡಿದು ನಡೆವ ಶಿಷ್ಯನಂತೆ ಪೋಗೆವೋಗೆ ಕಿಱಿದಂತರದೊಳ್

ಇರಲಾಗಿ, ೬೧. ಸಂಗೀತವು ಮುಗಿಯಿತು. ಹೀಗೆ ಮೃದುವಾಗಿಯೂ ಮಧುರ ವಾಗಿಯೂ ಇರುವ ವೀಣೆಯ ದನಿಯು ನಿಲ್ಲಲಾಗಿ ಆ ಸುಂದರಿಯು ಮದಿಸಿದ ದುಂಬಿ ಗಳ ಗುಂಜಾರವವು ನಿಂತ ಕನ್ನೈದಿಲೆಬಳ್ಳಿಯಂತೆ ಮನೋಹರವಾಗಿದ್ದಳು. ವ॥ ಬಳಿಕ ಅವಳು ತ್ರಿಲೋಕರಕ್ಷಕನಾದ ಪರಮಾತ್ಮನಿಗೆ ಪ್ರದಕ್ಷಿಣಪೂರ್ವಕವಾಗಿ ನಮಸ್ಕರಿಸಿ, ೬೨. ಆತ್ಮೀಯತೆಯಿಂದ ಸಮಾಧಾನಮಾಡುವಂತೆಯೂ, ಪುಣ್ಯಸಮೂಹದಿಂದ ಸ್ಪರ್ಶಮಾಡುವಂತೆಯೂ, ನಿರ್ಮಲವಾದ ತೀರ್ಥೋದಕಗಳಿಂದ ಸ್ನಾನಮಾಡಿಸು ವಂತೆಯೂ, ಪವಿತ್ರತೆಯನ್ನುಂಟುಮಾಡುವಂತೆಯೂ, ಸಂತೋಷದಿಂದ ವರಗಳನ್ನು ಕೊಡುವಂತೆಯೂ ನೇತ್ರಾನಂದವು ಸ್ಪಷ್ಟವಾಗಿ ವಿರಾಜಿಸುತ್ತಿರಲು ಆ ದಿವ್ಯಾಂಗನೆಯು ಚಂದ್ರಾಪೀಡನನ್ನು ನೋಡಿದಳು. ೬೩. "ಶ್ರೀಯುತನೆ, ನಿನಗೆ ಸ್ವಾಗತ. ನನ್ನ ಈ ಸ್ಥಳಕ್ಕೆ ಹೇಗೆ ಬಂದೆ ? ಇಂದು ನೀನು ನನ್ನ ಅತಿಥಿಯಾಗಬೇಕು" ಎಂದು ಮಹಿಳೆಯು ಆಗ ರಾಜಪುತ್ರನಿಗೆ ಸ್ನೇಹದಿಂದ ಹೇಳಿದಳು. ವ॥ ಅಷ್ಟು ಹೇಳಿದ ಮಾತ್ರದಿಂದಲೆ ಕೃತಾರ್ಥನಾದೆನೆಂದು ಭಾವಿಸುತ್ತ "ಪೂಜ್ಯರು ಅಪ್ಪಣೆಮಾಡಿದಂತೆಯೆ ಆಗಲಿ" ಎಂದು

ಕಾಲದ ಮರ್ವು ಪರ್ವಿದವೊಲಿರ್ದ ತಮಾಲವನಂಗಳಿಂದೆ ಭೃಂ
ಗಾಳಿಯ ಗಾವರಂ ಪುದಿದ ಪುಷ್ಪಲತಾಗೃಹದಿಂದೆ ಚಂದ್ರಿಕಾ
ಜಾಲದವೊಲ್ ಕಿಲಂಬಿಡಿದು ಭೋರ್ಗರೆಯಲ್ ಸುರಿತರ್ಪ ನಿರ್ಝರಾ
ಸ್ಫಾಲನ ಶೀಕರಪ್ರಸರದಿಂದೆಸೆದತ್ತು ಬೃಹದ್ಗುಹಾಂಗಣಂ ೬೪

ವ॥ ಅಂತಾ ಗುಹಾಂಗಣದ ಮುಂದೆ ನಿಂದು ನೋಟ್ಪಲ್ಲಿ

ಅದು ಸುರಭೂಜವಲ್ಕವಸನದ್ವಯಮಂತದು ದಂಡಮಲ್ಲಿ ನೇ
ಲಿದುದದು ಜೋಗವಟ್ಟಗೆ ಕಮಂಡಲಮಂತದು ಭಸ್ಮಶಯ್ಯೆಯುಂ
ತದು ಶಶಿಮಂಡಲಾಕೃತಿವೊಲಿರ್ದುದು ಶಂಖದ ಪಾತ್ರಯೆಂದು ನೋ
ಡಿದನತಿವಿಸ್ಮಯಂಬೆರಸು ತದ್ಗುಹೆಯಂ ನೃಪರೂಪಚಂದ್ರಮಂ ೬೫

ವ॥ ಅನಂತರಮಾ ದಿವ್ಯತಪಸ್ವಿನಿ ಮಾಟ್ಪತಿಥಿಪೂಜೆಯಂ ವಿನಯಪುರಸ್ಸರಂ ಕೆಯ್ಕೊಂಡು ದರ್ಭಾಸನದೊಳ್ ಕುಳ್ಳಿರಲಾ ನಿತಂಬಿನಿ

ರಕ್ಷಾಂಕಿತ ತನು ಮೆಲ್ಲನೆ
ವೃಕ್ಷಂಗಳ ಕೆಳಗೆ ಪೋಗಿ ನಿಂದಿರ್ದಾಗಳ್
ಭಿಕ್ಷಾಂ ದೇಹಿಯೆನಲ್ಕಂ
ತಾಕ್ಷಣದೊಳ್ ತೀವಿದತ್ತು ಭಿಕ್ಷಾಪಾತ್ರಂ ೬೬

ಅವಳನ್ನು ಶಿಷ್ಯನಂತೆ ಹಿಂಬಾಲಿಸಿ ಹೋಗುತ್ತಿರಲಾಗಿ ಸ್ವಲ್ಪ ದೂರದಲ್ಲಿ ೬೪. ಹಗಲಿನಲ್ಲೂ ರಾತ್ರಿಯ ಕತ್ತಲು ಹರಡಿದಂತಿರುವ ಹೊಂಗೆಮರದ ಗುಂಪುಗಳಿಂದಲೂ, ದುಂಬಿಗಳ ಧ್ವನಿಯಿಂದ ಕೂಡಿಕೊಂಡಿರುವ ಪುಷ್ಪಭರಿತವಾದ ಬಳ್ಳಿಮನೆಗಳಿಂದಲೂ, ಬೆಳದಿಂಗಳಿನ ಪ್ರಸಾರದಂತೆ ತಂಪನ್ನು ಪಡೆದು ಭೋರ್ಗರೆಯುತ್ತಾ ಸುರಿಯುತ್ತಿರುವ ಝರಿಗಳು ಬಂಡೆಗಳ ಮೇಲೆ ಬೀಳುವುದರಿಂದ ಉಂಟಾದ ತುಂತುರುಗಳ ಸಮೂಹದಿಂದಲೂ ಕೂಡಿಕೊಂಡಿರುವ ದೊಡ್ಡ ಗುಹಾಪ್ರದೇಶವು ಶೋಭಿಸುತ್ತಿತ್ತು. ವ॥ ಹಾಗೆ ಆ ಗುಹಾಂಗಣದ ಮುಂದೆ ನಿಂತು ನೋಡುತ್ತಿರಲಾಗಿ, ೬೫. ಅಲ್ಲಿ ಒಂದು ಕಡೆ ಕಲ್ಪವೃಕ್ಷದಿಂದ ಉತ್ಪನ್ನವಾದ ನಾರುಮಡಿಯ ಜೊತೆ, ಮತ್ತೊಂದು ಕಡೆ ಯೋಗದಂಡ, ಇನ್ನೊಂದು ಕಡೆ ನೇತುಹಾಕಿರುವ ಯೋಗಪಟ್ಟಿಕೆ, ಒಂದು ಕಡೆ ಕಮಂಡಲು, ಮತ್ತೊಂದು ಕಡೆ ಭಸ್ಮಶಯನ, ಇನ್ನೊಂದು ಕಡೆ ಚಂದ್ರಮಂಡಲದಂತಿರುವ ಶಂಖದಿಂದ ಮಾಡಿದ ಭಿಕ್ಷಾಪಾತ್ರೆ. ಇವೆಲ್ಲ ಇರುವ ಆ ಗುಹೆಯನ್ನು ಚಂದ್ರಾಪೀಡನು ಬಹಳ ಆಶ್ಚರ್ಯದಿಂದ ನೋಡಿದನು, ವ॥ ಬಳಿಕ ಆ ದಿವ್ಯಯೋಗಿನಿಯು ಮಾಡಿದ ಅತಿಥಿಸತ್ಕಾರವನ್ನು ವಿನಯಪೂರ್ವಕವಾಗಿ ಸ್ವೀಕರಿಸಿ ದರ್ಭಾಸನದಲ್ಲಿ ಕುಳಿತುಕೊಂಡಿರಲಾಗಿ ಆಕೆಯು ೬೬. ವಿಭೂತಿಧಾರಣೆಯಿಂದ ಶೋಭಿಸುವ ಶರೀರವುಳ್ಳ ಆ ತಪಸ್ವಿನಿಯು ಮೆಲ್ಲನೆ ಮರಗಳ ಕೆಳಗೆ ಹೋಗಿ ನಿಂತುಕೊಂಡು "ಭಿಕ್ಷಾಂ ದೇಹಿ" (ಭಿಕ್ಷೆಯನ್ನು ಕೊಡು) ಎಂದು ಹೇಳಿದಳು. ಕೂಡಲೆ ಭಿಕ್ಷಾಪಾತ್ರೆಯು ಹಣ್ಣುಗಳಿಂದ

ವ॥ ಅಂತು ತೀವಿದ ಭಿಕ್ಷಾಪಾತ್ರದ ಪಣ್ಪಲಂಗಳಂ ತಂದುಕುಡೆ ನಿರ್ಝರಜಲಂಗಳೊಳ್ ಮಿಂದು ಅಮೃತರಸಾಸ್ವಾದಂಗಳಪ್ಪ ತತ್ಫಲಂಗಳಂ ಮೆಲ್ದು ನೀರಂ ಕುಡಿದೊಂದುದೆಸೆ ತೊಲಗಿರ್ಪುದುಮಾ ಕನ್ನಿಕೆಯುಂ ಕೃತಫಲಜಲಾಹಾರೆಯಾಗಿ ಬಂದೊಂದು ಶಿಲಾತಳದೊಳ್ ಕುಳ್ಳಿರ್ದು ನೋಡುತ್ತುಮಿರ್ಪುದುಮಾ ಗಾಂಭೀರ್ಯರತ್ನಾಕರನುಮನತಿದೂರಮಪ್ಪ ಶಿಲಾತಲದೊಳ್ ವಿಶ್ರಮಿಸಿ ತನ್ನ ಬಂದ ವೃತ್ತಾಂತಮನೆಲ್ಲಮಂ ನೆಱೆಯೆ ಪೇಳ್ದು ಮತ್ತಮಾ ದಿವ್ಯ ಕಾಂತೆಯನಿಂತೆಂದಂ

ಪಿರಿದೆನಿಸಿರ್ದ ನಿಮ್ಮಯ ಪ್ರಸಾದಮನಾಂ ಪಡೆದೊಂದು ಗರ್ವದಿಂ
ಪರಿಚಿತನಂತೆ ಬಿನ್ನವಿಸಲುಂ ಬಗೆದಂದಪೆನಂತುಟಲ್ತೆ ಬಿ
ತ್ತರಿಪೊಡಧೀರರಪ್ಪ ಮನುಜರ್ ಪ್ರಭುಗಳ್ ದಯೆಯಿಂದೆ ತಮ್ಮನಾ
ದರಿಸಿದೊಡಾಗಳೇ ಗಟಪಲ್ ಬಗೆದರ್ಪುದಿದಾವ ವಿಸ್ಮಯಂ ೬೭

ಮನುಜಂಗೆ ಕೌತುಕಾವಹ
ಮಿನಿತೋದಾಶ್ಚರ್ಯಮದಱಿನಿಂ ಬೆಸಗೊಳ್ಳ
ಲ್ಮನುಗೆಯ್ಯುತ್ತಿರ್ದಪುದೀ
ಮನಮನನುಗ್ರಹಿಸಿ ದೇವಿ ಪೇಟಲ್ವೇಟ್ಕುಂ ೬೮

ತುಂಬಿಹೋಯಿತು ! ವ॥ ಹಾಗೆ ತುಂಬಿದ ಭಿಕ್ಷಾಪಾತ್ರೆಯ ಹಣ್ಣುಗಳನ್ನು ತಂದು ಕೊಡಲಾಗಿ, ಝರಿಯ ನೀರಿನಲ್ಲಿ ಸ್ನಾನಮಾಡಿ ಅಮೃತರಸದಂತೆ ಬಹಳ ರುಚಿಯಾಗಿರುವ ಆ ಹಣ್ಣುಗಳನ್ನು ತಿಂದು ನೀರನ್ನು ಕುಡಿದು ಹಸಿವನ್ನು ಪರಿಹರಿಸಿಕೊಂಡನು. ಅಷ್ಟರಲ್ಲಿ ಆ ಕನ್ನಿಕೆಯು ಹಣ್ಣು ತಿಂದು, ನೀರು ಕುಡಿದು ಬಂದು ಒಂದು ಹಾಸರೆಗಲ್ಲಿನ ಮೇಲೆ ಕುಳಿತುಕೊಂಡು ನೋಡುತ್ತಿದ್ದಳು. ಆಗ ಗಾಂಭೀರ್ಯಗುಣಕ್ಕೆ ಸಮುದ್ರದಂತಿರುವ ಚಂದ್ರಾಪೀಡನು ಸಮೀಪದಲ್ಲಿರುವ ಹಾಸರೆಗಲ್ಲಿನ ಮೇಲೆ ವಿಶ್ರಮಿಸಿಕೊಳ್ಳುತ್ತಾ ತಾನು ಇಲ್ಲಿಗೆ ಬಂದ ಬಗೆಯನ್ನೆಲ್ಲಾ ವಿಸ್ತಾರವಾಗಿ ಹೇಳಿ ಮತ್ತೆ ಆ ದಿವ್ಯಾಂಗನೆಯನ್ನು ಕುರಿತು ಹೀಗೆ ಹೇಳಿದನು. ೬೭. "ಪೂಜ್ಯಳೆ ನೀನು ಮಾಡಿದ ದೊಡ್ಡದಾದ ಈ ಅತಿಥಿ ಸತ್ಕಾರದ ಅನುಗ್ರಹವನ್ನು ನಾನು ಪಡೆದೆನೆಂಬ ಒಂದು ಹೆಮ್ಮೆಯಿಂದ ಈಗ ಪರಿಚಿತನಂತೆ ಅರಿಕೆಮಾಡಲು ಮನಸ್ಸುಮಾಡುತ್ತಿದ್ದೇನೆ. ಅದೂ ಸರಿಯೆ. ಇನ್ನೂ ಹೇಳಬೇಕಾದರೆ ಮನುಷ್ಯರು ಬಹಳ ಚಪಲಸ್ವಭಾವದವರು. ಪ್ರಭುವಾದವರು ಏನೋ ಕನಿಕರದಿಂದ ತಮ್ಮನ್ನು ಆದರಿಸಿಬಿಟ್ಟರೆ ಹರಟೆಯನ್ನೇ ಪ್ರಾರಂಭಿಸಿಬಿಡುತ್ತಾರೆ ! ಇದೇನೂ ಸೋಜಿಗವಲ್ಲ. ೬೮. ಇಷ್ಟು ಅದ್ಭುತವಾದ ವ್ಯವಹಾರವು ಮನುಷ್ಯನಿಗೆ ನಿಜವಾಗಿಯೂ ಆಶ್ಚರ್ಯವನ್ನುಂಟುಮಾಡುತ್ತದೆ. ಆದ್ದರಿಂದ ಈ ನನ್ನ ಮನಸ್ಸು ಇನ್ನು ನಿನ್ನನ್ನು

ಸುರಮುನಿಸಿದ್ಧಖೇಚರರೊಳಾವಕುಲಂ ನಿಜಜನ್ಮದಿಂದಲಂ
ಕರಿಸಿತೊ ಪಂಚಭೂತಮಯಮಾಗಿಯುಮೀ ತನುಮಿಂದುಕಾಂತಿಯಂ
ತಿರೆ ಪೊಳೆಯುತ್ತಮಿರ್ದಪುದಿದೇಂ ಪೊಸಜವ್ವನದೇಟ್ಗಿಯೊಳ್ ತಪ
ಶ್ಚರಣಮಿದೇಂ ಪೊದಟ್ಬಿಡಿದ ಕಾನನದೊಳ್ ಬಿಡದೊರ್ವಳಿರ್ಪುದೇಂ ೧೯

ವ॥ ಎಂದು ಬೆಸಗೊಳ್ವುದುಂ ಕಿಱಿದುಬೇಗಂ ತನ್ನೊಳ್ ತಾನೆ ಭಾವಿಸಿ
ಪೊಳೆವಲರ್ಗಂಗಳಿಂ ಮಿಳಿರ್ವ ಬೆಳ್ಪು ರಸಾತ್ಮಕಮಾಗಿ ಗಂಡಮಂ
ಡಳತಳದೀದಮಂದಿಟಿಯುತಿರ್ದುದೆನಲ್ ನಯನಾಂಬುಲೋಚನಂ
ಗಳಿನಿರದುಣ್ಮೆ ಶಬ್ದಮಣಮಿಲ್ಲದೆ ತೊಟ್ಟನೆ ಕಣ್ಮಗುಳ್ದಳ
ಗ್ಗಳಿಪಳವಿಂದೆ ಮಾನಿನಿ ಮನಕ್ಕತಿವಿಸ್ಮಯಮಾಗೆ ಭೂಪನಾ ೨೦

ವ॥ ಅಂತಾ ಕಾಂತೆ ಶೋಕಾಕ್ರಾಂತೆಯಾಗಿ
ರಸೆಯಂ ತಾಂ ತಾಂಕಿ ಕಲ್ಪಾಂತದ ಬಱಸಿಡಿಲೆಯ್ತಂದು ಪೊಯ್ಯಲ್ ನೆಲಂ ಕಂ
ಪಿಸುವಂತತ್ಯಂತಶೋಕಾಕುಲತೆಯಿನಟುತಿರ್ದಪ್ಪಳೋರಂದದಿಂ ಮು
ಟ್ಗಿಸಲಿನ್ನಾರ್ಪರೀ ಶೋಕಮನೆನುತೆ ಭಯಂಗೊಂಡಿದೆತ್ತೆತ್ತಲೀಗಳ್
ಬೆಸಗೊಂಡೆಂ ಕಿಮ್ಮನೆಂದುಮ್ಮಳಿಸಿ ಪಿರಿದುಮಂದಾ ನೃಪಂ ವ್ಯಗ್ರನಾದಂ ೨೧

ಪ್ರಶ್ನೆ ಮಾಡಲು ಹವಣಿಸುತ್ತಿದೆ. ತಾಯಿ, ಅನುಗ್ರಹಿಸಿ ಹೇಳಬೇಕು. ೧೯. ದೇವತೆಗಳು, ಮುನಿಗಳು, ಸಿದ್ಧರು ಮೊದಲಾದ ಆಕಾಶಚಾರಿಗಳಲ್ಲಿ ಯಾವ ಕುಲವು ನಿಮ್ಮ ಜನ್ಮದಿಂದ ಅಲಂಕರಿಸಲ್ಪಟ್ಟಿದೆ. ಪಂಚಭೂತಗಳಿಂದ ನಿರ್ಮಿತವಾಗಿದ್ದರೂ ಈ ನಿಮ್ಮ ಶರೀರವು ಬೆಳದಿಂಗಳಿನಂತೆ ಹೊಳೆಯುತ್ತಿರಲು ಕಾರಣವೇನು ? ಹೊಸಹರೆಯದ ಏಳಿಗೆಯ ಕಾಲದಲ್ಲಿ ತಪಸ್ಸು ಮಾಡುವುದು ಏತಕ್ಕಾಗಿ ? ಈ ದಟ್ಟವಾದ ಕಾಡಿನಲ್ಲಿ ಏಕಾಕಿನಿಯಾಗಿ ವಾಸಿಸಲು ಕಾರಣವೇನು ?" ವ॥ ಹೀಗೆ ಕೇಳಲಾಗಿ ಸ್ವಲ್ಪ ಹೊತ್ತು ತನ್ನಲ್ಲಿ ತಾನು ಚಿಂತಿಸಿ ೨೦. ಆ ಹುಡುಗಿಯು ಅತ್ಯಧಿಕವಾದ ಶೋಕದಿಂದ ಪೀಡಿತಳಾದರೂ ಸ್ವಲ್ಪವೂ ಶಬ್ದಮಾಡದೆ ಕಣ್ಣು ಮುಚ್ಚಿದಳು. ಅವಳ ಕಣ್ಣುಗಳಿಂದ ಕಣ್ಣೀರು ಒಂದೇಸಮನೆ ಸುರಿಯುತ್ತಿತ್ತು. ಇದು ಹೊಳೆಯುವ ಕಣ್ಣುಗಳ ಬಿಳುಪು ಜಲರೂಪವನ್ನು ತಾಳಿ ಕಣ್ಣುಗಳಿಂದ ಹೊರಟು ಕೆನ್ನೆಯ ಮೂಲಕ ಇಳಿಯುತ್ತಿರುವಂತೆ ಕಾಣುತ್ತಿತ್ತು. ಇದನ್ನು ಕಂಡು ಚಂದ್ರಾಪೀಡನಿಗೆ ಬಹಳ ಆಶ್ಚರ್ಯವಾಯಿತು. ವ॥ ಹೀಗೆ ಅವಳು ಶೋಕಪೀಡಿತೆಯಾಗಿ ೨೧. ಪ್ರಳಯಕಾಲದಲ್ಲಿ ಬರಸಿಡಿಲು ಬಂದು ಭೂಮಿಗೆ ಬಡಿಯಲು ನೆಲವು ನಡುಗಿ ಹೋಗುವಂತೆ ಅತ್ಯಂತ ದುಃಖದಿಂದ ಪೀಡಿತಳಾಗಿ ಒಂದೇಸಮನೆ ಅಳುತ್ತಿದ್ದಾಳಲ್ಲ ! ಇವಳ ಈ ಶೋಕವನ್ನು ಕಡಿಮೆಮಾಡಲು ಇನ್ನಾರಿದ್ದಾರೆ ? ನಾನಾದರೂ ಏತಕ್ಕಾಗಿ ಈಗ ಇವಳನ್ನು ಸುಮ್ಮನೆ ಕೇಳಿದೆ !—ಎಂದು

ವ॥ ಅಂತು ನೃಪತಿ ವ್ಯಗ್ರನಾಗಿ ಮುಖಪ್ರಕ್ಷಾಳನಾರ್ಥಂ ಪೇರಡವಿಯೊಳಂಜಳಿಯಿಂ ಜಲಮಂ ತಂದು ದೇವಿಯರವಧಾರಿಸುವುದೆಂದು ಭೂಪನಿಳಿಂಪನುಪರೋಧಿಸುತ್ತಮಿರ್ಪಿನೆಗಂ

ಅಳವಿಲ್ಲದಟುತ್ತಿರೆ ಕೆಂ
ಪೆಳಸಿದ ಬಾಷ್ಪಾಂಬುಪೂರ್ಣಲೋಚನಮಂ ತ
ಜ್ಜಳದಿಂದೆ ಕರ್ಚಿ ವಲ್ಕಾಂ
ಚಲದಿಂ ನಿಜವದನಬಿಂಬಮಂ ಸತಿ ತೊಡೆದಳ್ ೭೨

ವ॥ ಅಂತಾ ಕಾಂತೆ ಶೋಕಾಕ್ರಾಂತೆಯಾಗಿರ್ಪುದುಂ ಕಂಡಿಂತಪ್ಪವರುಮಟುವಂದಮ ದ್ಭುತಮೆಂದು ಮನದೊಳ್ ಭಾವಿಸುತ್ತಮಿರೆ

ಉರಗಮುಖೋಗ್ರದಂಷ್ಟ್ರ ಸಹಜಾತೆಯನೂರ್ಜಿತಕಾಲಪಾಶನಿ
ಷ್ಠುರತರರೂಪೆಯಂ ಸಹಜಶಾಕಿನಿಯಂ ವಿಷಕನ್ಯಕಾಸಹೋ
ದರಿಯನಪಾರ ಘೋರದುರಿತಾರ್ಣವಜಾತೆಯನಾತ್ಮವಲ್ಲಭಾಂ
ತರಿತೆಯನೆನ್ನನಣ್ಣ! ಬೆಸಗೊಳ್ವುದೆ ಪೇೞ್ವೆನೆ ತತ್ಪ್ರಪಂಚಮಂ ೭೩

ಚಂದ್ರಾಪೀಡನು ಭಯದಿಂದ ಬಹಳ ದುಃಖಪಟ್ಟು ಕಳವಳಗೊಂಡನು. ವ॥ ಹೀಗೆ ಯುವರಾಜನು ಕಳವಳಿಸುತ್ತಾ ಆ ದೊಡ್ಡ ಕಾಡಿನೊಳಗಿನಿಂದ ಬೊಗಸೆಯಲ್ಲಿ ನೀರನ್ನು ತಂದು "ಮುಖವನ್ನು ತೊಳೆದುಕೊಳ್ಳುವುದಕ್ಕಾಗಿ ತಾಯಿ ತೆಗೆದುಕೊಳ್ಳಿ" ಎಂದು ಆ ರಾಜೇಂದ್ರನು ನಿರ್ಬಂಧಪಡಿಸುತ್ತಿರಲಾಗಿ, ೭೨. ಹೀಗೆ ಅಸಾಧ್ಯವಾಗಿ ಅಳುತ್ತಿದ್ದ ಆಕೆ ನೀರು ತುಂಬಿದ ಕೆಂಪಾದ ಕಣ್ಣುಗಳನ್ನು ಆ ನೀರಿನಿಂದ ತೊಳೆದುಕೊಂಡು, ನಾರು ಸೀರೆಯ ಸೆರಗಿನಿಂದ ತನ್ನ ಮುಖವನ್ನು ಒರೆಸಿಕೊಂಡಳು. ವ॥ ಹಾಗೆ ಅವಳು ದುಃಖಭರಿತೆಯಾಗಿರುವುದನ್ನು ಕಂಡು ಇಂತಹವರೂ ಅಳುವುದು ಸೋಜಿಗವೆಂದು ಚಂದ್ರಾಪೀಡನು ಮನಸ್ಸಿನಲ್ಲಿ ಆಲೋಚಿಸುತ್ತಿದ್ದನು. ೭೩. ಆಗ ಆ ತರುಣಿಯು ಹೀಗೆಂದಳು : "ಹಾವಿನ ಬಾಯಲ್ಲಿರುವ ಭಯಂಕರವಾದ ಹಲ್ಲಿನೊಡನೆ ಹುಟ್ಟಿರುವ (ಬಹಳ ಕ್ರೂರಳಾದ), ಗಟ್ಟಿಯಾದ ಯಮಪಾಶಕ್ಕಿಂತಲೂ ಕಠಿಣಳಾದ, ಸ್ವಭಾವದಿಂದಲೇ ಪಿಶಾಚಿಯಂತಿರುವ, ವಿಷಕನ್ನಿಕೆಯ ಸಹೋದರಿಯೆನಿಸಿರುವ, ಅಪಾರವಾದ ಹಾಗೂ ಭಯಂಕರವಾದ ಪಾಪಸಮುದ್ರದಲ್ಲಿ ಹುಟ್ಟಿರುವ, ಪ್ರಾಣಕಾಂತನಿಂದ ವಿಯೋಗ ಹೊಂದಿರುವ ನನ್ನನ್ನು ನೀನು ಕೇಳುತ್ತಿದ್ದೀಯಪ್ಪ. ಆ ವಿವರವನ್ನು

ಗತಭಾಗ್ಯೆಯೆನಿಪ ಪಾಪಾ
ನ್ವಿತೆಯಂ ಪತಿದುಃಖಭಾಜನೆಯ ವೃತ್ತಾಂತ
ಸ್ಥಿತಿಯನದೇಂ ಕೇಳ್ದಪೆ ನೃಪ
ಸುತ ಕೌತುಕಮೆಂಬೆಯಪ್ಪೊಡುಸಿರ್ದಪೆನೀಗಳ್ ೭೪

## ಮಹಾಶ್ವೇತೆಯ ಸಂದರ್ಶನ

ಸಮಾಪ್ತ

ಹೇಳಲಿ ? ೭೪. ನಾನು ಹತಭಾಗ್ಯಳು, ಪಾಪಿಷ್ಠಳು, ಪತಿಯ ವಿರಹದುಃಖಕ್ಕೆ ಪಾತ್ರಳಾಗಿರುವವಳು. ಇಂತಹ ನನ್ನ ಸ್ಥಿತಿಯನ್ನು ಏಕೆ ಕೇಳುತ್ತೀಯೆ ? ರಾಜಪುತ್ರ ಬಹಳ ಕುತೂಹಲವಾಗಿದ್ದರೆ ಹೇಳುತ್ತೇನೆ ಕೇಳು."

## ಮಹಾಶ್ವೇತೆಯ ಸಂದರ್ಶನ

ಮುಗಿಯಿತು

# ೫. ಮಹಾಶ್ವೇತೆಯ ವೃತ್ತಾಂತ

ವ॥ ಅದೇಂತೆಂದೊಡೆ

ತ್ರಿದಿವದೊಳಚ್ಚರಸಿಯರಿ
ರ್ಪುದು ವಿದಿತಂ ನಿಮಗಮಂತವರ ವಂಶಂಗಳ್
ಪದಿನಾಲ್ಕನೆ ಪೆಸರಿಂ ನೆಗ
ಳ್ದುದಯಿಸಿದುವು ಬೇಱೆಬೇಱೆ ನೃಪಕುಲತಿಲಕಾ ೧

ವ॥ ಅದೆಂತೆನೆ

ಧರೆಯಿಂ ಕಡಲಿಂ[ಶಶಿಯಿಂ]ದೆಲರಿಂ
ಪರಿಯಿಂದಮರ್ದಿಂದೆ ಮೃತ್ಯುವಿಂದಬ್ಜಜನಿಂ
ಸ್ಮರನಿಂ ಜಲದಿಂ ವೇದೋ
ತ್ಕರದಿಂ ವಿದ್ಯುನ್ನಿಕಾಯದಿಂ ಹುತವಹನಿಂ ೨

ವ॥ ಅದಲ್ಲದೆಯುಂ ದಕ್ಷಪ್ರಜಾಪತಿಗೆ ಪುಟ್ಟಿದ ಮುನಿಯುಮರಿಷ್ಟೆಯುಮೆಂಬೀರ್ವರ್ ಕನ್ನೆಯರಿಂ ಗಂಧರ್ವಕುಲಮುದಯಿಸಿದುದಲ್ಲಿ ಚಿತ್ರಸೇನಾದಿಗಳಪ್ಪ ಪದಿನೈವರಿಂ ಪಿರಿಯನೆನಿಸಿ

ಚಿತ್ರರಥನೆಂಬನೊರ್ವಂ
ಪುತ್ರಂ ಗಂಧರ್ವರಾಜನಮರೇಂದ್ರಂಗಂ
ಮಿತ್ರನೆನೆ ಪೆಂಪುವಡೆದು ಜ
ಗತ್ರಯವಿಖ್ಯಾತಕೀರ್ತಿ ಮುನಿಗುದಯಿಸಿದಂ ೩

ವ॥ "ಅದು ಹೇಗೆಂದರೆ. ೧. ಎಲೈ ರಾಜವಂಶಕ್ಕೆ ತಿಲಕಪ್ರಾಯನಾದ ರಾಜಕುಮಾರನೆ, ಸ್ವರ್ಗಲೋಕದಲ್ಲಿ ಅಪ್ಸರಸರೆಂಬ ಹೆಂಗಸರಿರುವುದು ನಿಮಗೂ ತಿಳಿದ ವಿಷಯವೇ ಆಗಿದೆ. ಅವರಲ್ಲಿ ಹದಿನಾಲ್ಕು ಬುಡಕಟ್ಟುಗಳಿವೆ. ಅವು ಬೇರೆ ಬೇರೆ ಮೂಲಗಳಿಂದ ಹುಟ್ಟಿ ಆಯಾಯಾ ಹೆಸರಿನಿಂದ ಪ್ರಸಿದ್ಧವಾಗಿವೆ. ವ॥ ಅದು ಹೇಗೆಂದರೆ ೨. ಭೂಮಿಯಿಂದ, ಸಮುದ್ರದಿಂದ [ಚಂದ್ರನಿಂದ], ವಾಯುವಿನಿಂದ, ಸೂರ್ಯನಿಂದ, ಅಮೃತದಿಂದ, ಮೃತ್ಯುವಿನಿಂದ, ಬ್ರಹ್ಮನಿಂದ, ಮನ್ಮಥನಿಂದ, ನೀರಿನಿಂದ, ವೇದಗಳಿಂದ, ಮಿಂಚಿನಿಂದ, ಅಗ್ನಿಯಿಂದ. ವ॥ ಅದಲ್ಲದೆ ದಕ್ಷಬ್ರಹ್ಮನಿಂದ ಹುಟ್ಟಿದ ಮುನಿ, ಅರಿಷ್ಟೆ ಎಂಬ ಇಬ್ಬರು ಹೆಣ್ಣುಮಕ್ಕಳಿಂದ ಗಂಧರ್ವರ ವಂಶವು ಉದಯಿಸಿತು. ಅಲ್ಲಿ ಚಿತ್ರಸೇನನೇ ಮೊದಲಾದ ಹದಿನೈದು ಜನರಿಗೆ ಹಿರಿಯವನೆನಿಸಿಕೊಂಡ, ೩. ಚಿತ್ರರಥನೆಂಬವನು ಮುನಿಯೆಂಬವಳಲ್ಲಿ ಮಗನಾಗಿ ಹುಟ್ಟಿದನು. ಅವನು ಗಂಧರ್ವರಿಗೆ ರಾಜನಾದನು. ಅಲ್ಲದೆ ದೇವೇಂದ್ರನಿಗೂ ಗೆಳೆಯನೆನಿಸಿದ ಹಿರಿಮೆಯನ್ನು ಪಡೆದಿದ್ದನು. ಅವನ ಕೀರ್ತಿಯು ಮೂರುಲೋಕಗಳಲ್ಲೂ ಹರಡಿತ್ತು.

ವ॥ ಅಂತಾ ಚಿತ್ರರಥನಿಂ ಚೈತ್ರರಥವೆಂಬ ಬನಮಚ್ಛೋದವೆಂಬ ಸರೋವರಮುಮಾದುದಲ್ಲದೆಯುಂ ತುಂಬುರಪ್ರಭೃತಿಗಳಪ್ಪಱುವರಿಂ ಪಿರಿಯನೆನಿಸಿ

ಪುರುಷಾರ್ಥನಿಧಿ ಪುರಂದರ
ಪರಮಪ್ರಿಯಮಿತ್ರನೊರ್ವನುದಯಿಸಿದಂ ಸುಂ
ದರರೂಪನರಿಷ್ಟೆಗೆ ಚಿ
ತ್ರರಥಾನನ ಪುಂಡರೀಕಹಂಸಂ ಹಂಸಂ ೪

ವ॥ ಅದಲ್ಲದೆಯುಮಲ್ಲಿಗನತಿದೂರದೊಳ್ ಹೇಮಕೂಟಮೆಂಬ ನಗೇಂದ್ರಂ ಕಿಂಪುರುಷಾವಾಸಸ್ಥಾನಮಾಗಿರ್ಪುದಲ್ಲಿ

ಆತ್ತಯಶರ್ ಗಂಧರ್ವಕು
ಲೋತ್ತಮರಾ ತಮ್ಮುತಿರ್ವರುಂ ನಿಖಿಲಗುಣೋ
ದಾತ್ತರೆನಲ್ ರಾಜ್ಯಂಗೆ
ಯ್ಯುತ್ತಂ ಸುಖಸಂಕಥಾವಿನೋದದಿನಿರ್ಪರ್ ೫

ವ॥ ಮತ್ತಮಾ ಸೋಮಮಯೂಖಸಂಭವೆಯರಪ್ಪಚ್ಚರಸಿಯರೊಳಗೆ

ಅಮೃತಕರ ಭಾಸುರೋದ್ಯ
ತ್ಕಮನೀಯಕಲಾಕಲಾಪಲಾವಣ್ಯಝರೀ
ಸಮುದಿತೆಯೆನಲ್ಕೆ ಪುಟ್ಟಿದ
ಳಮೃತಾಂಶುನಿಭಾಸ್ಯೆ ಗೌರಿಯೆಂಬಳ್ ಪೆಸರಿಂ ೬

ವ॥ ಆ ಚಿತ್ರರಥನಿಂದ ಚೈತ್ರರಥವೆಂಬ ಉದ್ಯಾನವನವೂ ಅಚ್ಛೋದವೆಂಬ ದೊಡ್ಡ ಸರೋವರವೂ ನಿರ್ಮಿಸಲ್ಪಟ್ಟಿತು. ಅದಲ್ಲದೆ ತುಂಬುರು ಮೊದಲಾದ ಆರು ಜನರಿಗಿಂತಲೂ ದೊಡ್ಡವನಾಗಿ, ೪. ಅರಿಷ್ಟೆಯೆಂಬುವಳಿಗೆ ಪುರುಷಾರ್ಥಗಳಿಗೆ ಆಶ್ರಯಸ್ಥಾನನಾದ, ದೇವೇಂದ್ರನಿಗೆ ಆಪ್ತಮಿತ್ರನೆನಿಸಿರುವ ಮತ್ತು ಚಿತ್ರರಥನ ಮುಖವೆಂಬ ಬಿಳಿದಾವರೆಗೆ ಸೂರ್ಯನಂತಿರುವ ಹಂಸನೆಂಬ ಮಗನೊಬ್ಬನು ಹುಟ್ಟಿದನು. (ಟಿ॥ ಧರ್ಮ, ಅರ್ಥ, ಕಾಮ, ಮೋಕ್ಷಗಳು ಪುರುಷಾರ್ಥ). ವ॥ ಅದಲ್ಲದೆ ಅಲ್ಲಿಗೆ ಸ್ವಲ್ಪ ದೂರದಲ್ಲಿ ಕಿಂಪುರುಷರಿಗೆ ವಾಸಸ್ಥಾನವಾದ ಹೇಮಕೂಟವೆಂಬ ಪರ್ವತವಿದೆ. ಅಲ್ಲಿ ೫. ಕೀರ್ತಿವಂತರಾದ, ಗಂಧರ್ವರ ವಂಶದಲ್ಲಿ ಶ್ರೇಷ್ಠರಾಗಿರುವ, ಸರ್ವಗುಣಸಂಪನ್ನರಾದ ಆ ಚಿತ್ರರಥ, ಹಂಸ ಎಂಬುವರು ರಾಜ್ಯಭಾರ ಮಾಡುತ್ತಾ ಇಬ್ಬರೂ ಪರಸ್ಪರ ಸುಖಸಲ್ಲಾಪಗೈಯುತ್ತ ಸಂತೋಷವಾಗಿದ್ದರು. ವ॥ ಚಂದ್ರಕಿರಣಗಳಿಂದ ಹುಟ್ಟಿದ ಅಪ್ಸರಸ್ತ್ರೀಯರಲ್ಲಿ ೬. ಚಂದ್ರನಂತೆ ಮುಖವುಳ್ಳ ಗೌರಿಯೆಂಬುವಳು ಹುಟ್ಟಿದಳು. ಅವಳು ಚಂದ್ರನ ಪ್ರಕಾಶಮಾನವಾದ ಮತ್ತು ಮಹಾಸುಂದರವಾದ ಕಳೆಗಳ ಸೌಂದರ್ಯದ ಪ್ರವಾಹದಿಂದ ಹುಟ್ಟಿರುವಳೋ ಎಂಬಂತೆ ಶೋಭಿಸುತ್ತಿದ್ದಳು.

ಇಂಗಡಲಿಂಗಮರನದೀ
ಸಂಗಂ ಸಂಘಟಿಪ ತೆಱದೆ ಗಂಧರ್ವಕುಲೋ
ತ್ತುಂಗನೆನಲ್ ನೆಗಟ್ದಾ ಹಂ
ಸಂಗಾದುದು ಗೌರಿಯೊಳ್ ವಿವಾಹೋತ್ಸಾಹಂ ೭

ಸಮವಂಶದೆ ಸಮರೂಪದೆ
ಸಮವಿಭವದೆ ಸಮವಯೋವಿಲಾಸದೆ ಸಮಸ
ತ್ವಮನದೆ ಸಮಾನುರಾಗದೆ
ಸಮಸಂದತ್ರಿವರ್ಗೆ ಸಮವಯೋಯೋಗಸುಖಂ ೮

ನಿನಗೇಂ ಪೇಟ್ದಪೆನಾಂ ಮಹಾತ್ಮರೆನಿಸಿರ್ದಾ ತಂದೆಗಂ ತಾಯ್ಗಮೋ
ರ್ವನೆ ನಿರ್ಭಾಗ್ಯನಿವಾಸೆಯೆಂ ನಿಖಿಲಪಾಪಾಕಾರೆಯೆಂ ದುಃಖಭಾ
ಜನೆಯೆಂ ಪುಟ್ಟಿದೆನೆನ್ನನೀಕ್ಷಿಸಲೊಡಂ ತಾತಂ ಮಹಾಶ್ವೇತೆಯೆಂ
ದನುರಾಗಂಬೆರಸಿಟ್ಟನೆನ್ನ ಪೆಸರಂ ಗಂಧರ್ವಚಕ್ರೇಶ್ವರಂ ೯

ವ॥ ಅಂತು ನಿಜಜನನೀಜನಕರ್ ಪಲಕಾಲಮನಪತ್ಯರಪ್ಪುದಱಿಂ ಪುತ್ರನಿಂದಗ್ಗಳ ಮಪ್ಪ ಪರಮಪ್ರೀತಿಯಿಂ ನಡಪುತ್ತಮಿರೆ ಕೆಲವು ದಿವಸದೊಳವಿದಿತ ಸ್ನೇಹಶೋಕಾಯಾಸಮಪ್ಪ ಶೈಶವಂ ಪತ್ತುವಿಡುವುದುಂ

೭. ಕ್ಷೀರಸಮುದ್ರಕ್ಕೆ ದೇವಗಂಗಾನದಿಯು ಸಹವಾಸವು ಉಂಟಾದಂತೆ ಗಂಧರ್ವಕುಲ ಶ್ರೇಷ್ಠನೆಂದು ಪ್ರಸಿದ್ಧಿಪಡೆದಿರುವ ಹಂಸನಿಗೆ ಗೌರಿಯೊಂದಿಗೆ ವಿವಾಹಮಹೋತ್ಸವವು ಜರುಗಿತು. ೮. ಸರಿಸಮಾನವಾದ ಕುಲದಿಂದಲೂ, ರೂಪದಿಂದಲೂ, ಸಂಪತ್ತಿನಿಂದಲೂ, ವಯಸ್ಸಿನ ಬೆಡಗಿನಿಂದಲೂ, ಏಕಭಾವವನ್ನು ಹೊಂದಿರುವ ಮನಸ್ಸಿನಿಂದಲೂ, ಸಮಾನವಾದ ಪ್ರೀತಿಯಿಂದಲೂ ಶೋಭಿಸುವ ತರುಣ ದಂಪತಿಗಳು ನವತಾರುಣ್ಯದಲ್ಲಿ ಒದಗಿಬಂದ ದಾಂಪತ್ಯಸುಖವನ್ನು ಅನುಭವಿಸುತ್ತಿದ್ದರು. ೯. ರಾಜಕುಮಾರ, ನಾನು ಏನು ಹೇಳಲಿ ? ಆ ಮಹಾತ್ಮರಾದ ತಾಯಿತಂದೆಗಳಿಗೆ ದುರದೃಷ್ಟವಂತಳಾದ, ಶರೀರವನ್ನು ತಾಳಿದ ಪಾಪಸಮೂಹದಂತಿರುವ, ದುಃಖಪಾತ್ರಳಾದ ನಾನು ಮಗಳಾಗಿ ಹುಟ್ಟಿದೆನು. ಗಂಧರ್ವರಾಜನಾದ ನನ್ನ ತಂದೆಯು ನನ್ನನ್ನು ನೋಡಿ ಬಹಳ ಪ್ರೀತಿಯಿಂದ ಮಹಾಶ್ವೇತೆಯೆಂದು ಹೆಸರಿಟ್ಟನು. ವ॥ ನನ್ನ ತಾಯಿತಂದೆಗಳಿಗೆ ಬಹಳ ಕಾಲ ಮಕ್ಕಳಿರಲಿಲ್ಲ. ಆದ್ದರಿಂದ ಮಗನಿಗಿಂತಲೂ ಮಿಗಿಲಾಗಿ ಪರಮಪ್ರೀತಿಯಿಂದ ನನ್ನನ್ನು ಸಲಹುತ್ತಿದ್ದರು. ಕೆಲವು ದಿವಸಗಳಲ್ಲಿ ಪ್ರೀತಿ, ದುಃಖ, ಶ್ರಮ, ಇವೊಂದರ

ಎಸೆವ ವಸಂತಮಾಸದೆ ವಸಂತನುಮಾಂತ ಕುಜಾತಪಲ್ಲವ
ಪ್ರಸರದಿನಾ ವಸಂತಸಮಯಂ ಕುಸುಮಾವಳಿಯಿಂದೆ ಪಲ್ಲವಂ
ಮಿಸುಪಳಿಮಾಲೆಯಿಂ ಕುಸುಮಮಂಜರಿ ರಂಜಿಸುವಂತಿರಲ್ವಿಜೃಂ
ಭಿಸಿದುದು ಯವ್ವನೋದಯವಿಲಾಸಾನುಕ್ರಮದಿಂ ಮದಂಗದೊಳ್        ೧೦

ವ॥  ತದನಂತರಂ

ಸ್ಮರರಾಗಾಂಧತ್ವದಿಂದಂ ಪಗಲೊಳಮಸತೀಕೇಳಿ ಪೊಣ್ಮಲ್ ವಿಯೋಗಾ
ತುರ ಜೀವಾಹಾರದಿಂದಂ ರತಿಪತಿ ತಣಿಯಲ್ ಪುಷ್ಪಚಾಪಾಸ್ತ್ರ ಟಂಕಾ
ರರವೋದ್ಭಿನ್ನ ಪ್ರಪಾಂಥಪ್ರಕರಹೃದಯರಕ್ತಾಂಬುಗಳ್ ಕೂಡೆ ಮಾರ್ಗಾಂ
ತರದೊಳ್ ಸೂಸುತ್ತಿರಲ್ ಬಂದುದು ಶಿಶಿರನೃಪೋದ್ಮೃತ್ಯುತಾಂತಂ ವಸಂತಂ ೧೧

ವ॥  ಅಂತು ಬಂದ ವಸಂತದೊಳುಳ್ಳಲರ್ದ ನವನಳಿನ ಕುಮುದ ಕುವಲಯ ಕಲ್ಹಾರಂಗಳಿಂ ಕಂಗೊಳಿಪಚ್ಛೋದಸರಸಿಗೆ ಜನನಿವೆರಸು ಮಜ್ಜನಕ್ಕೆಂದು ನಡೆತಂದು ನೋಟ್ಪಲ್ಲಿ ಶಿಖರಿರಾಜನಂದಿನಿ ಪೂಜಿಸಲೆಂದು ತಟಶಿಲಾತಲದೊಳ್ ಬರೆದ ಮೃಡನ ಪಡಿವರಿಜಂ ಕಂಡು ಕುಂಬಿಟ್ಟಾ ಸರಸ್ತೀರದೇಶದಲ್ಲಿ

ಅರಿವೂ ಇಲ್ಲದ ಬಾಲ್ಯವು ಕಳೆಯಲಾಗಿ ೧೦. ವಸಂತಋತುವು ಕಳಕಳಿಸುವ ಚೈತ್ರಮಾಸದಿಂದ ಶೋಭಿಸುವಂತೆಯೂ, ಚೈತ್ರಮಾಸವು ಮರದ ಚಿಗುರುಗಳಿಂದ ಶೋಭಿಸುವಂತೆಯೂ, ಚಿಗುರು ಹೂಗಳಿಂದ ಶೋಭಿಸುವಂತೆಯೂ, ಹೂವಿನ ಗೊಂಚಲು ಪ್ರಕಾಶಿಸುವ ದುಂಬಿಸಾಲುಗಳಿಂದ ಶೋಭಿಸುವಂತೆಯೂ ನನ್ನ ಶರೀರದಲ್ಲಿ ಹರೆಯದ ಬೆಡಗು ಕ್ರಮಕ್ರಮವಾಗಿ ಹೆಚ್ಚಿ ಶೋಭಿಸತೊಡಗಿತು. ವ॥ ಆಮೇಲೆ ೧೧. ಕಾಮಪರವಶತೆಯಿಂದ ಉಂಟಾದ ಅವಿವೇಕದಿಂದ ಹಗಲಿನಲ್ಲೂ ವ್ಯಭಿಚಾರಿಣಿಯರ ಚೆಲ್ಲಾಟವು ಹೆಚ್ಚುತ್ತಿರಲು, ವಿರಹಪೀಡಿತರಾದ ಜನರನ್ನು ಕಬಳಿಸಿ (ಕೊಂದು) ಮನ್ಮಥನು ತೃಪ್ತಿಹೊಂದುತ್ತಿರಲು, ಕಾಮಬಾಣಗಳ ಟಂಕಾರದಿಂದ ಸೀಳಿಹೋದ ಪ್ರಯಾಣಿಕರ ಎದೆಯ ರಕ್ತವು ದಾರಿಯಲ್ಲೆಲ್ಲಾ ಚೆಲ್ಲಾಡುತ್ತಿರಲು ಶಿಶಿರಋತುವೆಂಬ ರಾಜನಿಗೆ ಮೃತ್ಯುವಿನಂತಿರುವ ವಸಂತಋತುವು ಬಂದಿತು. ವ॥ ಹಾಗೆ ಬಂದ ವಸಂತಋತುವಿನಲ್ಲಿ ಚೆನ್ನಾಗಿ ಅರಳಿರುವ ಹೊಸದಾದ ನಳಿನ, ಕುಮುದ, ಕುವಲಯ, ಕಲ್ಹಾರವೆಂಬ ನೀರುಹೂವುಗಳಿಂದ ಶೋಭಿಸುವ ಅಚ್ಛೋದಸರೋವರಕ್ಕೆ ತಾಯಿಯ ಜೊತೆಯಲ್ಲಿ ಸ್ನಾನಮಾಡಲು ಬಂದು ನೋಡುತ್ತಿರಲಾಗಿ, ಪಾರ್ವತಿದೇವಿಯು ಪೂಜೆಗಾಗಿ ದಡದಲ್ಲಿರುವ ಹಾಸರೆಯ ಮೇಲೆ ಬರೆದಿರುವ ಪರಮೇಶ್ವರನ ಪ್ರತಿಕೃತಿಯನ್ನು ನೋಡಿ ನಮಸ್ಕರಿಸಿ ಆ ಸರೋವರದ ತೀರಪ್ರದೇಶದಲ್ಲಿ, (ಟಿ) ಕುಮುದ =ಬಿಳಿಕಮಲ. ಕುವಲಯ =ನೀಲಕಮಲ,

ಇದು ಮದಭೃಂಗಕೀರ್ಣಕುಸುಮೋತ್ಕರರಮ್ಯಲತಾವಿತಾನಮಿಂ
ತಿದು ಪಿಕತುಂಡಖಂಡಿತಗಳದ್ರಸಕೋಶ ರಸಾಲಸಾಲಮಿಂ
ತಿದು ಶಿಖಿನಾದ ಭೀತಫಣಿವರ್ಜಿತ ಚಂದನಭೂಜರಾಜಿಯೆಂ
ದೊದವಿದ ರಾಗದಿಂದವನಭೀಕ್ಷಿಸುತಾಂ ಚರಿಸುತ್ತಮಿರ್ಪಿನಂ ೧೨

ಇಳಿಕೈದುಟಿದಲರ್ಗಳ ಪರಿ
ಮಳಮಂ ಘ್ರಾಣೈಕತರ್ಪಣಂ ಮಿಳದಳಿಸಂ
ಕುಳಮೇನೆಸಗಿತ್ತೊ ವನಾ
ನಿಳನೀತಂ ಕುಸುಮಗಂಧಮೋರೊಂದೆಡೆಯಿಂ ೧೩

ವ॥ ಅಂತು ಬಂದ ಮಾನುಷಕುಲೋಚಿತಮುಮನಾಘ್ರಾತಪೂರ್ವಮುಮೆನಿಪ ಕುಸುಮಗಂಧಮನಾಘ್ರಾಣಿಸುತಮಿದೆತ್ತಣದೆಂದು ಕೌತುಕಂಮಿಗಲದಱ ಬಟ್ಟೆವಿಡಿದು

ಅರಸಂಚೆಗಳೊಡವರೆ ನೇ
ವುರದಿಂಚರಕೊಲ್ದು ಪೋಗಲಾಂ ಕಿಱಿದೆಡೆಯಿಂ
ಸರಸಿಗೆ ಮೀಯಲ್ಕೆಂದೈ
ತರುತಿರ್ದಂ ಮುಂದೆ ಮುನಿಕುಮಾರಕನೋರ್ವಂ ೧೪

ಕಲ್ಹಾರ =ಕೆಂಪುಕಮಲ) ೧೨. ಇದು ಮದವೇರಿದ ದುಂಬಿಗಳಿಂದ ವ್ಯಾಪ್ತವಾದ ಹೂವುಗಳಿಂದ ಸುಂದರವಾದ ಬಳ್ಳಿಗಳ ಪೊದರು. ಇದು ಕೋಕಿಲೆಗಳ ಕೊಕ್ಕುಗಳಿಂದ ಸೀಳಲ್ಪಟ್ಟು ರಸವು ಸೋರುತ್ತಿರುವ ಮೊಗ್ಗುಗಳಿಂದ ಕೂಡಿರುವ ಸಿಹಿಮಾವಿನ ಮರದ ಗುಂಪು. ಇದು ನವಿಲುಗಳ ಧ್ವನಿಯನ್ನು ಕೇಳಿ ಹೆದರಿರುವ ಹಾವುಗಳಿಂದ ಬಿಡಲ್ಪಟ್ಟಿರುವ ಗಂಧದಮರದ ಹಿಂಡಿಲು ಎಂದು ಬಹಳ ಆಸಕ್ತಿಯಿಂದ ಅವುಗಳನ್ನೆಲ್ಲಾ ನೋಡುತ್ತಾ ಸಂಚರಿಸುತ್ತಿರಲಾಗಿ, ೧೩. ಅಲ್ಲಿ ಒಂದು ಕಡೆಯಿಂದ ಮೂಗಿಗೆ ಪರಮಾನಂದವನ್ನುಂಟುಮಾಡುವ, ದುಂಬಿಗಳ ಗುಂಪಿನಿಂದ ಕೂಡಿಕೊಂಡಿರುವ ಕಾಡಿನ ಗಾಳಿಯಿಂದ ತರಲ್ಪಟ್ಟ ಹೂವಿನ ದಿವ್ಯ ಪರಿಮಳವು ಬೇರೆ ಹೂವುಗಳ ವಾಸನೆಯನ್ನೆಲ್ಲಾ ಮುಚ್ಚಿ ಹರಡುತ್ತಾ ಬರುತ್ತಿತ್ತು. ವ॥ ಹಾಗೆ ಬರುತ್ತಿರುವ ದೇವಲೋಕೋಚಿತವಾದ, ಹಿಂದೆಂದೂ ವಾಸನೆ ನೋಡದಿರುವ ಆ ಹೂವಿನ ಕಂಪನ್ನು ಆಘ್ರಾಣಿಸುತ್ತ ಇದು ಎಲ್ಲಿಂದ ಬಂತು ? ಎಂದು ಆಶ್ಚರ್ಯವು ಹೆಚ್ಚುತ್ತಿರಲು ಅದರ ದಾರಿಯನ್ನೇ ಹಿಡಿದು, ೧೪. ಕಾಲ್ಗಡಗದ ಇಂಪಾದ ಧ್ವನಿಗೆ ರಾಜಹಂಸಗಳು ಜೊತೆಯಲ್ಲಿ ಬರುತ್ತಿರಲು, ನಾನು ಮುಂದೆ ಹೋಗುತ್ತಿದ್ದೆನು. ಅಲ್ಲಿ ಸ್ವಲ್ಪ ದೂರದಲ್ಲಿ ಒಬ್ಬ ಮುನಿಕುಮಾರನು ಸ್ನಾನಮಾಡುವುದಕ್ಕಾಗಿ ಸರೋವರಕ್ಕೆ

ಗಿರಿಶನಯನಾನಲಾರ್ಚಿಯಿ
ನುರಿದಂ ಸ್ಮರನೆಂದು ದಂದುಗಂ ಮಿಗೆ ತಪಮಂ
ಚರಿಯಿಪ್ಪ ವಸಂತನವೊಲ್
ಕರಮೆಸೆದಂ ರಮ್ಯಗಾತ್ರನಾ ಮುನಿಪುತ್ರಂ ೧೫

ವ॥ ಮತ್ತಂ

ಪರಿಪೂರ್ಣಬಿಂಬದೊಂದೈ
ಸಿರಿಯಂ ಪಡೆಯಲ್ಕೆ ಬಯಸಿ ಪಿರಿದುಂ ವ್ರತಮಂ
ಧರಿಸಿದ ಗಿರಿಶಶಿರಶ್ಶೀ
ಖರೇಂದುವೆನೆ ಮೆಱೆದನಾ ಮುನೀಂದ್ರಕುಮಾರಂ ೧೬

ವ॥ ಅಂತುಮಲ್ಲದೆಯುಂ

ಜ್ವಲದನಲಶಿಖಾಂತರದೊಳ್
ಪೊಳೆವ ತಟಿಲ್ಲತೆಯೊಳುಷ್ಣಕರಮಂಡಳದೊಳ್
ಪೊಳೆದಪನೆನೆ ದೇಹದ್ಯುತಿ
ಬಳಸಿರೆ ನೆಱೆಯಱಿಯಲಾದುದಿಲ್ಲಾ ಮುನಿಯಂ ೧೭

ಸೊದರಂ ಪರ್ಚಿಸಿದಂತಿರೆ
ಬೆಡಂಗುವಡೆದೆಸೆವ ಮುನಿಯ ದೇಹದ್ಯುತಿಯಿಂ
ಕಡುಗವಿಲಮಾಗಿ ಕಾಂಚನ
ದಡವಿಯನನುಕರಿಸಿ ತದ್ವನಂ ಸೊಗಯಿಸುಗುಂ ೧೮

ಬರುತ್ತಿದ್ದನು. ೧೫. ಪರಮೇಶ್ವರನ ಹಣೆಗಣ್ಣಿನ ಕಿಚ್ಚಿನಿಂದ ಮನ್ಮಥನು ಸುಟ್ಟು ಹೋಗಲಾಗಿ ಒದಗಿದ ಮಿಗಿಲಾದ ದುಃಖದಿಂದ ಅವನನ್ನು ಬದುಕಿಸುವುದಕ್ಕಾಗಿ ತಪಸ್ಸುಮಾಡುತ್ತಿರುವ ಮನ್ಮಥನ ಗೆಳೆಯನಾದ ವಸಂತನಂತೆ ಸುಂದರಾಕಾರನಾದ ಮುನಿಕುಮಾರನು ಬಹಳ ಚೆನ್ನಾಗಿ ಶೋಭಿಸುತ್ತಿದ್ದನು. ವ॥ ಮತ್ತೆ ೧೬. ಸಂಪೂರ್ಣ ಬಿಂಬದ ಭಾಗ್ಯವನ್ನು ಪಡೆಯಬೇಕೆಂಬ ಒಂದು ಆಸೆಯಿಂದ ದೊಡ್ಡ ಮುನಿವ್ರತವನ್ನು ತಾಳಿರುವ ಪರಮೇಶ್ವರನ ತಲೆಯ ಮೇಲಿನ ಚಂದ್ರನೋ ಎಂಬಂತೆ ಆ ಋಷಿಪುತ್ರನು ಶೋಭಿಸಿದನು. ವ॥ ಅದಲ್ಲದೆ, ೧೭. ಶರೀರದ ಕಾಂತಿಯು ಅವನನ್ನು ಸುತ್ತಲೂ ಆವರಿಸಿ ಕೊಂಡಿದ್ದಿತು. ಆದರಿಂದ ಉರಿಯುತ್ತಿರುವ ಬೆಂಕಿಯ ಜ್ವಾಲೆಯ ಮಧ್ಯದಲ್ಲಿರುವವ ನಂತೆಯೂ, ಪ್ರಕಾಶಿಸುತ್ತಿರುವ ಬಳ್ಳಿಮಿಂಚುಗಳ ಒಳಗಿರುವವನಂತೆಯೂ ಕಾಣುತ್ತಿ ದ್ದನು. ಆದರಿಂದ ಅವನ ಸ್ವರೂಪವನ್ನು ಚೆನ್ನಾಗಿ ತಿಳಿದುಕೊಳ್ಳಲಾಗುತ್ತಿರಲಿಲ್ಲ. ೧೮. ದೀಪವನ್ನು ಹಚ್ಚಿಟ್ಟಂತೆ ಸೊಬಗನ್ನು ಪಡೆದು ಶೋಭಿಸುವ ಆ ಋಷಿಯ ಶರೀರದ ಕಾಂತಿಯಿಂದ ಹೆಚ್ಚಾದ ಪಿಂಗಳವರ್ಣವನ್ನು (ಹಳದಿಮಿಶ್ರಕೆಂಪು) ಹೊಂದಿರುವ ಆ

ಎಸೆವಂತಿರೆ ಗೋರೋಚನ
ರಸದಿಂದಂ ತೊಯ್ದ ನೇತ್ರಸೂತ್ರದ ತೆಱದಿಂ
ಮಿಸುಗುವ ಕೆಂಜೆಡೆಗಳ್ ರಂ
ಜಿಸುತಿರ್ದುವು ಭಾವಿಸಲ್ಕೆ ತನ್ಮುನಿವರನಾ ೧೯

ಮೊದಲೊಳ್ವಾಗ್ದೇವಿಯನೊಲಿ
ಸಿದ ತಿಲಕಂ ತಾನಿದೆನಿಪ ತಿಲಕಂ ನವಭ
ಸ್ಮದಿನೆಸೆಯಲದು ಪುಟಿಲ್ಗ
ಟ್ಟಿದ ಗಂಗೆಯ ಪೊನಲನಿನಿಸನನುಕರಿಸಿರ್ದಂ ೨೦

ವನಹರಿಣಕುಲಂ ನಿಜಲೋ
ಚನ ಶೋಭಾಸಂವಿಭಾಗಮಂ ಕೊಟ್ಟುದೊ ಲೋ
ಚನಮಾಲೆ ನಿಮಿರ್ದುದೊ ಮೇ
ಣೆನೆ ಮುನಿಪನ ದೀರ್ಘಲೋಚನದ್ವಯಮೆಸೆಗುಂ ೨೧

ನವಯೌವ್ವನರಾಗಂ ಚಿ
ತ್ತವನೆಂದುಂ ಪುಗಲೆ ಪಡೆಯದಿರ್ದುದೆಮೊ ಪೊಱಗೆಂ
ಬವೊಲೆಸೆದು ಪಕ್ವಬಿಂಬ
ಚ್ಛವಿಯುಂ ಮಾರ್ಕೊಳ್ವುದಧರಮಣಿ ಮುನಿವರನಾ ೨೨

ಕಾಡು ಚಿನ್ನದ ಕಾಡಿನಂತೆ ಸೊಗಸಾಗಿತ್ತು. ೧೯. ಆ ಮುನಿಕುಮಾರನ ಪ್ರಕಾಶಮಾನವಾದ ಕೆಂಜೆಡೆಗಳನ್ನು ನೋಡಿದರೆ ಗೋರೋಚನರಸದಿಂದ ತೋಯಿಸಿದ ಹತ್ತಿಯ ಮುಂಗಳ ಸೂತ್ರದಂತೆ ರಂಜಿಸುತ್ತಿದ್ದುವು. ೨೦. ಮೊದಲು ವಿದ್ಯಾದೇವಿಯನ್ನು ಒಲಿಸಿಕೊಳ್ಳುವ ಶುಭಸಮಯದಲ್ಲಿ ಧರಿಸಿರುವ (ಗಂಧದ) ತಿಲಕವೋ ಎಂಬಂತಿರುವ ಹೊಸದಾದ ವಿಭೂತಿಯ ತಿಲಕವು ಹಣೆಯಲ್ಲಿ ಶೋಭಿಸುತ್ತಿರಲು, ಅವನು ಮರಳುಸಾಲುಗಳಿಂದ ಕೂಡಿಕೊಂಡಿರುವ ಗಂಗಾನದಿಯ ಪ್ರವಾಹವನ್ನು ತಕ್ಕಮಟ್ಟಿಗೆ ಹೋಲುತ್ತಿದ್ದನು. ೨೧. ಆ ಮುನಿಕುಮಾರನ ದೀರ್ಘವಾದ ಕಣ್ಣುಗಳು ಬಹಳ ಸುಂದರವಾಗಿದ್ದುದರಿಂದ ಕಾಡಿನ ಜಿಂಕೆಗಳೆಲ್ಲವೂ ತಮ್ಮತಮ್ಮ ಕಣ್ಣುಗಳ ಸೌಂದರ್ಯದ ಒಂದೊಂದು ಅಂಶವನ್ನು ಕೊಟ್ಟಿರುವಂತೆಯೂ, ಕಣ್ಣುಗಳನ್ನೇ ಸೇರಿಸಿ ಕಟ್ಟಿರುವ ನೀಳವಾದ ಮಾಲಿಕೆಯಂತೆಯೂ ಶೋಭಿಸುತ್ತಿದ್ದುವು. ೨೨. ನವತಾರುಣ್ಯದಿಂದ ಉಂಟಾದ ರಾಗವು (ಅನುರಾಗ, ಕೆಂಪು) ಮನಸ್ಸನ್ನು ಪ್ರವೇಶಿಸಲು ಆಗದಿದ್ದುದರಿಂದ ಹೊರಗೆ ನಿಂತಿದೆಯೋ ಎಂಬಂತೆ ಅವನ ಪದ್ಮರಾಗಮಣಿಯಂತಿರುವ ಕೆಂದುಟಿಯು ಹಣ್ಣಾದ ತೊಂಡೆಹಣ್ಣಿನ ಕಾಂತಿಯನ್ನು ಪ್ರತಿಭಟಿಸುತ್ತಿತ್ತು. (ಅದರ ಕಾಂತಿಗಿಂತಲೂ ಮಿಗಿಲಾದ ಕಾಂತಿಯುಳ್ಳದ್ದಾಗಿತ್ತು) ಟಿ. ಕವಿಸಮಯದಲ್ಲಿ ಅನುರಾಗವು ಕೆಂಪುಬಣ್ಣವುಳ್ಳದ್ದು. ಅದರಿಂದ ಕೆಂದುಟಿಯನ್ನು ಹೊರಗಿ

ಮೊಗಮೀಸೆ ಬಾರದಿರ್ದಂ
ಸೊಗಯಿಪ ತನ್ಮುನಿಕುಮಾರವದನಾಬ್ಜಂ ದಿ
ಟ್ಟಿಗೆ ಚೆಲ್ವುವೆತ್ತು ಮಱಿದುಂ
ಬಗಳೆಱಗದ ಕನಕಕಮಲಮಂ ನೆನೆಯಿಸುಗುಂ ೨೩

ಅದು ಮದನಚಾಪಗುಣಮಂ
ತದು ಪರಮತಪಸ್ತಟಾಕಕಮಲಿನಿಯೊಳಗು
ಣ್ಮಿದ ನವಮೃಣಾಳಮೆನಲೆಸೆ
ದುದು ಮುನಿಗತ್ಯಂತಧವಳಮೆನಿಪುಪವೀತಂ ೨೪

ಕರತಳಮೊಂದಱೊಳ್ ಮಣಿಕಮಂಡುಲು ನಾಳಸಮೇತಮಪ್ಪ ಕೇ
ಸರಫಲದಂತಿರಿರ್ದುದು ಮನೋಜವಿನಾಶದಿನಟ್ಟ ತನ್ಮನೋ
ಹರಿಯು ಪೊದಟ್ಟ ಕಣ್ಬನಿಗಳಂತಮಲಸ್ಫಟಿಕಾಕ್ಷಮಾಲೆ ಸುಂ
ದರತರಮಾದುದೊಂದು ಕರಪಲ್ಲವದೊಳ್ ಮುನಿಪಾಗ್ರಗಣ್ಯನಾ ೨೫

ನಿರವದ್ಯ ನಿಖಿಲವಿದ್ಯಾ
ತರಂಗಿಣೀಸಂಗದಲ್ಲಿ ತೋಱುವ ಸುಟಿಯಂ
ತಿರೆ ಸುರುಳ್ದು ಮುನಿಕುಮಾರನ
ಸುರುಚಿರಗಂಭೀರನಾಭಿಮಂಡಲಮೆಸೆಗುಂ ೨೬

ರುವ ಅನುರಾಗವೆಂದು ವರ್ಣಿಸಿದ್ದಾನೆ. ೨೩. ಇನ್ನೂ ಮೀಸೆ ಮೂಡದಿರುವ ಅವನ ತಾವರೆಯಂದದ ಮುಖವು ಅಂದವಾಗಿ ಇನ್ನೂ ಮರಿದುಂಬಿಗಳು ಎರಗದಿರುವ ಹೊಂದಾವರೆಯನ್ನು ನೆನಪಿಗೆ ತರುತ್ತಿತ್ತು. ಟಿ॥ ಇಲ್ಲಿ ಆಗತಾನೆ ಅರಳುತ್ತಿರುವ ಹೊಂದಾವರೆ ಎಂದು ತಿಳಿಯಬೇಕು. ೨೪. ಆ ಮುನಿಕುಮಾರನ ಬಹಳ ಶುಭ್ರವಾದ ಯಜ್ಞೋಪವೀತವು ಮನ್ಮಥನ ಬಿಲ್ಲಿನ ನಾಣಿನಂತೆಯೂ, ಮಹಾತಪಸ್ಸೆಂಬ ಕೆರೆಯಲ್ಲಿ ಬೆಳೆದಿರುವ ತಾವರೆಯ ದಂಟಿನ ದಾರಗಳಂತೆಯೂ ಶೋಭಿಸುತ್ತಿತ್ತು. ೨೫. ಆ ಮುನೀಶ್ವರನ ಒಂದು ಕೈಯಲ್ಲಿದ್ದ ಸ್ಫಟಿಕಮಯವಾದ ಕಮಂಡಲು ತೊಟ್ಟಿನಿಂದ ಕೂಡಿಕೊಂಡಿರುವ ವಕುಳಫಲದಂತೆ ಕಾಣುತ್ತಿತ್ತು. ಚಿಗುರಿನಂತೆ ಮೃದುವಾದ ಮತ್ತೊಂದು ಕೈಯಲ್ಲಿದ್ದ ಸ್ವಚ್ಛವಾದ ಸ್ಫಟಿಕದ ಜಪಸರವು ಮನ್ಮಥನ ವಿನಾಶದಿಂದ ಅಳುತ್ತಿರುವ ರತೀದೇವಿಯ ಕಣ್ಣುಗಳಿಂದ ಉದುರುತ್ತಿರುವ ಕಂಬನಿಗಳಂತೆ ರಮಣೀಯವಾಗಿ ಕಾಣುತ್ತಿತ್ತು. ೨೬. ಆ ಮುನಿಕುಮಾರನ ಸುರಳಿಸುತ್ತಿಕೊಂಡಿರುವ ಸುಂದರವಾದ ಹಾಗೂ ಆಳವಾದ ಹೊಕ್ಕಳು ಪರಿಶುದ್ಧವಾದ ಸಮಸ್ತ ವಿದ್ಯೆಗಳೆಂಬ ನದಿಗಳ ಸಂಗಮದಲ್ಲಿ

ಇಂಬಾಗಿರೆ ಬಾಂದೊಱೆಯೊಳ
ಲುಂಬಿದ ಮಂದಾರವಲ್ಕವಿರಚಿತ ನವದಿ
ವ್ಯಾಂಬರವಾ ಮುನಿವರನೊಳ್
ಬಿಂಬಿಸಿತು ಜರಚ್ಚಕೋರಲೋಚನರುಚಿರಂ ೨೭

ವ॥ ಅಂತುಮಲ್ಲದೆಯುಂ ಬ್ರಹ್ಮಚರ್ಯಕ್ಕಲಂಕಾರಮುಂ ಧರ್ಮಕ್ಕೆ ನವಯವ್ವನಮುಂ ಸರಸ್ವತಿಗೆ ಲೀಲಾವಿಲಾಸಮುಂ ವಿದ್ಯಾಪ್ರತತಿಗೆ ಸ್ವಯಂವರಪತಿಯುಂ ಸಮಸ್ತಶ್ರುತಿಗಳಿಗೆ ಸಂಕೇತನಿಕೇತನಮುಮೆನಿಸಿದನಲ್ಲದೆಯುಂ

ತನಗನುರೂಪಮೆಂಬಿನೆಗವೊರ್ವ ಕುಮಾರತಪಸ್ವಿ ದೇವತಾ
ರ್ಚನೆಗೆ ವನಕ್ಕೆ ಬಂದು ಪೊಸವೂಗಳನರ್ತಿಯೊಳಾಯ್ದು ಕೊಯ್ದು ಬೆ
ನ್ನನೆ ಬರಲೀ ವನಾಂತರ ಸರೋವರದಲ್ಲಿಗೆ ಮೀಯಲೆಂದು ಮೆ
ಲ್ಲನೆ ಬರುತಿರ್ದ ತನ್ಮುನಿಕುಮಾರನನಾಂ ಬಿಡೆ ನೋಡಿದೆಂ ನೃಪಾ ೨೮

ವ॥ ಅಂತು ನೋಟ್ಪನ್ನೆಗಂ

ಸ್ಮರಕಾಂತಾರತಘರ್ಮಬಿಂದುಚಯಮೋ ಮೀನಾಂಕಮತ್ತೇಭಚಾ
ಮರಮೋ ನಂದನಲಕ್ಷ್ಮಿಯೊಳ್ನಗೆಯೊ ತಾಂ ಮಂದಾನಿಲಂ ತೆಂಕಣಿಂ
ಬರೆ ಚೈತ್ರಂ ಕುಡುವರ್ಘ್ಯಲಾಜತತಿಯೋ ಪೇಟಿಂಬಿನಂ ಪುಷ್ಪಮಂ
ಜರಿಯಂ ತನ್ಮುನಿಕರ್ಣಪೂರಕಮನತ್ಯಾಶ್ಚರ್ಯದಿಂ ನೋಡಿದೆಂ ೨೯

ತೋರುವ ಸುಳಿಯಂತೆ ಶೋಭಿಸುತ್ತಿತ್ತು. ೨೭. ದೇವಲೋಕದ ಮಂದಾರವೃಕ್ಷದ ನಾರುಗಳಿಂದ ನಿರ್ಮಿಸಿರುವ ಮತ್ತು ಹೊಸದಾಗಿರುವ, ದೇವಗಂಗಾನದಿಯಲ್ಲಿ ಒಗೆದು ಮಡಿಮಾಡಿರುವ, ಮುದಿಚಕೋರಪಕ್ಷಿಯ ಕಣ್ಣಿನಂತೆ ಸುಂದರವಾದ ಅತ್ಯುತ್ತಮವಾದ ಪಂಚೆಯು ಒಪ್ಪವಾಗಿ ಶೋಭಿಸುತ್ತಿತ್ತು. ವ॥ ಅದಲ್ಲದೆ ಅವನು ಬ್ರಹ್ಮಚರ್ಯ ವ್ರತಕ್ಕೆ ಅಲಂಕಾರರೂಪನಾಗಿಯೂ, ಧರ್ಮಕ್ಕೆ ಹೊಸಹರೆಯದಂತೆಯೂ, ಸರಸ್ವತಿಗೆ ವಿನೋದದ ಬೆಡಗಿನಂತೆಯೂ, ವಿದ್ಯೆಗಳೆಂಬ ಲಲನೆಯರಿಗೆ ಸ್ವಯಂವರದ ಪತಿಯಂತೆಯೂ, ಸಮಸ್ತ ವೇದಗಳಿಗೂ ಸಂಕೇತಸ್ಥಾನದಂತೆಯೂ (ಸೇರಲು ಗೊತ್ತುಮಾಡಿಕೊಂಡಿರುವ ಸ್ಥಳ) ಇದ್ದನು. ೨೮. ಅವನಿಗೆ ಸರಿಸಮಾನನಾದ ಮತ್ತೊಬ್ಬ ತರುಣ ಮುನಿಯು ದೇವರ ಪೂಜೆಗಾಗಿ ಈ ಕಾಡಿಗೆ ಬಂದು ಹೊಸಹೂವುಗಳನ್ನು ಆಸೆಯಿಂದ ಆರಿಸಿ ಕೊಯ್ಯುತ್ತಾ ಅವನ ಹಿಂದೆಯೇ ಬರುತ್ತಿದ್ದನು. ಎಲೈ ರಾಜನೆ, ಹೀಗೆ ಈ ಕಾಡಿನ ಒಳಗಿರುವ ಸರೋವರಕ್ಕೆ ಸ್ನಾನಕ್ಕಾಗಿ ಮೆಲ್ಲನೆ ಬರುತ್ತಿದ್ದ ಆ ಋಷಿಕುಮಾರನನ್ನು ನಾನು ಬಿಡದೆ ನೋಡಿದೆನು. ವ॥ ಹಾಗೆ ನೋಡುತ್ತಿರಲಾಗಿ ೨೯. ಆಗ ನಾನು ಆ ಮುನಿಯು ಕಿವಿಯ ಮೇಲೆ ಇಟ್ಟುಕೊಂಡಿದ್ದ ಹೂವಿನಗೊಂಚಲನ್ನು ಬಹಳ ಆಶ್ಚರ್ಯದಿಂದ ನೋಡಿದೆನು. ಅದು ಮನ್ಮಥನ ಮಡದಿಯಾದ ರತಿಯ ಸಂಭೋಗ ಕಾಲದಲ್ಲಿ ಉಂಟಾದ ಬೆವರುಹನಿಗಳ ಗುಂಪಿನಂತೆಯೂ, ಮನ್ಮಥನೆಂಬ ಮದ್ದಾನೆಯ

ಗುಂಜನ್ಮದಾಳಿಮಾಲಾ
ಮಂಜರಿ ಬೆನ್ನಟ್ಟಬಂದ ನವಸೌರಭಮಂ
ರಂಜಿಸಿ ತೋಱುವ ಸುಮನೋ
ಮಂಜರಿಯಿಂ ಬಂದುದೆಂದು ಪರಿಭಾವಿಸಿದೆಂ ೩೦

ವ॥ ಅಂತು ಭಾವಿಸುತ್ತುಂ ಆ ಮುನಿಕುಮಾರವದನೇಂದುಬಿಂಬಮಂ ನೋಡಿ

ಸಿರಿ ನಲವಿಂದಮಿರ್ಪ ನೆಲೆ ಕಣ್ಗಳ ಪರ್ವಮೆನಿಪ್ಪ ಪಂಕಜೋ
ತ್ಕರಮುಮನಿಂದುಮಂಡಲಮುಮಂ ಮೊದಲೊಳ್ ಸಮೆದಬ್ಜಜಂ ಮನೋ
ಹರಮೆನೆ ಮಾಡಿದೀ ಮೊಗದ ಪೋಲ್ವೆಗೆ ಮುನ್ನೆಗಟಲ್ ತಗುಳ್ಚಿ ಬಿ
ತ್ತರಿಸಿದನಲ್ಲದಿಂತು ಸಮವಸ್ತುಗಳಂ ಪಡೆವಂತು ಗಾಂಪನೇ ೩೧

ವ॥ ಮತ್ತಂ

ಕೇಳಿ ಸುಷುಮ್ನೆಯೆಂಬ ಕರದಿಂ ಗಡ ಚಂದ್ರಕಲಾಕಲಾಪಮಂ
ಕಾಲದೊಳಂಶುಮಾಲಿ ತೆಗೆದೀಂಟುವನೆಂಬುದಸತ್ಯಮಾ ಪ್ರಭಾ
ಜಾಲಕಮೆಲ್ಲಮೀ ತನುವಿನೊಳ್ ಪುಗುತಿರ್ಪುದು ತಪ್ಪದಲ್ಲದಿಂ
ತೀ ಲಲಿತಾಂಗಮೀ ತಪದೊಳಿಂತಿರೆ ಕಾಂತಿಯನಪ್ಪುಕೆಯ್ಗುಮೇ ೩೨

ಚಾಮರದಂತೆಯೂ, ವನಲಕ್ಷ್ಮಿಯ ಮಂದಹಾಸದಂತೆಯೂ, ಮಂದಮಾರುತವು ದಕ್ಷಿಣದ ಕಡೆಯಿಂದ ಬರಲಾಗಿ ಚೈತ್ರಮಾಸವು ನೀಡುವ ಸ್ವಾಗತಕಾಲದ ಅರ್ಘ್ಯದಲ್ಲಿರುವ ಅರಳುಗಳಂತೆಯೂ ಶೋಭಿಸುತ್ತಿತ್ತು. ೩೦. ಮೊರೆಯುತ್ತಿರುವ ಹಾಗೂ ಮದವೇರಿದ ದುಂಬಿಸಾಲುಗಳ ತಂಡವು ಬೆನ್ನಟ್ಟಿಕೊಂಡು ಬಂದ ಹೊಸಕಂಪು ಈ ಹೂವಿನ ಗೊಂಚಲಿನಿಂದಲೇ ಬಂದಿರಬೇಕೆಂದು ನಾನು ನಿಶ್ಚೈಸಿದೆನು. ವ॥ ಹಾಗೆ ಆಲೋಚಿಸುತ್ತಾ ಆ ಮುನಿಕುಮಾರನ ಮುಖಚಂದ್ರನನ್ನು ನೋಡಿ ೩೧. ಲಕ್ಷ್ಮಿಯು ಸಂತೋಷದಿಂದ ವಾಸಮಾಡುವ ಕಮಲಗಳನ್ನೂ, ಕಣ್ಣುಗಳಿಗೆ ಹಬ್ಬವನ್ನುಂಟುಮಾಡುವ ಚಂದ್ರಮಂಡಲವನ್ನೂ ಬ್ರಹ್ಮನು ಮೊದಲು ಸೃಷ್ಟಿಮಾಡಿ ಆಮೇಲೆ ಈ ಸುಂದರವಾದ ಮುಖವನ್ನು ಸೃಷ್ಟಿಮಾಡಿದ್ದಾನೆ. ಹೀಗೆ ಒಂದೇ ಬಗೆಯ ವಸ್ತುಗಳನ್ನು ಮತ್ತೆ ಮತ್ತೆ ಮಾಡುವುದಕ್ಕೆ ಬ್ರಹ್ಮನೇನೂ ದಡ್ಡನಲ್ಲ. ಈ ಮುಖವನ್ನು ಸೃಷ್ಟಿಮಾಡುವುದಕ್ಕೆ ಮೊದಲು ಮಾದರಿಗಾಗಿ ಅವುಗಳನ್ನು ನಿರ್ಮಿಸಲು ಪ್ರಾರಂಭಿಸಿ ಚೆನ್ನಾಗಿ ಅಭ್ಯಾಸ ಮಾಡಿಕೊಂಡನು. ಕೈಕುದುರಿದ ಮೇಲೆ ಈ ಮುನಿಕುಮಾರನ ಮುಖವನ್ನು ಸೃಷ್ಟಿ ಮಾಡಿದ್ದಾನೆ. (ಟಿ॥ ಇವನ ಮುಖವು ಅವೆರಡಕ್ಕಿಂತ ಹೆಚ್ಚು ರಮಣೀಯವಾಗಿದೆ ಎಂದು ತಾತ್ಪರ್ಯ) ವ॥ ಮತ್ತು ೩೨. "ಸೂರ್ಯನು ಕೃಷ್ಣಪಕ್ಷದಲ್ಲಿ ಸುಷುಮ್ನೆ ಎಂದು ಹೆಸರುಳ್ಳ ತನ್ನ ಕಿರಣದಿಂದ ಚಂದ್ರನ ಕಲೆಗಳನ್ನು ಕುಡಿಯುತ್ತಾನೆ," ಎಂದು ಪುರಾಣಗಳಲ್ಲಿ ಹೇಳಿದೆಯಲ್ಲವೆ ? ಅದು ಸುಳ್ಳು. ನಾನು ಹೇಳುವುದನ್ನು ಕೇಳಿ. ಆ ಚಂದ್ರನ ಕಾಂತಿಗಳೆಲ್ಲವೂ ಈ ಮುನಿಕುಮಾರನ ಶರೀರದಲ್ಲಿ ಸೇರಿಕೊಳ್ಳುತ್ತಿವೆ. ಇದ್ದು

ವ॥ ಎಂದು ರೂಪೈಕಪಕ್ಷಪಾತಮಂ ಭಾವಿಸುತ್ತಮಿರ್ಪುದುಂ

ನವಯುವ್ವನದೊಳ್ ಗುಣದೋ
ಷವಿಚಾರಮನಿಂತು ಮಾಡಲೀಯದ ಭಾವೋ
ದ್ಭವನಿಂ ಪರವಶೆಯಾದೆಂ
ನವಕುಸುಮಾಸವದೆ ಸೊಕ್ಕಿದಳಿನಿಯು ತೆಱದಿಂ ೩೩

ವ॥ ಅನಂತರಮುಸಿರೊಡನೆಮೆಯಿಕ್ಕುವುದಂ ಮಱೆದು ಪರಿದು ಪತ್ತಲವ್ವಳಿಸಿ ಕಳವಳಿಸಿ ಕೊಂಕಿ ಬಳಸುವೆಳಸುವಲರ್ಗಂಗಳಿಂ ತದ್ರೂಪಲಾವಣ್ಯರಸಮನಟ್ಟಳಿಂ ಬರೆ ಪೀರ್ವಂತೆ ನಿನಗೊಳಗಾದೆನೆಂಬಂತೆ ಮನಮನಂಗಯ್ಯಲಿಕ್ಕಿ ತೋರ್ಪೆನೆಂಬಂತೆ ತನ್ಮಯಮಾಗಲೊಡರಿಪೆನೆಂಬಂತೆ ಮದನನಲೆದಪಂ ಕಾಯೆನ್ನನೆಂಬಂತೆ ಶರಣ್ಬುಗುವೆನೆಂಬಂತೆ ಮನದೊಳೆಡೆಗುಡೆಂದಳುಪಂ ತೋಱುವಂತೆ ಕುಲಹೀನ ಕನ್ಯಕಾಜನೋಚಿತಮತಿಲಜ್ಜಾಕರಮನೋರಥಮಿದೆನಗೆ ತಕ್ಕುದಲ್ಲದುದಂ ನೆಗೞ್ದಪೆನೆಂದಱಿವೆನಾಗಿಯುಂ ಅತ್ಯಾಸಕ್ತಿಯಿಂ ಮಱವಟ್ಟರಂತೆಯುಂ ಚಿತ್ರಿಸಿದರಂತೆಯುಂ ಮೂರ್ಛೆವೋದರಂತೆಯುಂ ಆರಾನುಂ ಪಿಡಿಕಿವೆತ್ತರಂತೆಯುಂ ಮಿಡುಕದೆ ನೋಡುತಿರ್ದೆನನ್ನೆಗಂ

ಖಂಡಿತ. ಹಾಗಿಲ್ಲದಿದ್ದರೆ ಈ ಸುಂದರವಾದ ಶರೀರವು ತಪಸ್ಸುಮಾಡುವ ಈ ಸಮಯದಲ್ಲೂ ಇಷ್ಟು ಕಾಂತಿಯನ್ನು ಹೊಂದುತ್ತದೆಯೆ ? ವ॥ ಎಂದು ಅವನ ಸೌಂದರ್ಯವೊಂದರಲ್ಲೇ ಮುಖ್ಯವಾಗಿ ಅಭಿಮಾನವನ್ನು ಹೊಂದಿರಲಾಗಿ ೩೩. ಹೀಗೆ ಹೊಸ ಹರಯದಲ್ಲಿ ಗುಣದೋಷವಿಚಾರವನ್ನು ಮಾಡಲು ಅವಕಾಶವನ್ನು ಕೊಡದ ಮನ್ಮಥನಿಂದ ಹೊಸಹೂವಿನ ರಸವನ್ನು ಕುಡಿದು ಸೊಕ್ಕಿದ ಹೆಣ್ಣುದುಂಬಿಯಂತೆ ಪರವಶಳಾದೆನು. ವ॥ ಬಳಿಕ ಉಸಿರು ಬಿಡುವುದರೊಂದಿಗೆ ರೆಪ್ಪೆ ಹೊಡೆಯುವುದನ್ನೂ ಮರೆತು ಮೇಲೆ ಬೀಳಲು ಆತುರಪಟ್ಟು ಕಳವಳಗೊಂಡು ವಕ್ರವಾಗಿ ಅವನನ್ನು ಸುತ್ತುಗಟ್ಟಿ ನೋಡಲು ಆಸೆಪಡುವ ಕಣ್ಣುಗಳಿಂದ ಅವನ ಸೌಂದರ್ಯರಸವನ್ನು ಬಹಳ ಆಸಕ್ತಿಯಿಂದ ಅತ್ಯಧಿಕವಾಗಿ ಕುಡಿಯುವಂತೆಯೂ, ನಿನಗೆ ನಾನು ಅಧೀನಳಾಗಿದ್ದೇನೆ ಎಂಬಂತೆಯೂ, ಮನಸ್ಸನ್ನು ಅಂಗೈಯಲ್ಲಿಟ್ಟುಕೊಂಡು ತೋರಿಸುತ್ತೇನೆ ಎಂಬಂತೆಯೂ, ತನ್ಮಯತೆಯನ್ನು ಪಡೆಯಲು ಪ್ರಯತ್ನಿಸುವಂತೆಯೂ, "ಮನ್ಮಥನು ಬಾಧಿಸುತ್ತಿದ್ದಾನೆ, ನನ್ನನ್ನು ಕಾಪಾಡು" ಎಂಬಂತೆಯೂ, ನಿನಗೆ ಶರಣಾಗತಳಾಗಿದ್ದೇನೆ ಎಂಬಂತೆಯೂ, ನಿನ್ನ ಮನಸ್ಸಿನಲ್ಲಿ ನನಗೆ ಸ್ಥಾನವನ್ನು ಕೊಡು ಎಂದು ಅಪೇಕ್ಷೆಯನ್ನು ತೋರಿಸುವಂತೆಯೂ, ಕೇವಲ ಕೀಳುಮಟ್ಟದ ಹುಡುಗಿಯರಿಗೆ ಮಾತ್ರ ಅರ್ಹವಾದ ಬಹಳ ನಾಚಿಕೆಯನ್ನುಂಟುಮಾಡುವ ಈ ಅಪೇಕ್ಷೆಯು ನನಗೆ ತಕ್ಕುದಲ್ಲ, ಇಂತಹ ಅಯೋಗ್ಯ ಕೆಲಸವನ್ನು ಮಾಡುತ್ತಿದ್ದೇನೆಂದು ತಿಳಿದುಕೊಂಡಿದ್ದರೂ ಅತ್ಯಾಸಕ್ತಿಯಿಂದ ಸ್ತಂಭಿತರಾದವರಂತೆಯೂ, ಚಿತ್ರದಲ್ಲಿ ಬರೆಯಲ್ಪಟ್ಟವರಂತೆಯೂ, ಮೂರ್ಛೆಗೊಂಡವ

ಪೂಗಣೆ ನಾಂಟಿದಂತೆ ತನು ಕಂಪಿಸುತಿರ್ದುದು ಘರ್ಮವಾರಿಯಿಂ
ದಾಗಳೆ ಕರ್ಚಿದಂತೆ ನೆಱಿಪೋದುದು ಲಜ್ಜೆ ಮರಳ್ದು ತನ್ಮಹಾ
ಭಾಗನ ರೂಪನೀಕ್ಷಿಸುವವೋಲ್ ಪುಳಕಂ ತಲೆದೋಱಿದತ್ತು ಕಾ
ಮಾಗಮನಕ್ಕೆ ಪಕ್ಕುಗೊಡುವಂತೆವೊಲಿರ್ದುದು ಸುಯ್ ನಿರಂತರಂ ೩೪

ಇವು ಮೊದಲಾಗೊಮ್ಮೆಯೆ ಮದ
ನವಿಕಾರಂ ಪಲವುಮಾಗಲಾಗುತ್ತಿರೆ ಮು
ನ್ನವನಱಿಯದವಳೆನತ್ಯಭಿ
ನವಸಾಧ್ವಸಮಾಗಲಳ್ಕಿ ತಳವೆಳಗಾದೆಂ ೩೫

ವ॥ ಅಂತು ಬೆಗಡುಗೊಂಡು

ನಿಯತೇಂದ್ರಿಯನೊಳ್ ತೇಜೋ
ಮಯನೊಳ್ ರೂಪೈಕಪಕ್ಷಪಾತದೆ ನೆಱಿ ನೀ
ತಿಯನುಟಿದು ಮುನಿಪನೊಳ್ ನಿ
ರ್ಭಯನಂಗಜನೆನ್ನನಿಂತಿರಲ್ ಸೋಲಿಕುಮೋ ೩೬

ಕೂರ್ತಂಗನೆಯರ್ ನೀತಿಯ
ವಾರ್ತೆಯುಮಂ ಬಿಸುಟು ಪತ್ತುವರ್ ಪತ್ತಲೊಡಂ
ಧೂರ್ತೆಯಿವಳೆಂಗುಮೋ ಎಂ
ತಾರ್ತಪೆನಿಲ್ಲಾವತೆಱಿದೊಳಂ ನಿಲೆ ಪಿಡಿಯಲ್ ೩೭

ರಂತೆಯೂ, ಯಾರಿಂದಲೋ ಹಿಡಿಯಲ್ಪಟ್ಟವರಂತೆಯೂ ಅಲುಗಾಡದೆ ಅವನನ್ನೇ ನೋಡುತ್ತಿದ್ದೆನು. ೩೪. ಮನ್ಮಥನ ಪುಷ್ಪಬಾಣವು ನಾಟಿದಂತೆ ನನ್ನ ಶರೀರವು ನಡುಗುತ್ತಿತ್ತು. ಬೆವರಿನಿಂದ ಆಗಲೇ ಚೆನ್ನಾಗಿ ತೊಳೆಯಲ್ಪಟ್ಟಂತೆ ನಾಚಿಕೆಯು ಹೊರಟು ಹೋಯಿತು. ಆ ಮಹಾಪುರುಷನ ಸೌಂದರ್ಯವನ್ನು ನೋಡುವುದಕ್ಕೋ ಎಂಬಂತೆ ರೋಮಾಂಚನವು ತಲೆಯಿಕ್ಕಿತು. ಮನ್ಮಥನ ಆಗಮನಕ್ಕೆ ಅವಕಾಶಮಾಡಿಕೊಡುವುದಕ್ಕೋ ಎಂಬಂತೆ ಒಳಗಿನಿಂದ ನಿಟ್ಟುಸಿರು ಒಂದೇ ಸಮನೆ ಹೊರಕ್ಕೆ ಬರುತ್ತಿತ್ತು. (ಒಳಗೆ ತುಂಬಿದ್ದ ಉಸಿರೆಲ್ಲ ಹೊರಕ್ಕೆ ಬಂದರೆ ಒಳಗೆ ಖಾಲಿಯಾಗಿ ಕಾಮನ ಪ್ರವೇಶಕ್ಕೆ ಅನುಕೂಲವಾಗುತ್ತದೆ ಎಂದು ಅಭಿಪ್ರಾಯ) ೩೫. ಇವು ಪ್ರಥಮವಾಗಿ ಒಟ್ಟಿಗೆ ಅನೇಕ ರೀತಿಯ ಕಾಮವಿಕಾರಗಳು ಉಂಟಾಗುತ್ತಿರಲು, ಇದಕ್ಕೆ ಮೊದಲು ಅದರ ಅನುಭವವೇ ಇಲ್ಲದವಳಾಗಿದ್ದ ನಾನು ಹೊಸದಾಗಿ ಭಯವುಂಟಾಗಲು ಸಂಕೋಚಪಟ್ಟು ತಲ್ಲಣಿಸಿಹೋದೆನು. ವ॥ ಹೀಗೆ ಭಯಪಟ್ಟು ೩೬. ಭಯವೇ ಇಲ್ಲದ ಮನ್ಮಥನು ಜಿತೇಂದ್ರಿಯನಾದ ಮತ್ತು ಬ್ರಹ್ಮತೇಜಸ್ಸಿನಿಂದ ತುಂಬಿರುವ ಈ ಮಹರ್ಷಿಯಲ್ಲಿ ಕೇವಲ ಸೌಂದರ್ಯದ ಒಂದು ಅಭಿಮಾನದಿಂದ ನೀತಿಯನ್ನು ಸಂಪೂರ್ಣವಾಗಿ ಪರಿತ್ಯಜಿಸಿ ಈ ರೀತಿ ನಾನು ಮನಸೋಲುವಂತೆ ಮಾಡಿಬಿಡಬಹುದೆ ? ೩೭. ಹೀಗೆ ನಾನು ಮೇಲೆ ಬಿದ್ದುಹೋದರೆ ಆಗ ಅವನು "ಹೆಂಗಸರಿಗೆ ಪ್ರೀತಿಯುಂಟಾಗಿಬಿಟ್ಟರೆ ನೀತಿಯ ವಿಚಾರ

ಪಲಬರ್ ಕಾಂತೆಯರೊಲ್ದು ಪೋದರೊಳರೆಂತುಂ ಕಾಂತರೊಳ್ ಬೇಟವ
ಗ್ಗಲಿಸಲ್ ಕಾಣದೆ ಲಜ್ಜೆಗೆಟ್ಟರೊಳರಿಂತೀ ಲೋಕದೊಳ್ ರೂಪುಗಾ
ಣಲೊಡಂ ತೊಟ್ಟನೆ ಲಜ್ಜೆಗೆಟ್ಟಱಿವುಗೆಟ್ಟೆನ್ನಂತೆ ಕಣ್ಗೆಟ್ಟು ಪೇ
ಟೊಲವೀದಿಂತೆರ್ದೆಗೆಟ್ಟರಾರೆನುತುಮತ್ಯೌತ್ಸುಕ್ಯಮಂ ತಾಳ್ದಿದೆಂ ೩೮

ವ॥ ಅಂತಾಶ್ಚರ್ಯಮಂ ತಳೆದು ನನ್ನ ನಾನೆ ಸಂತೈಸಿ

ಎನ್ನೆವರಂ ಸಚೇತನೆಯೆನೆನ್ನೆವರಂ ಲಘುವಾಗದಿರ್ಪೆನೋ
ಅನ್ನೆಗಮೀಗಳೀಯೆಡೆಯಿನಾಂ ತೊಲಗಿರ್ಪುದು ಕಜ್ಜಮಲ್ಲದಂ
ದೆನ್ನಯ ಮನ್ಮಥೋಚಿತವಿಕಾರಮನೀಕ್ಷಿಸಿ ಸೋಲ್ತಳಕ್ಕಟಾ
ಎನ್ನದೆ ಶಾಪಮಂ ಕುಡುವನಂತುಟೆ ಕೋಪಿಗಳಲ್ತೆ ತಾಪಸರ್ ೩೯

ವ॥ ಎಂದು ಪೋಗಲುದ್ಯೋಗಂಗೆಯ್ದು ನಿಖಿಳಜನಪೂಜಾರ್ಹರನವಜ್ಞೆಗೆಯ್ಯಲಾಗದೆಂದು

ತೊಳಗುವ ಚೆನ್ನಪೂಗಳಲಕಾವಳಿಯೊಳ್ ಮಿಱುಗಲ್ ಕಪೋಲಮಂ
ಡಳತಳದೊಳ್ ತೆಱಂಬೊಳೆಯೆ ಕೋಮಲಪಲ್ಲವಕರ್ಣಪೂರ ಮಂ
ಜುಳಮಣಿಕುಂಡಲಂ ಪೆಗಲೊಳಾಡೆ ಮರಳ್ದಿವೆಯಿಕ್ಕದಾಂ ಮನಂ
ಗೊಳಿಪ ಮುನೀಂದ್ರನಾನನಮನೀಕ್ಷಿಸುತಂ ಪೊಡವಟ್ಟೆನಕ್ಕಱಿಂ ೪೦

ವನ್ನೆಲ್ಲಾ ಬಿಸಾಡಿ ಗಂಟುಬೀಳುತ್ತಾರೆ. ಇವಳು ಒಳ್ಳೆಯ ಮಹಾಯಾಂಗನೆ" ಎಂದು ತಿಳಿದುಕೊಳ್ಳುತ್ತಾನೋ ಏನೋ; ಅಂತೂ ಮನಸ್ಸನ್ನು ಬಿಗಿಹಿಡಿಯಲು ಯಾವ ರೀತಿಯಲ್ಲಿಯೂ ನಾನು ಸಮರ್ಥಳಾಗಲಿಲ್ಲ. ೩೮. ತಾವಾಗಿಯೇ ಪ್ರೀತಿಸಿ ನಲ್ಲರ ಹಿಂದೆ ಹೋಗಿರುವ ಅನೇಕ ಹೆಂಗಸರೂ ಇದ್ದಾರೆ. ಹಾಗೆಯೆ ಪ್ರಿಯಕರನಲ್ಲಿ ಪ್ರಣಯವು ಹೆಚ್ಚಾಗಲು ನಾಚಿಕೆಗೆಟ್ಟವರೂ ಇದ್ದಾರೆ. ಆದರೆ ಈ ಪ್ರಪಂಚದಲ್ಲಿ ನನ್ನ ಹಾಗೆ ರೂಪವನ್ನು ಕಂಡೊಡನೆಯೆ ಇದ್ದಕ್ಕಿದ್ದ ಹಾಗೆ ಲಜ್ಜೆಗೆಟ್ಟು, ಅರಿವುಗೆಟ್ಟು, ದಿಕ್ಕೆಟ್ಟು ಎದೆಗೆಟ್ಟವರು ಯಾರಾದರೂ ಇದ್ದಾರೆಯೆ? ಎಂದು ನನ್ನಲ್ಲಿ ನಾನೇ ಆಶ್ಚರ್ಯಪಟ್ಟೆನು. ವ॥ ಹಾಗೆ ಆಶ್ಚರ್ಯಪಟ್ಟು ನನ್ನನ್ನು ನಾನೇ ಸಮಾಧಾನಪಡಿಸಿಕೊಂಡು, ೩೯. ನನ್ನ ಬುದ್ಧಿಯು ನನ್ನ ಹತೋಟಿಯನ್ನು ಮೀರುವುದಕ್ಕೆ ಮೊದಲೆ, ಬೆಲೆ ಕಳೆದುಕೊಳ್ಳುವುದಕ್ಕೆ ಮೊದಲೆ, ಈ ಸ್ಥಳದಿಂದ ನಾನು ತೊಲಗಿಹೋಗುವುದೇ ಒಳ್ಳೆಯದು. ಇಲ್ಲದಿದ್ದರೆ ಇವನು ತನಗೆ ಇಷ್ಟವಿಲ್ಲದ ನನ್ನ ಈ ಕಾಮವಿಕಾರಗಳನ್ನು ನೋಡಿ 'ಅಯ್ಯೋ ಪಾಪ ! ಏನೋ ಮನಸೋತಿದ್ದಾಳೆ' ಎಂದು ಕನಿಕರಿಸದೆ ಹಾಗೆಯೆ ಶಾಪವನ್ನು ಕೊಟ್ಟರೂ ಕೊಡಬಹುದು. ಋಷಿಗಳು ಸಾಮಾನ್ಯವಾಗಿ ಕೋಪಿಷ್ಠರೇ ಅಲ್ಲವೆ ? ವ॥ ಎಂದು ಹಿಂದಿರುಗಲು ಪ್ರಯತ್ನಪಟ್ಟು ಸರ್ವರಿಗೂ ಪೂಜಾರ್ಹರಾದ ಮುನಿಗಳನ್ನು ಕಡೆಗಣಿಸಿ ಹೋಗಬಾರದೆಂದು, ೪೦. ಮುಂಗುರುಳುಗಳಲ್ಲಿ ಮುಡಿದುಕೊಂಡಿದ್ದ ಸುಂದರವಾದ ಹೂವುಗಳು ಕೆನ್ನೆಯಮೇಲೆ ಜೋಲಾಡಿ ಚೆನ್ನಾಗಿ ಶೋಭಿಸುತ್ತಿರಲಾಗಿ, ಮೃದುವಾದ ಚಿಗುರುಗಳಿಂದ ಕೂಡಿರುವ ಮನೋಹರವಾದ ಕಿವಿಯೋಲೆಯು ಹೆಗಲಿನ

ವ॥ ತದನಂತರಂ

ಮದನಂ ದುರ್ಜಯನಿಂದ್ರಿಯಂಗಳನಿವಾರ್ಯಂಗಳ್ ವಸಂತಂ ಮದ
ಪ್ರದನಾಸ್ಥಾನವತೀವರಮ್ಯಮೆನಗಂ ದುಃಖಂಬರಲ್ವೇಟ್ಕುಮ
ಪ್ಪುದಱಿಂ ಭಾವಿಸಿ ಮದ್ವಿಕಾರಮನೆ ನೋಡುತ್ತಿರ್ಪುದುಂ ಗಾಳಿಗೊ
ಡ್ಡಿದ ದೀಪಾಂಕುರದಂತೆ ತನ್ಮುನಿಯುಮಂ ಕಾಮಂ ಚಲಂ ಮಾಡಿದಂ ೪೧

ವ॥ ಅಂತು ಮಾಡೆ

ಮನಮೆನ್ನಂ ಮುಂಬರಲ್ ಮುಂದುವರಿವುದನೆ ತೋರ್ಪಂತೆ ನೀಳ್ದತ್ತು ಸುಯ್
ಭೋಂ
ಕೆನಲಂತೆಯ್ತರ್ಪ ಕಾಮಂಗೊಲವಿನೊಳಿದಿರೇಟ್ಪಂತೆ ರೋಮೋದ್ಗಮಂ ತೊ
ಟ್ಟನೆ ಮೆಯ್ದೋಱಿತ್ತು ವೀರವ್ರತವಱಿದಪುದಿನ್ನೆಂದು ನಟ್ಟಂಜಿದಂತಾ
ತನ ಕೆಯ್ಯೊಳ್ ರಂಜಿಪಾಕ್ಷಾವಳಿ ನಡುಗಿದುದತ್ಯಂತಮಾಶ್ಚರ್ಯಮಾಗಲ್ ೪೨

ಮೇಲೆ ನಲಿದಾಡುತ್ತಿರಲಾಗಿ ನಾನು ಮತ್ತೆ ಮತ್ತೆ ಎವೆಯಿಕ್ಕದೆ ಆ ಮುನಿಕುಮಾರನ ಸುಂದರವಾದ ಮುಖವನ್ನು ನೋಡುತ್ತಾ ಒಲುಮೆಯಿಂದ ನಮಸ್ಕರಿಸಿದೆನು. ವ॥ ಬಳಿಕ ೪೧. ಮನ್ಮಥನನ್ನು ಜಯಿಸಲು ಸಾಧ್ಯವಿಲ್ಲದುದರಿಂದಲೂ, ಇಂದ್ರಿಯಗಳನ್ನು ತಡೆಯಲು ಅಸಾಧ್ಯವಾದುದರಿಂದಲೂ, ವಸಂತಕಾಲವು ಮದವನ್ನುಂಟುಮಾಡುವುದರಿಂದಲೂ, ಆ ಪ್ರದೇಶವು ಬಹಳ ರಮಣೀಯವಾಗಿದ್ದುದರಿಂದಲೂ, ಒಟ್ಟಿನಲ್ಲಿ ನನಗೂ ಈ ಬಗೆಯ ದುಃಖವುಂಟಾಗುವ ಯೋಗವಿದ್ದುದರಿಂದಲೂ, ಆ ತರುಣಮುನಿಯು ನನ್ನ ವಿಕಾರಗಳನ್ನು ಗಮನಿಸಿ ನೋಡುತ್ತಿರಲಾಗಿ ಮನ್ಮಥನು ಅವನ ಮನಸ್ಸನ್ನು ಗಾಳಿಗೊಡ್ಡಿದ ದೀಪಜ್ವಾಲೆಯಂತೆ ಅಳ್ಳಾಡಿಸಿಬಿಟ್ಟನು. ವ॥ ಹಾಗೆ ಮಾಡಲಾಗಿ, ೪೨. ಮನಸ್ಸು ನನ್ನ ಕಡೆಗೆ ಬರುತ್ತಿರಲಾಗಿ, ದಾರಿ ತೋರಿಸುವುದಕ್ಕಾಗಿ ಮುಂದೆ ಬರುತ್ತಿರುವಂತೆ ಅವನ ಶ್ವಾಸವು ದೀರ್ಘವಾಯಿತು. ತಟ್ಟನೆ ಬರುತ್ತಿರುವ ಕಾಮಿನಿಗೆ ಪ್ರೀತಿಯಿಂದ ಎದುರುಗೊಳ್ಳುವುದಕ್ಕಾಗಿಯೋ ಎಂಬಂತೆ ರೋಮಾಂಚನವು ಕೂಡಲೆ ಕಾಣಿಸಿಕೊಂಡಿತು. ಇದುವರೆಗೆ ಆಚರಿಸುತ್ತಿದ್ದ ದೃಢಬ್ರಹ್ಮಚರ್ಯವ್ರತವು ಇನ್ನು ನಾಶವಾಗುತ್ತದೆ ಎಂಬ ಹೆದರಿಕೆಯಿಂದಲೋ ಎಂಬಂತೆ ಅವನ ಕೈಯಲ್ಲಿ ಶೋಭಿಸುತ್ತಿದ್ದ ಜಪಸರವು ಬಹಳ ಸೋಜಿಗವಾಗುವಂತೆ ನಡುಗುತ್ತಿತ್ತು. (ಟಿ. ಅವನಿಗೂ ಕಾಮಪರವಶತೆಯ ಪರಿಣಾಮವಾಗಿ ನಿಶ್ವಾಸ, ರೋಮಾಂಚನ, ಕಂಪನಗಳುಂಟಾದುವು.)

ವ॥ ಅಂತುಮಲ್ಲದೆಯುಂ

ಕರವೆಸೆದು ತೋಱುತಿರ್ದಪು
ದೆರಡನೆಯ ವಸಂತಕುಸುಮಮಂಜರಿಯೆಂಬಂ
ತಿರೆ ತತ್ಕಪೋಲದೊಳ್ ಬಿ
ತ್ತರಿಸಿದುವು ಕೊನರ್ತ ಬೆಮರಬಿಂದುಗಳಾಗಲ್ ೪೩

ಮನದೊಂದಟ್ಕೆಱೊಳೆನ್ನನೊಲ್ದಡರೆ ನೋಡುತ್ತಿರ್ಪುದುಂ ಕಣ್ಣ ಬೆ
ಳ್ಪಿನಗುರ್ವಾಸ್ಥಳಮಂ ಸಿತಾಬ್ಜಮಯಮೆಂಬಂತಾಗೆಯುಂ ಮಾಡಿ ಭೋಂ
ಕೆನಲಚ್ಛೋದಸರೋಂಬುಮಂ ಕುಮುದಷಂಡಂ ಬಿಟ್ಟು ತಳ್ತತ್ತು ಮೇ
ಲೆ ನಭೋಭಾಗಮನೆಂಬಿನಂ ಪಸರಿಸಿತ್ತಾಗಳ್ ದಿಶಾಚಕ್ರಮಂ ೪೪

ವ॥ ಅಂತೆಯ್ದೆ ಮತ್ತಮೆನ್ನೊಳ್ ಸಂಭೋಗಲೀಲಾನರ್ತನಕ್ಕೋಜನಪ್ಪ ಮನೋಜಂ ವಿಲಾಸೋಪದೇಶಕ್ಕೋಜನಾಗವೇಟ್ಕುಮಲ್ಲದಂದು ರತಿರಸಾಸ್ವಾದನಂಗಳನಱಿಯದನ ದಿಟ್ಟಿಗಮ ರ್ದನುಗುಟ್ವಂತೆ ಗೆಯ್ವಂದಮುಂ ಒಸರ್ದು ಪರಿದಪ್ಪುದೆನಿಪ ರತಿರಸಮುಮಾನಂದಬಾಷ್ಪಪ್ರಸರಮುಂ ರಸಭಾರದಿಂ ನಡುಗುವಂತೆ ಸಂಚಳಿಸುವಂದಮುಂ ಇನಿಸಪ್ಪೊಡಂ ಪೊಡರ್ಪನಪ್ಪುಕೆಯ್ಯದಿಱಿಯೆ ಪೂದಳೆದುದೆನಿಪ ಪುರ್ಬಿನ ಕುಡಿವೆರಸು ತೂಕಡನೊಳಕೊಂಡ ಜಾಡ್ಯಮುಂ ಸೊಕ್ಕು

ವ॥ ಅದಲ್ಲದೆ, ೪೩. ಈ ಪಾರಿಜಾತಮಂಜರಿಗಿಂತಲೂ ಬೇರೆಯದಾದ ವಸಂತಕಾಲದಲ್ಲಿ ಬಿಡುವ ಮತ್ತೊಂದು ಹೂವಿನ ಗೊಂಚಲು ಶೋಭಿಸುತ್ತಿದೆಯೋ ಎಂಬಂತೆ ಅವನ ಕೆನ್ನೆಯ ಮೇಲೆ ಬೆವರಿನ ಹನಿಗಳು ಮೂಡಿ ಹರಡಿಕೊಂಡವು. ೪೪. ಅವನು ಮನಸ್ಸಿನ ಒಂದು ಅಕ್ಕರೆಯಿಂದ ನನ್ನನ್ನೇ ಕಣ್ಣಿಟ್ಟುನೋಡುತ್ತಿದ್ದನು. ಅವನ ಕಣ್ಣಿನ ಅತ್ಯಧಿಕವಾದ ಬಿಳುಪು ಆ ಸ್ಥಳವನ್ನೆಲ್ಲಾ ಬಿಳಿಯ ಕಮಲಗಳಿಂದ ತುಂಬಿಕೊಂಡಿರುವಂತೆ ಮಾಡಿದ್ದಿತು. ಇದರಿಂದ ಬಿಳಿಯ ತಾವರೆಗಳ ಗುಂಪು ಅಚ್ಛೋದ ಸರೋವರವನ್ನು ಬಿಟ್ಟು ಮೇಲಕ್ಕೆ ಬಂದು ಆಕಾಶದಲ್ಲಿ ಸೇರಿಕೊಂಡಿದೆಯೋ ಎಂಬಂತೆ ನಾಲ್ಕುದಿಕ್ಕುಗಳಲ್ಲೂ ಹರಡಿಕೊಂಡಿದ್ದಿತು. ವ॥ ಆಗ ನಾನು ನನ್ನಲ್ಲೇ ಹೀಗೆ ಬಹಳವಾಗಿ ಆಲೋಚಿಸಿದೆನು. "ಸುರತವಿನೋದದ ನಾಟ್ಯಕ್ಕೆ ಗುರುವಾದ ಮನ್ಮಥನೇ ಈ ಬಗೆಯ ಚೇಷ್ಟೆಗಳನ್ನೆಲ್ಲಾ ಕಲಿಸಿಕೊಡುವ ಉಪಾಧ್ಯಾಯನಾಗಿರಬೇಕು. ಹಾಗಿಲ್ಲದಿದ್ದರೆ ಸಂಭೋಗಸುಖವೆಂದರೇನು ? ಎಂಬುದನ್ನೇ ಅರಿಯದಿರುವ ಈ ಋಷಿಪುತ್ರನ ದೃಷ್ಟಿಗೆ ಅಮೃತವನ್ನು ಸುರಿಸುವಂತಿರುವ ರೀತಿಯೂ, ಉಕ್ಕಿ ಹರಿಯುತ್ತಿರುವ ಶೃಂಗಾರರಸವೂ, ಆನಂದಬಾಷ್ಪವನ್ನು ಸುರಿಸುವಿಕೆಯೂ, ಸಂತೋಷದ ಹೊರೆಯಿಂದ ನಡುಗುವಂತೆ ಚಲಿಸುವ ಒಂದು ಬಗೆಯೂ, ಸ್ವಲ್ಪವೂ ಅತ್ತಿತ್ತ ಮಿಸುಕಾಡದೆ ನನ್ನ ಮೇಲೆ ಬೀಳಲಾಗಿ ಹೂ ಬಿಟ್ಟಿದೆಯೋ ಎಂಬಂತಿರುವ ಬಳ್ಳಿಹುಬ್ಬಿನ ತುದಿಯಿಂದ ಕೂಡಿ ನಿದ್ರೆಯನ್ನು ಒಳಗೊಂಡಂತಿರುವ ಜಡತನವು ತುಂಬಿಕೊಂಡಿರುವ ಮದವನ್ನು ಹೊರಪಡಿಸುವಿಕೆಯೂ, ಬಳಲಿದಂತೆ

ಮುಕ್ಕುಳಿಸಿದಂತಿರ್ದಿರವುಂ ಬಟಲ್ದಂತೆ ಜೋಲ್ದಂದಮುಂ ಮುನ್ನಮಭ್ಯಾಸಮಿಲ್ಲದುದರ್ಕೆಂತು ದೊರೆಕೊಳ್ಗುಮೆಂದು ಭಾವಿಸಿ ನೋಡುತ್ತಾತನೊಳವಸರಂಬಡೆದು ಮೆಲ್ಲನೆಯ್ದಿವಂದು

ಪೆಸರೇನಾರ್ಗೀತನೀ ಜವ್ವನಿಗ ತವಸಿ ತೊಟ್ಟಿರ್ಪ ಕರ್ಣಾವತಂಸಂ
ಪೊಸತೀ ಲೋಕಕ್ಕಿದಾವಂಘ್ರಿಪದ ಪೊಳೆವ ಪೂಗೊಂಚಲೀಂದಾದುದೋ ನೀಂ
ಬೆಸಸಲ್ವೇಟ್ಕುಂತಿದಂ ಕೌತುಕಮನೆನಗೆನುತ್ತಂ ನಮಸ್ಕಾರಪೂರ್ವಂ
ಬೆಸಗೊಂಡೆಂ ತನ್ಮುನೀಂದ್ರಾನುಚರಮುನಿಯನಾನಂದತಿಪ್ರೀತಿಯಿಂದಂ ೪೫

ವ॥ ಅಂತು ಬೆಸಗೊಳೆ

ಬೆಸಗೊಳ್ವುದಜಿಂದಿದನು
ದ್ದೆಸಮಾವುದು ತರುಣಿ ನಿನಗೆ ಕೌತುಕಮೆನೆ ಕೇ
ಳುಸಿರ್ದಪೆನೆಂದಾ ಮುನಿಪಂ
ನಸುನಗುತಂ ಪೇಟಲುದ್ಯತನಾದಂ ೪೬

ವ॥ ಅದೇತೆನೆ ಸಕಲ ಮುನಿವೃಂದವಂದಿತ ಚರಣನುಮಖಿಲಮುನಿಜನಾನಂದನನುಂ ವಿದಿತ ನಿರವದ್ಯವಿದ್ಯಾಕಲಾಪನುಮಪ್ರತಿಮರೂಪನುಮಪ್ಪೊರ್ಬ ಶ್ವೇತಕೇತುವೆಂಬ ಮಹಾಮುನಿಯಮರಲೋಕದೊಳಿರ್ಪನಾತನೊಂದುದಿವಸಂ ಪುಂಡರೀಕವೆಂಬ ಸರೋವರಮಂ ಮೀಯಲೆಂದು ಬಂದಿರೆ

ಜೋಲು ಬೀಳುವಿಕೆಯೂ ಮೊದಲು ಅಭ್ಯಾಸವಿಲ್ಲದ ಇದಕ್ಕೆ ಹೇಗೆ ಬಂತು ? ಎಂದು ಆಲೋಚಿಸಿ ನೋಡುತ್ತಾ, ಅವನಲ್ಲಿ ಇಷ್ಟುಮಟ್ಟಿಗೆ ಅವಕಾಶ ದೊರಕಿದ್ದರಿಂದ ಮೆಲ್ಲನೆ ಹತ್ತಿರಕ್ಕೆ ಹೋದೆನು. ೪೫. ಅವನ ಜೊತೆಯಲ್ಲಿದ್ದ ಋಷಿಕುಮಾರನಿಗೆ ನಮಸ್ಕಾರವನ್ನು ಮಾಡಿ "ಈ ತರುಣಮುನಿಯ ಹೆಸರೇನು ? ಈತನು ಯಾರ ಮಗ ? ಇವನು ಕಿವಿಯಲ್ಲಿ ಮುಡಿದಿರುವ ಹೂವು ಈ ಭೂಲೋಕದಲ್ಲಿ ಬಹಳ ಅಪೂರ್ವವಾದುದು. ಇದು ಯಾವ ಶ್ರೇಷ್ಠವಾದ ಮರದ ಹೂಗೊಂಚಲಿನಿಂದ ಕೊಯ್ದು ಬಂದಿದ್ದು ? ಇದನ್ನೆಲ್ಲಾ ತಿಳಿಸಬೇಕು. ನನಗೆ ಬಹಳ ಆಶ್ಚರ್ಯವಾಗಿದೆ ಎಂದು ಬಹಳ ಸಲಿಗೆಯಿಂದ ಕೇಳಿದೆನು. ವ॥ ಹಾಗೆ ಕೇಳಲಾಗಿ, ೪೬. ಆಗ ಆ ಮುನಿಯು ನಸುನಗುತ್ತ "ಎಲೈ ಹುಡುಗಿಯೆ, ಇದನ್ನು ನೀನು ಯಾವ ಉದ್ದೇಶದಿಂದ ಕೇಳುತ್ತೀಯೋ? ಆಗಲಿ ನಿನಗೆ ಇಷ್ಟು ಕುತೂಹಲವಿದ್ದರೆ ಹೇಳುತ್ತೇನೆ, ಕೇಳು" ಎಂದು ಹೇಳಲು ತೊಡಗಿದನು. ವ॥ ಅದು ಹೇಗೆಂದರೆ, ಸ್ವರ್ಗಲೋಕದಲ್ಲಿ ಋಷಿಗಳೆಲ್ಲರಿಂದಲೂ ನಮಸ್ಕರಿಸಲ್ಪಡುವ ಪಾದವುಳ್ಳ ಮುನಿಗಳೆಲ್ಲರಿಗೂ ಸಂತೋಷವನ್ನುಂಟುಮಾಡುವ ಶ್ರೇಷ್ಠವಾದ ಸಮಸ್ತ ವಿದ್ಯೆಗಳಲ್ಲೂ ಪಾರಂಗತನಾದ ಹಾಗೂ ಬಹಳ ಸುಂದರನಾದ ಶ್ವೇತಕೇತುವೆಂಬ ಮಹರ್ಷಿಯಿದ್ದನು. ಅವನು ಒಂದು ದಿವಸ ಸ್ನಾನಮಾಡುವುದಕ್ಕಾಗಿ ಪುಂಡರೀಕವೆಂಬ ಸರೋ

ಅರವಿಂದಾಕರಸಾಂದ್ರ ಪದ್ಮವನಮಧ್ಯೋದ್ದೇಶದೊಳ್ ಲಕ್ಷ್ಮಿ ಭಾ
ಸುರವಿಸ್ತೀರ್ಣಸಿತಾಬ್ಜದಲ್ಲಿ ಪದಪಿಂ ಪ್ರತ್ಯಕ್ಷಮಿರ್ಪಳ್ ನಿರಂ
ತರಮಾ ಕೋಮಳೆ ಪದ್ಮಸದ್ಮತಟದೊಳ್ ನಿಂದಿರ್ದ ಸರ್ವಾಂಗಸುಂ
ದರನಂ ದಿವ್ಯಮುನೀಂದ್ರನಂ ಪಿರಿದುಮೊಂದಾಸಕ್ತಿಯಿಂ ನೋಡಿದಳ್ ೪೭

ವ॥ ಅಂತು ನೋಡೆ

ನೋಡಲೊಡಂ ರತಾಂತಸುಖಮಾಗೆ ನಿಜಾಸನ ಪುಂಡರೀಕದೊಳ್
ನೋಡೆ ಕೃತಾರ್ಥೆಯಾದಳದಱತ್ತಣಿನಾಗಳೆ ಗಾಡಿ ನಾಡೆ ಕ
ಣ್ಗೂಡಿರಲೊರ್ವನುದ್ಭವಿಸೆ ಕಂಡು ನಿಜಾತ್ಮಜನೀತನೆಂದವಳ್
ನೀಡಿದಳಾ ಕುಮಾರಕನನಾ ಮುನಿಪಂಗೆ ಮನೋನುರಾಗದಿಂ ೪೮

ವ॥ ಆಗಳಾತಂ ಯೋಗ್ಯದೃಷ್ಟಿಯಿಂ ನೋಡಿ ತತ್ಕುಮಾರನಂ ಕೈಕೊಂಡು ಬಾಲ ಜನ್ಮೋಚಿತಕ್ರಿಯೆಗಳಂ ಮಾಡಿ ಜನ್ಮಾನುರೂಪಮಾಗೆ ಪುಂಡರೀಕನೆಂದು ಪೆಸರನಿಟ್ಟು ಶೈಶವಮಂ ಪತ್ತುವಿಡಲೊಡಮಖಿಳವಿದ್ಯಾಕಲಾಪದೊಳ್ ಪರಿಣತನಂ ಮಾಡಿ ಯತಿತ್ವಮಂ ಕೈಕೊಳಿಸೆ ತದನುಷ್ಠಾನಪರಾಯಣನಾದ ಮಹಾನುಭಾವನೀತಂಗೀ ವ್ರತವಿರುದ್ಧಮಪ್ಪ ಕುಸುಮ ಮಂಜರಿಯೆಂತು ಬಂದುದೆಂಬೆಯಪ್ಪೊಡೆ

ವರಕ್ಕೆ ಬಂದಿರಲಾಗಿ, ೪೭. ಆ ತಾವರೆಗೊಳದ ದಟ್ಟವಾದ ಕಮಲಗಳ ಗುಂಪಿನ ನಡುವೆ ಪ್ರಕಾಶಮಾನವಾಗಿಯೂ ಅಗಲವಾಗಿಯೂ ಇರುವ ಒಂದು ಬಿಳಿಯ ಕಮಲ ದಲ್ಲಿ ಲಕ್ಷ್ಮೀದೇವಿಯು ಸಂತೋಷದಿಂದ ಸ್ಥಿರವಾಗಿ ನೆಲೆಸಿದ್ದಳು. ಅವಳು ತಾವರೆ ಗೊಳದ ದಡದಲ್ಲಿ ನಿಂತುಕೊಂಡಿದ್ದ ಸರ್ವಾಂಗಸುಂದರನಾದ ಆ ದೇವರ್ಷಿಯನ್ನು ಬಹಳ ಆಸಕ್ತಿಯಿಂದ ನೋಡಿದಳು. ವ॥ ಹಾಗೆ ನೋಡಲಾಗಿ, ೪೮. ನೋಡಿದ ಕೂಡಲೇ ತಾನು ಕುಳಿತುಕೊಂಡಿದ್ದ ಬಿಳಿದಾವರೆಯಲ್ಲೇ ಮಾನಸಿಕವಾಗಿ ಸಂಭೋಗಸುಖ ವನ್ನು ಅನುಭವಿಸಿದಳು. ಆ ಮಾನಸಿಕಸುಖವೇ ಸಾರ್ಥಕವಾಯಿತು, ಗರ್ಭವುಂಟಾ ಯಿತು. ಕೂಡಲೆ ಕಣ್ಣಿಗೆ ಆನಂದವನ್ನುಂಟುಮಾಡುವ ಪರಮಸುಂದರವಾದ ಮಗು ವೊಂದು ಹುಟ್ಟಿತು. ಅದನ್ನು ನೋಡಿ ಎತ್ತಿಕೊಂಡು "ಮಹರ್ಷಿಗಳೆ ಇದು ನಿಮ್ಮ ಮಗು" ಎಂದು ಪ್ರೀತಿಯಿಂದ ಅವನಿಗೆ ಆ ಮಗುವನ್ನು ಒಪ್ಪಿಸಿದಳು. ವ॥ ಆಗ ಅವನು ಯೋಗದೃಷ್ಟಿಯಿಂದ ನೋಡಿ ತನ್ನ ಆ ಮಗುವನ್ನು ಪರಿಗ್ರಹಿಸಿ ಹುಟ್ಟಿದಾಗ ಮಾಡಬೇಕಾದ ಜಾತಕರ್ಮವೇ ಮೊದಲಾದ ಸಂಸ್ಕಾರಗಳನ್ನು ನೆರವೇರಿಸಿ, ಪುಂಡರೀಕ (ಬಿಳಿಯ ಕಮಲ) ದಲ್ಲಿ ಹುಟ್ಟಿದ್ದರಿಂದ ಅದಕ್ಕೆ ಅನುಸಾರವಾಗಿ ಪುಂಡರೀಕನೆಂಬ ಹೆಸರ ನ್ನಿಟ್ಟನು. ಬಳಿಕ ಎಳೆತನವು ಕಳೆಯಲು ಸಮಸ್ತ ವಿದ್ಯೆಗಳಲ್ಲೂ ಪಾರಂಗತನನ್ನಾಗಿ ಮಾಡಿ ಬ್ರಹ್ಮಚರ್ಯವ್ರತಧಾರಿಯನ್ನಾಗಿ ಮಾಡಿದನು. ಬಳಿಕ ಈ ಮಹಾನುಭಾವನು ಆ ವ್ರತಾನುಷ್ಠಾನದಲ್ಲೇ ನಿರತನಾಗಿದ್ದಾನೆ. ಈಗ ಇವನಿಗೆ ವ್ರತವಿರುದ್ಧವಾದ ಹೂ

ಇಂದು ಚತುರ್ದಶಿಯಪ್ಪುದ
ಱಿಂದಂ ಕೈಲಾಸವಾಸಿಯಂ ಕಾಣಲ್ಕಾ
ನಂದದೆ ದಿವದಿಂದಿರ್ಬರು
ಮೊಂದಾಗಿ ಬರುತ್ತಮಿರ್ಪುದಂ ತತ್‌ಕ್ಷಣದೊಳ್ ೪೯

ಕುಸುಮವಿಭೂಷಣಾನ್ವಿತೆ ನವಪ್ರಸವಾಸವಪಾನಮತ್ತೆ ರಂ
ಜಿಸುವ ವಸಂತಲಕ್ಷ್ಮಿಯ ಕರಾಗ್ರದೊಳಿಕ್ಕಿ ನಖಾಂಶುಜಾಲಮಂ
ಪಸರಿಸುತಿರ್ಪ ತನ್ನ ಕರಮಂ ವನದೇವತೆ ಪಾರಿಜಾತದೊಂ
ದೆಸೆವಲರ್ಗೊಂಚಲಂ ಪಿಡಿದು ನಂದನದೊಳ್ ಬರುತೊರ್ವಳೊಪ್ಪಿದಳ್ ೫೦

ವ॥ ಅಂತು ಬಂದು ಪೊಡವಟ್ಟು ಭುವನತ್ರಯಾಭಿರಾಮಮಪ್ಪ ನಿನ್ನ ಸೌಕುಮಾರ್ಯಕ್ಕೆ ತಕ್ಕಲಂಕಾರಮೀ ದಿವ್ಯಕುಸುಮಮಂಜರಿಯುನವತಂಸಂ ಮಾಡಿ ಪಾರಿಜಾತಜನ್ಮಮಂ ಸಫಲಂ ಮಾಳ್ಪುದೆಂದು ಬಿನ್ನವಿಸೆ ನಿಜರೂಪಸ್ತುತಿಗೆ ಲಜ್ಜಿಸಿ ಕೇಳದಂತೆ ಪೋಗೆ ಮತ್ತಂ ಬೆನ್ನನೆಪತ್ತಿ ಬರುತಿರ್ಪುದುಮಾಂ ಕಂಡು ತಾರುಣ್ಯದಿಂದೀ ಕಾಂತೆಗೆ ಸಂತೋಷಮಂ ಮಾಡಿಮೆನಲಿದೇಕೆ ಬೇಡ ವೇಡೆನೆಯುಂ ಕಿವಿಯೊಳ್ ತೊಡರ್ಚಿ ಪೋದಳೀ ಕುಸುಮಮಂಜರಿಯುನೆಂದು ಸಹಚರಮುನಿ ಪೇೞೆ ಪುಂಡರೀಕಂ ದರಹಸಿತಾಧರಕಪೋಲತಲನಾಗಿ

ಗೊಂಚಲು ಹೇಗೆ ಬಂತು ಎಂದರೆ, ೪೯. ಈ ದಿವಸ ಚತುರ್ದಶಿಯಾದುದರಿಂದ ಕೈಲಾಸಪತಿಯಾದ ಪರಮೇಶ್ವರನನ್ನು ದರ್ಶನಮಾಡಬೇಕೆಂದು ಸಂತೋಷದಿಂದ ನಾವಿಬ್ಬರೂ ಒಟ್ಟಿಗೆ ಸ್ವರ್ಗಲೋಕದಿಂದ ಬರುತ್ತಿರಲಾಗಿ, ಕೂಡಲೆ ೫೦. ವನದೇವತೆಯೊಬ್ಬಳು ಹೂವಿನ ಒಡವೆಗಳಿಂದಲೇ ಸಿಂಗರಿಸಿಕೊಂಡು, ಹೊಸ ಹೂವಿನ ಬಂಡನ್ನು ಕುಡಿದು ಮದವೇರಿಸಿದವಳಾಗಿ, ಉಗುರಿನ ಕಾಂತಿಗಳನ್ನು ಬೀರುತ್ತಿರುವ ತನ್ನ ಕೈಯನ್ನು ವಸಂತದೇವತೆಯ ಕೈಯಲ್ಲಿಟ್ಟು, ಪಾರಿಜಾತದ ಒಂದು ಸೊಗಸಾದ ಹೂಗೊಂಚಲನ್ನು ಹಿಡಿದುಕೊಂಡು ನಂದನವನದಲ್ಲಿ ಬರುತ್ತಿದ್ದಳು. ವ॥ ಹಾಗೆ ಬಂದು ನಮಸ್ಕರಿಸಿ, "ಪೂಜ್ಯರೆ, ಮೂರು ಲೋಕಗಳಲ್ಲೂ ಪರಮರಮಣೀಯವಾದ ನಿಮ್ಮ ಸೌಂದರ್ಯಕ್ಕೆ ಈ ದಿವ್ಯವಾದ ಹೂಗೊಂಚಲು ಚೆನ್ನಾಗಿ ಒಪ್ಪುವ ಒಡವೆಯಾಗಿದೆ. ಇದನ್ನು ಕಿವಿಯಲ್ಲಿ ಮುಡಿದುಕೊಳ್ಳಿ. ಪಾರಿಜಾತದ ಜನ್ಮವು ಸಾರ್ಥಕವಾಗಲಿ ಎಂದು ಅರಿಕೆ ಮಾಡಿದಳು. ಆಗ ಈ ಕುಮಾರನು ತನ್ನ ಸೌಂದರ್ಯದ ಹೊಗಳಿಕೆಗೆ ನಾಚಿಕೆಪಟ್ಟು ಕೇಳಿಸಿಕೊಳ್ಳದವನಂತೆ ಹೆಜ್ಜೆಹಾಕುತ್ತಿದ್ದನು. ಅವಳು ಬಿಡದೆ ಬೆನ್ನಹಿಂದೆಯೇ ಬರುತ್ತಿರುವುದನ್ನು ನಾನು ನೋಡಿ, "ಗೆಳೆಯ! ಸ್ವಲ್ಪ ದಯೆಯಿಂದ ಈ ಹೆಂಗಸಿಗೆ ಸಂತೋಷವಾಗುವಂತೆ ಮಾಡಬಾರದೆ ?" ಎಂದೆನು. ಅವನು, "ಇದೇಕೆ ನನಗೆ ? ಬೇಡ ಬೇಡ!" ಎಂದು ಅವನು ಹೇಳುತ್ತಿದ್ದರೂ ಬಿಡದೆ ಅವಳು ಅದನ್ನು ಇವನ ಕಿವಿಗೆ ಮುಡಿಸಿ, ಹೊರಟುಹೋದಳು" ಎಂದು ಒಡನಾಡಿಯಾದ ಮುನಿಯು ಹೇಳುತ್ತಿ

ಎಳಸುತ್ತಿರ್ದಪೆ ಪುಷ್ಪಮಂಜರಿಗೆ ಕೊಳ್ಳೀಸುತ್ತಿದೇಕೆಂದು ಸಂ
ಚಳಿಸುತ್ತುಂ ನಿಜಕರ್ಣದಿಂ ತೆಗೆದು ಸೋಲ್ತೆಂ ಕೊಡು ನೀನೆನ್ನೊಳಿಂ
ದಳಿಮಾಲಾರವದಿಂದೆ ಪೇಳ್ವ ತೆಱದಿಂ ಮತ್ಕರ್ಣದೊಳ್ ತಾರಕೋ
ಜ್ವಳಮಂ ರಂಜಿಪ ಪುಷ್ಪಮಂಜರಿಯನತ್ಯೌತ್ಸುಕ್ಯದಿಂದಿಕ್ಕಿದಂ ೫೧

ಇಂ ಪೇಳ್ವುದೇನನೆನ್ನ ಕ
ದಂಪಿನ ನಸುಸೋಂಕಿನೊಂದು ಸುಖದಿಂದಾದಂ
ಕಂಪಿಸುತಿರೆ ಕರತಳದಿಂ
ದಂ ಪೋದತ್ತಕ್ಷಮಾಲೆ ನಾಣ್ಬೆರಸಾಗಳ್ ೫೨

ವ॥ ಅಂತು ಪೋದೊಡಮಱಿಯದಿರೆ

ತೊಳಗುವ ಹಾರಮನಾಗಳ್
ತಳೆವಂತಿರೆ ನೆಲಕೆ ಬೀೞ್ವನಂ ಪಿಡಿದಕ್ಷಾ
ವಳಿಯಂ ಕೊರಲೊಳ್ ತಳೆದಾಂ
ತಳೆದೆಂ ಮುನಿಪತಿಯ ತೋಳ ತೞ್ಕಿನ ಸುಖಮಂ ೫೩

ರಲಾಗಿ ಪುಂಡರೀಕನು ತುಟಿ ಮತ್ತು ಕೆನ್ನೆಗಳಿಂದ ನಸುನಗೆಯನ್ನು ತೋರ್ಪಡಿಸುತ್ತ ೫೧. "ಈ ಹೂಗೊಂಚಲಿಗೆ ಆಸೆಪಟ್ಟಿದ್ದೀಯೆ. ಹಾಗಾದರೆ ತೆಗೆದುಕೊ, ಪ್ರಕಾರಾಂತರದಿಂದ ತಿಳಿಸುವುದೇತಕ್ಕೆ ?" ಎಂದು ಹೇಳಿ ತನ್ನ ಕಿವಿಯಿಂದ ಬೇರ್ಪಡಿಸಿ ತೆಗೆದು, "ನಾನು ನಿನ್ನಲ್ಲಿ ಅನುರಕ್ತನಾಗಿದ್ದೇನೆ. ನನಗೆ ರತಿಸುಖವನ್ನು ನೀಡು" ಎಂದು ದುಂಬಿಗಳ ಧ್ವನಿಯ ಮೂಲಕ ಹೇಳುವ ರೀತಿಯಲ್ಲಿ ನಕ್ಷತ್ರಪುಂಜದಂತೆ ಪ್ರಕಾಶಮಾನವಾದ ಹೂವಿನ ಗೊಂಚಲನ್ನು ಬಹಳ ಉತ್ಸಾಹದಿಂದ ನನ್ನ ಕಿವಿಗೆ ಮುಡಿಸಿದನು. ೫೨. ಇನ್ನು ಹೇಳುವುದೇನು ? ನನ್ನ ಕೆನ್ನೆಯ ಅಲ್ಪಸ್ಪರ್ಶದಿಂದಲೇ ಉಂಟಾದ ಸುಖದಿಂದ ಅವನ ಕೈ ಬಹಳವಾಗಿ ನಡುಗುತ್ತಿತ್ತು. ಅವನ ನಾಚಿಕೆಯ ಜೊತೆಯಲ್ಲೇ ಸ್ಫಟಿಕದ ಜಪಸರವೂ ಜಾರಿ ಕೆಳಕ್ಕೆಬಿತ್ತು. (ಟಿ. ನಾಚಿಕೆಯೂ ಇಲ್ಲದಂತಾಯಿತು. ಜಪಸರವೂ ಕೆಳಕ್ಕೆಬಿತ್ತು.) ವ॥ ಹಾಗೆ ಕೆಳಕ್ಕೆ ಬಿದ್ದುದನ್ನೂ ಅವನು ತಿಳಿದುಕೊಳ್ಳದಿರಲಾಗಿ ೫೩. ಅದು ನೆಲಕ್ಕೆ ಬೀಳುವಷ್ಟರಲ್ಲಿ ನಾನು ಆ ಜಪಸರವನ್ನು ಹಿಡಿದುಕೊಂಡು ಪ್ರಕಾಶಮಾನವಾದ ಹಾರವನ್ನು ಹಾಕಿಕೊಳ್ಳುವಂತೆ ಕೊರಳಿಗೆ ಹಾಕಿಕೊಂಡೆನು. ಆಗ ನಾನು ಆ ಮುನೀಶ್ವರನು ತೋಳುಗಳಿಂದ ನನ್ನನ್ನು ತಬ್ಬಿಕೊಂಡಷ್ಟು ಆನಂದವನ್ನು ಅನುಭವಿ

ವ॥ ಅಂತಾ ವ್ಯತಿರೇಕದೊಳೆನ್ನ ಛತ್ರಧಾರಿಣಿ ನೋಡಿ

ತಡೆದಿರಲಾಗದಿನ್ನು ಪೊಗಮಜ್ಜನಮಂ ನೆಱೆಮಾಡಿ ದೇವಿಯರ್
ನಡೆಗೊಳಲಿರ್ದಪರ್ ಮನೆಗೆ ಮಜ್ಜನಕೀಗಳೆ ರಾಜಪುತ್ರಿ ನೀಂ
ನಡೆವುದೆನುತ್ತಮಿಚ್ಛೆಯಣಮಿಲ್ಲದೊಡಂ ತೆಗೆದಳ್ ಕರಂ ಮನಂ
ಕಿಡೆ ಪೊಸತಪ್ಪುದೊಂದು ಪಿಡಿಗಂಕುಶವಿಟ್ಟು ಮರಳ್ಚುವಂದದಿಂ ೫೪

ವ॥ ಅಂತವಳೆನ್ನನೆಂತಾನುಂ ತೆಗೆಯೆ

ಮದನಾಸ್ತ್ರಾವಳಿಯಿಂದೆ ಕೀಲಿಸಿದುದೋ ತದ್ವಕ್ತ್ರಲಾವಣ್ಯಪಂ
ಕದಿನಾಟ್ದತ್ತೊ ಕಪೋಲಕಂಟಕನಿಕಾಯಾಗ್ರಂಗಳಿಂ ಕೂಡೆ ನಾಂ
ಟಿದುದೋ ಮೇಣ್ ಸುಭಗತ್ವಮೆಂಬ ಗುಣದಿಂ ಪೊಲ್ದತ್ತೊ ಮೇಣೆಂಬಿನಂ
ಪದಪಿಂ ನಟ್ಟಿರೆ ದಿಟ್ಟಿಯಂ ತೆಗೆದೆನೆಂತಾನುಮುದ್ವೇಗದಿಂ ೫೫

ವ॥ ಅಲ್ಲಿಂ ತಳರ್ವುದುಮತ್ತಲೊಡನೆಯೆ ಕುಮಾರನಾತನ ಧೈರ್ಯಸ್ಖಲನೆಯುಂ ನೋಡಿ

ಎನಗನುರೂಪಮಲ್ತಿದು ನಿಕೃಷ್ಟಜನೋಚಿತಮಾರ್ಗಮೆಂಬಿದಂ
ಮನದೊಳಣಂ ವಿಚಾರಿಸದೆ ಸ್ವೈರಣೆಗೆಟ್ಟಱಿವೆತ್ತವೋದುದೆಂ
ಬಿನದೊರ್ದೆಗೆಟ್ಟು ಮೆಯ್ಯಱಿಯದಂತಿರಲಕ್ಕುಮೆ ಪುಂಡರೀಕ ಭೋಂ
ಕನೆ ನಿನಗೀಗಳಿಂದ್ರಿಯದ ದಾವರವೆತ್ತಣಿನೆತ್ತ ಬಂದುದೋ ೫೬

ಸಿದೆನು. ವ।। ಈ ಸಂದರ್ಭದಲ್ಲಿ ನನ್ನ ಛತ್ರಿ ಹಿಡಿಯುವ ಊಳಿಗದವಳು ಬಂದು ನೋಡಿ, ೫೪. "ಅಮ್ಮ! ಇನ್ನು ಹೊತ್ತುಮಾಡಬೇಡ. ಮಹಾರಾಣಿಯವರು ಸ್ನಾನವನ್ನು ಮುಗಿಸಿಕೊಂಡು ಮನೆಗೆ ಹೊರಡಲು ಸಿದ್ಧವಾಗಿದ್ದಾರೆ. 'ನೀನೂ ಈಗಲೇ ಸ್ನಾನಕ್ಕೆ ಬಾ' ಎಂದು ಹೇಳಿ ನನಗೆ ಸ್ವಲ್ಪವೂ ಇಷ್ಟವಿಲ್ಲದಿದ್ದರೂ ಹೊಸದಾಗಿ ಹಿಡಿದುಕೊಂಡು ಬಂದಿರುವ ಹೆಣ್ಣಾನೆಗೆ ಅಂಕುಶವಿಟ್ಟು ಒಲ್ಲದಿದ್ದರೂ ತಿರುಗಿಸುವಂತೆ ನನ್ನನ್ನು ಎಳೆದುಕೊಂಡುಹೋದಳು. ವ।। ಹೀಗೆ ಅವಳು ನನ್ನನ್ನು ಬಲಾತ್ಕಾರದಿಂದ ಎಳೆದೊಯ್ಯಲಾಗಿ, ೫೫. ಮನ್ಮಥನ ಬಾಣಗಳ ಸಮೂಹದಿಂದ ಕೀಲಿಸಲ್ಪಟ್ಟಿರುವಂತೆಯೂ, ಅವನ ಮುಖದ ಸೌಂದರ್ಯವೆಂಬ ಕೆಸರಿನಲ್ಲಿ ಮುಳುಗಿರುವಂತೆಯೂ, ಕೆನ್ನೆಯಮೇಲೆ ಮೂಡಿರುವ ರೋಮಾಂಚವೆಂಬ ಮುಳ್ಳುಗಳ ತುದಿಗಳಲ್ಲಿ ಒಟ್ಟಿಗೆ ಚುಚ್ಚಿಕೊಂಡಿರುವಂತೆಯೂ, ಸೌಂದರ್ಯವೆಂಬ ತಂತುವಿನಿಂದ ಹೊಲಿಯಲ್ಪಟ್ಟಂತೆಯೂ ಅವನಲ್ಲಿ ನಾಟಿಕೊಂಡಿದ್ದ ನನ್ನ ದೃಷ್ಟಿಯನ್ನು ಬಹಳ ಪ್ರಯತ್ನದಿಂದ ಹಾಗೂ ತಳಮಳದಿಂದ ಎಳೆದುಕೊಂಡೆನು. ವ।। ನಾನು ಅಲ್ಲಿಂದ ಹೊರಡಲಾಗಿ ಕೂಡಲೆ ಗೆಳೆಯನು ಅವನ ಧೈರ್ಯಚ್ಯುತಿಯನ್ನು ನೋಡಿ, ೫೬. "ಮಿತ್ರ, ಪುಂಡರೀಕ ! ಕೇವಲ ಪಾಮರರು ಹೋಗುವ ಈ ದಾರಿಯು ನನಗೆ ಯೋಗ್ಯವಲ್ಲ ಎಂಬುದನ್ನು ನೀನು ಮನಸ್ಸಿನಲ್ಲಿ ಸ್ವಲ್ಪವೂ ವಿಚಾರಮಾಡದೆ ಶಾಂತಿಯನ್ನು ಕಳೆದುಕೊಂಡುಬಿಟ್ಟೆ ! ನಿನ್ನ ತಿಳಿವಳಿಕೆ ಎಲ್ಲಿ ಹೋಯಿತು ? ಹೀಗೆ ಎದೆಗೆಟ್ಟು ಪರವಶನಾಗಬಹುದೆ ? ಗೆಳೆಯ, ನಿನಗೆ ಈಗ

ಎಲ್ಲಿತ್ತೊ ಧೈರ್ಯಮುಪಶಮ
ಮೆಲ್ಲಿತ್ತೊ ಜಿತೇಂದ್ರಿಯತ್ವಗುಣಮೆಲ್ಲಿತ್ತೋ
ಎಲ್ಲಿತ್ತೊ ನಿನ್ನ ಶೌರ್ಯಮ
ದೆಲ್ಲಿತ್ತುಪಭೋಗರಾಗವಿಷಯದ್ವೇಷಂ ೫೭

ಎಲ್ಲಿತ್ತೊ ವೇದಸಮುದಯ
ಮೆಲ್ಲಿತ್ತೊ ಬ್ರಹ್ಮಚರ್ಯಮಱಿವೆಲ್ಲಿತ್ತೋ
ಎಲ್ಲಿತ್ತೊ ಯತಿವರತ್ವಮ
ದೆಲ್ಲಿತ್ತೋ ಯೌವನಾನುಶಾಸನಮೀಗಳ್ ೫೮

ವ॥ ಎಂದು ಮಾಣದೆ

ಅತಿಶಯದಿಂ ವಿಷಯಾಸ
ಕ್ತತೆ ನಿನ್ನನ್ನರುಮನಿಂತು ಮಾಡಿತ್ತೆನಲಿಂ
ಮತಿ ನಿಷ್ಫಲಮಾಗಮಸಂ
ತತಿ ನಿರ್ಗುಣಮಱಿವು ನಿಷ್ಪ್ರಯೋಜನಮಲ್ತೇ ೫೯

ವ॥ ಅಂತುಮಲ್ಲದೆಯುಂ

ಎಂತು ಗಡ ನಿನ್ನ ಕೆಯ್ಯಿಂ
ದಂ ತೊಟ್ಟನೆ ಬಿಟ್ಟ ಜಪದಮಣಿಯುಮನೆಲೆ ಮುಂ
ದಂತೊಯ್ಯಲಱಿಯೆನೆನಲಿ
ನ್ನಿಂತಿರೆ ನಿನ್ನಂತೆ ವಿಗತಚಿತ್ತರುಮೊಳರೇ ೬೦

ತಟ್ಟನೆ ಈ ಇಂದ್ರಿಯಗಳ ಕ್ಷೋಭೆಯು ಎಲ್ಲಿಂದ ಬಂತು ? ೫೭. ನಿನ್ನ ಧೈರ್ಯವು ಎಲ್ಲಿ ಹೋಯಿತು ? ನಿನ್ನ ಶಾಂತಿಯು ಎಲ್ಲಿ ಹೋಯಿತು ? ನಿನ್ನ ಇಂದ್ರಿಯನಿಗ್ರಹವು ಎಲ್ಲಿ ಹೋಯಿತು ? ನಿನ್ನ ಗಟ್ಟಿತನವು ಎಲ್ಲಿ ಹೋಯಿತು ? ಸಾಂಸಾರಿಕ ಸುಖಗಳ ವಿಷಯದಲ್ಲಿದ್ದ ತಿರಸ್ಕಾರವು ಎಲ್ಲಿ ಹೋಯಿತು ? ೫೮. ನಿನ್ನ ವೇದರಾಶಿ ಎಲ್ಲಿ ? ನಿನ್ನ ಬ್ರಹ್ಮಚರ್ಯ ಎಲ್ಲಿ ? ನಿನ್ನ ಶಾಸ್ತ್ರಜ್ಞಾನವು ಎಲ್ಲಿ ? ನಿನ್ನ ಯತಿತ್ವವು ಎಲ್ಲಿ ? ಹರಯದ ಮೇಲಿನ ಹತೋಟಿಯು ಈಗ ಎಲ್ಲಿ ಹೋಯಿತು ?" ವ॥ ಎಂದು ಬಿಡದೆ, ೫೯. ಭೋಗಲಾಲಸೆಯು ನಿನ್ನಂತಹವರನ್ನೂ ಬಹಳಮಟ್ಟಿಗೆ ಈ ರೀತಿ ಮಾಡಿಬಿಟ್ಟರೆ ಇನ್ನು ಶಾಸ್ತ್ರಗಳನ್ನು ಓದಿ ಪಡೆದ ವಿವೇಕವು ವ್ಯರ್ಥವಾಯಿತು. ವೇದಶಾಸ್ತ್ರಗಳಿಗೆ ಬೆಲೆಯೇನು ಬಂತು ? ಪರಲೋಕಜ್ಞಾನವು ನಿರರ್ಥಕವಾಯಿತಲ್ಲ ! ೬೦. ನಿನ್ನ ಕಯ್ಯಿಂದ ಜಪಸರವು ಹೇಗೋ ತಟ್ಟನೆ ಕೆಳಕ್ಕೆ ಬಿತ್ತು. ಅವಳು ಅದನ್ನು ಹಾಗೆ ಎದುರಿಗೆ ತೆಗೆದುಕೊಂಡು ಹೋದರೂ ನಿನಗೆ ಗೊತ್ತೇ ಆಗಲಿಲ್ಲವೆಂದಮೇಲೆ ನಿನ್ನಂತೆ

ವ॥ ಅದಱಿನಿನ್ನಾದೊಡಂ ನಿನ್ನ ಮನಮಂ ನೀಂ ನಿಲಿಸಿಕೊಳ್ಳೆಂದು ನುಡಿಯೆ ಲಜ್ಜಿತನಾದಂತೆಗೆಯ್ದು

ಬೆಸೆದು ಕಪಿಂಜಲ ನೀಂ ಭಾ
ವಿಸದಿರ್ ಬೇಱೊಂದು ತೆಱನನವಳೆನ್ನಂ ವಂ
ಚಿಸಿದಪರಾಧಮನಾಂ ಸೈ
ರಿಸುವೆನೆ ನೋಡೆನುತಮೆಟ್ಟು ಪುಸಿಮುಳಿಸಿಂದಂ ೬೧

ಪಿರಿದುಂ ಪ್ರಯತ್ನದಿಂದಮೆ
ವಿರಚಿಸೆ ಕಣ್ಗೆಸೆವ ಭೀಷಣಭ್ರುಕುಟಿ ಪೊದ
ಟ್ದಿರೆ ಚುಂಬನಾಭಿಲಾಷ
ಸ್ಫುರಿತಾಧರನಾ ಕುಮಾರತಾಪಸನೆನ್ನಂ ೬೨

ಕುಡು ಚಪಳೆ ಜಪದಮಣಿಯಂ
ಕುಡದಿನ್ನೊಂದಡಿಯನಪ್ಪೊಡಂ ಪೋಗದಿರೆಂ
ದೊಡೆ ಕೇಳ್ದು ಜಪದಮಣಿಗೆ
ತ್ತೊಡನೆಯೆ ಹಾರಮನೆ ತೆಗೆವೆನೆನ್ನಯ ಕೊರಲಿಂ ೬೩

ವ॥ ಅಂತು ಮಕರಧ್ವಜಲಾಸ್ಯಾರಂಭಲೀಲಾಪುಷ್ಪಾಂಜಲಿಯೆನಿಸಿದೇಕಾವಳಿಯಂ ತೆಗೆದುಕುಡುವಿನಮಾತನುಂ ಮನ್ಮುಖಾಸಕ್ತದೃಷ್ಟಿಯಿಂ ಮೆಯ್ಯಱಿಯದಕ್ಷಾವಳಿಗೆತ್ತು ಕಳೆದು ಕೊಳ್ವುದುಮಾನಾಗಳಲ್ಲಿಂ ತಳರ್ದು

ಪ್ರಜ್ಞೆಯೇ ಇಲ್ಲದವರು ಯಾರಿದ್ದಾರೆ ? ವ॥ ಅದರಿಂದ ಈಗಲಾದರೂ ನಿನ್ನ ಮನಸ್ಸನ್ನು ನೀನು ಹತೋಟಿಯಲ್ಲಿಟ್ಟುಕೊ" ಎಂದು ಹೇಳಲಾಗಿ ನಾಚಿಕೆಗೊಂಡವನಂತೆ ನಟಿಸಿ ೬೧. "ಕಪಿಂಜಲ! ಹೀಗೆ ನೀನು ಒಂದೊಂದಕ್ಕೆ ಗಂಟುಹಾಕಿ ಬೇರೆ ಏನನ್ನೂ ತಿಳಿದುಕೊಳ್ಳಬೇಡ. ಅವಳು ನನಗೆ ಮೋಸಮಾಡಿದ ತಪ್ಪನ್ನು ನಾನು ಖಂಡಿತ ಸಹಿಸುವುದಿಲ್ಲ. ನೋಡು" ಎಂದು ಹೇಳುತ್ತ ಕೃತಕಕೋಪದಿಂದ ಎದ್ದು, ೬೨. ಬಹಳ ಪ್ರಯಾಸದಿಂದ ಅವನು ಹುಬ್ಬು ಗಂಟುಹಾಕಿಕೊಂಡನು. ಅವನ ಭಯಂಕರವಾದ ಹುಬ್ಬುಗಂಟೂ ಬಹಳ ರಮ್ಯವಾಗಿ ಕಾಣುತ್ತಿತ್ತು. ನನಗೆ ಮುತ್ತಿಕ್ಕುವ ಆಸೆಯಿಂದಲೋ ಏನೋ ಅವನ ತುಟಿ ಅದುರುತ್ತಿತ್ತು. ಆಗ ಆ ತರುಣಮುನಿಯು ನನ್ನನ್ನು ಕುರಿತು. ೬೩. "ಎಲೈ ಚಂಚಲಬುದ್ಧಿಯುಳ್ಳವಳೆ, ನನ್ನ ಜಪಸರವನ್ನು ಕೊಡದೆ ಮುಂದಕ್ಕೆ ಒಂದು ಹೆಜ್ಜೆಯನ್ನೂ ಇಡಬೇಡ!'' ಎಂದು ಹೇಳಲಾಗಿ ನಾನು ನನ್ನ ಕೊರಳಿನಲ್ಲಿದ್ದ ಹಾರವನ್ನು ಜಪಸರವೆಂದು ತಿಳಿದು ಕೈಗೆ ತೆಗೆದುಕೊಂಡೆನು. ವ॥ ಹೀಗೆ ಮನ್ಮಥನ ನೃತ್ಯಾರಂಭ ವಿನೋದಕ್ಕೆ ನಾಂದಿಯ ಪುಷ್ಪಾಂಜಲಿಯೆನಿಸಿದ ಮುತ್ತಿನ ಸರವನ್ನು ತೆಗೆದು ಕೊಟ್ಟೆನು. ಅವನೂ ನನ್ನ ಮುಖದಲ್ಲೇ ನೆಟ್ಟದೃಷ್ಟಿಯಿಂದ ಶೂನ್ಯಹೃದಯನಾಗಿ ಅದನ್ನೇ ಜಪಸರವೆಂದು ತಿಳಿದುಕೊಂಡು ತೆಗೆದುಕೊಂಡನು. ನಾನು ಅಲ್ಲಿಂದ ಹೊರಟು.

ಕಳವಳಿಸಿ ಬೆಮರ್ತಾಗಳ್
ಕೊಳದೊಳ್ ಮೀಯಲ್ಕತಿಪ್ರಯತ್ನದಿನೊಯ್ದರ್
ಕೆಳದಿಯರೆಂತಾನುಂ ತೆಗೆ
ದಳವಿಲ್ಲದೆ ಬಂದ ನದಿಯನಿದಿರೇಱುವವೋಲ್ ೬೪

ವ॥ ಅಂತೊಯ್ಯಲ್ ನಿಜಜನನಿಯೊಡನೆಂತಾನುಮರಮನೆಗೆ ಬಂದು ಮದೀಯ ಮಂದಿರಮಂ ಪೊಕ್ಕು ತದ್ವಿಯೋಗದೊಳ್ ಮೆಯ್ಯಱಿಯದೆ

ಮನೆಗೇಂ ಬಂದೆನೊ ಬಾರೆನೋ ಸಖಿಯರೊಳ್ ಕೂಡಿರ್ದೆನೋ ಕೂಡದಿ
ರ್ದೆನೊ ಮೇಣ್ ನಿದ್ರೆಯೊಳಿರ್ದೆನೋ ಪಿರಿದುಮೆಚ್ಚತ್ತಿರ್ದೆನೋ ಮೌನದಿ
ರ್ದೆನೊ ಮಾತಾಡುತ್ತಿರ್ದೆನೋ ವ್ಯಸನದೊಳ್ ಸಂದಿರ್ದೆನೋ ರಾಗದಿ
ರ್ದೆನೊ ಪೇಟಾಂ ನಗುತಿರ್ದೆನೋ ಮನದೊಳಂದಾಸತ್ತಮಿತ್ತಿರ್ದೆನೋ ೬೫

ಇದು ದಿವಮೋ ರಾತ್ರಿಯೊ ಮೇ
ಣಿದು ದುಃಖಮೊ ರುಜೆಯೊ ಕಳವಳಮೊ ಪೇೞಿದು ಪೊ
ಲ್ಲದೊ ತಾನಿಧೊಳ್ಳಿತೋ ಮೇ
ಣಿದೆಂಬುದುಂ ಬಗೆಯಲಾರ್ತೆನಿಲ್ಲಾಕ್ಷಣದೊಳ್ ೬೬

೬೪. ಕಳವಳಗೊಂಡು ಬೆವರಿನಿಂದಲೇ ಸ್ನಾನಮಾಡಿದಂತೆ ಆಗಿದ್ದರೂ ಕೊಳದಲ್ಲಿ ಸ್ನಾನ ಮಾಡಿದೆನು. ಬಳಿಕ ಸಖಿಯರು ಹರಿಯುವ ನದಿಯನ್ನು ಅಡ್ಡಲಾಗಿ ತಿರುಗಿಸುವಂತೆ ಕೈಲಾಗದಿದ್ದರೂ ಬಹಳ ಕಷ್ಟದಿಂದ ಹೇಗೋ ಬಲಾತ್ಕಾರದಿಂದ ನನ್ನನ್ನು ಮನೆಗೆ ಕರೆದುಕೊಂಡು ಹೋದರು. ವ॥ ಹಾಗೆ ಕರೆದುಕೊಂಡು ಹೋಗಲಾಗಿ ನನ್ನ ತಾಯಿಯೊಂದಿಗೆ ಬಹಳ ಕಷ್ಟದಿಂದ ಅರಮನೆಗೆ ಬಂದು ನನ್ನ ವಾಸದ ಮಹಲನ್ನು ಸೇರಿ ಅವನ ವಿರಹದಿಂದ ದೇಹದ ಮೇಲೆ ಪ್ರಜ್ಞೆಯಿಲ್ಲದೆ, ೬೫. ಮನೆಗೆ ಬಂದೆನೊ ಬರಲಿಲ್ಲವೋ, ಗೆಳತಿಯರ ಜೊತೆಯಲ್ಲಿ ಇದ್ದೇನೋ ಅಥವಾ ಇಲ್ಲವೋ, ನಿದ್ರೆ ಮಾಡುತ್ತಿರುವೆನೋ ಸರಿಯಾಗಿ ಎಚ್ಚರವಾಗಿದ್ದೇನೊ, ಮೌನವಾಗಿದ್ದೇನೊ ಮಾತಾಡುತ್ತಿದ್ದೇನೋ ದುಃಖದಲ್ಲಿದ್ದೇನೊ ಸುಖವಾಗಿದ್ದೇನೊ, ನಗುತ್ತಿರುವೆನೊ ಅಥವಾ ದುಗುಡದಿಂದ ಅಳುತ್ತಿದ್ದೇನೊ ೬೬. ಇದು ಹಗಲೋ ರಾತ್ರಿಯೊ, ಇದು ದುಃಖವೊ ರೋಗವೋ ಅಥವಾ ಮನಸ್ಸಿನ ಕಳವಳವೊ, ಇದು ಕೆಟ್ಟದ್ದೊ ಅಥವಾ ಒಳ್ಳೆಯದೊ ಎಂಬುದನ್ನು

ಅದಾವೆಡೆಗೆ ಪೋಪುದಿನ್ನುಡಿವುದಾರೊಳಿನ್ನಟ್ಕಱಿಂ
ದದಾವುದನೆ ಕೇಳ್ವೆನಿಂ ಪಡೆದು ನೋಟ್ಪುದಿನ್ನೇನನಿ
ನ್ನದಾರ್ಗಿದನೆ ಪೇಟ್ವೆನಿನ್ನೆನಗೆ ಬಾಟ್ಕೆ ಪೇಟಾವುದಿಂ
ದದೇನುಮಱಿಯಲ್ಕೆ ಬಾರದೆ ಮನೋಭವೋದ್ರೇಕದಿಂ ೬೭

ವ॥ ಅನಂತರಂ ಸಖೀಜನಮುಮಶೇಷ ಪರಿಜನಮುಮಂ ಬಾಗಿಲೊಳ್ ನಿಲಿಸಿ ಕನ್ಯಾಂತಃಪುರಪ್ರಾಸಾದಮನೇಱಿ ತದೀಯಮಣಿಗವಾಕ್ಷನಿಕ್ಷಿಪ್ತಮುಖಿಯೆನಾಗಿ

ಅದು ಪೀಯೂಷಪಯೋಧಿಪೂರಲಹರೀಸಂತಾನದಿಂ ಚೆಲ್ವಪೆ
ತ್ತುದೊ ಮಾಣಿಕ್ಯನಿಧಾನದಿಂ ಸಮೆದು ತೋಱುತ್ತಿರ್ದುದೋ ಚಂದ್ರಬಿಂ
ಬದಿನೊಪ್ಪಂಬಡೆದತ್ತೊ ಮೇಣ್ ಪಸದನಂಗೊಂಡಿರ್ದುದೋ ಪೇಟಿನಲ್
ಪದೆದಾಂ ನೋಡಿದೆನಾತನಿರ್ದ ದೆಸೆಯಂ ನಟ್ಟಾಲಿ ಬೀಟ್ಪನ್ನೆಗಂ ೬೮

ವ॥ ಅದಲ್ಲದೆಯುಂ

ಆ ದೆಸೆಯಿಂ ಬರ್ಪೆಲರುಮ
ನಾ ದೆಸೆಯಿಂದೆಸೆವ ಕುಸುಮಪರಿಮಳಮುಮನಂ
ತಾ ದೆಸೆಯಿನೆಸೆವ ವಿಹಗನಿ
ನಾದಮುಮಂ ವಾರ್ತೆಗೇಟಲಾನೊಡರಿಸಿದೆಂ ೬೯

ಅರಿವೇ ಆಗ ನನಗೆ ಇರಲಿಲ್ಲ. ೬೭. ಎಲ್ಲಿಗೆ ಹೋಗಲಿ ? ಇದನ್ನು ಯಾರೊಡನೆ ಆತ್ಮೀಯಂತೆಯಿಂದ ಮಾತಾಡಲಿ ? ಯಾವುದನ್ನು ಕೇಳಲಿ ? ಯಾವುದನ್ನು ಆಸೆಯಿಂದ ನೋಡಲಿ ? ಇನ್ನು ಯಾರಿಗೆ ಇದನ್ನು ಹೇಳಲಿ ? ಇನ್ನು ನನ್ನ ಬದುಕು ಹೇಗೆ ? ಎಂಬುದನ್ನು ಮಿಗಿಲಾದ ವಿರಹವೇದನೆಯಿಂದ ತಿಳಿಯಲಾರದೆ ಹೋದೆನು. ವ॥ ಬಳಿಕ ಗೆಳತಿಯರನ್ನೂ ಎಲ್ಲಾ ಊಳಿಗದವರನ್ನೂ ಬಾಗಿಲಿನಲ್ಲೆ ನಿಲ್ಲಿಸಿ, ಕನ್ನೆವಾಡದ ಮಹಡಿಯನ್ನು ಹತ್ತಿ ಅದರ ರತ್ನಮಯವಾದ ಕಿಟಿಕಿಯಲ್ಲಿ ಮುಖವನ್ನು ಇಟ್ಟುಕೊಂಡು, ೬೮. ಅಮೃತಸಾಗರದ ಪ್ರವಾಹದ ಪರಂಪರೆಗಳಿಂದ ಚಲುವನ್ನು ಪಡೆದಿದೆಯೊ ಎಂಬಂತೆಯೂ, ಮಾಣಿಕ್ಯದ ನಿಧಿಯಿಂದಲೇ ನಿರ್ಮಿಸಲ್ಪಟ್ಟಿದೆಯೊ ಎಂಬಂತೆಯೂ, ಚಂದ್ರಮಂಡಲದಿಂದ ಅಂದವಾಗಿದೆಯೊ ಎಂಬಂತೆಯೂ ಅಥವಾ ಚೆನ್ನಾಗಿ ಸಿಂಗರಿಸಲ್ಪಟ್ಟಿದೆಯೊ ಎಂಬಂತೆಯೂ ಆತನು ಇದ್ದ ದಿಕ್ಕನ್ನೇ ನಟ್ಟದೃಷ್ಟಿಗಳು ಸೋತು ಹೋಗುವವರೆಗೂ ಬಹಳ ಆಸಕ್ತಿಯಿಂದ ನೋಡುತ್ತಿದ್ದೆನು. ವ॥ ಅದಲ್ಲದೆ, ೬೯. ಆ ಕಡೆಯಿಂದ ಬರುತ್ತಿರುವ ಗಾಳಿಯನ್ನೂ, ಆ ಕಡೆಯಿಂದ ಬರುವ ಹೂವಿನ ವಾಸನೆಯನ್ನೂ, ಆ ಕಡೆಯಿಂದ ಕೇಳಿಬರುವ ಹಕ್ಕಿಗಳ ಧ್ವನಿಯನ್ನೂ ಅವನ ಸಮಾಚಾರ

ವ॥ ಮತ್ತಮಾತಂ ಕೈಕೊಂಡುದಱಿಂ ಋಷಿವೇಷಕ್ಕಗ್ರಾಮ್ಯತೆಯುಂ ಆತನಂ ಪೊರ್ದಿದ ಜವ್ವನಕ್ಕೆ ಸೌಂದರ್ಯಮುಂ ಆತನ ಕಿವಿಗವತಂಸಮಾದ ಪಾರಿಜಾತಕುಸುಮಮಂಜರಿಗೆ ಮನೋಹರತೆಯುಮಾತನಿರವಿಂದಮೆ ಸುರಲೋಕಕ್ಕೆ ರಮಣೀಯತೆಯುಮಾತನ ರೂಪ ಸಂಪತ್ತಿಯಿಂ ಕುಸುಮಾಯುಧಂಗೆ ದುರ್ಜಯತ್ವಮುಮಾದುದೆಂದು ಬಗೆಯುತ್ತಮಾ ಸೌಭಾಗ್ಯ ನಿಧಿಯ ವಿಯೋಗದಿಂ ಜೀವವಿಯೋಗಮಾಗದಿರ್ಕೆಂದು ತಗುಳ್ಚಿದ ರಕ್ಷಾವಳಿಯಂತೆ ಕೊರಲೊಳಿಕ್ಕಿ ರ್ದಕ್ಷಾವಳಿಯುಂ ಆತನ ರಹಸ್ಯಾಲಾಪದಂತೆ ಕಿವಿಗೆವಂದು ರಾಜಿಸುವ ಪಾರಿಜಾತಕುಸುಮ ಮಂಜರಿಯುಮಾತನ ಕರತಲಸ್ಪರ್ಶಸುಖದಿಂ ಕಪೋಲತಲ ಕದಂಬಮುಕುಳಕರ್ಣಪೂರದಂ ತುಣ್ಮಿದ ಪುಳಕಮುಂಬೆರಸು ಗದ್ಗದಚಿತ್ತೆಯೆನೇಕಾಕಿಯಾಗಿರ್ಪುದುಮನ್ನೆಗಮೆನ್ನ ತಾಂಬೂಲ ಕರಂಕವಾಹಿನಿ [ತರಳಿಕೆ] ಮಕರಿಕೆಯೆಂಬಳ್ ಪೆಱಗೆ ಕಿಱಿದುಬೇಗಂ ಮೀಯಲೆಂದು ನಿಂದನಂ ತರಂ ಮತ್ಸಮೀಪಕ್ಕೆ ಬಂದು ಮೆಲ್ಲನಿಂತೆಂದಳ್

> ತೊಡಸಿದನಾವನೀ ಕುಸುಮಮಂಜರಿಯಂ ನಿನಗಾತನಕ್ಕ ತ
> ನ್ನೊಡವರುತಿರ್ದ ತಾಪಸಕುಮಾರನನಾಗಳೆ ವಂಚಿಸಲ್ಕೆ ತ
> ಳ್ತಿಡಿದ ಲತಾಪ್ರಸೂನದೊಳಪೊಕ್ಕುಟಿದೊಯ್ಯನೆ ಸಾರ್ದು ಮೆಲ್ಲೊಡಂ
> ಬಡೆ ಬೆಸಗೊಂಡನೆನ್ನನನುರಾಗದಿನೆಯ್ದೆ ಭವತ್ಪ್ರಪಂಚಮಂ ೨೦

ವನ್ನು ಕೇಳಲು ಉದ್ಯುಕ್ತಳಾಗುತ್ತಿದ್ದೆನು. ವ॥ ಅವನು ಕೈಗೊಂಡಿರುವುದರಿಂದ ಋಷಿವೇಷವು ಒರಟುವೇಷವಲ್ಲವೆಂದೂ, ಅವನಲ್ಲಿ ಕೂಡಿರುವುದರಿಂದ ಹರಯವು ಬಹಳ ಸುಂದರವಾಯಿತೆಂದೂ, ಅವನು ಕಿವಿಯಲ್ಲಿ ಮುಡಿದುಕೊಂಡಿರುವುದ ರಿಂದ ಪಾರಿಜಾತದ ಹೂಗೊಂಚಲು ಮನೋಹರವಾಗಿರುವುದೆಂದೂ, ಆತನು ಇರುವುದರಿಂದಲೇ ಸ್ವರ್ಗಲೋಕವು ರಮಣೀಯವಾಗಿರುವುದೆಂದೂ, ಅವನಷ್ಟು ರೂಪ ಸಂಪತ್ತು ಇರುವುದರಿಂದಲೇ ಮನ್ಮಥನನ್ನು ಸೋಲಿಸಲು ಯಾರಿಗೂ ಸಾಧ್ಯವಿಲ್ಲವೆಂದೂ ಆಲೋಚಿಸುತ್ತಾ ಆ ಪುಣ್ಯಾತ್ಮನ ವಿರಹದಿಂದ ಪ್ರಾಣವು ಹೋಗದಿರಲೆಂದು ಕಟ್ಟಿ ಕೊಂಡಿರುವ ರಕ್ಷೆಯ ಸರದಂತೆ ಕೊರಳಲ್ಲಿ ಹಾಕಿಕೊಂಡಿರುವ ಜಪಸರವನ್ನೂ, ಅವನು ಹೇಳುವ ಏಕಾಂತದ ಪಿಸುಮಾತಿನಂತೆ ಕಿವಿಯನ್ನು ಸೇರಿ ಶೋಭಿಸುತ್ತಿರುವ ಪಾರಿಜಾತ ಕುಸುಮಮಂಜರಿಯನ್ನೂ, ಹಾಗೆಯೆ ಅವನು ಕೈಯಿಂದ ಮುಟ್ಟಿದ್ದರಿಂದ ಉಂಟಾದ ಸುಖದಿಂದ ಕೆನ್ನೆಯಲ್ಲಿ ಮೂಡಿರುವ ಹಾಗೂ ಕಿವಿಯಲ್ಲಿ ಮುಡಿದುಕೊಂಡಿರುವ ಕಡಹದ ಹೂವಿನ ಮೊಗ್ಗುಗಳಂತೆ ಶೋಭಿಸುವ ರೋಮಾಂಚನದಿಂದಲೂ ಕೂಡಿಕೊಂಡವಳಾಗಿ, ಬೇಸರದಿಂದ ಕೂಡಿದ ಮನಸ್ಸುಳ್ಳವಳಾಗಿ ಒಬ್ಬಂಟಿಗಳಾಗಿಯೇ ಕುಳಿತುಕೊಂಡಿದ್ದೆನು. ಅಷ್ಟರಲ್ಲಿ ನನ್ನ ತಾಂಬೂಲಕರಂಕಧಾರಿಣಿಯಾದ ಮಕರಿಕೆ [ತರಳಿಕೆ] ಯೆಂಬುವಳು ಸ್ನಾನಕ್ಕಾಗಿ ನಮ್ಮ ಹಿಂದೆ ಸ್ವಲ್ಪಹೊತ್ತು ಕೊಳದ ಬಳಿ ಉಳಿದುಕೊಂಡಿದ್ದು ಬಳಿಕ ನನ್ನ ಹತ್ತಿರಕ್ಕೆ ಬಂದು ಮೆಲ್ಲನೆ ಹೀಗೆ ಹೇಳಿದಳು. ೨೦. "ಅಮ್ಮ ! ನಿನಗೆ ಈ ಹೂ ಗೊಂಚಲನ್ನು ತೊಡಗಿಸಿದನಲ್ಲ, ಅವನು ತನ್ನ ಸಂಗಾತಿಯಾದ ಋಷಿಕುಮಾರನ ಕಣ್ಣಿಗೆ

ವ॥ ಅದೆಂತೆನೆ

ಆ ಕನ್ನೆಯಾರ್ಗೆ ಪೆಸರೇ
ನೇಕಿಲ್ಲಿಗೆ ಬಂದಳಾರ ಮಗಳೆಸೆವಲರ್ದ
ಬ್ಜಾಕರದಿನೆತ್ತ ಪೋದಪ
ಳೇಕೆಯೆನಲ್ ಮುನಿಕುಮಾರಕಂಗಿಂತೆಂದೆಂ ೭೧

ವ॥ ಅದೆಂತೇದೊಡೆ ದಿನ[ಅಮೃತ]ಕರಮರೀಚಿಯಿಂದಾದಪ್ಸರಸಿಯೊಳುದಿಸಿದ ಗೌರಿಗಂ ಗಂಧರ್ವಲೋಕಾಧಿಪತಿಯಪ್ಪ ಹಂಸಂಗಂ ಮಗಳಾಗಿ ಮಹಾಶ್ವೇತೆಯೆಂಬ ಪೆಸರಿಂ ನೆಗೞ್ತೆವೆತ್ತಳದಲ್ಲದೆಯುಂ ಇಂದು ಜನನಿಯೊಡನೀ ಸರೋವರಮಂ ಮೀಯಲೆಂದು ಬಂದಾತ್ಮ ನಿವಾಸಮಪ್ಪ ಹೇಮಕೂಟಾಚಲಕ್ಕೆ ಪೋಗುತ್ತಿರ್ದಳೆಂಬುದುಂ ಕಿಱಿದುಬೇಗಮೇನಾನುಮಂ ತನ್ನೊಳೆ ಬಗೆಯುತ್ತಮಿರ್ದನಂತರಮೆನ್ನನಿಂತೆಂದಂ

ಎಳವಿಯೊಳಂ ಗಾಂಭೀರ್ಯಮ
ನೊಳಕೊಂಡ ಭವತ್ಸ್ವರೂಪಮಂ ಕಂಡೀ ಕೋ
ಮಳೆಯಂ ಪ್ರಾರ್ಥಿಸಿದೊಡೆ ನಿ
ಷ್ಫಲಮಾಗದೆನುತ್ತೆ ಬಂದೆನಾನಿಂದುಮುಖೀ ೭೨

ಬೀಳದಂತೆ ದಟ್ಟವಾಗಿ ಬೆಳೆದುಕೊಂಡಿರುವ ಬಳ್ಳಿಗಳ ಗುಂಪಿನಲ್ಲಿ ಒಳಹೊಕ್ಕು ನುಸುಳಿಕೊಂಡು ಮೆಲ್ಲನೆ ಬಂದು ನನ್ನನ್ನು ಕುರಿತು ನಯವಾದ ಮಾತುಗಳಿಂದ ನಿನ್ನ ವಿಷಯವನ್ನೆಲ್ಲ ಬಹಳ ಅಕ್ಕರೆಯಿಂದ ಕೇಳಿದನು. ವ॥ ಅದು ಹೇಗೆಂದರೆ ೭೧. "ಈ ಹುಡುಗಿಯು ಯಾರ ಕಡೆಯವಳು ? ಇವಳ ಹೆಸರೇನು ? ಇಲ್ಲಿಗೆ ಏಕೆ ಬಂದಳು ? ಯಾರ ಮಗಳು ? ಈ ಅರಳಿರುವ ಹೂವುಗಳಿಂದ ಶೋಭಿಸುವ ತಾವರೆಗೊಳದಿಂದ ಯಾವ ಕಡೆ ಹೋದಳು ?" ಎಂದು ಕೇಳಿದನು. ಆಗ ನಾನು ಆ ಮುನಿಕುಮಾರನನ್ನು ಕುರಿತು ಹೀಗೆ ಹೇಳಿದೆನು. ವ॥ ಅದೇನೆಂದರೆ, "ಇವಳು ಸೂರ್ಯಕಿರಣ [ಚಂದ್ರಕಿರಣ] ಗಳಿಂದ ಉತ್ಪನ್ನವಾದ ಅಪ್ಸರಸ್ತ್ರೀಯರ ವಂಶದಲ್ಲಿ ಹುಟ್ಟಿದ ಗೌರಿ ಮತ್ತು ಗಂಧರ್ವ ಲೋಕಾಧಿಪತಿಯಾದ ಹಂಸ ಎಂಬುವರ ಮಗಳು. ಇವಳ ಹೆಸರು "ಮಹಾಶ್ವೇತೆ". ಎಂದು ಈದಿನ ತಾಯಿಯೊಡನೆ ಈ ಸರೋವರಕ್ಕೆ ಸ್ನಾನಕ್ಕೆ ಬಂದಿದ್ದಳು. ಈಗ ತನ್ನ ಮನೆಯಾದ ಹೇಮಕೂಟಕ್ಕೆ ಹೋಗುತ್ತಿದ್ದಾಳೆ ಎಂದು ಹೇಳಲಾಗಿ ಸ್ವಲ್ಪಹೊತ್ತು ತನ್ನಲ್ಲೇ ಏನನ್ನೋ ಆಲೋಚಿಸುತ್ತಿದ್ದು ಬಳಿಕ ನನ್ನನ್ನು ಕುರಿತು ಹೀಗೆ ಹೇಳಿದನು. ೭೨. "ಎಲೈ ಚಂದ್ರನಂತೆ ಮುಖವುಳ್ಳವಳೆ, ಈ ಸಣ್ಣವಯಸ್ಸಿನಲ್ಲೇ ಇಷ್ಟು ಗಂಭೀರವಾಗಿರುವ ನಿನ್ನ ಆಕಾರವನ್ನು ಕಂಡು ಈ ಮೃದುಸ್ವಭಾವದವಳನ್ನು ಕೇಳಿಕೊಂಡರೆ ನನ್ನ ಕೋರಿಕೆಯು ವಿಫಲವಾಗದೆಂದು ಭರವಸೆಯಿಂದ ನಿನ್ನಲ್ಲಿಗೆ ಬಂದಿದ್ದೇನೆ."

ವ॥ ಎಂದು ನುಡಿಯಲಾನಾಗಳಾದರಂಬೆರಸು ಕೈಗಳಂ ಮುಗಿದು

ಬೆಸಸುವುದಂತದಿರ್ಕೆಮ ಭವದ್ವಿಧರಪ್ರತಿಮಪ್ರಭಾವರೀ
ಕ್ಷಿಸುವರೆ ಮುನ್ನ ಮದ್ವಿಧರನೆನ್ನವೊಲಾದಮೆ ನೋಂತಳಾವಳಿ
ನ್ನುಸಿರ್ವುದು ನನ್ನಿಯಿಂ ನುಡಿಯೆ ಕಾರ್ಯವನೆನ್ನವಳೀಕೆಯೆಂದು ಭಾ
ವಿಸಿ ಕೃತಕೃತ್ಯೆಯಪ್ಪೆನೆನಲಾಗಳೆ ಸಂತಸವಂ ನೆಗಟ್ಟಿದಂ ೭೩

ವ॥ ಅಂತುಮಲ್ಲದೆಯುಂ

ಕಿಲದೊಳಳುರ್ತು ಕಾರ್ಮುಗಿಲೆ ಪರ್ವಿದುದೆಂಬಿನೆಗಂ ಕಜಿಂಗಿ ಕ
ತ್ತಲಿಪ ತಮಾಲಪಾದಪದ ಪಲ್ಲವಮಂ ಹಿಳಿದೊಂದು ನಿರ್ಮಲೋ
ಪಲತಳದಲ್ಲಿ ತದ್ರಸದಿನಾಗಳೆ ನೋಡಿ ನಿಜೋತ್ತರೀಯ ವ
ಲ್ಕಲವಸನೈಕದೇಶಮನೆ ಸೀಳ್ದದಟಿೊಳ್ ಬರೆದಂ ತಳೋದರೀ ೭೪

ವ॥ ಅನಂತರಂ

ಏಕಾಂತದೊಳೀ ಲೇಖಮ
ನಾ ಕನ್ನೆಗೆ ಪೋಗಿ ಕುಡುವುದೆಂದಟ್ಟಿದನೆಂ
ದಾಕೆ ನುಡಿಯುತ್ತಮಿಂದ
ಪ್ರಾಕಟವದನಡಪದೊಳಗಣಿಂ ತೆಗೆದಾಗಳ್ ೭೫

ವ॥ ಹೀಗೆ ಹೇಳಲಾಗಿ ಆಗ ನಾನು ಆದರದಿಂದ ಕೈಜೋಡಿಸಿ, ೭೩. "ಪೂಜ್ಯರೆ, ಅಪ್ಪಣೆಮಾಡುವುದಿರಲಿ, ತಮ್ಮಂತಹ ಅಸಾಧಾರಣ ಮಹಿಮೆಯುಳ್ಳ ಮಹನೀಯರು ನನ್ನಂತಹವಳನ್ನು ಕಣ್ಣೆತ್ತಿಕೂಡ ನೋಡುವುದೆಂದರೇನು ಸಾಮಾನ್ಯವೆ? ನನ್ನಂತೆ ಅತಿಶಯವಾದ ಪುಣ್ಯಮಾಡಿದವರು ಯಾರಿದ್ದಾರೆ ? ನಿಜವನ್ನು ಹೇಳುವುದಾದರೆ ಇವಳು ಆತ್ಮೀಯಳೆಂದು ಭಾವಿಸಿ ನನ್ನಿಂದ ಏನಾಗಬೇಕೆಂಬುದನ್ನು ಅಪ್ಪಣೆಕೊಡಿಸಬೇಕು. ಆಗ ನಾನು ಕೃತಾರ್ಥಳಾಗುತ್ತೇನೆ." ಎಂದು ನಾನು ಹೇಳಿದೆನು. ಆಗ ಅವನು ಬಹಳ ಸಂತೋಷಪಟ್ಟುಕೊಂಡನು. ವ॥ ಅದೂ ಅಲ್ಲದೆ ೭೪. "ಎಲೈ ತೆಳುವಾದ ಹೊಟ್ಟೆಯುಳ್ಳವಳೆ, ಕಪ್ಪುಮೋಡವು ಕವಿದಿರುವಂತೆ ಪಕ್ಕದಲ್ಲೇ ಹರಡಿಕೊಂಡು ಬೆಳೆದಿರುವ ಕಪ್ಪಾಗಿ ಕತ್ತಲೆಯನ್ನುಂಟುಮಾಡುವಂತಿರುವ ಹೊಂಗೆಮರದ ಚಿಗುರುಗಳನ್ನು ಆ ಮುನಿಕುಮಾರನು ತೆಗೆದುಕೊಂಡು ನಿರ್ಮಲವಾದ ಕಲ್ಲಿನ ಮೇಲೆ ಹಿಂಡಿದನು. ಅತ್ತಿತ್ತ ನೋಡಿ ತಾನು ಹೊದೆದಿದ್ದ ನಾರುಪಂಚೆಯ ಒಂದು ಕಡೆಯನ್ನು ಹರಿದು ಅದರ ಮೇಲೆ ಹೊಂಗೆಯ ರಸದಿಂದ (ತನ್ನ ಬಲಗೈ ಕಿರುಬೆರಳಿನ ಉಗುರಿಂದ) ಬರೆದನು. ವ॥ ಆಮೇಲೆ ೭೫. ಯಾರಿಗೂ ಕಾಣಿಸದಂತೆ ಈ ಪತ್ರವನ್ನು ತೆಗೆದುಕೊಂಡುಹೋಗಿ ಆ ಹುಡುಗಿಗೆ ಕೊಟ್ಟುಬಿಡು ಎಂದು ಹೇಳಿಕಳುಹಿಸಿದ್ದಾನೆ ಎಂದು ಅವಳು ಆ ರಹಸ್ಯಪತ್ರ

ಅದು ಶಬ್ದಾತ್ಮಕಮಾಗಿಯುಂ ಪಿರಿದುಮಂದಂತರ್ಗತಸ್ಪರ್ಶಸೌ
ಖ್ಯದವೊಲ್ಮಾಡುತಮಾಗಳಂತೆ ಕಿವಿವೊಕ್ಕುಂ ಮೆಯ್ಯೆಳಂತೆಯ್ದೆ ಪೊ
ಕ್ಕುದನುದ್ಯತ್ಪುಳಕಂಗಳಿಂದಱಿಯಿಸುತ್ತುಂ ಮನ್ಮಥಾವೇಶಮಂ
ತ್ರದವೋಲಾತನ ವಾರ್ತೆ ಮೆಯ್ಯಱಿಯದಿರ್ಪಂತೆನ್ನನೇಂ ಮಾಡಿತೋ ೭೬

ವ॥ ಅನಂತರಮಾ ಲೇಖನಮಂ ಕಳೆದುಕೊಂಡು ನಿಮಿರ್ಚಿ ನೋಟ್ಪನ್ನೆಗಮಲ್ಲಿ

ದೂರಂ ಮುಕ್ತಾಲತಯಾ । ಬಿಸಸಿತಯಾ ವಿಪ್ರಲಭ್ಯಮಾನೋ ಮೇ
ಹಂಸ ಇವ ದರ್ಶಿತಾಶೋ । ಮಾನಸಜನ್ಮಾತ್ವಯಾನೀತಃ ೭೭

ಎನಗಾಸೆದೋಱ ಬಿಸಸಿತ
ಮನಿಸುವ ನಿಜಹಾರಲತೆಯಿಂದಂ ಹಂ
ಸನವೊಲ್ಮಾನಸಸಂಭವ
ಮೆನಿಪ ಮದೀಯಾಭಿಮಾನಮಂ ಕಟ್ಟೊಯ್ದಾ ೭೮

ವನ್ನು ತನ್ನ ಸಂಚಿನಿಂದ ತೆಗೆದುಕೊಟ್ಟಳು. ೭೬. ಅವಳು ಹೇಳಿದ ಪುಂಡರೀಕನ ವೃತ್ತಾಂತವು ಕೇವಲ ಶಬ್ದಮಯವಾಗಿದ್ದರೂ ಆಲಿಂಗನದಿಂದ ಉಂಟಾಗುವ ಸ್ಪರ್ಶ ಸುಖವನ್ನು ಕೊಡುವಂತೆ ಇತ್ತು. ಕಿವಿಯನ್ನು ಮಾತ್ರ ಪ್ರವೇಶ ಮಾಡಿದ್ದರೂ ಶರೀರ ದಲ್ಲೆಲ್ಲಾ ಒಳಹೊಕ್ಕು ವ್ಯಾಪಿಸಿಕೊಂಡಿರುವುದನ್ನು ಹೊರಹೊಮ್ಮುತ್ತಿರುವ ರೋಮಾಂಚನಗಳಿಂದ ತಿಳಿಯಪಡಿಸುವಂತಿತ್ತು. ಮನ್ಮಥನನ್ನು ಮೈಮೇಲೆ ಬರಿಸು ವಂತೆ ಮಾಡುವ (ಕಾಮಾವೇಶ) ಮಂತ್ರದಂತೆ ಶರೀರದ ಮೇಲೆ ಪ್ರಜ್ಞೆಯೇ ಇಲ್ಲದಂತೆ ನನ್ನನ್ನು ಮಾಡಿಬಿಟ್ಟಿತು. ವ॥ ಬಳಿಕ ಆ ಪತ್ರವನ್ನು ತೆಗೆದುಕೊಂಡು ಬಿಚ್ಚಿ ನೋಡಲಾಗಿ ೭೭. ಮಾನಸಸರೋವರದಲ್ಲಿ ಹುಟ್ಟಿದ ಹಂಸಪಕ್ಷಿಯು ಮುತ್ತಿನಹಾರದಂತೆ ಶುಭ್ರವಾದ ತಾವರೆದಂಟಿನ ಮೂಲಕ ಅತ್ಯಾಶೆಗೊಳಿಸಲ್ಪಟ್ಟು ಯಾವುದೋ ದಿಕ್ಕನ್ನು ತೋರಿಸಿ ಬಹುದೂರ ಕರೆದೊಯ್ಯಲ್ಪಡುವಂತೆ, ನೀನು ತಾವರೆದಂಟಿನಂತೆ ಶುಭ್ರವಾದ ಮುತ್ತಿನ ಸರದ ಮೂಲಕ ನನಗೆ ಬಹಳ ಆಸೆಯನ್ನುಂಟುಮಾಡಿ ನಿನ್ನ ಮೇಲಿರುವ ಅಭಿಲಾಷೆ ಯನ್ನು ಬಹಳ ದೂರ ಎಳೆದೊಯ್ದುಬಿಟ್ಟಿದ್ದೀಯೆ! ೭೮. ಮಾನಸಸರೋವರದಲ್ಲಿ ಹುಟ್ಟಿರುವ ಹಂಸಪಕ್ಷಿಗೆ ತಾವರೆದಂಟಿನ ಆಸೆಯನ್ನು ತೋರಿಸಿ ಅದನ್ನು ಬಹಳ ದೂರ ಒಯ್ಯುವಂತೆ, ನೀನು ತಾವರೆದಂಟಿನಂತೆ ಶುಭ್ರವಾದ ನಿನ್ನ ಮುತ್ತಿನ ಸರದಿಂದ ನನಗೆ ಆಸೆಯನ್ನು ಹುಟ್ಟಿಸಿ, ನನ್ನ ಮನಸ್ಸಿನಲ್ಲಿರುವ ನಿನ್ನ ಮೇಲಿನ ಪ್ರೀತಿಯನ್ನು ಬಹಳ

ವ॥ ಎಂಬೀ ಆರ್ಯೆಯಂ ಭಾವಿಸಿ ನೋಡೆ

ಮೊದಲೊಳ್ ಸೊಕ್ಕಿದವಂಗೆ ಕಳ್ ವಿಷದಿನಳ್ಕಿರ್ದಂಗೆ ದುರ್ನಿದ್ರೆ ಕಾ
ಣದವಂಗುರ್ವಿದ ಮರ್ಬು ದಿಗ್ಭ್ರಮೆ ಪದಂಗೆಟ್ಟಂಗೆ ಪೈಶಾಚಕಂ
ಗೆ ದುರಾವೇಶವಧಾರ್ಮಿಕಂಗೆ ಕುಮತಂ ತತ್ವಪ್ರಮೂಢಂಗೆ ಬೀ
ಸಿದ ಕಣ್ಮಾಯದ ಕುಂಚದಂತಿರೆನಗಾದತ್ತಾಗಳೇನೆಂಬುದೋ ೭೯

ವ॥ ತದನಂತರಂ

ಅಮರ್ದಂ ಪೀರ್ದಳೊ ಮೇಣ್ವರಂಬಡೆದಳೋ ಪುಣ್ಯೋದಯಂ ತನ್ನೊಳೀಂ
ಸಮಸಂದಿರ್ದುದೊ ನಾಕಲೋಕಸುಖಮಂ ಕೈಕೊಂಡಳೋ ದೈವವೀ
ರಮಣೀರತ್ನದ ಮೇಲೆ ಮೇಣ್ ನೆಲಸಿತೋ ತ್ರೈಲೋಕ್ಯರಾಜ್ಯಾಭಿಷೇ
ಕಮೆ ಕೈಸಾರ್ದುದಿವಳ್ಗೆನುತ್ತೆ ಪದಪಿಂದಾನಾಕೆಯಂ ನೋಡಿದೆಂ ೮೦

ವ॥ ಅಂತು ನೋಡಿ ಪಿರಿದುಮಕ್ಕರಿಂ ಕೆಲಕ್ಕೆ ಕರೆದು ಕುಳ್ಳಿರಿಸಿ

ಪರೆದಿರ್ದ ಕುರುಳ್ಗಳನೋ
ಸರಿಸಿ ಕದಂಪುಗಳನೊಯ್ಯನೆಳೆವುತ್ತಂದಾ
ಳರಸೆಂಬ ಭೇದಮೆಮ್ಮಿ
ರ್ಬರೊಳಂ ಪಲ್ಲಟಿಸಿತೆಂಬಿನಂ ಮನ್ನಿಸಿದೆಂ ೮೧

ಮಟ್ಟಿಗೆ ಸೆಳೆದಿದ್ದೀಯೆ. ವ॥ ಎಂಬ ಈ ಆರ್ಯಾವೃತ್ತದ ಪದ್ಯವನ್ನು ಪರಿಶೀಲಿಸಲಾಗಿ, ೭೯. ಆಗ ಮೊದಲೇ ಸೊಕ್ಕಿದವನಿಗೆ ಮದ್ಯಪಾನ ಮಾಡಿದಂತೆಯೂ, ವಿಷದಿಂದ ಶಕ್ತಿ ಗುಂದಿದವನಿಗೆ ಕೆಟ್ಟನಿದ್ರೆಯು ಉಂಟಾದಂತೆಯೂ, ಕಾಣದವನಿಗೆ ಕತ್ತಲು ವ್ಯಾಪಿಸಿದಂತೆಯೂ, ದಾರಿತಪ್ಪಿದವನಿಗೆ ದಿಗ್ಭ್ರಮೆಯುಂಟಾದಂತೆಯೂ, ದೆವ್ವ ಹಿಡಿದವನಿಗೆ ಮತ್ತೊಂದು ಕೆಟ್ಟಿತೂಳ ಬಂದಂತೆಯೂ, ಧಾರ್ಮಿಕನಲ್ಲದವನಿಗೆ ಚಾರ್ವಾಕಮತವನ್ನು ಉಪದೇಶಿಸಿದಂತೆಯೂ, ಸ್ವಭಾವದಿಂದಲೆ ಭ್ರಾಂತನಾದವನಿಗೆ ಮಾಯಗಾರನ ನವಿಲುಗರಿಯ ಕುಂಚವನ್ನು ಬೀಸಿದಂತೆಯೂ ಆಯಿತು. ಏನು ಹೇಳಲಿ! (ಟಿ॥ ಮೊದಲೇ ಇದ್ದ ವಿರಹವ್ಯಥೆಯು ಪತ್ರವಾಚನದಿಂದ ಮತ್ತೂ ಹೆಚ್ಚಾಯಿತು). ವ॥ ಆಮೇಲೆ ೮೦. ಎರಡನೆಯ ಸಲ ಅವನನ್ನು ನೋಡಿಬಂದುದರಿಂದ ಆ ಗೆಳತಿಯು ಅಮೃತಪಾನ ಮಾಡಿದ್ದಾಳೊ, ಅಥವಾ ವರವನ್ನು ಪಡೆದುಕೊಂಡು ಬಂದಿದ್ದಾಳೊ, ಪೂರ್ವಜನ್ಮದಲ್ಲಿ ಮಾಡಿದ ಪುಣ್ಯವು ಈಗ ಫಲವನ್ನು ಕೊಡಲು ಪ್ರಾರಂಭಿಸಿದೆಯೊ, ಸ್ವರ್ಗಲೋಕಸುಖವನ್ನೆ ಅನುಭವಿಸುತ್ತಿರುವಳೋ, ಯಾವುದಾದರೂ ದೇವತೆಯು ಇವಳಲ್ಲಿ ನೆಲಸಿದೆಯೊ, ಮೂರು ಲೋಕದ ಮಹಾರಾಣಿಯೆಂದು ಇವಳಿಗೆ ಪಟ್ಟಾಭಿಷೇಕವೇ ಆಗಿಬಿಟ್ಟಿದೆಯೋ ಎಂದು ಯೋಚಿಸುತ್ತಾ ಅವಳನ್ನು ಬಹಳ ಕುತೂಹಲದಿಂದ ನೋಡಿದೆನು. ವ॥ ಹಾಗೆ ನೋಡಿ ಬಹಳ ಅಕ್ಕರೆಯಿಂದ ಹತ್ತಿರಕ್ಕೆ ಕರೆದು ಕುಳ್ಳಿರಿಸಿಕೊಂಡು ೮೧. ಚೆದುರಿದ್ದ ಅವಳ ಕೂದಲುಗಳನ್ನು ಸರಿಪಡಿಸುತ್ತಾ, ಅವಳ ಕೆನ್ನೆಗಳನ್ನು ಮೆಲ್ಲನೆ ಸವರುತ್ತಾ ನಮ್ಮಿಬ್ಬರಲ್ಲಿ ನಾನು ಒಡತಿ ಅವಳು ಸೇವಕಿ ಎಂಬ ಭೇದವು ಈಗ ಬದಲಾವಣೆಯಾ

ವ॥ ಅಂತಾದರಿಸುತಮಿರ್ದು

ಎಂತೆಂತು ಕಂಡೆ ಕಣ್ಬರಿ
ವೆಂತೆಂತೇನೆಂದು ನುಡಿದನಾತನ ಕೆಲದೊಳ್
ನೀಂ ತಡೆದ ಬೇಗವೆನಿತೆನಿ
ತಂತರಮಂ ಬರುತಲಿರ್ದನೆಮ್ಮಯ ಬಟಿಯಂ ೮೨

ವ॥ ಎಂದು

ಒಡನೆಯುವರೆಲ್ಲರುಮನುಟಿ
ದಡಪದವಳುಮಾನುಮೊಂದು ಮಾಡದ ಮೇಲಿ
ರ್ದಡಿಗಡಿಗೆ ಮಗುಟ್ದು ಮಗುಟ್ದಾ
ನುಡಿಯನೆ ಕೇಳುತ್ತೆ ಕಳೆದನಂತಾ ಪಗಲಂ ೮೩

ವ॥ ಅನ್ನೆಗಂ

ಮದನಾತುರೆಯಪ್ಪೆನ್ನೀ
ಹೃದಯದ ರಾಗವನೆ ಪರ್ಚುಗೊಂಡಂತಿರೆ ಕೆಂ
ಪೊದವಿದ ಪಡುವಣ ದೆಸೆಗೆ
ಯ್ದಿದನರುಣರುಚಿಪ್ರಕಾಶನಪ್ಪ ದಿನೇಶಂ ೮೪

ಕೆಂದಾವರೆಗಳ್ ಮಧುಕರ
ವೃಂದಮನೊಳಕೊಂಡು ಮುಗಿಯೆ ರವಿವಿರಹದ ನೋ
ವಿಂದರವಿಂದಿನಿ ಮೂರ್ಛೆಗೆ
ಸಂದೆರ್ದೆ ಕತ್ತಲಿಸಿದಂದಮಂ ಪ್ರಕಟಿಸುಗುಂ ೮೫

ದಂತೆ ಬಹಳವಾಗಿ ಅವಳನ್ನು ಗೌರವಿಸಿದೆನು. ವ॥ ಹೀಗೆ ಆದರಿಸುತ್ತಿದ್ದು ೮೨. "ತರಳಿಕೆ, ನೀನು ಅವನನ್ನು ಹೇಗೆ ಹೇಗೆ ನೋಡಿದೆ ? ಅವನು ನಮ್ಮ ಕಡೆಗೆ ಎಷ್ಟರ ಮಟ್ಟಿಗೆ ದೃಷ್ಟಿಯನ್ನು ಬೀರುತ್ತಿದ್ದನು ? ಅವನು ಏನೆಂದು ಹೇಳಿದನು ? ನೀನು ಅವನ ಹತ್ತಿರ ಎಷ್ಟು ಹೊತ್ತು ಇದ್ದೆ ? ಅವನು ನಮ್ಮನ್ನು ಎಷ್ಟು ದೂರ ಹಿಂಬಾಲಿಸಿ ಬರುತ್ತಿದ್ದನು ?" ವ॥ ಎಂದು ೮೩. ಹೀಗೆ ಪರಿವಾರದವರನ್ನೆಲ್ಲ ಬಿಟ್ಟು ಆ ಸಂಚಿ ನವಳೂ ನಾನೂ ಇಬ್ಬರೇ ಮಹಡಿಯ ಮೇಲೆ ಕುಳಿತಿದ್ದೆವು. ನಾನು ಮತ್ತೆ ಮತ್ತೆ ಬಾರಿಬಾರಿಗೂ ಆ ವಿಚಾರವನ್ನೇ ಕೇಳುತ್ತಿದ್ದೆನು. ಹೀಗೆ ಹಗಲು ಕಳೆಯಿತು. ವ॥ ಅಷ್ಟರಲ್ಲಿ ೮೪. ಕಾಮಪೀಡಿತಳಾದ ನನ್ನ ಮನಸ್ಸಿನಲ್ಲಿದ್ದ ರಾಗವನ್ನೂ (ಪ್ರೀತಿ, ಕೆಂಪು) ತಾನೂ ಹಂಚಿಕೊಂಡಂತೆ ಕೆಂಬಣ್ಣವನ್ನು ಪಡೆದಿರುವ ಕೆಂಪನ್ನು ಕೆಂಪುಕಾಂತಿಯಿಂದ ಪ್ರಕಾಶಿಸುವ ಸೂರ್ಯನು ಸೇರಿದನು ೮೫. ಆಗ ಕೆಂದಾವರೆಗಳು ತಮ್ಮನ್ನು ಮುತ್ತಿ ಕೊಂಡಿದ್ದ ದುಂಬಿಗಳು ಒಳಗೆ ಸೇರಿಹೋಗುವಂತೆ ಮುಚ್ಚಿಕೊಂಡವು. ಇದು ತಾವರೆ ಬಳ್ಳಿಯೆಂಬ ಕಾಮಿನಿಯು ತನ್ನ ಪ್ರಿಯಕರನಾದ ಸೂರ್ಯನ ವಿರಹದಿಂದಾದ ನೋವಿ ನಿಂದ ಮೂರ್ಛೆಗೊಂಡಿರಲು ಅವಳ ಅಂತರಂಗವನ್ನು ಆವರಿಸಿರುವ ಅಂಧಕಾರದಂತೆ

ಇಂದುಕಳಾಮರೀಚಿ ರುಚಿರೋಜ್ವಲಬಾಲಮೃಣಾಳಮಂ ಮರ
ಳ್ದೊಂದನೆ ಕರ್ಚಿ ತದ್ವಿವರದಿಂದೆರಡುಂ ಬರೆ ಪೀರ್ವವೊಲ್ ನೆಗ
ಟ್ದೊಂದಱ ಚಿತ್ತಮಂ ತೆಗೆದುಕೊಂಡು ವಿಯೋಗದಿನಾದದೊಂದು ಕಿ
ಚ್ಚಿಂದಳುರಲ್ಕಗಲ್ದುವು ರಥಾಂಗಯುಗಂಗಳನಂಗತಾಪದಿಂ ೮೬

ವ॥ ಆಗಳೆನ್ನ ಕೊಡೆವಿಡಿದವಳ್ ಬಾಗಿಲಿಂ ಪರಿತಂದು

ಕೊಳನ ತಡಿಯಲಿ ಕಂಡಾ
ಗಳಿರ್ಬರೊಳೊರ್ಬ ಮುನಿಕುಮಾರಂ ಭೂಭೃ
ನ್ನಿಳಯದ ಬಾಗಿಲೊಳಕ್ಷಾ
ವಳಿಯಂ ಬೇಡಲ್ಕೆ ಬಂದು ನಿಂದಿರ್ದಪ್ಪಂ ೮೭

ವ॥ ಎಂದವಳ್ ಬಂದು ಪೇಟ್ವುದುಂ

ನಿನಗೇವೇಟ್ದಪೆನಾಂ ಭೋಂ
ಕೆನಲಾ ತಾಪಸಕುಮಾರವೆಸರ್ಗೊಳ್ವುದುಮಾ
ತನೆಗೆತ್ತು ಬಾಗಿಲೋಳ್ ತೊ
ಟ್ಟನೆ ಬಂದಿರ್ದಂತಿರಾದೆನಿರ್ದಂತಿರ್ದುಂ ೮೮

ಕಾಣುತ್ತಿತ್ತು. ೮೬. ಚಕ್ರವಾಕದಂಪತಿಗಳು ಚಂದ್ರಕಳೆಯ ಕಾಂತಿಯಂತೆ ಸುಂದರವಾಗಿಯೂ ಪ್ರಕಾಶಮಾನವಾಗಿಯೂ ಇರುವ ಎಳೆಯ ತಾವರೆಯ ದಂಟೊಂದನ್ನು ಒಂದು ತುದಿಯನ್ನು ಗಂಡು ಮತ್ತೊಂದು ತುದಿಯನ್ನು ಹೆಣ್ಣು-ಹೀಗೆ ಕಚ್ಚಿಕೊಂಡು ಮತ್ತೆ ಮತ್ತೆ ಮೆಲ್ಲುತ್ತಿದ್ದುವು. ಆಗ ಅದರ ಒಳಗಿನ ಟೊಳ್ಳಿನಿಂದ ಗಂಡಿನ ಮನಸ್ಸನ್ನು ಹೆಣ್ಣೂ ಹೆಣ್ಣಿನ ಮನಸ್ಸನ್ನು ಗಂಡೂ ಹೀರಿಬಿಟ್ಟಿದೆಯೋ ಎಂಬಂತೆ ವಿರಹದಿಂದಾದ ಸಂತಾಪವು ಆವರಿಸುತ್ತಿರಲು, ಆ ರಾತ್ರಿಯ ಕಾಲದಲ್ಲಿ ಅವು ಮನ್ಮಥತಾಪದಿಂದ ಕೂಡಿ ಪರಸ್ಪರ ಅಗಲಿದವು. ವ॥ ಆಗ ಛತ್ರಿ ಹಿಡಿಯುವ ಊಳಿಗದವಳು ಬಾಗಿಲಿನಿಂದ ಒಳಕ್ಕೆ ಬಂದು ೮೭. "ಅಮ್ಮ ಬೆಳಗ್ಗೆ ಸ್ನಾನಕ್ಕೆ ಹೋದಾಗ ಸರೋವರದ ದಡದಲ್ಲಿ ಇಬ್ಬರು ಋಷಿಕುಮಾರರನ್ನು ಕಂಡೆವಲ್ಲ, ಅವರಲ್ಲಿ ಒಬ್ಬನು ಜಪಸರವನ್ನು ಕೇಳಿ ತೆಗೆದುಕೊಂಡು ಹೋಗಲು ಬಂದು ಅರಮನೆಯ ಬಾಗಿಲಲ್ಲಿ ನಿಂತಿದ್ದಾನೆ." ವ॥ ಎಂದು ಅವಳು ಹೇಳಲಾಗಿ ೮೮. ರಾಜಕುಮಾರ, ಏನು ಹೇಳಲಿ ! ತಟ್ಟನೆ ಋಷಿಕುಮಾರನೆಂಬ ಹೆಸರನ್ನು ಕೇಳಿದ ಕೂಡಲೆ ಆ ಪುಂಡರೀಕನೆ ಬಂದಿರಬಹುದೆಂದು ತಿಳಿದುಕೊಂಡು ಕೂಡಲೆ ಕುಳಿತಲ್ಲೆ ಕುಳಿತಿದ್ದರೂ

ವ॥ ಆಗಳೊರ್ವ ಕಂಚುಕಿಯುಂ ಕರೆದು ಬೇಗವೊಡಗೊಂಡು ಬಾಯೆಂದು ಪೇಟಲೊಡನೆ

ಎಳವಿಸಿಲೊಲವಿಂ ಬೆಳ್ದಿಂ
ಗಳ ಬಟಿಯಿಂ ಬರುತಮಿರ್ದುದೆಂಬಂತೆ ಕಪಿಂ
ಜಳನಾಗಳಾ ಜರಾನಿ
ಮೃಳನೆನಿಸಿದ ಸೌವಿದಲ್ಲನೊಡವರುತಿರ್ದಂ ೮೯

ವ॥ ಅಂತು ರೂಪಿಂಗೆ ಯವ್ವನಮುಂ ಯವ್ವನಕ್ಕೆ ಕಾಮನುಂ ಕಾಮಂಗೆ ವಸಂತ ಸಮಯಮುಂ ವಸಂತಸಮಯಕ್ಕೆ ತಂಬೆಲರುಮೆಂಬಂತೆ ಪುಂಡರೀಕಂಗೆ ಸಹಾಯನಪ್ಪ ಮುನಿ ಕುಮಾರನಂ ಕಂಡೆನನ್ನೆಗಂ ಮುನಿಪಂ ವ್ಯಾಕುಲನಂತೆ ಶೂನ್ಯದಂತೆ ದುಃಖಿತನಾಗಿರ್ದಂತೇನಾನುಂ ಪ್ರಾರ್ಥಿಪನಂತೆ ಬರುತಿರ್ದನಿರ್ಪುದುಂ ತಕ್ಷಣದೊಳ್

ಇದಿರೆಟ್ದು ಪೊಡವಡುತ್ತೇ
ಱಿದ ಕನಕಾಸನಮನಿತ್ತು ಬೇಡೆನೆಯೆನೆ ತ
ತ್ಪದಯುಗಮಂ ಕರ್ಚಿ ಪದಾ
ಬ್ಜದಿರ್ಪನಾಂ ತೊಡೆದೆನುತ್ತರೀಯಾಂಶುಕದಿಂ ೯೦

ನುಡಿಯುಲ್ ಮುನಿಪಂ ಬಗೆದೆ
ನ್ನಡಪದವಳ್ ಕೆಲದೊಳಿರ್ದೊಡಾಕೆಯ ದೆಸೆಯಂ
ಕಡೆಗಣ್ಣಿಂ ನೋಟ್ಟುದುಮಾ
ಗಡೆ ಲಜ್ಜಿಸಿದಪ್ಪನೆಂದು ನೋಟದಿನಱಿದಂ ೯೧

ಬಾಗಿಲಿಗೆ ಓಡಿಹೋಗಿ ನಿಂತುಕೊಂಡವಳಂತೆ ಆಗಿಬಿಟ್ಟೆನು. ವ॥ ಆಗ ಒಬ್ಬ ಕಂಚುಕಿಯನ್ನು ಕರೆದು ಬೇಗನೆ ಕರೆದುಕೊಂಡು ಬಾ ಎಂದು ಹೇಳಿದ ಕೂಡಲೆ, ೮೯. ಎಳ ಬಿಸಿಲು ಪ್ರೀತಿಯಿಂದ ಬೆಳದಿಂಗಳನ್ನು ಹಿಂಬಾಲಿಸಿ ಬರುತ್ತಿದೆಯೋ ಎಂಬಂತೆ ಕಪಿಂಜಲನು ಮುದಿತನದಿಂದ ಬೆಳ್ಳಗಾಗಿದ್ದ ಆ ಕಂಚುಕಿಯ ಜೊತೆಯಲ್ಲಿ ಬರುತ್ತಿದ್ದನು. ವ॥ ಹಾಗೆ ಸೌಂದರ್ಯಕ್ಕೆ ಹರೆಯವೂ, ಹರೆಯಕ್ಕೆ ಮನ್ಮಥನೂ, ಮನ್ಮಥನಿಗೆ ವಸಂತ ಋತುವೂ, ವಸಂತಋತುವಿಗೆ ಮಂದಮಾರುತನೂ ಜೊತೆಯಾಗಿರುವಂತೆ ಪುಂಡರೀಕನ ಸಹಾಯಕನಾದ ಆ ಮುನಿಕುಮಾರಕನನ್ನು ಕಂಡೆನು. ಆಗ ಅವನು ಕಳವಳಗೊಂಡವನಂತೆಯೂ ಏನೂ ತೋಚದವನಂತೆಯೂ ದುಃಖಗೊಂಡವನಂತೆಯೂ ಏನನ್ನೋ ಬೇಡುವವನಂತೆಯೂ ಬರುತ್ತಿದ್ದುದನ್ನು ಕಂಡೆನು. ಕೂಡಲೆ ೯೦. ಇದಿರೆದ್ದು ನಮಸ್ಕರಿಸಿ ನಾನು ಕುಳಿತಿದ್ದ ಚಿನ್ನದ ಪೀಠವನ್ನು ಕೊಟ್ಟು ಕುಳ್ಳಿರಿಸಿ, ಬೇಡ ಬೇಡವೆಂದು ಹೇಳುತ್ತಿದ್ದರೂ ಬಿಡದೆ ಅವನ ಕಾಲುಗಳನ್ನು ತೊಳೆದು ನನ್ನ ಹೊದೆಯುವ ವಸ್ತ್ರದಿಂದ ಒದ್ದೆಯಾದ ಅವನ ಕಾಲನ್ನು ಒರೆಸಿದನು. ೯೧. ಬಳಿಕ ತಪಸ್ವಿಯು ನನ್ನೊಡನೆ ಮಾತನಾಡಲು ಇಚ್ಛಿಸಿ, ಸಂಚಿನವಳು ಪಕ್ಕದಲ್ಲಿರಲು ಆಕೆಯಿರುವ ಕಡೆಯನ್ನು ತನ್ನ ಕಡೆಗಣ್ಣಿನಿಂದ ನೋಡಿದನು. ಆಗ ನಾನು ಅವಳು ಇರುವುದರಿಂದ

ವ॥ ಆಗಳಱಿದಿವಳೆನ್ನ ಶರೀರದಿಂ ಬೇಱಿಲ್ಲಳ್ ಮುನಿಶಂಕರಾ ನೀಂ ಬೆಸಸಿಮೆಂಬುದುಂ

ನುಡಿವೊಡೆ ಲಜ್ಜಿಸಿ ನಾಲಗೆ
ಪೊಡರ್ದಪುದಿಲ್ಲಕ್ಕು ಬಿಕ್ಕೆಯುಂ ಬೇರುಮನುಂ
ಡಡವಿಯೊಳಗಿರ್ಪ ಮುನಿಗಳ
ನಡೆವಳಿಯೆತ್ತೆತ್ತ ಯುವತಿಜನದನುರಾಗಂ ೯೨

ವ॥ ಅದಲ್ಲದೆಯುಂ

ನೆಗೆಗೆಡೆಯಾಗೆ ದೈವವೆನಗೇನನೊಡರ್ಚಿಸಿತೀಗಳಕ್ಕ ರಾ
ಗಿಗಳ ನಿಕೃಷ್ಟಚೇಷ್ಟೆಗನುಗೆಯ್ದಪೆನೆಂತಿದ ನಿನ್ನ ಮುಂದೆ ಪೇೞ್
ಬಗೆವೊಡೆ ಕಟ್ಟಿದೀ ಜಡೆಗೆ ತಕ್ಕುದೊ ಮೇಣ್ ಪೊದೆದಿರ್ದ ನಾರಸೀ
ರೆಗೆ ದೊರೆಯೋ ತಪಕ್ಕಿದನುರೂಪಮೊ ಮೇಣ್ ಸುಕೃತಕ್ಕುಪಾಯಮೋ ೯೩

ವ॥ ಆದೊಡಂ

ಪೇೞಲೆವೇಡಿದಪ್ಪುದು ಶರಣ್ ಪೆಱತಾವುದುಮಿಲ್ಲ ಕೇವಲಂ
ಪೇೞದಿರಲ್ಕನರ್ಥಮದಱಿಂದಸುವಂ ನೆಱೆ ಬಿಟ್ಟುಮೀಗಳಾಂ
ಪಾಲಿಸವೇೞ್ಕುಮೆನ್ನಯ ಸಹಾಯನ ಜೀವಮನೊಂದು ಲಜ್ಜೆಯುಂ
ಪಾಲಿಸದೆಯ್ದೆ ಪೇೞಲನುಗೆಯ್ದಪೆನುತ್ಸವಲೋಲಲೋಚನೇ ೯೪

ಮಾತನಾಡಲು ಸಂಕೋಚಪಡುತ್ತಿರುವನೆಂದು ಅವನ ನೋಟದಿಂದಲೇ ಅರ್ಥಮಾಡಿಕೊಂಡೆನು. ವ॥ ಆಗ ನಾನು 'ಎಲೈ ಮುನೀಶ್ವರನೆ, ಇವಳು ನನ್ನ ಶರೀರದಿಂದ ಬೇರೆಯವಳಲ್ಲ, ಸಂಕೋಚವನ್ನು ಬಿಟ್ಟು ಹೇಳಬಹುದು' ಎಂದೆನು. ೯೨. ಆಗ ಅವನು "ಅಮ್ಮ, ಮಾತನಾಡಲು ನಾಚಿಕೆಯಿಂದ ನನಗೆ ನಾಲಿಗೆಯೇ ಹೊರಳುವುದಿಲ್ಲ. ಗೆಡ್ಡೆಗೆಣಸುಗಳನ್ನು ತಿಂದುಕೊಂಡು ಕಾಡಿನಲ್ಲಿರುವ ಋಷಿಗಳ ನಡೆವಳಿಕೆಯೆಲ್ಲಿ ? ತರುಣಿಯರ ಮೇಲೆ ಪ್ರೀತಿಯೆಲ್ಲಿ ? ವ॥ ಅದಲ್ಲದೆ, ೯೩. ಅಕ್ಕ, ಈಗ ನಗೆಗೀಡಾಗುವಂತೆ ಅದೃಷ್ಟವು ನನಗೆ ಏನೋ ಮಾಡಿಬಿಟ್ಟಿದೆ. ಕಾಮಾತುರರ ತುಚ್ಛವಾದ ವ್ಯವಹಾರಕ್ಕೆ ಸಹಾಯಮಾಡಲು ಹೊರಟಿದ್ದೇನೆ. ಇದನ್ನು ನಿನ್ನ ಮುಂದೆ ಹೇಗೆ ಹೇಳಲಿ ? ಆಲೋಚಿಸಿದರೆ ಇದು ಕಟ್ಟಿರುವ ಜಡೆಗೆ ಯೋಗ್ಯವೊ ? ಅಥವಾ ಧರಿಸಿರುವ ನಾರುಬಟ್ಟೆಗೆ ಯೋಗ್ಯವೊ ? ಅಥವಾ ತಪಸ್ಸಿಗೆ ಅನುಗುಣವಾಗಿದೆಯೊ ? ಇಲ್ಲವೆ ಪುಣ್ಯಕ್ಕೆ ಸಾಧನವೊ ? ವ॥ ಆದರೂ ೯೪. ಹೇಳಿಯೇ ತೀರಬೇಕು. ಬೇರೆ ಗತಿಯೇ ಇಲ್ಲ. ಸುಮ್ಮನೆ ಹೇಳದೆ ಹೋದರೆ ಅನರ್ಥವುಂಟಾಗುತ್ತದೆ. ಆದ್ದರಿಂದ ಈಗ ನನ್ನ ಪ್ರಾಣವನ್ನು ತೆತ್ತಾದರೂ ನನ್ನ ಸ್ನೇಹಿತನ ಪ್ರಾಣವನ್ನು ಉಳಿಸಲೇಬೇಕು. ಆದ್ದರಿಂದ ಎಲೈ, ಹರ್ಷದಿಂದ ಚಂಚಲವಾದ ಕಣ್ಣುಳ್ಳವಳೆ, ನಾನು ನಾಚಿಕೆಯನ್ನು ಬದಿಗೊತ್ತಿ

ವ॥ ಅದೆಂತೆನೆ

ಒದವಿದ ಮುನಿಸಿಂದಂ ನಿ
ನ್ನಿದಿರೊಳ್ ಬಿಡೆ ನುಡಿದು ಬಿಟ್ಟು ಮುನಿಪನ ಪೂಗೊ
ಯ್ವುದುಮಂ ಬಿಸುಟ್ಟು ನಿಲಲಾ
ಱದೆ ಮತ್ತೊಂದೆಡೆಗೆ ಪೋದನುಬ್ಬೆಗದಿಂದಂ ೯೫

ವ॥ ಅನ್ನೆಗಂ ನೀಮುಂ ನಿಜನಿವಾಸಕ್ಕೆ ಮಂದಿರಾಗಳಾನೇಕಾಕಿಯಾಗಿರ್ದುಮೇಗೆಯ್ಯು ತ್ತಿರ್ದಪನೆಂದು ಕುತೂಹಲಂಬೆರಸು ಮುನ್ನಿನೆಡೆಗೆ ಬಂದು ನೋಡಿ ಕಾಣದೆ ವ್ಯಗ್ರಮನನಾಗಿ

ತರುಣಿಯ ಬೆನ್ನೊಳಂಗಭವನಾಡಿಸಿದಂದದೊಳಾಡಿ ಗೋರಿಗೊಂ
ಡೆರಳೆವೊಲಾಗಿ ಪೋದನೊ ಭಯಂಬೆರಸೆನ್ನವೊಗಕ್ಕೆ ನಾಣ್ಚಿ ಮೆ
ಯ್ಗರೆದನೊ ಕೋಪದಾಗ್ರಹದಿನೆನ್ನನಗಲ್ದನೊ ಕಾಣದೆನ್ನನೆ
ಲ್ಲಿರದಱಸುತ್ತಮಿರ್ದಪನೊ ಬಾಲತಮಾಲವನಾಂತರಾಳದೊಳ್ ೯೬

ವ॥ ಎಂದು ವಿಕಲ್ಪಿಸುತ್ತುಮಿರ್ದು

ಕಿಱಿದೊಂದು ಪೊೞ್ತಗಲ್ವಿರ
ಲಱಿಯದನಂ ಕ್ಷಣಮಗಲ್ದು ನಿಲಲಾಱದೆ ಮೆಯ್
ಮಱಗಿ ಮದೀಯ ವಯಸ್ಯನ
ನಱಸುತ್ತುಂ ಮಗುೞ್ಕೆ ಮನದೊಳಾಂ ಚಿಂತಿಸಿದೆಂ ೯೭

ನಿನ್ನ ಮುಂದೆ ಹೇಳಲು ಹೊರಟಿದ್ದೇನೆ. ವ॥ ಅದೇನೆಂದರೆ ೯೫. ನಾನು ನಿನ್ನೆದುರಿನಲ್ಲೆ ನನ್ನ ಸ್ನೇಹಿತನನ್ನು ಹಾಗೆ ಕಠಿನವಾಗಿ ಮಾತನಾಡಿ, ಆಮೇಲೆ ಹೂವು ಕೊಯ್ಯುವುದನ್ನೂ ನಿಲ್ಲಿಸಿ ಉದ್ವೇಗದಿಂದ ಅಲ್ಲಿ ನಿಲ್ಲಲಾರದೆ ಬೇರೊಂದು ಕಡೆಗೆ ಹೊರಟುಹೋದೆನು. ವ॥ ಅಷ್ಟರಲ್ಲಿ ನೀವೂ ನಿಮ್ಮ ಮನೆಗೆ ಮರಳಿದಿರಿ. ಆಗ ನಾನು ಇವನು ಒಬ್ಬಂಟಿಗ ನಾಗಿದ್ದು ಏನು ಮಾಡುತ್ತಾನೆ–ಎಂದು ಕುತೂಹಲದಿಂದ ಹಿಂದಿನ ಸ್ಥಳಕ್ಕೆ ಬಂದು ನೋಡಿದೆನು. ಅವನು ಅಲ್ಲಿ ಇರಲಿಲ್ಲ. ಮನಸ್ಸಿಗೆ ಕಳವಳವಾಯಿತು. ೯೬. ಇದೇನು ? ಇವನು ಮನ್ಮಥನು ಕುಣಿಸಿದಂತೆ ಕುಣಿದು, ಬೇಟೆಗಾರರ ಸಂಗೀತಕ್ಕೆ ಮೋಹಿಸಿ ಅವರ ಬೆನ್ನುಹಿಂದೆ ಓಡಿಹೋಗುವ ಜಿಂಕೆಯಂತೆ ಆ ಹುಡುಗಿಯ ಬೆನ್ನುಹಿಡಿದು ಹೋದನೊ ? ನನಗೆ ಮುಖ ತೋರಿಸಲು ನಾಚಿಕೆಯಿಂದ ಅಂಜಿ ಕಣ್ಮರೆಯಾಗಿದ್ದಾನೊ ? ಇಲ್ಲವೆ ಕೋಪೋದ್ರೇಕದಿಂದ ನನ್ನನ್ನು ಬಿಟ್ಟೇ ಹೋದನೊ ? ಅಥವಾ ಈ ಹೊಂಗೇ ಗಿಡಗಳಿಂದ ತುಂಬಿರುವ ಕಾಡಿನ ಮಧ್ಯದಲ್ಲಿ ನನ್ನನ್ನೇ ಹುಡುಕುತ್ತಿದ್ದಾನೊ ? ವ॥ ಎಂದು ತರ್ಕಿಸುತ್ತ. ೯೭. ಜನ್ಮಾರಭ್ಯ ಕ್ಷಣಮಾತ್ರವೂ ಬಿಟ್ಟಿರಲು ಅಭ್ಯಾಸವೇ ಇಲ್ಲದ ನಾನು ಈಗ ಒಂದು ಕ್ಷಣವೂ ಅವನನ್ನು ಅಗಲಿರಲಾರದೆ ಸಂತಾಪಗೊಂಡು ನನ್ನ ಆ ಗೆಳೆಯನನ್ನು ಮತ್ತೆ ಹುಡುಕುತ್ತಾ ಮನಸ್ಸಿನಲ್ಲಿ ಹೀಗೆ ಚಿಂತಿಸಿದೆನು.

ಮದನಮದೋದ್ರೇಕದಿನೆ
ನ್ನಿದಿರೊಳ್ ಧೃತಿಗೆಟ್ಟು ಸಿಗ್ಗಿನಿಂ ತನ್ನೊಳ್ ಪೊ
ಲ್ಲದನೆತ್ತಾಚರಿಸುಗುವೋ
ಒದವಿದ ಸಿಗ್ಗಿಂದಮಾರುಮೇನನೊಡರ್ಚರ್ ೯೮

ವ॥ ಎಂದಱಸಿ ನೋಡುತ್ತುಮೆಂತೆಂತು ಕಾಣದಿರ್ಪನಂತಂತೇಸಾನುಮಂ ಮನದೊಳ್ ಭಾವಿಸುತ್ತುಮಿರ್ದು

ಇರಿಪುದು ಯುಕ್ತಮಿನ್ನೆನಗರಣ್ಯದೊಳೊರ್ವನನೆಂದು ಶಂಕೆಯಿಂ
ತರುತಳದೊಳ್ ತಮಾಲವನದೊಳ್ ಘನಚಂದನವೀಥಿಯೊಳ್ ನಿರಂ
ತರ ಲತಿಕಾಗೃಹಂಗಳೊಳನೇಕ ಲತಾಭವನಂಗಳೊಳ್ ಸರೋ
ವರತಟದೊಳ್ ತೊಟಲ್ದಱಸಿ ನೋಡಿದೆನುತ್ಪಲಲೋಲಲೋಚನೇ ೯೯

ವ॥ ಅಂತು ನೋಡುತಿರ್ಪನ್ನೆಗಮೊಂದು ಸರಸ್ಸಮೀಪದೊಳ್ ವನನಿರಂತರತೆಯಿಂ ಕುಸುಮಮಯಮುಂ ಪರಭೃತಮಯಮುಂ ಮಯೂರಮಯಮುಮಾಗಿ ವಸಂತಜನ್ಮ ಭೂಮಿಯುಮಾದಂತಿರಲತಿಮನೋಹರಮಾದ ಲತಾಗಹನದೊಳುತ್ಕೃಷ್ಟಸಕಲವ್ಯಾಪಾರನುಂ ವಿಗತನಿಮೇಷನುಮೆನಿಸಿ ಬರೆದನಂತೆಯುಂ ಕಂಡರಸಿದನಂತೆಯುಂ ಮುಱಿವಟ್ಟನಂತೆಯುಂ ಯೋಗಸಮಾಧಿಸ್ಥಿತನಂತೆಯುಮುಪರತವಶನಾದಂತೆಯುಮಿರ್ದನಲ್ಲದೆಯುಃಂ

೯೮. ಅತ್ಯಂತ ಕಾಮಪರವಶನಾಗಿ ನನ್ನ ಎದುರಿನಲ್ಲಿರಲು ಎದೆಗೆಟ್ಟು ನಾಚಿಕೆಯಿಂದ ಎಲ್ಲಾದರೂ ಅಪಘಾತ ಮಾಡಿಕೊಂಡು ಬಿಡುತ್ತಾನೋ ಏನೊ! ನಾಚಿಕೆಯಿಂದ ಯಾರು ಏನನ್ನು ತಾನೆ ಮಾಡಿಕೊಳ್ಳುವುದಿಲ್ಲ ? ವ॥ ಎಂದು ಹುಡುಕಿ ನೋಡುತ್ತಾ ಹೇಗೂ ಕಾಣದಿರಲು, ಮನದಲ್ಲಿ ಏನನ್ನೋ ಯೋಚಿಸುತ್ತಿದ್ದು ೯೯. ಎಲೈ ನೈದಿಲೆಯಂತೆ ಕಣ್ಣುಳ್ಳವಳೆ, ಇನ್ನು ಈ ಕಾಡಿನಲ್ಲಿ ಅವನೊಬ್ಬನನ್ನೆ ಬಿಟ್ಟಿರುವುದು ಸರಿಯಲ್ಲವೆಂದು ಅಳುಕಿನಿಂದ ಮರದ ಬುಡಗಳಲ್ಲಿ, ಹೊಂಗೆಯಮರದ ಹಿಂಡುಗಳಲ್ಲಿ, ದಟ್ಟವಾದ ಗಂಧದಮರದ ಸಾಲುಗಳಲ್ಲಿ, ಒತ್ತೊತ್ತಾಗಿ ಬೆಳೆದಿರುವ ಬಳ್ಳಿಮನೆಗಳಲ್ಲಿ, ಕೊಳದ ದಡ ದಲ್ಲಿ ಸುತ್ತಾಡಿ ಹುಡುಕಾಡಿದೆನು. ವ॥ ಹಾಗೆ ಹುಡುಕುತ್ತಿರಲಾಗಿ ಒಂದು ಸರೋ ವರದ ಸಮೀಪದಲ್ಲಿ ಕಾಡು ದಟ್ಟವಾಗಿರುವುದರಿಂದ ಹೂವುಗಳಿಂದಲೇ ತುಂಬಿ ದಂತೆಯೂ, ಕೋಗಿಲೆಗಳಿಂದಲೇ ತುಂಬಿದಂತೆಯೂ, ನವಿಲುಗಳಿಂದಲೇ ತುಂಬಿಕೊಂಡಿರು ವಂತೆಯೂ ಇದ್ದು ವಸಂತನಿಗೆ ತೌರುಮನೆಯಂತಿರುವ ಅತಿ ಮನೋಹರವಾದ ಒಂದು ಬಳ್ಳಿಯ ಪೊದರಿನಲ್ಲಿ ನಿಶ್ಚೇಷ್ಟಿತನಾಗಿ ರೆಪ್ಪೆಯನ್ನೂ ಅಳ್ಳಾಡಿಸಿದೆ ಚಿತ್ರದಲ್ಲಿ ಬರೆದಿರು ವವನಂತೆಯೂ, ಕೆತ್ತಲ್ಪಟ್ಟಿರುವವನಂತೆಯೂ, ಮೈಮರೆತವನಂತೆಯೂ, ಯೋಗ ಸಮಾಧಿಯಲ್ಲಿರುವವನಂತೆಯೂ, ಮರಣಕ್ಕೆ ಅಧೀನನಾದಂತೆಯೂ ಇರುವ ಅವನನ್ನು

ಹೃದಯದೊಳಿರ್ದ ವಲ್ಲಭೆಯನೀಕ್ಷಿಸಲೆಂದೊಳಪೊಕ್ಕು ಮೆಯ್ಗೆ ಪ
ರ್ಬಿದ ಮದನಾನಲಂಗಿದು ಭೋಂಕನೆ ಮೆಯ್ಗರೆದಿರ್ದುವೆಂಬಿನಂ
ಕದಡಿದ ಚಿತ್ತಮೆಂಬ ಕಡಲೊಳ್ ಪೊಡರಲ್ಕಣಮಾಱದಿರ್ದಡಂ
ಗಿದುವು ಶರೀರದೊಳ್ ವಿರಹದಿಂದಖಿಳೇಂದ್ರಿಯವಾ ಮುನೀಂದ್ರನಾ ೧೦೦

ವ॥ ಅದಲ್ಲದೆಯುಂ

ಒಳಗೊಳಗಳುರ್ವ ಮನೋಜಾ
ನಳಧೂಮಸ್ತೋಮಮೆಯ್ದೆ ಸುತ್ತಿದುದೋ ಕ
ಣ್ಗಳನೆನೆ ತಳ್ತಿಮೆದುಱುಗಲಿ
ನಿಟಿಲಿದುವು ಮಿಗೆ ಬಾಷ್ಪವಾರಿ ಧಾರಾಪೂರಂ ೧೦೧

ಹೃದಯದೊಳಗುಣ್ಮಿ ಪೊಣ್ಮಿದ
ಮದನಾಗ್ನಿಜ್ವಾಲೆಯೆನಿಸಿದಧರಾಂಶುಗಳಿಂ
ಪುದಿದ ಬಿಸುಸುಯ್ಗಳಿಂ ಕೊರ
ಗಿದುವು ಲತಾಕುಸುಮಕೇಸರಪ್ರಸರಂಗಳ್ ೧೦೨

ಒದವಿದ ಚಿಂತಾಭಾರದೆ
ಕದಪಿನೊಳಿಕ್ಕಿರ್ದ ಮುನಿಯ ಕರನಖರುಚಿಗಳ್
ಪುದಿದಡರ್ದು ಬೆಳಗಿದುವು ಪೂ
ಸಿದ ಚಂದನರಸಲಲಾಮದಂತಿರೆ ನೊಸಲೊಳ್ ೧೦೩

ಕಂಡೆನು. ಅಲ್ಲದೆ ೧೦೦. ಹೃದಯದ ಒಳಗೆ ನೆಲೆಸಿರುವ ಪ್ರಾಣಕಾಂತೆಯನ್ನು ನೋಡ ಬೇಕೆಂದು ಒಳಕ್ಕೆ ಪ್ರವೇಶಿಸಿರುವಂತೆಯೂ, ಇಡೀ ದೇಹವನ್ನು ಆವರಿಸಿಕೊಂಡಿರುವ ವಿರಹಾಗ್ನಿಗೆ ಹೆದರಿ ತಟ್ಟನೆ ಅದೃಶ್ಯನಾದಂತೆಯೂ, ಕದಡಿರುವ ಮನಸ್ಸೆಂಬ ಸಮುದ್ರದಲ್ಲಿ ಸ್ವಲ್ಪವೂ ಮಿಸುಕಾಡದಂತೆ ಮುಳುಗಿರುವಂತೆಯೂ ಆ ಮುನೀಂದ್ರನ ಸಮಸ್ತ ಇಂದ್ರಿಯಗಳೂ ಶರೀರದಲ್ಲಿ ಅಡಗಿಹೋಗಿದ್ದುವು. ವ॥ ಅದಲ್ಲದೆ ೧೦೧. ಒಳಗೆಲ್ಲ ಆವರಿಸಿಕೊಂಡಿರುವ ಮದನಾಗ್ನಿಯ ಹೊಗೆಯ ಸಮೂಹವು ಕಣ್ಣುಗಳಿಗೆ ಸುತ್ತಿಕೊಂಡಿದೆಯೋ ಎಂಬಂತೆ ಒತ್ತಾದ ಕಣ್ಣಿನ ರೆಪ್ಪೆಗಳಿಂದ ಹೆಚ್ಚಾದ ಕಣ್ಣೀರಿನ ಪ್ರವಾಹವು ಧಾರಾಕಾರವಾಗಿ ಹರಿಯುತ್ತಿತ್ತು. ೧೦೨. ಅವನ ತುಟಿಯ ಕಾಂತಿಯು ಹೃದಯದ ಒಳಗೆ ಹೆಚ್ಚಾಗಿ ವ್ಯಾಪಿಸಿ ಹೊರಕ್ಕೆ ಹೊರಡುತ್ತಿರುವ ವಿರಹಾಗ್ನಿಯ ಜ್ವಾಲೆಯಂತೆ ಕಾಣುತ್ತಿತ್ತು. ಆ ಜ್ವಾಲೆಯಿಂದ ಕೂಡಿಕೊಂಡಿರುವಂತೆ ಬಿಸಿಯಾಗಿರುವ ನಿಟ್ಟುಸಿರುಗಳಿಂದ ಅಲ್ಲಿನ ಬಳ್ಳಿಗಳಲ್ಲಿ ಬಿಟ್ಟಿರುವ ಹೂವುಗಳ ಕೇಸರಗಳು ಬಾಡಿಹೋಗುತ್ತಿದ್ದುವು. ೧೦೩. ಅವನು ಅತಿಶಯವಾದ ಚಿಂತೆಯಿಂದ ಕೆನ್ನೆಯಮೇಲೆ ಕೈಯನ್ನಿಟ್ಟುಕೊಂಡಿದ್ದನು. ಅದರ ಉಗುರುಗಳ ಕಾಂತಿಯು ಮೇಲುಗಡೆ ಪ್ರಸರಿಸಿ ಹಣೆಯಲ್ಲಿಟ್ಟುಕೊಂಡಿರುವ

ತೊಳಗುವ ಪಾರಿಜಾತದಲರ್ಗೊಂಚಲಿನೊಪ್ಪುವ ಕರ್ಣಪೂರಮಂ
ಕಳೆದೊಡಮಲ್ಲಿ ಸಂಕ್ರಮಿಸಿ ಪೋಗದ ಕಂಪನಲ್ಕೆ ಕರ್ಣದ
ತ್ತೆಳಸಿ ಜಿನುಂಗುತಿರ್ಪ ನೆವದಿಂ ಸ್ಮರಮಂತ್ರಮನೋದುವಂತೆ ಕ
ಣ್ಗೊಳಿಪಳಿಸಂಕುಳಂ ನೆನೆಯಿಸಿತ್ತಸಿತೋತ್ಪಳಕರ್ಣಪೂರಮಂ ೧೦೪

ವಿರಹಜ್ವರದಿಂ ಪುಳಕೋ
ತ್ಕರವೊಗೆದುವು ರೋಮಕೂಪವೆನಿತನಿತಜಿಕೊಳಂ
ಸ್ಮರನ ಸರಲ್ಗಳ್ ನಾಂಟಲ್
ಶರೀರಮಂ ಪತ್ತಿನಿಂದ ಪುಂಖಂಗಳವೋಲ್ ೧೦೫

ಪುಳಕಂಗಳ್ ದಕ್ಷಿಣಕರ
ತಳಸ್ಪರ್ಶನದಿನೊಗೆದುವೆನೆ ಕೆದಱುವ ಸು
ಣ್ಬಿಳಗಿಂ ಮುಕ್ತಾವಳಿ ಕ
ಣ್ಗೊಳಿಸಿದುದಂಗಜಪತಾಕೆಯಂದದಿನುರದೊಳ್ ೧೦೬

ಪೊಗೆ ಪರ್ಬಲ್ ಕಾಯ್ದು ಪುಣುಂ
ಬುಗಳುಂ ಕುಸುಮಾಸ್ತ್ರನಿಸುತವಿರ್ದಪನೆನೆ ಸಂ
ಪಗೆಯ ಮುಗುಳ್ಗಳ್ ಮೇಲ
ಲ್ಲುಗುತಿರ್ದುವು ಬಳಸಿದಳಿಕುಳಂಬೆರಸಾಗಳ್ ೧೦೭

ಚಂದನದ ತಿಲಕದಂತೆ ಪ್ರಕಾಶಿಸುತ್ತಿತ್ತು. ೧೦೪. ಮೊದಲು ಕಿವಿಯನ್ನು ಅಲಂಕರಿಸಿದ್ದ ಪಾರಿಜಾತಕುಸುಮಮಂಜರಿಯು ಈಗ ಅಲ್ಲಿರಲಿಲ್ಲ. ಆದರೂ ಅಲ್ಲಿ ಸಂಕ್ರಾಂತವಾಗಿದ್ದ ಪರಿಮಳವು ಇನ್ನೂ ಹೋಗಿರಲಿಲ್ಲ! ಅದರ ಲೋಭದಿಂದ ದುಂಬಿಗಳು ಕಿವಿಯ ಹತ್ತಿರ ಬಂದು ಮೊರೆಯುತ್ತಿದ್ದುವು! ಆ ಗುಂಜಾರವವು ಮನ್ಮಥನ ವಶೀಕರಣಮಂತ್ರವನ್ನು ಪಠಿಸುತ್ತಿರುವಂತೆ ಇತ್ತು. ಅಲ್ಲದೆ ಕಿವಿಯಲ್ಲಿ ಮುತ್ತಿದ್ದ ದುಂಬಿಗಳ ಗುಂಪು ಕನ್ನೈದಿಲೆಯ ಕರ್ಣಾಭರಣವನ್ನು ಜ್ಞಾಪಿಸಿಕೊಳ್ಳುವಂತೆ ಮಾಡುತ್ತಿತ್ತು. (ಟಿ. ಕಿವಿಯಲ್ಲಿ ಮುಡಿದುಕೊಂಡಿರುವ ಕನ್ನೈದಿಲೆಯಂತೆ ಇತ್ತು) ೧೦೫. ವಿರಹಸಂತಾಪದಿಂದ ರೋಮಕೂಪಗಳಲ್ಲೆಲ್ಲಾ ಎದ್ದಿರುವ ಮೈನವಿರುಗಳು ಶರೀರದಲ್ಲೆಲ್ಲಾ ಮನ್ಮಥನ ಬಾಣಗಳು ನಾಟಿಕೊಂಡಿೞಲು ಹೊರಗೆ ಕಾಣುತ್ತಿರುವ ಅವುಗಳ ಗರಿಗಳಂತೆ ಕಾಣುತ್ತಿದ್ದುವು. ೧೦೬. ಅವನ ಎದೆಯ ಮೇಲೆ ನಿನ್ನ ಮುತ್ತಿನ ಸರವು ಮನ್ಮಥನ ಬಾವುಟದಂತೆ ಶೋಭಿಸುತ್ತಿತ್ತು! ಅದರ ಕೋಮಲವಾದ ಕಾಂತಿಯು ಹೊರಸೂಸುತ್ತಿರಲು, ಅದು ಅವನ ಬಲಗೈಯ ಸ್ಪರ್ಶಸುಖದಿಂದ ತನಗೆ ಉಂಟಾದ ರೋಮಾಂಚನವನ್ನು ತಾಳಿರುವಂತೆ ಕಾಣುತ್ತಿತ್ತು! ೧೦೭. ಸುವಾಸನೆಗಾಗಿ ಬಂದು ಮುತ್ತಿಕೊಂಡಿರುವ ದುಂಬಿಗಳೊಂದಿಗೆ ಸಂಪಿಗೆಮೊಗ್ಗುಗಳು ಅವನ ಮೇಲೆ ಉದುರುತ್ತಿದ್ದುವು. ಅವು ಮನ್ಮಥನು ಬೆಂಕಿಯಲ್ಲಿ ಚೆನ್ನಾಗಿ ಕಾಯ್ದು ಹೊಗೆಯಾಡುತ್ತಿರುವ ತನ್ನ ಬಾಣಗಳನ್ನು ಇವನ ಮೇಲೆ ಸುರಿಸುತ್ತಿದ್ದಾನೋ ಎಂಬಂತೆ ಕಾಣುತ್ತಿದ್ದುವು. (ಟಿ. ಇಲ್ಲಿ

ವ॥ ಅದಲ್ಲದೆಯುಂ ಮದನವಶೀಕರಣಚೂರ್ಣದಂತೆ ಮೇಲೆ ಕೆದಱುವ ಕುಸುಮರೇಣು ಗಳುಂ ಆತ್ಮರಾಗಮಂ ಸಂಕ್ರಮಿಸುವಂತೆ ಮೇಲಲೆವ ರಕ್ತಾಶೋಕಪಲ್ಲವಮುಂ ವನಲಕ್ಷ್ಮಿಯೊಡ ರ್ಚುವ ರತ್ನಾಭಿಷೇಕದಂತೆ ಸುರಿವ ಪುಷ್ಪಸ್ತಬಕಶೀಕರಂಗಳುಂ ಅತಿಬಹುಳವನಾಮೋದಮತ್ತ ಮಧುಕರ ಝಂಕಾರಂಗಳೊಳ್ ಪೊರೆದ ದಕ್ಷಿಣಾನಿಲನುಂ ವಸಂತಜಯಶಬ್ದಕೋಲಾಹಲಂಗಳಂತೆ ಕಳಕಳಿಪ ಕೋಕಿಲೆಗಳುಮತ್ಯಾಕುಲತೆಯಂ ಮಾಡೆ ಜನ್ಮಾಂತರೋಪಗತನಾದಂತೆಯುಂ ರೂಪಾಂ ತರಮಂ ಕೈಕೊಂಡಂತೆಯುಂ ಮನ್ಮಥಾವೇಶದಿಂದಱಿಯಲ್ಕೆ ಬಾರದಾಕಾರಮಂ ಭಾವಿಸಿ ನೋಡಿ

ಏನಂ ವಿಧಿ ಮಾಡಿದನೋ
ತಾನಿಲ್ಲಿಗುಪಾಯಮೆಂತು ಭೋಂಕನೆ ಬಱಿದೀ
ಜ್ಞಾನನಿಧಿ ಸೂರೆವೋದಪು
ದಾನಿನ್ನೇಗೆಯ್ವೆನೆಂದು ತಳವೆಳಗಾದೆಂ ೧೦೮

ವ॥ ಅದಲ್ಲದೆಯುಂ

ಗುಣಿಯೆನಿಸಿದ ಚಾತುರ್ಯದ
ಕಣಿಯೆನಿಸಿದ ಮುನಿಕುಮಾರಕಪ್ರತತಿಯೊಳ
ಗ್ರಣಿಯೆನಿಸಿದ ಮತ್ಸಖನಂ
ಕ್ಷಣಮಾತ್ರದಿನಿಂತಿರಟಿದು ಪೊಸೆಗುಮೆ ಮದನಂ ೧೦೯

ಸಂಪಿಗೆಯಮೊಗ್ಗುಗಳನ್ನು ಮನ್ಮಥನ ಬಾಣಗಳೆಂದೂ ಮುತ್ತಿರುವ ದುಂಬಿಗಳನ್ನು ಹೊಗೆಯೆಂದೂ ವರ್ಣಿಸಿದ್ದಾನೆ. ವ॥ ಅದಲ್ಲದೆ ಮನ್ಮಥನು ಪ್ರಯೋಗಿಸುತ್ತಿರುವ ವಶೀಕರಣಚೂರ್ಣದಂತೆ ಮೇಲೆ ಬೀಳುತ್ತಿರುವ ಹೂವಿನ ಧೂಳುಗಳೂ, ತಮ್ಮ ರಾಗವನ್ನು (ಕೆಂಪು, ಅನುರಾಗ) ಇವನಿಗೂ ಒಳಗೂಡಿಸುವಂತೆ ಮೇಲೆ ಗಾಳಿಯಿಂದ ಅಳ್ಳಾಡುತ್ತಿರುವ ಕೆಂಪು ಅಸುಗೆಯ ಚಿಗುರುಗಳೂ, ವನಲಕ್ಷ್ಮಿಯು ಇವನಿಗೆ ಮಾಡು ತ್ತಿರುವ ಸಂಭೋಗರಾಜ್ಯಾಭಿಷೇಕದಂತೆ ಮೇಲೆ ಸುರಿಯುತ್ತಿರುವ ಹೂವಿನ ಗೊಂಚ ಲಿನ ಬಂಡಿನ ಹುಂಡುಗಳೂ, ಅತ್ಯಧಿಕವಾದ ಕಾಡಿನ ಸುವಾಸನೆಯಿಂದ ಕೊಬ್ಬಿದ ದುಂಬಿಗಳ ಝಂಕಾರದಿಂದ ಕೂಡಿರುವ ದಕ್ಷಿಣದಿಕ್ಕಿನ ಗಾಳಿಯೂ, ವಸಂತರಾಜನಿಗೆ ಮಾಡುವ ಜಯಕಾರದ ಗದ್ದಲದಂತೆ ಕೂಗುತ್ತಿರುವ ಕೋಗಿಲೆಗಳೂ ಇವನನ್ನು ಬಹಳಮಟ್ಟಿಗೆ ಕಳವಳಪಡಿಸುತ್ತಿರಲಾಗಿ ಬೇರೆ ಜನ್ಮವನ್ನು ಪಡೆದು ಬಂದವನಂತೆಯೂ, ಬೇರೆ ಆಕಾರವನ್ನು ತಾಳಿದವನಂತೆಯೂ ವಿರಹವ್ಯಥೆಯಿಂದ ಗುರುತೇ ಸಿಕ್ಕದಂತಹ ಅವನ ಸ್ವರೂಪವನ್ನು ಚೆನ್ನಾಗಿ ನೋಡಿ ೧೦೮. ಅಯ್ಯೋ! ವಿಧಿ ಏನು ಮಾಡಿ ಬಿಟ್ಟನು? ಇದನ್ನು ಸರಿಪಡಿಸಲು ಏನು ಉಪಾಯವಿದೆ? ಇವನ ಜ್ಞಾನಸಂಪತ್ತು ಹೀಗೆ ಸುಮ್ಮನೆ ಸೂರೆಯಾಗಿಬಿಟ್ಟಿತಲ್ಲ! ನಾನಿನ್ನೇನು ಮಾಡಲಿ? ಎಂದು ತಳಮಳ ಗೊಂಡೆನು ವ॥ ಅದಲ್ಲದೆ ೧೦೯. ಗುಣವಂತನೆನಿಸಿಕೊಂಡಿದ್ದ, ಜಾಣತನದ ಗಣಿಯೆನಿಸಿ ಕೊಂಡಿದ್ದ, ಮುನಿಕುಮಾರರ ಸಮೂಹದಲ್ಲಿ ಅಗ್ರೇಸರನೆನಿಸಿಕೊಂಡಿದ್ದ ನನ್ನ ಸ್ನೇಹಿತ

ವ॥ ಎಂದಾತನಿರ್ಪ ಲತಾಮಂಟಪದೊಳಗಣ ಚಂದ್ರಕಾಂತಶಿಲಾತಳಕ್ಕೆ ಬಂದು

ಪೊರೆಯೊಳ್ ಕುಳ್ಳಿರ್ದೊಯ್ಯನೆ
ಕರತಳದಿಂದೆಳ(ಟ)ವಿ ತನುವನೀಗಳ್ ನೀನಿ
ರ್ಪಿರವಿನ ಪರಿಯೆಂತೇನೆಂದಾಂ
ಸರೋಜಮುಖಿ ಮುಕುಳಿತಾಕ್ಷನಂ ಬೆಸಗೊಂಡೆಂ ೧೧೦

ವ॥ ಅಂತು ಬೆಸಗೊಳ್ವುದುಮಾಗಳೆಡವಿಡದೆ ಮುಚ್ಚಿಬೆಚ್ಚಂತಿರ್ದ ಕಣ್ಗಳನೆಂತಾನುಂ ತೆಱೆದು

ಬಸವಲ್ಲದಟ್ಟು ಕೆಂಪೊಡ
ರಿಸೆ ತೀವಿರೆ ಬಾಷ್ಪಸಲಿಲಮಚ್ಛಾಂಬುಗಳಿಂ
ಮುಸುಕಿದ ರಕ್ತಾಂಭೋರುಹ
ದೆಸಳಂ ಪೋಲ್ತೆಸೆವ ಕಣ್ಗಳಿಂದೀಕ್ಷಿಸಿದಂ ೧೧೧

ವ॥ ಅಂತು ಕಿಱಿದುಬೇಗಮೆನ್ನಂ ಭಾವಿಸಿನೋಡಿ

ನೀಂ ತಿಳಿದಿರ್ದುಂ ಮದ್ವೃ
ತ್ತಾಂತಮನೇನೆಂದು ಕೆಳೆಯ ಬೆಸಗೊಂಡಪೆಯೆಂ
ದಿಂತದನುಸಿರ್ದಂ ಲಜ್ಜೆಯಿ
ನೆಂತಾನುಂ ಶೀರ್ಯಮಾಣ ವಿರಳಾಕ್ಷರದಿಂ ೧೧೨

ವ॥ ಎಂಬುದುಮದು ನೀನೆಂದಂತೆ ನಿಶ್ಚಯಮಪ್ಪುದಾದೊಡಂ

ನನ್ನು ಮನ್ಮಥನು ಈ ರೀತಿಯಲ್ಲಿ ಕ್ಷಣಮಾತ್ರದಲ್ಲಿ ಎಳೆದು ಹೊಸಕಿಹಾಕುತ್ತಿರುವ ನಲ್ಲ ! ವ॥ ಎಂದು ಅವನಿದ್ದ ಲತಾಮಂಟಪದ ಒಳಗಿರುವ ಚಂದ್ರಕಾಂತಶಿಲಾತಳಕ್ಕೆ ಬಂದು ೧೧೦. ಎಲೈ ತಾವರೆಯಂತೆ ಮುಖವುಳ್ಳವಳೆ, ಅವನ ಸಮೀಪದಲ್ಲಿ ಕುಳಿತು ಕೊಂಡು ಮೆಲ್ಲನೆ ಕೈಯಿಂದ ಅವನ ಶರೀರವನ್ನು ಸವರಿ, ಮಿತ್ರ ಈಗ ನೀನೇಕೆ ಹೀಗಿ ರುವೆ ? ಎಂದು ಕಣ್ಣುಮುಚ್ಚಿಕೊಂಡಿದ್ದ ಅವನನ್ನು ಕೇಳಿದೆನು. ವ॥ ಹಾಗೆ ಕೇಳ ಲಾಗಿ ಆಗ ಮುಚ್ಚಿ ಬೆಸುಗೆ ಹಾಕಿದಂತಿದ್ದ ಕಣ್ಣುಗಳನ್ನು ಹೇಗೋ ತೆರೆದನು. ೧೧೧. ಹತೋಟಿಯಿಲ್ಲದೆ ಅತ್ತು ಅತ್ತು ಅವನ ಕಣ್ಣುಗಳು ಕೆಂಪಾಗಿಹೋಗಿದ್ದುವು; ಅಲ್ಲದೆ ನೀರು ತುಂಬಿಕೊಂಡಿತ್ತು. ಅದರಿಂದ ನಿರ್ಮಲವಾದ ನೀರುಗಳಿಂದ ಕೂಡಿಕೊಂಡಿ ರುವ ಕೆಂಪುಕಮಲದ ದಳದಂತೆ ಶೋಭಿಸುತ್ತಿರುವ ಕಣ್ಣುಗಳಿಂದ ನನ್ನನ್ನು ನೋಡಿ ದನು. ವ॥ ಹಾಗೆ ಸ್ವಲ್ಪಹೊತ್ತು ನನ್ನನ್ನೇ ದೃಷ್ಟಿಸಿ ನೋಡಿ ೧೧೨. 'ಗೆಳೆಯ, ನಿನಗೆ ನನ್ನ ಸಮಾಚಾರವೆಲ್ಲ ಗೊತ್ತೇ ಇದೆ. ಮತ್ತೆ ಏಕೆ ಕೇಳುತ್ತೀಯೆ ?' ಎಂದು ನಾಚಿಕೆಯಿಂದ ಅಸ್ಫುಟವಾಗಿ ಉಚ್ಚರಿಸಲ್ಪಡುತ್ತಿರುವ ಕೆಲವೇ ಅಕ್ಷರಗಳಿಂದ ಕಷ್ಟಪಟ್ಟು ಹೇಳಿದನು. ವ॥ ಎಂದು ಹೇಳಲಾಗಿ 'ನೀನು ಹೇಳುವುದೇನೋ ಸರಿ. ಆದರೂ

ಇನಿತನೆ ಪುಂಡರೀಕ ಬೆಸಗೊಂಡಪೆನಿಂತಿದು ಧರ್ಮಶಾಸ್ತ್ರಸಂ
ಜನಿತರಹಸ್ಯಮೋ ಯಮಮೊ ಪೇೞ್ ಪೆಱತೇನಪವರ್ಗಮಾರ್ಗಮೋ
ಮನದೊಳಣಂ ವಿಚಾರಿಸದೆ ಸೈರಣೆಗೆಟ್ಟೞಿವೆತ್ತವೋದುದೀ
ಮನಸಿಜನೆಂಬ ಪಾತಕನಿನಿಂತಪಹಾಸ್ಯಮನೆಯ್ದಲಕ್ಕುಮೇ ೧೧೩

ವ॥ ಅದಲ್ಲದೆಯುಂ

ಅಗರುವ ಧೂಪಧೂಮಲತೆಯೆಂದಸಿತಾಹಿಗೆ ಸಾರ್ವ ನೆಯ್ದಿಲೊ
ಳ್ಮೊಗುಳಿನ ಮಾಲೆಯೆಂದಸಿಯನಪ್ಪುವ ಮಾಣಿಕಮೆಂದು ಕೆಂಡಮಂ
ನೆಗಪುವ ಪುಣ್ಯಮೆಂದು ವಿಷವಲ್ಲಿಗೆ ನೀರೆಱೆವೆಗ್ಗನಂತೆ ಕೆ
ಮ್ಮಗೆ ಸುಖಮೆಂದಸದ್ವಿಷಯಸೌಖ್ಯದೊಳಿಂತೆಱಗಲ್ಕೆ ತಕ್ಕುದೇ ೧೧೪

ವ॥ ಅದಲ್ಲದೆಯುಮತಿಬಹುಳರಜದೊಳ್ ಪೊರೆದ ಪೊನಲ್ಗಳಂತುನ್ಮಾರ್ಗದಿಂ ಪರಿವಿಂದ್ರಿಯಂಗಳಂ ನಿವಾರಿಸದೆಯುಂ ಕದಡಿದ ಮನಮಂ ನಿಯಾಮಿಸದೆಯುಂ ಇಂತಿರ್ಪುದುಚಿತಮಲ್ಲಮನಂಗನೆಂಬ ದುರಾಚಾರನಂ ನಿವರ್ತಿಸಲ್ವೇೞ್ಕುಮೆಂಬುದುಮಾಕ್ಷೇಪಂಗೆಯ್ದೆಮೆದುೞಿಗಲಿನಿೞಿವ ತೋರಕಣ್ಪನಿಗಳಂ ಬಸಿಯುತ್ತಮೆನ್ನನಿಂತೆಂದಂ

೧೧೩. ಇಷ್ಟುಮಾತ್ರ ಕೇಳುತ್ತೇನೆ. ಪುಂಡರೀಕ, ಇದು ಸ್ಮೃತಿಗಳನ್ನು ಓದಿರುವುದರಿಂದ ಪಡೆದಿರುವ ಧರ್ಮರಹಸ್ಯವೊ? ಯೋಗಾಭ್ಯಾಸವೊ? ಬೇರೊಂದು ಮೋಕ್ಷಮಾರ್ಗವೊ? ಹೇಳು. ಮನಸ್ಸಿನಲ್ಲಿ ಸ್ವಲ್ಪವೂ ವಿಚಾರಮಾಡದೆ ಸಹನೆಯನ್ನು ಹಾಳುಮಾಡಿಕೊಂಡರೆ ಹೇಗೆ ? ನಿನ್ನ ಶಾಸ್ತ್ರಜ್ಞಾನವು ಎಲ್ಲಿ ಹೋಯಿತು ? ಈ ಮನ್ಮಥನೆಂಬ ಪಾಪಿಷ್ಠನಿಂದ ಹೀಗೆ ಅಪಹಾಸ್ಯಕ್ಕೆ ಈಡಾಗಬಹುದೆ ? ವ॥ ಅದಲ್ಲದೆ ೧೧೪. ಮೇಲಕ್ಕೇಳುತ್ತಿರುವ ಧೂಪದ ಹೊಗೆಯೆಂದು ಕರಿಯ ನಾಗರಹಾವಿನ ಹತ್ತಿರಕ್ಕೆ ಹೋಗುವ, ಕನ್ನೈದಿಲೆಯ ಒಳ್ಳೆಯ ಮೊಗ್ಗಿನ ಮಾಲಿಕೆಯೆಂದು ಕತ್ತಿಯನ್ನು ತಬ್ಬಿಕೊಳ್ಳುವ, ಕೆಂಪುರತ್ನವೆಂದು ತಿಳಿದು ಕೆಂಡವನ್ನು ಎತ್ತಿಕೊಳ್ಳುವ, ಪುಣ್ಯ ಬರುತ್ತದೆ ಎಂದು ವಿಷದ ಬಳ್ಳಿಗೆ ನೀರು ಹಾಕಿ ಪೋಷಿಸುವ ಮೂಢನಂತೆ ವಿಚಾರಮಾಡದೆ ಸುಖವೆಂದು ತಿಳಿದುಕೊಂಡು ಒಳ್ಳೆಯದಲ್ಲದ ಇಂದ್ರಿಯಸೌಖ್ಯದಲ್ಲಿ ಹೀಗೆ ಬೀಳುವುದು ಸರಿಯೆ ? ವ॥ ಅದಲ್ಲದೆ ಬಹಳ ಹೆಚ್ಚಾದ ರಜೋಗುಣದಿಂದ ಕೂಡಿಕೊಂಡಿರುವ ನದಿಗಳಂತೆ ದಾರಿಬಿಟ್ಟು ಹೋಗುತ್ತಿರುವ ಇಂದ್ರಿಯಗಳನ್ನು ತಡೆಯದೆ, ಕದಡಿದ ಮನಸ್ಸನ್ನು ಹತೋಟಿಮಾಡಿಕೊಳ್ಳದೆ ಹೀಗೆ ಇರುವುದು ಯೋಗ್ಯವಲ್ಲ. ಮನ್ಮಥನೆಂಬ ದುರಾಚಾರಿಯನ್ನು ಓಡಿಸಬೇಕು ಎಂದು ಹೇಳುತ್ತಿರುವ ನನ್ನ ಮಾತನ್ನು ತಡೆದು ಒತ್ತಾದ ಕಣ್ಣುರೆಪ್ಪೆಗಳಿಂದ ಇಳಿದುಬರುತ್ತಿರುವ ದಪ್ಪ ದಪ್ಪ ಕಣ್ಣೀರಿನ ಹನಿಗಳನ್ನು ತೊಡೆದುಕೊಳ್ಳುತ್ತಾ

ಅಪರಿಮಿತೋಕ್ತಿಯೊಳೇಂ ಸ
ತ್ವಪರೀತನೆ ಮದನದಾವದಹನಂ ತಳ್ತಿ
ರ್ದಪುದಿಲ್ಲ ನಿನ್ನನದಱಿಂ
ದುಃಪದೇಶಂಗೆಯ್ಯುತಿರ್ದಪುದಿದು ಸುಖಮಲ್ತೇ ೧೧೫

ಆವಂಗಿಂದ್ರಿಯವರ್ಗಮುಂಟು ಮನಮುಂಟಾವಂ ದಿಟಂ ಕಾಣ್ಬನಿ
ನ್ನಾವಂ ಕೇಳ್ವನದಂತೆ ಕೇಳ್ದ ನುಡಿಯಂ ಕೈಕೊಳ್ವನಂತಲ್ಲದಿ
ನ್ನಾವಂ ಪೊಲ್ಲದಿದೊಳ್ಳಿತೆಂದಱಿವನಾತಂ ಕೇಳ್ದಪಂ ನಿನ್ನ ಸ
ದ್ಭಾವಂಬೆತ್ತುಪದೇಶಮಂ ಕೆಳೆಯ ಪೇೞೆನ್ನಂದಿಗಂ ಕೇಳ್ವನೇ ೧೧೬

ಪೆಱತೇನಾನಿರ್ಪವಸ್ಥಾಂತರದೊಳೆನಗೆ ನಿನ್ನನ್ನರಾರ್ ಬಂಧುಗಳ್ ನೀಂ
ಪೊಱಗಾಗೀ ಮಾರ್ಗದಿಂದಂ ನಿಯಮಿಸುವರಾರೆನ್ನನೇಗೆಯ್ವೆನಾನಿ
ನ್ನಱಿಯೆಂ ನೋಡೆನ್ನನಾಂ ಸಂವರಿಸಲಣಮುಮಾರ್ತಪ್ಪೆನಿಲ್ಲೀಗಳೆಂತೀ
ತೆಱನಂ ಕಂಡಿರ್ದು ನೀನೀಯೆಡೆಗಿದುಚಿತವೆಂಬಂತುಟಂ ನೀನೆ ಬಲ್ಲೈ ೧೧೭

ವ॥ ಅದೆಂತೆಂದೊಡೆ ಕಲ್ಪಾಂತೋದಿತ ದ್ವಾದಶ ದಿನಕರಕಿರಣಾತಪತೀವ್ರಮಪ್ಪ ಮದನಸಂತಾಪಕ್ಕುಪಶಮನೋಪಾಯಮನಾಂ ಪ್ರಾಣಂಬೆರಸೆನಿತುಬೇಗಮಿರ್ಪನನ್ನೆವರಮ ಪೇಕ್ಷಿಸದಪ್ಪೆನಲ್ಲದೆಯುಂ

ಹೀಗೆ ಹೇಳಿದನು. ೧೧೫. "ನೆಮ್ಮದಿಯಿಂದ ಕೂಡಿಕೊಂಡಿರುವ ಗೆಳೆಯ, ಹೆಚ್ಚು ಮಾತುಗಳಿಂದ ಏನು ಪ್ರಯೋಜನ ? ನಿನ್ನನ್ನು ಮನ್ಮಥನೆಂಬ ಕಾಡುಕಿಚ್ಚು ಆವರಿಸಿಲ್ಲ. ಆದರಿಂದ ನನಗೆ ಸುಖವಾಗಿ ಉಪದೇಶ ಮಾಡುತ್ತಿರುವೆ ! ೧೧೬. ಮಿತ್ರ, ಯಾರಿಗೆ ಇಂದ್ರಿಯಗಳು ಇವೆಯೊ, ಯಾರಿಗೆ ಮನಸ್ಸು ಇದೆಯೊ, ಯಾರು ನಿಜ ವಾಗಿಯೂ ನೋಡುತ್ತಾರೊ, ಯಾರು ಕೇಳುತ್ತಾರೊ, ಹಾಗೆಯೆ ಕೇಳಿದ ಮಾತನ್ನು ಅರ್ಥಮಾಡಿಕೊಳ್ಳುತ್ತಾರೊ, ಅದಲ್ಲದೆ ಯಾರು ಇದು ಒಳ್ಳೆಯದು ಇದು ಕೆಟ್ಟದ್ದು ಎಂಬುದನ್ನು ತಿಳಿದುಕೊಳ್ಳುತ್ತಾರೊ, ಅವರು ನಿನ್ನ ಸದ್ಭಾವನೆಯಿಂದ ಕೂಡಿದ ಉಪ ದೇಶವನ್ನು ಕೇಳುತ್ತಾರೆ. ನನ್ನಂತಹವನು ಕೇಳುತ್ತಾನೊ ? ಹೇಳಯ್ಯ ! ೧೧೭. ಬೇರೆ ಹೇಳುವುದು ಏನಯ್ಯ ? ಈಗ ನಾನು ಇರುವ ಈ ಅವಸ್ಥೆಯಲ್ಲಿ ನನಗೆ ನಿನ್ನಂತಹ ಬಂಧುಗಳು ಯಾರಿದ್ದಾರೆ ? ನಿನ್ನನ್ನು ಬಿಟ್ಟು ಈ ದಾರಿಯಲ್ಲಿ ಹೋಗುವುದನ್ನು ತಪ್ಪಿಸಿ ನನ್ನನ್ನು ತಹಬಂದಿಗೆ ತರುವವರು ಯಾರಿದ್ದಾರೆ ? ನಾನೇನು ಮಾಡಲಿ ? ನನಗೇನೂ ತೋಚುವುದಿಲ್ಲ. ನೋಡು, ನನ್ನನ್ನು ನಾನೇ ಸಮಾಧಾನಪಡಿಸಿಕೊಳ್ಳಲು ಖಂಡಿತ ಸಮರ್ಥನಲ್ಲ. ಈ ಎಲ್ಲ ಬಗೆಯನ್ನೂ ನೀನು ತಿಳಿದುಕೊಂಡಿದ್ದೀಯೆ. ಈ ಸಂದರ್ಭಕ್ಕೆ ಇದು ಸರಿಯೆಂಬುದೆಲ್ಲವನ್ನೂ ನೀನೇ ತಿಳಿದಿದ್ದೀಯೆ. ವ॥ ಅದು ಹೇಗೆಂದರೆ, ಪ್ರಳಯ ಕಾಲದಲ್ಲಿ ಹುಟ್ಟುವ ಹನ್ನೆರಡು ಸೂರ್ಯಮಂಡಲಗಳ ಕಿರಣಗಳಿಂದ ಉಂಟಾಗುವ ಬಿಸಿಲಿನಂತೆ ತೀಕ್ಷ್ಣವಾದ ಈ ನನ್ನ ಕಾಮಜ್ವರಕ್ಕೆ ನಿವಾರಣೋಪಾಯವನ್ನು ನಾನು

ಅಡುವಂತಾದಪುದೀಗಳೆನ್ನವಯವಂಗಳ್ ಕೂಡೆ ಕಣ್ಣಾಲಿಗಳ್
ಸುಡುವಂತಾದಪುದೇವೆನೆಯ್ದೆ ಹೃದಯಂ ಬೇವಂತುಟಾದಪ್ಪುದೀ
ವೊಡಲೋರಂತುರಿವಂದವಾದಪುದಿದಂ ನೀಂ ಮಾಣಿಸಲ್ಕಾರ್ಪೆಯ
ಪ್ಪೊಡೆ ದಲ್ ಮಾಣಿಪುದೆಂಬಿದಂ ನುಡಿದು ಮಾತಂ ಮಾಣ್ದನಬ್ಜಾನನೇ ೧೧೮

ವ॥ ಅಂತುಸಿರದಿರೆ ಮತ್ತಮಾನಾತನಂ ಸಂಬೋಧಿಸಲೆಂದು

ಎನಿತು ಪುರಾಣೋಕ್ತಿಗಳಿಂ
ದೆನಿತಾಗಮವಿಷಯವಚನದಿಂದೆನಿತು ನಿದ
ರ್ಶನದಿನನುನಯದೆ ಪೇಟ್ದಿನ
ದನಿತುಂ ಕಿವಿವೊಕ್ಕುದಿಲ್ಲ ತನ್ಮುನಿವರನಾ ೧೧೯

ವ॥ ಅಂತು ಮೆಯ್ಯಱಿಯದಿರ್ದನಂ ಕಂಡು ಭಯಂಗೊಂಡುಪದೇಶಕ್ಕೆಡೆಯಿಲ್ಲದೆ ಪ್ರಾಣರಕ್ಷಣೋಪಾಯಮನಾದೊಡಂ ಮಾಟ್ಪೆನೆಂದಲ್ಲಿಂದಮೆಟ್ದಚ್ಛೋದಸರೋವರಮಂ ಪೊಕ್ಕು ಸರಸಮೃಣಾಳನಾಳಂಗಳುಮಂ ಜಲಲವಲಾಂಛಿತಂಗಳಪ್ಪ ನಳಿನೀದಳಂಗಳುಮಂ ಪರಾಗಪರಿಮಳಮನೋಹರಂಗಳಪ್ಪ ಕುಮುದ ಕುವಲಯಂಗಳುಮಂ ತಂದಾ ಲತಾಮಂದಿರದೊಳಗಣ ಚಂದ್ರಕಾಂತಶಿಲಾತಲಂಗಳೊಳ್ ಪಲವುಮನಲ್ಪತಲ್ಪಂಗಳುಮಂ ಮಾಟ್ಪುದುಮಾತನಲ್ಲಿಗೆ

ಬದುಕಿರುವಷ್ಟರಲ್ಲೆ ಬೇಗನೆ ನೀನು ಮಾಡಬೇಕೆಂದು ಅಪೇಕ್ಷಿಸುತ್ತೇನೆ. ಅಲ್ಲದೆ ೧೧೮. ಈಗ ನನ್ನ ದೇಹದ ಅಂಗಾಂಗಗಳೆಲ್ಲ ಬೇಯಿಸಿದಂತೆ ಆಗುತ್ತಿದೆ. ನನ್ನ ಕಣ್ಣುಗುಡ್ಡೆಗಳು ಸುಟ್ಟುಹೋಗುವಂತೆ ಆಗುತ್ತಿದೆ. ಏನುಮಾಡಲಿ ? ಹೃದಯವು ಬೆಂದು ಹೋಗುತ್ತಿರುವಂತಿದೆ. ಈ ಶರೀರವು ಒಂದೇಸಮನೆ ಉರಿದುಹೋಗುವಂತಿದೆ ಇದನ್ನು ನೀನು ನಿಜವಾಗಿಯೂ ತಪ್ಪಿಸಲು ಶಕ್ತನಾಗಿದ್ದರೆ, ತಪ್ಪಿಸು" ಎಂದು ಹೇಳಿ, ಎಲೈ ತಾವರೆಮೊಗದವಳೆ, ಎಂದವನೇ ಮಾತನ್ನು ನಿಲ್ಲಿಸಿದನು. ವ॥ ಹೀಗೆ ಮಾತನಾಡದಿರಲಾಗಿ ಮತ್ತೆ ನಾನು ಅವನಿಗೆ ಬುದ್ಧಿವಾದ ಹೇಳಬೇಕೆಂದು ೧೧೯. ಅವನಿಗೆ ಒಳ್ಳೆಯ ಮಾತಿನಿಂದಲೇ ಅನೇಕ ಪುರಾಣವಚನಗಳನ್ನೂ ಅನೇಕ ಶಾಸ್ತ್ರವಚನಗಳನ್ನೂ ಉದಾಹರಿಸಿ ಉಪದೇಶ ಮಾಡಿದೆ. ಅದೊಂದೂ ಅವನ ಕಿವಿಗೆ ಬೀಳಲೇ ಇಲ್ಲ. ವ॥ ಹೀಗೆ ದೇಹದ ಮೇಲೆ ಪ್ರಜ್ಞೆಯೇ ಇಲ್ಲದಿರುವ ಅವನನ್ನು ನೋಡಿ ನನಗೆ ಭಯವುಂಟಾಯಿತು. ಉಪದೇಶಕ್ಕೆ ಅವಕಾಶವೇ ಇರಲಿಲ್ಲ. ಅದರಿಂದ ಅವನ ಪ್ರಾಣರಕ್ಷಣೆಗಾದರೂ ತಕ್ಕ ಪ್ರಯತ್ನವನ್ನು ಮಾಡಬೇಕೆಂದು ಅಲ್ಲಿಂದ ಎದ್ದು ಅಚ್ಛೋದಸರೋವರಕ್ಕೆ ಹೋಗಿ ಅಲ್ಲಿಂದ ತಂಪಾದ ತಾವರೆದಂಟುಗಳನ್ನೂ ನೀರು ಹನಿಗಳಿಂದ ಕೂಡಿದ ತಾವರೆ ಎಲೆಗಳನ್ನೂ ಪರಾಗದಿಂದ ಸುವಾಸನೆಯನ್ನು ಪಡೆದು ಸೊಗಸಾದ ಬಿಳಿತಾವರೆಯ ಮತ್ತು ಕನ್ನೈದಿಲೆಯ ಹೂವುಗಳನ್ನೂ ತಂದೆನು ಆ ಬಳ್ಳಿ

ಮೆಯ್ಯುನೀಡಾಡಿ ಕೆಲದೊಳಿರ್ದ ಚಂದನಪಲ್ಲವದೆಳದಳಿರ್ಗಳಂ ಕರತಳದಿಂ ಪಿಟಿದು ನಿಸರ್ಗ ಪರಿಮಳಮಂ ತಳೆದ ಹೈಮದಂತೆ ಕುಳಿರ್ಕೊೞುವ ತದ್ರಸದಿಂ ಲಲಾಟಂ ಮೊದಲಾಗಿ ಚರಣ ತಳಂಬರಂ ಅಂಗಚರ್ಚೆಯನೆಡೆವಿಡದೊಡರ್ಚಿಯುಂ ಅಭ್ಯರ್ಣಪಾದಪಸ್ಫುಟಿತ ವಲ್ಕಲಂಗ ಳೊಳಂ ಕಟ್ಟಿದ ಕರ್ಪೂರರಜದ ಪೊಟ್ಟಣಂಗಳೊಳಂ ಸ್ವೇದಪ್ರತೀಕಾರಮನನವರತಂ ಮಾಡಿಯುಂ ತಿಳಿನೀರತುಂತುರ್ವನಿಗಳಿಂ ಪೊರೆದೆಳವಾೞೆಯ ಸುೞಿಯ ಬಿಜ್ಜಣಿಗೆಗಳಿನಡಿಗಡಿಗೆ ಬೀಸಿಯುಂ ಮತ್ತಮನೇಕ ಶಿಶಿರೋಪಚಾರಂಗಳಂ ಮಾಡಿಯುಮವೆಲ್ಲಮುಂ ಪುಂಡರೀಕಂಗುದ್ದೀಪನ ಪಿಂಡದಂತೆ ಕೇವಲಂ ಸಂತಾಪಮಂ ಮಾಡ್ಪುದುಮೆನ್ನೊಳಿಂತೆಂದೆಂ

> ಜನಕಂ ಗಂಧರ್ವರಾಜಂ ತನಗೆನಿಸಿದ ವಿಖ್ಯಾತಿಯಂ ತಾಳ್ದಿ ಕಾಂತಾ
> ಜನರತ್ನಂ ತಾನೆನಲ್ ಸಂದತಿಚತುರೆ ಮಹಾಶ್ವೇತೆ ತಾನೆತ್ತಲೆಂದುಂ
> ವನವಾಸೈಕಾಗ್ರಚಿತ್ತಂ ಮೃಗಶಿಶುವಿನವೋಲ್ ಮುಗ್ಧನಪ್ಪೀತನೆತ್ತಂ
> ಬನಿತಂ ತಾಂ ನೋಡದೇಂ ಮಾಡಿದನೊ ವಿರಹಸಂತಾಪಮಂ ಪುಷ್ಪಚಾಪಂ
> ೧೨೦

ಮನೆಯ ಒಳಗಿರುವ ಚಂದ್ರಕಾಂತಶಿಲೆಯ ಮೇಲೆ ಅವುಗಳನ್ನು ಹರಡಿ ಉತ್ತಮವಾದ ಹಾಸಿಗೆಯನ್ನು ಏರ್ಪಡಿಸಿದೆನು. ಅವನು ಅಲ್ಲಿ ಮಲಗಿಕೊಂಡನು. ಬಳಿಕ ನಾನು ಪಕ್ಕದಲ್ಲೇ ಇದ್ದ ಗಂಧದಮರದ ಎಳೆಚಿಗುರುಗಳನ್ನು ಕೈಯಿಂದ ಹಿಂಡಿ, ಸ್ವಭಾವವಾಗಿಯೇ ಪರಿಮಳದಿಂದ ಕೂಡಿಕೊಂಡಿರುವ ಮತ್ತು ಮಂಜಿನಂತೆ ತಂಪನ್ನುಂಟು ಮಾಡುವ ಆ ರಸದಿಂದ ಹಣೆಯಿಂದ ಹಿಡಿದು ಕಾಲಿನವರೆಗೂ ಲೇಪನವನ್ನು ಒಂದೇ ಸಮನೆ ಮಾಡಿದೆನು. ಹತ್ತಿರದಲ್ಲೇ ಇದ್ದ ಒಂದು ಮರದ ತೊಗಟೆಯನ್ನು ಸುಲಿದು ತಂದು ಅದರಲ್ಲಿ ಕರ್ಪೂರದ ಪುಡಿಗಳನ್ನು ಸೇರಿಸಿ ಕಟ್ಟಿ ಉಂಡೆಮಾಡಿಕೊಂಡು ಮೈಮೇಲೆ ಒಂದೇ ಸಮನೆ ಒತ್ತುತ್ತಾ ಒತ್ತುತ್ತಾ (ಉಪ್ಪು ಮೊದಲಾದ ಶಾಖವನ್ನು ಕೊಡುವಂತೆ) ಬರುತ್ತಿದ್ದ ಬೆವರನ್ನು ತಪ್ಪಿಸುತ್ತಿದ್ದೆನು. ತಿಳಿನೀರಿನ ತುಂತುರು ಹನಿಗಳಿಂದ ಕೂಡಿಕೊಂಡಿರುವ ಎಳೆಯ ಬಾಳೆಯ ಸುಳಿಯನ್ನು ಬೀಸಣಿಗೆಯನ್ನಾಗಿ ಮಾಡಿಕೊಂಡು ಮತ್ತೆ ಮತ್ತೆ ಬೀಸುತ್ತಿದ್ದೆನು. ಹೀಗೆ ಇನ್ನೂ ಅನೇಕ ಬಗೆಯ ತಂಪುಮಾಡುವ ಚಿಕಿತ್ಸೆಗಳನ್ನು ಮಾಡಿದರೂ ಅವೆಲ್ಲವೂ ಪುಂಡರೀಕನಿಗೆ ಶಾಖವನ್ನುಂಟುಮಾಡುವ ಗುಳಿಗೆಯಂತೆ ಕೇವಲ ತಾಪವನ್ನೇ ಉಂಟುಮಾಡುತ್ತಿದ್ದುವು. ಅದನ್ನು ನೋಡಿ ನಾನು ಮನಸ್ಸಿನಲ್ಲೇ ಅಂದುಕೊಂಡೆನು. ೧೨೦. "ತನಗೆ ತಂದೆ ಗಂಧರ್ವರಾಜ"ಎಂಬ ಪ್ರಖ್ಯಾತಿಗೆ ಪಾತ್ರಳಾದ ಮಹಿಳಾರತ್ನವೆನಿಸಿಕೊಂಡಿರುವ ಹಾಗೂ ಚತುರೆಯಾದ ಆ ಮಹಾಶ್ವೇತೆ ಎಲ್ಲಿ ? ಯಾವಾಗಲೂ ಅರಣ್ಯವಾಸದಲ್ಲೇ ನಿರತನಾದ ಜಿಂಕೆಮರಿಯಂತೆ ಮೊದ್ದುತನದಿಂದ ಕೂಡಿರುವ ಈ ಪುಂಡರೀಕನೆಲ್ಲಿ ! ಇದನ್ನು ನೋಡಿದರೆ ಮನ್ಮಥನು ಇವನಿಗೆ ವಿರಹಸಂತಾಪವನ್ನು

ವ॥ ಅಂತು ದುರ್ಯಶಃಪದಮುಂ ದುಷ್ಕರಮುಂ ದುಸ್ಸಾಧ್ಯಮುಂ ದುರ್ಘಟಮು ಮೆನಿಪೆಡೆಯೊಳೆರ್ದೆಗೊಟ್ಟದೊಂದವಜ್ಞೆಯಿಂದೆಸಗಿಪಂ ವಿಷಮಾಸ್ತ್ರನದು ಕಾರಣದಿಂ

ಆವುದು ಮಾಟ್ಪುದೋ ಶರಣಮಾವುದೊ ಪೋಪೆಡೆಯಾವುದಿಲ್ಲಿಗಿ
ನ್ನಾವುದೊ ಕೌಶಲಂ ನೆರವದಾವುದುಪಾಯಮದಾವುದೋವೊ ತಾ
ನಾವುದೊ ಬುದ್ಧಿ ಮತ್ಸಖನ ಜೀವಮನಾಂ ಪಿಡಿವಂದಮಾವುದಿ
ನ್ನೇವೆನೆನುತ್ತಮಿಂತಿರೆ ವಿಕಲ್ಪಿಸಿದೆಂ ಪಲವುಂ ಪ್ರಕಾರಮಂ ೧೨೧

ವ॥ ಅಂತು ಚಿಂತಿಸುತ್ತಮಿರ್ದುಮೆನ್ನೊಳಿಂತೆಂದೆಂ

ದೆಸೆಗೆಟ್ಟೇನಾನುಮಂ ಚಿಂತಿಸುತಿರೆ ಫಲಮೇಂ ಪೊಲ್ಲದಿನ್ನೊಳ್ಳಿತೆಂಬು
ದ್ದೆಸಮಂ ಮಾಣ್ದೀಗಳೆಲ್ಲಂದದೊಳಮೆನಗೆ ಮಾತೇಂ ಸುಹೃತ್ಪ್ರಾಣಮಂ ರ
ಕ್ಷಿಸವೇಟ್ಕುಂ ಬೇಗಮಾಂ ರಕ್ಷಿಸುವ ತೆಱನುಮೆಂತೆಂದೊಡಂ ನಿಶ್ಚಯಂ ಭಾ
ವಿಸಿ ನೋಟ್ಪಂದಾಕೆಯಂ ತರ್ಪುದನುಱಿಯೆ ಬಱಿಕ್ಕಿಲ್ಲ ಬೇಱೊಂದುಪಾಯಂ
೧೨೨

ಏತಕ್ಕೆ ಉಂಟುಮಾಡಿಬಿಟ್ಟನೋ ? ವ॥ ಹಾಗೆ ಅಪಕೀರ್ತಿಯನ್ನುಂಟುಮಾಡುವ, ಕಷ್ಟಕರವಾದ ಸಾಧಿಸಲಸಾಧ್ಯವಾದ ನಿರ್ವಹಿಸಲಾಗದಿರುವ ವಿಷಯದಲ್ಲೂ ತೊಡಗಿ, ಮನ್ಮಥನು ಕನಿಕರವಿಲ್ಲದೆ ನಿರ್ಲಕ್ಷ್ಯದಿಂದಲೇ ಮಾಡಿಬಿಡುತ್ತಾನೆ. ಆ ಕಾರಣದಿಂದ, ೧೨೧. ಏನು ಮಾಡುವುದು ? ಕಾಪಾಡುವವರು ಯಾರು ? ಹೋಗುವ ಸ್ಥಳ ತಾನೆ ಯಾವುದು ? ಈ ವಿಷಯದಲ್ಲಿ ಯಾವ ಜಾಣತನವನ್ನು ಮಾಡಬಹುದು ? ಯಾವ ಸಹಾಯವಿದೆ ? ಯಾವ ಉಪಾಯವಿದೆ ? ಯಾವ ಯುಕ್ತಿಯನ್ನು ಮಾಡಬಹುದು ? ನನ್ನ ಸ್ನೇಹಿತನ ಪ್ರಾಣವನ್ನು ಉಳಿಸುವ ರೀತಿ ಹೇಗೆ ? ಇನ್ನೇನು ಮಾಡಲಿ ! ಎಂಬುದಾಗಿ ನಾನಾಬಗೆಯಾಗಿ ಯೋಚಿಸಿದೆನು. ವ॥ ಹಾಗೆ ಆಲೋಚಿಸುತ್ತಾ ಇದ್ದು ನನ್ನಲ್ಲೇ ನಾನು ಮತ್ತೆ ಹೀಗೆ ಯೋಚಿಸಿದೆನು. ೧೨೨. ಹೀಗೆ ನಾನು ದಿಕ್ಕೆಟ್ಟು ಏನೇನನ್ನೋ ಯೋಚಿಸುತ್ತಾ ಕುಳಿತಿದ್ದರೆ ಫಲವೇನು ? ಇದು ಒಳ್ಳೆಯದು, ಇದು ಕೆಟ್ಟದ್ದು ಎಂಬ ಭಾವನೆಯನ್ನು ಬಿಟ್ಟು ಯಾವ ರೀತಿಯಿಂದಲಾದರೂ ನನ್ನ ಸ್ನೇಹಿತನ ಪ್ರಾಣವನ್ನು ಉಳಿಸಲೇಬೇಕು. ಹೆಚ್ಚು ಮಾತೇಕೆ ? ಬೇಗನೆ ನಾನು ಅವನ ಪ್ರಾಣಗಳನ್ನು ಉಳಿಸುವ ಬಗೆ ಹೇಗೆ ? ಎಂದು ಯೋಚಿಸಿನೋಡಿದರೆ, ಅವಳನ್ನು ಇಲ್ಲಿಗೆ ಕರೆದುಕೊಂಡು ಬರುವುದನ್ನು ಬಿಟ್ಟರೆ ಮತ್ತೆ ಬೇರೆ ಉಪಾಯವೇ

ಅಱಿಯಂ ಕೇಣದಿನೇನುಮಂ ಮುನಿಕುಮಾರಂ ಪೆಂಡಿರಿಂತೆಂದು ಬಾ
ಯ್ದೆಱೆಯಲ್ ನಾಣ್ಚುವನೊಂದು ಮಾತನವಳತ್ತಲ್ ಸಾರ್ದು ಮಾತಾಡಲ
ಟ್ಟೆಱುವಿತ್ತಲ್ ವಿಷಮೇಷು ಕೊಂದಪನಿದಂ ಕಂಡಿರ್ದು ಮತ್ತೀಗಳಾಂ
ಪೆಱತೇಂ ಭಾವಿಪೆನೆನ್ನ ಮಿತ್ರನಸುವಂ ಕಾಯಲ್ಕೆವೇಟ್ಕುಂ ದೃಢಂ ೧೨೩

ವ॥ ಅದಱಿಂದಿನ್ನಾಕೆಯಲ್ಲಿಗೆಂತಾದೊಡಂ ಪೋಗೀತನವಸ್ಥಾಂತರಮಂ ಪೇೞಲ್ವೇಡಿ
ದಪ್ಪುದೆಂದು ಮತ್ತಂ

ಎನಗಂ ಕೃತ್ಯಮಿದಲ್ಲದಿರ್ದೊಡಮವಶ್ಯಂ ಪೋಪೆನೆಂತಾನುಮೆ
ನ್ನನಿವಂ ಕುತ್ಸಿತವೃತ್ತಿ ಕಷ್ಟಮಿದು ಬೇಡೆಂದೆಂಗುಮೋ ಲಬ್ಧಚೇ
ತನನೆಂದಾತನ ಪಕ್ಕದಿಂದುಸಿರದಿರ್ದಾನಾಗಳೇನಾನುಮೊಂ
ದು ನೆವಂ ಮಾಡಿ ಮಹೋತ್ಕಟತ್ವದೆ ದಿಟಂ ಬಂದೆಂ ಚಕೋರೇಕ್ಷಣೇ ೧೨೪

ಇದು ಮನ್ಮಿತ್ರನವಸ್ಥೆ ತದ್ವಿರಹಸಂತಾಪಾನುರಾಗಕ್ಕೆ ತ
ಕ್ಕುದನಾಂ ಬಂದೆಡೆಗಂ ಮೃಗಾಕ್ಷಿ ನಿನಗಂ ಪೋಲ್ವಂತುಟಂ ನೀನೆ ಬ
ಲ್ಲೆ ದಲೀಂದೀಂತಿದಕೇನನೆಂದಪಳೊ ಕೇಳ್ವೆಂ ಮಾತನೆಂದೇನುಮೆ
ನ್ನದೆ ಮದ್ವಕ್ತ್ರಮನಾ ಕಪಿಂಜಳಕನಾಗಳ್ ನೋಡುತಿರ್ದಂ ನೃಪಾ ೧೨೫

ಇಲ್ಲ. ೧೨೩. ಈ ಋಷಿಕುಮಾರನು ಇದು ತಪಸ್ಸಿಗೆ ವಿರುದ್ಧವಾದುದೆಂಬ ಒಂದು ಆಲೋಚನೆಯಿಂದ ಏನುಮಾಡಲೂ ಅರಿಯದವನಾಗಿದ್ದಾನೆ. ಅಲ್ಲದೆ "ಹೆಣ್ಣು" ಎಂಬ ಶಬ್ದವನ್ನು ಬಾಯಿಂದ ಹೇಳುವುದಕ್ಕೂ ನಾಚುತ್ತಾನೆ. ತಾನಾಗಿಯೇ ಅವಳ ಹತ್ತಿರಹೋಗಿ ಒಂದು ಮಾತನ್ನು ಹೇಳುವುದಕ್ಕೂ ಭಯ ಬೇರೆ. ಈ ಕಡೆ ಮನ್ಮಥನು ಇವನನ್ನು ಕೊಲ್ಲುತ್ತಿದ್ದಾನೆ. ಇದನ್ನೆಲ್ಲಾ ನಾನು ಕಣ್ಣಾರೆ ನೋಡಿಕೊಂಡಿದ್ದು, ಬೇರೆ ಏನು ತಾನೆ ಆಲೋಚನೆ ಮಾಡಲಿ ? ಒಟ್ಟಿನಲ್ಲಿ ನನ್ನ ಗೆಳೆಯನ ಜೀವವನ್ನು ಖಂಡಿತ ವಾಗಿಯೂ ಉಳಿಸಲೇಬೇಕು. ವ॥ ಅದರಿಂದ ಇನ್ನು ಅವಳ ಹತ್ತಿರಕ್ಕೆ ಹೇಗಾದರೂ ಹೋಗಿ ಇವನ ಅವಸ್ಥೆಯನ್ನು ಹೇಳಲೇಬೇಕು ಎಂದು ತೀರ್ಮಾನಿಸಿ, ಮತ್ತೆ, ೧೨೪. "ಎಲೈ ಚಕೋರಪಕ್ಷಿಯ ಕಣ್ಣಿನಂತೆ ಕಣ್ಣುಳ್ಳವಳೆ, ನನಗೂ ಇದು ಮಾಡಲು ಯೋಗ್ಯ ವಾದ ಕಾರ್ಯವಲ್ಲ. ಹಾಗಿದ್ದರೂ ಹೋಗಲೇಬೇಕಾದ್ದರಿಂದ ಹೋಗಿಬರುತ್ತೇನೆ. ಇವನಿಗೇನಾದರೂ ಮೈಮೇಲೆ ಅರಿವುಂಟಾಗಿ ಗೊತ್ತಾದರೆ, ಇದು ಹೇಯವಾದ ಕೆಲಸ ಮತ್ತು ಕಷ್ಟಸಾಧ್ಯವಾದುದು. ಅದರಿಂದ ಹೋಗಬೇಡ ಎಂದು ಹೇಳಿಬಿಡಬಹುದು ಎಂದು ಚಿಂತಿಸಿ, ಅವನಿಗೆ ಏನನ್ನೂ ಹೇಳದೆ, ಏನೋ ನೆವಮಾಡಿಕೊಂಡು ಬಹಳ ತ್ವರೆ ಯಿಂದ ಬಂದೆ. ೧೨೫. ಎಲೈ ಹರಿಣಾಕ್ಷಿ, ಇದು ನನ್ನ ಸ್ನೇಹಿತನ ಸ್ಥಿತಿ. ಈಗ ಇಷ್ಟು ವಿರಹವೇದನೆಗೆ ಕಾರಣವಾದ ನಿನ್ನ ಮೇಲಿನ ಪ್ರೀತಿಗೆ ಯಾವುದು ಉಚಿತವೋ ಮತ್ತು ನಾನು ಇಷ್ಟು ದೂರ ಬಂದಿರುವುದಕ್ಕೂ ನಿನಗೂ ಯಾವುದು ಯೋಗ್ಯವೋ ಅದನ್ನು

ಅದನಾಂ ಕೇಳ್ದು ಸುಖಾಮೃತಾರ್ಣವದೊಳಟ್ದಂತಾನುಮಂತೆಯ್ದಿ ಕೂ
ಟದೊಳಾದೊಂದನುರಾಗಮಂ ಪಡೆದೆನೆಂಬಂತಾನುಮಂತೆಯ್ದಿ ಸ
ಮ್ಮದಸಂದೋಹಮನಾನೆ.ಪೆತ್ತೆನಿದನೆಂಬಂತಾನುಮಂತೆಯ್ದಿ ದೋ
ಹದಮೆಲ್ಲಂ ನೆಱೆಬಂದು ಕೂಡಿತು ಗಡೆಂಬಂತಾನುಮಾದೆಂ ನೃಪಾ ೧೨೬

ವ॥ ಅಂತತೀಂದ್ರಿಯಸೌಖ್ಯಪರಮಕೋಟಿಯನೆಯ್ದಿ ನಾಣ್ಬಿಕದಿಂದನಿತುಬೇಗಂ ತಲೆಯಂ ಬಾಗಿರಲೆವೆಯುಂ ಕಪೋಲತಲಮುಮಂ ಮುಟ್ಟದೊಂದಱ ಪಿಂದೊಂದಡಸಿ ಗುಡುಗುಡನೆ ಸುರಿವಾನಂದಜಲಬಿಂದುಗಳೆನ್ನ ನಿರತಿಶಯ ಹರ್ಷಮಂ ಪ್ರಕಟಿಸುತ್ತಿರಲೆನ್ನೊಳೀತೆಂದೆಂ

ಎನಗೆಂತಂತಿರೆ ದೈವದಿಂ ಪ್ರಿಯನೊಳಂ ಸಂತಾಪಮಂ ಮಾಡಿ ತ
ನ್ನನುಕೂಲತ್ವವನೊಂದು ಮೆಯ್ಯೊಳೆನಗೀಗಳ್ ತೋಱಿದಂ ನೆಟ್ಟನಾ
ತನೆ ಮುಂ ತಾನಿನಿತೊಂದವಸ್ಥೆಗೊಳಗಾಗಲ್ ಕಾಮನಂ ಬಿಟ್ಟು ಮ
ತ್ತೆನಗಾರ್ ಬಂಧುಗಳಾರ್ ಸಹಾಯಕರುಪಕಾರಂಗೆಯ್ವರಾರಿರ್ದಪರ್ ೧೨೭

ಮಾಡುವುದು ನಿನಗೆ ಸೇರಿದೆ. ಇದು ಸತ್ಯ" ಎಂದು ಹೇಳಿ, ಎಲೈ ರಾಜನೆ, ಇದಕ್ಕೆ ಇವಳು ಏನು ಹೇಳುತ್ತಾಳೋ ಕೇಳೋಣ ಎಂದು ನನ್ನ ಮುಖವನ್ನೇ ಮೌನವಾಗಿ ನೋಡುತ್ತಿದ್ದನು. ೧೨೬. ಎಲೈ ರಾಜನೆ, ಅದನ್ನು ನಾನು ಕೇಳಿ ಸುಖವೆಂಬ ಅಮೃತ ಸಮುದ್ರದಲ್ಲಿ ಮುಳುಗಿದವಳಂತೆಯೂ, ಪರಸ್ಪರ ಸಮಾಗಮದಿಂದ ಒದಗಿದ ಮಿಗಿಲಾದ ಪ್ರಣಯವನ್ನು ಪಡೆದವಳಂತೆಯೂ, ಅತಿಶಯವಾದ ಆನಂದಸಮೂಹವನ್ನು ಅನುಭವಿಸುತ್ತಿರುವವಳಂತೆಯೂ, ಎಲ್ಲ ಮನೋರಥಗಳೂ ಒಟ್ಟಿಗೆ ಕೈಗೂಡಿದವಳಂತೆಯೂ ಆದೆನು. ವ॥ ಹೀಗೆ ಇಂದ್ರಿಯಗಳಿಂದ ಅನುಭವಿಸಲಾರದಷ್ಟು ಸುಖದ ಪರಾಕಾಷ್ಠೆಯನ್ನು ಪಡೆದು, ಲಜ್ಜೆಯಿಂದ ಕೂಡಿದ ಪ್ರೀತಿಯಿಂದ ಸ್ವಲ್ಪಕಾಲ ತಲೆಯನ್ನು ಬಗ್ಗಿಸಿಕೊಂಡಿರಲಾಗಿ ರೆಪ್ಪೆಯನ್ನೂ ಕೆನ್ನೆಯನ್ನೂ ಮುಟ್ಟದೆ, ಒಂದರ ಹಿಂದೆ ಒಂದು ದಟ್ಟವಾಗಿ ಗಳಗಳನೆ ಸುರಿಯುತ್ತಿರುವ ಆನಂದಬಾಷ್ಪದ ಹನಿಗಳು ನನ್ನ ನಿರತಿಶಯವಾದ ಹರ್ಷವನ್ನು ಪ್ರಕಟಪಡಿಸುತ್ತಿರಲಾಗಿ ನನ್ನಲ್ಲಿ ಹೀಗೆ ಆಲೋಚಿಸಿದೆನು. ೧೨೭. ಅದೃಷ್ಟವಿಶೇಷದಿಂದ ಮನ್ಮಥನು ನನಗೆ ಮಾಡಿದಂತೆಯೆ ನನ್ನ ಇನಿಯನಿಗೂ ವಿರಹ ಸಂತಾಪವನ್ನುಂಟುಮಾಡಿ ಒಂದು ಬಗೆಯಿಂದ ನನಗೆ ಸಹಾಯಕತ್ವವನ್ನೇ ಈಗ ತೋರ್ಪಡಿಸಿದ್ದಾನೆ. ನನಗಿಂತ ಮೊದಲು ಅವನೇ ಇಷ್ಟೊಂದು ವಿರಹವ್ಯಥೆಗೆ ಒಳಗಾಗುವಂತೆ ಮಾಡಿರಬೇಕಾದರೆ, ಆ ಕಾಮನನ್ನು ಬಿಟ್ಟು ನನಗೆ ಬೇರೆ ಬಂಧುಗಳು ಯಾರು ? ಸಹಾಯಕರು ಯಾರು ? ಉಪಕಾರ ಮಾಡುವವರು ತಾನೆ ಯಾರಿದ್ದಾರೆ ?

ಕನಸಿನೊಳಮೀ ಕಪಿಂಜಲ
ಮುನಿವದನದೊಳನೃತಭಾಷೆ ಪೊಱಮಡದದಱಿಂ
ದೆನಗಾವುದಿಲ್ಲಿಗುತ್ತರ
ಮೆನುತುಂ ಬಗೆವುತ್ತಮಿರ್ದೆನಿರ್ಪನ್ನೆವರಂ ೧೨೮

ವ॥ ಆಗಳೊರ್ವಳತಿಸಂಭ್ರಮಂಬೆರಸು ದೌವಾರಿಕೆ ಬಂದು ಪೊಡಮಟ್ಟು ರಾಜಪುತ್ರಿ ನೀನಸ್ವಸ್ಥಶರೀರಿಣಿಯಾಗಿರ್ದುದಂ ಪರಿಜನದಿಂ ಕೇಳ್ದು ಮಹಾದೇವಿಯರ್ ನಿನ್ನಲ್ಲಿಗೆ ಬಿಜಯಂಗೆಯ್ದಪರೆಂಬುದಂ ಕಪಿಂಜಲಂ ಕೇಳ್ದು ನೆರವಿ ಕವಿತರ್ಪುದೆಂದಂಜಿ ಬೇಗಮೆಟ್ದು

ತಡೆದಿರಬಾರದು ನೇಸಱ್
ಪಡುತಂದುದು ಪೊಟ್ತುಪೋಯ್ತು ಪೋದಪೆನೆಂತಾ
ದೊಡಮೆನ್ನ ಕೆಳೆಯನಸುವಂ
ಪಿಡಿವುದು ಸೆಱಗೊಡ್ಡಿ ಬೇಡಿದೆಂ ಮೃಗನಯನೇ ೧೨೯

ವ॥ ಎಂದು ನುಡಿದು ಮಱುಮಾತುಗುಡಲವಸರಮಿಲ್ಲದಿರೆ ಮದೀಯಾಂಬಿಕೆಯ ಮುಂದೆ ಪರಿತರ್ಪ ದೌವಾರಿಕೆಯರಿಂ ಸಹವಾಸಿಗಳಿಂ ಚಾಮರದಡಪದ ಕನ್ನಡಿಯ ಪರಿಚಾರಿಕೆಯರಿಂ ಕೂಡೆ ಸಂದಣಿಸಿದ ಬಾಗಿಲೊಳೆಂತಾನುಂ ನುಸುಳ್ದು ಪೋದನನ್ನೆಗಮಿತ್ತಲ್

೧೨೮. ಈ ಕಪಿಂಜಲಮುನಿಯ ಬಾಯಿಂದ ಸುಳ್ಳುಮಾತೆಂಬುದು ಕನಸಿನಲ್ಲೂ ಹೊರಡುವುದಿಲ್ಲ. ಅದರಿಂದ ಈಗ ಇವನಿಗೆ ಏನು ಉತ್ತರವನ್ನು ಕೊಡಲಿ ಎಂದು ಆಲೋಚಿಸುತ್ತ ಇರುವಷ್ಟರಲ್ಲಿ, ವ॥ ಆಗ ಬಾಗಿಲು ಕಾಯುವವಳೊಬ್ಬಳು ಬಹಳ ಸಡಗರದಿಂದ ಬಂದು ನಮಸ್ಕರಿಸಿ, "ದೊರೆಯ ಮಗಳೆ, ನಿನ್ನ ದೇಹಾರೋಗ್ಯವು ಚೆನ್ನಾಗಿಲ್ಲವೆಂಬುದನ್ನು ಪರಿಜನರಿಂದ ಕೇಳಿ ಮಹಾರಾಣಿಯವರು ನಿನ್ನಲ್ಲಿಗೆ ದಯಮಾಡಿಸುತ್ತಿದ್ದಾರೆ" ಎಂದು ಹೇಳಿದಳು. ಕಪಿಂಜಲನು ಇದನ್ನು ಕೇಳಿ ಗುಂಪು ಮುತ್ತಿಕೊಳ್ಳುವುದೆಂದು ಹೆದರಿ ಬೇಗನೆ ಎದ್ದು, ೧೨೯. "ಎಲೈ ಮೃಗನಯನೆ, ನಾನು ಇನ್ನು ತಡಮಾಡಬಾರದು. ಸೂರ್ಯನಾಗಲೇ ಮುಳುಗುವುದರಲ್ಲಿದ್ದಾನೆ. ಬಹಳ ಹೊತ್ತಾಯಿತು. ಹೋಗಿಬರುತ್ತೇನೆ. ಹೇಗಾದರೂಮಾಡಿ ನನ್ನ ಗೆಳೆಯನ ಜೀವವನ್ನು ಉಳಿಸಮ್ಮ. ನಿನ್ನನ್ನು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ. ವ॥ ಎಂದು ಹೇಳಿ ನನಗೆ ಪ್ರತ್ಯುತ್ತರವನ್ನು ಕೊಡಲು ಅವಕಾಶವನ್ನೇ ಕೊಡದೆ ನನ್ನ ತಾಯಿಯ ಮುಂದೆ ಬರುತ್ತಿರುವ, ಬಾಗಿಲುಕಾಯುವ ಹೆಂಗಸರಿಂದಲೂ, ಪರಿಜನರಿಂದಲೂ, ಚಾಮರದ, ಸಂಚಿನ, ಕನ್ನಡಿಯ ಊಳಿಗಮಾಡುವ ಹೆಂಗಸರಿಂದಲೂ ತುಂಬಿಹೋಗಿದ್ದ ಬಾಗಿಲಿನಿಂದ

ದೀನಾಸ್ಯೆ ಜನನಿ ಬಂದೆನಿ
ತಾನುಂ ಪೊಟ್ತಿರ್ದು ಮನೆಗೆ ಪೋದಳ್ ಗಡ ತಾ
ನೇನೆಂದಳದೇಗೆಯ್ದ್ದಳ
ದೇನಾಯ್ತೆಂದಱಿಯೆನಾಗಳಿರ್ದೆಗೆಟ್ಟವಳೆಂ ೧೩೦

ವ॥ ಅನ್ನೆಗಮಿತ್ತಲಂಭೋಜಿನೀಜೀವಿತೇಶ್ವರನಸ್ತಂಗತನಪ್ಪುದುಂ ಪಾತಾಳಪಂಕ ಕಲುಷಿತ ಮಹಾಪ್ರಳಯಜಲಧಿಗಳ್ ಮೇರೆದಪ್ಪಿ ಕವಿದು ಭುವನಂಗಳೆಲ್ಲಮನೊಳಕೆಯ್ಯಲುಕ್ಕಿ ದುವೆಂಬಂತಿಡಿದಡರೆಗೊಂಡು ಕಟ್ತಲೆ ಕವಿಯೆ ಕಿಂಕರ್ತವ್ಯತಾಮೂಢೆಯೆನಾಗಿ ತರಳಿಕೆಯ ನಿಂತೆಂದೆಂ

ಮನಮುಮಖಿಳೇಂದ್ರಿಯಂಗಳು
ಮಿನಿಸಪ್ಪೊಡಮೆನ್ನವಲ್ಲಮೇಗೆಯ್ವೆನೊ ಪೇ
ೞಿನಗೀಗಳಾ ಕಪಿಂಜಲ
ಮುನಿ ನಿನ್ನಯ ಮುಂದೆ ನುಡಿದು ಪೋದುದನಱಿಯಾ ೧೩೧

ವ॥ ಎಂದು ತಾನಿತರಕನ್ಯಕೆಯಂತೆ ನಾಣ್ಗಿಟ್ಟು ಸ್ವೈರಣಿಯಂ ಬಿಟ್ಟು ವಿನಯಮ ನೊಕ್ಕು ಜನಾಪವಾದಮಂ ಮಿಕ್ಕು ನಿಜಾಚಾರಮಂ ಮಱೆದು ಶೀಲಮಂ ತೊಱೆದು ಕುಲ ಕ್ರಮಮಂ ಪಾಲಿಸದೆ ರಾಗಾಂಧೆಯೆನಾಗಿ

ಹೇಗೋ ನುಣುಚಿಕೊಂಡು ಹೊರಟುಹೋದನು. ಅಷ್ಟರಲ್ಲಿ ಈ ಕಡೆ, ೧೩೦. ನನ್ನ ಅನಾರೋಗ್ಯದ ಚಿಂತೆಯಿಂದ ಬಾಡಿದ ಮುಖವುಳ್ಳ ನನ್ನ ತಾಯಿಯು ಬಂದು ಎಷ್ಟೋ ಹೊತ್ತು ಕುಳಿತಿದ್ದು, ತನ್ನ ಮನೆಗೆ ಹೊರಟುಹೋದಳು. ಅವಳು ಏನು ಹೇಳಿದಳು ? ಏನು ಮಾಡಿದಳು ? ಏನು ನಡೆಯಿತು ? ಎಂಬುದು ಆಗ ಶೂನ್ಯಹೃದಯಳಾಗಿದ್ದ ನನಗೆ ಗೊತ್ತಾಗಲೇ ಇಲ್ಲ. ವ॥ ಅಷ್ಟರಲ್ಲಿ ಈ ಕಡೆ ತಾವರೆಗಳಿಗೆ ಪ್ರಾಣಪ್ರಿಯನಾದ ಸೂರ್ಯನು ಮುಳುಗಲಾಗಿ ಪಾತಾಳಲೋಕದ ಕೆಸರಿನಿಂದ ಕದಡಿಹೋದ, ಮಹಾ ಪ್ರಳಯಕಾಲದ ಸಮುದ್ರಗಳು ಎಲ್ಲೆಮೀರಿ ಆವರಿಸಿ, ಪ್ರಪಂಚವನ್ನೆಲ್ಲಾ ಆಕ್ರಮಿಸಿ ಕೊಳ್ಳಲು ಉಕ್ಕಿಬರುತ್ತಿವೆ ಎಂಬಂತೆ ವ್ಯಾಪಿಸಿ ಮೇಲೇರಿ ಕತ್ತಲೆಯು ಕವಿಯಲಾಗಿ ನಾನು ಏನು ಮಾಡಬೇಕೆಂದು ದಿಕ್ಕುತೋಚದವಳಾಗಿ ತರಳಿಕೆಯನ್ನು ಕುರಿತು ಹೀಗೆ ಹೇಳಿದೆನು. ೧೩೧. "ನನ್ನ ಮನಸ್ಸೂ ಎಲ್ಲಾ ಇಂದ್ರಿಯಗಳೂ ಈಗ ಸ್ವಲ್ಪವೂ ನನ್ನ ಸ್ವಾಧೀನದಲ್ಲಿಲ್ಲ. ನಾನೀಗ ಏನು ಮಾಡಲಿ ನೀನೇ ಹೇಳು. ಕಪಿಂಜಲಮುನಿಯು ನಿನ್ನ ಎದುರಿನಲ್ಲೇ ಹೇಳಿಹೋಗಿರುವುದು ನಿನಗೆ ಗೊತ್ತೇ ಇದೆಯಲ್ಲ." ವ॥ ಹೀಗೆ ನಾನು ನಾಡಾಡಿ ಹುಡುಗಿಯಂತೆ ನಾಚಿಕೆಯನ್ನು ಬಿಟ್ಟು, ವಿನಯವನ್ನು ದೂರಮಾಡಿ, ಜನಾಪವಾದವನ್ನು ದೂರೀಕರಿಸಿ, ನಮ್ಮ ಸಂಪ್ರದಾಯವನ್ನು ಮರೆತು, ಶೀಲವನ್ನು

ಗುರುಜನಮೀಯದೆಯುಂ ಮು
ನ್ನೆರೆವಾತನನೆಯ್ದಿಯ್ಯದೆಯಪ್ಪೊಡೆ ದೋಷಂ
ಪರಿಭಾವಿಸಲೆನಗಿನ್ನದ
ಪರಿಹಾರ್ಯಮೆನಿಪ್ಪುದೊಂದು ಮರಣಂ ಶರಣಂ ೧೩೨

ಮನೆಗೆ ಬರಲ್ ಕಪಿಂಜಲಮಹಾಮುನಿಗಂ ಮಱುಮಾತನಿತ್ತೆನಿ
ಲ್ಲೆನಗದಱಿಂದಮಿಂ ಪ್ರಣಯಭಂಗಮದಾವುದೊ ಕೆಟ್ಟೆನತ್ತಲೋ
ಪನುಮಿದನಿಂತೆ ಕೇಳ್ದೊಡೆ ನಿರಾಶೆಯೊಳಕ್ಕಟ ಸಾಗುಮಂತಱಿಂ
ಮುನಿವಧದೋಷಮಾವತೆಱದಿಂ ಕಳೆಗುಂ ಕಮಲಾಯತೇಕ್ಷಣೇ ೧೩೩

ವ॥ ಎಂದು ನುಡಿಯುತ್ತಮಿರ್ಪನ್ನೆಗಂ

ಮುಳಿದು ತಿಮಿರೇಭಕುಂಭ
ಸ್ಥಳಮಂ ಶಶಿಸಿಂಹಮೊತ್ತಿ ಸೀಳಲ್ ಮುಕ್ತಾ
ವಳಿ ಮೇಗೆ ನೆಗೆದುವೆನೆ ಕ
ಣ್ಗೊಳಿಸಿದುವತಿವಿಮಲತರಳತಾರಾನೀಕಂ ೧೩೪

ಕುಸುಮರಜದಿಂದೆ ಸೊಗಯಿಪ
ವಸಂತವನರಾಜಿಯಂತೆ ಚಂದ್ರೋದಯಮಿ
ನ್ನೆಸೆದಪುದೆನೆ ನಸುವೆಳಗಿಂ
ಮಸಗಿದುದಿನಿಸಿಂದ್ರದಿಗ್ವಧೂಮುಖಬಿಂಬಂ ೧೩೫

ಬಿಟ್ಟು, ಕುಲಪದ್ಧತಿಯನ್ನು ಪರಿಪಾಲಿಸದೆ, ಅನುರಾಗದಿಂದ ಕುರುಡಿಯಂತಾಗಿ, ೧೩೨. ಹಿರಿಯರು ಕನ್ಯಾದಾನ ಮಾಡುವುದಕ್ಕೆ ಮೊದಲೇ ಪ್ರಿಯಕರನನ್ನು ಸೇರಿ, ಮದುವೆ ಮಾಡಿಕೊಂಡರೆ ಅಧರ್ಮವುಂಟಾಗುತ್ತದೆ. ನನಗಂತೂ ಗುರುಹಿರಿಯರನ್ನು ಮೀರು ವುದಕ್ಕೆ ಸಾಧ್ಯವೇ ಆಗುವುದಿಲ್ಲ. ಆದುದರಿಂದ ಇನ್ನು ನನಗೆ ಮರಣವೇ ಗತಿ. ೧೩೩. ಕಪಿಂಜಲಮಹರ್ಷಿಯು ತಾನಾಗಿಯೇ ಮನೆಗೆ ಬಂದರೆ ಅವನಿಗೆ ನಾನು ಪ್ರತ್ಯುತ್ತರ ವನ್ನೇ ಕೊಡಲಿಲ್ಲ. ಅದಕ್ಕಿಂತಲೂ ಬೇರೆ ಪ್ರೀತಿಭಂಗವಿದೆಯೇ ? ಆ ಕಡೆ ನನ್ನ ಇನಿ ಯನು ಈರೀತಿ ನಾನು ಮಾಡಿದ್ದನ್ನು ಹೀಗೆಯೆ ಕೇಳಿದರೆ, ನಿರಾಶೆಯಿಂದ ಪ್ರಾಣ ಬಿಡುತ್ತಾನೆ. "ಎಲೈ ಕಮಲದಂತೆ ವಿಶಾಲವಾದ ಕಣ್ಣುಳ್ಳವಳೆ, ಇದರಿಂದ ಉಂಟಾದ ಮುನಿಹತ್ಯಾದೋಷವನ್ನು ಹೇಗೆ ನಾನು ಪರಿಹರಿಸಿಕೊಳ್ಳಲಿ ? ಅಂತೂ ನಾನು ಕೆಟ್ಟೆ". ವ॥ ಎಂದು ಮಾತನಾಡುತ್ತಿರಲಾಗಿ, ೧೩೪. ಕತ್ತಲೆಯೆಂಬ ಆನೆಯ ಕುಂಭಸ್ಥಳವನ್ನು ಚಂದ್ರನೆಂಬ ಸಿಂಹವು ಅಮುಕಿ ಸೀಳಲಾಗಿ ಅಲ್ಲಿದ್ದ ಮುತ್ತುಗಳು ಮೇಲಕ್ಕೆ ಸಿಡಿಯುತ್ತಿ ವೆಯೋ ಎಂಬಂತೆ ಬಹಳ ಸ್ವಚ್ಛವಾದ ಮಿರುಗುವ ನಕ್ಷತ್ರಪುಂಜವು ಕಂಗೊಳಿಸಿತು. ೧೩೫. ಹೂವುಗಳ ಪರಾಗದಿಂದ ಸುಂದರವಾಗಿ ಕಾಣುವ ಅರಣ್ಯಪಂಕ್ತಿಯಂತೆ ಪೂರ್ವ ದಿಕ್ಕೆಂಬ ರಮಣಿಯ ಮುಖವು ಉದಯಿಸಲಿರುವ ಚಂದ್ರನ ನಸುಬೆಳಕಿನಿಂದ ರಂಜಿಸಿತು.

ವ॥ ತದನಂತರಂ

ಇಳೆಯಂ ನೋಡಲ್ಕೆ ರಸಾ
ತಳದಿಂ ಪೊಱಮಡುವ ನಾಗರಾಜನ ಪೆಡೆಯೊಳ್
ಪೊಳೆವರುಣಕಿರಣಮಣಿಮಂ
ಡಳದಂದದಿನೆಸೆದುದಿಂದುಮಂಡಳಮಾಗಳ್ ೧೩೬

ಪುರುಡಿಂ ಕಾಯ್ದೊದೆಯಲ್ಕೆ ರೋಹಿಣಿಯ ಪಾದಾಲಕ್ತಕಂ ಮೆಯ್ಯೊಳಾ
ವರಿಸಿತ್ತೋ ವಿಕಟಾಬ್ಧಿವಿದ್ರುಮಮಯೂಖಂ ತಳ್ತುದೋ ಪೂರ್ವಭೂ
ಧರಸಿಂಹಂ ಪೊಯೆ ನೊಂದುದೋ ಹರಿಣನೆಂಬಂತಾಗಳತ್ಯಂತ ಸುಂ
ದರವಾಗಿರ್ದುದು ಕಣ್ಗೆ ರಕ್ತರುಚಿಯಿಂ ಬಿಂಬಂ ಸುಧಾಸೂತಿಯಾ ೧೩೭

ವ॥ ಅಂತಭಿನವೋದಯ ರಾಗರಂಜಿತನಪ್ಪ ರಜನಿಕರನಂ ನೋಡಲೊಡಮತ್ಯುಜ್ವಲ ಮದನಾನಲಜ್ವಾಲಾಕಲಾಪೆಯಾಗಿಯುಮಂಧಕಾರಹೃದಯೆಯೆನೆನ್ನಳಿಂತೆಂದೆಂ

ಇತ್ತ ವಸಂತನಿತ್ತ ಮಲಯಾನಲನಿತ್ತ ಮಧುವ್ರತಾಳಿ ಮ
ತ್ತಿತ್ತ ಮದೋತ್ಕ ಕೋಕಿಲಕದಂಬಕವೆಯ್ದೆ ವಿಜೃಂಭಿಸಿತ್ತು ತಾ
ನಿತ್ತಲಡರ್ದು ಚಂದ್ರಹತಕಂ ತಲೆದೋಱಿದನೋವೊ ಕೆಟ್ಟೆನೀ
ಚಿತ್ತಜತಾಪವಗ್ಗಲಿಸಿದಪ್ಪುದು ಮದ್ಧೃದಯಾಂತರಾಳದೊಳ್ ೧೩೮

ವ॥ ಬಳಿಕ, ೧೩೬. ಆಗತಾನೆ ಹುಟ್ಟಿದ ಚಂದ್ರಮಂಡಲವು ಭೂಮಿಯನ್ನು ನೋಡಬೇಕೆಂಬ ಕುತೂಹಲದಿಂದ ಪಾತಾಳಲೋಕದಿಂದ ಮೇಲಕ್ಕೆಬಂದ ಆದಿಶೇಷನ ಹೆಡೆಯಲ್ಲಿ ಹೊಳೆಯುವ ಕೆಂಪು ಕಾಂತಿಯಿಂದ ಕೂಡಿಕೊಂಡಿರುವ ರತ್ನಗಳ ವರ್ತುಲದಂತೆ ಶೋಭಿಸಿತು. ೧೩೭. ಪ್ರಣಯಕಲಹದಲ್ಲಿ ಅಸೂಯೆಯಿಂದ ಕೋಪಿಸಿಕೊಂಡು ರೋಹಿಣಿಯು ಒದೆಯಲಾಗಿ ಅವಳ ಕಾಲಿನ ಅರಗಿನ ರಸವು ಶರೀರದಲ್ಲೆಲ್ಲಾ ಲೇಪಿಸಿಕೊಂಡಿರುವಂತೆಯೂ, ಅಗಾಧವಾದ ಸಮುದ್ರದ ಹವಳಗಳ ಕಾಂತಿಯು ಹರಡಿಕೊಂಡಿರುವಂತೆಯೂ, ಪೂರ್ವಪರ್ವತವೆಂಬ ಸಿಂಹವು ಹೊಡೆಯಲಾಗಿ ಚಂದ್ರಮಂಡಳದಲ್ಲಿದ್ದ ಜಿಂಕೆಯ ಶರೀರದಿಂದ ಹೊರಹೊಮ್ಮಿದ ರಕ್ತದಿಂದ ನೆನೆದಿದೆಯೋ ಎಂಬಂತೆಯೂ ಚಂದ್ರಬಿಂಬವು ಕೆಂಪುಕಾಂತಿಯಿಂದ ಕಣ್ಣಿಗೆ ಸುಂದರವಾಗಿ ಕಂಡಿತು. ವ॥ ಹೀಗೆ ಹೊಸದಾದ ಉದಯರಾಗದಿಂದ ಕೆಂಪಾದ ಚಂದ್ರನನ್ನು ನೋಡಿದ ಕೂಡಲೆ ಅತಿಯಾಗಿ ಉರಿಯುತ್ತಿರುವ ಕಾಮಾಗ್ನಿ ಜ್ವಾಲೆಯ ಸಮೂಹದಿಂದ ಕೂಡಿದವಳಾಗಿದ್ದರೂ ಅಂಧಕಾರಮಯವಾದ ಹೃದಯವುಳ್ಳವಳಾಗಿ ನನ್ನಲ್ಲೇ ಹೀಗೆ ಆಲೋಚಿಸಿದೆನು. ಟಿ. ಬೆಂಕಿ ಉರಿಯುವ ಸ್ಥಳವು ಅಂಧಕಾರವಾದುದು ಹೇಗೆ ? ಎಂಬ ವಿರೋಧವು ಅಂಧಕಾರವೆಂಬ ಪದಕ್ಕೆ ಏನೂ ತೋಚದ ಎಂಬ ಅರ್ಥ ಹೇಳುವುದರಿಂದ ಪರಿಹಾರವಾಗುತ್ತದೆ. ೧೩೮. ಈ ಕಡೆ ವಸಂತಋತು, ಈ ಕಡೆ ಮಲಯಮಾರುತ, ಈ ಕಡೆ ದುಂಬಿಗಳ ಗುಂಪು, ಈ ಕಡೆ ಮದವೇರಿ ಮೈಮರೆತ ಕೋಕಿಲೆಗಳ ಗುಂಪು, ಇವೆಲ್ಲವೂ ಬಹಳವಾಗಿ ಮೆರೆಯುತ್ತಿವೆ. ಸಾಲದುದಕ್ಕೆ ಈ ನೀಚ

ಉದಯಿಸಲಿಂದು ಚಂದ್ರಹತಕಂ ವಿಷಮಜ್ವರಿತಂಗೆ ಮತ್ತೆ ಕೆಂ
ಡದ ಮಟೆ ಕೋಡುದಗ್ಗಲಿಸಿದ್ಯೆಕಿಲವಂಗೆ ಹಿಮಪ್ರಪಾತಮಾ
ದುದು ಪಿರಿದಪ್ಪ ನಂಜುಪುಗುಳುರ್ಬಿದವಂಗಸಿತಾಹಿದಂಶಮಾ
ದುದು ದಿಟವೆಂದು ತಲ್ಲಣದಿನಾಗಳೆ ಭೋಂಕನೆ ಮೂರ್ಛೆವೋಪುದುಂ ೧೩೯

ವ॥ ಆಗಳತಿಸಂಭ್ರಮಂಬೆರಸು ತರಳಿಕೆ ತಂದ ಚಂದನದ ಚರ್ಚೆಗಳಿಂ ಮೆತ್ತಮನೇಕ ಶಿಶಿರೋಪಚಾರಂಗಳಿಂದುಪಚರಿಸಲದಟಿನೆಂತಾನುಂ ಮೂರ್ಛೆಯಿಂದೆಚ್ಚೆತ್ತು

ಅಟಲಗ್ಗಳಿಸಲ್ ಕಣ್ಣೀರ್
ಗಟಗಟಿಸಿ ಕಪೋಲಯುಗಳದಿಂ ಪೆರ್ಮೊಲೆಗಾ
ಗಿಟಿತರ್ಪಿನಮೆನ್ನಂ ಪಿಡಿ
ದಟುತಿರ್ದಳನಿನಿಸು ನೋಡಿದೆಂ ತರಳಿಕೆಯಂ ೧೪೦

ವ॥ ಅಂತು ನೋಟ್ಪುದುಂ ಚಂದನಪಂಕಾರ್ದ್ರಂಗಳಪ್ಪ ಕರಕಮಲಂಗಳಂ ಮುಗಿದು

ಇನಿತಂ ಪ್ರಾರ್ಥಿಪೆನಕ್ಕ ನಿನ್ನನುಟಿ ನೀಂ ಲಜ್ಜಾಭರಾವೇಶಮಂ
ನಿನಗೀ ತಂದೆಯ ತಾಯೊಳಪ್ಪ ಭಯಮೇಕೇಟಿಟ್ ಪೋಪಮಾನಾಜಿನಿ
ನ್ನನಿತಂ ನೋಡುತಮಿರ್ಪೆ ನೀನಕರುಣಂ ಮೇಣ್ ಪೋಗು ನೀನೆಂದು ಪೇಟಿಟ್
ಮನದಿಂ ಮುನ್ನಮೆ ಪೋಗಿ ನಿನ್ನನಿಯನಂ ತಂದಪ್ಪೆನಬ್ಜಾನನೇ ೧೪೧

ಚಂದ್ರನು ಮೇಲಕ್ಕೇರಿ ತಲೆದೋರಿದ್ದಾನೆ. ಅಯ್ಯೋ ಕೆಟ್ಟೆ. ಈ ವಿರಹಸಂತಾಪವು ನನ್ನ ಮನಸ್ಸಿನೊಳಗೆ ಹೆಚ್ಚುತ್ತಿದೆ. ೧೩೯. ಈಗ ನೀಚನಾದ ಚಂದ್ರನು ಹುಟ್ಟಲಾಗಿ ಮೊದಲೆ ವಿಷಮಜ್ವರಪೀಡಿತನಾದವನ ಮೇಲೆ ಕೆಂಡದ ಮಳೆ ಬೇರೆ ಸುರಿದಂತೆಯೂ, ಹೆಚ್ಚಾದ ಶೀತವುಳ್ಳವನ ಮೇಲೆ ಮಂಜು ಸುರಿದಂತೆಯೂ, ದೊಡ್ಡದಾದ ವಿಷದ ಗುಳ್ಳೆ ಯೆದ್ದವನಿಗೆ ಹಾವು ಕಚ್ಚಿದಂತೆಯೂ ನಿಜವಾಗಿ ಆದಂತಾಯಿತು ಎಂದು ತಲ್ಲಣಿಸುತ್ತ ನಾನು (ಮಹಾಶ್ವೇತೆ) ಮೂರ್ಛೆ ಹೋಗಲಾಗಿ, ವ॥ ಆಗ ಬಹಳ ಚುರುಕಿನಿಂದ ಹೋಗಿ ತರಳಿಕೆ ತಂದ ಶ್ರೀಗಂಧಲೇಪನಗಳಿಂದಲೂ ಮತ್ತು ಅನೇಕ ಶೈತ್ಯೋಪಚಾರಗಳಿಂದಲೂ ಚಿಕಿತ್ಸೆ ನಡೆಯಲು ಅದರಿಂದ ಹೇಗೋ ಮೂರ್ಛೆಯಿಂದ ಎಚ್ಚೆತ್ತು ೧೪೦. ಮನಸ್ಸಿನ ವಿಷಾದವು ಹೆಚ್ಚಲಾಗಿ, ಕಣ್ಣೀರು ಗಳಗಳನೆ ಕೆನ್ನೆಗಳ ಮೇಲಿಂದ ಕುಚಗಳ ಮೇಲೆ ಇಳಿಯುತ್ತಿರಲಾಗಿ ನನ್ನನ್ನು ಹಿಡಿದುಕೊಂಡು ಅಳುತ್ತಿರುವ ತರಳಿಕೆಯನ್ನು ನೋಡಿದೆನು. ವ॥ ಹಾಗೆ ನೋಡಲಾಗಿ ನನ್ನ ಶರೀರಕ್ಕೆ ಶ್ರೀಗಂಧವನ್ನು ಲೇಪನ ಮಾಡಿದ್ದರಿಂದ ಇನ್ನೂ ಒದ್ದೆಯಾಗಿರುವ ಕೈಗಳನ್ನು ಮುಗಿದು ೧೪೧. "ಅಕ್ಕ ! ನಿನ್ನನ್ನು ಇಷ್ಟು ಮಾತ್ರ ಬೇಡಿಕೊಳ್ಳುತ್ತೇನೆ. ನೀನು ಅತ್ಯಧಿಕವಾದ ನಾಚಿಕೆಯನ್ನು ಬಿಟ್ಟುಬಿಡು. ನಿನಗೆ ಈ ತಂದೆ ತಾಯಿಗಳ ಭಯವಿನ್ನೇಕೆ ? ಏಳು ಹೋಗೋಣ, ನಾನು ನೋಡಲಾರೆ ಇನ್ನೆಷ್ಟು ಹೊತ್ತು ಅವನ ಮೇಲೆ ಕನಿಕರವಿಲ್ಲದೆ ಹೀಗೆ ಸುಮ್ಮನೆ ನೋಡುತ್ತಿರುತ್ತೀಯೆ, ಎಲೈ ಕಮಲಮುಖಿ, ಅಥವಾ ನೀನು ಹೋಗಿ ಬಾ ಎಂದು ನನಗೆ ಹೇಳು. ನಾನು

ವ॥ ಎಂದು ತರಳಿಕೆ ನುಡಿಯೆ

ಇದನೇನೆಂದಪ್ಪೆ ನಾಣೇಂ ಗುರುಗಳುಮೆನಗಿನ್ನೇಕೆ ಪೇೞ್ ಮೃತ್ಯುವೋಲ್ ಮೂ
ಡಿದನಲ್ತೇ ಚಂದ್ರನುಂ ತಾನಿರದೆ ಕರುಣದಿಂದೊಯ್ದೊಡೇಳ್ ಪೋಪಮೀ ದೇ
ಹದೊಳಿಂದೀ ಪ್ರಾಣಮುಳ್ಳನ್ನೆಗಮೆ ತಡೆಯದಾತ್ಮೇಶನಂ ಕಾಣ್ಬೆನೋ ಪು
ಣ್ಯದಿನೆಂದಾಂ ಚೇಷ್ಟೆಗೆಟ್ಟಂದವಳನೆ ಪಿಡಿದಲ್ಲಿಂದಮೆಂತಾನುಮೆೞ್ದೆಂ ೧೪೨

ವ॥ ಅಂತೇಟಲೊಡನೆ

ಬಿದಿ ಮತ್ತೇನನಿದಂ ತೋ
ಱಿದಪನೊ ಪಾತಕಿಗೆನುತ್ತೆ ಭಯಮುಂ ಚಿತ್ತ
ಕ್ಕೊದವಿಸಿ ಬಲಗಣ್ ಕೆತ್ತಲ್
ಮೊದಲಿಕ್ಕಿತು ದುರ್ನಿಮಿತ್ತಸೂಚಕಮಾಗಲ್ ೧೪೩

ಅದನೇವೇೞ್ವೆನನಂತರಂ ತ್ರಿಭುವನಪ್ರಾಸಾದರಮ್ಯಪ್ರಣಾ
ಳದವೋಲ್ ಕಣ್ಗೆಸೆವಿಂದುಮಂಡಲದಿನೇಂ ಗಂಗಾಪ್ರವಾಹಂಗಳು
ಣ್ಮಿದುವೋ ಚಂದನವಾರಿಪೂರಮಿೞಿದತ್ತೋ ಕ್ಷೀರವಾರಾಶಿ ಪೊ
ಣ್ಮಿದುದೋ ಪೇೞ್ನೆ ಲೋಕದೊಳ್ ಕವಿದು ಪರ್ವಿತ್ತಂದು ಚಂದ್ರಾತಪಂ ೧೪೪

ಮನಸ್ಸಿಗಿಂತಲೂ ಮೊದಲೆ ಹೋಗಿ ನಿನ್ನ ನಲ್ಲನನ್ನು ಕರೆತರುತ್ತೇನೆ. ವ॥ ಎಂದು ತರಳಿಕೆಯು ಹೇಳಲಾಗಿ ೧೪೨. ಇದೇನು ಹೇಳುತ್ತೀಯೆ ? ನಾಚಿಕೆಯೇತಕ್ಕೆ ? ಇನ್ನು ಹಿರಿಯರನ್ನು ಕಟ್ಟಿಕೊಂಡೇನು ? ಹೇಳು. ಮೃತ್ಯುವಿನಂತೆ ಈ ಚಂದ್ರನೂ ಉದಯಿಸಿ ಬಿಟ್ಟಿದ್ದಾನೆ. ನೀನು ವಿಳಂಬಮಾಡದೆ ಕರುಣೆಯಿಂದ ನನ್ನನ್ನು ಕರೆದುಕೊಂಡು ಹೋಗುವುದಾದರೆ ಏಳು ಹೋಗೋಣ. ಇಂದು ನನ್ನ ದೇಹದಲ್ಲಿ ಪ್ರಾಣವಿರುವುದ ರೊಳಗಾಗಿ ಪುಣ್ಯದಿಂದ ಪ್ರಾಣಕಾಂತನನ್ನು ನೋಡಲಾಗುತ್ತದೆಯೊ ಇಲ್ಲವೊ ಕಾಣೆನಲ್ಲ ! ಎಂದು ಚಲನಶಕ್ತಿಗುಂದಿ ಅವಳನ್ನೆ ಹಿಡಿದುಕೊಂಡು ಅಲ್ಲಿಂದ ಹೇಗೋ ಎದ್ದೆನು. ವ॥ ಹಾಗೆ ಏಳಲಾಗಿ ಕೂಡಲೆ ೧೪೩. ಆಗ ನನ್ನ ಬಲಗಣ್ಣು ಹಾರಲು ಮೊದಲಿಕ್ಕಿತು. ಅದು ಅಪಶಕುನವಾದುದರಿಂದ ವಿಧಿಯು ಈ ಪಾಪಿಷ್ಠಳಿಗೆ ಮತ್ತಾವ ಅನಿಷ್ಟವನ್ನುಂಟು ಮಾಡುತ್ತಾನೋ ಎಂಬ ಭಯವು ನನ್ನ ಮನಸ್ಸಿನಲ್ಲುಂಟಾಯಿತು. ೧೪೪. ಬಳಿಕ ಮೂರುಲೋಕವೆಂಬ ಉಪ್ಪರಿಗೆಮನೆಯ ಮೇಲಿರುವ ನೀರು ಹೊರಕ್ಕೆ ಬರಲು ಮಾಡಿ ರುವ ರಮಣೀಯವಾದ ಗೋಳಾಕಾರದ ಕಂಡಿಯಂತೆ ಶೋಭಿಸುವ ಚಂದ್ರಮಂಡಲ ದಿಂದ ಗಂಗಾಪ್ರವಾಹಗಳು ಹೊರಹೊಮ್ಮುತ್ತಿವೆಯೋ ಎಂಬಂತೆಯೂ, ಗಂಧೋ ದಕದ ಪ್ರವಾಹವು ಇಳಿದುಬರುತ್ತಿದೆಯೋ ಎಂಬಂತೆಯೂ ಕ್ಷೀರಸಮುದ್ರವು ಉಕ್ಕು ತ್ತಿದೆಯೋ ಎಂಬಂತೆಯೂ ಬೆಳದಿಂಗಳು ಲೋಕವೆಲ್ಲೆಲ್ಲಾ ಕವಿದು ಹರಡಿತ್ತು. ಅದನ್ನು

ವ॥ ಅಂತು ಪರ್ವಿದ ಬೆಳ್ದಿಂಗಳೊಳಖಿಳಜನಮೆಲ್ಲಂ ಶ್ವೇತದ್ವೀಪದೊಳಿರ್ದಂತಿರಲಾ ರಾತ್ರಿಯೊಳ್ ಮದನವಿಹ್ವಲತೆಯಿಂ ಮೂರ್ಛೆವೋದೆನ್ನನೆಚ್ಚಱಿಸಲೆಂದು ನೊಸಲೊಳಿಕ್ಕಿದ ಮಂದವಪ್ಪ ಚಂದನದಣ್ಪಿನಿಂ ಪತ್ತಿ ಪಗಿಲ್ತು ಬೆಳ್ಕರಿಸಿದಳಕನಿಕರಮುಂ ಮುನ್ನಮೆ ಕೊರಳೊಳಿಕ್ಕಿರ್ದ ಕ್ಷಾವಳಿಯುಂ ಕಿವಿಯೊಳಿಕ್ಕಿರ್ದ ಪಾರಿಜಾತಕುಸುಮಮಂಜರಿಯುಂ ಪದ್ಮರಾಗಮಣಿ ಕಿರಣದಂತಿರ್ದ ರಕ್ತಾಂಶುಮುಮೆನ್ನೊಳಳವಡೆ ಗೃಹೀತ ವಿವಿಧ ಕುಸುಮ ತಾಂಬೂಲರಾಶಿಯುಮಪ್ಪ ತರಳಿಕೆವೆರಸು ಮದೀಯ ಪರಿಚಿತ ಪರಿಜನಮುಮಱಿಯದಂತು ಕರುಮಾಡದಿಂದವನಿತಳಕ್ಕವತರಿಸಿ

ಶ್ರವಣನತ ಪಾರಿಜಾತ<br>
ಸ್ತವಕೋದ್ಗತ ಪರಿಮಳಕ್ಕೆ ನಂದನಭೃಂಗೀ<br>
ನಿವಹಂ ಕವಿದೆನ್ನ ಮುಸುಂ<br>
ಕುವಿನಂ ಪೊಱಮಟ್ಟೆನಾಗಳತಿಸಂಭ್ರಮದಿಂ ೧೪೫

ವ॥ ಅಂತು ತರಳಿಕೆವೆರಸು ಪ್ರಮದವನಪಕ್ಷದ್ವಾರದಿಂ ಪೊಱಮಟ್ಟು ಪೋಗುತ್ತುಂ ಪರಿಜನವಿರಹಿತೆಯೆನೆನ್ನೊಳಿಂತೆಂದೆಂ

ಸರಭಸವಾಗಳೇಱಿಸಿದ ಬಿಲ್ವೆರಸಂಗಜನೆನ್ನ ಪಕ್ಕದೊಳ್<br>
ಬರುತಿರೆ ಲಜ್ಜೆ ಪಿಂದೆ ನಿಲೆ ಮುಂದೆ ಮದಿಂದ್ರಿಯವರ್ಗಮಾವಗಂ<br>
ಪರಿಯೆ ನಿಶಾಕರಂ ನಿಜಕರೋತ್ಕರದಿಂ ಪಿಡಿದೊಯ್ಯೆ ಬೇಱೆ ಪೇೞ್<br>
ಪರಿಜನಮೇವುದಿಂ ಮಱಿಸಿ ಪೋಪೆನಗಿಂತುಟೆ ದಲ್ ಪರಿಗ್ರಹಂ ೧೪೬

ಏನು ಹೇಳಲಿ ? ವ॥ ಹಾಗೆ ಹರಡಿರುವ ಬೆಳದಿಂಗಳಲ್ಲಿ ಜನರೆಲ್ಲರೂ ಶ್ವೇತದ್ವೀಪದಲ್ಲಿರುವಂತೆ ಕಾಣುತ್ತಿರಲು ಆ ರಾತ್ರಿಯಲ್ಲಿ ವಿರಹವೇದನೆಯ ಕಳವಳದಿಂದ ಮೂರ್ಛೆ ಹೋಗಿದ್ದ ನನ್ನನ್ನು ಎಚ್ಚರಿಸುವುದಕ್ಕಾಗಿ ಹಣೆಗೆ ಬಳಿದಿದ್ದ ದಟ್ಟವಾದ ಬಿಳಿಗಂಧದ ಲೇಪನದಲ್ಲಿ ಸೇರಿ ಅಂಟಿಕೊಂಡು ಬಿಳುಪಾದ ಮುಂಗುರುಳೂ, ಮೊದಲೆ ಕೊರಳಲ್ಲಿ ಹಾಕಿಕೊಂಡಿದ್ದ ಜಪಸರವೂ, ಕಿವಿಯ ಮೇಲೆ ಏರಿಸಿದ್ದ ಪಾರಿಜಾತಕುಸುಮದ ಗೊಂಚಲೂ, ಪದ್ಮರಾಗಮಣಿಯ ಕಿರಣಗಳಂತಿದ್ದ ಕೆಂಪು ಮೇಲುಹೊದಿಕೆಯೂ ನನ್ನಲ್ಲಿ ಆಳವಟ್ಟಿರಲು ನಾನಾ ಬಗೆಯ ಹೂವು ತಾಂಬೂಲಗಳನ್ನು ತೆಗೆದುಕೊಂಡು ಹೊರಟಿರುವ ತರಳಿಕೆಯೊಂದಿಗೆ ಕೂಡಿಕೊಂಡು ನನ್ನ ಪರಿಜನರಾರೂ ಅರಿಯದಂತೆ ಮಹಡಿಯಿಂದ ಭೂಮಿಗೆ ಇಳಿದು ೧೪೫. ನನ್ನ ಕಿವಿಯಲ್ಲಿರುವ ಪಾರಿಜಾತಕುಸುಮದ ಗೊಂಚಲಿನಿಂದ ಹೊರಡುತ್ತಿರುವ ಪರಿಮಳಕ್ಕೆ ಉದ್ಯಾನವನದಲ್ಲಿರುವ ದುಂಬಿಗಳ ಸಮೂಹವು ಆವರಿಸಿ ಮುತ್ತುತ್ತಿರಲಾಗಿ ನಾನು ಬಹಳ ಸಡಗರದಿಂದ ಹೊರಟೆನು. ವ॥ ಹಾಗೆ ತರಳಿಕೆಯಿಂದ ಕೂಡಿಕೊಂಡು ಉದ್ಯಾನವನದ ಪಕ್ಕದ ಬಾಗಿಲಿನಿಂದ ಮತ್ತಾವ ಊಳಿಗದವರನ್ನೂ ಕರೆದುಕೊಳ್ಳದೆ ಹೊರಟುಹೋಗುತ್ತಾ ನನ್ನಲ್ಲೇ ಹೀಗೆ ಆಲೋಚಿಸಿದೆನು. ೧೪೬. ಬಹಳ ವೇಗವಾಗಿ ಹೆದೆಯೇರಿಸಿದ ಬಿಲ್ಲಿನಿಂದ ಕೂಡಿಕೊಂಡಿರುವ ಮನ್ಮಥನು ನನ್ನ ಪಕ್ಕದಲ್ಲೇ ಬರುತ್ತಿದ್ದಾನೆ. ನಾಚಿಕೆಯು ನನ್ನ ಹಿಂದೆ ನಿಂತಿದೆ.

ವ॥ ಎಂದೆನ್ನೊಳ್ ಚಿಂತಿಸುತ್ತುಂ ತರಳಿಕೆಯುನಿಂತೆಂದೆಂ

ಎಂತೀಗಳೆನ್ನನೊಯ್ದಪ
ನಂತೋಪದೆ ಕರಕಚಗ್ರಹಂಗೆಯ್ದು ನಿಶಾ
ಕಾಂತಂ ತಡೆಯದೆ ನಮಗಿದಿ
ರೇಂ ತರ್ಕುಮೆ ಜೀವಿತೇಶನಂ ತರಳಾಕ್ಷೀ ೧೪೭

ವ॥ ಎಂಬುದುಂ ತರಳಿಕೆ ಮುಗುಳ್ನಗೆನಗುತ್ತುಮೆನ್ನನಿಂತೆಂದಳ್

ಎಲೆ ಮುಗ್ಧೆ ಚಂದ್ರಮಂ ಕಾ
ದಲನಂ ತಂದಪನೆ ತಾನೆ ಮುನ್ನಿನ್ನಂ ಕಾ
ಣಲೊಡಂ ಮನ್ಮಥಶರವಿ
ಪ್ಲವಿತನವೋಲ್ ನೋಡ ನೆಗಬುತಿರ್ದಪನಲ್ತೇ ೧೪೮

ವ॥ ಅದೆಂತೆಂದೊಡೆ

ಪ್ರತಿಬಿಂಬವ್ಯಾಜದಿಂ ನಿನ್ನಯ ಕದಪುಗಳಂ ಚುಂಬಿಸುತ್ತುಂ ಕಲಾಪಂ
ಚಿತರತ್ನಾನೀಕಮಂ ಸೋಂಕುತಮೆಸೆವ ಕುಚಾಭೋಗದೊಳ್ ನಿಂದು ಮೇಲ್ವಾ
ಯುತಮುದ್ಯತ್ಕಾಂತಿ ಚಂಚನ್ನಖಗತತನುವೆಂತುಂ ಬಿಡಂ ಪತ್ತಿ ಕಾಲಂ
ಸತಿ ಬೀಟ್ಟಿರ್ದಪ್ಪನಿಂತೀತನ ತೆಱನನಿದಂ ಕಾಣೆ ನೀನುತ್ಪಲಾಕ್ಷೀ ೧೪೯

ಮುಂದೆ ನನ್ನ ಇಂದ್ರಿಯಗಳು ಒಂದೇ ಸಮನೆ ಹೋಗುತ್ತಿವೆ. ಚಂದ್ರನು ತನ್ನ ಕಿರಣಗಳೆಂಬ ಕೈಗಳಿಂದ ಹಿಡಿದು ನಡೆಸಿಕೊಂಡು ಹೋಗುತ್ತಿದ್ದಾನೆ. ಇವರೆಲ್ಲ ನನ್ನ ಪರಿವಾರದವರಂತೆ ಇರುವಾಗ ನನಗೆ ಇನ್ನು ಬೇರೆ ಪರಿಜನರು ಏಕೆ ? ಯಾರಿಗೂ ಕಾಣದಂತೆ ಇನಿಯನನ್ನು ಅರಸಿಕೊಂಡು ಹೋಗುವ ನನಗೆ ಇಂತಹುದೇ ಪರಿವಾರ. ವ॥ ಎಂದು ನನ್ನಲ್ಲೇ ಆಲೋಚಿಸುತ್ತಾ ತರಳಿಕೆಯನ್ನು ಕುರಿತು ಹೀಗೆ ಹೇಳಿದೆನು. ೧೪೭. "ಎಲೈ ಚಂಚಲಾಕ್ಷಿ, ಈ ಚಂದ್ರನು ಹೇಗೆ ಈಗ ನನ್ನನ್ನು ಎಳೆದುಕೊಂಡು ಹೋಗುತ್ತಿದ್ದಾನೆಂ ಹಾಗೆಯೆ ನನ್ನ ಪ್ರಾಣಕಾಂತನನ್ನೂ ದಾಕ್ಷಿಣ್ಯವಿಲ್ಲದೆ ಕೈಯನ್ನೂ ಕೂದಲನ್ನೂ ಹಿಡಿದುಕೊಂಡು ತಡಮಾಡದೆ ಕರೆದುಕೊಂಡು ಬಂದು ನಮ್ಮ ಮುಂದೆ ನಿಲ್ಲಿಸುತ್ತಾನೆಯೆ ?" ವ॥ ಎಂದು ಹೇಳಲು ತರಳಿಕೆಯು ಮುಗುಳ್ನಗೆಯನ್ನು ತೋರಿಸುತ್ತಾ ಹೀಗೆಂದಳು. ೧೪೮. "ಅಯ್ಯೋ ! ದಡ್ಡೆ, ಚಂದ್ರನು ನಿನ್ನ ಇನಿಯನನ್ನು ಕರೆತರುತ್ತಾನೆಯೆ ? ತಾನೆ ಮೊದಲು ನಿನ್ನನ್ನು ಕಂಡಕೂಡಲೆ ಕಾಮನಬಾಣಗಳಿಂದ ಕಳವಳಗೊಂಡವನಂತೆ ಆಡುತ್ತಿದ್ದಾನೆ, ನೋಡು ! ವ॥ ಅದು ಹೇಗೆಂದರೆ. ೧೪೯. ಪ್ರತಿಬಿಂಬದ ನೆಪದಿಂದ ನಿನ್ನ ಕೆನ್ನೆಗಳಿಗೆ ಮುತ್ತು ಕೊಡುತ್ತಾನೆ. ಸೊಂಟದ ಡಾಬಿನ ರತ್ನಪಂಕ್ತಿಯನ್ನು ಮುಟ್ಟುತ್ತಾನೆ. ಸುಂದರವಾದ ತೋರ ಮೊಲೆಗಳನ್ನು ಮೇಲೇರಿ ಬಂದು ಹಿಡಿಯುತ್ತಾನೆ. ಕಾಂತಿಯನ್ನು ಬೀರುತ್ತಿರುವ ತಳತಳಿಸುವ ಕಾಲುಗುರುಗಳಲ್ಲಿ ಪ್ರತಿಫಲಿಸಿರುವ ದೇಹವುಳ್ಳವನಾದುದರಿಂದ ನಿನ್ನ ಕಾಲುಗಳಿಗೆ ಬಿದ್ದು ಅವುಗಳನ್ನು ಬಿಡದೆ ಹಿಡಿದು

ವ॥ ಅದಲ್ಲದೆಯುಂ ವಿರಹವಿಹ್ವಲತೆಯಿಂ ಚಂದನಾನುಲಿಪ್ತನಾದಂತೆ ಬೆಳರ್ಪಿನಾವರಿಸಿಯುಂ ಮಾರ್ತೊಳಪ ನೆವದಿಂ ಪಳುಕಿನ ಪಾಸರೆಗಳೊಳ್ ಮೆಯ್ಯನೀಡಾಡಿಯುಂ ನೆಯ್ದಿಲ್ಗೊಳಂಗಳೊಳೋಲಾಡಿಯುಂಮೊಸರ್ವ ಚಂದ್ರಕಾಂತಶಿಲಾತಲಂಗಳೊಳ್ ಕರಂಗಳಿನೆಳವಿಯುಂ ವಿಘಟಿತ ಚಕ್ರವಾಕಂಗಳಪ್ಪ ಕಮಲವನಂಗಳೊಳ್ ಪಾಯ್ದುಮಿಂತು ಪಲತೆಱದೆ ಕೋಟಲೆಗೊಳುತಿರ್ದಪನಿಂತಿವು ಮೊದಲಾಗಿ ತತ್ಕಾಲೋಚಿತವಚನಂಗಳಂ ನುಡಿಯುತ್ತಮಿರಲಾಕೆವೆರಸಾ ಪ್ರದೇಶಮನೆಯ್ದುವಪ್ಪಾಗಳ್

ಮೊದಲೊಳೆ ಕೆತ್ತಿದತ್ತು ಬಲಗಣ್ಣೆನಗೇನನೊಡರ್ಚಲಿರ್ದುದೋ
ಬದಿಯೆನುತುಂ ಭಯಂಬೆರಸು ಮುನ್ನಮೆ ಶಂಕಿಸುತಿರ್ದೆನೋವೋ ಮ
ತ್ತಿದು ಪೆಱತೇನೆನುತ್ತಮಿರ್ದೆ ಪವ್ವನೆ ಪಾಱಲದೊಂದು ಕೇಳಲಾ
ದುದು ಪುರುಷಪ್ರಲಾಪರುದಿತಸ್ವನಮಾ ಗಹನಾಂತರಾಳದೊಳ್ ೧೫೦

ವ॥ ಅದಂತೆಂದೊಡೆ

ಉರಿದೆಂ ಬೆಂದನಿದೇನನೀತು ನೆಗಟ್ದೈ ನಿಸ್ತ್ರಿಂಶ ಪುಷ್ಪಾಸ್ತ್ರ ನಿ
ಷ್ಠುರ ಪೇಟ್ ಪೊಲ್ಲದನೇನನಾಚರಿಸಿದಳ್ ನಿನ್ನೊಳ್ ಮಹಾಶ್ವೇತೆ ಭೀ
ಕರ ದೋಷಾಕರ ಕೂಡಿತೇ ಬಗೆದುದುಂ ಚಂಡಾಳ ತಂಗಾಳಿ ಪೇಟ್
ಪಿರಿದೊಂದುತ್ಸವಮಾಯ್ತೆ ಕೇಡನಱಿದೈ ಹಾ ಶ್ವೇತಕೇತುವ್ರತೀ ೧೫೧

ಕೊಂಡಿದ್ದಾನೆ ಎಂಬಂತೆ ಕಾಣುತ್ತಿದ್ದಾನೆ. ಎಲೈ ನೈದಿಲೆಯಂತೆ ಕಣ್ಣುಳ್ಳವಳೆ, ಇವನ ಬಗೆ ನಿನ್ನಗಿನ್ನೂ ಗೊತ್ತಿಲ್ಲ ! ವ॥ ಅದಲ್ಲದೆ ವಿರಹಪೀಡೆಯಿಂದಾಗಿ ಶ್ರೀಗಂಧದಿಂದ ಲೇಪನ ಮಾಡಿಕೊಂಡಿರುವವನಂತೆ ಬಿಳುಪಿನಿಂದ ಕೂಡಿಕೊಂಡಿದ್ದಾನೆ. ಪ್ರತಿಬಿಂಬಿಸುವ ನೆಪದಿಂದ ಸ್ಫಟಿಕಶಿಲಾತಲದಲ್ಲಿ ಮಲಗುತ್ತಾನೆ. ಮತ್ತು ನೈದಿಲೆಗೊಳಗಳಲ್ಲಿ ಮುಳುಗುತ್ತಾನೆ. ನೀರು ಜಿನುಗುತ್ತಿರುವ ಚಂದ್ರಕಾಂತದ ಹಾಸುಗಲ್ಲಿನ ಮೇಲೆ ಕೈಯಾಡಿಸುತ್ತಾನೆ. ಚಕ್ರವಾಕಪಕ್ಷಿಗಳನ್ನು ಬೇರ್ಪಡಿಸಿರುವ ತಾವರೆಬಳ್ಳಿಗಳ ಪೊದರುಗಳನ್ನು ಇಷ್ಟವಿಲ್ಲದಿರುವುದರಿಂದ ದಾಟಿಹೋಗುತ್ತಾನೆ. ಹೀಗೆ ಹಲವು ಬಗೆಯ ಕೋಟಲೆಗಳನ್ನು ಅನುಭವಿಸುತ್ತಿದ್ದಾನೆ.” ಇವೇ ಮೊದಲಾದ ತತ್ಕಾಲೋಚಿತವಾದ ಮಾತುಗಳನ್ನಾಡುತ್ತ ಅವಳ ಜೊತೆಯಲ್ಲಿ ಆ ಸ್ಥಳಕ್ಕೆ ಬರುತ್ತಿರಲಾಗಿ. ಟಿ. ಕಾಮಜ್ವರಪೀಡಿತರಾದವರು ಮಾಡಿಕೊಳ್ಳುವ ಶೈತ್ಯೋಪಚಾರವು ಇಲ್ಲಿ ಚಂದ್ರನು ಮಾಡಿಕೊಳ್ಳುತ್ತಿರುವನೆಂದು ವರ್ಣಿತವಾಗಿದೆ. ೧೫೦. ನಾನು ಮೊದಲು ಮನೆಯನ್ನು ಬಿಟ್ಟು ಹೊರಟಾಗಲೆ ನನ್ನ ಬಲಗಣ್ಣು ಹಾರಿತು ಇದರಿಂದ ವಿಧಿ ನನಗೆ ಏನನ್ನು ಉಂಟುಮಾಡುತ್ತಾನೋ ಎಂದು ಮನಸ್ಸು ಮೊದಲೆ ಭಯದಿಂದ ಅಳುಕುತ್ತಲೆ ಇತ್ತು. ಅಷ್ಟರಲ್ಲಿ ಕಾಡಿನ ಮಧ್ಯದಲ್ಲಿ ಗಂಡಸು ಅಳುವ ಧ್ವನಿ ಕಿವಿಗೆ ಬಿತ್ತು. ಅಯ್ಯೋ ಗ್ರಹಚಾರವೆ, ಇದೇನು ಮತ್ತೆ ಬಂತಪ್ಪ ! ಎಂದು ನನ್ನ ಎದೆ ತಟ್ಟನೆ ಹಾರಿದಂತೆ ಆಯಿತು. ವ॥ ಅದೇನೆಂದರೆ ೧೫೧. ಅಯ್ಯೋ, ಉರಿದುಹೋದೆ ! ಬೆಂದುಹೋದೆ ! ಎಲೋ ಘಾತುಕ, ಮನ್ಮಥ. ನೀನೇನು ಮಾಡಿಬಿಟ್ಟೆ ? ಎಲೈ ಕ್ರೂರನೆ, ಪಾಪ ! ಆ ಮಹಾಶ್ವೇತೆ ನಿನಗೇನು ಅನ್ಯಾಯ

ಶರಣಾರೊ ತಪವೆ ಭುವನಾಂ
ತರದೊಳ್ ಕೈಕೊಳ್ವರಾರೊ ಧರ್ಮವೆ ನಿನ್ನಂ
ಸುರಲೋಕವೆ ಪಾಟಾದೈ
ಸರಸ್ವತೀದೇವಿ ರಂಡೆಯಾದೌ ಸತ್ಯಂ ॥೫೨

ಪರಿಚಯಮಿಲ್ಲ ಕಂಡಱಿಯೆಯೋ ಸಖಿ ತೊಟ್ಟನಲಿಂತು ಬಿಟ್ಟು ಪೋ
ಪರೆ ಕಠಿನಾತ್ಮನಾದೆ ನೆರವಾರೆನಗಿರ್ದಪರೆತ್ತವೋಪೆನೊ
ರ್ಬರುಮೆನಗಾಸೆಯಿಲ್ಲ ದೆಸೆ ಪಾಳ್ಮಸಗಿರ್ಪುದಂಧನಾದೆನಾರ್
ಶರಣೆನಗೆನ್ನ ಬಾಟ್ಕೆಯೆ ನಿರರ್ಥಕಮೆಂದೆನುತಂ ಪಲುಂಬುತಂ ॥೫೩

ಉಸಿರದೆ ನೀನಿರಲ್ ನುಡಿವೆನಾರೊಡನಾಟಮನಾಡುತಿರ್ಪೆ ನೀ
ಪುಸಿಮುಳಿಸೇಕೆ ಪೇೞ್ ಕೆಳೆಯ ನಿನ್ನಯ ಕೂರ್ಮೆಯದೆತ್ತವೋಯ್ತು ನೋ
ಯಿಸದಿನಿಸೆಟ್ದು ನೋಡಿ ನುಡಿಯೆಂದೆನಿತುಂ ತೆಱದಿಂ ಕಪಿಂಜಲಂ
ದೆಸೆದೆಸೆಗಂದು ಬಾಯ್ವಿಡುತಮಿರ್ದುದನಾಲಿಸಿದೆಂ ಮಹೀಪತೀ ॥೫೪

ಮಾಡಿದ್ದಳು ? ಭಯಂಕರನಾದ ಚಂದ್ರನೆ, ನಿನ್ನ ಇಷ್ಟಾರ್ಥ ನೆರವೇರಿತೆ ? ಎಲೋ ಚಂಡಾಲ ! ತಂಗಾಳಿ ! ನಿನಗೆ ಈಗ ಬಹಳ ಆನಂದವಾಯಿತೋ, ಹೇಳು. ಅಯ್ಯೋ ಶ್ವೇತಕೇತುಮಹರ್ಷಿಯೆ ! ಇಂಥ ವ್ಯಸನವನ್ನು ನೀನು ಕಾಣುವಂತಾಯಿತೆ ? ೧೫೨. ತಪಸ್ಸೆ ! ಇನ್ನು ಈ ಜಗತ್ತಿನಲ್ಲಿ ನಿನಗೆ ರಕ್ಷಕರಾರು ? ಧರ್ಮವೆ, ಇನ್ನು ನಿನ್ನನ್ನು ಕೈ ಹಿಡಿಯುವವರು ಯಾರು ? ದೇವಲೋಕವೆ ! ಹಾಳಾಗಿ ಹೋದೆಯಲ್ಲ ! ಸರಸ್ವತಿ ! ಇನ್ನು ನೀನು ನಿಜವಾಗಿಯೂ ವಿಧವೆಯಾದೆ ! ೧೫೩. ಗೆಳೆಯ, ನಾನು ಅಪರಿಚಿತನೆ ? ನೀನು ನನ್ನನ್ನು ನೋಡಿಯೇ ಇಲ್ಲವೆ ? ಹೀಗೆ ತಟ್ಟನೆ ನನ್ನನ್ನು ಬಿಟ್ಟು ಹೋಗಬಹುದೆ ? ಬಹಳ ಕಠಿನ ಮನಸ್ಸಿನವನಾಗಿಬಿಟ್ಟೆಯಲ್ಲ ! ನನಗಿನ್ನಾರು ಸಹಾಯಕರಿದ್ದಾರೆ ? ನಾನು ಇನ್ನು ಎಲ್ಲಿಗೆ ಹೋಗಲಿ ? ಯಾರ ಮೇಲೂ ನನಗೆ ಆಸಕ್ತಿಯಿಲ್ಲ. ನನಗೆ ದಿಕ್ಕೆಲ್ಲ ಶೂನ್ಯ ವಾಗಿ ಕಾಣುತ್ತಿದೆ. ಕಣ್ಣೇ ಕಾಣುವುದಿಲ್ಲ. ನನಗಿನ್ನಾರು ದಿಕ್ಕು. ನನ್ನ ಜೀವನವೇ ಹಾಳಾಯಿತು—ಎಂದು ಹಲುಬುತ್ತಾ ೧೫೪. "ಗೆಳೆಯಾ, ನೀನು ಮಾತನಾಡದಿದ್ದರೆ ನಾನು ಇನ್ನು ಯಾರ ಸಂಗಡ ಮಾತನಾಡಲಿ ? ನೀನು ಯಾರೊಡನೆ ಆಡುತ್ತಿರುವೆ ? ನನ್ನ ಮೇಲೆ ಈ ಹುಸಿ ಮುನಿಸೇತಕ್ಕೆ ? ಹೇಳು. ಪುಂಡರೀಕ ! ನಿನ್ನ ಸ್ನೇಹ ಎಲ್ಲಿ ಹೋಯಿತು ? ನನ್ನನ್ನು ನೋಯಿಸದೆ ಸ್ವಲ್ಪ ಎದ್ದು ನೋಡಿ ಮಾತಾಡು." ಎಲೈ ರಾಜನೆ, ಹೀಗೆ ಕಪಿಂಜಲನು ದಿಕ್ಕು ದಿಕ್ಕಿಗೆ ಬಾಯಿ ಬಿಡುತ್ತಿರುವುದನ್ನು ನಾನು ಕೇಳಿ

ಅದನಾಂ ಕೇಳ್ದಿರ್ದೆಗೆಟ್ಟು ಮೆಯ್ಮಱುಗಿ ಸತ್ತಂತಾಗಿ ಕಣ್ಣೀರ ಪೂ
ರದಗುರ್ವಿಂ ದೆಸೆಗಾಣದಂದೆಡಪುತಂ ತಾಗುತ್ತಮೋರಂತೆ ಮೋ
ಲುದಱೊಳ್ ಗುಲ್ಮಲತಾಳಿಗಳ್ ತೊಡರಲೊರ್ವಂ ನೂಂಕಿಕೊಂಡೊಯ್ವ ಮಾ
ರ್ಗದೆ ಪೋದೆಂ ಬಳಿಕಾತನಿರ್ದೆಡೆಗೆ ಹಾಹಾಕ್ರಂದನಂಗೆಯ್ವುತಂ ೧೫೫

ವ॥ ಅಂತು ಯಥಾಶಕ್ತಿತ್ವರಿತಗತಿಯಿಂ ಪೋದೆನನ್ನೆಗಂ

ಕೊಳದ ತಡಿಯಲ್ಲಿ ಸೀರ್ಪನಿ
ಗಳ ತುಱುಗಲನುಗುಳ್ವ ಚಂದ್ರಕಾಂತದಶಿಲೆಯೊಳ್
ಪೊಳೆವೆಳದಳಿರ್ಗಳ ಬಳಗದ
ಕೞಿರ್ವಲರ್ದಲರೆಸಳ ಪಸೆಯ ಮೇಲೊಱಗಿರ್ದಂ ೧೫೬

ಪೊಳೆವಿಂದುಗಳ್ಕಿ ಬೆಂಗುಡೆ
ಮೊಳೆದುವು ಬೆನ್ನಿಂದಮೆರ್ದೆಗೆ ಕದಿರ್ದುಱುಗಲೆನಲ್
ತೊಳಗಿದುವು ಮದನಶಿಖಿ ವಿ
ಹ್ವಳಹೃದಯನ್ಯಸ್ತಹಸ್ತನಖದೀಧಿತಿಗಳ್ ೧೫೭

ಪದೆದಾಂ ಬರುತ್ತಮಿರೆ ಮ
ತ್ಪದಶಬ್ದಮನಾಲಿಸುತ್ತಮಿರ್ದನೊ ತನ್ನೊಳ್
ಮದನಪರಿತಾಪಮಂ ಕೋ
ಪದೆ ಮುಟ್ಟುಗೆ ಕಿಱಿದುಸುಖದೆ ಮಱೆದೊಱಗಿದನೋ ೧೫೮

ದೆನು. ೧೫೫. ಅದನ್ನು ನಾನು ಕೇಳಿ ಧೈರ್ಯಗೆಟ್ಟು ವ್ಯಸನಪಟ್ಟು ಅಲ್ಲೆ ಪ್ರಾಣ ಹೋದವಳಂತೆ ಆದೆನು. ಕಣ್ಣೀರಿನ ಪ್ರವಾಹವು ಅತ್ಯಧಿಕವಾಗಿ ಹರಿಯತೊಡಗಿದ್ದರಿಂದ ಕಣ್ಣು ಕಾಣದೆ ದಾರಿ ಗೊತ್ತಾಗುತ್ತಿರಲಿಲ್ಲ. ಹಾಗೆ ಎಡವುತ್ತ ದಾಟುತ್ತ ಒಂದೇ ಸಮನೆ ಮೇಲುದವು ಪೊದರು ಬಳ್ಳಿಗಳಿಗೆ ಸಿಕ್ಕಿಹಾಕಿಕೊಳ್ಳುತ್ತಿರಲು ಅಯ್ಯೋ ! ಅಯ್ಯೋ ! ಎಂದು ಅರಚುತ್ತಾ, ಯಾರೋ ಒಬ್ಬರು ನೂಕುತ್ತಾ ಎಳೆದುಕೊಂಡು ಹೋಗುತ್ತಿರುವ ರೀತಿಯಿಂದ ಅವನಿದ್ದ ಸ್ಥಳಕ್ಕೆ ಹೋದೆನು. ವ॥ ಹಾಗೆ ನನ್ನ ಶಕ್ತಿ ಮೀರಿದ ವೇಗದಿಂದ ಅಲ್ಲಿಗೆ ಹೋಗುವಷ್ಟರಲ್ಲಿ, ೧೫೬. ಕೊಳದ ದಡದಲ್ಲಿ ನೀರಿನ ತುಂತುರುಗಳನ್ನು ಸ್ರವಿಸುತ್ತಿರುವ ಚಂದ್ರಕಾಂತಶಿಲೆಯಲ್ಲಿ ಶೋಭಿಸುತ್ತಿರುವ ಚಿಗುರುಗಳ ಗುಂಪಿನಿಂದ ಕೂಡಿದ ತಂಪಾದ ಅರಳಿದ ಹೂವಿನ ದಳಗಳ ಹಾಸಿಗೆಯ ಮೇಲೆ ನನ್ನ ಇನಿಯನು ಮಲಗಿದ್ದನು. ೧೫೭. ಅವನು ಕಾಮಾಗ್ನಿಯಿಂದ ಬೆಂದ ಎದೆಯ ಮೇಲೆ ತನ್ನ ಕೈಯನ್ನು ಇರಿಸಿಕೊಂಡಿದ್ದನು. ಅದರ ಉಗುರುಗಳ ಕಾಂತಿಗಳು ಪ್ರಕಾಶಿಸುತ್ತಿರುವ ಚಂದ್ರನಿಗೆ ಹೆದರಿ ಬೆನ್ನು ತಿರುಗಿಸಲಾಗಿ, ಬೆನ್ನಿಂದ ತೂರಿ ಎದೆಗೆ ನಾಟಿ ಹೊರಕ್ಕೆ ಬಂದಿರುವ ಚಂದ್ರಕಿರಣಗಳ ಗುಂಪೋ ಎಂಬಂತೆ ಕಾಣುತ್ತಿದ್ದುವು. ೧೫೮. ನಾನು ಪ್ರೀತಿಸಿ ಬರುತ್ತಿರಲಾಗಿ ನನ್ನ ಕಾಲಿನ ಸಪ್ಪಳವನ್ನು ಕೇಳುತ್ತಿರುವನೋ ಎಂಬಂತೆಯೂ, ಮನ್ಮಥನ ಮೇಲೆ ಉಂಟಾದ ಕೋಪದಿಂದ ಸಂತಾಪವು ಸ್ವಲ್ಪ ಕಡಮೆಯಾಗಲಾಗಿ ತಾತ್ಕಾಲಿಕವಾಗಿ

ಎನ್ನಿಂ ಪ್ರಿಯತರಮುಪರಜ
ನಂ ನಿನಗಾದತ್ತು ಮತ್ತಮಿರ್ಪೆನೆ ಪೇಟಾ
ನಿನ್ನೆಂದು ಮುನಿದ ತೆಱದಿಂ
ಮುನ್ನಮೆ ಪೋದತ್ತು ಪುಂಡರೀಕನ ಜೀವಂ ೧೫೯

ತನಗೆ ಮದನವ್ಯಥಾಯಾ
ಸನಬಂಧನವಸುಗಳೆಂದಿವಂ ತನ್ನಿಂ ತಾಂ
ತನುವಿಂದೆ ಬಿಟ್ಟು ನಿಶ್ಚೇ
ತನಸೌಖ್ಯಮನನುಭವಿಪ್ಪ ತೆಱದಿಂದಿರ್ದಂ ೧೬೦

ವ॥ ಅದಲ್ಲದೆಯುಃ

ಕಾಣುತ್ತೆ ಮದಾಗಮನ
ಪ್ರೀಣತ್ಪ್ರಾಣಮನೆ ಮಚ್ಚುಗೊಟ್ಟಪೊಲಿರ್ದಂ
ಜಾಣಂ ಪ್ರಾಣಪ್ರಿಯಗ
ಪ್ರಾಣಮನೊಲಿದೀವುದೆಂಬುದೊಂದಚ್ಚರಿಯೇ ೧೬೧

ವ॥ ಮತ್ತಮನಂಗರಚಿತ ಚಂದನಲಲಾಟಿಕಾತ್ರಿಪುಂಡ್ರನುಂ ಸರಸಬಿಸಸೂತ್ರಯಜ್ಞೋಪವೀತನುಂ ಅಂಸಾವಸಕ್ತಬಾಲಕದಳೀದಳೋತ್ತರೀಯನುಂ ಏಕಾವಳೀವಿಶಾಲಾಕ್ಷ

ಉಂಟಾದ ಪರವಶತೆಯಿಂದ ಸುಖವಾಗಿ ಮಲಗಿದ್ದಾನೋ ಎಂಬಂತೆಯೂ ಇದ್ದನು. ೧೫೯. "ನೀನು ಬೇರೊಬ್ಬರನ್ನು ನನಗಿಂತಲೂ ಹೆಚ್ಚಾಗಿ ಪ್ರೀತಿಸಿರುವೆ. ಆದ್ದರಿಂದ ನಾನಿನ್ನು ಇಲ್ಲಿ ಇರುತ್ತೇನೆಯೇ ಹೇಳು" ಎಂದು ಕೋಪ ಮಾಡಿಕೊಂಡು ಹೊರಟು ಹೋದಂತೆ ಪುಂಡರೀಕನ ಪ್ರಾಣವು ಶರೀರವನ್ನು ಬಿಟ್ಟು ಹೊರಟುಹೋಗಿತ್ತು. ೧೬೦. ಈ ಪ್ರಾಣಗಳು ಇದ್ದರೆ ನನಗೆ ಕಾಮಬಾಧೆಯಿಂದ ಆಯಾಸವನ್ನುಉಂಟುಮಾಡುತ್ತವೆ. ಆದ್ದರಿಂದ ಈ ಬಂಧನವಿರಬಾರದು ಎಂದು ಭಾವಿಸಿ ಅವುಗಳನ್ನು ದೇಹದಿಂದ ಹೊರ ದೂಡಿ ತಾನು ನಿಶ್ಚಲ ಸಮಾಧಿಸೌಖ್ಯವನ್ನು ಅನುಭವಿಸುತ್ತಿರುವನೋ ಎಂಬಂತೆ ಕಾಣು ತ್ತಿದ್ದನು. ವ॥ ಅದಲ್ಲದೆ ೧೬೧. ನನ್ನನ್ನು ನೋಡುತ್ತಲೆ, ನಾನು ಬಂದದ್ದರಿಂದ ತನಗೆ ಬಹಳ ಪ್ರೀತಿಪಾತ್ರವಾದ ಪ್ರಾಣವನ್ನೇ ನನಗೆ ಒಲುಮೆಯ ಕೊಡುಗೆಯಾಗಿ ಕೊಟ್ಟವ ನಂತಿದ್ದನು. ಜಾಣನಾದವನು ತನ್ನ ಪ್ರಾಣಪ್ರಿಯರಿಗೆ ಪ್ರಾಣವನ್ನೆ ಪ್ರೀತಿದಾನವಾಗಿ ಕೊಡುವುದು ಆಶ್ಚರ್ಯವೇನೂ ಅಲ್ಲ. ವ॥ ಮತ್ತು ಕಾಮಜ್ವರೋಪಶಮನಕ್ಕಾಗಿ ಹಣೆ ಯಲ್ಲಿ ಹಾಕಿಕೊಂಡಿರುವ ಶ್ರೀಗಂಧಲೇಪವೆಂಬ ವಿಭೂತಿಯ ಮೂರುಗೆರೆಯುಳ್ಳವನೂ, ಒದ್ದೆಯಾದ ತಾವರೆದಂಟಿನದಾರವೆಂಬ ಜನಿವಾರವುಳ್ಳವನೂ, ಹೆಗಲಮೇಲೆ ಹಾಕಿ ಕೊಂಡಿರುವ ಎಳೆಯ ಬಾಳೆಯೆಲೆಯೆಂಬ ಹೊದೆಯುವ ಪಂಚೆಯುಳ್ಳವನೂ, ನಾನು

ಮಾಲನುಂ ಅವಿರಳಕರ್ಪೂರಪರಾಗಭಸ್ಮಪಾಂಡುರನುಂ ಆಬದ್ಧ ಮೃಣಾಳರಕ್ಷಾಪ್ರತಿಸರನುಮಾಗಿ ಮನೋಭವವ್ರತವೇಷಮುಂ ಕೈಗೊಂಡು ಮತ್ಸಮಾಗಮಮಂತ್ರಮುಂ ಸಾಧಿಪಂತಿರ್ದನಂತುಮಲ್ಲದೆಯುಂ

ಸುರಿದುವು ಬಾಷ್ಪಮಯ್ದೆ ಪೆಱಗಿಂ ಸುರಿದಪ್ಪುದು ನೆತ್ತರೆಂಬಿನಂ
ಪರೆದಿರೆ ಕೆಂಪು ಕಂತುಶರಭೇದದ ವೇದನೆಗಳ್ಕಿದಂತೆ ಕ
ಣ್ಣರೆ ಮುಗುಳಿರ್ದುವಾಂ ಬೞಿಸಲಲ್ ನಡೆನೋಡಲಿಕಾರ್ತೆನಿಲ್ಲ ನಿ
ಷ್ಠುರೆ ತೊಲಗೆಂದಲಂಪನೊಳಕೊಂಡೞಲಿಂ ಮುಳಿದೀಕ್ಷಿಪಂದದಿಂ ೧೬೨

ನಸುದೆಱೆದಿರೆ ಬಾಯ್ದೆಱೆ ಬಂ
ದಸುವಂ ಕೊಳಲೆಂದು ಪೊಕ್ಕ ರಜನಿಕರಾಂಶು
ಪ್ರಸರಂ ಪೊಱಮಟ್ಟಪುದೆನೆ
ದೆಸೆಯುಂ ಧವಳಿಸಿದುವೆಸೆವ ದಂತದ್ಯುತಿಗಳ್ ೧೬೩

ಬಳಸಿ ನಿಜಕಿರಣಪಾಶದೆ
ಮುಱುಗಿಸಿ ಲೋಕಾಂತರಕ್ಕೆ ಚಂದ್ರಂ ಪಿಡಿದೇ
ನೆೞೆದಪನೊ ಪೇೞಿಮೆನೆ ಕ
ಣ್ಗೊಳಿಸಿದುದು ಮೃಣಾಳನಾಳವಲಯಂ ಕೊರಲೊಳ್ ೧೬೪

ಕೊಟ್ಟಿದ್ದ ಮುತ್ತಿನಸರವೆಂಬ ನೀಳವಾದ ಜಪಸರವುಳ್ಳವನೂ, ದಟ್ಟವಾದ ಕರ್ಪೂರ ಧೂಳಿಯೆಂಬ ಭಸ್ಮದಿಂದ ಬಿಳುಪಾದ ದೇಹವುಳ್ಳವನೂ, ತಂಪುಮಾಡಿಕೊಳ್ಳುವುದಕ್ಕಾಗಿ ಕೈಗೆ ಕಟ್ಟಿಕೊಂಡಿರುವ ತಾವರೆದಂಟೆಂಬ ರಕ್ಷಾಕಂಕಣವುಳ್ಳವನೂ ಆಗಿ ಕಾಮವ್ರತವನ್ನು ತಾಳಿರುವವನ ವೇಷವನ್ನು ಕೈಗೊಂಡು ನನ್ನ ಸಮಾಗಮವನ್ನು ಪಡೆಯುವುದಕ್ಕಾಗಿ ಮಂತ್ರವನ್ನು ಸಾಧಿಸುವವನಂತೆ ಇದ್ದನು. ಅಲ್ಲದೆ, ೧೬೨. ಒಂದೇಸಮನೆ ಕಣ್ಣೀರು ಸುರಿದ ಮೇಲೆ ಅದರ ಹಿಂದೆ ಇನ್ನೂ ರಕ್ತವು ಸುರಿಯುತ್ತಿದೆಯೋ ಎಂಬಂತೆ ಕಣ್ಣಿನಲ್ಲಿ ಕೆಂಪು ಆವರಿಸಿತ್ತು, ಮನ್ಮಥನ ಬಾಣದ ಏಟಿನ ನೋವಿಗೆ ಹೆದರಿದಂತೆ ಕಣ್ಣು ಅರ್ಧ ಮುಚ್ಚಿದ್ದುವು. ಇದರಿಂದ ನಾನು ಹತ್ತಿರಕ್ಕೆ ಹೋಗಲು 'ಎಲೌ ಕ್ರೂರಳೆ, (ನಾನು ನಿನಗಾಗಿ ಸಂಕಟಪಡುತ್ತಿದ್ದರೂ) ಒಂದು ಸಲ ಬಂದು ನೋಡಿಕೊಂಡು ಹೋಗುವುದಕ್ಕೂ ನಿನಗೆ ಆಗಲಿಲ್ಲ. ಈಗ ಬರಬೇಡ ಹೋಗು !' ಎಂದು ಪ್ರಣಯಪೂರ್ವಕವಾದ ದುಃಖದಿಂದ ಕೋಪಿಸಿಕೊಂಡು ನನ್ನನ್ನು ನೋಡುತ್ತಿರುವಂತೆ ಕಾಣುತ್ತಿದ್ದನು. ೧೬೩. ಅವನ ತುಟಿಗಳು ಸ್ವಲ್ಪತೆರೆದಿರಲಾಗಿ ಅವನ ಪ್ರಾಣವನ್ನು ತೆಗೆದುಕೊಂಡು ಹೋಗಬೇಕೆಂದು ಬಾಯಿ ಒಳಹೊಕ್ಕ ಚಂದ್ರಕಿರಣಜಾಲವು ಹೊರಕ್ಕೆ ಬರುತ್ತಿದೆಯೋ ಎಂಬಂತೆ ಶೋಭಿಸುವ ಹಲ್ಲಿನ ಕಾಂತಿಗಳು ದಿಕ್ಕುಗಳನ್ನು ಬೆಳ್ಳಗೆ ಮಾಡುತ್ತಿದ್ದುವು. ೧೬೪. ಅವನ ಕೊರಳಿನಲ್ಲಿದ್ದ ವಲಯಾಕಾರವಾದ ತಾವರೆದಂಟನ್ನು ನೋಡಿದರೆ ಚಂದ್ರನು ತನ್ನ ಕಿರಣವೆಂಬ ಹಗ್ಗದಿಂದ ಕತ್ತಿಗೆ ಉರುಲುಹಾಕಿ ಪರಲೋಕಕ್ಕೆ ಹಿಡಿದು ಎಳೆದು

ಪ್ರಾಣಸಮೆ ಹೃದಯದಿಂ ಮ
ತ್ಪ್ರಾಣದೊಳ್ಕೂಡಗೂಡಿ ಪೋಗಲಾಗೆಂದೆನ್ನಂ
ಮಾಣಿಪವೋಲ್ ಕಯ್ ಸುಮನೋ
ಬಾಣಾಗ್ನಿಸ್ಫುರಿತಹೃದಯದೊಳ್ ಸೊಗಯಿಸುಗುಂ ೧೬೫

ಒಸರ್ದಪುದಿದಲ್ತೆ ಚಂದನ
ರಸಮೆನೆ ಮಿಂಚುಗುರ ಮಿಸುಪ ನುಣ್ಬೆಳಗೆನಸುಂ
ಪಸರಿಸೆ ಮರಲ್ದ ಕರಮೊಂ
ದೆಸೆದುದು ಚಂದ್ರಾತಪಕ್ಕೆ ಮುಱಿಯೊಡ್ಡಿದವೋಲ್ ೧೬೬

ಅಸು ಪೋದುದೀಗಳೆಂತೆ
ನ್ನ ಸಹಾಯನನುೞಿದೆನುತ್ತೆ ತನ್ಮಾರ್ಗಮನೀ
ಕ್ಷಿಸುವಂತೆ ನಿಮಿರ್ದ ಕೊರಲಿಂ
ದೆಸೆದುದು ಶಶಿಕಾಂತಮಣಿಕಮಂಡಲು ಕೆಲದೊಳ್ ೧೬೭

ಘಟಿಲನೆ ಬರ್ಪೆನ್ನಂ ಕಂ
ಡಟಲಿರ್ಮಡಿಯಾಗೆ ಪತ್ತಿ ಕೆಳೆಯನ ಕೊರಲಂ
ಪಟವಿಸಿ ಕಪಿಂಜಳಂ ಬಾ
ಯಟಿದಬ್ರಹ್ಮಣ್ಯಮೆಂದು ಬಿಡೆ ಪುಯ್ಯಲ್ಚಲ್ ೧೬೮

ಕೊಂಡು ಹೋಗುತ್ತಿರುವನೋ ಎಂಬಂತೆ ಕಾಣುತ್ತಿತ್ತು. ೧೬೫. ಮನ್ಮಥನ ಬಾಣಾಗ್ನಿಯು ವ್ಯಾಪಿಸಿಕೊಂಡಿರುವ ಎದೆಯ ಮೇಲೆ ಅವನು ತನ್ನ ಕೈಯನ್ನು ಇಟ್ಟುಕೊಂಡಿದ್ದನು. ಅದು 'ಪ್ರಾಣಕ್ಕೆ ಸಮಾನಳಾದ ಪ್ರಿಯೆ, ನನ್ನ ಹೃದಯದಲ್ಲಿ ನೆಲೆಸಿರುವ ನೀನು ಈ ಪ್ರಾಣದ ಜೊತೆಯಲ್ಲಿ ಹೋಗಿಬಿಡಬೇಡ. ಇಲ್ಲೇ ಇರು!' ಎಂದು ನನ್ನನ್ನು ತಡೆಯುವಂತೆ ಸೊಗಸಾಗಿ ಕಾಣುತ್ತಿತ್ತು. ೧೬೬. ಅವನು ಮತ್ತೊಂದು ಕೈಯನ್ನು ಮಗುಚಿಟ್ಟುಕೊಂಡಿದ್ದನು. ಗಂಧದರಸವು ಜಿನುಗುತ್ತಿದೆಯೊ ಎಂಬಂತೆ ಮಿಂಚುತ್ತಿರುವ ಅದರ ಉಗುರುಗಳ ಹೊಳೆಯುವ ನುಣುಪಾದ ಕಾಂತಿಯು ಸುತ್ತಲೂ ಹರಡಿತ್ತು. ಅದು ಬೆಳದಿಂಗಳಿಗೆ ಮರೆಯೊಡ್ಡಿದಂತೆ ಶೋಭಿಸುತ್ತಿತ್ತು. ೧೬೭. ಅವನ ಪಕ್ಕದಲ್ಲಿ ನೀಳವಾದ ಕಂಠವುಳ್ಳ ಚಂದ್ರಕಾಂತಶಿಲೆಯ ಕಮಂಡಲು ಇದ್ದಿತು. ಅದು ನನ್ನ ಜೊತೆಗಾರನಾಗಿದ್ದ ಇವನನ್ನು ಬಿಟ್ಟು ಪ್ರಾಣವು ಈಗ ಹೇಗೆ ಹೋಗುತ್ತದೆ? ಎಂಬುದಾಗಿ ಅದು ಹೋಗುವ ದಾರಿಯನ್ನು ಕತ್ತೆತ್ತಿ ನೋಡುತ್ತಿರುವಂತೆ ಕಾಣುತ್ತಿತ್ತು. ೧೬೮. ತಟ್ಟನೆ ಬಂದ ನನ್ನನ್ನು ನೋಡಿ ದುಃಖವು ಇಮ್ಮಡಿಯಾಗಲು, ಗೆಳೆಯನ ಕೊರಳನ್ನು ತಬ್ಬಿಕೊಂಡು ಪ್ರಲಾಪಿಸುತ್ತಾ ಕಪಿಂಜಲನು ಅಯ್ಯೋ! ಅನ್ಯಾಯ! ಎಂದು ಬಹಳವಾಗಿ ಗೋಳಾಡಲು, (ಅಬ್ರಹ್ಮಣ್ಯಂ = ಈ ಶಬ್ದವನ್ನು ಬ್ರಾಹ್ಮಣರು ವಿಪತ್ಕಾಲದಲ್ಲಿ

ವ॥ ಆಗಳ್ ತತ್ ಕ್ಷಣ ವಿಗತಜೀವಿತನಾಗಿರ್ದ ನಿಷ್ಪಾಪನೆನಿಪ ಮಹಾನುಭಾವನಂ ಮಹಾಪಾತಕಿಯೆನಿಪ ಮಂದಭಾಗ್ಯೆಯೆಂ ಭೋಂಕನೆ ಕಂಡು ಮೂರ್ಛೆವೋಗಿ ಬಿಟ್ಟು ಪಾತಾಳ ತಲವಿವರಮಂ ಪೊಕ್ಕಂತೆ ಮಹಾಂಧಕಾರಂ ಕವಿಯೆ

ಏನಾದೆನೆಲ್ಲಿ ಬೀೞ್ದೆನ
ದೇನಂ ಬಾಯುೞಿದು ಪಱವಿಸುತ್ತಿರ್ದೆನೊ ಪೇ
ೞೇನನೊಡರ್ಚಿದೆನೆತ್ತಣಿ
ನಾನಾರ್ಗಂದೇನುಮಱಿಯೆನಂತಾಕ್ಷಣದೊಳ್ ೧೬೯

ಪಲವು ಭವಂಗಳೊಳ್ ನೆರಪಿದೆನ್ನಯ ಪಾಪಮೊ ಮೇರೆಗೆಟ್ಟ ಕೋ
ಟಲೆಗಳನುಣ್ಬೆನೆಂಬಟಲ ಸೈರಣೆಯೋ ಕಡುಪಿಂ ತಗುಳ್ದು ನ
ಟ್ಟಲೆವಸಮಾಸ್ತ್ರವಕ್ರತೆಯೊ ದೈವಿಕವೋ ನಿನಗೇನನೆಂಬೆನ
ಗ್ಗಲಿಸಿಯೆ ನಿಂದುದೆಂತುಮಸು ಪೋಗದೆ ಕಲ್ಲೆರ್ದೆಯೆಂ ಮಹೀಪತೀ ೧೭೦

ಇನಿಸಂ ಮೂರ್ಛೆಯಿನೆೞ್ಚ
ತ್ತನಂತರಂ ದೀರ್ಘಶೋಕವುಂ ಬಿಡೆಸುಡೆ ಕಿ
ಚ್ಚಿನ ಕಿಡಿಯುಂದದೆ ನೆಲದೊಳ
ಗಿನಿಸುಂ ಮಿಡುಮಿಡನೆ ಮಿಡುಕುವೆನ್ನಂ ಕಂಡೆಂ ೧೭೧

ಬಳಸುತ್ತಾರೆ. ಇವನು ಕೊಲ್ಲಲ್ಪಡತಕ್ಕವನಲ್ಲ ಎಂದು ಅರ್ಥ). ವ॥ ಆಗ ಆಗತಾನೆ ಪ್ರಾಣ ಹೋಗಿದ್ದ, ಪಾಪರಹಿತನಾದ ಆ ಮಹಾನುಭಾವನನ್ನು ಮಹಾಘಾತಕಿಯಾದ ದುರದೃಷ್ಟವಂತಳಾದ ನಾನು ತಟ್ಟನೆ ಕಂಡು ಮೂರ್ಛಿತಳಾಗಿ ಬಿದ್ದುಬಿಟ್ಟೆನು. ಆಗ ನನಗೆ ಪಾತಾಳದ ಗುಹೆಯನ್ನು ಹೊಕ್ಕಂತೆ ಕಗ್ಗತ್ತಲೆ ಕವಿಯಿತು. ೧೬೯. ನಾನು ಏನಾದೆ ? ಎಲ್ಲಿ ಬಿದ್ದೆ ? ಬಾಯಿ ಸೋಲುವಂತೆ ಏನೇನು ಪ್ರಲಾಪಿಸಿದೆ ? ಏನೇನು ಮಾಡಿದೆ ? ನಾನು ಎಲ್ಲಿಂದ ಬಂದೆ ? ಯಾರ ಮಗಳು ? ಎಂಬುದಾವುದರ ಅರಿವೂ ನನಗೆ ಉಳಿಯಲಿಲ್ಲ. ೧೭೦. ಹಿಂದಿನ ಅನೇಕ ಜನ್ಮಗಳಲ್ಲಿ ಮಾಡಿದ ಪಾಪದಿಂದಲೋ, ಈ ನನ್ನ ಶರೀರಕ್ಕೆ ಎಲ್ಲೆಮೀರಿದ ಕಷ್ಟಗಳನ್ನು ಅನುಭವಿಸುವಷ್ಟು ಸಹನೆಯಿದ್ದುದರಿಂದಲೋ, ಜನರಿಗೆ ಗಂಟುಬಿದ್ದು ಒಂದೇಸಮನೆ ವಿಪರೀತವಾಗಿ ಕ್ರೂರತನದಿಂದ ಹಿಂಸಿಸುವ ಮನ್ಮಥನ ವಕ್ರಸ್ವಭಾವದಿಂದಲೋ, ನನ್ನ ದುರ್ದೈವದಿಂದಲೋ, ನಾನು ಏನು ಹೇಳಲಿ! ಎಲೈ ರಾಜನೆ, ಆಗ ನನ್ನ ಪ್ರಾಣವು ಹೋಗದೆ ಶರೀರದಲ್ಲೆ ಸ್ಥಿರವಾಗಿ ನಿಂತುಬಿಟ್ಟಿತು, ನಾನೊಬ್ಬಳು ಕಲ್ಲೆದೆಯವಳು. ೧೭೧. ಬಹಳ ಹೊತ್ತು ಮೂರ್ಛೆಗೊಂಡಿದ್ದು ಎಚ್ಚೆತ್ತು, ಬಳಿಕ ಈ ದೀರ್ಘಶೋಕವು ವಿಶೇಷವಾಗಿ ದಹಿಸುತ್ತಿರಲು ಬೆಂಕಿಯಕೆಂಡದಂತಿರುವ ನೆಲದಲ್ಲಿ ಬಿದ್ದು ಬಹಳವಾಗಿ ಮಿಲಮಿಲನೆ ಒದ್ದಾಡು

ವ॥ ಅಂತೆನ್ನ ಸಾವಿಲ್ಲದುದುಮಾತನ ಸಾವುಮದವಟಲನೊದವಿಸೆ ಬಾಯಟಿದು ಮೆಯ್ಯಱಿಯದವಳಿಂ

ಪರಿಹರಿಸಿ ಪೋಗಲಕ್ಕುಮೆ
ಕರುಣಿಸದೊರ್ವಳನನಾಥೆಯುಂ ಭಕ್ತೆಯುನಾ
ತುರೆಯುಂ ದುಃಖಿತೆಯುಂ ಸ್ಮರ
ಪರಿಭೂತೆಯುನನನ್ಯಗತಿಕೆಯುಂ ಬಾಲಕಿಯುಂ ೧೭೨

ತರಳಿಕೆ ಸಕ್ಕಿಯಲ್ತೆ ಬೆಸಗೊಳ್ ಯುಗಕೋಟಿವೊಲಾದುದಾಗಳಾ
ವಿರಹದೆ ಬೆಂದಿವಳ್ಗೆ ಪಗಲೆಂಬುದನೀ ಮುಳಿಸೇಕೆ ನಿನ್ನ ತೊ
ೞ್ತಿರೊಳಿನಿತೇಕೆ ಭಕ್ತಜನವತ್ಸಲ ನಿರ್ದಯನಾದೆ ನಾಥ ನೀಂ
ಕರುಣದಿನೊರ್ಮೆ ಕಣ್ದೆಱೆದು ತೀರ್ಚು ಮದೀಯ ಮನೋರಥಂಗಳಂ ೧೭೩

ಕರುಣಿಸು ದೈವಮೆ ಪಾಲಿಸು
ಹರಾದ್ರಿ ರಕ್ಷಿಸೆಲೆ ರಾತ್ರಿ ಶರಣಾಗು ಸರೋ
ವರಮೆ ವನದೇವಿಯರಿರಾ
ನೆರೆದೆಲ್ಲರುಮೆನಗೆ ಪುರುಷಭಿಕ್ಷಮನಿಕ್ಕಿಂ ೧೭೪

ತ್ತಿರುವ ನನ್ನನ್ನು ನಾನೇ ನೋಡಿದೆನು. ವ॥ ಹಾಗೆ ನಾನು ಸಾಯದಿರುವುದೂ ಅವನು ಸತ್ತುಹೋಗಿರುವುದೂ ದುಃಖವನ್ನುಂಟುಮಾಡಲು ರೋದಿಸುತ್ತಾ ಶರೀರದಮೇಲೆ ಪ್ರಜ್ಞೆಯಿಲ್ಲದವಳಾಗಿ, ೧೭೨. "ಅಯ್ಯೋ! ನನ್ನಮೇಲೆ ದಯೆಯಿಡದೆ ಅನಾಥಳೂ, ನಿನ್ನಲ್ಲಿ ನೆಟ್ಟಮನಸ್ಸುಳ್ಳವಳೂ, ನಿನ್ನನ್ನೇ ಹಂಬಲಿಸಿ ತವಕಪಡುತ್ತಿರುವವಳೂ, ದುಃಖಾಕ್ರಾಂತಳೂ, ಮನ್ಮಥನಿಂದ ಪೀಡಿಸಲ್ಪಟ್ಟವಳೂ, ಬೇರೆ ಯಾವ ದಿಕ್ಕೂ ಇಲ್ಲದವಳೂ, ಬಾಲಕಿಯೂ ಆದ ನನ್ನನ್ನು ಒಬ್ಬಂಟಿಗಳನ್ನಾಗಿಮಾಡಿ ಬಿಟ್ಟುಹೋಗಬಹುದೆ? ೧೭೩. ನಾಥ! ಈ ತರಳಿಕೆಯೇ ಸಾಕ್ಷಿಯಾಗಿದ್ದಾಳೆ. ಅವಳನ್ನು ಕೇಳು. ನಿನ್ನ ವಿರಹದಿಂದ ಬೆಂದುಹೋದ ನನಗೆ ಕಳೆದ ಇಂದಿನ ಹಗಲು ಕೋಟಿ ಯುಗಗಳಂತೆ ಆಗಿಬಿಟ್ಟಿತು. ನಿನ್ನ ಚರಣದಾಸಿಯಾದ ನನ್ನವೇಲೆ ಇಷ್ಟೊಂದು ಕೋಪವೇಕೆ ? ಭಕ್ತಜನವತ್ಸಲನೆ, ನಿರ್ದಯನಾಗಿಬಿಟ್ಟೆಯಲ್ಲ! ನೀನು ಕರುಣವಿಟ್ಟು ಒಂದುಸಲ ಕಣ್ಣುಬಿಟ್ಟು ನನ್ನ ಇಷ್ಟಾರ್ಥವನ್ನು ನೆರವೇರಿಸು. ೧೭೪. ವಿಧಿಯೇ, ನನ್ನ ಮೇಲೆ ದಯಂವಿಡು. ಕೈಲಾಸಪರ್ವತವೆ, ನನ್ನನ್ನು ಕಾಪಾಡು. ಎಲೈ ರಾತ್ರಿಯೆ, ನನಗೆ ರಕ್ಷಕಳಾಗು. ಎಲೈ ಅಚ್ಛೋದ ಸರೋವರವೇ, ಎಲೈ ವನದೇವತೆಯರಿರಾ, ನೀವೆಲ್ಲರೂ ಕೂಡಿ ನನ್ನ ಗಂಡ

ಆವ ತೆಱದಿಂದಮಾರುಂ
ಕಾವರುಮಂ ಕಂಡೆನಿಲ್ಲ ನಾಂ ಬರ್ಪಿನಮೆ
ಕ್ಕಾವಳಿ ನೀನುಂ ವಲ್ಲಭ
ಜೀವಮನೇನಿನಿಸು ಪಿಡಿಯಲಾರ್ತೆಯುಮಿಲ್ಲಂ ೧೭೫

ವ॥ ಎಂದು ಮಾಣದೆ ಮತ್ತಮೀತನನೆತ್ತವೇೞ್ಕುಮೆಂದು ಕಪಿಂಜಲಮಹಾಮುನಿಯಡಿಯೊಳಡಿಗಡಿಗೆ ಪೊರಳ್ದು ಮದವಱಲೊದವೆ ತರಳಿಕೆಯನಪ್ಪಿ ಪಲತೆಱದೆ ಪಱವಿಸಿ ಪಲುಂಬಿ ಪಂಬಲಿಸಿಯುಂ ಆ ಮನೋಹರನ ಮಯ್ದೈಸಿ ನಿಂದ ಚಂದನದಣ್ಪಿನಿಂ ಪಗಿಲ್ತುಪತ್ತಿ ಬೆಳ್ಕರಿಸಿ ರಂಜಿಸುವ ಕೆಂಜೆಡೆಯ ಮೊದಲಿಂ ಬೆಡಂಗುವಡೆದು ಮಿಱುಪ ಪೆಱನೊಸಲೊಳಂ ಕವಿವ ಜಡೆಯ ತೊಂಗಲಿಂ ಸಂಗಳಿಸಿ ಬೆಡಂಗನೊಳಗೊಂಡ ಗಂಡಮಂಡಲಂಗಳೊಳಂ ಕೋಮಲ ಮೃಣಾಳೋತ್ತಂಸಿತಂಗಳಪ್ಪಂಸದೇಶಂಗಳೊಳಂ ಮಲಯಜರಸಲುಳಿತ ನಳಿನೀದಳಾವಕುಂಠಿತಮಾದ ಮೆಲ್ಲೆರ್ದೆಯೊಳಮೋರೊರ್ಮೆ ಕಳವಳಿಸಿ ಕರತಳದಿನೆಳವಿಯುಂ ಪುಂಡರೀಕನ ಪಕ್ಕದಿಂ ತೆರಳದೆಯುಂ ನಿಷ್ಕರುಣೆಯಾದೆಯೆಂದೋರೋರ್ಮೆ ಸಂಭ್ರಮದಿನುಪಾಲಂಭನಂ ಮಾಡಿಯುಂ ಕೊರಲಂ ತಟಿಕ್ಕೈಸಿಯುಂ ಬಿಡದಳವಿಲ್ಲದೆಡೆಯುಡುಗದೞ್ತುಮೆಂದುಮನುಪದಿಷ್ಟಂಗಳುಮದೃಷ್ಟಪೂರ್ವಂಗಳುಮತಿಕೃಪಣಂಗಳುಮಪ್ಪ ಚಾಟುಸಹಸ್ರಂಗಳೊದವೆ ಕಣ್ಣೀರಪೂರದಿಂ

ನನ್ನ ನನಗೆ ದಾನಮಾಡಿ (ಇನಿಯನನ್ನು ಬದುಕಿಸಿಕೊಡಿ). ೧೭೫. ನಾನು ಬರುವವರೆಗೆ ಯಾವ ರೀತಿಯಿಂದಲೂ ಯಾರೂ ಅವನನ್ನು ಬದುಕಿಸಲಿಲ್ಲ. ಏಕಾವಳಿಯೇ, ನೀನಾದರೂ ನಾನು ಬರುವವರೆಗೆ ಇನಿಯನ ಪ್ರಾಣವನ್ನು ಸ್ವಲ್ಪಕಾಲ ಹಿಡಿದು ನಿಲ್ಲಿಸಲಾರದೆ ಹೋದೆಯಲ್ಲ!" ವ॥ ಎಂದು ಬಿಡದೆ ಮತ್ತೂ ಇವನನ್ನು ಬದುಕಿಸಿ ಎಂದು ಕಪಿಂಜಲಮಹರ್ಷಿಗಳ ಕಾಲುಗಳ ಮೇಲೆ ಮತ್ತೆಮತ್ತೆ ಹೊರಳಾಡುತ್ತಲೂ, ದುಃಖವುಂಟಾಗಲು ತರಳಿಕೆಯನ್ನು ತಬ್ಬಿಕೊಂಡು ಹಲವು ಬಗೆಯಾಗಿ ಅತ್ತು ಹಲುಬಿ ಹಂಬಲಿಸಿ, ದಟ್ಟವಾಗಿ ಬೆಳೆದಿರುವ ಹಾಗೂ ಗಂಧದ ಲೇಪನದಿಂದ ಗಾಢವಾಗಿ ಅಂಟಿಕೊಂಡು ಶುಭ್ರವಾಗಿ ಶೋಭಿಸುವ ಕೆಂಜೆಡೆಯ ಬುಡದಿಂದ ಬೆಡಗನ್ನು ಹೊಂದಿ ಶೋಭಿಸುವ ಚಂದ್ರನಂದದ ಹಣೆಯಮೇಲೂ, ಆವರಿಸಿಕೊಂಡಿರುವ ಜಡೆಗಳ ಗುಂಪಿನಿಂದ ಕೂಡಿಕೊಂಡು ಸೊಗಸಾಗಿರುವ ಕೆನ್ನೆಗಳಮೇಲೂ, ಶೈತ್ಯೋಪಚಾರಕ್ಕಾಗಿ ಇಟ್ಟಿರುವ ಮೃದುವಾದ ತಾವರೆಯ ದಂಟಿನಿಂದ ಕೂಡಿಕೊಂಡಿರುವ ತೋಳುಗಳ ಮೇಲೂ, ಗಂಧದ ದ್ರವದಿಂದ ಮಿಶ್ರಿತವಾದ ಮತ್ತು ತಾವರೆಯ ಎಲೆಗಳನ್ನು ಹೊದಿಸಿರುವ ಮೃದುವಾದ ಎದೆಯ ಮೇಲೂ, ಒಮ್ಮೊಮ್ಮೆ ಕಳವಳದಿಂದ ಕೈಯೊಡಿಸುತ್ತಾ ಆ ಪುಂಡರೀಕನ ಪಕ್ಕದಿಂದ ಸರಿಯದೆಯೂ, ಒಮ್ಮೊಮ್ಮೆ ಕನಿಕರವೇ ಇಲ್ಲದವನಾಗಿಬಿಟ್ಟೆಯಲ್ಲಾ! ಎಂದು ಸಂಭ್ರಮದಿಂದ ತೆಗಳುತ್ತಾ ಕೊರಳನ್ನು ತಬ್ಬಿಕೊಳ್ಳುತ್ತಲೂ, ಬಿಡದೆ ಶಕ್ತಿಗುಂದಿ ಅವಿಚ್ಛಿನ್ನವಾಗಿ ಅಳುತ್ತಲೂ ಯಾವಾಗಲೂ ಯಾರೂ ಹೇಳಿಕೊಡದಿರುವ, ಹಿಂದೆಂದೂ

ತೇಂಕಾದುತ್ತಮಶ್ರುಪ್ರವಾಹಜನ್ಮಭೂಮಿಯುಂ ಪ್ರಲಾಪಶಿಖರಸಹಸ್ರಸಂಭೂತೆಯುಂ ದುಸ್ಸಹ ದುಃಖಪ್ರಸೂತೆಯುಮಾದೆನೆಂದಾತ್ಮೀಯವೃತ್ತಾಂತಮನಾತಂಗೆ ನಿವೇದಿಸುತ್ತಮಿರ್ಪುದುಂ

ಪಿಂತಾದ ದುಸ್ಸಹಾವ
ಸ್ಥಾಂತರ ಸಂತತಿಯನಾಗಳನುಭವಿಸುತಮಿ
ರ್ಪಂತಿರ್ದಳ ಚೈತನ್ಯಮ
ನಂತಾಗಳೆ ಹರಿಯಿಸಿತ್ತು ಮೂರ್ಛಾವೇಗಂ ೧೭೬

ವ॥ ಅಂತು ಮೂರ್ಛೆವೋಗಿ ಬೀಟ್ಟುದುಂ

ಒದವಿದ ತಲ್ಲಣಂಬೆರಸು ಚೆಚ್ಚರದಿಂ ಪಿಡಿದೆತ್ತಿ ಶಂಕೆಯಿಂ
ಸುದತಿಯ ಪಾಂಗಿದೇನೆನುತಮಾತೆಯ ಕಣ್ಮಲರಿಂದಮುಣ್ಮಿ ಮಾ
ಣದೆ ಸುರಿಯುತ್ತಮಿರ್ಪ ಜಲಧಾರೆಗಳಿಂದಮೆ ನಾಂದದೋದು ಮೇ
ಲುದಱ ಸೆಱಂಗಿನಿಂ ನಯದೆ ಬೀಸಿದನಾ ಮನುಜೇಂದ್ರಚಂದ್ರಮಂ ೧೭೭

ವ॥ ಅಂತು ಬೀಸಿ ಮೂರ್ಛೆಯಿಂದೆಚ್ಚಱಿಸಿ

ಇನಿವಿರಿದೊಂದವಸ್ಥೆಯುಮನೆಯ್ದಿಸಿದೆಂ ಬೆಸಗೊಂಡ ಪಾಪಕ
ರ್ಮನೆನದಱಿಂದಮೀ ಕಥೆಯೆ ಮಾಣ್ಗದು ಕೇಳಲಸಹ್ಯಮೆಂಬುದೇಂ
ಮನಕತಿದುಸ್ಸಹಂಗಳೆನಿಸಿರ್ದ ಸುಹೃಜ್ಜನದುಃಖಸಂಕುಲಂ
ನೆನೆದೊಡಮಂತೆ ಕೇಳ್ದೊಡೆ ನವವ್ಯಥೆಯಂ ನೆಱೆಮಾಡದಿರ್ಕುಮೇ ೧೭೮

ಕುಂದರಿಯದ ಬಹಳ ದೈನ್ಯದಿಂದ ಕೂಡಿದ ಸಾವಿರಾರು ಪ್ರಿಯವಚನಗಳು ಬಾಯಿಂದ ಹೊರಡುತ್ತಿರಲಾಗಿ ಕಣ್ಣೀರಿನ ಪ್ರವಾಹದಲ್ಲಿ ತೇಲಾಡುತ್ತಲೂ, ಕಣ್ಣೀರಿನ ಪ್ರವಾಹಕ್ಕೆ ಜನ್ಮಭೂಮಿಯಾಗಿಯೂ ಪ್ರಲಾಪಗಳ ಸಾವಿರಾರು ಶಿಖರಗಳಿಗೆ ಉತ್ಪತ್ತಿಸ್ಥಾನಗಳಾಗಿಯೂ. ಸಹಿಸಲಸಾಧ್ಯವಾದ ದುಃಖಗಳನ್ನು ಸೃಷ್ಟಿಮಾಡುವವಳಾಗಿಯೂ ಆದೆನು". ಎಂದು ತನ್ನ ವೃತ್ತಾಂತವನ್ನು ಅವನಿಗೆ ಹೇಳುತ್ತಿರಲಾಗಿ ೧೭೬. ಹಿಂದೆ ಅನುಭವಿಸಿದ ಸಹಿಸಲಸಾಧ್ಯವಾಗಿದ್ದ ಆ ದುರವಸ್ಥೆಯ ಪರಂಪರೆಯನ್ನು ಈಗಲೂ ಅನುಭವಿಸುತ್ತಿರುವಳೋ ಎಂಬಂತೆ ಅವಳ ಚೈತನ್ಯವನ್ನು ಮಿಗಿಲಾದ ಮೂರ್ಛೆಯು ಹಾರಿಸಿಬಿಟ್ಟಿತು (ಅವಳು ಮೂರ್ಛೆಯಿಂದ ಎಚ್ಚರದಪ್ಪಿದಳು). ವ॥ ಹಾಗೆ ಮೂರ್ಛೆಹೋಗಿ ಬೀಳಲಾಗಿ ೧೭೭. ರಾಜಕುಮಾರನಾದ ಚಂದ್ರಾಪೀಡನು ಇದನ್ನು ನೋಡಿ ತಲ್ಲಣಗೊಂಡು ಬೇಗನೆ ಅವಳನ್ನು ಹಿಡಿದು ಎತ್ತಿ ಶಂಕೆಯಿಂದ ಇವಳ ಸ್ಥಿತಿ ಇದೇನು ? ಎಂದು ಚಿಂತಿಸುತ್ತಾ ಕಣ್ಣುಗಳಿಂದ ಒಂದೇ ಸಮನೆ ಉಕ್ಕಿಸುರಿಯುತ್ತಿರುವ ಜಲಧಾರೆಗಳಿಂದಲೇ ಒದ್ದೆಯಾದ ಅವಳ ಮೇಲುಹೊದಿಕೆಯ ಸೆರಗಿನಿಂದ ಮೆಲ್ಲಗೆ ಗಾಳಿಹಾಕಿದನು. ವ॥ ಹಾಗೆ ಬೀಸಿ ಮೂರ್ಛೆಯಿಂದ ಎಚ್ಚರಿಸಿ, ೧೭೮. "ಅಮ್ಮ, ಪಾಪಿಯಾದ ನಾನು ನಿಮ್ಮನ್ನು ಪ್ರಶ್ನೆಮಾಡಿ ನಿಮಗೆ ಇಷ್ಟು ದೊಡ್ಡದಾದ ದುಃಖಾವಸ್ಥೆಯನ್ನುಂಟುಮಾಡಿಬಿಟ್ಟೆ. ಅದರಿಂದ ಈ ಕಥೆ ಸಾಕು. ನಿಲ್ಲಿಸಿಬಿಡಿ, ನನಗೂ ಕೇಳಲು ಬಹಳ ಕಷ್ಟವಾಗಿದೆ.

ವ॥ ಅದಲ್ಲದೆಯುಂ ಮತ್ತಮಾ ಕಾಂತೆಗಿಂತೆಂದಂ

ಎಂತಾನುಂ ನಿಲೆ ಪಿಡಿದಸು
ಸಂತತಿಯಂ ಸ್ಮರಣಶೋಕಶಿಖಿಗಿಂಧನವ
ಪ್ಪಂತೆಸಗಲಾಗದಿವನೆಂ
ದಿಂತುಸಿರ್ದಂ ಕರುಣದಿಂದಮುಗೆ ಕಣ್ಬನಿಗಳ್ ೧೭೯

ವ॥ ಎನುತ್ತಂ ನುಡಿಯೆ ನಿಡುಸುಯ್ದುಂ ಗುಡುಗುಡನೆ ಸುರಿವ ಕಣ್ಬನಿಗಳಂ ಮಿಡಿವುತ್ತಂ ಮತ್ತಮಿಂತೆಂದಳ್

ಇದನೇನೆಂದಪ್ಪೆ ಲಜ್ಜಾಕರಮನರಸ ಪೋದಾ ಮಹಾರಾತ್ರಿಯೊಳ್ ಪೋ
ಗದ ಮತ್ಪ್ರಾಣಂಗಳಿಂ ಪೋದಪುವೆ ಕೊಲುತಮಿರ್ಪಂತಕಂ ನೋಡಲುಂ ಪೇ
ಸಿದನೆನ್ನಂ ಕಷ್ಟೆಯಂ ಕಲ್ಲೆರ್ದೆಯವಳುಮನೆಂದಂದು ಪೇಟ್ ಸಾವುಮೆಲ್ಲಿ
ರ್ಪುದು ಮತ್ತಂ ನಿಸ್ತ್ರಪಾಗ್ರೇಸರೆಯೊಡನುಡಿವಲ್ಲಿಂದಮೇಂ ಕಷ್ಟಮುಂಟೇ ೧೮೦

ಆ ವಜ್ರಪಾತದಿಂ ಮೇ
ಲೇವೇಟ್ದಪೆನಱಿದು ಪೇಟಲುಂ ಕೇಳಲುಮಿ
ನ್ನಾವಂಗಮೆನಲ್ಕಾಶ್ಚ
ರ್ಯಾವಹಮೊಂದಾದುದಾಗಳದನುಸಿರ್ದಪ್ಪೆಂ ೧೮೧

ನೆನಸಿಕೊಂಡ ಮಾತ್ರದಿಂದಲೇ ಮನಸ್ಸಿಗೆ ಸಹಿಸಲಸಾಧ್ಯವೆನಿಸಿರುವ ಆಪ್ತೇಷ್ಟರ ದುಃಖ ಸಮುದಾಯವು ಕಿವಿಯಾರೆ ಕೇಳಿದರೆ ಹೊಸದಾದ ವ್ಯಥೆಯನ್ನು ಹೆಚ್ಚಾಗಿ ಉಂಟು ಮಾಡದಿರುತ್ತದೆಯೆ ?" ವ॥ ಅದಲ್ಲದೆ ಮತ್ತೆ ಅವಳನ್ನು ಕುರಿತು ಹೀಗೆ ಹೇಳಿದನು: ೧೭೯. "ಹೇಗೊ ಬಹಳ ಪ್ರಯಾಸದಿಂದ ಇದುವರೆಗೂ ಬಿಗಿಹಿಡಿದುಕೊಂಡಿರುವ ಪ್ರಾಣಗಳನ್ನು ಈಗ ಹಿಂದಿನ ನೆನಪೆಂಬ ಬೆಂಕಿಗೆ ಸೌದೆಯಾಗುವಂತೆ ಮಾಡಬೇಡಿ" ಎಂದು ಕೇಳಿಕೊಂಡನು. ಆಗ ಅವನು ದುಃಖದಿಂದ ಕಂಬನಿಗರೆಯುತ್ತಿದ್ದನು. ವ॥ ಹೀಗೆ ಚಂದ್ರಾಪೀಡನು ಹೇಳಲಾಗಿ ನಿಟ್ಟುಸಿರು ಬಿಟ್ಟು ದಡದಡನೆ ಸುರಿಯುತ್ತಿರುವ ಕಣ್ಣೀರುಗಳನ್ನು ಮಿಡಿಯುತ್ತಾ ಮತ್ತೆ ಹೀಗೆ ಹೇಳಿದಳು. ೧೮೦. "ಮಹಾರಾಜ, ನೀನು ಇದೇನು ನಾಚಿಕೆಯಾಗುವ ಮಾತನ್ನು ಹೇಳುತ್ತಿರುವೆ ? ಕಳೆದುಹೋದ ಆ ಕರಾಳರಾತ್ರಿಯಲ್ಲೇ ಹೋಗದಿರುವ ನನ್ನ ಪ್ರಾಣಗಳು ಈಗ ಹೋಗಿಬಿಡುತ್ತವೆಯೆ ? ಎಲ್ಲರನ್ನೂ ಕೊಲ್ಲುವ ಯಮನು ಕಷ್ಟಸ್ಥಿತಿಯಲ್ಲಿರುವ ಹಾಗೂ ಕಲ್ಲೆದೆಯವಳಾದ ನನ್ನನ್ನು ಕಣ್ಣೆತ್ತಿ ನೋಡುವುದಕ್ಕೂ ಹೇಸಿಗೆಪಡುತ್ತಾನೆ. ಹೀಗಿರಲು ನೀನೇ ಹೇಳು, ನನಗೆ ಸಾವು ಹೇಗೆ ಬರುತ್ತದೆ ? ಮತ್ತು ನಾಚಿಕೆಗೆಟ್ಟವರಲ್ಲಿ ಮೊದಲಿಗಳಾದ ನನ್ನ ಸಂಗಡ ಮಾತನಾಡುವುದಕ್ಕಿಂತ ಬೇರೆ ಕಷ್ಟವಿದೆಯೆ ? ಏನು ಹೇಳಲಿ ! ೧೮೧. ಆ ಸಿಡಿಲಿನ ಹೊಡೆತದಂತೆ ದಾರುಣವಾದ ಪುಂಡರೀಕನ ಮರಣಾನಂತರದಲ್ಲಿ ಯಾರಿಗೂ ಹೇಳಲೂ ಕೇಳಲೂ ಅಶಕ್ಯವೆನಿಸುವಂತಹ ಆಶ್ಚರ್ಯಕರವಾದ ಘಟನೆಯೊಂದು ನಡೆ

ವ॥ ಅದಲ್ಲದೆಯುಂ

ಒದವಿದ ಕೋಟಲೆಗಳ ಬಾ
ಟಿಗ್ಮೊದಲೆನಿಸಿದ ಬಾರ್ತೆಗೆಟ್ಟ ಕೃತಮಳಿಯದ ಮಾ
ಯದ ನನ್ನೀವೊಡಲಂ ನಿಲಿ
ಸಿದುದರ್ಕೆನಾನುಮೊಂದು ನೆವಮುಸಿರ್ದಪ್ಪೆಂ ೧೮೨

ವ॥ ಅದೆಂತೆಂದೊಡಂತೀಯವಸ್ಥಾಂತರದೊಳಿಡೆವಿಡದಟುತ್ತಿರ್ದಪದವಳ ಮೊಗಮಂ ನೋಡಿ

ತರಳಿಕೆ ಮಾಣದಿನ್ನೆನಸನಟ್ಟಪೆ ಸಂಗಡಿಸಿಂಧನಂಗಳಂ
ವಿರಚಿಸು ಬೇಗಮಿಂ ಚಿತಿಯನೇಂ ತಡವೀಕ್ಷಣಮೆನ್ನ ಜೀವಿತೇ
ಶ್ವರನೊಡವೋಗವೇಟ್ಕುಮೆನಗೆಂಬುದುಮೊರ್ಮೆಯೆ ಚಂದ್ರಮಂಡಲಾಂ
ತರದೊಳದೊರ್ವನಂದು ಪೊಱಮಟ್ಟಿಟಿತಂದನಮರ್ತ್ಯಮಾರ್ಗದಿಂ ೧೮೩

ವ॥ ಅದೆಂತೆಂದೊಡೆ ತರಳತರಹಾರಾಲಂಕೃತನುಂ ವಿಶಾಲವಕ್ಷಸ್ಥಲನುಂ ಕೇಯೂರಕೋಟಲಗ್ನಪವನತರಳತರಧವಳೋತ್ತರೀಯಾಂಶುಕನುಂ ಕಾಮಿನೀಕುಚಕುಂಕುಮ ಪತ್ರಲತಾಲಾಂಛಿತ ಸಂದೇಶನುಮುಭಯಕರ್ಣಾಂದೋಳಿತ ಮಕರಕುಂಡಲಮಣಿಪ್ರಭಾರಕ್ತಗಂಡಮಂಡಲನುಂ

ಯಿತು. ಅದನ್ನು ಈಗ ಹೇಳುತ್ತೇನೆ. ವ॥ ಅದಲ್ಲದೆ ೧೮೨. ಮೇಲೆ ಮೇಲೆ ಒದಗುವ ಕಷ್ಟಗಳಿಗೆ ಮೂಲಭೂತವಾದ, ಅಪ್ರಯೋಜಕವಾದ, ಉಪಕಾರಸ್ಮರಣೆಯಿಲ್ಲದ, ಅಯೋಗ್ಯವಾದ ಈ ನನ್ನ ಶರೀರವನ್ನು ಉಳಿಸಿಕೊಂಡಿರುವುದಕ್ಕೆ ಒಂದು ಕಾರಣವಿದೆ. ಅದನ್ನು ಹೇಳುತ್ತೇನೆ. ವ॥ ಅದೇನೆಂದರೆ ಈ ದುರವಸ್ಥೆಯಲ್ಲಿ ಒಂದೇಸಮನೆ ಅಳುತ್ತಿದ್ದ ಸಂಚಿಯುವಳ ಮುಖವನ್ನು ನೋಡಿ ೧೮೩. "ತರಳಿಕೆ, ಬಿಡದೆ ಇನ್ನೆಷ್ಟು ಅಳುತ್ತೀಯೆ ? ಸೌದೆಗಳನ್ನು ಒಟ್ಟುಗೂಡಿಸು. ಬೇಗ ಚಿತೆಯನ್ನು ಮಾಡು. ತಡವೇತಕ್ಕೆ ? ಈ ಕ್ಷಣವೆ ನನ್ನ ಪ್ರಾಣೇಶ್ವರನ ಜೊತೆಯಲ್ಲಿ ನಾನು ಹೋಗಲೇಬೇಕು !" ಎಂದು ಹೇಳುತ್ತಿರಲಾಗಿ ಒಡನೆಯೆ ಚಂದ್ರಮಂಡಲದ ಮಧ್ಯದಿಂದ ಹೊರಟು ಆಕಾಶ ಮಾರ್ಗದಿಂದ ಒಬ್ಬ ಪುರುಷನು ಇಳಿದುಬಂದನು. ವ॥ ಅದು ಹೇಗೆಂದರೆ, ಬಹಳ ಮಟ್ಟಿಗೆ ಒಲೆದಾಡುತ್ತಿರುವ ಹಾರದಿಂದ ಅಲಂಕೃತನಾಗಿಯೂ, ಅಗಲವಾದ ಎದೆಯುಳ್ಳವನಾಗಿಯೂ, ತೋಳುಬಂದಿಗಳ ತುದಿಯಲ್ಲಿ ಸಿಕ್ಕಿಕೊಂಡಿರುವ ಗಾಳಿಯಿಂದ ಅಲ್ಲಾಡುತ್ತಿರುವ ಬಿಳಿಪಂಚೆಯನ್ನು ಹೊದ್ದುಕೊಂಡಿರುವವನಾಗಿಯೂ, ಆಲಿಂಗಿಸಿಕೊಳ್ಳುವುದರಿಂದ ಕಾಮಿನಿಯರ ಸ್ತನಗಳಲ್ಲಿ ಚಿತ್ರಿಸಿರುವ ಕುಂಕುಮದ ಪತ್ರಲತೆಯಿಂದ (ಚಿತ್ರರಚನೆ) ಗುರುತುಮಾಡಲ್ಪಟ್ಟ ಭುಜಪ್ರದೇಶವುಳ್ಳವನಾಗಿಯೂ, ಕಿವಿಗಳೆರಡರಲ್ಲೂ ತೂಗಾಡುತ್ತಿರುವ ಕಡುಕುಗಳ ರತ್ನದ ಪ್ರಭೆಯಿಂದ ಕೆಂಪಾದ ಕೆನ್ನೆಗಳುಳ್ಳವನಾಗಿಯೂ,

ಅಳಿಕುಲನೀಲಕುಟಿಲಕುಂತಳವಿಕಟಮೌಳಿಯುಂ ಉತ್ಫುಲ್ಲಕುಮುದಕೃತಕರ್ಣಪೂರನುಂ ದುಕೂಲ ಪಲ್ಲವಕಲ್ಪಿತೋಷ್ಣೀಷನುಂ ಕುಮುದಧವಳದೇಹನುಂ ಮಹಾಪ್ರಮಾಣಪುರುಷನುಂ ಮಹಾ ಪುರುಷಲಕ್ಷಣೋಪೇತನುಂ ದಿವ್ಯಾಕಾರನುಮೆನಿಸಿದ ಮಹಾನುಭಾವಂ

ಧವಳಾಂಗಪ್ರಭೆ ದೆಸೆಯುಂ
ಧವಳಿಸೆ ತನಿಗಂಪನಾಳ್ದು ಕಡುದಣ್ಪಿನಸುಂ
ಕವಿತರೆ ನೀಡಿದನಾಗಳ್
ದಿವಿಜೇಭಕರಾನುಕಾರಿ ನಿಜಕರಯುಗಮಂ ೧೮೪

ವ॥ ಅಂತತಿಶೀತಲಸ್ಪರ್ಶಂಗಳಪ್ಪ ಮೃಣಾಲಕೋಮಲಂಗಳೆನಿಪ ಕರಾಂಗುಳಿಗಳಿನೆನ್ನ ಮುಂದುಪರತನಾದ ಪುಂಡರೀಕನನೆತ್ತಿಕೊಂಡು

ಬಗೆಗೆಟ್ಟು ಸಾವ ಬಗೆಯಂ
ಮಗಳೆ ಮಹಾಶ್ವೇತೆ ಬಗೆಯದಿರ್ ಕೂಡುವೆ ನೀಂ
ಮಗುಟ್ಟಿಯುಮೀತನನೆನುತಂ
ಮಗುಟ್ದಾತಂಬೆರಸು ಗಗನಮಾರ್ಗಕ್ಕೊಗೆದಂ ೧೮೫

ವ॥ ಅಂತಾ ವ್ಯತಿಕರದೊಳೆನಗತಿಸಂಭ್ರಮಮುಂ ವಿಸ್ಮಯಃಮುಂ ಕೌತುಕಮು ಮೊಗೆಯೆ ಪಿರಿದುಮಂಜಿ ಕಪಿಂಜಲನನಿದೇನೆಂದು ಬೆಸಗೊಳೆಯುಮಾತನೆನಗೆ ಮಱುಮಾತುಗುಡ ದುನ್ಮುಖನಾಗಿ

ದುಂಬಿಗಳ ಗುಂಪಿನಂತೆ ಕಪ್ಪಾದ ಹಾಗೂ ವಕ್ರವಾದ ಕೇಶಪಾಶದಿಂದ ಸುಂದರವಾದ ತಲೆಯುಳ್ಳವನಾಗಿಯೂ, ಅರಳಿರುವ ಬಿಳಿದಾವರೆಯನ್ನು ಕಿವಿಯಲ್ಲಿ ಮುಡಿದುಕೊಂಡಿ ರುವವನಾಗಿಯೂ, ನವುರಾದ ರೇಷ್ಮೆವಸ್ತ್ರದಿಂದ ಮಾಡಲ್ಪಟ್ಟ ರುಮಾಲನ್ನು ಧರಿಸಿರು ವವನಾಗಿಯೂ, ಬಿಳಿಯತಾವರೆಯಂತೆ ಶುಭ್ರವಾದ ಶರೀರವುಳ್ಳವನಾಗಿಯೂ, ಎತ್ತರ ವಾದ ಆಕಾರವುಳ್ಳವನಾಗಿಯೂ ಮಹಾಪುರುಷಲಕ್ಷಣಗಳಿಂದ ಕೂಡಿಕೊಂಡಿರುವವನಾ ಗಿಯೂ ಇರುವ ದಿವ್ಯಾಕಾರದ ಮಹಾನುಭಾವನೊಬ್ಬನು, ೧೮೪. ಶುಭ್ರವಾದ ದೇಹಕಾಂತಿಯು ದಿಕ್ಕುಗಳನ್ನೆಲ್ಲ ಬೆಳಗುತ್ತಿರಲಾಗಿ ಹೆಚ್ಚಾದ ಸುವಾಸನೆಯಿಂದ ಕೂಡಿ ಕೊಂಡಿರುವ ತಂಪು ಬಹಳವಾಗಿ ವ್ಯಾಪಿಸುತ್ತಿರಲಾಗಿ, ಐರಾವತದ ಸೊಂಡಿಲನ್ನು ಹೋಲುತ್ತಿರುವ ತನ್ನ ಎರಡು ತೋಳುಗಳನ್ನೂ ಮುಂದಕ್ಕೆ ಚಾಚಿದನು. ವ॥ ಹಾಗೆ ಬಹಳ ತಣ್ಣಗಿರುವ ಮತ್ತು ತಾವರೆಯದಂಟಿನಂತೆ ಮೃದುವಾದ ಕೈಬೆರಳುಗಳಿಂದ ಮೃತನಾದ ಪುಂಡರೀಕನನ್ನು ನನ್ನ ಎದುರಿನಲ್ಲೇ ಎತ್ತಿಕೊಂಡು ೧೮೫. "ಮಗಳೆ, ಮಹಾಶ್ವೇತೆ, ಮನಸ್ಸನ್ನು ಕೆಡಿಸಿಕೊಂಡು ಸಾಯುವ ವಿಚಾರವನ್ನು ಮಾತ್ರ ಯೋಚಿ ಸಬೇಡ. ನೀನು ಮತ್ತೆ ಇವನೊಂದಿಗೆ ಸೇರುತ್ತೀಯೆ ಎಂದು ಹೇಳಿ ಹಿಂದಿರುಗಿ ಅವನನ್ನು ಎತ್ತಿಕೊಂಡು ಆಕಾಶಕ್ಕೇರಿದನು." ವ॥ ಹಾಗೆ ಆ ಸಂದರ್ಭದಲ್ಲಿ ನನಗೆ ಬಹಳ ಗಾಬರಿಯೂ ಆಶ್ಚರ್ಯವೂ ಕುತೂಹಲವೂ ಉಂಟಾಗಲು ಬಹಳ

ಎನಗಂ ಪೇೞದೆಯುಂ ಘೋರಂ
ಕೆನಲೆನ್ನಯ ಸಖನನೆತ್ತುವೊಯ್ದಪೆ ಮಾಣಂ
ದೆನುತಂ ಕೋಪದಿನಾ ಪುರು
ಷನ ಪೆಱಗನೆ ತಾನುಮಂತರಿಕ್ಷಕ್ಕೊಗೆದಂ ೧೮೬

ವ॥ ಅಂತು ಮೂವರುಂ ನೋಡೆ ನೋಡೆ ಚಂದ್ರಮಂಡಲಮಧ್ಯದೊಳ್ ಪುಗೆ ಕಪಿಂಜಲನ ಪೋಗಿಂಗೆ ಶೋಕವಿರ್ಮಡಿಯಾಗೆ ಕಿಂಕರ್ತವ್ಯತಾಮೂಢೆಯೆನಾಗಿ

ತರಳಿಕೆ ಪೇೞ್ದೇನಱಿವೊ ನೀನೆನಲೆನ್ನವೊಲಃಗಳಳ್ಕಿನಿಂ
ಪರವಶೆಯಾಗಿ ನಿಂದುಮವಳೆನ್ನಯ ಸಾವಿನೊಳಾದ ಶಂಕೆಯಿಂ
ಕರುಣಮನಪ್ಪುಕೆಯ್ದು ಸಿರ್ದಳಾನಱಿಯೆಂ ಸತಿ ಬಂದು ತಂದೆಯುಂ
ತಿರೆ ಪದೆದಾ ಮಹಾಪುರುಷನಾಱಿಸಿದಂ ಭವದೀಯ ಶೋಕಮಂ ೧೮೭

ಇನ್ನರ ನುಡಿ ಕನಸಿನೊಳಂ
ನನ್ನಿಯೆನಲ್ ಕೇಳ ದಿವ್ಯಪುರುಷಂ ಪ್ರತ್ಯ
ಕ್ಷಂ ನಿನ್ನ ಮುಂದೆ ನುಡಿಯು
ಲ್ಕಿನ್ನುಮದೇನೆಂಬೆ ಸಂದೆಗಕ್ಕೆಡೆಯುಂಟೇ ೧೮೮

ಬಹಳ ಹೆದರಿ ಕಪಿಂಜಲನನ್ನು ಕುರಿತು ಇದೇನೆಂದು ಕೇಳಲು ಅವನು ನನಗೆ ಉತ್ತರವನ್ನು ಕೊಡದೆ ಮೇಲುಮುಖನಾಗಿ, ೧೮೬. "ನನಗೆ ಹೇಳದೆ ಕೇಳದೆ ನನ್ನ ಗೆಳೆಯನನ್ನು ತಟ್ಟನೆ ಎಲ್ಲಿಗೆ ಎತ್ತಿಕೊಂಡು ಹೋಗುತ್ತಿರುವೆ ? ನಿಲ್ಲು !" ಎಂದು ಕೋಪದಿಂದ ಆ ಪುರುಷನನ್ನು ಹಿಂಬಾಲಿಸಿ ತಾನೂ ಆಕಾಶಕ್ಕೆ ಏರಿಹೋದನು. ವ॥ ಹಾಗೆ ನೋಡುತ್ತಿರುವಂತೆಯೆ ಮೂವರೂ ಚಂದ್ರಮಂಡಲದ ಮಧ್ಯವನ್ನು ಪ್ರವೇಶಿಸಲಾಗಿ ಕಪಿಂಜಲನು ಹೊರಟುಹೋದುದರಿಂದ ದುಃಖವು ಇಮ್ಮಡಿಯಾಗಲು ಏನುಮಾಡಬೇಕೆಂದು ತಿಳಿಯದವಳಾಗಿ ೧೮೭. "ತರಳಿಕೆ, ಇದೇನು ಹೇಳು. ನಿನಗೆ ಗೊತ್ತಾಯಿತೆ ?" ಎಂದು ಅವಳನ್ನು ಕೇಳಿದೆನು. ಆಗ ಅವಳೂ ನನ್ನಂತೆಯೇ ಭಯದಿಂದ ಪರವಶಳಾಗಿದ್ದಳು. ಅದಲ್ಲದೆ ನಾನು ಪ್ರಾಣತ್ಯಾಗಮಾಡಿಬಿಡಬಹುದೆಂಬ ಶಂಕೆ ಬೇರೆ ಅವಳಿಗಿತ್ತು. ಅದರಿಂದ ಅವಳು ಕರುಣೆಯಿಂದ ಕೂಡಿ "ಅಮ್ಮ ನನಗೇನೂ ಗೊತ್ತಿಲ್ಲ. ಆದರೆ ಆ ಮಹಾಪುರುಷನು ಬಂದು ತಂದೆಯಂತೆ ನಿನ್ನಮೇಲೆ ವಾತ್ಸಲ್ಯವನ್ನು ತೋರಿಸಿ ನಿನ್ನ ದುಃಖವನ್ನು ಪರಿಹರಿಸಿದ್ದಾನೆ. ೧೮೮. ಇಂತಹವರು ಸ್ವಪ್ನದಲ್ಲಿ ಕಾಣಿಸಿಕೊಂಡು ಹೇಳಿದರೂ ಆ ಮಾತು ಸುಳ್ಳಾಗುವುದಿಲ್ಲ. ಹೀಗಿರಲು ಆ ದಿವ್ಯಪುರುಷನು ಪ್ರತ್ಯಕ್ಷವಾಗಿ ನಿನ್ನ ಮುಂದೆ ಹೇಳಿರಲಾಗಿ ಅಲ್ಲಿ ಸಂಶಯಕ್ಕೆ ಎಡೆಯೇ ಇಲ್ಲ. ಹೆಚ್ಚಿಗೆ ಹೇಳಬೇಕಾದ್ದೇ

ನಿನ್ನಯ ಜೀವಿತೇಶ್ವರನ ಜೀವಮನಿಂ ಪಡೆದಟ್ಟಲೆಂದು ಲೋ
ಕೋನ್ನತನಪ್ಪ ದಿವ್ಯಪುರುಷಂ ವಿಗತಾಸುವನೊಯ್ದನಟ್ಕಱಿಂ
ನಿನ್ನುಮನೀಗಳಾಱಿಸಿದನಂತಿದಜಿೀದಿದು ಸನ್ನಿಯಪ್ಪುದ
ಲ್ತೆನ್ನದೆ ಮಾಣ್ಬುದರ್ಕೆ ಪೆಱತೇಂ ಮರಣವ್ಯವಸಾಯಮೆಂಬುದಂ ೧೮೯

ನಿಸದಂ ಕಪಿಂಜಲ ಜೀ
ವಿಸುತಿರೆ ನಿನ್ನಲ್ಲಿಗೆಯ್ದದಿರನವಱಿಂ ರ
ಕ್ಷಿಸವೇಟ್ಕುಮಾವ ತೆಱದಿಂ
ದಸುವಂ ನಿನ್ನಲ್ಲಿಗಾತನೆಯ್ತರ್ಪನೆಗಂ ೧೯೦

ವ॥ ಎಂದವಳ್ ಕಾಲಮೇಲೆ ಬೀಟ್ವುದುಃ

ಪಿರಿದುಮಿದಿಂತುಟೆಂದು ಬಗೆದುಂ ನೆಱೆ ಬಾಟಿಕ್ಕೆಯೊಳಾದ ತೃಷ್ಣೆಯಂ
ಪರಿಹರಿಸಲ್ಕಮಾರ್ಗಮಱಿದಾಗಿಯುಮುಕ್ಕೆವದೀದಮಂತೆ ಪೆಂ
ಡಿತ ಬಗೆ ಸಾಜದಿಂ ಕುಟಿಲಮಾಗಿಯುಮಿಂತು ದುರಾಸೆಯಿಂದಮೋ
ಸರಿಸದೆ ನನ್ನ ನಾನೆ ಬಿಡಲಾಱದ ಪಾತಕಿಯೆಂ ಮಹೀಪತೀ ೧೯೧

ವ॥ ಅನಂತರಮಾ ಸರೋವರದ ತೀರದೊಳೆಡೆವಿಡದೆ ಪೊರಳುತವೆ ಪರೆದ ಮುಡಿಯೊಳ್ ಪೊರೆದ ಕಣ್ಣನೀರಿಂ ನಾಂದು ಕದಂಪಿನೊಳ್ ಪಗಿಲ್ತು ಪತ್ತಿದುತ್ತರೀಯದಿಯೆಂ

ಇಲ್ಲ. ೧೮೯. ನಿನ್ನ ಪ್ರಾಣಕಾಂತನ ಹೋದ ಪ್ರಾಣವನ್ನು ಮರಳಿ ಬರುವಂತೆ ಮಾಡಿ, ಜೀವಬರಿಸಿ ಅವನನ್ನು ಕಳುಹಿಸಿಕೊಡಬೇಕೆಂಬ ಉದ್ದೇಶದಿಂದಲೆ ಈ ಲೋಕೋತ್ತರನಾದ ದಿವ್ಯಪುರುಷನು ಸಾವನ್ನಪ್ಪಿದ ಅವನನ್ನು ಕೊಂಡೊಯ್ದಿದ್ದಾನೆ; ಹಾಗೂ ನಿನ್ನನ್ನು ಸಮಾಧಾನಪಡಿಸಿದ್ದಾನೆ. ಅದರಿಂದ ಇದು ನಿಜವಲ್ಲವೆಂದು ಹೇಳದೆ ಮರಣಪ್ರಯತ್ನವನ್ನು ಕೈಬಿಡಬೇಕು. ಸಮಾಧಾನಪಡಿಸುವ ಆ ಮಾತಿಗಿಂತಲೂ ಬೇರೆ ಇನ್ನೇನು ಬೇಕು ? ೧೯೦. ಕಪಿಂಜಲನು ಬದುಕಿದ್ದರೆ ನಿಜವಾಗಿಯೂ ನಿನ್ನಲ್ಲಿಗೆ ಬರದೆ ಇರುವುದಿಲ್ಲ. ಆದ್ದರಿಂದ ಅವನು ನಿನ್ನ ಸಮೀಪಕ್ಕೆ ಬರುವವರೆಗೂ ಯಾವ ರೀತಿಯಿಂದಲಾದರೂ ಜೀವವನ್ನು ಕಾಪಾಡಿಕೊಂಡೇ ತೀರಬೇಕು" ವ॥ ಎಂದು ಅವಳು ನನ್ನ ಕಾಲಿನಮೇಲೆ ಬೀಳಲಾಗಿ ೧೯೧. ಎಲೈ ರಾಜನೆ, ಬಹುಶಃ ಇದು ಹೀಗೆಯೆ ಇರಬೇಕೆಂದು ಆಲೋಚಿಸಿಯೂ, ಮಿಗಿಲಾಗಿ ಬದುಕಿರಬೇಕೆಂಬ ಆಸೆಯನ್ನು ಬಿಡಲು ಯಾರಿಗೂ ಆಗದಿರುವುದರಿಂದಲೂ, ಅವನು ಮರಳಿ ಬರುತ್ತಾನೆಂಬ ಆಶಾಬಂಧದಿಂದಲೂ, ಹೆಂಗಸರ ಸ್ವಭಾವವು ಸಹಜವಾಗಿ ವಕ್ರವಾಗಿರುವುದರಿಂದಲೂ ಹೀಗೆ ದುರಾಸೆಗೆ ಅಂಟಿಕೊಂಡು ಪ್ರಾಣವನ್ನು ಬಿಡಲಾರದ ಪಾಪಿಷ್ಠಳಾಗಿದ್ದೇನೆ. ವ॥ ಬಳಿಕ ಆ ಸರೋವರದ ದಡದಲ್ಲಿ ಎಡೆಬಿಡದೆ ಹೊರಳಾಡುತ್ತಾ ಚದುರಿರುವ ಕೂದಲುಗಳಲ್ಲಿ ವ್ಯಾಪಿಸಿಕೊಂಡು (ಕೂಡಿಕೊಂಡು), ಕಣ್ಣೀರಿನಿಂದ ಒದ್ದೆಯಾಗಿ ಕೆನ್ನೆಯಲ್ಲಿ ಅಂಟಿಕೊಂಡಿ

ಆಕ್ರಂದನದಿಂ ಗಂಟಲೊಡೆದು ದನಿ ಕಿಡೆ ತರಳಿಕೆವೆರಸು ಭಿಡದಟುತ್ತುಮಿರಲಾ ಪಾಪಕಾರಿಣಿಯಪ್ಪ ಕಾಳರಾತ್ರಿಪ್ರತಿಮೆಯೆನಿಸಿದ ಮಹಾರಾತ್ರಿಯಾಗಲ್ ಶೋಕೋದ್ರೇಕದಿಂ ಯುಗಸಹಸ್ರಾಯ ಮಾನಮಾಗೆ

ಅಟುವೆನ್ನಂ ತರಳಿಕೆ ಮೆ
ಯ್ವಟಿಯಿಂ ಪಿಡಿದೊಯ್ಯನೆತ್ತಿ ಮೆಲ್ಲನೆ ತಡಿಗಾ
ಗಿಟಿತಂದೀ ಕೊಳದೊಳ್ ನೀ
ರಿಟಿಯಿಸೆ ನೀರಿಟಿದೆನಿಲ್ಲಿ ಬೆಳಗಪ್ಪಾಗಳ್ ೧೯೨

ವ॥ ಅಂತು ನೀರಿಟಿದು ತದನಂತರಂ

ಆತನ ಪರಮಪ್ರೀತಿಯಿ
ನಾತನ ವಲ್ಕಲದಿನಾತನಕ್ಷಾವಳಿಯಿಂ
ದಾತನ ಕಮಂಡಲುವಿನಿಂ
ದಾತನ ವೇಷಮನೆ ತಾಳ್ದಿ ತಳೆದೆಂ ವ್ರತಮಂ ೧೯೩

ವ॥ ಅಂತು ತಳೆದು ಮದೀಯ ಮಂದಭಾಗ್ಯತೆಯುಮಂ ದೈವದ ದಾರುಣತೆಯುಮಂ ಶೋಕೋದ್ರೇಕಮುಮಂ ದುಃಖದ ದುಃಸಹತೆಯುಮಂ ಪದಾರ್ಥದ ನಿತ್ಯತೆಯುಮಂ ಭಾವಿಸಿ ನೋಡಿ

ರುವ ಹೊದೆಯುವ ವಸ್ತ್ರವುಳ್ಳವಳಾಗಿ, ರೋದನದಿಂದ ಗಂಟಲೊಡೆದು ದನಿ ಗಾರು ಬೀಳಲು ತರಳಿಕೆಯೊಂದಿಗೆ ಒಂದೇಸಮನೆ ಅಳುತ್ತಿರಲಾಗಿ ಪ್ರಳಯಕಾಲದ ರಾತ್ರಿಗೆ ಸಮಾನವಾದ ಆ ಭಯಂಕರವಾದ ಪಾಪರಾತ್ರಿಯು ಶೋಕಾತಿಶಯದಿಂದ ಸಾವಿರಯುಗ ದಷ್ಟು ದೀರ್ಘವಾಗಲಾಗಿ, ೧೯೨. ಬೆಳಗಾಗಲು ಅಳುತ್ತಿರುವ ನನ್ನನ್ನು ತರಳಿಕೆಯು ತನ್ನ ಶರೀರಾವಲಂಬನದಿಂದ ಹಿಡಿದುಕೊಂಡು (ಮೈಮೇಲೆ ಒರಗಿಸಿಕೊಂಡು) ಹಿಡಿ ದೆತ್ತಿ ಮೆಲ್ಲನೆ ದಡಕ್ಕೆ ಇಳಿಸಿ ಸ್ನಾನ ಮಾಡಿಸಲಾಗಿ ಸ್ನಾನಮಾಡಿದೆನು. ವ॥ ಹಾಗೆ ಸ್ನಾನ ಮಾಡಿ ಬಳಿಕ, ೧೯೩. ಅವನ ಮೇಲಿನ ಅತ್ಯಧಿಕವಾದ ಪ್ರೀತಿಯಿಂದ ಅವನು ಉಡು ತ್ತಿದ್ದ ನಾರುಬಟ್ಟೆಯನ್ನೇ ಉಟ್ಟುಕೊಂಡು, ಅವನ ಜಪಸರವನ್ನೇ ತೆಗೆದುಕೊಂಡು, ಅವನ ಕಮಂಡಲುವನ್ನೇ ಹಿಡಿದುಕೊಂಡು, ಅವನ ವೇಷವನ್ನೇ ತಾಳಿ ಬ್ರಹ್ಮಚರ್ಯವ್ರತ ವನ್ನು ಆರಂಭಿಸಿದೆನು. ವ॥ ಹಾಗೆ ವ್ರತವನ್ನು ಹಿಡಿದು ನನ್ನ ಅದೃಷ್ಟಹೀನತೆಯನ್ನೂ, ದೈವದ ಕಠೋರತೆಯನ್ನೂ, ಅತಿಶಯವಾದ ಶೋಕವನ್ನೂ, ಸಹಿಸಲಸಾಧ್ಯವಾದ ಮನೋವ್ಯಥೆಯನ್ನೂ, ಜಗತ್ತಿನ ವಸ್ತುಗಳ ಅನಿತ್ಯತೆಯನ್ನೂ ಆಲೋಚಿಸಿ ನೋಡಿ

ಮನಮುಂ ನಿಗ್ರಹಿಸುತ್ತ ಸದ್ವಿಷಯದತ್ತಲ್ ಪೋರ್ದದಂತಾಗೆ ಮಾ
ಡಿ ನಿರುದ್ಧೇಂದ್ರಿಯೆಯಾಗಿ ಬಂಧುಜನಮುಂ ತಾಯ್ತಂದೆಯುಂ ಪತ್ತುವಿ
ಟ್ಟೆನಗಿನ್ನೊರ್ವರುಮೇವರೆಂಬ ಬಗೆಯುಂ ನಿಶ್ಚೈಸಿ ಲೋಕೈಕನಾ
ಥನ ನಾನಾಗಳನಾಥೆಯೆಂ ಶರಣೆನ:ತ್ತಾಶ್ರೈಸಿದೆಂ ಸ್ಥಾಣುವಂ ೧೯೪

ಜನನೀ ಜನಕರ್ ಬಾಂಧವ
ಜನಸಹಿತತ್ತಳುತೆ ಬಂದು ನಾನಾವಿಧ ಸಾಂ
ತ್ವನವಚನಸಹಿತಮುಸಿರ್ದರ್
ಮನೆಗೊಡಗೊಂಡೊಯ್ಯಲೆಂಬ ಬಗೆಯಿಂದೆನ್ನಂ ೧೯೫

ಅಂತೆರವುಗೊಂಡಿದೇನಿವ
ಳೆಂತುಂ ಪೋ ಬಾರಳೇವೆನೆನುತಂ ದುಃಖಾ
ಕ್ರಾಂತಂ ಪಲವುಂ ದಿನಮಿ
ರ್ದಂತಾನುಂ ಮನೆಗೆ ಪೋದನೆನ್ನಯ ಜನಕಂ ೧೯೬

ವ॥ ಅಂತು ಪೋಗೆ

ಜಪದಿಂ ತಪದಿಂದೊಡಲಂ
ಕ್ಷಪಿಯಿಸಿದಪೆನೆಂಬೊಡದು ಕೃತಜ್ಞತೆ ಗಡ ಛಃ
ಜಪವೆಣಿಸುವ ನೆಪದಿಂದಂ
ನೃಪ ತದ್ಗುಣಗಣಮನೀಗಳೆಣಿಸುತ್ತಿರ್ಪೆಂ ೧೯೭

೧೯೪. ಮನಸ್ಸನ್ನು ಕೆಟ್ಟವಿಷಯಗಳ ಕಡೆಗೆ ಹರಿಯದಂತೆ ಹತೋಟಿಯಲ್ಲಿಟ್ಟುಕೊಂಡು ಜಿತೇಂದ್ರಿಯಳಾಗಿ ನೆಂಟರಿಷ್ಟರನ್ನೂ ತಾಯಿತಂದೆಗಳನ್ನೂ ದೂರಮಾಡಿ, ನನಗೆ ಯಾರನ್ನು ಕಟ್ಟಿಕೊಂಡು ಏನಾಗಬೇಕೆಂದು ತೀರ್ಮಾನಿಸಿ ಅನಾಥಳಾದ ನಾನು ಜಗತ್ತಿಗೆಲ್ಲ ಒಡೆಯನಾದ ಆ ಪರಮೇಶ್ವರನನ್ನು ನೀನೇ ಗತಿ ಎಂದು ಆಶ್ರಯಿಸಿದೆನು. ೧೯೫. ನನ್ನ ತಾಯಿತಂದೆಗಳು ಬಂಧುಬಳಗ ಸಮೇತರಾಗಿ ಅಳುತ್ತಾಬಂದು ನನ್ನನ್ನು ಜೊತೆಯಲ್ಲಿ ಮನೆಗೆ ಕರೆದುಕೊಂಡು ಹೋಗಬೇಕೆಂಬ ಉದ್ದೇಶದಿಂದ ಅನೇಕ ಬಗೆಯ ಸಮಾಧಾನಪಡಿಸುವ ಮಾತುಗಳನ್ನಾಡಿದರು. ೧೯೬. ಹೀಗೆ ಬೇಡಿಕೊಂಡು 'ಅಯ್ಯೋ ಇವಳೇನಾದರೂ ಬರುವುದೇ ಇಲ್ಲವಲ್ಲ !' ಎಂದು ನನ್ನ ತಂದೆಯು ಬಹಳ ದುಃಖಾಕ್ರಾಂತನಾದನು. ಹಾಗೂ ಕೆಲವು ದಿನಗಳು ಇಲ್ಲೇ ಇದ್ದು ಕೊನೆಗೆ ಬಹಳ ಕಷ್ಟದಿಂದಲೇ ಮನೆಗೆ ಮರಳಿದನು. ವ॥ ಹಾಗೆ ಹೊರಟುಹೋಗಲಾಗಿ ೧೯೭. ಜಪದಿಂದಲೂ, ತಪಸ್ಸಿನಿಂದಲೂ ಶರೀರಶೋಷಣೆ ಮಾಡುತ್ತಿದ್ದೇನೆ. ಎಂದರೆ ಅದು ನನ್ನ ಸತ್ತ ಇನಿಯನಿಗೆ ತೋರಿಸುವ ಕೃತಜ್ಞತೆ ಮಾತ್ರ. ಛೆ ! ಛೆ ! ಜಪವೂ ಇಲ್ಲ ತಪವೂ ಇಲ್ಲ. ಎಲೈ ರಾಜನೆ, ಜಪಮಾಡುವ ನೆವದಿಂದ ಅವನ ಗುಣಸಮುದಾಯವನ್ನು ಲೆಕ್ಕ

ಅಯುಶಕ್ಕೀಡಾದ ನಿರ್ಲಕ್ಷಣೆಯನಶುಭೆಯುಂ ನಿಷ್ಫಲೋತ್ಪನ್ನೆಯುಂ ನಿ
ರ್ದಯೆಯುಂ ನಿಃಸ್ನೇಹೆಯುಂ ನಿಸ್ತ್ರಪೆಯುನಸುಖೆಯುಂ ನಿಂದ್ಯೆಯುಂ ನಿಷ್ಫಲಪ್ರಾ
ಣೆಯುನಾದಂ ಕ್ರೂರೆಯುಂ ಬ್ರಾಹ್ಮಣಹನನ ಮಹಾಪಾಪಮುಂ ಗೆಯ್ದ ನಿಸ್ತ್ರಿಂ
ಶೆಯುನೆನ್ನಂ ಪಾಪೆಯುಂ ನೀಂ ಬೆಸಗೊಳೆ ಫಲಮೇಂ ಪೇಳ್ ಮಹೀಪಾಲ
ಚಂದ್ರಾ ೧೯೮

ಸೊಗಯಿಪ ಸಸಿ ಶರದದ ಬೆ
ಳ್ಮುಗಿಲೊಳ್ ಪೊರೆಯಿಂದಮೆಯ್ದೆ ಮುಸುಕಿರ್ದುದೆನಲ್
ಸೊಗಯಿಪ ದುಗುಲದ ಸೆಱಗಂ
ಮೊಗಕ್ಕೆ ತೆಗೆದಾಗಳಿರದೆ ಗೋಳಿಟ್ಟೞ್ತಳ್ ೧೯೯

ವ॥ ಅಂತೞುತಿರ್ದಳನೆಂತಾನುಂ ಸಂತೈಸಿ

ಮೊದಲೊಳ್ ಗೌರವಮುಂ ಮಾ
ಡಿದುದಲ್ಲದೆ ತನ್ನ ವಾರ್ತೆಯುಂ ಸದ್ಭಾ
ವದಿನಾದ್ಯಂತಂ ಸತಿ ಪೇ
ೞ್ದುದರ್ಕೆ ಹೃತಹೃದಯನಾಗಿ ಚಂದ್ರಾಪೀಡಂ ೨೦೦

ಮಾಡುತ್ತಿದ್ದೇನೆ, ಅಷ್ಟೆ! ೧೯೮. ಎಲೈ ಚಂದ್ರನಂತಿರುವ ಅರಸನೆ, ಅಪಕೀರ್ತಿಗೆ ಪಾತ್ರಳಾದ, ಶುಭಲಕ್ಷಣಗಳಿಲ್ಲದಿರುವ, ಅಮಂಗಳಸ್ವರೂಪಳಾದ, ವ್ಯರ್ಥವಾಗಿ ಹುಟ್ಟಿರುವ ದಯಾರಹಿತಳಾದ, ಪ್ರೀತಿಯೇ ಇಲ್ಲದ, ನಾಚಿಕೆಯಿಲ್ಲದ, ಸಂತೋಷವಿಲ್ಲದ, ನಿಂದೆಗೆ ಪಾತ್ರಳಾದ, ವ್ಯರ್ಥವಾಗಿ ಜೀವನವನ್ನು ಮಾಡುತ್ತಿರುವ ಕ್ರೂರಳಾದ, ಬ್ರಹ್ಮಹತ್ಯೆಯ ಮಹಾಪಾಪಕ್ಕೆ ಗುರಿಯಾಗಿರುವ ಘಾತುಕಿಯಾದ, ಪಾಪಿಷ್ಠಳಾದ ನನ್ನ ವಿಷಯವನ್ನು ಕೇಳಿದ್ದರಿಂದ ನಿನಗೆ ಏನು ಪ್ರಯೋಜನವಾಯಿತು ? ಹೇಳು!" ೧೯೯. (ಎಂದುಹೇಳಿ) ಮನೋಹರನಾದ ಚಂದ್ರನು ಶರತ್ಕಾಲದ ಬಿಳಿಯ ಮೋಡದ ಪದರದಿಂದ ಮುಚ್ಚಿಕೊಂಡಿರುವಂತೆ ಅವಳು ಸೊಗಸಾದ ಬಿಳಿಯ ನಾರುಮಡಿಯ ಸೆರಗಿನಿಂದ ಮುಖವನ್ನು ಮುಚ್ಚಿಕೊಂಡು ಒಂದೇಸಮನೆ ಗೋಳಾಡಿ ಅತ್ತಳು. ಟಿ॥ ದುಕೂಲ= ರೇಷ್ಮೆಬಟ್ಟೆ, ಉತ್ತಮವಾದ ಬಟ್ಟೆ ಎಂಬ ಅರ್ಥವಿದೆ. ಪ್ರಕೃತ ಸಂದರ್ಭಕ್ಕೆ ತಕ್ಕಂತೆ ಉತ್ತಮವಾದ ನಾರುಮಡಿ ಎಂದು ಹೇಳಬೇಕು. ವ॥ ಹೀಗೆ ಅಳುತ್ತಿದ್ದ ಅವಳನ್ನು ಬಹಳ ಕಷ್ಟದಿಂದ ಸಮಾಧಾನಪಡಿಸಿ, ೨೦೦. ಚಂದ್ರಾಪೀಡನಿಗೆ ಮೊದಲೆ ಅವಳ ಸದ್ಗುಣಗಳಿಂದ ಗೌರವವುಂಟಾಗಿತ್ತು. ಈಗ ಅವಳು ತನ್ನ ವೃತ್ತಾಂತವನ್ನೆಲ್ಲಾ ಆದ್ಯಂತವಾಗಿ ಒಳ್ಳೆಯಮನಸ್ಸಿನಿಂದ ಹೇಳಿದ್ದಕ್ಕೆ ಅವನು ಆಕರ್ಷಿಸಲ್ಪಟ್ಟ ಮನಸ್ಸುಳ್ಳ

ಇನಿಸೊಗೆತರ್ಪ ಕಣ್ಬನಿಗಳಿಂದಮೆ ನೇಹಮನುಂಟುಮಾಡುವಂ
ಗನೆಯರೊಳೇನಪಾರಭವಭೋಗಮನಿಂತಿರೆ ಪತ್ತುವಿಟ್ಟು ಕಾ
ನನದೊಳೆ ನಟ್ಟುನಿಂದು ಸುಕುಮಾರಮೆನಿಪ್ಪ ಶರೀರಮಂ ಕಱು
ತ್ತಿನಿವಿರಿದೊಂದು ಘೋರತಪಕೊಡ್ಡಿದೆ ನಿನ್ನವೊಲಾರ್ ಕೃತಜ್ಞೆಯರ್ ೨೦೧

ಸತ್ತವರೇಟ್ವರೆ ಪೇಟ್ಟೊಡ
ಸತ್ತರೆ ತಮ್ಮಟಲಿನಳವಿಯಂ ಮಟ್ಗಿಸಲೆಂ
ದುತ್ತವಳಿಕೆಯೊಳೆ ಸಾವರ್
ಸತ್ತವರವರ್ಗಾವ ಹಿತಮನಾಚರಿಸುವರೋ ೨೦೨

ಅವರವರ್ಗಾದ ಕರ್ಮಫಲಮಿರ್ಪೆಡೆ ಬೇಱವಱಿಂದ ಮೇಲೆ ಕೂ
ಡುವರೊಡಸತ್ತವರೆಂಬೊಡದು ಕೂಡದು ಕೇವಲಮಾತ್ಮಘಾತದೋ
ಷವೆ ಪೆಱತಿಲ್ಲ ಸತ್ತರೊಡಸಾಯದೆ ನಿಂದೊಡೆ ಮಾಡಲಕ್ಕುಮಿ
ತ್ತವರ್ಗೆ ಜಲಾಂಜಲಿಪ್ರಭೃತಿ ದಾನವಿಶೇಷ ಮಹೋಪಕಾರಮಂ ೨೦೩

ವನಾಗಿ ಹೀಗೆ ಹೇಳಿದನು. ೨೦೧. "ಪೂಜ್ಯಳೆ, ಲೋಕದಲ್ಲಿ ಒಂದಷ್ಟು ಕಣ್ಣೀರನ್ನು ಸುರಿಸಿ ಸ್ನೇಹವನ್ನು ತೋರ್ಪಡಿಸಿಕೊಳ್ಳುವ ಹೆಂಗಸರಲ್ಲಿ ವಿಶೇಷವೇನಿದೆ ? ನೀನಾದರೋ ಅಪಾರವಾದ ಐಹಿಕ ಸುಖಭೋಗವನ್ನು ಹೀಗೆ ತೊರೆದು, ಕಾಡಿನಲ್ಲೆ ನೆಲೆಸಿ ಕೋಮಲವಾದ ಶರೀರವನ್ನು ದಂಡಿಸಿ, ಇಷ್ಟೊಂದು ಕಠೋರವಾದ ತಪಸ್ಸಿಗೆ ಈಡು ಮಾಡಿರುವೆ. ನಿನ್ನಂತೆ ಇನಿಯನಲ್ಲಿ ಕೃತಜ್ಞತೆಯುಳ್ಳ ಹೆಂಗಸರು ಯಾರಿದ್ದಾರೆ ? ೨೦೨. ಒಂದು ವೇಳೆ ಸಹಗಮನವನ್ನು ಮಾಡಿದರೆ ಸತ್ತವರು ಏಳುತ್ತಾರೆಯೆ ? ತಮ್ಮ ದುಃಖಭಾರವನ್ನು ಅಡಗಿಸಬೇಕೆಂಬ ಒಂದು ಕಾತರತೆಯಿಂದ ಕೆಲವರು ಜೊತೆಯಲ್ಲಿ ಸಾಯುತ್ತಾರೆ. ಅಂತಹವರು ಸತ್ತವರಿಗೆ ಯಾವ ಹಿತವನ್ನು ಮಾಡಿದಂತಾಗುತ್ತದೆ ? ೨೦೩. ಸತ್ತವರು ಅವರವರು ಮಾಡಿದ ಕರ್ಮಕ್ಕೆ ಅನುಸಾರವಾಗಿ ಬೇರೆಬೇರೆ ಕಡೆಗಳಲ್ಲಿ ಜನ್ಮವನ್ನು ಪಡೆಯುತ್ತಾರೆ. ಅದರಿಂದ ಮೊದಲು ಸತ್ತವರೂ ಅವರ ಜೊತೆಯಲ್ಲಿ ಸತ್ತವರೂ ಸತ್ತಮೇಲೆ ಒಟ್ಟಿಗೆ ಸೇರುತ್ತಾರೆ ಎಂಬುದು ಸುತರಾಂ ಅಸಂಗತವಾಗುತ್ತದೆ. ಅಲ್ಲದೆ ಜೊತೆಯಲ್ಲಿ ಸತ್ತವರಿಗೆ ಆತ್ಮಹತ್ಯಾದೋಷವು ಬೇರೆ ಬರುತ್ತದೆ; ಬೇರೆ ಯಾವ ಪ್ರಯೋಜನವೂ ಇಲ್ಲ. ಅಲ್ಲದೆ ಸತ್ತವರ ಜೊತೆಯಲ್ಲಿ ಸಾಯದೆ ಬದುಕಿದ್ದರೆ, ಅವರಿಗೆ ತರ್ಪಣ ಮೊದಲಾದುವುಗಳನ್ನು ಕೊಡುವುದರಿಂದ ಮಹೋಪಕಾರವನ್ನು ಮಾಡಲು

ಸತ್ತಳೆ ಕಾಮದೇವನ ಪರೋಕ್ಷದೊಳಾ ರತಿ ಪಾಂಡು ಸತ್ತೊಡಂ
ಸತ್ತಳೆ ಕುಂತಿ ಮತ್ತಮಭಿಮನ್ಯುಕುಮಾರಕನಂದು ಸತ್ತೊಡೇ
ನುತ್ತರೆ ಸತ್ತಳೇ ನೆಗಟ್ದ ಸಿಂಧುನೃಪಾಲಕನಂದು ಸತ್ತೊಡಂ
ಸತ್ತಳೆ ದುಶ್ಶಳಾವನಿತೆಯಿಂತಿವು ನೀವರಿದಂದವಲ್ಲವೇ ೨೦೪

ವ॥ ಅಂತುಮಲ್ಲದೆಯುಂ

ಆನಾಶ್ವಾಸಿಸಿದನಿತಱಿಂ
ಲೇನಾ ಚಂದ್ರಮನೆ ನಿನ್ನನಾಶ್ವಾಸಿಸಿದಂ
ತಾನೆಂದೊಡದೇನೆಂಬುದೊ
ಮಾನಿನಿ ತದ್ವಿಧರ ವಚನಮವಿತಥಮೆ ವಲಂ ೨೦೫

ವ॥ ಅದಱಿನನಿಂದ್ಯಮಪ್ಪ ನಿಜಚರಿತಮಂ ನಿಂದಿಸಲಾಗದೆಂದನೇಕ ಪುರಾಣಕಥಾ ಪ್ರಕಥನದೊಳಂ ಬಹುಪ್ರಕಾರ ಸಾಂತ್ವವಚನದೊಳಮೆಂತಾನುಮರಸಂ ಸಂತೈಸಿ

ವಿನಯದೊಳೆ ಮತ್ತಮಂದೊ
ಯ್ಯನೆ ನಿರ್ಝರವಾರಿಯಿಂ ನಿಜಾಂಜಲಿಯಿಂ ತಂ
ದನುವಿಸಿ ವದನಪ್ರಕ್ಷಾ
ಳನಮಂ ಮಾಡಿಸಿದನಂದು ಚಂದ್ರಾಪೀಡಂ ೨೦೬

ಸಾಧ್ಯವಾಗುತ್ತದೆ. ೨೦೪. ಮನ್ಮಥನು ಸತ್ತು ಅಗಲಿದನಂತರ ಅವನ ಹೆಂಡತಿಯಾದ ರತಿಯು ಸತ್ತಳೇನು ? ಪಾಂಡುಮಹಾರಾಜನು ಸತ್ತಾಗ ಕುಂತಿ ಸತ್ತಳೆ ? ಮತ್ತು ಅಭಿಮನ್ಯು ಸತ್ತಾಗ ಉತ್ತರೆಯು ಸತ್ತಳೆ ? ಸೈಂಧವನು ಸತ್ತಾಗ ದುಶ್ಶಳೆಯು ಸತ್ತಳೆ ? ಇವೆಲ್ಲವೂ ನಿಮಗೆ ತಿಳಿದಿರುವ ವಿಷಯವೇ ಅಲ್ಲವೆ ? ವ॥ ಅದಲ್ಲದೆ ೨೦೫. ನಾನು ಸಮಾಧಾನಪಡಿಸುವುದು ಏನು ಮಹಾ ದೊಡ್ಡ ವಿಚಾರ. ಆ ಚಂದ್ರನೇ ಬಂದು ನಿಮ್ಮನ್ನು ಸಮಾಧಾನಪಡಿಸಿದ್ದಾನೆ ಎಂದಮೇಲೆ ಅದರ ಅತಿಶಯವನ್ನು ಏನು ಹೇಳೋಣಮ್ಮ. ಅಂತಹವರ ಮಾತು ಖಂಡಿತವಾಗಿಯೂ ಸುಳ್ಳಾಗುವುದಿಲ್ಲ. ವ॥ ಅದರಿಂದ ತೆಗಳಿಕೆಗೆ ತಕ್ಕುದಲ್ಲದ ನಿನ್ನ ನಡೆವಳಿಕೆಯನ್ನು ತೆಗಳಬಾರದು ಎಂದು ಅನೇಕ ಪುರಾಣಕಥೆಗಳನ್ನು ಹೇಳುವುದರಿಂದಲೂ, ಅನೇಕ ಪ್ರಕಾರವಾದ ಸಮಾಧಾನದ ಮಾತುಗಳಿಂದಲೂ ಹೇಗೋ ಸಮಾಧಾನಪಡಿಸಿ ೨೦೬. ಮತ್ತು ಆಗ ವಿನಯದಿಂದ ಮೆಲ್ಲನೆ ಹೋಗಿ ಝರಿಯ ನೀರನ್ನು ತನ್ನ ಬೊಗಸೆಯಿಂದ ತಂದು ಚಂದ್ರಾಪೀಡನು ಅವಳಿಗೆ ಇಷ್ಟವಿಲ್ಲದಿದ್ದರೂ ಬಲಾತ್ಕಾರಮಾಡಿಯೇ ಮುಖವನ್ನು ತೊಳೆದುಕೊಳ್ಳುವಂತೆ ಮಾಡಿದನು.

ಅವಧರಿಸಿ ಮಹಾಶ್ವೇತಾ
ಪ್ರವೃತ್ತಿಯುಂ ಶೋಕಭಾರಮಂ ತಾಳ್ದಿದವೋಲ್
ರವಿಯುಂ ದಿವಸವ್ಯಾಪಾ
ರವೆಲ್ಲಮಂ ಪತ್ತುವಿಟ್ಟಧೋಮುಖನಾದಂ ೨೦೭

ವ॥ ಅನಂತರಂ ರವಿಬಿಂಬಮುಪರಾಂಭೋಧಿಗೆ ವಿಲಂಬಿಸುವುದುಂ

ಜಳಜಭವಾಂಡಂ ಜಂಬೂ
ಫಳರಸದಿಂ ತೀವಿತೆಂಬಿನಂ ಜಗಮಂ ಕೋ
ಕಿಳನಯನರುಚಿರುಚಿರ ಕ
ಣ್ಗೊಳಿಸಿರೆ ಪರ್ವಿದುದು ಸಾಂದ್ರ ಸಂಧ್ಯಾರಾಗಂ ೨೦೮

ವ॥ ಆ ಸಂಧ್ಯಾಸಮಯದೊಳ್

ಬಟಿಕೆ ಪದಮಂ ಕಮಂಡಲು
ಜಳದಿಂದಂ ಕರ್ಚಿ ತೀರ್ಚಿ ಸಂಧ್ಯಾನಿಯಮಮಂ
ಗಳನೆಯ್ದಿ ಭಸ್ಮಶಯ್ಯಾ
ತಳದೊಳ್ ಬಿಸುಸುಯ್ದು ಮೆಯ್ಯನಿಕ್ಕಿದಳಾಗಳ್ ೨೦೯

ವ॥ ಇತ್ತ ಕೃತಸಂಧ್ಯಾವಂದನಂ ನರೇಂದ್ರನಾತ್ಮೀಯ ಪ್ರಕಲ್ಪಿತ ಲತಾಪಲ್ಲವಶಯನದೊಳ್ ಕುಳ್ಳಿರ್ದು ಮನೋಭವವಿಜೃಂಭಿತಂಗಳಂ ಮನದೊಳ್ ಭಾವಿಸುತ್ತಂ ವಿಸ್ಮಯಾಕ್ಷಿಪ್ತಚಿತ್ತನಿಂತೆಂದಂ

೨೦೭. ಈ ಮಹಾಶ್ವೇತಾವೃತ್ತಾಂತವನ್ನು ಕೇಳಿ ತಿಳಿದು ಮಹತ್ತರವಾದ ದುಃಖವನ್ನು ಪಡೆದಂತೆ ಸೂರ್ಯನೂ, ಹಗಲಿನ ಕೆಲಸವನ್ನು (ಬೆಳಕು ಕೊಡುವ, ಸಂಚರಿಸುವ ಕೆಲಸವನ್ನು) ತೊರೆದು ಅಧೋಮುಖನಾದನು. (ಕೆಳಕ್ಕೆ ಇಳಿದನು, ಮುಖವನ್ನು ತಗ್ಗಿಸಿದನು) ವ॥ ಬಳಿಕ ಸೂರ್ಯಮಂಡಳವು ಪಶ್ಚಿಮಸಮುದ್ರಕ್ಕೆ ಇಳಿಯುತ್ತಿರಲಾಗಿ ೨೦೮. ಬ್ರಹ್ಮಾಂಡವು ನೇರಳೆಹಣ್ಣಿನ ರಸದಿಂದ ಲೇಪನಹೊಂದಿದಂತೆ ಕೋಕಿಲೆಯ ಕಣ್ಣಿನಂತೆ ಸುಂದರವಾದ ಕಾಂತಿಯುಳ್ಳ ದಟ್ಟವಾದ ಸಂಜೆಗೆಂಪು ಜಗತ್ತಿನಲ್ಲಿ ಹರಡಿತು. ವ॥ ಆ ಸಂಧ್ಯಾಕಾಲದಲ್ಲಿ ೨೦೯. ಬಳಿಕ ಕಮಂಡಲುವಿನ ನೀರಿನಿಂದ ಕಾಲುಗಳನ್ನು ತೊಳೆದುಕೊಂಡು, ಸಂಧ್ಯಾಕಾಲದಲ್ಲಿ ಮಾಡಬೇಕಾದ ವಿಧಿಗಳನ್ನೆಲ್ಲಾ ಮುಗಿಸಿಕೊಂಡು ಭಸ್ಮಶಯ್ಯೆಯಲ್ಲಿ ನಿಟ್ಟುಸಿರುಬಿಟ್ಟು ಕುಳಿತುಕೊಂಡಳು. ಟಿ॥ ಕಟ್ಟುನಿಟ್ಟಾದ ಪಾಶುಪತವ್ರತವನ್ನು ತಾಳಿರುವವರು ವಿಭೂತಿಯಿಂದ ಏರ್ಪಡಿಸಿರುವ ಹಾಸಿಗೆಯ ಮೇಲೆ ಮಲಗುತ್ತಾರೆ. ಅದಕ್ಕೆ "ಭಸ್ಮಶಯ್ಯೆ" ಎಂದು ಹೆಸರು. ವ॥ ಈ ಕಡೆ ಚಂದ್ರಾಪೀಡನು ಸಂಧ್ಯಾವಂದನೆಯನ್ನು ಮಾಡಿ ತಾನೆ ಬಳ್ಳಿಯ ಚಿಗುರಿನ ಹಾಸಿಗೆಯನ್ನು ಮಾಡಿಕೊಂಡು ಕುಳಿತುಕೊಂಡನು. ಅಲ್ಲಿ ಮನ್ಮಥನ ವಿಚಿತ್ರಚೇಷ್ಟೆಗಳನ್ನು ಮನಸ್ಸಿನಲ್ಲೇ ಆಲೋಚಿಸುತ್ತ ಆಶ್ಚರ್ಯದಿಂದ ಕೂಡಿದ ಮನಸ್ಸುಳ್ಳವನಾಗಿ ಹೀಗೆ

ತರಳಿಕೆಯೆಂಬಳ್ ನಿಮ್ಮಯ
ಪರಿಚಾರಿಕೆಯೆತ್ತವೋದಳೆಲ್ಲಿರ್ದಪಳೆಂ
ದರಸಂ ಬೆಸಗೊಳ್ವುದುಮಾ
ದರದೆ ಮಹಾಶ್ವೇತೆ ಪೇೞಲುದ್ಯತೆಯಾದಳ್ ೨೧೦

ವ॥ ಅದೆಂತೆನೆ

## ಮಹಾಶ್ವೇತೆಯ ವೃತ್ತಾಂತ

### ಸಮಾಪ್ತ

ಹೇಳಿದನು. ೨೧೦. "ನಿಮ್ಮ ಊಳಿಗದವಳಾದ ತರಳಿಕೆ ಎಂಬುವಳು ಎಲ್ಲಿಗೆ ಹೋಗಿದ್ದಾಳೆ ? ಎಲ್ಲಿದ್ದಾಳೆ ?" ಎಂದು ಚಂದ್ರಾಪೀಡನು ಕೇಳಲು ಮಹಾಶ್ವೇತೆಯು ಆದರದಿಂದ ಹೇಳಲುಪಕ್ರಮಿಸಿದಳು. ವ॥ ಅದು ಹೇಗೆಂದರೆ

## ಮಹಾಶ್ವೇತೆಯ ವೃತ್ತಾಂತ

### ಮುಗಿಯಿತು

## ೬. ಕಾದಂಬರಿಯ ಪ್ರಥಮ ಸಂದರ್ಶನ

ಮೊದಲೊಳ್ ನಿನಗಾಂ ಪೇೞ್ದಮೃ
ತದಿನುದಯಿಸಿದಪ್ಸರಾಂಗನಾನ್ವಯದೊಳ್ ಪು
ಟ್ಟಿದಳಲ್ಲಿ ಮದನಮದವತಿ
ಮದಿರೇಕ್ಷಣೆ ಮದಿರೆಯೆಂಬ ಕನ್ಯಾರತ್ನಂ ೧

ಆ ಕನ್ನೆಯ ಕೈವಿಡಿದಂ
ಸ್ವೀಕೃತ ಗಂಧರ್ವರಾಜ್ಯಮಹಿಮೋದಯನ
ಪ್ರಾಕೃತ ನಿಜವಿಭವಕೃತಾ
ರ್ಥೀಕೃತ ಬುಧಜನಮನೋರಥಂ ಚಿತ್ರರಥಂ ೨

ಆ ವಿಭುಗಂತಃಪುರಕಾಂ
ತಾವಿಭವಮದೆಂತುಮುಳ್ಳೊಡಂ ತನಗೆ ಮಹಾ
ದೇವಿವೆಸರೆಸೆಯೆ ಮದಿರಾ
ದೇವಿಯೆ ಪಟ್ಟಕ್ಕೆ ತಾನೆ ಮೊದಲೆನಿಸಿರ್ದಳ್ ೩

ಆ ದಂಪತಿಗಧಿಕಪ್ರೇ
ಮೋದಯಮೊದವಲ್ಕೆ ಪುಟ್ಟಿದಳ್ ಭುವನಜನಾ
ಹ್ಲಾದಂ ಜನಿಯಿಸುವಿನೆಗಂ
ಕಾದಂಬರಿಯೆಂಬ ಪೆಸರ ಕನ್ನಾರತ್ನಂ ೪

೧. ರಾಜಕುಮಾರ, ಅಮೃತದಿಂದ ಅಪ್ಸರಸ್ತ್ರೀಯರ ಒಂದು ವಂಶವು ಹುಟ್ಟಿತೆಂದು ನಿನಗೆ ಮೊದಲೇ ನಾನು ಹೇಳಿದೆನಷ್ಟೆ. ಅದರಲ್ಲಿ ಮನ್ಮಥನ ಹೆಮ್ಮೆಗೆ ಪಾತ್ರಳಾದ, ಜನರಿಗೆ ಉನ್ಮಾದವನ್ನುಂಟುಮಾಡುವಷ್ಟು ಸುಂದರವಾದ ಕಣ್ಣುಳ್ಳ ಮದಿರೆಯೆಂಬ ಕನ್ಯಾಮಣಿಯು ಹುಟ್ಟಿದಳು. ೨. ಆ ಕನ್ಯೆಯನ್ನು ಗಂಧರ್ವಲೋಕದ ರಾಜ್ಯಭಾರ ವನ್ನು ನಿರ್ವಹಿಸುವ, ಪ್ರಭಾವದ ಸಮೃದ್ಧಿಯಿಂದ ಕೂಡಿರುವ, ಮಿಗಿಲಾದ ತನ್ನ ಸಂಪತ್ತಿನಿಂದ ವಿದ್ವಾಂಸರ ಮನೋರಥವನ್ನು ಈಡೇರಿಸುತ್ತಿದ್ದ ಚಿತ್ರರಥನೆಂಬ ಗಂಧರ್ವ ರಾಜನು ಮದುವೆಯಾದನು, ೩. ಆ ಗಂಧರ್ವರಾಜನ ರಾಣೀವಾಸದಲ್ಲಿ ಬೇಕಾ ದಷ್ಟು ಜನ ರಾಣಿಯರಿದ್ದರು. ಹಾಗಿದ್ದರೂ "ಮಹಾರಾಣಿ" ಎಂಬ ಹೆಸರಿನಿಂದ ಶೋಭಿಸುವ ಮದಿರಾದೇವಿಯೇ ಪಟ್ಟದರಾಣಿಯಾಗಿದ್ದಳು. ೪. ಆ ದಂಪತಿಗಳಲ್ಲಿ ಅತ್ಯಧಿಕವಾದ ಪ್ರೀತಿಯು ಬೆಳೆಯುತ್ತಿರಲು ಲೋಕದ ಜನರಿಗೆ ಆನಂದವನ್ನುಂಟು

ಒಡನುಂಡೊಡನಿರ್ದೊಡವಳಿ
ದೊಡನಾಡಿಗಳಾಗಿ ನೃತ್ಯಗೀತಂ ಮೊದಲಾ
ಗೊಡನೊಡನೆ ಕಲ್ತು ಕಲೆಗಳ
ನೆಡೆವಿಡದಿರ್ವರ್ಗಮಾಯ್ತು ಪರಮಪ್ರೇಮಂ ೫

ವ॥ ಅನಂತರಂ ಶೈಶವಮಂ ಪತ್ತುವಿಟ್ಟಿರ್ಪುದುಮಾ ಕಾದಂಬರೀದೇವಿಯುಂ ಮದೀಯ ಹತವೃತ್ತಾಂತಮಂ ಕೇಳ್ದತ್ಯಂತಶೋಕಾಕ್ರಾಂತೆಯಾಗಿ

ಇರಲಿಂತಪ್ಪೊಂದು ಶೋಕಾಕುಲತೆಯೊಳೆ ಮಹಾಶ್ವೇತೆ ಮತ್ತೊರ್ವನಂ ತಾಂ
ನೆರೆದೇನಾನಿಂತು ಕನ್ಯಾವ್ರತದೊಳೆ ಕಳೆವೆಂ ಕಾಲಮಂ ತಂದೆಯಿಂ ತಾ
ನಿರದಾವಂಗೆನ್ನನೀಯಲ್ ಬಗೆದು ಮನದೊಳಂತುಜ್ಜುಗಂಗೆಯ್ವೊಡಂ ಚಿ
ಚ್ಚರಮೆನ್ನೀ ಪ್ರಾಣಮಂ ತಾಂ ಬಿಡದಿರೆನೆನುತಂ ನಿಶ್ಚಯಂಗೆಯ್ದಳಾಗಳ್ ೬

ವ॥ ಅಂತುಪಾರೂಢಯವ್ವನೆಯಪ್ಪ ಮಗಳ ನಿಶ್ಚಯಮಂ ಮದಿರಾಮಹಾದೇವಿಯುಮರಸು ಚಿತ್ರರಥನುಂ ಕರ್ಣಪರಂಪರೆಯಿಂ ಪರಿಜನದತ್ತಣಿಂ ಕೇಳ್ದು ಪಿರಿದು ಮಟಲ್ದು ಕ್ಷೀರೋದನೆಂಬ ಕಂಚುಕಿಯುಂ ಕರೆದೆನ್ನಲ್ಲಿಗಟ್ಟಿದೊಡಾತಂ ಬಂದು

ಮಾಡುವ ಕಾದಂಬರಿ ಎಂಬ ಕನ್ಯಾರತ್ನವು ಅವರಿಗೆ ಹುಟ್ಟಿದಳು. ೫. ನಾನೂ ಅವಳೂ ಬಾಲ್ಯದಿಂದ ಜೊತೆಯಲ್ಲಿ ಊಟಮಾಡುತ್ತಿದ್ದೆವು, ಜೊತೆಯಲ್ಲೇ ಇರುತ್ತಿದ್ದೆವು, ಜೊತೆಯಲ್ಲೇ ಬೆಳೆಯುತ್ತಿದ್ದೆವು, ಯಾವಾಗಲೂ ಒಡನಾಡಿಗಳಾಗಿರುತ್ತಿದ್ದೆವು, ನೃತ್ಯ ಗೀತ ಮೊದಲಾದ ಕಲೆಗಳನ್ನು ಜೊತೆಯಲ್ಲೇ ಕಲಿಯುತ್ತಿದ್ದೆವು. ಇದರಿಂದ ನಮ್ಮಿಬ್ಬರಿಗೂ ಅವಚ್ಛಿನ್ನವಾದ ಗಾಢಸ್ನೇಹವುಂಟಾಯಿತು. ವ॥ ಬಳಿಕ ಬಾಲ್ಯವು ಕಳೆಯಲಾಗಿ ಆ ಕಾದಂಬರಿಯು ನನ್ನ ಹಾಳುಕತೆಯನ್ನು ಕೇಳಿ ಬಹಳ ದುಃಖದಿಂದ ಪೀಡಿತೆಯಾಗಿ, ೬. 'ಮಹಾಶ್ವೇತೆಯು ಪುರುಷನ ಪ್ರಣಯಕ್ಕೆ ಬಿದ್ದು ಇಷ್ಟೊಂದು ದುಃಖದಿಂದ ಪೀಡಿತೆಯಾಗಿರಲಾಗಿ ನಾನೂ ಮದುವೆ ಮಾಡಿಕೊಳ್ಳದೆ ಬ್ರಹ್ಮಚಾರಿಣಿಯಾಗಿಯೇ ಕಾಲವನ್ನು ಕಳೆಯುತ್ತೇನೆ. ಇದಕ್ಕೆ ಅವಕಾಶಕೊಡದೆ ನನ್ನ ತಂದೆಯೇನಾದರೂ ನನ್ನನ್ನು ಯಾರಿಗಾದರೂ ಮದುವೆ ಮಾಡಿಕೊಡಲು ಯೋಚಿಸಿ ಪ್ರಯತ್ನಮಾಡಿದರೆ ಆಗ ನಾನು ಖಂಡಿತವಾಗಿಯೂ ಪ್ರಾಣ ಕಳೆದುಕೊಳ್ಳದೆ ಇರುವುದಿಲ್ಲ' ಎಂದು ಪ್ರತಿಜ್ಞೆಮಾಡಿದ್ದಾಳೆ. ವ॥ ಹೀಗೆ ಹರಯಕ್ಕೆ ಬಂದ ಮಗಳ ನಿಶ್ಚಯವನ್ನು ಮದಿರಾಮಹಾದೇವಿಯೂ ಚಿತ್ರರಥನೂ ಕರ್ಣಾಕರ್ಣಿಕೆಯಾಗಿ ಪರಿವಾರದ ಜನರಿಂದ ಕೇಳಿ ಬಹಳವಾಗಿ ದುಃಖಪಟ್ಟು ಕ್ಷೀರೋದನೆಂಬ ಕಂಚುಕಿಯನ್ನು

ತನ್ನ ಮಹಾವ್ಯತಿಕರದೊಳ್
ಮುನ್ನವೆ ಬೆಂದವರ್ಗೆ ಮತ್ತೆ ಕಾದಂಬರಿಯಿಂ
ದಂ ನೋವು ಬಂದುದದಱಿಂ
ದಿನ್ನನುವಿನೊಳಾನೆ ಶರಣಮಾ ವ್ಯತಿಕರದೊಳ್ ೭

ವ॥ ಎಂದು ಜನನೀ ಜನಕರಟ್ಟಿದರೆಂದು ನುಡಿಯೆ

ಗುರುಗಳ್ ತಾವೇನನೊಂದಂ ಬೆಸಸಿದರದನೇ ಕೊಳ್ವುದಿನ್ನೆನ್ನ ಜೀವಂ
ಬೆರಸಾನಿಂತಿರ್ಪುದಂ ತಾಂ ಬಯಸುವ ಬಗೆಯೆಂತೆಂದೊಡೆಂದಿಂತು ಕಾದಂ
ಬರಿಗಾದಂ ಬುದ್ಧಿವೇೞ್ದಟ್ಟಿದೆ ನಿರದಧಿಕಪ್ರೇಮದಿಂ ಸೌವಿದಲ್ಲಂ
ಬೆರಸತ್ತಲ್ ಪೋದಳಂತಾಗಳೆ ತರಳಿಕೆಯುಂ ನೀವುಮೆಯ್ತಂದಿರೀಗಳ್ ೮

ವ॥ ಎಂದು ಪೇೞ್ದಳನ್ನೆಗಮಿತ್ತ ಲಾಂಛನಚ್ಛಲದಿಂ ಶೋಕಾನಲದಗ್ಧಮಪ್ಪ ಮಹಾಶ್ವೇತಾಹೃದಯಮುಮಂ ವಿಡಂಬಿಸುವಂತೆಯುಂ ಮುನಿಕುಮಾರವಧ ಮಹಾಪಾತಕಮುಮಂ ತಾಳ್ದಿದಂತೆಯುಮಾಗಿ

ಇನಿಸಂ ಮುಚ್ಚಿರೆ ಕೃಷ್ಣಾ
ಜಿನಮವಿರಳ ಭಸ್ಮಧವಳಮುಗಜಾರಾಮಾ
ಸ್ತನಮಂಡಳವೊಪ್ಪಿದುದೆಂ
ಬಿನಮುದಯಿಸಿದುದು ಮೃಗಾಂಕಮಂಡಲಮಾಗಳ್ ೯

ಕರೆದು ನನ್ನ ಹತ್ತಿರಕ್ಕೆ ಕಳುಹಿಸಿದರು. ಆಗ ಅವನು ಬಂದು ೭. 'ಮಗಳೆ, ನಿನ್ನ ಒಂದು ಪ್ರಸಂಗದಿಂದ ಮೊದಲೆ ಮನಸ್ಸಿನಲ್ಲಿ ಬೇಗುದಿಗೊಳ್ಳುತ್ತಿರುವ ನಮಗೆ ಮತ್ತೆ ಈಗ ಕಾದಂಬರಿಯಿಂದ ವ್ಯಥೆಯು ಬಂದೊದಗಿದೆ. ಆದ್ದರಿಂದ ಇನ್ನು ಈ ವಿಷಯದಲ್ಲಿ ನೀನೇ ನಮಗೆ ದಾರಿ ತೋರಿಸಬೇಕು.' ವ॥ ಎಂದು ಕಾದಂಬರಿಯ ತಾಯಿ ತಂದೆಗಳು ಹೇಳಿಕಳುಹಿಸಿದ್ದಾರೆ ಎಂದು ಹೇಳಲಾಗಿ, ೮. "ಸಖಿ ಕಾದಂಬರಿ ನಾನು ಜೀವಸಹಿತವಾಗಿರಬೇಕೆಂಬುದನ್ನು ನೀನು ಇಷ್ಟಪಡುವುದಾದರೆ ತಾಯಿತಂದೆಗಳು ಹೇಳಿದಂತೆ ನೀನು ಕೇಳಬೇಕು" ಎಂದು ಕಾದಂಬರಿಗೆ ಅತ್ಯಧಿಕ ಪ್ರೀತಿಯಿಂದ ಸರಿಯಾಗಿ ಬುದ್ಧಿ ಹೇಳಿ ಬಾಯೆಂದು ಆ ಕಂಚುಕಿಯ ಜೊತೆಯಲ್ಲಿ ತರಳಿಕೆಯನ್ನು ಕಳುಹಿಸಿಕೊಟ್ಟೆನು. ಅವಳು ಆ ಕಡೆ ಪ್ರಮಾಣ ಮಾಡಿದಳು. ಈ ಕಡೆ ನೀವೂ ಈಗ ಬಂದಿರಿ. ವ॥ ಎಂದು ಹೇಳುತ್ತಿರುವಲ್ಲಿ ಈ ಕಡೆ ಚಂದ್ರಮಂಡಲವು ತನ್ನಲ್ಲಿರುವ ಮಚ್ಚೆಯ ರೂಪದಿಂದ ದುಃಖಾಗ್ನಿಯಿಂದ ಬೆಂದು ಕಪ್ಪಾದ ಮಹಾಶ್ವೇತಾಹೃದಯವನ್ನು ಅನುಕರಿಸುವಂತೆಯೂ, ಮುನಿಕುಮಾರನಾದ ಪುಂಡರೀಕನ ವಧೆಯಿಂದ ಉಂಟಾದ ಮಹಾಪಾತಕವನ್ನು ಧರಿಸಿರುವವನಂತೆಯೂ ಆಗಿ, ೯. ಸ್ವಲ್ಪಭಾಗವು ಕೃಷ್ಣಾಜಿನದಿಂದ ಮುಚ್ಚಿದ್ದು ಉಳಿದ ಭಾಗವು ದಟ್ಟವಾದ ಭಸ್ಮಲೇಪನದಿಂದ ಶುಭ್ರವಾಗಿರುವ ಪಾರ್ವತೀದೇವಿಯ ಎಡ ಮೊಲೆಯಂತೆ ಶೋಭಿಸುತ್ತ ಆಗ ಉದಯಿಸಿತು. (ಟಿ. ಅರ್ಧನಾರೀಶ್ವರನಾದ

ವ॥ ಅಂತು ನಿಖಿಲಲೋಕನಿದ್ರಾಮಂಗಲಕಲಶದಂತೆ ಕುಮುದಿನೀಬಾಂಧವಂ ಗಗನಾಂಗಣದೊಳೆಸೆಯೆ ಸುಪ್ತೆಯಾದ ಮಹಾಶ್ವೇತೆಯಂ ನೋಡಿ ಚಂದ್ರಾಪೀಡಂ ಪಲ್ಲವ ಶಯನತಲದೊಳ್ ಮೆಯ್ಯನಿಕ್ಕಿ ಬೀಡಂ ನೆನೆದು

ಈಯವಸರದೊಳ್ ವೈಶಂ
ಪಾಯನನುಂ ಪತ್ರಲೇಖೆಯುಂ ಭೂಪರುಮಾ
ನೀಯಂದದಿನಗಲಲ್ಕೆನಿ
ತಾಯಸಮಂ ಪಡುವರೆಂದು ಚಿಂತಿಸುತಿರ್ದಂ ೧೦

ವ॥ ಅಂತು ಚಿಂತಿಸುತಿರ್ದಿರುಳಂ ಕಳೆದು ಬೆಳಗಪ್ಪುದುಂ ಕೃತಪ್ರಾಭಾತಿಕ ನಿಯಮ ನಾಗೆ ಮಹಾಶ್ವೇತೆಯುಮಘಮರ್ಷಣ ನಿಯಮ ಜಪಂಗಳಂ ಮಾಡುತಿರ್ದಳನ್ನೆಗಮಿತ್ತ ಷೋಡಶ ವರ್ಷವಯಸ್ಕನುಂ ಉದಾತ್ತಾಕಾರನುಂ ವಿಭಕ್ತಮಧ್ಯಾಕಾರನುಂ ವಿಪುಲ ವಕ್ಷಸ್ಥಲನುಂ ದೀರ್ಘಾಯುತ ಬಾಹುಯುಗಳನುಂ ಪರ್ಯುಷಿತ ಚಂದನಾಂಗರಾಗ ಧೂಸರೋರುದಂಡನುಂ ಕುಂಕುಮಾಂಗರಾಗಪಿಂಜರರೂಪನುಂ ಚಾಮೀಕರ ಶೃಂಖಲಾಕಲಾಪನುಂ ನಿಬಿಡ ನಿಯಮಿತ ಕಕ್ಷಬಂಧಾತಿರಿಕ್ತಪ್ರೇಂಖದ್ದುಕೂಲಪಲ್ಲವನುಂ ವಾಮಪ್ರಕೋಷ್ಠ ಡೋಲಾಯಮಾನ ಮಾಣಿಕ್ಯ

ಪರಮೇಶ್ವರನ ಎಡಭಾಗದಲ್ಲಿರುವ ಪಾರ್ವತಿಯ ಬಲಮೊಲೆಯು ಪರಮೇಶ್ವರನಲ್ಲಿ ಸೇರಿಹೋಗಿರುವುದರಿಂದ ಎಡಮೊಲೆಯನ್ನು ಮಾತ್ರ ಉಪಮೇಯವಾಗಿ ಮಾಡಿದ್ದಾನೆ. ಕಳಂಕವಿಶಿಷ್ಟನಾದ ಚಂದ್ರನಲ್ಲಿ ಕಪ್ಪು ಮತ್ತು ಬಿಳಿಯ ಬಣ್ಣವಿರುವುದರಿಂದ ಈ ಹೋಲಿಕೆ ಬಹಳ ಚೆನ್ನಾಗಿ ಒಪ್ಪುತ್ತದೆ. ವ॥ ಹಾಗೆ ಸಮಸ್ತ ಜಗತ್ತಿಗೂ ಮಲಗು ವಾಗ ಇಡುವ ಮಂಗಳಕಳಶದಂತೆ ಚಂದ್ರನು ಆಕಾಶದಲ್ಲಿ ಶೋಭಿಸುತ್ತಿರಲು, ಮಹಾ ಶ್ವೇತೆಯು ನಿದ್ದೆಹೋದುದನ್ನು ಗಮನಿಸಿ ಚಂದ್ರಪೀಡನು ಚಿಗುರಿನ ಹಾಸಿಗೆಯಲ್ಲಿ ಮಲಗಿ ಶಿಬಿರವನ್ನು ನೆನೆಸಿಕೊಂಡು, ೧೦. "ಈ ವೇಳೆಯಲ್ಲಿ ವೈಶಂಪಾಯನನೂ ಪತ್ರ ಲೇಖೆಯೂ ರಾಜರುಗಳೂ ನಾನೂ ಹೀಗೆ ಅಗಲಿ ಬಂದುದಕ್ಕೆ ಎಷ್ಟು ಗಾಬರಿಪಡುತ್ತಿರು ವರೋ" ಎಂದು ಚಿಂತಿಸುತ್ತಿದ್ದನು. ವ॥ ಹಾಗೆ ಚಿಂತಿಸುತ್ತಲೇ ರಾತ್ರಿಯನ್ನು ಕಳೆ ದನು. ಬೆಳಗಾಗಲು ಪ್ರಾತರ್ವಿಧಿಗಳನ್ನು ನೆರವೇರಿಸಿದನು. ಮಹಾಶ್ವೇತೆಯೂ ಎದ್ದು ಅಘಮರ್ಷಣ ಮಂತ್ರಗಳನ್ನು ಜಪಿಸುತ್ತಿದ್ದಳು. ಅಷ್ಟರಲ್ಲಿ ಈಕಡೆ ಹದಿನಾರು ವರ್ಷದ ಹರೆಯದ ಭವ್ಯವಾದ ಆಕಾರವುಳ್ಳ, ತೆಳುವಾದ ಸೊಂಟವುಳ್ಳ, ಪರಿಪುಷ್ಟವಾದ ಎದೆ ಯುಳ್ಳ, ನೀಳವಾದ ತೋಳುಗಳುಳ್ಳ, ಹಿಂದಿನ ದಿನ ಲೇಪಿಸಿಕೊಂಡಿದ್ದರಿಂದ ಒಣಗಿ ಹೋಗಿದ್ದ ಗಂಧದಲೇಪನದಿಂದ ನಸು ಬಿಳುಪಾಗಿರುವ ತೊಡೆಗಳುಳ್ಳ, ಕುಂಕುಮದ ಲೇಪನದಿಂದ ಹೊಂಬಣ್ಣವಾದ ಶರೀರವುಳ್ಳ, ಚಿನ್ನದ ಉಡಿದಾರದ ಸರಪಳಿಯನ್ನು ಕಟ್ಟಿಕೊಂಡಿರುವ, ಗಟ್ಟಿಯಾಗಿ ಸೊಂಟಕ್ಕೆ ಕಟ್ಟಿಕೊಂಡು ಇಳಿಬಿದ್ದಿರುವ ಗಾಳಿಯಿಂದ

ವಲಯನುಂ ಕರ್ಣಾಭರಣ ಏಕೀರ್ಯವಾಣಕಿರಣೇಂದ್ರಚಾಪಪ್ರಭಾಜಾಲನುಂ ಅನವರತ ತಾಂಬೂಲಬದ್ಧರಾಗಾನುಕಾರಿ ಬಾಧುರಾಧರನುಂ ದೀರ್ಘಾಧವಳಲೋಚನನುಂ ಕನಕಪಟ್ಟಗ್ರಥಿತ ಪೃಥುಲ ಲಲಾಟಪಟ್ಟನುಮಳಿಕುಲನೀಲಕುಟಿಲಕುಂತಳನುಂ ಅಗ್ರಾಮ್ಯಾಕೃತಿಯುಂ ರಾಜ ಕುಲಸೇವನಾತಿಚತುರನುಮಪ್ಪ ಕೇಯೂರಕನೆಂಬ ಗಂಧರ್ವಕುಮಾರಂಬೆರಸು ತರಳಿಕೆ ಮಹಾ ಶ್ವೇತೆಯಲ್ಲಿಗೆ ಬಂದೀರ್ವರುಂ ದೂರಾವನತೋತ್ತಮಾಂಗರಾಗಿ ಪೊಡಮಟ್ಟು ಕುಳ್ಳಿರ್ದು

ನಾಡಾಡಿಯಲ್ತು ರೂಪಿನ
ಗಾಡಿಯಿದೆಲ್ಲಿರ್ದು ಬಂದುದೆನುತಂ ಚಂದ್ರಾ
ಪೀಡನತಿವಿಸ್ಮಯದಿಂ
ನೀಡುಂ ನೋಡುತ್ತಮಿರ್ದನಾ ಕೇಯೂರಂ ೧೧

ವ॥ ಆಗಳ್ ಮಹಾಶ್ವೇತೆಯುಂ ನಿರ್ವರ್ತಿತಾನುಷ್ಠಿತೆಯಾಗಿ ತರಳಿಕೆಯ ಮೊಗಮಂ ನೋಡಿ

ನುಡಿದಾನಟ್ಟಿದುದನೊಡಂ
ಬಡಿಸಿದೊ ಮತ್ಸಖಿಯನೆಂದೊಡೀತಂಗೀಗಳ್
ನುಡಿ ಪೋಗು ನೀನೆನುತ್ತೆ
ನ್ನೊಡನಟ್ಟಿದಳಲ್ತೆ ತನ್ನ ವೀಣಾಧರನಂ ೧೨

ಅಲುಗಾಡುತ್ತಿರುವ ನವುರಾದ ರೇಷ್ಮೆಯ ನಡುಕಟ್ಟುಳ್ಳ, ಎಡಮುಣಿಕಟ್ಟಿನಲ್ಲಿ ಸಡಿಲವಾಗಿ ಜೋಲಾಡುತ್ತಿರುವ ಮಾಣಿಕ್ಯದ ಬಳೆಯುಳ್ಳ, ಕಿವಿಯ ಕಡುಕುಗಳಿಂದ ಹೊರಸೂಸು ತ್ತಿರುವ ಕಾಂತಿಗಳಿಂದ ಕಾಮನಬಿಲ್ಲಿನ ಪ್ರಭೆಯ ಸಮೂಹದಿಂದ ಕೂಡಿಕೊಂಡಿರುವವ ನಂತಿರುವ, ಪದೇಪದೇ ತಾಂಭೂಲಚರ್ವಣದಿಂದ ಕೆಂಬಣ್ಣವನ್ನು ತಾಳಿರುವ ಸುಂದರ ವಾದ ತುಟಿಯುಳ್ಳ, ವಿಶಾಲವಾಗಿಯೂ ಶುಭ್ರವಾಗಿಯೂ ಇರುವ ಕಣ್ಣುಳ್ಳ, ಚಿನ್ನದ ತಗಡಿನಂತಿರುವ ವಿಶಾಲವಾದ ಹಣೆಯುಳ್ಳ, ದುಂಬಿಗಳ ತಂಡದಂತೆ ಕಪ್ಪಾದ ಕೊಂಕು ಕೂದಲುಳ್ಳ, ನಾಗರಿಕನಂದದ ಆಕಾರವುಳ್ಳ, ಅರಮನೆಯ ಊಳಿಗದಲ್ಲಿ ನುರಿತಿರುವ ಕೇಯೂರಕನೆಂಬ ಗಂಧರ್ವತರುಣನೊಂದಿಗೆ ಕೂಡಿಕೊಂಡು ತರಳಿಕೆಯು ಮಹಾಶ್ವೇ ತೆಯ ಸಮೀಪಕ್ಕೆ ಬಂದಳು. ಇಬ್ಬರೂ ದೂರದಲ್ಲೆ ತಲೆಬಾಗಿ ನಮಸ್ಕರಿಸಿ ಕುಳಿತು ಕೊಂಡರು. ೧೧. 'ಈ ರೂಪದ ಸೊಬಗು ಸಾಮಾನ್ಯವಾದುದಲ್ಲ. ಇವನು ಎಲ್ಲಿಂದ ಬಂದನು ?' ಎಂದು ಕೇಯೂರಕನು ಚಂದ್ರಾಪೀಡನನ್ನು ಬಹಳ ಹೊತ್ತು ನೋಡುತ್ತಾ ಇದ್ದನು. ವ॥ ಆಗ ಮಹಾಶ್ವೇತೆಯು ಅನುಷ್ಠಾನಗಳನ್ನು ಮುಗಿಸಿ ತರಳಿಕೆಯ ಮುಖ ವನ್ನು ನೋಡಿ, ೧೨. 'ನಾನು ಹೇಳಿಕಳುಹಿಸಿದ ವಿಷಯವನ್ನು ನನ್ನ ಗೆಳತಿಗೆ ಹೇಳಿ ಒಪ್ಪಿಸಿದೆಯಾ ?' ಎಂದು ತರಳಿಕೆಯನ್ನು ಕೇಳಿದಳು. ಅದಕ್ಕೆ ಅವಳು "ಅಮ್ಮ ಕಾದಂ ಬರಿಯು ತನ್ನ ಉತ್ತರವನ್ನು ಹೋಗಿ ಹೇಳಿಬಾ ಎಂದು ನನ್ನ ಜೊತೆಯಲ್ಲಿ ತನ್ನ

ವ॥ ಎಂಬುದುಮಾತನಂ ಬೆಸಗೊಳೆ

ಮನಮಂ ನೋಡಲಿದೇಕೆ ತಮ್ಮ ಮನಮಂ ತಾಂ ನೋಡಲೇನಾಂ ತಪೋ
ವನದೊಳ್ ಕೋಟಲೆಗೊಂಡು ದುಃಖದೆ ತಪಂಗೆಯ್ವುತ್ತಿರಲ್ ಮತ್ತೆಯುಂ
ಮನದೊಳ್ ತಾಂ ಸುಖದಿಂದಮಿರ್ಪಳಿವಳೆಂಬುದ್ವೇಗದಿಂದಕ್ಕನಿಂ
ತಿನಿತೊಂದಂ ನುಡಿದಟ್ಟಿದಳ್ ಪಿರಿದುಮಂತೇನಟ್ಟಲೇಂ ತಕ್ಕುದೋ ೧೩

ವ॥ ಎಂದಿವು ಮೊದಲಾಗಿ ಕಾದಂಬರಿ ನುಡಿದ ನುಡಿಗಳಂ ಕೇಯೂರಕಂ ಬಿನ್ನವಿಸ
ಲವಂ ಕೇಳ್ದು ತನ್ನೊಳೆ ತಾನೆ ಭಾವಿಸಿ

ಬಂದಾನೆ ಪೇಳ್ದಪೆಂ ನಯ
ದಿಂದಲ್ಲಿಗೆ ತಕ್ಕುದೆಲ್ಲಮಂ ಮುನ್ನೀಂ ಪೋ
ಗೆಂದು ಕಳುಪಲ್ಕೆ ಪೋದಂ
ಮುಂದಾ ಕೇಯೂರಕಂ ಸುವಿಲುಳಿತಹಾರಂ ೧೪

ವ॥ ಅಂತಾತಂ ಪೋಗೆ ಚಂದ್ರಾಪೀಡನನಿಂತೆಂದಳ್

ಇದೆ ಸಾರಿರ್ಪುದು ರಾಜಧಾನಿ ಪಿರಿದುಂ ಚಿತ್ರಾವಹಂ ಬಂದು ನೋ
ಟ್ಪುದು ನೀನೆನ್ನೊಡಸಂದು ಮತ್ಸಖಿಗಮೆಂತುಂ ಬುದ್ಧಿವೇಟಲ್ಕೆವೇ
ಟ್ಪುದು ಮತ್ಪ್ರಾಣಸಮಾನೆಯಾಕೆ ನಿಜದಿಂದಸ್ವಸ್ಥೆ ಗಂಧರ್ವಲೋ
ಕದೊಳಿಂದಕ್ಕೆ ಭವದ್ವಿಲೋಕನಸುಖಂ ಭೂಪಾಲವಿದ್ಯಾಧರಾ ೧೫

ವೀಣಾವಾದಕನಾದ ಈ ಕೇಯೂರಕನನ್ನು ಕಳುಹಿಸಿದ್ದಾಳೆ.” ವ॥ ಎಂದು ಹೇಳಲಾಗಿ ಮಹಾಶ್ವೇತೆಯು ಅವನನ್ನು ಕೇಳಿದಳು. ೧೩. ಅಕ್ಕನು ನನ್ನ ಮನಸ್ಸನ್ನು ಪರೀಕ್ಷಿಸು ವುದಕ್ಕಾಗಿ ಹೀಗೆ ಹೇಳಿಕಳುಹಿಸಿರಬೇಕು. ಅವಳ ಮನಸ್ಸೂ ನನ್ನ ಮನಸ್ಸೂ ಒಂದೇ. ಆದ್ದರಿಂದ ತನ್ನ ಮನಸ್ಸನ್ನು ತಾನೇ ಪರೀಕ್ಷಿಸಿಕೊಳ್ಳುವುದೇತಕ್ಕೆ ? ಅಥವಾ ನಾನು ತಪೋವನದಲ್ಲಿ ದುಃಖದಿಂದ ಕೋಟಲೆಗೊಂಡು ತಪಸ್ಸು ಮಾಡುತ್ತಿರುವಾಗ ಇವಳು ಮನಸ್ಸಿನಲ್ಲಿ ಸುಖವಾಗಿದ್ದಾಳಲ್ಲ ಎಂಬ ಒಂದು ಮನಸ್ಸಿನ ದುಗುಡದಿಂದ ಹೀಗೆ ಹೇಳಿ ಕಳುಹಿಸಿರಬೇಕು. ಸುಮ್ಮನೆ ಹೀಗೆ ಹೇಳಿಕಳುಹಿಸುವುದು ಸರಿಯೆ. (ಟಿ. ಮನೆಯೊಳ್ ಎಂದು ಮೂಲಾನುಸಾರವಾದ ಪಾಠವಿರಬೇಕು.) ವ॥ ಇವೇ ಮೊದಲಾದ ಕಾದಂಬರಿ ಹೇಳಿದ ಮಾತುಗಳನ್ನು ಕೇಯೂರಕನು ಅರಿಕೆಮಾಡಲಾಗಿ ಕೇಳಿ ತನ್ನಲ್ಲಿ ತಾನು ಆಲೋಚಿಸಿ, ೧೪. “ನಾನೇ ಅಲ್ಲಿಗೆ ಬಂದು ಹೇಳಬೇಕಾದುದನ್ನೆಲ್ಲ ಉಪಾಯದಿಂದ ಹೇಳುತ್ತೇನೆ. ಮುಂದೆ ನೀನು ಹೋಗುತ್ತಿರು” ಎಂದು ಕಳುಹಿಸಲಾಗಿ ಅಳ್ಳಾಡುತ್ತಿರುವ ಹಾರವುಳ್ಳ ಕೇಯೂರಕನು ಮುಂದೆ ಪ್ರಯಾಣ ಮಾಡಿದನು. ವ॥ ಹಾಗೆ ಅವನು ಪ್ರಯಾಣ ಮಾಡಲಾಗಿ ಮಹಾಶ್ವೇತೆಯು ಚಂದ್ರಾಪೀಡನನ್ನು ಕುರಿತು ಹೀಗೆ ಹೇಳಿದಳು. ೧೫. “ರಾಜೇಂದ್ರ, ಚಿತ್ರರಥನ ರಾಜಧಾನಿಯಾದ ಹೇಮಕೂಟವು ಸಮೀಪದಲ್ಲೇ ಇದೆ. ಅದು ಬಹಳ ಅದ್ಭುತವಾಗಿದೆ. ನೀನು ನನ್ನ ಜೊತೆಯಲ್ಲಿ ಬಂದು ಅದನ್ನು ನೋಡಬೇಕು.

ವ॥ ಆದಲ್ಲದೆಯುಂ ಮದೀಯ ಪ್ರಾರ್ಥನೆಯಂ ನಿರರ್ಥಕಂ ಮಾಡದಿಂದು ಬಂದಲ್ಲಿ ವಿಶ್ರಮಿಸಿ ನಾಳೆ ಬೀಡಿಂಗೆ ಬಿಜಯಂಗೆಯ್ವುದೆಂದು ಮತ್ತಮಿಂತೆಂದಳ್

ನಿನ್ನನಕಾರಣಬಾಂಧವ
ನಂ ನೋಡಿಯೆ ಶೋಕವಾಱಿದುದು ಸುಜನರ ಲೋ
ಕೋನ್ನತರ ಪರಹಿತರ ನಿ
ಮ್ಮನ್ನರ ಬರವಾರ್ಗೆ ಸುಖಮನುತ್ಪಾದಿಸದೋ ೧೬

ವ॥ ಎಂದು ನುಡಿದೊಡೆ

ಇನಿತಂ ಪ್ರಾರ್ಥಿಸಲೇಂ ನೀ
ನಿನಿತೆಸಗುವುದೆಂದು ಬೆಸಸುವುದು ಸಾಲ್ಗುಂ ನೀ
ಮೆನಗೆಂದು ವಿನಯದೊಳ್ ಕಾ
ಮಿನಿ ಪಿಂತನೆ ನಡೆದನಂದು ಚಂದ್ರಾಪೀಡಂ ೧೭

ವ॥ ಅಂತು ಬರುತ್ತಂ ಹೇಮಕೂಟಮನೆಯ್ದಿ ವಿಚಿತ್ರಮೆನಿಸಿದ ಚಿತ್ರರಥರಾಜಧಾನಿಯಂ ಪೊಕ್ಕು ಸಪ್ತಕಕ್ಷ್ಯಾಂತರಂಗಳಂ ಕಾಂಚನಮಯ ತೋರಣಂಗಳಂ ನುಸುಳ್ದು ಕನ್ಯಾಂತಃಪುರದ್ವಾರಮನೆಯ್ದೆವರ್ಪಾಗಳ್

ನನ್ನ ಗೆಳತಿಗೆ ಹೇಗಾದರೂ ಬುದ್ಧಿ ಹೇಳಬೇಕು. ಅವಳು ನನ್ನ ಪ್ರಾಣಸಮಾನಳು, ನಿಜವಾಗಿಯೂ ಅಸ್ವಸ್ಥಚಿತ್ತಳಾಗಿದ್ದಾಳೆ, ಗಂಧರ್ವಲೋಕವು ಇಂದು ನಿನ್ನ ದರ್ಶನ ಸುಖವನ್ನು ಅನುಭವಿಸಲಿ. ವ॥ ಅದಲ್ಲದೆ ನನ್ನ ಪ್ರಾರ್ಥನೆಯನ್ನು ವ್ಯರ್ಥಗೊಳಿಸದೆ ಅಲ್ಲಿಗೆ ಬಂದು ವಿಶ್ರಮಿಸಿಕೊಂಡು ನಾಳೆ ನಿಮ್ಮ ಬಿಡಾರಕ್ಕೆ ದಯಮಾಡಿಸಬಹುದೆಂದು" ಹೇಳಿ ಮತ್ತೆ ಹೀಗೆ ಹೇಳಿದಳು. ೧೬. ಯಾವ ಗೊತ್ತಾದ ನಂಟುತನವಿಲ್ಲದಿದ್ದರೂ ಈಗ ನೀನು ನನಗೆ ಆಪ್ತಬಂಧುವೆನಿಸಿರುವೆ. ಇಂತಹ ನಿನ್ನನ್ನು ನೋಡಿದ ಮಾತ್ರದಿಂದಲೇ ನನ್ನ ಮನಸ್ಸಿನ ಅಳಲು ಬಹುಮಟ್ಟಿಗೆ ನಿವಾರಣೆಯಾಗಿದೆ. ಸತ್ಪುರುಷರಾದ, ಲೋಕೋತ್ತರರಾದ, ಉದಾತ್ತ ಸ್ವಭಾವದ ಪರೋಪಕಾರಿಗಳಾದ ನಿಮ್ಮಂತಹವರ ಆಗಮನ ಯಾರಿಗೆ ತಾನೆ ಸುಖವನ್ನುಂಟುಮಾಡುವುದಿಲ್ಲ ? ವ॥ ಎಂದು ಹೇಳಲಾಗಿ, ೧೭. "ನೀವು ನನಗೆ ಇಷ್ಟುಮಟ್ಟಿಗೆ ಬೇಡಿಕೊಳ್ಳುವುದೇತಕ್ಕೆ ? 'ನೀನು ಹೀಗೆ ಮಾಡು' ಎಂದು ಅಪ್ಪಣೆ ಮಾಡಿದರೆ ಸಾಕು" ಎಂದು ವಿನಯದಿಂದ ಹೇಳಿ ಚಂದ್ರಾಪೀಡನು ಆ ಮಹಾಶ್ವೇತೆಯನ್ನು ಹಿಂಬಾಲಿಸಿ ನಡೆದನು. ವ॥ ಹಾಗೆ ಬರುತ್ತ ಹೇಮಕೂಟವನ್ನು ಸೇರಿ, ಚಿತ್ರರಥನ ಆಶ್ಚರ್ಯಕರವಾದ ರಾಜಧಾನಿಯನ್ನು ಹೊಕ್ಕು ಚಿನ್ನದ ಬಾಗಿಲು

ಪರಿತಂದು ಮಹಾಶ್ವೇತಾ
ನಿರೀಕ್ಷಣೋತ್ಸುಕದೊಳೆಮಗೆ ತಮಗೆನುತಂ ತ
ಚ್ಚರಣ ಸರಸಿರುಹಯುಗದೊಳ್
ಸರಭಸಮಿದಿರೆಱಗಿದರ್ ಪ್ರತೀಹಾರಕಿಯರ್ ೧೮

ವ॥ ಆಗಳರಸನುಂ ಪ್ರತೀಹಾರಿಕಾಜನೋಪದಿಶ್ಯಮಾನಮಾರ್ಗನಾಗಿ ಪೊಕ್ಕು ನೋಟ್ಪನ್ನೆಗಮಲ್ಲಿ

ಇದು ನಾರೀಮಯಮಪ್ಪ ಲೋಕಮಿದು ಬೇಱೊಂದಂಗನಾದ್ವೀಪಮಿಂ
ತಿದು ನಿಷ್ಪೂರುಷಜೀವಲೋಕಮಿದು ಸರ್ಗಕ್ಕೆಂದು ಪದ್ಮೋದ್ಭವಂ
ಸುದತೀರತ್ನಸಮೂಹಮಂ ಪದಪಿನಿಂ ಬೈಚಿಟ್ಟ ಭಂಡಾರಮ
ಪ್ಪುದೆನಲ್ ಸಂದಣಿಸಿರ್ದ ಸುಂದರಿಯರಂ ಕಂಡಂ ನರೇಂದ್ರಾತ್ಮಜಂ ೧೯

ಭುವನಾಂತರಮಂ ಸಿಂಪಿಸು
ವವೊಲಾಶಾವನಿತೆಯರುಮನೋಲಾಡಿಸುವಂ
ತೆವೊಲೆಸೆದರಂಗನೆಯರು
ಣ್ಮುವ ನಿಜಲಾವಣ್ಯರಸದ ಪೆರ್ಪೊನಲಿಂದಂ ೨೦

ವ॥ ಅಂತು ವದನದ್ಯುತಿಯಿನಿಂದುಬಿಂಬವೃಷ್ಟಿ ಸುರಿವಂತೆಯುಂ ಅಪಾಂಗ ವಿಕ್ಷೇಪಂಗಳಿಂ ಕುವಲಯವನ ವಿಕಾಸಮಾದಂತೆಯುಂ ಕಪೋಲತಲಂಗಳ ಬೆಳಗುಗಳಿಂ ಮಣಿ

ಗಳುಳ್ಳ ಏಳು ತೊಟ್ಟಿಗಳನ್ನು ದಾಟಿ ಕನ್ನೆವಾಡದ ಬಾಗಿಲಿಗೆ ಬರಲಾಗಿ ೧೮. ಬಾಗಿಲು ಕಾಯುವ ಹೆಂಗಸರು ಮಹಾಶ್ವೇತೆಯನ್ನು ನೋಡಬೇಕೆಂಬ ಉತ್ಸಾಹದಿಂದ ಬಂದು, ನಾನು ಮುಂದು ತಾನು ಮುಂದು ಎಂದು ಅವಳ ಪಾದಕಮಲದಲ್ಲಿ ಬೇಗಬೇಗನೆ ನಮಸ್ಕರಿಸಿದರು. ವ॥ ಆಗ ಚಂದ್ರಾಪೀಡನೂ ಬಾಗಿಲುಕಾಯುವವಳಿಂದ ತೋರಿಸಲ್ಪಡುತ್ತಿರುವ ದಾರಿಯುಳ್ಳವನಾಗಿ ಹೊಕ್ಕು ನೋಡುತ್ತಿರುವಲ್ಲಿ ೧೯. ಇದು ಬರೀ ಹೆಂಗಸರಿಂದಲೇ ತುಂಬಿಕೊಂಡಿರುವ ಬೇರೆ ಲೋಕವೆಂಬಂತೆಯೂ, ಇದು ಕೇವಲ ಹೆಂಗಸರೇ ವಾಸಿಸುವ ಬೇರೊಂದು ನಡುಗಡ್ಡೆ ಎಂಬಂತೆಯೂ, ಇದು ಗಂಡಸರೇ ಇಲ್ಲದ ಪ್ರತ್ಯೇಕ ಜಗತ್ತು ಎಂಬಂತೆಯೂ, ಬ್ರಹ್ಮನು ಮುಂದಿನ ಅನೇಕ ಸೃಷ್ಟಿಗಳಿಗೆ ಬೇಕಾಗುವುದೆಂದು ಸುಂದರಿಯರೆಂಬ ರತ್ನಗಳನ್ನು ಆಸಕ್ತಿಯಿಂದ ಮೀಸಲಾಗಿ ಮುಚ್ಚಿಟ್ಟಿರುವ ಭಂಡಾರವೆಂಬಂತೆಯೂ ಇರುವ ಹೆಂಗಸರ ಗುಂಪಿನಿಂದ ನಿಬಿಡವಾಗಿದ್ದ ಕನ್ನೆವಾಡವನ್ನು ಚಂದ್ರಾಪೀಡನು ನೋಡಿದನು. ೨೦. ಹೊರಚೆಲ್ಲುತ್ತಿರುವ ಸೌಂದರ್ಯರಸದ ಮಹಾಪ್ರವಾಹದಿಂದ ಪ್ರಪಂಚವನ್ನೆಲ್ಲ ತೋಯಿಸುವಂತೆಯೂ, ದಿಕ್ಕುಗಳೆಂಬ ವನಿತೆಯರನ್ನು ಜಳಕವಾಡಿಸುವಂತೆಯೂ ಇದ್ದ ರಮಣಿಯರು ಅಲ್ಲಿ ಶೋಭಿಸುತ್ತಿದ್ದರು. ವ॥ ಹಾಗೆಯೆ ಮುಖಗಳ ಕಾಂತಿಯಿಂದ ಚಂದ್ರಮಂಡಲಗಳ ಮಳೆಯು ಸುರಿಯುತ್ತಿರುವಂತೆಯೂ,

ದರ್ಪಣಂಗಳ್ ಪೊಳೆವಂತೆಯುಂ ಭ್ರೂಲತಾವಿಭ್ರಮಂಗಳಿಂ ಕಾಮಕಾರ್ಮುಕವಿಸರಂ ಪಸರಿಸಿದಂತೆಯುಂ ಕೇಶಕಲಾಪಾಂಧಕಾರದಿಂ ಕಾರಿರುಳ್ ಕವಿದಂತೆಯುಂ ಸುರಭಿನಿಶ್ವಾಸಂಗಳಿಂ ಮಲಯಮಾರುತಂ ತೀಡಿದಂತೆಯುಂ ಮುಗುಳ್ನಗೆಯ ಬೆಳಗುಗಳಿಂ ವಸಂತಸಮಯಮಾದಂತೆಯುಂ ಕರತಲರಾಗದಿಂ ಕೆಂದಾವರೆಗಳಲರ್ದಂತೆಯುಂ ಕರರುಹಕಿರಣಂಗಳಿಂ ಕುಸುಮಾಯುಧಶರಶತಂಗಳ್ ಸುರಿವಂತೆಯುಮಾದುದಲ್ಲದೆಯುಂ

ಮಣಿಮಾಲಾರಂಜಿತ ಭೂ
ಷಣರುಚಿ ರುಚಿರೇಂದ್ರಚಾಪಲತೆಗಳ್ ಗಗನಾಂ
ಗಣದೊಳ್ ಪೊಳೆಯಲ್ ಸುತ್ತುಂ
ಕುಣಿವುವು ನಲಿದಾಡಿ ಗೃಹಮಯೂರನಿಕಾಯಂ ೨೧

ಕಡೆಗಣ್ ಕರ್ಣಾವತಂಸಂ ಕರತಲರುಚಿ ಲೀಲಾರವಿಂದಂ ಕುಚಂ ಕ
ನ್ನಡಿ ಪಾದಾಂಭೋಜರಾಗಂ ಮಿಸುಪಲತೆಗೆ ಮಂದಸ್ಮಿತಂ ಚಂದನಂ ಮೆ
ಲ್ನುಡಿ ವೀಣಾನಾದಮಂಗಪ್ರಭೆ ಪೊಸದುಗುಲಂ ಪಕ್ವಬಿಂಬೋಷ್ಠರಾಗಂ
ಕಡುಚೆಲ್ವಾದಂಗರಾಗಂ ಚರಣನಖಮಯೂಖಾಳಿ ಪುಷ್ಪೋಪಹಾರಂ ೨೨

ಕಡೆಗಣ್ಣ ನೋಟದಿಂದ ಕನ್ನೈದಿಲೆಗಳ ವನವು ಅರಳಿದಂತೆಯೂ, ಕೆನ್ನೆಗಳ ಶೋಭೆಯಿಂದ ರನ್ನಗನ್ನಡಿಗಳು ಹೊಳೆಯುವಂತೆಯೂ, ಬಳ್ಳಿಹುಬ್ಬುಗಳ ಬೆಡಗುಗಳಿಂದ ಮನ್ಮಥನ ಬಿಲ್ಲುಗಳ ಸಮೂಹವು ಹರಡಿರುವಂತೆಯೂ, ತಲೆಗೂದಲುಗಳ ಕತ್ತಲೆಯಂತಿರುವ ಕಪ್ಪಿನಿಂದ ಕಗ್ಗತ್ತಲೆಯು ಕವಿದಂತೆಯೂ, ಸುವಾಸನೆಯುಳ್ಳ ನಿಶ್ವಾಸಗಳಿಂದ ತೆಂಕಲ ಗಾಳಿಯು ಬೀಸಿದಂತೆಯೂ, ಮುಗುಳ್ನಗೆಯ ಬೆಳಕುಗಳಿಂದ ವಸಂತಕಾಲವು ಉಂಟಾದಂತೆಯೂ, ಅಂಗೈ ಕೆಂಪಿನಿಂದ ಕೆಂದಾವರೆಗಳು ಅರಳಿದಂತೆಯೂ, ಉಗುರುಗಳ ಕಿರಣಗಳಿಂದ ಮನ್ಮಥನ ನೂರಾರು ಆಯುಧಗಳು ಸುರಿಯುವಂತೆಯೂ ಆಗಿದ್ದಿತು. ಅಲ್ಲದೆ ೨೧. ಆ ಲಲನೆಯರು ಧರಿಸಿಕೊಂಡಿದ್ದ ರತ್ನಖಚಿತವಾದ ಒಡವೆಗಳ ಕಾಂತಿಯೆಂಬ ಸುಂದರವಾದ ಕಾಮನಬಿಲ್ಲುಗಳು ಆಕಾಶಪ್ರದೇಶದಲ್ಲಿ ಹೊಳೆಯಲಾಗಿ ಮಳೆ ಬರುವುದೆಂಬ ಹರ್ಷದಿಂದ ಸಾಕುನವಿಲುಗಳ ತಂಡವು ಸುತ್ತಲೂ ನಲಿದಾಡಿ ಕುಣಿಯುತ್ತಿದ್ದುವು. ೨೨. ಆ ಕನ್ನೆವಾಡದಲ್ಲಿ ತರುಣಿಯರ ಕಡೆಗಣ್ಣೆ ಕಿವಿಯೋಲೆಯಾಗಿದ್ದಿತು. ಅಂಗೈಕಾಂತಿಯೇ ವಿನೋದಕ್ಕಾಗಿ ಹಿಡಿದುಕೊಳ್ಳುವ ಕೆಂದಾವರೆಯಾಗಿದ್ದಿತು. ಸ್ತನವೆ ಕನ್ನಡಿಯಾಗಿದ್ದಿತು. ಅಡಿದಾವರೆಯ ಕೆಂಪೆ ಪ್ರಕಾಶಿಸುವ ಅರಗಿನರಸವಾಗಿದ್ದಿತು. ಮಂದಹಾಸವೆ ಚಂದನವಾಗಿದ್ದಿತು. ಅವರ ಮೆಲ್ನುಡಿಯೆ ವೀಣಾಧ್ವನಿಯಾಗಿದ್ದಿತು. ಅವರ ದೇಹಕಾಂತಿಯೆ ಹೊಸ ಪಟ್ಟೆಸೀರೆಯಾಗಿದ್ದಿತು. ತೊಂಡೆಹಣ್ಣಿನಂತಿರುವ ತುಟಿಯ ಕೆಂಪೆ ಬಹಳ ರಮಣೀಯವಾದ ಲೇಪನದ್ರವ್ಯವಾಗಿದ್ದಿತು. ಕಾಲುಗುರುಗಳ ಕಾಂತಿಯ ಸಮೂಹವೇ ನೆಲದಮೇಲೆ ಎರಚುವ ಹೂವುಗಳ ಸಮೂಹವಾಗಿದ್ದಿತು.

ಲಲನೆಯರ್ಗಂಗರಾಗಮದು ದುರ್ವಹವಂಶುಕಭಾರವಂಗ ಸಂ
ಚಲತೆಗೆ ಕಾರಣಂ ಕುಸುಮಮಾಲಿಕೆಯುಂ ಪೊಱೆ ಪುಷ್ಪದಾಮ ಮೇ
ಖಲೆ ನಡೆಗಡ್ಡಿ ಕಣ್ಮಲರ್ಗೆ ಕಾಡಿಗೆ ಬಿಣ್ಣಿತು ಪಾದಪಂಕಜ
ಕ್ಕಲತೆಗೆ ಭಾರವೆಂದೊಡಱಿಯೆಂ ಪೊಗಟಲ್ ಸುಕುಮಾರವೃತ್ತಿಯಂ ೨೩

ಹಾರದ ಭಾರಮನದನೇಂ
ಸೈರಿಸುವುದೆ ತನು ಲತಾಂಗಿಯರ್ಕಳ ಕಬರೀ
ಭಾರಕ್ಕಂ ಘನಕುಚಯುಗ
ಭಾರಕ್ಕಂ ಬಳ್ಕಿ ಕರಮೆ ಬಡನಡು ನಡುಗಲ್ ೨೪

ಕಲಲೇಂದತಿಕೌತುಕದಿಂ
ದಲರ್ಗಟ್ಟುವೆಂಬದೊಂದು ಸಾಹಸಮಂತಿ
ರ್ಕಲರಾಯ್ವ ಪದದೊಳೆರಡನೆ
ಯಲರ್ಗಂ ಕೈನೀಡಿ ಸೇದೆವಡುವರ್ ಸತಿಯರ್ ೨೫

ವ॥ ಮತ್ತಮತ್ತಿತ್ತ ಪುಗುತರ್ಪಲ್ಲಿ ಲವಲಿಕೆಯಂ ಕೇತಕೀಧೂಳಿಯೊಳಾಲವಾಲಮಂ ಸಮೆಯಲುಂ ಸಾಗರಿಕೆಯಂ ಗಂಧೋದಕ ಕನಕದೀರ್ಘಿಕೆಗಳೊಳ್ ರನ್ನದ ಮಳಲ್ಗಳಂ ಸುರಿಯಲುಂ

೨೩. ಅಲ್ಲಿನ ಲಲನೆಯರು ಬಹಳ ಸುಕುಮಾರಿಯರು. ಅದರಿಂದಲೆ ಮೈಗೆ ಲೇಪಿಸಿಕೊಂಡಿರುವ ಸುಗಂಧಲೇಪನವನ್ನು ಕೂಡ ಹೊರುವುದು ಅವರಿಗೆ ಕಷ್ಟಕರವಾಗಿದ್ದಿತು. ಉಟ್ಟುಕೊಂಡಿರುವ ಸೀರೆಯ ತೂಕವೆ ಅಶಕ್ತಿಯಿಂದ ಉಂಟಾದ ದೇಹದ ನಡುಕಕ್ಕೆ ಕಾರಣವಾಗುತ್ತಿತ್ತು ! ಹೂವಿನಸರವು ಕೂಡ ಹೊರೆಯಾಗುತ್ತಿತ್ತು ! ಹೂವಿನಸರದಿಂದ ಮಾಡಿದ ಸೊಂಟದ ಪಟ್ಟಿ ಕೂಡ ಭಾರವಾಗಿ ಸಂಚಾರಕ್ಕೆ ಅಡ್ಡಿಯಾಗಿತ್ತು ! ಕಣ್ಣಿಗೆ ಕಾಡಿಗೆಯು ಭಾರವಾಗಿತ್ತು ! ಅಡಿದಾವರೆಗೆ ಲೇಪಿಸಿಕೊಳ್ಳುವ ಅರಗಿನರಸವು ದೊಡ್ಡ ಹೊರೆಯೇ ಆಗುತ್ತಿತ್ತು ! ಆದ್ದರಿಂದ ಅವರ ಸೌಕುಮಾರ್ಯವನ್ನು ಹೊಗಳಲು ಸಾಧ್ಯವೇ ಇಲ್ಲ. ೨೪. ಅಲ್ಲಿನ ಬಳ್ಳಿಯಂತೆ ಶರೀರವುಳ್ಳ ಮಹಿಳೆಯರ ಕೇಶಪಾಶಗಳ ಭಾರಕ್ಕೂ ತೋರ ಮೊಲೆಗಳ ಭಾರಕ್ಕೂ ತೆಳುವಾದ ಸೊಂಟವು ಬಳುಕಿ ಬಹಳವಾಗಿ ನಡುಗುತ್ತಿತ್ತು. ಅಂದಮೇಲೆ ಹಾರದ ಭಾರವನ್ನು ತಾಳಲು ಆ ದೇಹಕ್ಕೆ ಸಾಧ್ಯವೇ ? ೨೫. ಅಲ್ಲಿನ ರಮಣಿಯರು ಕಲಿತುಕೊಳ್ಳಬೇಕೆಂಬ ಕುತೂಹಲದಿಂದ ಹೂವನ್ನು ಕಟ್ಟಬೇಕೆಂದು ಹೊರಟರೆ ಅದೊಂದು ಸಾಹಸದ ಸಂಗತಿಯೇ ಸರಿ. ಅದಿರಲಿ, ಹೂವನ್ನು ಕೊಯ್ಯುವಾಗ ಹೇಗೋ ಒಂದು ಹೂವನ್ನು ಕೊಯ್ದು ಎರಡನೆಯ ಹೂವನ್ನು ಕೊಯ್ಯಲು ಕೈನೀಡಿದರೂ ಬಹಳ ಆಯಾಸಗೊಳ್ಳುತ್ತಾರೆ. ವ॥ ಮತ್ತೆ ಅತ್ತಿತ್ತ ಮುಂದುವರಿಯುತ್ತಿರಲು ಲವಲಿಕೆಯೆಂಬುವಳನ್ನು ಕೇದಗೆಯ ಧೂಳುಗಳಿಂದ ಪಾತಿಯನ್ನು ಮಾಡಲೂ, ಸಾಗರಿಕೆಯನ್ನು ಚಿನ್ನದಕಟ್ಟೆ ಕಟ್ಟಿರುವ ಗಂಧೋದಕದ

ದರ್ಪಣಂಗಳ್ ಪೊಳೆವಂತೆಯುಂ ಭ್ರೂಲತಾವಿಭ್ರಮಂಗಳಿಂ ಕಾಮಕಾರ್ಮುಕವಿಸರಂ ಪಸರಿಸಿದಂತೆಯುಂ ಕೇಶಕಲಾಪಾಂಧಕಾರದಿಂ ಕಾರಿರುಳ್ ಕವಿದಂತೆಯುಂ ಸುರಭಿನಿಶ್ವಾಸಂಗಳಿಂ ಮಲಯಮಾರುತಂ ತೀಡಿದಂತೆಯುಂ ಮುಗುಳ್ನಗೆಯ ಬೆಳಗುಗಳಿಂ ವಸಂತಸಮಯಮಾದಂತೆಯುಂ ಕರತಲರಾಗದಿಂ ಕೆಂದಾವರೆಗಳಲರ್ದಂತೆಯುಂ ಕರರುಹಕಿರಣಂಗಳಿಂ ಕುಸುಮಾಯುಧಶರಶತಂಗಳ್ ಸುರಿವಂತೆಯುಮಾದುದಲ್ಲದೆಯುಂ

ಮಣಿಮಾಲಾರಂಜಿತ ಭೂ
ಷಣರುಚಿ ರುಚಿರೇಂದ್ರಚಾಪಲತೆಗಳ್ ಗಗನಾಂ
ಗಣದೊಳ್ ಪೊಳೆಯಲ್ ಸುತ್ತುಂ
ಕುಣಿವುವು ನಲಿದಾಡಿ ಗೃಹಮಯೂರನಿಕಾಯಂ ೨೧

ಕಡೆಗಣ್ ಕರ್ಣಾವತಂಸಂ ಕರತಲರುಚಿ ಲೀಲಾರವಿಂದಂ ಕುಚಂ ಕ
ನ್ನಡಿ ಪಾದಾಂಭೋಜರಾಗಂ ಮಿಸುಪಲತೆಗೆ ಮಂದಸ್ಮಿತಂ ಚಂದನಂ ಮೆ
ಲ್ನುಡಿ ವೀಣಾನಾದಮಂಗಪ್ರಭೆ ಪೊಸದುಗುಲಂ ಪಕ್ವಬಿಂಬೋಷ್ಠರಾಗಂ
ಕಡುಚೆಲ್ವಾದಂಗರಾಗಂ ಚರಣನಖಮಯೂಖಾಳಿ ಪುಷ್ಪೋಪಹಾರಂ ೨೨

ಕಡೆಗಣ್ಣ ನೋಟದಿಂದ ಕನ್ನೈದಿಲೆಗಳ ವನವು ಅರಳಿದಂತೆಯೂ, ಕೆನ್ನೆಗಳ ಶೋಭೆಯಿಂದ ರನ್ನಗನ್ನಡಿಗಳು ಹೊಳೆಯುವಂತೆಯೂ, ಬಳ್ಳಿಹುಬ್ಬುಗಳ ಬೆಡಗುಗಳಿಂದ ಮನ್ಮಥನ ಬಿಲ್ಲುಗಳ ಸಮೂಹವು ಹರಡಿರುವಂತೆಯೂ, ತಲೆಗೂದಲುಗಳ ಕತ್ತಲೆಯಂತಿರುವ ಕಪ್ಪಿನಿಂದ ಕಗ್ಗತ್ತಲೆಯು ಕವಿದಂತೆಯೂ, ಸುವಾಸನೆಯುಳ್ಳ ನಿಶ್ವಾಸಗಳಿಂದ ತೆಂಕಲ ಗಾಳಿಯು ಬೀಸಿದಂತೆಯೂ, ಮುಗುಳ್ನಗೆಯ ಬೆಳಕುಗಳಿಂದ ವಸಂತಕಾಲವು ಉಂಟಾದಂತೆಯೂ, ಅಂಗೈ ಕೆಂಪಿನಿಂದ ಕೆಂದಾವರೆಗಳು ಅರಳಿದಂತೆಯೂ, ಉಗುರುಗಳ ಕಿರಣಗಳಿಂದ ಮನ್ಮಥನ ನೂರಾರು ಆಯುಧಗಳು ಸುರಿಯುವಂತೆಯೂ ಆಗಿದ್ದಿತು. ಅಲ್ಲದೆ ೨೧. ಆ ಲಲನೆಯರು ಧರಿಸಿಕೊಂಡಿದ್ದ ರತ್ನಖಚಿತವಾದ ಒಡವೆಗಳ ಕಾಂತಿಯೆಂಬ ಸುಂದರವಾದ ಕಾಮನಬಿಲ್ಲುಗಳು ಆಕಾಶಪ್ರದೇಶದಲ್ಲಿ ಹೊಳೆಯಲಾಗಿ ಮಳೆ ಬರುವುದೆಂಬ ಹರ್ಷದಿಂದ ಸಾಕುನವಿಲುಗಳ ತಂಡವು ಸುತ್ತಲೂ ನಲಿದಾಡಿ ಕುಣಿಯುತ್ತಿದ್ದುವು. ೨೨. ಆ ಕನ್ನೆವಾಡದಲ್ಲಿ ತರುಣಿಯರ ಕಡೆಗಣ್ಣೆ ಕಿವಿಯೋಲೆಯಾಗಿದ್ದಿತು. ಅಂಗೈಕಾಂತಿಯೇ ವಿನೋದಕ್ಕಾಗಿ ಹಿಡಿದುಕೊಳ್ಳುವ ಕೆಂದಾವರೆಯಾಗಿದ್ದಿತು. ಸ್ತನವೆ ಕನ್ನಡಿಯಾಗಿದ್ದಿತು. ಅಡಿದಾವರೆಯ ಕೆಂಪೆ ಪ್ರಕಾಶಿಸುವ ಅರಗಿನರಸವಾಗಿದ್ದಿತು. ಮಂದಹಾಸವೆ ಚಂದನವಾಗಿದ್ದಿತು. ಅವರ ಮೆಲ್ನುಡಿಯೆ ವೀಣಾಧ್ವನಿಯಾಗಿದ್ದಿತು. ಅವರ ದೇಹಕಾಂತಿಯೆ ಹೊಸ ಪಟ್ಟೆಸೀರೆಯಾಗಿದ್ದಿತು. ತೊಂಡೆಹಣ್ಣಿನಂತಿರುವ ತುಟಿಯ ಕೆಂಪೆ ಬಹಳ ರಮಣೀಯವಾದ ಲೇಪನದ್ರವ್ಯವಾಗಿದ್ದಿತು. ಕಾಲುಗುರುಗಳ ಕಾಂತಿಯ ಸಮೂಹವೇ ನೆಲದಮೇಲೆ ಎರಚುವ ಹೂವುಗಳ ಸಮೂಹವಾಗಿದ್ದಿತು.

ಲಲನೆಯರ್ಗಂಗರಾಗಮದು ದುರ್ವಹಮಂಶುಕಭಾರಮಂಗ ಸಂ
ಚಲತೆಗೆ ಕಾರಣಂ ಕುಸುಮಮಾಲಿಕೆಯುಂ ಪೊಱೆ ಪುಷ್ಪದಾಮ ಮೇ
ಖಲೆ ನಡೆಗಡ್ಡಿ ಕಣ್ಮಲರ್ಗೆ ಕಾಡಿಗೆ ಬಣ್ಣಿತು ಪಾದಪಂಕಜ
ಕ್ಕಲತೆಗೆ ಭಾರಮೆಂದೊಡಱಿಯೆಂ ಪೊಗಟಲ್ ಸುಕುಮಾರವೃತ್ತಿಯುಂ ೨೩

ಹಾರದ ಭಾರಮಂತದನೇಂ
ಸೈರಿಸುವುದೆ ತನು ಲತಾಂಗಿಯರ್ಕಳ ಕಬರೀ
ಭಾರಕ್ಕಂ ಘನಕುಚಯುಗ
ಭಾರಕ್ಕಂ ಬಳ್ಕಿ ಕರಮೆ ಬಡನಡು ನಡುಗಲ್ ೨೪

ಕಲಲೇಂದತಿಕೌತುಕದಿಂ
ದಲರ್ಗಟ್ಟುವೆಂಬದೊಂದು ಸಾಹಸಮಂತಿ
ರ್ಕಲರಾಯ್ವ ಪದದೊಳೆರಡನೆ
ಯಲರ್ಗಂ ಕೈನೀಡಿ ಸೇದೆವಡುವರ್ ಸತಿಯರ್ ೨೫

ವ॥ ಮತ್ತಮತ್ತಿತ್ತ ಪುಗುತರ್ಪಲ್ಲಿ ಲವಲಿಕೆಯಂ ಕೇತಕೀಧೂಳಿಯೊಳಾಲವಾಲಮಂ ಸಮೆಯಲುಂ ಸಾಗರಿಕೆಯಂ ಗಂಧೋದಕ ಕನಕದೀರ್ಘಿಕೆಗಳೊಳ್ ರನ್ನದ ಮಳಲ್ಗಳಂ ಸುರಿಯಲುಂ

೨೩. ಅಲ್ಲಿನ ಲಲನೆಯರು ಬಹಳ ಸುಕುಮಾರಿಯರು. ಅದರಿಂದಲೆ ಮೈಗೆ ಲೇಪಿಸಿಕೊಂಡಿರುವ ಸುಗಂಧಲೇಪನವನ್ನು ಕೂಡ ಹೊರುವುದು ಅವರಿಗೆ ಕಷ್ಟಕರವಾಗಿದ್ದಿತು. ಉಟ್ಟುಕೊಂಡಿರುವ ಸೀರೆಯ ತೂಕವೆ ಅಶಕ್ತಿಯಿಂದ ಉಂಟಾದ ದೇಹದ ನಡುಕಕ್ಕೆ ಕಾರಣವಾಗುತ್ತಿತ್ತು ! ಹೂವಿನಸರವು ಕೂಡ ಹೊರೆಯಾಗುತ್ತಿತ್ತು ! ಹೂವಿನಸರದಿಂದ ಮಾಡಿದ ಸೊಂಟದ ಡಾಬು ಕೂಡ ಭಾರವಾಗಿ ಸಂಚಾರಕ್ಕೆ ಅಡ್ಡಿಯಾಗಿತ್ತು ! ಕಣ್ಣಿಗೆ ಕಾಡಿಗೆಯು ಭಾರವಾಗಿತ್ತು ! ಅಡಿದಾವರೆಗೆ ಲೇಪಿಸಿಕೊಳ್ಳುವ ಅರಗಿನರಸವು ದೊಡ್ಡ ಹೊರೆಯೇ ಆಗುತ್ತಿತ್ತು ! ಆದ್ದರಿಂದ ಅವರ ಸೌಕುಮಾರ್ಯವನ್ನು ಹೊಗಳಲು ಸಾಧ್ಯವೇ ಇಲ್ಲ. ೨೪. ಅಲ್ಲಿನ ಬಳ್ಳಿಯಂತೆ ಶರೀರವುಳ್ಳ ಮಹಿಳೆಯರ ಕೇಶಪಾಶಗಳ ಭಾರಕ್ಕೂ ತೋರ ಮೊಲೆಗಳ ಭಾರಕ್ಕೂ ತೆಳುವಾದ ಸೊಂಟವು ಬಳುಕಿ ಬಹಳವಾಗಿ ನಡುಗುತ್ತಿತ್ತು. ಅಂದಮೇಲೆ ಹಾರದ ಭಾರವನ್ನು ತಾಳಲು ಆ ದೇಹಕ್ಕೆ ಸಾಧ್ಯವೇ ? ೨೫. ಅಲ್ಲಿನ ರಮಣಿಯರು ಕಲಿತುಕೊಳ್ಳಬೇಕೆಂಬ ಕುತೂಹಲದಿಂದ ಹೂವನ್ನು ಕಟ್ಟಬೇಕೆಂದು ಹೊರಟರೆ ಅದೊಂದು ಸಾಹಸದ ಸಂಗತಿಯೇ ಸರಿ. ಅದಿರಲಿ, ಹೂವನ್ನು ಕೊಯ್ಯುವಾಗ ಹೇಗೋ ಒಂದು ಹೂವನ್ನು ಕೊಯ್ದು ಎರಡನೆಯ ಹೂವನ್ನು ಕೊಯ್ಯಲು ಕೈನೀಡಿದರೂ ಬಹಳ ಆಯಾಸಗೊಳ್ಳುತ್ತಾರೆ. ವ॥ ಮತ್ತೆ ಅತ್ತಿತ್ತ ಮುಂದುವರಿಯುತ್ತಿರಲು ಲವಲಿಕೆಯೆಂಬುವಳನ್ನು ಕೇದಗೆಯ ಧೂಳುಗಳಿಂದ ಪಾತಿಯನ್ನು ಮಾಡಲೂ, ಸಾಗರಿಕೆಯನ್ನು ಚಿನ್ನದಕಟ್ಟೆ ಕಟ್ಟಿರುವ ಗಂಧೋದಕದ

ಮೃಣಾಳಿಕೆಯುಂ ಕೃತ್ರಿಮಕಮಲಿನಿಯೊಳಾಡುವ ಜಕ್ಕವಕ್ಕಿಗಳ ಮೇಲೆ ಕುಂಕುಮರಜಮಂ ಕೆದಱಲುಂ ಮಕರಿಕೆಯುಂ ಗಂಧಪಾತ್ರಂಗಳೊಳ್ ಕರ್ಪೂರರಸಮೂಡಿ ವಾಸಿಸಲುಂ ರಜನಿಕೆಯುಂ ತಮಾಲವೀಧಿಯನಮರ್ದ ಕತ್ತಲೆಯೊಳ್ ಮಾಣಿಕದ ಸೊಡರ್ಗಳಂ ಬೆಳಗಲುಂ ಕುಮುದಿಕೆಯುಂ ಗಿಳಿ ಪಱಿಯದಂತು ದಾಡಿಮೀಫಲಂಗಳ ಮೇಲೆ ಮುತ್ತಿನ ಝಾಂಪಾಳಂಗಳಂ ಕವಿಯಲುಂ ನಿಪುಣಿಕೆಯುಂ ಮಣಿಸ್ತಂಭಂಗಳೊಳ್ ರಂಜಿಸುವ ಸಾಲಭಂಜಿಕೆಯ ಕುಚಂಗಳೊಳ್ ಕುಂಕುಮರಸದಿಂ ಪತ್ರಭಂಗಂಗಳಂ ಚಿತ್ರಿಸಲುಂ ಉತ್ಪಲಿಕೆಯುಂ ಕದಳೀಗೃಹಮರಕತವೇದಿಯಂ ಕಮಲದಳಂಗಳಿಂ ತೊಡೆಯಲುಂ ಕೇಸರಿಕೆಯುಂ ವಕುಳಕುಸುಮಮಾಲಾಮಂಟಪಂಗಳಿಂ ಮದಿರಾರಸದಿಂ ಸಿಂಪಿಸಲುಂ ಮಾಲತಿಕೆಯುಂ ಕಾಮದೇವಗೃಹದೋಲಗಶಾಲೆಯಂ ಸಿಂಧೂರರೇಣುಗಳಿಂ ಬೆಳರ್ಗೆಂಪಂ ಮಾಡಲುಂ ನಳಿನಿಕೆಯುಂ ಭವನಕಲಹಂಸಂಗಳ್ಗೆ ಕಮಲಮಧುರಸಮನೆಱೆಯಲುಂ ಕದಳಿಕೆಯುಂ ಧಾರಾಗೃಹಕ್ಕೆ ಗೃಹಮಯೂರಂಗಳನೊಯ್ಯಲುಂ ಕಮಲಿನಿಯುಂ ಜಕ್ಕವಕ್ಕಿಗಳ್ಗೆ ಮೃಣಾಳ ಕ್ಷೀರರಸಮಂ ಕುಡಿಯಿಸಲುಂ ಚೂತಲತಿಕೆಯುಂ ಪಂಜರದ ಗಂಡುಕೋಗಿಲೆಗಳ್ಗೆ ಚೂತಾಂಕುರದ ಕುಟುಕನಿಕ್ಕಲುಂ ಪಲ್ಲವಿಕೆಯುಂ ಭವನಹರಿಣಂಗಳ್ಗೆ ಮರೀಚಪಲ್ಲವದಳಂಗಳಂ ನೀಡಲುಂ ಲವಂಗಿಕೆಯುಂ ಚಕೋರಪಂಜರಂಗಳೊಳ್ ಪಿಪ್ಪಲೀತಂಡುಲಂಗಳ ಕುಟುಕಂ ಸೂಸಲುಂ

ಬಾವಿಗೆ ರತ್ನದ ಪುಡಿಗಳ ಮರಳನ್ನು ಸುರಿಯುವುದಕ್ಕೂ, ಮೃಣಾಳಿಕೆಯನ್ನು ಅಲ್ಲಿ ಕಟ್ಟಿರುವ (ಕೃತ್ರಿಮ) ತಾವರೆಗೊಳದಲ್ಲಿ ಕ್ರೀಡಿಸುತ್ತಿರುವ ಚಕ್ರವಾಕಪಕ್ಷಿಗಳ ಮೇಲೆ ಕುಂಕುಮದ ಪುಡಿಯನ್ನು ಉದುರಿಸುವುದಕ್ಕೂ, ಮಕರಿಕೆಯನ್ನು ಗಂಧದಪಾತ್ರೆಗೆ ಕರ್ಪೂರಮರದ ರಸವನ್ನು ಲೇಪಿಸಿ ವಾಸನೆ ಕಟ್ಟುವುದಕ್ಕೂ, ರಜನಿಕೆಯನ್ನು ಕತ್ತಲೆ ಕವಿದಿರುವ ಹೊಂಗೆಮರದ ಸಾಲಿನಲ್ಲಿ ಮಾಣಿಕ್ಯದದೀಪಗಳನ್ನು ಬೆಳಗುವುದಕ್ಕೂ, ಕುಮುದಿಕೆಯನ್ನು ಗಿಣಿಗಳು ಎರಗದಂತೆ ದಾಳಿಂಬೆಹಣ್ಣುಗಳ ಮೇಲೆ ಮುತ್ತಿನ ಮುಸುಕನ್ನು ಮುಚ್ಚುವುದಕ್ಕೂ, ನಿಪುಣಿಕೆಯನ್ನು ರತ್ನದಕಂಭಗಳ ಮೇಲೆ ರಂಜಿಸುವ ಪುತ್ಥಳಿಗಳ ಕುಚಗಳಲ್ಲಿ ಕುಂಕುಮದ್ರವದಿಂದ ಚಿತ್ರಗಳನ್ನು ಬರೆಯುವುದಕ್ಕೂ, ಉತ್ಪಲಿಕೆಯನ್ನು ಬಾಳೆಮರದ ಪೊದರಿನಲ್ಲಿರುವ ಪಚ್ಚೆಯಜಗಲಿಯನ್ನು ಕಮಲದಳಗಳಿಂದ ಗುಡಿಸುವುದಕ್ಕೂ, ಕೇಸರಿಕೆಯನ್ನು ಕೇಸರ ಮಾಲಿಕೆಯಿಂದ ಅಲಂಕೃತವಾಗಿರುವ ಮಂಟಪಗಳನ್ನು ಮದ್ಯದಿಂದ ಸಿಂಪಡಿಸುವಂತೆಯೂ, ಮಾಲತಿಕೆಯನ್ನು ಮನ್ಮಥದೇವಾಲಯದ ಓಲಗಶಾಲೆಯನ್ನು ಚಂದ್ರದಪುಡಿಗಳಿಂದ ಪಾಟಲವನ್ನಾಗಿ (ಶ್ವೇತರಕ್ತ) ಮಾಡುವುದಕ್ಕೂ, ನಳಿನಿಕೆಯನ್ನು ಸಾಕಿರುವ ಹಂಸಪಕ್ಷಿಗಳಿಗೆ ತಾವರೆಬಂಡನ್ನು ಕುಡಿಸುವುದಕ್ಕೂ, ಕದಳಿಕೆಯನ್ನು ಸ್ನಾನದಮನೆಗೆ ಸಾಕುನವಿಲುಗಳನ್ನು ಒಯ್ಯುವುದಕ್ಕೂ, ಕಮಲಿನಿಯನ್ನು ಚಕ್ರವಾಕಪಕ್ಷಿಗಳಿಗೆ ತಾವರೆದಂಟಿನ ರಸವನ್ನು ಕುಡಿಸುವುದಕ್ಕೂ, ಚೂತಲತಿಕೆಯನ್ನು ಪಂಜರದಲ್ಲಿರುವ ಗಂಡುಕೋಗಿಲೆಗಳಿಗೆ ಮಾವಿನಚಿಗುರಿನ ಗುಟುಕನ್ನು ಕೊಡುವುದಕ್ಕೂ, ಪಲ್ಲವಿಕೆಯನ್ನು ಸಾಕುಜಿಂಕೆಗಳಿಗೆ ಮೆಣಸಿನ ಚಿಗುರನ್ನು ತಿನ್ನಿಸು

ಮಧುಕರಿಕೆಯಂ ಪೂದೊಡಿಗೆಯಂ ಮಾಡಲುಂ ಮಯೂರಿಕೆಯಿಂ ಕಿನ್ನರಮಿಥುನಂಗಳಂ ಸಂಗೀತ ಶಾಲೆಗೆ ಕಳುಪಲುಂ ಕಂದಳಿಕೆಯಂ ಜೀವಂಜೀವಕ ಮಿಥುನಂಗಳಿಂ ಕ್ರೀಡಾಪರ್ವತಮನೇಱಿಸಲುಂ ಪರಿಣಿಕೆಯಂ ಶುಕಶಾರಿಕೆಗಳನೋದಿಸಲುಂ ಪೆಸರ್ವೆಸರೊಳೆ ಕರೆದು ಪೇೞ್ವ ಮನೋಹರಾಲಾಪಂ ಗಳಂ ಕೇಳುತ್ತಂ ಪೋಗೆವೋಗೆ

ಒದವಿದ ನಿರ್ಭರಯವ್ವನ
ಮದದಿಂ ಮೆಯ್ಮಱೆದು ಕಂಭಮೆಂದು ಮಣಿಸ್ತಂ
ಭದ ರುಚಿಯನಲಘುಕುಚಭಾ
ರದೆ ಜೋಲ್ದು ಮಲಂಗಿ ನಗಿಸಿದರ್ ಕೆಳದಿಯರಂ ೨೬

ಪಳುಕಿನ ಭಿತ್ತಿಯೊಳ್ ಪೊಳೆವುತಿರ್ದ ನಿಜಪ್ರತಿಬಿಂಬದೊಳ್ ಮನಂ
ಗೊಳೆ ನುಡಿದೇಕೆ ಪೇೞೆ ನಗಿಸುವಯ್ ವಸನಾಂಚಲಮೆಂದು ಮೌಕ್ತಿಕಾ
ವಳಿಗಳ ಕಾಂತಿಯಂ ತೆಗೆದಿದೇನೆ ಬೞಲ್ವೆ ಗವಾಕ್ಷರಂಧ್ರದೊ
ಳ್ವೆಳಗನಿನಾಂಶುವೆಂದು ಬಗೆದೇಕೆ ಕರಾಬ್ಜಮನಡ್ಡವೊಡ್ಡುವಯ್ ೨೭

ಪಿರಿದುಂ ಬೞಲ್ಕೆಯಿಂ ಚಾ
ಮರಮದು ಕರದಿಂದೆ ನುಣ್ಚಿಯುಂ ನಖಕಿರಣಸ್ತೋ
ತ್ಕರಮನೆ ಚಾಮರಮೆಂದೆಲೆ
ಸರೋಜಮುಖಿ ಬೀಸಿ ನಗಿಸಿದಯ್ ಕೆಳದಿಯರಂ ೨೮

ವುದಕ್ಕೂ, ಲವಂಗಿಕೆಯನ್ನು ಚಕೋರಪಕ್ಷಿಗಳ ಪಂಜರಗಳಲ್ಲಿ ಹಿಪ್ಪಲಿಬಿತ್ತಗಳ ಕುಟು ಕನ್ನು ಎರಚುವುದಕ್ಕೂ, ಮಧುಕರಿಕೆಯನ್ನು ಹೂವಿನಿಂದ ಆಭರಣಗಳನ್ನು ಮಾಡುವು ದಕ್ಕೂ, ಮಯೂರಿಕೆಯನ್ನು ಕಿನ್ನರದಂಪತಿಗಳನ್ನು ಸಂಗೀತಶಾಲೆಗೆ ಕಳುಹಿಸುವು ದಕ್ಕೂ, ಕಂದಳಿಕೆಯನ್ನು ಚಕೋರದಂಪತಿಗಳನ್ನು ಕ್ರೀಡಾಪರ್ವತಕ್ಕೆ ಹತ್ತಿಸುವುದಕ್ಕೂ, ಹರಿಣಿಕೆಯನ್ನು ಗಿಳಿ ಮತ್ತು ಮೈನಾಹಕ್ಕಿಗಳಿಗೆ ಮಾತು ಕಲಿಸುವುದಕ್ಕೂ ಹೆಸರಿಸಿ ಹೆಸರಿಸಿ ಕರೆದುಹೇಳುವ ಮನೋಹರವಾದ ಮಾತುಗಳನ್ನು ಕೇಳುತ್ತಾ ಮುಂದೆ ಹೋಗುತ್ತಿರಲಾಗಿ, ೨೬. ಕೆಲವು ಹೆಂಗಸರು ಗಾಢವಾದ ತಾರುಣ್ಯದ ಮದವೇರಲು ಪರವಶರಾಗಿ ರತ್ನದಕಂಭಗಳ ಕಾಂತಿಯನ್ನೇ ಕಂಭವೆಂದು ಭ್ರಮಿಸಿ ದೊಡ್ಡದಾದ ಸ್ತನಗಳ ಭಾರದಿಂದ ಬಾಗುತ್ತಾ ತಬ್ಬಿಕೊಂಡು ಗೆಳತಿಯರನ್ನೆಲ್ಲ ನಗಿಸಿದರು. ೨೭. ಎಲೈ ಗೆಳತಿ ಸ್ಫಟಿಕದಗೋಡೆಯಲ್ಲಿ ಪ್ರತಿಬಿಂಬಿಸಿದ್ದ ತನ್ನ ಪ್ರತಿಬಿಂಬವನ್ನೆ ಬೇರೆ ಹೆಂಗಸೆಂದು ತಿಳಿದುಕೊಂಡು ಚೆನ್ನಾಗಿ ಮಾತನಾಡಿಸಿ ಏಕೆ ಎಲ್ಲರನ್ನೂ ನಗಿಸುತ್ತೀಯೆ ? ಮೇಲುಹೊದಿಕೆಯ ಸೆರಗೆಂದು ಭ್ರಮಿಸಿ ಮುತ್ತಿನಸರಗಳ ಕಾಂತಿಯನ್ನೇ ಹೊದೆ ಯಲು ಪ್ರಯತ್ನಪಟ್ಟು ಇದೇಕೆ ಶ್ರಮಪಡುತ್ತಿದ್ದೀಯೆ ? ರತ್ನದ ಕಿಟಕಿಗಳ ಜಾಲರಿಯ ಪ್ರಭೆಯನ್ನೇ ಸೂರ್ಯನಬಿಸಿಲೆಂದು ಭ್ರಮಿಸಿ ನಿನ್ನ ಕರಕಮಲವನ್ನು ಅದನ್ನು ತಡೆ ಯುವುದಕ್ಕಾಗಿ ಏಕೆ ಅಡ್ಡವೊಡ್ಡುತ್ತೀಯೆ ? ೨೮. ಎಲೈ ತಾವರೆಯಂತೆ ಮುಖ ವುಳ್ಳವಳೆ, ಬಹಳ ಹೆಚ್ಚಾದ ಬಳಲಿಕೆಯಿಂದ ಚಾಮರವು ಕೈಯಿಂದ ಜಾರಿಬಿದ್ದರೂ

ವ॥ ಎಂದಿವು ಮೊದಲಾಗಿ ಪರಿಹಾಸಜಲ್ಪಿತಂಗಳಂ ಕೇಳುತ್ತಂ ಪೋಗಲುಪವನಲತೆಗಳಿಂದುದಿರ್ದಲರಧೂಳಿಯಿಂ ಪುಟಿಲ್ಲಟ್ಟಿದಂತೆಯುಂ ಕೋಗಿಲೆಗಳೆಡೆವಿಡದುಗುರವೊನೆಯೊಳಳ್ಳಿಱಿಯೆ ಸುರಿವ ಸಹಕಾರಫಲರಸದ ಸೋನೆಗಳಿಂ ದುರ್ದಿನಂ ಮಸಗಿದಂತೆಯುಂ ವಕುಳದ ಮರಂಗಳೆಲರಲೆಪದಿಂ ಕಿದಱಿದ ಸೀಧುಧಾರಾಪ್ರಸರದಿಂ ತುಂತುರ್ಮಸಗಿದಂತೆಯುಂ ಪೂವಲಿಗೆದರ್ದ ಸಂಪಗೆಯೆಸಳ ಪ್ರಸರದಿಂ ಸುವರ್ಣದ್ವೀಪದಂತೆಯುಂ ಎಡೆಯಾಡುವೆಳವೆಂದಿರ ಮೆಲ್ಲಡಿಗಳಲತಿಗೆಗಳಿಂ ರಾಗಸಾಗರಂ ಕವಿದಂತೆಯುಂ ಅಂಗರಾಗಾಮೋದಂಗಳಿಂ ಪಾರಿಜಾತಜನ್ಮದಿನದಂತೆಯುಂ ತೊಳಗುವ ಮುತ್ತಿನ ತೊಡವುಗಳ ಬೆಳಗುಗಳಿಂ ಬೆಳ್ದಿಂಗಳಾದಂತೆಯುಂ ಕೃಷ್ಣಾಗರುಪತ್ರಭಂಗಂಗಳಿಂ ನೀಲಾಯಮಾನಮುಂ ಕರ್ಣಪೂರಾಶೋಕಪಲ್ಲವಂಗಳಿಂ ಲೋಹಿತಾಯಮಾನಮುಂ ಚಂದನಲೇಪಂಗಳಿಂ ಧವಳಾಯಮಾನಮುಂ ಶಿರೀಷಕುಸುಮಾಭರಣಂಗಳಿಂ ಹರಿತಾಯಮಾನಮುಮಪ್ಪ ಮಾರ್ಗಮಂ ನೋಡುತೆ ಬರ್ಪನ್ನೆಗಮಲ್ಲಿ

ನಿನ್ನ ಉಗುರುಗಳ ಕಾಂತಿಯನ್ನೇ ಚಾಮರವೆಂದು ಬೀಸಲು ಪ್ರಯತ್ನಿಸುತ್ತಾ ಏಕೆ ಗೆಳತಿಯರನ್ನು ನಗಿಸುತ್ತಿರುವೆ ? ವ॥ ಹೀಗೆ ಇವೇ ಮೊದಲಾದ ಹಾಸ್ಯದ ಹರಟೆಗಳನ್ನು ಕೇಳುತ್ತ ಹೋಗುತ್ತಿರಲಾಗಿ ಉದ್ಯಾನವನದ ಬಳ್ಳಿಗಳಿಂದ ಉದುರಿರುವ ಹೂವಿನಪುಡಿಗಳಿಂದ ಮರಳುಗಳಿಂದ ಕೂಡಿಕೊಂಡಿರುವಂತೆಯೂ, ಕೋಗಿಲೆಗಳು ಒಂದೇಸಮನೆ ಉಗುರಿನತುದಿಗಳಿಂದ ಚುಚ್ಚಲಾಗಿ ಸುರಿಯುತ್ತಿರುವ ಸಿಹಿಮಾವಿನ ಹಣ್ಣಿನ ರಸದ ಸೋನೆಗಳಿಂದ ಮಳೆಗಾಲದ ದಿನವು ವಿಜೃಂಭಿಸಿದಂತೆಯೂ, ಗಾಳಿಯ ಬೀಸುವಿಕೆಯಿಂದ ಹರಡಿರುವ ವಕುಳವೃಕ್ಷದ ಮದ್ಯದ ಧಾರೆಗಳ ಪ್ರಸಾರದಿಂದ ತುಂತುರುಮಳೆಯು ವ್ಯಾಪಿಸಿದಂತೆಯೂ, ಅಲ್ಲಿನ ನೆಲಗಟ್ಟುಗಳಲ್ಲೆಲ್ಲಾ ತಳೆದಿರುವ ಸಂಪಿಗೆಯ ಎಸಳುಗಳ ಹರಡುವಿಕೆಯಿಂದ ಚಿನ್ನದ ನಡುಗಡ್ಡೆಯಂತೆಯೂ, ಓಡಾಡುತ್ತಿರುವ ತರುಣಿಯರ ಮೃದುವಾದ ಕಾಲುಗಳ ಅರಗಿನರಸದ ವ್ಯಾಪನೆಯಿಂದ ಕೆಂಪುಸಮುದ್ರವೇ ಆವರಿಸಿದಂತೆಯೂ, ಸುಗಂಧಲೇಪನದ್ರವ್ಯದ ಸುವಾಸನೆಗಳಿಂದ ಪಾರಿಜಾತವೃಕ್ಷದ ಹುಟ್ಟಿದದಿನದಂತೆಯೂ, ಪ್ರಕಾಶಿಸುತ್ತಿರುವ ಮುತ್ತಿನಒಡವೆಗಳ ಬೆಳಕಿನಿಂದ ಬೆಳದಿಂಗಳುಂಟಾದಂತೆಯೂ, ಹೆಂಗಸರ ಕೆನ್ನೆ ಮೊದಲಾದೆಡೆಗಳಲ್ಲಿ ಬರೆಯಲ್ಪಟ್ಟಿರುವ ಚಿತ್ರವಿಶೇಷಗಳಿಂದ ನೀಲವರ್ಣವನ್ನು ಪಡೆದಂತೆಯೂ, ಕಿವಿಗೆ ಆಭರಣವಾಗಿ ಮಾಡಿಕೊಂಡಿರುವ ಅಶೋಕದ ಚಿಗುರುಗಳಿಂದ ಕೆಂಬಣ್ಣವನ್ನು ಹೊಂದಿದಂತೆಯೂ, ಚಂದನಲೇಪನಗಳಿಂದ ಬಿಳಿಯ ಬಣ್ಣವನ್ನು ಪಡೆದಂತೆಯೂ, ಬಾಗೆಯ ಹೂವಿನ ಆಭರಣಗಳಿಂದ ಹಸುರುಬಣ್ಣವನ್ನು ಹೊಂದಿದಂತೆಯೂ ಇರುವ ದಾರಿಯನ್ನು ನೋಡುತ್ತಾ ಬರುತ್ತಿರುವಲ್ಲಿ, ಟಿ. "ವಕುಳದ....ತುಂತುರ್ಮಸಗಿದಂತೆಯುಂ" ಉತ್ತಮಸ್ತ್ರೀಯರು ಮದ್ಯವನ್ನು ಬಾಯಲ್ಲಿಟ್ಟುಕೊಂಡು ಉಗುಳಿದರೆ ವಕುಳವೃಕ್ಷವು ಚಿಗುರುವುದೆಂಬ ಕವಿಸಮಯದಂತೆ ಇಲ್ಲಿನ ವಕುಳವೃಕ್ಷದಲ್ಲಿ ಹೆಂಗಸರು

ಎರಡುಂ ಪಕ್ಕದೊಳೋಲಗಕ್ಕೆ ಪದಪಿಂ ಬಂದಿರ್ದ ಕಾಂತಾಜನೋ
ತ್ಕರ ರತ್ನಾಭರಣಪ್ರಭಾಪ್ರಸರವಾದಂ ತಳ್ತು ತದ್ವೀಥಿಕಾಂ
ತರದೊಳ್ ಪೆರ್ಬೊನಲಂದದಿಂ ಪರಿಯೆ ಕಂಡೀತಾ ಪ್ರಭಾಪೂರದೊಳ್
ಭರದಿಂ ತಾನಿದಿರೀಸುವಂತೆ ನಡೆದಂ ಭೂಪಾಲವಿದ್ಯಾಧರಂ ೨೯

ರಾಮಾಭಿರಾಮಮುಮಂ ಜಗ
ತೀಮಂಡನಮುಂ ಮಣಿಪ್ರಭಾಪ್ರೇಂಖಿತ ರ
ಥ್ಯಾಮಂಡನಮುಂ ಕಂಡಂ
ಶ್ರೀಮಂಟಪಮಂ ವಿಚಿತ್ರ ರತ್ನಾತಪಮಂ ೩೦

ವ॥ ಆ ಮಣಿಮಯಮಂಟಪ ಮಧ್ಯಭಾಗದೊಳನೇಕ ಕನ್ಯಕಾಪರಿಜನವೃತೆಯಾಗಿ

ಪೊಳೆಯುತ್ತಿರ್ಪ ಮಹಾವರಾಹವದನೋದ್ಯದ್ದಂಷ್ಟ್ರಮಂ ನೆಮ್ಮಿ ನಿಂ
ದಳೊ ಭೂಕಾಂತೆಯೆನಲ್ಕೆ ನೀಲವಸನಪ್ರಚ್ಛನ್ನಪರ್ಯಂಕಮಂ
ಡಳದೊಳ್ ಬೆಳ್ಪಿಸೆದಿರ್ದ ಕೌಳುಡೆಯನೊಂದಂ ನೆಮ್ಮಿ ಕುಳ್ಳಿರ್ದ ಕೋ
ಮಳೆಯಂ ದೂರದೆ ನೋಡಿ ಕಂಡನರಸಂ ಕಾದಂಬರೀದೇವಿಯಂ ೩೧

ಉರಗನಿಕಾಯಃ ದಿಕ್ಪತಿನಿಕಾಯ ನಿಲಿಂಪನಿಕಾಯಮೆಲ್ಲಮಾ
ದರದೊಳೆ ತಮ್ಮ ತಮ್ಮ ನಿಳಯಕ್ಕಿರದೊಯ್ದು ಪರೊಲ್ದು ಕನ್ನೆಯಂ
ಪಿರಿದುಮೆನಲ್ಕೆ ಹರ್ಮ್ಯಮಣಿಕುಟ್ಟಿಮಭಿತ್ತಿಸಮೂಹಮಂಟಪೋ
ಪರಿಮತಲಂಗಳೊಳ್ ಸೊಗಯಿಸಿರ್ದುದು ರೂಪಮೃತಾಂಶುವಕ್ತ್ರೆಯಾ ೩೨

ಉಗುಳಿದ ಮದ್ಯವಿದ್ದು ಅದು ಗಾಳಿಯಿಂದ ಕೆಳಕ್ಕೆ ಉದುರುತ್ತಿತ್ತೆಂದು ಅಭಿಪ್ರಾಯ. ೨೯. ದಾರಿಯ ಇಕ್ಕೆಲದಲ್ಲೂ ಸಡಗರದಿಂದ ಊಳಿಗಕ್ಕೆ ಬರುತ್ತಿರುವ ಮಹಿಳಾ ಸಮೂಹದ ರತ್ನಾಭರಣದ ಪ್ರಭೆಯು ಪ್ರಸಾರವು ಒಟ್ಟುಗೂಡಿ, ಆ ದಾರಿಯ ಮಧ್ಯದಲ್ಲಿ ದೊಡ್ಡಪ್ರವಾಹದಂತೆ ಹರಿಯುತ್ತಿರಲು ಆ ಕಾಂತಿಯ ಪ್ರವಾಹದಲ್ಲಿ ತಾನು ವೇಗದಿಂದ ಈಜಾಡುವಂತೆ ಆ ಚಂದ್ರಾಪೀಡನು ಮುಂದೆಹೋದನು. ೩೦. ಅಲ್ಲಿ ಸುಂದರ ರಮಣಿಯರಿಂದ ಕೂಡಿ ರಮ್ಯವಾಗಿರುವ ಲೋಕಕ್ಕೆ ಅಲಂಕಾರಪ್ರಾಯವಾದ ರತ್ನಗಳ ಪ್ರಭೆಯಿಂದ ತಳತಳಿಸುತ್ತಿರುವ ಆ ಬೀದಿಗೆ ಅಲಂಕಾರಪ್ರಾಯವಾದ ವಿಚಿತ್ರ ರತ್ನ ಪ್ರಭೆಯಿಂದ ಶೋಭಿಸುವ ಒಂದು ಶೋಭಾಕರವಾದ ಮಹಲನ್ನು ಕಂಡನು. ವ॥ ಆ ರತ್ನ ಮಯವಾದ ಮಹಲಿನ ಮಧ್ಯಭಾಗದಲ್ಲಿ ಅನೇಕ ಕನ್ನಿಕೆಯರಿಂದ ಸುತ್ತುವರಿಯಲ್ಪಟ್ಟ ವಳಾಗಿ, ೩೧. ಹೊಳೆಯುತ್ತಿರುವ ಆದಿವರಾಹನ ಮುಖದಲ್ಲಿ ಮೇಲಕ್ಕೆದ್ದಿರುವ ದಾಡೆಯನ್ನು ಒರಗಿಕೊಂಡು ಭೂದೇವಿಯೇ ನಿಂತಿದ್ದಾಳೋ ಎಂಬಂತೆ ಕಪ್ಪುಬಟ್ಟೆ ಯನ್ನು ಹೊದಿಸಿರುವ ಮಂಚದಲ್ಲಿ ಶುಭ್ರವಾದ ದಿಂಬೊಂದನ್ನು ಒರಗಿ ಕುಳಿತುಕೊಂಡಿ ರುವ ಕೋಮಲಾಂಗಿಯಾದ ಕಾದಂಬರೀದೇವಿಯನ್ನು ಚಂದ್ರಾಪೀಡನು ದೂರದಿಂದಲೇ ನೋಡಿದನು. ೩೨. ಆ ಮಂಡಪದ ಕೆಳಗೆ ರತ್ನನಿರ್ಮಿತವಾದ ನೆಲಗಟ್ಟಿನಲ್ಲಿ ಅವಳ ರೂಪವು ಪ್ರತಿಬಿಂಬಿಸಲು ಪಾತಾಳಲೋಕದ ನಾಗರುಗಳೂ, ಸುತ್ತಲೂ ರತ್ನದ ಗೋಡೆ

ಮಂಡಪದುಪರಿಮತಲದೊಳ್
ಕಂಡರಿಸಿದ ಖಚರಮಂಡಲಂ ಪದೆದಬಲಾ
ಮಂಡಲಮಂ ಗಗನಕ್ಕೊಡ
ಗೊಂಡೊಯ್ದಪುದೀಗಳೆಂಬಿನಂ ಸೊಗಯಿಸುಗುಂ ೩೩

ಭುವನತ್ರಯಮಂ ನೋಡ
ಲ್ಕವತರಿಸಿದುದಾಗವೇಟ್ಕುಮೀ ಕಾಂತೆಯನೆಂ
ಬವೊಲೆಸೆದು ತೋಱಿದುದು ಮಣಿ
ಭವನಾಂತರದೊಳ್ ವಿಚಿತ್ರಚಿತ್ರಪ್ರಕರಂ ೩೪

ಹೃದಯದೊಳಗಿಟ್ಟುಕೊಂಡುದೊ
ಪದಪಿಂ ಕಾಮಿನಿಯನೆನೆ ಮಣಿಸ್ತಂಭಸಮೂ
ಹದೊಳೆಲ್ಲಮೆಯ್ದೆ ಮಾತ್ರೊಳ
ಗಿದುದಾಗಳ್ ರೂಪು ಚಿತ್ರರಥನಂದನೆಯಾ ೩೫

ಕೂಡೆ ಮಣಿಭೂಷಣಧ್ವನಿ
ಗಾಡುವ ಸೋಗೆಗಳ ಪರೆದ ಪೀಲಿಯ ಕಣ್ಣಿಂ
ಮಾಡವೆ ಕನ್ಯಕೆಯುಂ ನಡೆ
ನೋಡಲ್ ಕಣ್ದೆಱೆದುದೆಂಬಿನಂ ಸೊಗಯಿಸುಗುಂ ೩೬

ಗಳಲ್ಲಿ ಪ್ರತಿಬಿಂಬಿಸಿರಲು, ದಿಕ್ಪಾಲಕರುಗಳೂ, ರತ್ನದ ಮೇಲ್ಛಾವಣಿಯಲ್ಲಿ ಪ್ರತಿಬಿಂಬಿಸಿರಲು ದೇವತೆಗಳ ಗಡಣವೂ ಈ ಕನ್ಯೆಯನ್ನು ಆದರದಿಂದ ತಮ್ಮ ತಮ್ಮ ಮನೆಗಳಿಗೆ ಬಹುಶಃ ಬಿಡದೆ ಕರೆದುಕೊಂಡುಹೋಗುತ್ತಿದ್ದಾರೆ ಎಂಬಂತೆ ಆ ಚಂದ್ರಮುಖಿಯಾದ ಕಾದಂಬರಿಯ ಆಕಾರವು ಶೋಭಿಸುತ್ತಿತ್ತು. ೩೩. ಆ ಮಂಡಪದ ಮೇಲುಭಾಗದಲ್ಲಿ ದೇವತೆಗಳ ಗುಂಪನ್ನು ಕೆತ್ತಿದ್ದರು. ಅದು ದೇವತೆಗಳು ಆಸೆಯಿಂದ ಆ ಕಾದಂಬರಿಯನ್ನು ಅಲ್ಲಿರುವ ಮಹಿಳೆಯರೊಂದಿಗೆ ಆಕಾಶಕ್ಕೆ ಈಗ ಎತ್ತಿಕೊಂಡು ಹೋಗುತ್ತಾರೋ ಎಂಬಂತೆ ಶೋಭಿಸುತ್ತಿತ್ತು. ೩೪. ಆ ರತ್ನಮಯವಾದ ಮಹಲಿನಲ್ಲಿ ಜಗತ್ತಿನ ಅನೇಕ ಬಗೆಯ ಸಜೀವ ನಿರ್ಜೀವ ವಸ್ತುಗಳನ್ನೆಲ್ಲ ಚಮತ್ಕಾರವಾಗುವಂತೆ ಚಿತ್ರಿಸಿದ್ದರು. ಇದು ಆ ಕನ್ಯಾರತ್ನವನ್ನು ನೋಡುವುದಕ್ಕಾಗಿ ಮೂರು ಲೋಕವೂ ಇಳಿದುಬಂದಿರಬೇಕೆಂಬಂತೆ ಕಾಣುತ್ತಿತ್ತು. ೩೫. ಅಲ್ಲಿದ್ದ ರನ್ನಗಂಬಗಳಲ್ಲಿ ಕಾದಂಬರಿಯ ಆಕಾರವು ಪ್ರತಿಬಿಂಬಿಸಿತ್ತು. ಇದು ಅವು ಪ್ರೀತಿಯಿಂದ ಅವಳನ್ನು ತಮ್ಮ ತಮ್ಮ ಹೃದಯದಲ್ಲಿ ಅಡಗಿಸಿಕೊಂಡಿವೆಯೋ ಎಂಬಂತೆ ತೋರುತ್ತಿತ್ತು. ೩೬. ಅಲ್ಲಿನ ಹೆಂಗಸರ ರತ್ನಾಭರಣಧ್ವನಿಯನ್ನು ಕೇಳಿ ಮಹಲಿನ ನವಿಲುಗಳು ಆನಂದದಿಂದ ಜಾಗರವಾಡುತ್ತಿದ್ದುವು. ಆಗ ಬಿಚ್ಚಿದ ನವಿಲುಗರಿಯ ಕಣ್ಣುಗಳು ಆ ಮಹಲು ಕಾದಂಬರಿಯನ್ನು ಚೆನ್ನಾಗಿ ನೋಡಲು ಕಣ್ಣು

ರಮಣೀರತ್ನಮನಾಗಳೆ
ಎವೆಯಿಕ್ಕದೆ ನೋಟ್ಟ ಬಯಕೆಯಿಂ ಪಡೆದರೊ ತಾ
ಮೆವೆಯಿಕ್ಕದ ಕಣ್ಗಳನೆನ
ಲೆವೆಯಿಕ್ಕದೆ ನೋಡುತಿರ್ದುದಬಲಾನೀಕಂ ೩೭

ಪಿರಿದುಂ ನಖವಿವರದೆ ನೆ
ತ್ತರನೆತ್ತಂ ಕಾರಿದಪುವೊ ಮೆಲ್ಲಡಿಗಳ್ ಬಿ
ತ್ತರಿಸಿದಪುವೊ ವಿದ್ರುಮರಸ
ತರಂಗಿಣಿಯನೆನಿಸಿ ಕಿದಱಿದುವು ಕೆಂಬೆಳಗಂ ೩೮

ಚರಣಾಲಕ್ತಕರಾಗಪಾಟಲಿತ ಲಾವಣ್ಯಾಂಬುಧಾರಾಳಿಯೋ
ಚರಣಾಂಭೋರುಹಯುಗ್ಮನಿರ್ಗಳಿತ ರಾಗೋದ್ಯನ್ಮಯೂಖಾಳಿಯೋ
ಚರಣಾಲಂಕರಣಸ್ಫುರದ್ರುಚಿರ ಮಾಣಿಕ್ಯಾಂಶುಲೇಖಾಳಿಯೋ
ಪಿರಿದುಂ ತಾನೆನಲೇಂ ಪದಾಂಗುಳಿಗಳೊಪ್ಪಂಬೆತ್ತುವೋ ಕಾಂತೆಯಾ ೩೯

ಇಳೆಯುಂ ಪೊಸನುಣ್ಬೆಳಗಿನ
ಬಳಗದೆ ಬಾಸಣಿಸುತಿರ್ದುವಗ್ಗಲಿಸಿ ಧರಾ
ತಳತರಳತಾರಕಾವಳಿ
ಗಳವೆನಲಾ ಚಂದ್ರಮುಖಿಯ ಚರಣನಖಂಗಳ್ ೪೦

ತೆರೆದಿದೆಯೋ ಎಂಬಂತೆ ಶೋಭಿಸುತ್ತಿತ್ತು. ೩೭. ಊಳಿಗದ ಹೆಂಗಸರು ಲೋಕೋತ್ತರ ಸುಂದರಿಯಾದ ಆ ಕಾದಂಬರಿಯನ್ನು ನೋಡಬೇಕೆಂಬ ಹೆಬ್ಬಯಕೆಯಿಂದ ತಾವು ರೆಪ್ಪೆ ಹೊಡೆಯದ ಕಣ್ಣುಗಳನ್ನು ಪಡೆದರೋ ಎಂಬಂತೆ ಅವಳನ್ನು ರೆಪ್ಪೆ ಹೊಡೆಯದೆ ನೋಡುತ್ತಿದ್ದರು. ೩೮. ಅವಳ ಮೃದುವಾದ ಕಾಲುಗಳು ಉಗುರಿನ ರಂಧ್ರಗಳಿಂದ ರಕ್ತವನ್ನು ಹೆಚ್ಚಾಗಿ ಸುರಿಸುತ್ತಿವೆಯೋ ಎಂಬಂತೆಯೂ, ಹವಳದ ರಸದ ಹೊಳೆಯನ್ನೇ ಹರಿಸುತ್ತಿವೆಯೋ ಎಂಬಂತೆಯೂ ಕೆಂಬೆಳಗನ್ನು ಹರಡುತ್ತಿದ್ದುವು ೩೯. ಅವಳ ಕಾಲು ಬೆರಳುಗಳು ಕಾಲಿಗೆ ಬಳಿದುಕೊಂಡಿರುವ ಅರಗಿನರಸದ ಕೆಂಪಿನಿಂದ ಕೆಂಪುಬಣ್ಣವನ್ನು ತಳೆದಿರುವ ಲಾವಣ್ಯವೆಂಬ ನೀರಿನ ಧಾರಾಸಮೂಹವೋ ಎಂಬಂತೆಯೂ, ಪಾದಕಮಲ ದಿಂದ ಹೊರಡುತ್ತಿರುವ ಕೆಂಬಣ್ಣದ ಏರುತ್ತಿರುವ ಕಾಂತಿಗಳ ಸಮೂಹವೋ ಎಂಬಂತೆಯೂ, ಕಾಲಿನ ಆಭರಣಗಳ ಪ್ರಕಾಶಮಾನವಾದ ಹಾಗೂ ರಮ್ಯವಾದ ಮಾಣಿಕ್ಯಮಣಿಯ ಕಾಂತಿಯ ಗುಂಪೋ ಎಂಬಂತೆಯೂ ಬಹಳಮಟ್ಟಿಗೆ ಅಂದವಾಗಿ ದ್ದುವು. ೪೦. ಆ ಚಂದ್ರಮುಖಿಯ ಕಾಲಿನ ಉಗುರುಗಳು ಭೂಮಿಯನ್ನು ಹೊಸದಾದ ಹಾಗೂ ನುಣುಪಾದ ಕಾಂತಿಯ ರಾಶಿಯಿಂದ ಹೆಚ್ಚಾಗಿ ಮುಚ್ಚುತ್ತಿದ್ದುವು. ಮತ್ತು ಅವು ತಳತಳಿಸುವ ಭೂಮಿಗೆ ಇಳಿದುಬಂದಿರುವ ನಕ್ಷತ್ರಗಳ ಸಾಲೋ ಎಂಬಂತೆಯೂ

ಪದೆದಪ್ಪಿದುದೊ ಪೆಱರ್ ನೋ
ಡದಂತು ಮುಸುಕಿದುದೊ ಪುಳಕವಂ ಸೋಂಕಿಂ ತಾ
ಳ್ದಿದುದೆನೆ ನುಣ್ಗದಿರ್ಗಳಿನೆಸೆ
ದುದು ಮಣಿಮಯ ಕಾಂಚಿ ಜಘನದೊಳ್ ಘನಕುಚೆಯಾ ೪೧

ಬಿಡದಡರಿ ಕೊರ್ಬಿ ಕುಚಯುಗ
ವೆಡೆಗಿಱಿದಿರೆ ಮುದ್ದುಮೊಗಮನೆಂದುಂ ನೋಡಲ್
ಪಡೆಯದೆ ಬಡವಾದಂತಿರೆ
ಬಡನಡು ಸೊಗಯಿಸುವುದಾ ಸರೋಜಾನನೆಯಾ ೪೨

ವಿರಚಿಸಿ ಸುಕುಮಾರತೆಯಂ
ಪಿರಿದುಂ ಬೆರಳಿಂದವಂಟಿ ನೋಡಿದನೋ ಪೇ
ಟರವಿಂದೋದ್ಭವನೆನಲಾ
ತರುಣಿಯ ಗಂಭೀರ ನಾಭಿಮಂಡಲಮೆಸೆಗುಂ ೪೩

ಅನುರೂಪಮಪ್ಪಿನಂ ತ್ರಿಭು
ವನವಿಜಯಪ್ರಶಸ್ತಿ ವರ್ಣಾವಳಿಯಂ
ಮನಸಿಜನೆ ಬರೆದನೆನಲಾ
ವನಿತೆಯ ನವರೋಮರಾಜಿ ರಂಜಿಸಿ ತೋರ್ಕುಂ ೪೪

ಕಾಣುತ್ತಿದ್ದವು. ೪೧. ಆ ತೋರಮೊಲೆಯ ತರುಣಿಯ ಸೊಂಟದಲ್ಲಿರುವ ರತ್ನ ಮಯವಾದ ಡಾಬು ಸೊಂಟವನ್ನು ಪ್ರೀತಿಯಿಂದ ತಬ್ಬಿಕೊಂಡಿದೆಯೋ ಎಂಬಂತೆಯೂ, ಇತರರು ಅದನ್ನು ನೋಡಿಯಾರೆಂಬ ಅಸೂಯೆಯಿಂದ ಮುಚ್ಚಿದೆಯೋ ಎಂಬಂತೆಯೂ, ಅದರ ಸ್ಪರ್ಶದಿಂದುಂಟಾದ ಸುಖದಿಂದ ರೋಮಾಂಚವನ್ನು ಪಡೆದಿದೆಯೋ ಎಂಬಂತೆಯೂ ಲಲಿತಕಾಂತಿಯಿಂದ ಶೋಭಿಸುತ್ತಿತ್ತು. ೪೨. ತಾವರೆಯಂತೆ ಮುಖ ವುಳ್ಳ ಕಾದಂಬರಿಯ ಸ್ತನಗಳೆರಡೂ ಬಿಡದೆ ಬೆಳೆದು ಕೊಬ್ಬಿ ಇಕ್ಕಟ್ಟಾಗಿ ಸೇರಿ ಇವಳ ಎದೆಯನ್ನೆಲ್ಲಾ ಆಕ್ರಮಿಸಿಕೊಂಡಿರುವುದರಿಂದ ಮುದ್ದುಮೊಗವನ್ನು ನೋಡಲು ಎಂದೂ ಅವಕಾಶವಿಲ್ಲವಲ್ಲ ಎಂಬ ಚಿಂತೆಯಿಂದ ಕ್ಷೀಣವಾದಂತಿರುವ ಅವಳ ಕೃಶವಾದ ಸೊಂಟವು ಬಹಳ ಸೊಗಸಾಗಿದ್ದಿತು. ೪೩. ಬ್ರಹ್ಮನು ಸೃಷ್ಟಿಮಾಡುವಾಗ ಬಹಳ ಹೆಚ್ಚಾದ ಕೋಮಲತೆಯನ್ನು ಇವಳಲ್ಲಿ ಸೇರಿಸಿ, ಅದು ಸರಿಯಾಗಿ ಅಳವಟ್ಟಿದೆಯೋ ಇಲ್ಲವೋ ಎಂದು ನೋಡಲು ಬೆರಳಿಂದ ಅದುಮಿ ನೋಡಿದನೋ ಎಂಬಂತೆ ಆ ತರುಣಿಯ ಆಳ ವಾದ ಹೊಕ್ಕುಳ ಗುಳಿಯು ಶೋಭಿಸಿತು. ೪೪. ಆ ತರುಣಿಯ ಹೊಸದಾಗಿ ಮೂಡು ತ್ತಿರುವ ಬಾಸೆಯು ಮನ್ಮಥನು "ಇವಳು ಬಹಳ ಅರ್ಹತೆಯನ್ನು ಪಡೆದಿದ್ದಾಳೆ" ಎಂದು ವಿಜಯಪ್ರಶಸ್ತಿವಾಕ್ಯಗಳನ್ನು ಬರೆದಿರುವನೋ ಎಂಬಂತೆ ರಂಜಿಸುತ್ತಿತ್ತು.

ಮೊಗಸಿದಪುದೆತ್ತಲುಂ ಬಿಗಿ
ದೊಗೆದ ಕುಚಾಭೋಗವೆಂದು ಚುಬುಕಮನಾದಂ
ನೆಗಪಿದಪುವೆಂಬಿನಂ ತ
ಳ್ತೊಗೆದುವು ಘನಕುಚೆಯ ರುಚಿರಹಾರ ಕರಂಗಳ್ ೪೫

ತೊಳಗುವ ಕರ್ಣಾಭರಣಂ
ಗಳನಿಳಿದ ಮಯೂಖಮಾಲೆ ಲಾವಣ್ಯರಸೋ
ಜ್ವಳ ಮೃದುಮೃಣಾಳಲತೆಯೆನ
ಲೆಳೆಯಳ ನಳಿತೋಳ್ಗಳೇಂ ಮನಂಗೊಳಿಸಿದುವೋ ೪೬

ಸುರಿದಪುವೊ ರತ್ನವಲಯದ
ಭರದಿಂದೆ ಬಳಲ್ದು ಬೆಮರನೆನಲೆಳವೆಳಗಂ
ಸುರಿವ ನಖನಿಕರದಿಂದಂ
ಕರಮೆಸೆದುವು ಕಮಳಮುಖಿಯ ಕರಕಮಲಂಗಳ್ ೪೭

ನವಯೌವನ ರಾಗರಸಾ
ರ್ಣವದೊಳ್ ತಳತಳಿಸಿ ಪೊಳೆವುತಿರ್ದುವು ಮುತ್ತುಂ
ಪವಳಮುಮೆನೆ ಕಣ್ಗೊಳಿಪುವು
ಯುವತಿಯ ಸುಲಿಪಲ್ಲುಮೆಸೆವ ಬಿಂಬಾಧರಮುಂ ೪೮

೪೫. ಎದೆಯಮೇಲೆ ಗಟ್ಟಿಯಾಗಿ ಮೇಲಕ್ಕೆದ್ದಿರುವ ಇವಳ ದಪ್ಪವಾದ ಸ್ತನಗಳ ಭಾರವು ಮುಖವನ್ನು ತಗ್ಗುವಂತೆ ಮಾಡಿಬಿಟ್ಟಿದೆ, ಇದನ್ನು ಮೇಲಕ್ಕೆತ್ತಬೇಕು ಎಂಬ ಉದ್ದೇಶದಿಂದ ಗಲ್ಲವನ್ನು ಮೇಲಕ್ಕೆ ಎತ್ತುತ್ತಿರುವಂತೆ ತೋರವೊಲೆಯ ಕಾದಂಬರಿಯ ಸುಂದರವಾದ ಹಾರದ ಕಿರಣಗಳೆಂಬ ಕೈಗಳು ಶೋಭಿಸಿದುವು. ಟಿ. ಯಾರಾದರೂ ಮುಖವನ್ನು ತಗ್ಗಿಸಿಕೊಂಡಿದ್ದರೆ ಅದನ್ನು ಮೇಲಕ್ಕೆ ಎತ್ತಲು ಗಲ್ಲವನ್ನು ಹಿಡಿದು ಎತ್ತುತ್ತಾರೆ. ಕೊರಳಿನಲ್ಲಿರುವ ಹಾರದ ಮೇಲುಮುಖವಾದ ಕಿರಣವನ್ನು ಗಲ್ಲವನ್ನೆತ್ತುವ ಕೈಯೆಂದು ವರ್ಣಿಸಿದ್ದಾನೆ. ೪೬. ಪ್ರಕಾಶಿಸುತ್ತಿರುವ ಓಲೆಗಳಿಂದ ಕೆಳಮುಖವಾಗಿ ಇಳಿಯುತ್ತಿರುವ ಕಾಂತಿಗಳಂತೆಯೂ ಮತ್ತು ಲಾವಣ್ಯವೆಂಬ ನೀರಿನಲ್ಲಿ ಬೆಳೆದಿರುವ ಶುಭ್ರವಾಗಿಯೂ, ಮೃದುವಾಗಿಯೂ ಇರುವ ತಾವರೆದಂಟಿನಂತೆಯೂ ಇರುವ ಆ ಬಾಲಿಕೆಯ ಕೋಮಲವಾದ ತೋಳುಗಳು ಮನೋಹರವಾಗಿದ್ದುವು. ೪೭. ಆ ಕಮಲಮುಖಿಯಾದ ಕಾದಂಬರಿಯ ಕರಕಮಲಗಳು ಕೋಮಲವಾದ ಕಾಂತಿಯನ್ನು ಸೂಸುತ್ತಿರುವ ಉಗುರುಗಳಿಂದ ಚೆನ್ನಾಗಿ ಶೋಭಿಸುತ್ತಿದ್ದುವು. ಹಾಗೆ ಕಾಂತಿಯನ್ನು ಹೊರಚೆಲ್ಲುವ ಉಗುರುಗಳಿಂದ ಕೂಡಿದ ಕೈ ರತ್ನದಬಳೆಗಳ ಭಾರದಿಂದ ಬಳಲಿ ಬೆವರನ್ನು ಸುರಿಸುತ್ತಿರುವಂತೆ ಶೋಭಿಸುತ್ತಿತ್ತು. ೪೮. ಹೊಸ ಹರೆಯದಲ್ಲಿ ಉಂಟಾಗುವ ಅನುರಾಗವೆಂಬ ಸಮುದ್ರದಲ್ಲಿ ಮುತ್ತುಗಳೂ ಹವಳಗಳೂ ತಳತಳಿಸಿ ಹೊಳೆಯುತ್ತಿರುವುವೋ ಎಂಬಂತೆ ಶೋಭಿಸುವ ಆ ತರುಣಿಯ ಶುಭ್ರವಾದ ಹಲ್ಲುಗಳೂ, ತೊಂಡೆ

ಮನಸಿಜಕಾಂತಾ ಪರಿವಾ
ದಿನಿಯ ಕನದ್ರತ್ನಕೋಣವೋ ಪೇಟಿವಿಂದೆಂ
ಬಿನೆಗಂ ಕಣ್ಗೊಳಿಸಿದುದಾ
ವನರುಹಲೋಚನೆಯ ರುಚಿರ ನಾಸಾವಂಶಂ ೪೯

ಕಿವಿಗವತಂಸಂ ಪೆಱವೇ
ಕಿವೆ ನೀಳ್ದುಪುವೆಂಬಿನಂ ಮುಖಶ್ರೀಗೆ ನಿವಾ
ಸವೆನಿಪ್ಪಿಂಗಡಲೆಂಬುದು
ಕುವಲಯಲೋಚನೆಯ ರುಚಿರ ಲೋಚನಯುಗಳಂ ೫೦

ಪುದಿದಿರ್ದ ಚೆಲ್ವು ಕಣ್ದೆಱೆ
ದುದು ಮನ್ಮಥಗಂಧಸಿಂಧುರಂ ತಿಲಕಿತವಾ
ದುದೆನಲ್ ಮೃಗಮದತಿಲಕಾಂ
ಕದಿನೆಸೆದುದು ಮಿಱುಪ ಪೆಱೆನೊಸಲ್ ಕೋಮಳೆಯಾ ೫೧

ನಿಮಿರ್ದುವು ಕರ್ಣೋತ್ಪಲದಿಂ
ದಮೆ ಮಧುರಧಾರೆಗಳೆನಿಪ್ಪ ಪಾಲೆಗಳೊಳದೇ
ನಮರ್ದೆಸೆದುದೊ ಮಿಸುಗುವ ಪ
ತ್ರಮಕರ ಮಾಣಿಕ್ಯಕುಂಡಲಂ ಕಾಮಿನಿಯಾ ೫೨

ಹಣ್ಣಿನಂತಿರುವ ತುಟಿಗಳೂ ಕಂಗೊಳಿಸುತ್ತಿದ್ದುವು. ೪೯. ಕಮಲದಂತೆ ಕಣ್ಣುಳ್ಳ ಆ ಕಾದಂಬರಿಯ ಸುಂದರವಾದ ಮೂಗು ಮನ್ಮಥನ ಮಡದಿಯಾದ ರತಿದೇವಿಯ ವೀಣೆಯ ರತ್ನಮಯವಾದ ವಾದನದಂಡವೋ ಎಂಬಂತೆ ಕಂಗೊಳಿಸುತ್ತಿತ್ತು. ೫೦. ಕನ್ನೈದಿಲೆಯಂತೆ ಕಣ್ಣುಳ್ಳ ಕಾದಂಬರಿಯ ಸುಂದರವಾದ ಕಣ್ಣುಗಳು ಕಿವಿಗೆ ಬೇರೆ ಆಭರಣವೇತಕ್ಕೆ ? ಇವೇ ನೀಳವಾಗಿ ಕಿವಿಯವರೆಗೂ ವ್ಯಾಪಿಸಿ ಕಿವಿಗೆ ಆಭರಣವಾಗಿವೆ ಯಲ್ಲ" ಎಂದು ಹೇಳುವಂತೆಯೂ, ಮುಖ ಕಾಂತಿಯೆಂಬ ಲಕ್ಷ್ಮಿಗೆ ವಾಸಸ್ಥಾನವಾದ ಕ್ಷೀರಸಮುದ್ರವೋ ಎಂಬಂತೆಯೂ ಶೋಭಿಸುತ್ತಿದ್ದುವು. ೫೧. ಕೋಮಲೆಯಾದ ಕಾದಂಬರಿಯ ಪ್ರಕಾಶಿಸುವ ಚಂದ್ರನಂದದ ಹಣೆಯು ತುಂಬಿದ್ದ ಸೌಂದರ್ಯವು ಕಣ್ಣು ತೆರೆದುಕೊಂಡಿದೆಯೊ ! ಎಂಬಂತೆಯೂ, ಮನ್ಮಥನೆಂಬ ಮದ್ದಾನೆಯು ಮದನರೇಖೆಯ ಗುರುತಿನಿಂದ ಕೂಡಿಕೊಂಡಿರುವಂತೆಯೂ ಕಸ್ತೂರಿತಿಲಕದಿಂದ ಶೋಭಿಸುತ್ತಿತ್ತು. ೫೨. ಕಾದಂಬರಿಯ ಪ್ರಕಾಶಿಸುವ ಓಲೆ, ಮಕರಾಭರಣ, ಮಾಣಿಕ್ಯಕುಂಡಲಗಳಿಂದ ಅಲಂಕೃತವಾದ ಕಿವಿಯ ಹೊರಭಾಗವು ಮುಡಿದಿರುವ ಕನ್ನೈದಿಲೆಯಿಂದ ಕೆಳಕ್ಕೆ ಹರಿಯುತ್ತಿರುವ ಹೂವಿನರಸದ ಧಾರೆಗಳಿಂದ ಕೂಡಿಕೊಂಡಿರುವಂತೆ ಶೋಭಿಸಿತು.

ಮದಿರಾರಸದಿಂದಂ ಬಾ
ರ್ಚಿದರೋ ಪೇೞನಿಸಿ ಪೊಳೆವ ತಲೆದುಡಿಗೆಯ ರ
ನ್ನದಿನೊಸರ್ವ ರಾಗರುಚಿಯಂ
ಪುದಿದೆಸೆದುದು ಕೇಶಪಾಶವಾ ಕಾಮಿನಿಯಾ ೫೩

ಒಸೆದೊಲವಿಂದೆ ತನ್ನುರಮನೇಱಿಸಿದೊರ್ವಳೆ ಲಕ್ಷ್ಮಿಯೆಂಬ ಸಂ
ತಸದೊಳೆ ಬೀಗುವಂಬುರುಹನಾಭನ ಗರ್ವಮನೀಗಳಿಂತೆ ಮಾ
ಣಿಸುವೆನೆನುತ್ತನೇಕ ಶತಲಕ್ಷ್ಮಿಗಳಂ ಕಮಳಾಯತಾಕ್ಷಿ ಪು
ಟ್ಟಿಸುವವೊಲಿರ್ದಳೊರ್ಮೆಯೆ ನಿಜಪ್ರತಿಬಿಂಬಕದಂಬಕಂಗಳಿಂ ೫೪

ಹರನೊರ್ವಂ ಮನ್ಮಥನುಮ
ನಿರದುರುಪಿದನೆಂದದರ್ಕೆ ಮುಳಿದಂತೆವೊಲೆ
ಲ್ಲರ ಹೃದಯಂಗಳೊಳೋರಂ
ತಿರೆ ಮನ್ಮಥಶತಮನಾಕೆ ಪುಟ್ಟಿಸುತಿರ್ದಳ್ ೫೫

ಎಳವೆಱೆಯೊಂದನೆ ತಲೆಯೊಳ್
ತಳೆದನನಿಱಕೆಯ್ಯಲೆಂದು ಲೀಲಾಸ್ಮಿತದಿಂ
ದೆಳವೆಱೆಯ ಬಳಗಮಂ ಕೋ
ಮಳೆ ದೆಸೆದೆಸೆಗಂದು ಪಸರಿಪಂತೆವೊಲೆಸೆದಳ್ ೫೬

೫೩. ಆ ಸುಂದರಿಯ ಕೇಶಪಾಶವು ತಲೆಯಲ್ಲಿ ಧರಿಸಿಕೊಂಡಿರುವ ಚೂಡಾಮಣಿಯಿಂದ ಹೊರಹೊಮ್ಮುತ್ತಿರುವ ಕೆಂಬೆಳಗಿನಿಂದ ಕೂಡಿಕೊಂಡು ಮದ್ಯದರಸವನ್ನು ಹಾಕಿ ಬಾಚಿದ್ದಾರೋ ಎಂಬಂತೆ ಶೋಭಿಸುತ್ತಿತ್ತು. ೫೪. ಲಕ್ಷ್ಮಿಯೊಬ್ಬಳನ್ನು ತನ್ನ ವಕ್ಷಸ್ಥಳದಲ್ಲಿ ಹಿಗ್ಗಿ ಪ್ರೀತಿಯಿಂದ ಇಟ್ಟುಕೊಂಡಿರುವೆನೆಂಬ ಸಂತೋಷದಿಂದ ಹೆಮ್ಮೆಪಡುತ್ತಿರುವ ಶ್ರೀಮನ್ನಾರಾಯಣನ ಅಹಂಕಾರವನ್ನು ಈಗಲೆ ಅಡಗಿಸುತ್ತೇನೆಂದು ಆ ಕಮಲದಂತೆ ವಿಶಾಲವಾದ ಕಣ್ಣುಳ್ಳ ಕಾದಂಬರಿಯು ಒಮ್ಮೆಲೆ ತನ್ನ ಪ್ರತಿಬಿಂಬಗಳ ಸಮೂಹದಿಂದ ಅನೇಕ ನೂರುಗಟ್ಟಲೆ ಲಕ್ಷ್ಮಿಗಳನ್ನು ಒಟ್ಟಿಗೆ ಹುಟ್ಟಿಸುವಂತೆ ಕಾಣುತ್ತಿದ್ದಳು. ೫೫. ಒಬ್ಬ ಪರಮೇಶ್ವರನು ಸುಮ್ಮನಿರದೆ ಮನ್ಮಥನನ್ನು ಸುಟ್ಟು ಹಾಕಿದುದಕ್ಕೆ ಕೋಪಿಸಿಕೊಂಡು ಆ ಕಾದಂಬರಿಯು ಎಲ್ಲರ ಹೃದಯದಲ್ಲೂ ನೂರಾರು ಮನ್ಮಥರನ್ನು ಒಂದೇ ರೀತಿಯಲ್ಲಿ ಹುಟ್ಟಿಸುತ್ತಿದ್ದಳು. ೫೬. ಒಬ್ಬನೇ ಬಾಲಚಂದ್ರನನ್ನು ತಲೆಯಲ್ಲಿ ಧರಿಸಿರುವ ಚಂದ್ರಶೇಖರನನ್ನು ಕೀಳುಮಾಡಬೇಕೆಂಬ ಆಶಯದಿಂದಲೋ ಎಂಬಂತೆ ಆ ಕೋಮಲೆಯು ತನ್ನ ಬೆಡಗಿನ ನಗೆಯಿಂದ ಬಾಲಚಂದ್ರರ

ಪರಿಚಿತ ಚಕ್ರವಾಕ ಮಿಥುನಂಗಳನೊಯ್ಯನೆ ನಿದ್ರೆಗೆಯ್ಸುವಳ್
ವಿರಹದೆ ನಿದ್ರೆಯುಂ ಪಡೆದುವಿಲ್ಲಿರುಳಲ್ಲಿಯುಮಿಂತಿವೆಂದು ತಾ
ವರೆಯರಜಂಗಳೆಂಬ ಪೊಸನುಣ್ಮಳಲಿಂದೆ ಪುಟಿಲ್ಗಳಂ ಮನೋ
ಹರ ಕೃತಕಪ್ರವಾಹಿನಿಯೊಳಂಗನೆ ಮಾಡಿಸುತಿರ್ದಳರ್ಥಿಯಿಂ ೫೭

ವ॥ ಮತ್ತಮೆಡೆಯಾಡುವೆಳವೆಂಡಿರ ನೂಪುರದ ನುಣ್ಬುರಕ್ಕೆಳಸಿ ಪರಿವ ವಲ್ಲಭಹಂಸನಂ ಮೃಣಾಳಲತೆಯ ಸಂಕಲೆಯೊಳಿಕ್ಕೆಂದು ಹಂಸಪಾಲಿಕೆಯಂ ಬೆಸಸುತ್ತಮಾಭರಣದೊಳಗುರ್ಚಿದ ಪಚ್ಚೆಯ ಪಸರಿಸಿದ ಪಸುರಂ ಪಸುರೆಲೆಗೆತ್ತೆಳಸುವ ವಲ್ಲಭ ಹರಿಣಶಾಬಕಂಗಳ್ಗೆ ಕೆಳದಿಯರ ಕಯ್ಯಲ್ಲಿರ್ದ ಯವಾಂಕುರಂಗಳಂ ನೀಡುತ್ತಂ ದೇವಿ ನೀಂ ನಡಪಿದೆಳಲತೆ ನನೆದೋಱಿತೆಂದು ಬಿನ್ನವಿಸಿದ ಬಾಲಕಿಯರನಾಭರಣಪ್ರದಾನಾತಿಸನ್ಮಾನಂಗಳಿಂ ಸಂತೋಷಂಬಡಿಸುತಿರ್ದಳಂತು ಮಲ್ಲದೆಯುಂ

ನಱುಸುಯ್ಗೆ ತುಂಬಿಗಳ್ ಬಂ
ದೆಱಗೆ ಕರಾಂಬುಜದೆ ಕಮಳಮುಖಿ ಸೋವುತ್ತುಂ
ಮಿಱುಗುವ ನೀಲದ ಬಟ್ಟಂ
ತಿಱಿಕಲ್ಗಳನಾಡುವಂತೆ ಕಣ್ಗೆಸೆದಿರ್ದಳ್ ೫೮

ಗುಂಪನ್ನೇ ದಿಕ್ಕು ದಿಕ್ಕುಗಳಲ್ಲೂ ಹರಡುತ್ತಿರುವಂತೆ ಶೋಭಿಸುತ್ತಿದ್ದಳು. ೫೭. ಇವು ರಾತ್ರಿ ಪರಸ್ಪರ ಅಗಲಿಕೆಯಿಂದ ನಿದ್ರೆಯನ್ನೇ ಮಾಡಿಲ್ಲವಲ್ಲ ಎಂಬ ಕನಿಕರದಿಂದ ಸುಂದರವಾದ ಕ್ರೀಡಾನದಿಯಲ್ಲಿ ತಾವರೆಯ ಹುಡಿಗಳೆಂಬ ಹೊಸದಾದ ಮತ್ತು ನುಣುಪಾದ ಮಳಲುಗಳನ್ನು ಹಾಕಿ ಮಳಲುದಿಣ್ಣೆಯನ್ನು ಏರ್ಪಡಿಸಿ, ಅಲ್ಲಿ ತನಗೆ ಸಲಿಗೆಯಾಗಿರುವ ಚಕ್ರವಾಕದಂಪತಿಗಳನ್ನು ನಿದ್ರೆಮಾಡಿಸುತ್ತಿದ್ದಳು. ವ॥ ಮತ್ತು ಓಡಾಡುತ್ತಿರುವ ಕನ್ನೆಯರ ಕಾಲ್ಗಡಗದ ಇಂಪಾದ ಸ್ವರದಿಂದ ಸೆಳೆಯಲ್ಪಟ್ಟು ಅವರ ಹಿಂದೆ ಹಿಂದೆಯೇ ಓಡಾಡುತ್ತಿರುವ ಮುದ್ದಿನ ಹಂಸವನ್ನು ತಾವರೆಯ ಬಳ್ಳಿಯೆಂಬ ಸಂಕೋಲೆಯಿಂದ ಕಟ್ಟಿಹಾಕು ಎಂದು ಹಂಸಗಳನ್ನು ನೋಡಿ ಕೊಳ್ಳುವ ಊಳಿಗದವಳಿಗೆ ಅಪ್ಪಣೆಮಾಡುತ್ತಿದ್ದಳು. ಕನ್ನೆವಾಡದ ಹೆಂಗಸರ ಒಡವೆಗಳಿಂದ ಹೊಮ್ಮುತ್ತಿರುವ ಪಚ್ಚೆಮಣಿಯ ಹರಡುತ್ತಿರುವ ಹಸಿರುಪ್ರಭೆ ಯನ್ನು ಹಸುರೆಲೆಯೆಂದು ಭ್ರಮಿಸಿ ತಿನ್ನಲು ಆಸೆಪಡುವ ಮುದ್ದಿನ ಮರಿಜಿಂಕೆಗೆ ಕೆಳದಿಯರ ಕೈಯಲ್ಲಿದ್ದ ಯವಧಾನ್ಯದ ಮೊಳಕೆಗಳನ್ನು ತಿನ್ನಿಸುತ್ತಿದ್ದಳು. ಅಮ್ಮ! ನೀವು ನೆಟ್ಟು ಬೆಳೆಸುತ್ತಿದ್ದ ಎಳೆಬಳ್ಳಿಯು ಇಂದು ಹೂಬಿಟ್ಟಿದೆ ಎಂದು ಅರಿಕೆ ಮಾಡಿದ ಊಳಿಗದ ಹುಡುಗಿಯರಿಗೆ ಒಡವೆಗಳನ್ನು ಮೆಚ್ಚುಗೊಟ್ಟು ಸಂತೋಷಪಡಿ ಸುತ್ತಲೂ ಇದ್ದಳು. ಅದಲ್ಲದೆ ೫೮. ಅವಳ ಸುವಾಸನೆಯಿಂದ ಕೂಡಿದ ಉಸುರಿಗೆ ದುಂಬಿಗಳು ಬಂದು ಮುತ್ತುತ್ತಿದ್ದುವು. ಅವುಗಳನ್ನು ತನ್ನ ತಾವರೆಗೈಯಿಂದ ಓಡಿ ಸುತ್ತಿದ್ದಳು. ಆಗ ಅವಳು ಹೊಳೆಯುವ ನೀಲಮಣಿಯ ಗೋಲಿಗಳಿಂದ ಆಟ

ಅರಗಿಳಿಗಳ ರವಮಂ ಪಂ
ಜರದೊಳಗಿರ್ದೊಸಗೆವೇೞ್ದು ಮಾಣಿಸೆನುತ್ತುಂ
ಚರಣಗ್ರಾಹಿಣಿಯಂ ಸುಂ
ದರಿ ಲೀಲಾಂಬುಜದಿಂದೆ ನಸುನಗುತ್ತಂ ಪೊಯ್ದಳ್ ೫೯

ವ॥ ಮತ್ತಂ ಮಹಾಶ್ವೇತೆಯತ್ತಣಿಂ ಬಂದ ನೃಪರೂಪಚಂದ್ರಮನ ರೂಪಾತಿಶಯ ಗುಣಂಗಳಂ ಬಿನ್ನವಿಸುತಿರ್ದ ಕೇಯೂರಕನ ಮೊಗಮಂ ನೋಡಿ

ಬರವಿದು ಚೋದ್ಯಮಾರತನಯಂ ಪೆಸರಾವುದು ರೂಪದೆಂತುಟೋ
ಪರೆಯಮದಿನ್ನೆಗಂ ತಡೆದೆ ನೀಂ ನುಡಿಯಾದುದೆ ನಿನ್ನೊಳಾತನೊಳ್
ಪರಿಚಯಮೆಂತು ಸಂಗಳಿಸಿತಿಲ್ಲಿಗೆ ಬಂದಪನೇ ಎನುತ್ತಮಾ
ತರುಣಿ ನಿರಂತರಂ ಬೆಸಗೊಳುತ್ತಿರಲಾ ಮನುಜೇಂದ್ರಚಂದ್ರನಂ ೬೦

ವ॥ ಎಂದು ಮಗುೞ್ದು ಮಗುೞ್ದು ಬೆಸಗೊಳುತ್ತಿರ್ದ ಗಂಧರ್ವರಾಜನಂದನೆಯನತಿ ದೂರದೊಳ್ ವಿಸ್ಮಿತಾಂತರಂಗನಾಗಿ ನೋಡಿ

ಇವಳಂ ನೋಡಲ್ ಪಡೆದೆ
ನ್ನ ವಿಲೋಚನಮಾವ ನೋಂಪಿಯಂ ನೋಂತುವೊ ಮಾ
ಯ್ದ ವಿಧಾತ್ರನೇಕೆ ವಿರಚಿಸ
ನೊ ವಿಲೋಚನಮಯಮೆನಲ್ ಮದಿಂದ್ರಿಯಚಯಮಂ ೬೧

ಕಲ್ಲಾಟವನ್ನು ಆಡುತ್ತಿರುವಂತೆ ಶೋಭಿಸುತ್ತಿದ್ದಳು. ೫೯. ಪಂಜರದೊಳಗಿರುವ ಅರಗಿಳಿಗಳ ಧ್ವನಿಯನ್ನು ಒಳ್ಳೆಯ ಸುದ್ದಿಯನ್ನು ಅವುಗಳಿಗೆ ತಿಳಿಸಿ ನಿಲ್ಲಿಸುವಂತೆ ಮಾಡು ಎಂದು ಹೇಳಿ ನಸುನಗುತ್ತಾ ಕಾಲು ಅಮುಕುವ ಊಳಿಗದವಳನ್ನು ಕಾದಂಬರಿಯು ತನ್ನ ಕೈಯಲ್ಲಿದ್ದ ಕ್ರೀಡಾಕಮಲದಿಂದ ಹೊಡೆದಳು. ವ॥ ಮತ್ತು ಮಹಾಶ್ವೇತೆಯ ಕಡೆಯಿಂದ ಬಂದ ರಾಜಕುಮಾರನ ರೂಪಾತಿಶಯವನ್ನೂ ಗುಣಗಳನ್ನೂ ಅರಿಕೆಮಾಡುತ್ತಿದ್ದ ಕೇಯೂರಕನ ಮುಖವನ್ನು ನೋಡಿ ೬೦. "ಅವನ ಬರುವಿಕೆಯು ಆಶ್ಚರ್ಯಕರವಾಗಿದೆ. ಅವನು ಯಾರ ಮಗ ? ಅವನ ಹೆಸರೇನು ? ಆಕಾರವನ್ನು ನೋಡಿದರೆ ಎಷ್ಟು ವಯಸ್ಸಿನವನಂತೆ ಕಾಣುತ್ತಿದ್ದನು ? ಎಷ್ಟುಕಾಲ ನೀನು ಅಲ್ಲಿದ್ದೆ ? ನಿಮ್ಮಿಬ್ಬರಿಗೂ ಮಾತುಕತೆ ನಡೆಯಿತೆ ? ಮಹಾಶ್ವೇತೆಗೆ ಅವನ ಪರಿಚಯವು ಹೇಗೆ ಉಂಟಾಯಿತು ? ಇಲ್ಲಿಗೆ ಬರುತ್ತಾನೆಯೆ ?" ಇವೇ ಮೊದಲಾದ ಚಂದ್ರಾಪೀಡನಿಗೆ ಸಂಬಂಧಿಸಿದ ವಿಷಯಗಳನ್ನು ಕಾದಂಬರಿಯು ಒಂದೇಸಮನೆ ಕೇಳುತ್ತಿದ್ದಳು. ವ॥ ಹೀಗೆ ಮತ್ತೆ ಮತ್ತೆ ಕೇಳುತ್ತಿದ್ದ ಗಂಧರ್ವರಾಜಪುತ್ರಿಯಾದ ಕಾದಂಬರಿಯನ್ನು ದೂರದಲ್ಲೆ ಆಶ್ಚರ್ಯದಿಂದ ಕೂಡಿ ನೋಡಿ, ೬೧. ನನ್ನ ಕಣ್ಣು ಈಗ ಇವಳನ್ನು ನೋಡಲು ಯಾವ ತಪಸ್ಸನ್ನು ಮಾಡಿದ್ದಿತೊ ? ಕೆಟ್ಟ ಬ್ರಹ್ಮನು ನನ್ನ ಇಂದ್ರಿಯಗಳನ್ನೆಲ್ಲ

ಇವಳಂ ಸಮೆದಂದಬ್ಜೋ
ದ್ಭವಕರಸಂಸ್ಪರ್ಶಖೇದದಿಂದಾದಂ ಸಂ
ಭವಿಸಿದ ಬಾಷ್ಪಾಂಬುಗಳಿಂ
ಕುವಲಯ ಕುಮುದಂಗಳಾದುವಾಗಲೆವೇಟ್ಕುಂ ೬೨

ಬಗೆಯೊಳ್ ಪಿರಿದುಂ ಕೌತುಕ
ವೊಗೆಯಲ್ಕನ್ಯೋನ್ಯವೊಲ್ದು ನೋಡುತ್ತಿರ್ಪ
ನ್ನೆಗವೊರ್ವೊರ್ವರ ದಿ
ಟ್ಟಿಗಳುಂ ಸಮುದಿಟ್ಟಿಯಾದುವಂತಾಕ್ಷಣದೊಳ್ ೬೩

ವ॥ ಅಂತು ನೋಡಿ

ಈತಂ ಕೇಯೂರಂ ಪೇ
ಟ್ದಾತಂ ಪುಗುತರ್ಪನೆಂದೆನುತ್ತಂ ತದ್ರೂ
ಪಾತಿಶಯಕ್ಕಚ್ಚರಿವ
ಟ್ಟಾ ತರುಣಿಯುಮಂತೆ ಬಿಡದೆ ನೋಡುತ್ತಿರ್ದಳ್ ೬೪

ಒಡವೆ ಪುಳಕಾಂಕುರಂಗಳ್
ಮೊದಲೊಳ್ ಭೂಷಣದ ರವಮೆರಡನೆಯ ಸೂಟಿಗ್ ಮು
ನ್ನಿದಿರೇಟಿ ತಾಂ ಬಟಿಕ್ಕಿರ
ದಿದಿರೆಟ್ದಳ್ ತರಳನಯನೆ ಸಂಭ್ರಮದಿಂದಂ ೬೫

ಬರಿಯ ಕಣ್ಣುಗಳನ್ನಾಗಿಯೇ ಏತಕ್ಕೆ ಮಾಡಲಿಲ್ಲವೊ ? ೬೨. ಬ್ರಹ್ಮನು ಇವಳನ್ನು ಸೃಷ್ಟಿಸುವಾಗ ಅವನ ಕೈಯ ಮುಟ್ಟುವಿಕೆಯಿಂದ ಇವಳಿಗೆ ಬಹಳ ನೋವಾಗಿ ಅದರಿಂದ ಕಣ್ಣೀರು ಬಂದು, ಆ ಕಣ್ಣೀರುಗಳಿಂದಲೇ ಕನ್ನೈದಿಲೆ, ಕೆಂದಾವರೆಗಳು ಹುಟ್ಟಿರಬೇಕು! ೬೩. ಮನಸ್ಸಿನಲ್ಲಿ ಬಹಳ ಆಶ್ಚರ್ಯವುಂಟಾಗಲು ಚಂದ್ರಾಪೀಡನೂ ಕಾದಂಬರಿಯೂ ಒಬ್ಬರನ್ನೊಬ್ಬರು ಬಹಳ ಕುತೂಹಲದಿಂದ ನೋಡುತ್ತಿದ್ದರು. ಆಗ ಏಕಕಾಲದಲ್ಲಿ ಇಬ್ಬರ ದೃಷ್ಟಿಗಳೂ ಒಟ್ಟಿಗೆ ಸೇರಿದುವು. ವ॥ ಹಾಗೆ ನೋಡಿ, ೬೪. ಕೇಯೂರಕನು ಹೇಳಿದ ಪುರುಷನೇ ಬಂದಿರಬೇಕು ಎಂದು ಯೋಚಿಸುತ್ತ ಅವನ ಸೌಂದರ್ಯಾತಿಶಯಕ್ಕೆ ಆಶ್ಚರ್ಯಪಟ್ಟು, ಆ ಕಾದಂಬರಿಯೂ ಹಾಗೆಯೆ ಅವನನ್ನು ಬಿಡದೆ ನೋಡುತ್ತಿದ್ದಳು. ೬೫. ಆಗ ಅವಳ ದೇಹದಲ್ಲಿ ಮೊದಲು ರೋಮಾಂಚವು ಎದ್ದಿತು. ಆಮೇಲೆ ಒಡವೆಗಳ ಝಣಝಣಶಬ್ದವು ಎದ್ದಿತು. ಬಳಿಕ ಚಂಚಲವಾದ ಕಣ್ಣುಳ್ಳ ಕಾದಂಬರಿಯು

ವ॥ ಅನಂತರಮನಂಗಶರಪರವಶತೆಯಿಂ ಬಿಂದು ಬಿಡುವ ಬೆಮರನಿದಿರೆಟ್ದ ಬೞಲ್ಕೆ ಗೇಱಿಸಿಯುಂ ತೊಡೆ ದಡದಡಿಸೆ ನಡೆಗಟ್ಟು ಕಡಲುಲಿಗೆ ಬೞಿಸಲ್ವ ಕಳಹಂಸಮಂಡಲಕ್ಕಯಶಮಂ ಮಾಡಿಸಿಯುಂ ನಿಡುಸುಯ್ಯೆಲರಿಂ ಮೇಲುದು ತೊಲಗೆ ಚಾಮರದಲರ್ಗೆ ನಿಮಿತ್ತತೆಯ ನೊದರ್ಚಿಯುಂ ಅಂತಃಪ್ರವಿಷ್ಟ ಚಂದ್ರಾಪೀಡಸ್ಪರ್ಶಲೋಭದಿಂದಮೆನೆ ಕಡುಪಾರ್ವ ಮೆಲ್ಲೆದೆ ಯೊಳ್ ಕಯ್ಯನಿಕ್ಕಿ ಕುಚಯುಗಾಚ್ಛಾದನದ ಮೇಲೆ ನೆವಮಿಕ್ಕಿಯುಂ ನುಡಿಯಲುಜ್ಜುಗಮಂ ಲಜ್ಜೆ ಮಾಣಿಸೆ ಮುಖಸೌರಭಕ್ಕೆಱಗುವ ಮಱಿದುಂಬಿಯ ಮೇಲೆ ದೂರನುತ್ಪಾದಿಸಿಯುಂ ಕುಸುಮಾ ಯುಧನಿಸೆ ನೊಂದು ಸೀತ್ಕಾರಮೊಗೆಯೆ ಪೂವಲಿಗೆದಱಿದ ಪೊಂಗೇದಗೆಯ ಗಱಿಯ ಕಿಱುಮುಳ್ಗೆ ಬಱಿದೆ ಬೈಗುಳಂ ಮಾಡಿಯುಂ ಎಡೆವಿಡದೆ ಕೈ ನಡುಗೆ ನೆಲನುಗ್ಗಡಿಪ ಪಡಿಯಱತಿಯರಂ ನಿವಾರಿಸಿದಪ್ಪಳೆನಿಸಿಯುಂ ಇಂತು ಮದನವಿಕೃತಂಗಳಂ ಪಲತೆಱದೆ ಮಱೆಯಿಸುತ್ತಿರೆಯುಂ ತಾನುಂ ತತ್ಕಾಂತೆಯೊಂದೆರಡಡಿಯನಿದುವಲ್ಲಿ

ಸಂಭ್ರಮದಿಂದ ಆಸನವನ್ನು ಬಿಟ್ಟು ಎದ್ದಳು. ವ॥ ಆಗ ಅವನನ್ನು ನೋಡಿ ಅವಳಿಗೆ ಹಲವು ಬಗೆಯ ಮದನವಿಕಾರಗಳುಂಟಾದುವು. ಅವುಗಳನ್ನು ಅವಳು ಹಲವು ಬಗೆಗಳಿಂದ ಮುಚ್ಚುತ್ತಿದ್ದಳು. ಹೇಗೆಂದರೆ—ಕಾಮಪರವಶತೆಯಿಂದ ಹನಿಹನಿ ಯಾಗಿ ಹೊರಡುವ ಬೆವರನ್ನು ಆಗಂತುಕನನ್ನು ಸ್ವಾಗತಿಸುವುದಕ್ಕಾಗಿ ಮೇಲಕ್ಕೆ ಎದ್ದ ಆಯಾಸಕ್ಕಾಗಿ ಎಂದು ಆರೋಪಿಸಲಾಯಿತು. ಕಾಮವಿಕಾರದಿಂದ ತೊಡೆ ನಡುಗಲು ನಡಿಗೆಗೆ ಭಂಗವುಂಟಾಯಿತು. ಕಾಲಂದಿಗೆಯ ಧ್ವನಿಗೆ ಹತ್ತಿರಕ್ಕೆ ಬರುವ ರಾಜಹಂಸಗಳ ಮೇಲೆ ಕೆಟ್ಟಹೆಸರನ್ನು ಹೊರಿಸಲಾಯಿತು. ನಿಟ್ಟುಸಿರಿನ ಗಾಳಿಯಿಂದ ಮೇಲು ಹೊದಿಕೆಯು ಜಾರಿಬೀಳಲು ಚಾಮರದ ಗಾಳಿಯಿಂದ ಹೀಗಾಯಿತೆಂದು ಕಾರಣವನ್ನೊ ಡ್ಡಲಾಯಿತು. ಅವಳ ಹೃದಯವನ್ನು ಪ್ರವೇಶಮಾಡಿರುವ ಚಂದ್ರಾಪೀಡನನ್ನು ಮುಟ್ಟಬೇಕೆಂಬ ಆಸೆಯಿಂದಲೋ ಎಂಬಂತೆ ನಡುಗುತ್ತಿರುವ ಎದೆಯಮೇಲೆ ಕೈಯಿಟ್ಟು ಸ್ತನಗಳನ್ನು ಮುಚ್ಚುವುದಕ್ಕಾಗಿ ಎಂದು ನೆಪವನ್ನು ಹೇಳಲಾಯಿತು. ಮಾತನಾಡಲು ಮಾಡಿದ ಪ್ರಯತ್ನವನ್ನು ನಾಚಿಕೆಯು ಅಡ್ಡಪಡಿಸಲು, ಬಾಯಿಯ ಸುವಾಸನೆಗೆ ಮುತ್ತುವ ಮರಿದುಂಬಿಗಳ ಮೇಲೆ ದೂರು ಹೇರಲಾಯಿತು. ಮನ್ಮಥನು ಬಾಣದಿಂದ ಹೊಡೆಯಲು ಉಂಟಾದ ನೋವಿನಿಂದ ಸೀತ್ಕಾರವುಂಟಾಗಲು ನೆಲದಮೇಲೆ ತಳಿದಿರುವ ಹೊಂಗೇದಗೆಯ ಗರಿಯ ಸಣ್ಣ ಮುಳ್ಳುಗಳಿಂದ ನೋವಾಯಿತೆಂದು ಅವನ್ನು ನಿಂದಿಸ ಲಾಯಿತು. ಒಂದೇಸಮನೆ ಕೈನಡುಗುತ್ತಿರಲು ಅದನ್ನು ಪಾದಾವಧಾನವನ್ನು ಹೇಳುವ ಪ್ರತೀಹಾರಿಯನ್ನು ತಡೆಯುತ್ತಿರುವಂತೆ ನಟಿಸಲಾಯಿತು. ಹೀಗೆ ಆಗ ಉಂಟಾದ ಕಾಮ ವಿಕಾರವನ್ನು ನಾನಾಬಗೆಯಿಂದ ಮುಚ್ಚುತ್ತಿರಲಾಗಿ ಆ ಕಾದಂಬರಿಯು ಹೇಗೋ ಒಂದೆ

ವನಿತಾಮೇಡನ ರತ್ನಕಾಂತಿ ಮಱೆಯಾದತ್ತೆಂದು ತದ್ಭೂಷಣ
ಧ್ವನಿ ಸಂಭಾಷಣಮೆಂದು ಕಾಂತೆ ಹೃದಯಾಂತರ್ಲಗ್ನೆ ತಾನಾಗಿರ
ಲ್ಕೆನಗಿನ್ನೇನೊಳಗಾದಳೆಂದೆಸೆವ ದೇಹಚ್ಛಾಯೆ ಮೆಯ್ವೊರ್ದೆ ಕಾ
ಮಿನಿ ತಳ್ತಪ್ಪಿದಳೀಗಳೆಂದು ಬಗೆದಂ ಭೂಪಾಲವಿದ್ಯಾಧರಂ ೬೬

ವ॥ ಅಂತಾ ಕಾಂತೆಯೆಂತಾನುಂ ಕತಿಪಯಪದಂಗಳಂ ನಡೆದು

ಪಲವು ದಿವಸಕ್ಕೆ ಕಂಡೊಗೆ
ದೊಲವಿಂ ಜಗಿಯಪ್ಪಿದಳ್ ಮಹಾಶ್ವೇತೆಯನಾ
ಲಲನೆ ಮಹಾಶ್ವೇತೆಯುಮಾ
ಲಲನೆಯನನುರಾಗದಿಂದಮಪ್ಪಿದಳಾಗಳ್ ೬೭

ವ॥ ಅನಂತರಂ ಮಹಾಶ್ವೇತೆ ಕಾದಂಬರಿಯನಿಂತೆಂದಳ್ ಚಂದ್ರಾಪೀಡನೆಂಬೀ ಮಹಾನುಭಾವಂ ಭಾರತವರ್ಷದ ರಾಜನುಂ ತುರಗಖುರಮುಖೋಲ್ಲೇಖಿದತ್ತ ಚತುಸ್ಸಮುದ್ರ ಮುದ್ರನುಂ ಕ್ಷಪಿತ ಪ್ರಜಾಪೀಡನುಮೆನಿಸಿದ ತಾರಾಪೀಡನರೇಂದ್ರಂಗೆ ನಂದನನುಂ ನಿಜಭುಜ ಶಿಲಾಸ್ತಂಭವಿಶ್ರಾಂತ ವಿಶ್ವವಿಶ್ವಂಭರಾಪೀಡನುಮೆನಿಸಿ ದಿಗ್ವಿಜಯಪ್ರಸಂಗದಿಂ ಬಟಿಸಂದೀ

ರಡು ಹೆಜ್ಜೆಯನ್ನಿಡುತ್ತಿರುವಲ್ಲಿ ೬೬. ಚಂದ್ರಾಪೀಡನು ಕಾದಂಬರಿಯ ಮೈಮೇಲಿನ ಒಡವೆಗಳ ಪ್ರಭೆಯನ್ನು ಕಣ್ಣಾರೆ ನೋಡುವುದಕ್ಕೆ ಪ್ರತಿಬಂಧಕವಾದ ತೆರೆಯೆಂದು ಭಾವಿಸಿದನು. ಅವಳ ಒಡವೆಗಳ ಧ್ವನಿಯನ್ನು ಅವಳೊಂದಿಗೆ ಮಾಡುವ ಸಂಭಾಷಣೆ ಯೆಂದು ಭಾವಿಸಿದನು. ಅವಳು ತನ್ನ ಮನಸ್ಸನ್ನು ಒಳಹೊಕ್ಕಿರುವುದನ್ನೇ ಇನ್ನೇನು ಮದುವೆಯೇ ಆಯಿತೆಂದು ಯೋಚಿಸಿದನು. ಅವಳ ಶರೀರದ ಕಾಂತಿಯು ತನ್ನ ಮೇಲೆ ಬಿದ್ದಿರಲಾಗಿ ಅವಳು ತನ್ನನ್ನು ಈಗ ಗಾಢವಾಗಿ ತಬ್ಬಿಕೊಂಡಳೆಂದೇ ಭಾವಿಸಿ ದನು ! ವ॥ ಹಾಗೆ ಆ ರಮಣಿಯು ಹೇಗೋ ಕೆಲವು ಹೆಜ್ಜೆನಡೆದು, ೬೭. ಕಾದಂ ಬರಿಯು ಮಹಾಶ್ವೇತೆಯನ್ನು ಬಹಳ ದಿನಗಳಾದಮೇಲೆ ಭೇಟಿಯಾಗಿರುವುದರಿಂದ ಉಂಟಾಗಿರುವ ಅತಿಶಯಸ್ನೇಹದಿಂದ ಗಟ್ಟಿಯಾಗಿ ತಬ್ಬಿಕೊಂಡಳು. ಮಹಾಶ್ವೇತೆಯೂ ಕೂಡ ಆಗ ಅವಳನ್ನು ಸ್ನೇಹದಿಂದ ತಬ್ಬಿಕೊಂಡಳು. ವ॥ ಬಳಿಕ ಮಹಾಶ್ವೇತೆಯು ಕಾದಂಬರಿಯನ್ನು ಕುರಿತು ಹೀಗೆ ಹೇಳಿದಳು : "ಚಂದ್ರಾಪೀಡನೆಂಬ ಈ ಮಹಾನು ಭಾವನು ಭಾರತವರ್ಷದ ಮಹಾರಾಜನಾದ ಕುದುರೆಗಳ ಗೊರಸಿನ ತುದಿಯಿಂದ ನೆಲ ವನ್ನು ಕೆರೆಯುವಿಕೆಯಿಂದ ನಾಲ್ಕು ಸಮುದ್ರಗಳ ತೀರದಲ್ಲಿ ತನ್ನ ದಿಗ್ವಿಜಯದ ಚಿಹ್ನೆ ಯನ್ನು ಕೆತ್ತಿರುವ (ನಾಲ್ಕುಸಮುದ್ರಗಳ ಮಧ್ಯದಲ್ಲಿರುವ ಭೂಮಿಯನ್ನೆಲ್ಲಾ ಗೆದ್ದು ಕೊಂಡಿರುವ) ಪ್ರಜೆಗಳ ಕಷ್ಟಗಳನ್ನು ನಿವಾರಿಸುವ ತಾರಾಪೀಡನೆಂಬ ಮಹಾರಾಜನ ಮಗನು. ಅಲ್ಲದೆ ತನ್ನ ಭುಜಗಳೆಂಬ ಕಲ್ಲುಕಂಭದಲ್ಲಿ ಅನಾಯಾಸವಾಗಿ ಇರುವ ಸಮಸ್ತ

ಪ್ರದೇಶಕ್ಕೆ ಬಂದನಲ್ಲದೆಯುಂ ಪರಿತ್ಯಕ್ತ ಸಕಲಸಂಗೆಯಾಗಿ ಕಲ್ಲೆರ್ದೆಯಳೆನಿಸಿದೆನ್ನಂ ಕಾಣಲೊಡನೆ ಸ್ವಭಾವಸರಳತೆಯನಪ್ಪುಕೆಯ್ದು ನಿಜಗುಣದಿಂ ನಿಷ್ಕಾರಣಬಂಧುವುಂ ನಿರ್ನಿಮಿತ್ತಮಿತ್ರನುಮೆನಿಸಿದನಂತುಮಲ್ಲದೆಯುಂ

ಒದವಿದ ದಾಕ್ಷಿಣ್ಯಕ್ಕಂ
ವಿದಗ್ಧವೃತ್ತಿಗಮಪಾರಗಾಂಭೀರ್ಯಕ್ಕಂ
ಮೊದಲೆನಿಸಿದ ಸಕಲಗುಣಾ
ಸ್ಪದರಂ ಜಗದೊಳಗೆ ಪಡೆವುದಸದಳಮಲ್ತೇ ೭೮

ವ॥ ಅದುಕಾರಣದಿಂ ಪ್ರಜಾಪತಿಯ ರೂಪನಿರ್ಮಾಣಕೌಶಲಮುಮಂ ಎಡೆವಱಿಯದೆ ನಿಂದ ಲಕ್ಷ್ಮಿಯ ವಿವೇಕಮುಮಂ ವಸುಂಧರೆಯ ಸದ್ಭರ್ತೃತಾಸುಖಮುಮಂ ಮರ್ತ್ಯಲೋಕದ ಸಫಲತೆಯುಮಂ ಕಲಾಕಲಾಪದ ಮೇಳಾಪಕಮುಮಂ ಸೌಭಾಗ್ಯದ ಭಾಗ್ಯಮುಮಂ ಮನುಷ್ಯರ ಗ್ರಾಮ್ಯತೆಯುಮಂ ನೀನುಂ ಕಾಣ್ಬೆಯೆಂದೆಂತಾನುಮಿಲ್ಲಿಗೊಡಗೊಂಡು ಬಂದೆಂ

ಅರಸನನಾಂ ಕಂಡಱಿಯೆಂ
ಪರಿಚಯಮಿಲ್ಲೆನ್ನೊಳೆಂದು ಮಿಗೆ ತಾಂ ನಾಣ್ಚು
ತ್ತಿರದಿಂದೆನ್ನೊಳದೆಂತಂ
ತಿರೆ ನೀಂ ನೆಗಟ್ಬುದು ನಿರಂತರಂ ಕಮಲಮುಖೀ ೭೯

ಜಗತ್ತೆಂಬ ಆಭರಣವುಳ್ಳವನು (ಅನಾಯಾಸವಾಗಿ ಭೂಮಂಡಲವನ್ನು ಆಳುತ್ತಿರುವವನು). ಇವನು ದಿಗ್ವಿಜಯಪ್ರಸಂಗದಿಂದ ಈ ಸ್ಥಳಕ್ಕೆ ದಯಮಾಡಿಸಿದ್ದಾನೆ. ಅಲ್ಲದೆ ಸರ್ವಸಂಗಪರಿತ್ಯಾಗ ಮಾಡಿರುವ ಕಲ್ಲೆದೆಯುವಳಾದ ನನ್ನನ್ನು ಕಂಡಕೂಡಲೆ ನೈಜವಾದ ಸರಳಸ್ವಭಾವವನ್ನು ತಾಳಿ ತನ್ನ ಗುಣಗಳಿಂದ ನನಗೆ ಅಕಾರಣಬಂಧುವೂ ಅಕಾರಣ ಮಿತ್ರನೂ ಆಗಿದ್ದಾನೆ. ಅದಲ್ಲದೆ ೭೮. ಮಿಗಿಲಾದ ದಾಕ್ಷಿಣ್ಯಕ್ಕೂ, (ಎಲ್ಲರಲ್ಲೂ ಒಳ್ಳೆಯತನವನ್ನು ತೋರಿಸುವಿಕೆ) ಜಾಣತನಕ್ಕೂ, ಅತಿಶಯವಾದ ಗಾಂಭೀರ್ಯಕ್ಕೂ ಮೊದಲನೆಯವನೆನಿಸಿಕೊಂಡಿರುವ, ಸಮಸ್ತಗುಣಗಳಿಂದ ಪರಿಪೂರ್ಣವಾಗಿರುವ ಜನರನ್ನು ಪ್ರಪಂಚದಲ್ಲಿ ಪಡೆಯುವುದು ಅಸಾಧ್ಯವಲ್ಲವೆ ? ವ॥ ಆ ಕಾರಣದಿಂದ ಬ್ರಹ್ಮನಿಗೆ ಸೌಂದರ್ಯನಿರ್ಮಾಣದಲ್ಲಿರುವ ಪ್ರವೀಣತೆಯನ್ನೂ, ಇವನಲ್ಲಿ ಅವಿಚ್ಛಿನ್ನವಾಗಿ ನೆಲಸಿರುವ ಲಕ್ಷ್ಮಿಯ ವಿವೇಕವನ್ನೂ, ಇವನಿಂದ ಭೂಮಿಗೆ ದೊರೆತ ಒಳ್ಳೆಯ ಒಡೆಯನನ್ನು ಪಡೆದ ಸುಖವನ್ನೂ, ಇವನಿಂದ ಭೂಲೋಕವು ಪಡೆದಿರುವ ಕೃತಾರ್ಥತೆಯನ್ನೂ, ಕಲೆಗಳ ಸಮೂಹವೆಲ್ಲ ಒಂದೇ ಕಡೆ ಸೇರಿರುವುದನ್ನೂ, ಇವನಲ್ಲಿರುವ ಸೌಭಾಗ್ಯದ ಸಮೃದ್ಧಿಯನ್ನೂ, ಮನುಷ್ಯರ ನಾಗರಿಕತೆಯನ್ನೂ ನೀನೂ ನೋಡಬೇಕೆಂದು ಇವನನ್ನು ಪ್ರಯತ್ನಪೂರ್ವಕವಾಗಿ ಇಲ್ಲಿಗೆ ಕರೆದುಕೊಂಡು ಬಂದಿದ್ದೇನೆ. ೭೯. ಎಲೈ, ಕಮಲದಂತೆ ಮುಖವುಳ್ಳವಳೆ, ಈ ರಾಜನನ್ನು ನಾನು ಇದುವರೆಗೂ ನೋಡಿಯೇ ಇಲ್ಲ. ಹಾಗೂ ಇವನ ಪರಿಚಯವೂ ನನಗಿಲ್ಲ ಎಂದು ಹೆಚ್ಚಾಗಿ ನಾಚಿಕೆಪಡದೆ ಈಗ ನೀನು

ವ॥ ಎಂದು ಮಹಾಶ್ವೇತೆ ಕಾದಂಬರಿಗಱಿಪುವುದುಂ ಚಂದ್ರಾಪೀಡನುಂ ಕಯ್ಗಳಂ ಮುಗಿಯೆ ಸರ್ವಾಂಗಪುಳಕಮುಂ ತಳೆದು

ಪಿರಿದೊಂದಕ್ಕಱೊಳೊಲ್ದು ನೋಟ್ಪವಳ ದೀರ್ಘಾಪಾಂಗದೇಶಕ್ಕೆ ಚ
ಚ್ಚರಮಾಗಳ್ ಪರಿತಂದ ಸೇದೆಯೊದವಲ್ ಘರ್ಮೋದಬಿಂದೂತ್ಕರಂ
ಸುರಿವುತ್ತಿರ್ಪುದು ಕಣ್ಣಪಾಪೆಗೆಲೆ ನೋಡೆಂಬಂದದಿಂ ಸ್ನೇಹನಿ
ರ್ಭರವಾ ಕಾಂತೆಗೆ ಭೋಂಕೆನಲ್ ಸುರಿದುವಾಸಂದಾಶ್ರುಬಿಂದೂತ್ಕರಂ ೭೦

ಚರಣಾಂಗುಷ್ಠದೆ ನೆಲನಂ
ಬರೆವೀ ನೆವದಿಂದೆ ತನಗೆ ಬರೆತೆಗೆದಳೊ ಪೇ
ಟಿರಸನನೆನಲವಳ ನಖಾಂ
ತರದೊಳ್ ಪೊಳೆದತ್ತು ರೂಪು ಭೂಪೋತ್ತಮನಾ ೭೧

ನಡೆನೋಡುವ ಕನ್ನಿಕೆಯರ
ಕಡೆಗಣ್ಣಂ ಸಾರ್ದು ಪರಿವ ಕರಿಯಾಲಿಗಳೊ
ಗ್ಗಡಿಸಿದವತಂಸ ಮಧುಕರ
ದೊಡನಾಡುವ ಮಧುಕರಂಗಳೆನಿಸಿದುವಾಗಳ್ ೭೨

ನನ್ನಲ್ಲಿ ಹೇಗೆ ಇದ್ದೀಯೋ ಅದೇ ರೀತಿ ಇವನಲ್ಲೂ ಯಾವಾಗಲೂ ಇರಬೇಕು." ವ॥ ಎಂದು ಮಹಾಶ್ವೇತೆಯು ಕಾದಂಬರಿಗೆ ತಿಳಿಸಲಾಗಿ ಚಂದ್ರಾಪೀಡನು ಕೈಮುಗಿದನು. ಆಗ ಅವಳ ಶರೀರವೆಲ್ಲವೂ ರೋಮಾಂಚವನ್ನು ಪಡೆಯಿತು. ೭೦. ಆಗ ಕಾದಂಬರಿಯು ಅವನನ್ನು ಆದರದಿಂದ ಪ್ರೀತಿಸಿ ನೋಡುತ್ತಿದ್ದಳು. ಅವಳ ನೀಳವಾದ ಕಡೆಗಣ್ಣಿನ ಎಡೆಗೆ ಕಣ್ಣುಗುಡ್ಡೆಯು ಬಂದಿತ್ತು. ಬೇಗನೆ ಬಹಳ ದೂರ ಬಂದಿದ್ದರಿಂದ ಅದಕ್ಕೆ ಬಹಳ ಆಯಾಸವುಂಟಾಗಲು ಬೆವರುಹನಿಗಳು ಆ ಕಣ್ಣುಗುಡ್ಡೆಯಿಂದ ಸುರಿಯುತ್ತಿವೆ ನೋಡಿ ಎಂಬಂತೆ ಆ ಕಾದಂಬರೀದೇವಿಗೆ ತಟ್ಟನೆ ಅತಿಶಯವಾದ ಪ್ರೀತಿಯುಂಟಾಗಲು ಅವಳ ಕಣ್ಣಿನಿಂದ ಆನಂದಬಾಷ್ಪದ ಹನಿಗಳು ಸುರಿಯತೊಡಗಿದವು. ೭೧. ಕಾದಂಬರಿಯು ನಾಚಿಕೆಯಿಂದ ಕೂಡಿಕೊಂಡು ಕಾಲಿನ ಹೆಬ್ಬೆರಳಿನ ತುದಿಯಿಂದ ನೆಲವನ್ನು ಗೀರುತ್ತಿದ್ದಳು. ಆಗ ಈ ನೆಪದಿಂದ ಚಂದ್ರಾಪೀಡನನ್ನು ತನ್ನ ಹತ್ತಿರಕ್ಕೆ ಬರುವಂತೆ ಮಾಡಿದ್ದಾಳೋ ಎಂಬಂತೆ ಅವಳ ಉಗುರಿನಲ್ಲಿ ಚಂದ್ರಾಪೀಡನ ಆಕಾರವು ಪ್ರತಿಬಿಂಬಿಸಿ ಹೊಳೆಯುತ್ತಿತ್ತು. ೭೨. ಚಂದ್ರಾಪೀಡನನ್ನು ಚೆನ್ನಾಗಿ ನೋಡುತ್ತಿರುವ ಅಲ್ಲಿನ ಕನ್ನಿಕೆಯರ ಕಡೆಗಣ್ಣನ್ನು ಸೇರಿ ಚಲಿಸುತ್ತಿರುವ ಕಪ್ಪುಗುಡ್ಡೆಗಳು ಅವರು ಕಿವಿಯಲ್ಲಿ ಮುಡಿದುಕೊಂಡಿರುವ ಹೂವಿಗೆರಗುವ ದುಂಬಿಗಳ ಜೊತೆಯಲ್ಲಿ ಸೇರಿಕೊಂಡು ಆಡುತ್ತಿರುವ ದುಂಬಿಗಳಂತೆ ಕಾಣುತ್ತಿದ್ದುವು.

ವ॥ ಅನಂತರಂ ಪರಿಜನಂ ಸಂಭ್ರಮಂಬೆರಸು ತಂದು ಶಯನತಳಶಿರೋಭಾಗದೊಳಿಕ್ಕಿದ ಧವಳಾಂಶುಕ ಪ್ರಚ್ಛದಚ್ಛನ್ನ ಹೇಮಪದಾಂಕಿತಾಸನದೊಳರಸಂ ಕುಳ್ಳಿರೆ ಕಾದಂಬರಿ ಮಹಾಶ್ವೇತೆಯೊಡನೆ ನಿಜಪರ್ಯಂಕದೊಳ್ ಕುಳ್ಳಿರ್ಪುದುಂ ಮಹಾಶ್ವೇತೆಯ ಕಣ್ಣಾಣ್ಪಿದು ವೇಣುರವಂಗಳುಮಂ ವೀಣಾನಾದಂಗಳುಮಂ ಗೀತಸ್ವನಂಗಳುಮಂ ಮಾಗಧಿಯರ ಜಯ ಶಬ್ದಂಗಳುಮಂ ಪ್ರತೀಹಾರಿಯರ್ ನಿವಾರಿಸುತ್ತಮಿರ್ದರನ್ನೆಗಂ

ಪ್ರಿಯದಿಂ ಕಾಂತೆ ಮಹಾಶ್ವೇ
ತೆಯ ಕಾಲಂ ತಾನೆ ಕರ್ಚಿ ಪದಪಿಂದೆ ನಿಜ
ಪ್ರಿಯಸಖಿಯೆನಿಸಿದ ಮದಲೇ
ಖೆಯೆಂಬಳಿಂ ನೃಪನ ಕಾಲ್ಗಳಂ ಕರ್ಚಿಸಿದಳ್ ೭೩

ವ॥ ಆಗಳಾ ಕಾದಂಬರಿಯೊಡನೆ ಕುಳ್ಳಿರ್ದ ಮಹಾಶ್ವೇತೆ

ಕರದಿಂದಂ ಕರ್ಣಭೂಷಾರುಚಿರುಚಿರಮೆನಿಪ್ಪಂಸವಂ ಮುಟ್ಟುತಂ ಷ
ಟ್ಚರಣವ್ಯಾಲೋಲ ಕರ್ಣೋತ್ಪಲಮನಮರೆ ಸೈತಿಕ್ಕುತಂ ಸಂಚಲಚ್ಚಾ
ಮರಸಂಜಾತಾನಿಲಾಂದೋಳನ ಚಲದಳಕಾನೀಕಮಂ ಮೆಲ್ಲನಂದೋ
ಸರಿಸುತ್ತಂ ತಂಗಿ ಪೇಟ್ ಭವ್ಯವೆ ನಿನಗೆನಲಾ ಕಾಂತೆ ಸಾಣ್ಬುತ್ತಮಾಗಳ್ ೭೪

ವ॥ ಬಳಿಕ ಪರಿಜನರು ಸಡಗರದಿಂದ ತಂದು ಹಾಸಿಗೆಯ ತಲೆಯೆಡೆಯಲ್ಲಿ ಇರಿಸಿದ ಬಿಳಿಯ ಹಾಸುಬಟ್ಟೆಯಿಂದ ಮುಚ್ಚಿರುವ, ಚಿನ್ನದ ಕಾಲುಗಳಿಂದ ಕೂಡಿಕೊಂಡಿರುವ ಪೀಠದಲ್ಲಿ ಚಂದ್ರಾಪೀಡನು ಕುಳಿತುಕೊಂಡಿರಲಾಗಿ, ಕಾದಂಬರಿಯು ಮಹಾಶ್ವೇತೆಯೊಡನೆ ತನ್ನ ಮಂಚದಮೇಲೆ ಕುಳಿತುಕೊಂಡಿರಲಾಗಿ ಮಹಾಶ್ವೇತೆಯು ಕಣ್ಣುಸನ್ನೆಯನ್ನು ತಿಳಿದು ಕೊಳಲಿನ ಧ್ವನಿಗಳನ್ನೂ ವೀಣಾನಾದಗಳನ್ನೂ ಸಂಗೀತಧ್ವನಿಯನ್ನೂ ಮಂಗಳಪಾಠಿಕೆಯರ ಜಯಶಬ್ದಗಳನ್ನೂ ಬಾಗಿಲುಕಾಯುವ ಹೆಂಗಸರು ನಿಲ್ಲಿಸುತ್ತಿದ್ದರು. ಅಷ್ಟರಲ್ಲಿ ೭೩. ಕಾದಂಬರಿಯು ಪ್ರೀತಿಯಿಂದ ಮಹಾಶ್ವೇತೆಯ ಕಾಲನ್ನು ಸಡಗರದಿಂದ ತೊಳೆದು, ತನ್ನ ನಚ್ಚಿನ ಗೆಳತಿಯಾದ ಮದಲೇಖೆಯೆಂಬುವಳಿಂದ ಚಂದ್ರಾಪೀಡನ ಕಾಲನ್ನು ತೊಳೆಯಿಸಿದಳು. ವ॥ ಆಗ ಆ ಕಾದಂಬರಿಯೊಡನೆ ಕುಳಿತಿದ್ದ ಮಹಾಶ್ವೇತೆಯು ೭೪. ಕಾದಂಬರಿಯ ಕರ್ಣಾಭರಣದ ಕಾಂತಿಯು ಹರಡಿರುವ ಹೆಗಲನ್ನು ಕೈಯಿಂದ ಮುಟ್ಟುತ್ತಲೂ, ದುಂಬಿಗಳಿಂದ ಜಾರಿಸಲ್ಪಟ್ಟಿರುವ ಕಿವಿಯಲ್ಲಿ ಮುಡಿದುಕೊಂಡಿರುವ ನೈದಿಲೆಯನ್ನು ಕೂರುವಂತೆ ನೇರ್ಪಡಿಸುತ್ತಲೂ, ಆಡುತ್ತಿರುವ ಚಾಮರಗಳ ಗಾಳಿಯ ಚಲನೆಯಿಂದ ಅಲುಗಾಡುತ್ತಿರುವ ಮುಂಗುರುಳುಗಳನ್ನು ಮೆಲ್ಲನೆ ಸಳಪಡಿಸುತ್ತಲೂ 'ತಂಗಿ ! ನಿನಗೆ ಕ್ಷೇಮವೆ ?'–ಎಂದು ಕೇಳಿದಳು. ಆಗ ಕಾದಂಬರಿಯು

ವನವಾಸಾಯಾಸದಿನ
ಕ್ಕನಿಂತಿರಲ್ ಮನೆಯೊಳಿರ್ದೆನಾನೆಂದು ಕರಂ
ಮನದೊಳ್ ತೊಟಲುತ್ತುಂ ತಾಂ
ಮನವೊಲ್ಲದೆ ತನಗೆ ಸೇವಮೆಂದೆನುತೊರೆದಳ್ ೭೫

ವ॥ ಆಗಳುಪಜಾತಶೋಕೆ ಮಹಾಶ್ವೇತಾಮುಖನಿರೀಕ್ಷಣೆಯಾಗಿಯುಮಾರೋಪಿತ ಚಾಪನಪ್ಪ ಕುಸುಮಚಾಪಂಗೆ ಪಕ್ಕುಮಾಡಿದ ಚಂದ್ರಾಪೀಡನಪಾಂಗವಿಕ್ಷೇಪ ತರಳತರ ತಾರ ಶಾರೋದರ ನಯನಂಗಳಿಂದಡಿಗಡಿಗೆ ನೋಡುತ್ತುಮಿರ್ದು

ಸುರುಚಿರ ಸಾಲಭಂಜಿಕೆ ಬೆಮರ್ತುರದೊಳ್ ಪೊಳೆಯುತ್ತಿರಲ್ಕೆ ಮ
ತ್ಸರಿಸಿದಳಂಗನಾಜನಘನಸ್ತನದೊಳ್ ಪ್ರತಿಬಿಂಬಿಸುತ್ತಿರಲ್
ಪುರುಡಿಸಿದಳ್ ಮನೋಹರನನೀಕ್ಷಿಸಲಿತ್ತಪುವಿಲ್ಲ ಹರ್ಷದಿಂ
ದಿರದುಗುತರ್ಪ ಬಾಷ್ಪಮೆನಗೆಂದು ಲತಾಂಗಿಯುಟಿಲ್ದು ಬಾಡಿದಳ್ ೭೬

ವ॥ ಅನಂತರಂ ತಾಂಬೂಲಪ್ರದಾನೋದ್ಯತೆಯಾದ ಕಾದಂಬರೀದೇವಿಯುಂ ಮಹಾಶ್ವೇತೆಯಿಂತೆಂದಳ್

ನಾಚಿಕೆಪಡುತ್ತ ೭೫. ವನವಾಸದ ಆಯಾಸದಿಂದ ಅಕ್ಕನು ಹೀಗಿರಲಾಗಿ ನಾನು ಮನೆಯಲ್ಲಿ ಸುಖವಾಗಿದ್ದೇನಲ್ಲ ಎಂದು ಬಹಳಮಟ್ಟಿಗೆ ಮನಸ್ಸಿನಲ್ಲಿ ವ್ಯಥೆಪಡುತ್ತ ಉತ್ತರ ಕೊಡಲು ಮನಸ್ಸು ಬರದಿದ್ದರೂ ಹೇಗೋ ಕಷ್ಟದಿಂದ ಕ್ಷೇಮವೆಂದು ಹೇಳಿದಳು. ವ॥ ಆಗ ದುಃಖಾಕ್ರಾಂತೆಯಾಗಿ ಮಹಾಶ್ವೇತೆಯ ಮುಖವನ್ನು ನೋಡುತ್ತ ಮತ್ತು ಹೆದೆಯೇರಿಸಿದ ಬಿಲ್ಲುಳ್ಳ ಕಾಮನಿಗೆ ತನ್ನನ್ನು ಗುರಿಮಾಡಿದ ಚಂದ್ರಾಪೀಡನನ್ನು ಕಡೆಗಣ್ಣಿನ ಪ್ರೇರಣೆಯಿಂದ ಅತ್ಯಂತ ಚಂಚಲವಾದ ಕಣ್ಣುಗುಡ್ಡೆಯುಳ್ಳ ಬೇರೆ ಬೇರೆ (ಕಪ್ಪು, ಬಿಳುಪು) ಬಣ್ಣಗಳಿಂದ ಕೂಡಿದ ಕಣ್ಣುಗಳಿಂದ ಅಡಿಗಡಿಗೆ ನೋಡುತ್ತ ಇದ್ದು ೭೬. ಚಂದ್ರಾಪೀಡನ ಬೆವರಿದ ಎದೆಯಲ್ಲಿ (ಸಭಾಮಂಟಪದಲ್ಲಿದ್ದ) ಸುಂದರವಾದ ಪುತ್ಥಳಿಯು ಪ್ರತಿಬಿಂಬಿಸಿ ಹೊಳೆಯುತ್ತಿರಲು ಅಷ್ಟಕ್ಕೇ ಅವಳಿಗೆ ಕೋಪವುಂಟಾಯಿತು. ಅಲ್ಲಿದ್ದ ಹೆಂಗಸರ ತೋರಮೊಲೆಗಳಲ್ಲಿ ಚಂದ್ರಾಪೀಡನು ಪ್ರತಿಬಿಂಬಿಸಿರಲು ಅವಳಿಗೆ ಅಸೂಯೆಯುಂಟಾಯಿತು ! ಸಂತೋಷದಿಂದ ಒಂದೇಸಮನೆ ಹರಿಯುತ್ತಿರುವ ಕಣ್ಣೀರು ಸುಂದರನಾದ ಚಂದ್ರಾಪೀಡನನ್ನು ನೋಡಲು ತನಗೆ ಅವಕಾಶವನ್ನೇ ಕೊಡುವುದಿಲ್ಲವೆಂದು ಬಳ್ಳಿಯಂದದ ದೇಹವುಳ್ಳ ಕಾದಂಬರಿಯು ದುಃಖಿಸಿ ಕಳೆಗುಂದಿದಳು. ವ॥ ಬಳಿಕ ತನಗೆ ವೀಳೆಯವನ್ನು ಕೊಡಲು ಹೊರಟ ಕಾದಂಬರೀದೇವಿಯನ್ನು ಕುರಿತು

ಭುವನಾಧೀಶ್ವರಸುತನಭಿ
ನವಾಗತಂ ಮಾನ್ಯನಪ್ಪನಾರಾಧ್ಯನೆ ದಲ್
ನವಗೆಲ್ಲತೆಱದಿನದಱಿಂ
ದವೀವುದರಸಂಗೆ ಮುನ್ನಮೀ ತಂಬುಲಮಂ ೭೭

ವ॥ ಎಂದು ನುಡಿಯೆ

ಆನಕ್ಕ ನಾಣ್ಚುವೆಂ ಪಿಡಿ
ನೀನೆ ನೃಪಂಗಿಕ್ಕು ತಂಬುಲಮನಱಿವೆನೆ ಪೇ
ೞೇನುಮನಾನೆಂದತಿಲ
ಜ್ಜಾನತಮುಖಿಯಾಗಿ ಕಾಂತೆ ಮೆಲ್ಲನೆ ನುಡಿದಳ್ ೭೮

ವ॥ ಅಂತು ನುಡಿಯೆ ಮಹಾಶ್ವೇತೆ ಮತ್ತಮಾಗ್ರಹಿಸೆ ತಂಬುಲಂಗೊಡಲುದ್ಯುಗಂಗೆಯ್ದು

ಬೆಮರಿಂ ಮುಱುಗಿದಪೆಂ ಸಂ
ಭ್ರಮದಿಂ ಬಿಟ್ಟಪ್ಪೆನರಸ ಕೈಗುಡು ನೀಂ ಬೇ
ಗಮೆನಿಪ್ಪ ತೆಱದೆ ತಾಂಬೂ
ಲಮಿಳಿತಮಂ ಕಾಂತೆ ನೀಡಿದಳ್ ನಿಜಕರಮಂ ೭೯

ವ॥ ಆಗಳ್ ವಿಜಯಗಜಕುಂಭಾಸ್ಫಾಲನದೊಳೊಂದಿದ ಸಿಂದೂರದಿಂ ರಂಜಿಪಂತೆ ಬೆಳರ್ಗೆಂಪನಾಂತ್ತಿರಭಸದಿಂ ಮುಂದುಱುಳಿವರಿವಂತೆ ನಖಮಯೂಖಂಗಳ್ ನಿಮಿರೆ ಸೋಂಕು ವಾಸೆಯೊಳನುರಕ್ತಂಗಳಾಗೆ ಪಂಚೇಂದ್ರಿಯವೃತ್ತಿಗಳೆ ಬೇಱೆ ಬೇಱೆ ರೂಪಂದಳೆದುವೆನಿಪಂ ಗುಳಿಗಳಿಂ ಮನಂಗೊಳಿಸುವ ಕರಕಮಲಂಗಳಂ ಚಂದ್ರಾಪೀಡಂ ನೀಡೆ

ಮಹಾಶ್ವೇತೆಯು ಹೀಗೆ ಹೇಳಿದಳು. ೭೭. "ಈಗ ಇಲ್ಲಿಗೆ ಹೊಸದಾಗಿ ಬಂದಿರುವ, ಚಕ್ರವರ್ತಿಯ ಮಗನಾದ ಈತನು ನಮಗೆ ಎಲ್ಲಾ ಬಗೆಯಿಂದಲೂ ದಿಟವಾಗಿಯೂ ಮಾನ್ಯನು ಮತ್ತು ಪೂಜ್ಯನು. ಆದ್ದರಿಂದ ಮೊದಲು ಈ ಅರಸನಿಗೆ ನೀನು ತಾಂಬೂಲ ವನ್ನು ಕೊಡು" ವ॥ ಎಂದು ಹೇಳಲಾಗಿ ೭೮. "ಅಕ್ಕ, ನನಗೆ ನಾಚಿಕೆಯಾಗುತ್ತದೆ. ಹಿಡಿ, ನೀನೆ ಈ ಅರಸನಿಗೆ ತಾಂಬೂಲವನ್ನು ಕೊಡು. ನನಗೇನು ಗೊತ್ತಿದೆ ? ಹೇಳು" ಎಂದು ಬಹಳ ನಾಚಿಕೆಯಿಂದ ತಗ್ಗಿಸಿದ ಮುಖವುಳ್ಳವಳಾಗಿ ಕಾದಂಬರಿಯು ಮೆಲ್ಲನೆ ಹೇಳಿದಳು. ವ॥ ಹಾಗೆ ಹೇಳಲಾಗಿ ಮಹಾಶ್ವೇತೆಯು ಮತ್ತೆ ಮತ್ತೆ ನಿರ್ಬಂಧ ಮಾಡಿದಳು. ಆಗ ತಾಂಬೂಲವನ್ನು ಕೊಡಲು ಪ್ರಯತ್ನಿಸಿ ೭೯. "ನಾನು ಬೆವರಿ ನಲ್ಲಿ ಮುಳುಗಿಹೋಗಿದ್ದೇನೆ. ಭಯದಿಂದ ಬಿದ್ದುಬಿಡುತ್ತಿದ್ದೇನೆ. ದೊರೆಯೆ, ನೀನು ಬೇಗ ನನ್ನ ಕೈಯನ್ನು ಹಿಡಿದುಕೊ" ಎಂಬ ರೀತಿಯಿಂದ ಆಕೆಯು ವೀಳೆಯದಿಂದ ಕೂಡಿದ ತನ್ನ ಕೈಯನ್ನು ಚಂದ್ರಾಪೀಡನ ಕಡೆಗೆ ನೀಡಿದಳು. ವ॥ ಆಗ ಯುದ್ಧದಲ್ಲಿ ಜಯಸಾಧನೆಗಾಗಿ ಉಪಯೋಗಿಸುವ ಆನೆಯ ಕುಂಭಸ್ಥಳವನ್ನು ತಟ್ಟುವುದರಿಂದ ಅಂಟಿಕೊಂಡಿರುವ ಚಂದ್ರದಿಂದ ಪ್ರಕಾಶಿಸುವಂತೆ ಬಿಳುಪುಮಿಶ್ರವಾದ ಕೆಂಬಣ್ಣವನ್ನು ಹೊಂದಿರುವ ಉಗುರಿನ ಕಿರಣಗಳು ಮುನ್ನುಗ್ಗುವಂತೆ ಚಾಚಿಕೊಂಡಿರಲು, ಅವಳನ್ನು ಮುಟ್ಟಬೇಕೆಂಬ ಆಸೆಯಿಂದ ಪ್ರೀತಿಯನ್ನಿಟ್ಟಿರುವ ಪಂಚೇಂದ್ರಿಯಗಳೆ ಬೇರೆಬೇರೆ

ಎನಸುಂ ಮುಂದೆ ನಖಾಂಶು ನಿಳ್ಕೆ ನೃಪಹಸ್ತಾನ್ವೇಷಣಂಗೆಯ್ವವೊಲ್
ನಿನಗೆನ್ನಂ ಬಿಡದುಣ್ಮಿದೀ ಬೆಮರೆ ಕೈನೀರಾಗಿರಲ್ ತೋರ್ಕೆಗೊ
ಟ್ಟನನಂಗಂ ಪಿಡಿ ನಿನ್ನ ಕೈಯೆಡೆಯನೊಂದಿರ್ದಪ್ಪುದಿನ್ನೆನ್ನ ಜೀ
ವನಮೆಂಬಂದದಿನಿಕ್ಕಿದಳ್ ನಡುಗುತಂ ತನ್ನಂಗಿ ತಾಂಬೂಲಮಂ ೮೦

ವ॥ ಅನಂತರಂ ಮಹಾಶ್ವೇತೆಗಂ ತಾಂಬೂಲಂಗೊಟ್ಟಳನ್ನೆಗಂ

ಸುರುಳನೆ ಸುತ್ತಿದಂತೆ ಕೊರಲೊಳ್ ಮಿಱುಗುತ್ತಿರೆ ಮೂಱುರೇಖೆಗಳ್
ಮರಕತಕಾಂತಿಯಿಂ ತಳೆದು ಸುಣ್ಣಱಿಗಳ್ ಮಿಸುಗಲ್ಕೆ ವಿದ್ರುಮಾಂ
ಕುರದವೊಲೊಪ್ಪೆ ಚಂಚುಪುಟಮೊಯ್ಯನೆ ಬಂದುದು ಕನ್ಯಕಾಸಭಾಂ
ತರದೊಳಗೊಂದು ಶಾಡ್ವಳಿತ ಹರ್ಮ್ಯಮಣಿಪ್ರವರಾಂಶುಕಂ ಶುಕಂ ೮೧

ವ॥ ಅಂತು ಮಂದಗತಿಯಿಂ ಬರ್ಪರಗಿಳಿಯ ಮುಂದೆ

ವಿಕಸಿತ ನೀಲನೀರಜದಳಂಬೊಲಿರಲ್ ಗಱಿ ಚಂಚು ಚಾರುಚಂ
ಪಕಮುಕುಳಂಬೊಲೊಪ್ಪೆ ಚರಣಂ ನವಕೇಸರದೊಂದು ದೇಸಿಯಿಂ
ಪ್ರಕಟಿಸೆ ಪೂವಿನಿಂ ಸಮೆದ ಪಕ್ಕಿಯಿದೆಂಬಿನಮಾಗಳೊಂದು ಸಾ
ರಿಕೆ ಪರಿತಂದುದಗ್ಗಲಿಪ ತಾಪದೆ ಗದ್ಗದಕಂಠೆಯಾಗುತಂ ೮೨

ಬೆರಳಿನ ರೂಪವನ್ನು ಪಡೆದಿವೆಯೊ ಎಂಬಂತಿರುವ ಬೆರಳುಗಳಿಂದ ಮನೋಹರವಾದ ತನ್ನ ಕರಕಮಲವನ್ನು ಚಂದ್ರಾಪೀಡನು ನೀಡಲಾಗಿ ೮೦. ಕಾದಂಬರಿಯು ತನ್ನ ಉಗುರಿನ ಕಾಂತಿಗಳು ಬಹಳಮಟ್ಟಿಗೆ ಮುಂದೆ ಮುಂದೆ ಚಾಚುತ್ತಿರಲಾಗಿ ಚಂದ್ರಾಪೀಡನ ಕೈ ಎಲ್ಲಿದೆಯೆಂದು ಹುಡುಕುತ್ತಿರುವಂತೆಯೂ, ಒಂದೇಸಮನೆ ಹೊರಡುತ್ತಿರುವ ಬೆವರೆ ಕೈನೀರಾಗಿರಲು ಮನ್ಮಥನು ನನ್ನನ್ನು ನಿನಗೆ ಕಾಣಿಕೆಯಾಗಿ ಒಪ್ಪಿಸಿದ್ದಾನೆ, ಹಿಡಿದುಕೊ, ಇನ್ನು ನನ್ನ ಪ್ರಾಣವು ನಿನ್ನ ಕೈಯಲ್ಲಿದೆ ಎಂದು ಇರಿಸುವಂತೆಯೂ ನಡುಗುತ್ತಾ ಚಂದ್ರಾಪೀಡನಿಗೆ ವೀಳೆಯವನ್ನು ಕೊಟ್ಟಳು. ವ॥ ಬಳಿಕ ಮಹಾಶ್ವೇತೆಗೂ ವೀಳೆಯವನ್ನು ಕೊಟ್ಟಳು. ಅಷ್ಟರಲ್ಲಿ ೮೧. ಕೊರಳಿನಲ್ಲಿ ಗುಂಡಾಗಿ ಸುತ್ತಿದಂತೆ ಮೂರುಗೆರೆಗಳು ಪ್ರಕಾಶಿಸುತ್ತಿರಲು, ನುಣುಪಾದ ಗರಿಗಳು ಪಚ್ಚೆಯ ಕಾಂತಿಯನ್ನು ಹೊಂದಿ ರಂಜಿಸುತ್ತಿರಲು, ಕೊಕ್ಕು ಹವಳದ ಮೊಳಕೆಯಂತೆ ಶೋಭಿಸುತ್ತಿರಲು, ಹಸಿರು ಹುಲ್ಲಿನಿಂದ ಕೂಡಿರುವ ಅರಮನೆಯ ಶ್ರೇಷ್ಠವಾದ ರತ್ನದಂತೆ ಕಾಂತಿಯುಳ್ಳ ಒಂದು ಗಿಳಿಯು ಕನ್ಯಕಾಂತಃಪುರದ ಸಭಾಂಗಣಕ್ಕೆ ಮೆಲ್ಲನೆ ಬಂದಿತು. ಟಿ॥ ಮೂಲದಲ್ಲಿ ಹರ್ಮ್ಯ ಎಂಬಲ್ಲಿ "ರಮ್ಯ" ಎಂದಿರಬಹುದು. ವ॥ ಹಾಗೆ ಮಂದಗತಿಯಿಂದ ಬರುತ್ತಿರುವ ಅರಗಿಳಿಯ ಮುಂದೆ ೮೨. ಅರಳಿದ ಕನ್ನೈದಿಲೆಯ ಎಸಳಿನಂತೆ ಗರಿಯು ಇರಲಾಗಿ, ಕೊಕ್ಕು ಸುಂದರವಾದ ಸಂಪಿಗೆಯ ಮೊಗ್ಗಿನಂತೆ ಶೋಭಿಸಲು, ಕಾಲು ಹೊಸದಾಗಿ ಅರಳಿರುವ ವಕುಳಕುಸುಮದ ಚೆಲುವನ್ನು ಪ್ರಕಟಿಸುತ್ತಿರಲು ಹೂವುಗಳಿಂದ ಮಾಡಿದ ಹಕ್ಕಿಯೋ ಎಂಬಂತೆ ಶೋಭಿಸುವ ಒಂದು ಮೈನಾಹಕ್ಕಿಯು ಅತಿಶಯವಾದ ಸಂತಾಪ

ವ॥ ಅಂತು ಪರಿತಂದು ಕಾದಂಬರೀಪಾದಾಸನ್ನೆಯಾಗಿ

ಬೆಸನಕ್ಕಾಗರವಾದಳೀಕಸೊಬಗಿಂ ಕೂರ್ತಂದದಿಂ ಮತ್ತೆ ಪ
ತ್ರಿಸಲೇದಾಟಿಸಿ ಬಂದಪಂ ಬಱಿದೆಯುಂ ಬೂತಾಟವಿನ್ನೇಕೆ ಮಾ
ಣಿಸು ಬನ್ನಕ್ಕಿಡೆಯಾದನೀ ವಿಹಗನಿಂ ನಿನ್ನಾಣೆ ನೀನಿನ್ನುಪೇ
ಕ್ಷಿಸಿದಂದೆನ್ನಯ ಜೀವಮಂ ಬಿಡದಿರೆಂ ಗಂಧರ್ವರಾಜಾತ್ಮಜೇ ೮೩

ವ॥ ಎಂದು ನುಡಿಯೆ ಕಾದಂಬರಿ ಮಂದಸ್ಮಿತವದನೆಯುಪ್ಪುದುಮವಿದಿತ ವೃತ್ತಾಂತೆಯಪ್ಪ ಮಹಾಶ್ವೇತೆಯಿದೇತಱಿಂ ನುಡಿದಪ್ಪುದೆಂದು ಮದಲೇಖೆಯಂ ಬೆಸಗೊಳ್ವುದುಮಾಕೆಯಿಂತೆಂದಳ್

ಪರಿಹಾಸನೆಂಬುದಾಯಿ
ರ್ಪರಗಿಳಿ ಕಾಳಿಂದಿಯೆಂಬುದೀ ಸಾರಿಕೆಯಿಂ
ತೆರಡಕ್ಕಂ ಕಡುಕೂರ್ಮೆಯಿ
ನರಸಿಯೆ ತಾಂ ಮಾಡಿದಳ್ ವಿವಾಹೋತ್ಸವಮಂ ೮೪

ವ॥ ಅಂತು ಪರಸ್ಪರಾನುರಾಗಮನಪ್ಪುಕೆಯ್ದು ಸುಖದಿಂದಮಿರಲಿಂದು ಬೆಳಗಪ್ಪಾಗಳ್ ಕಾದಂಬರೀದೇವಿಯ ತಾಂಬೂಲಕರಂಕವಾಹಿನಿಯಪ್ಪ ತಮಾಲಿಕೆಯೊಡನೀ ಶುಕನೀಕಾಂತದೊಳೀ ನಾನುಮಂ ಗಟಿಪುತ್ತಿರ್ದುದಂ ಕೇಳ್ದು

ದಿಂದ ಗದ್ಗದಕಂಠವುಳ್ಳವಳಾಗಿ ಆಗ ಅಲ್ಲಿಗೆ ಬಂದಿತು. ವ॥ ಹಾಗೆ ಬಂದು ಕಾದಂಬರಿಯ ಪಾದಗಳೆಡೆಯನ್ನು ಸೇರಿ ೮೩. "ಗಂಧರ್ವರಾಜಕುಮಾರಿ, ಇವನು ಕೆಟ್ಟ ಚಾಳಿಗೆ ಮನೆಯಾದ ಸುಳ್ಳು ಒಲವಿನಿಂದ ನನ್ನನ್ನು ಪ್ರೀತಿಸಿರುವಂತೆ ತೋರ್ಪಡಿಸುತ್ತಾ ನಾನು ಬೇಡವೆಂದರೂ ಬಿಡದೆ ನನ್ನನ್ನು ಸೇರಿಕೊಳ್ಳಬೇಕೆಂದು ಅಪೇಕ್ಷಿಸಿ ಬಂದಿದ್ದಾನೆ. ವ್ಯರ್ಥವಾದ ಬೂಟಾಟಿಕೆಯು ಇನ್ನೇಕೆ ? ಇವನು ನನ್ನ ಹತ್ತಿರಕ್ಕೆ ಬರದಂತೆ ಮಾಡು. ಈ ಹಕ್ಕಿಯಿಂದ ಬಹಳ ಕಷ್ಟಕ್ಕೆ ಗುರಿಯಾಗಿಬಿಟ್ಟೆ. ನಿನ್ನಾಣೆ, ನೀನು ಇನ್ನು ಉದಾಸೀನ ಮಾಡಿದರೆ ನಾನು ಪ್ರಾಣವನ್ನು ಕಳೆದುಕೊಳ್ಳದೆ ಇರುವುದಿಲ್ಲ !" ವ॥ ಎಂದು ಹೇಳಲಾಗಿ ಕಾದಂಬರಿಯು ಮುಗುಳ್ನಗೆಯನ್ನು ಬೀರುತ್ತಿರಲು ಈ ಸಮಾಚಾರವೇನೆಂದು ತಿಳಿಯದೆ ಮಹಾಶ್ವೇತೆಯು ಈ ಸಾರಿಕೆಯು ಏಕೆ ಹೀಗೆ ಹೇಳುತ್ತಿದೆ ? ಎಂದು ಮದಲೇಖೆಯನ್ನು ಕೇಳಲಾಗಿ ಆಕೆ ಹೀಗೆ ಹೇಳಿದಳು. ೮೪. "ಈ ಅರಗಿಳಿಯ ಹೆಸರು ಪರಿಹಾಸನೆಂದು. ಈ ಸಾರಿಕೆಯ ಹೆಸರು ಕಾಳಿಂದಿ. ನಮ್ಮ ರಾಜಕುಮಾರಿಯೇ ಇವೆರಡಕ್ಕೂ ಬಹಳ ಮಮತೆಯಿಂದ ವಿವಾಹಮಹೋತ್ಸವವನ್ನು ನೆರವೇರಿಸಿದಳು. ವ॥ ಹಾಗೆ ಪರಸ್ಪರ ಪ್ರೀತಿಯನ್ನು ಪಡೆದು ಸುಖದಿಂದ ಇರುತ್ತಿರಲು ಇಂದು ಬೆಳಗ್ಗೆ ಕಾದಂಬರೀದೇವಿಯ ಸಂಚಿಯವಳಾದ ತಮಾಲಿಕೆಯೆಂಬುವಳೊಡನೆ ಈ ಗಿಳಿಯು

ಒದವಿದ ಪುರುಡಿಂದಂ ನೋ
ಡದು ನುಡಿಯದು ಪೊರ್ದದೆನಿತು ಕಾಲ್ವಿಡಿದೊಡಮೊ
ಲ್ಲದು ಕಿನಿಸಿ ಕಡುಪಿನಿಂದಂ
ನದುಗಿದಪುದು ತಿಳಿಯದೆಂತುಮಾರ್ ತಿಳುಪಿದೊಡಂ ೮೫

ವ॥ ಎಂಬುದುಮಮಂ ಕೇಳ್ದು ನರೇಂದ್ರನಂದನಂ ಮಂದಸ್ಮಿತವದನನಾಗಿ

ಪರಿಹಾಸಕನೆಂದೆಂಬೊಂ
ದರಗಿಳಿ ಸೋಲ್ತರಸಿಯಡಪದಾಕೆಗೆ ಪಿರಿದುಂ
ವಿರಹದೆ ಬೆಂದಪುದೆಂಬುದು
ಪರೆದತ್ತೆಲ್ಲೆಡೆಯೊಳಂ ಪರಂಪರೆಯಿಂದಂ ೮೬

ಪರಿಹರಿಸಿ ಕಳತ್ರಮನೀ
ಪರಿಹಾಸಂ ಲಜ್ಜೆಗೆಟ್ಟು ಮಾಣದೆ ಮತ್ತಂ
ಪರಿತರೆಯುಂ ಬಾರಿಸರೆನೆ
ಪಿರಿದುಂ ದೇವಿಯರುಪೇಕ್ಷೆಯಾಗಲೆವೇಟ್ಕುಂ ೮೭

ಲೋಲಂಗೀ ವಿಹಗಂಗೀ
ಬಾಲೆಯನೀ ಮುಗ್ಧೆಯಂ ವಿಚಾರಿಸದೆಯುಮಿಂ
ತಾಲೋಕಿಸದೆಯುಮೀವುದೆ
ಕಾಳಿಂದಿಗೆ ದೇವಿ ಕೂರರಾಗಲೆವೇಟ್ಕುಂ ೮೮

ಏಕಾಂತದಲ್ಲಿ ಏನನ್ನೋ ಹರಟುತ್ತಿದ್ದುದನ್ನು ಕೇಳಿ ೮೫. ಹೊಟ್ಟೆಕಿಚ್ಚುಂಟಾಗಲು ಆ ಗಿಳಿಯನ್ನು ನೋಡುವುದಿಲ್ಲ ! ಮಾತನಾಡಿಸುವುದಿಲ್ಲ ! ಹತ್ತಿರಕ್ಕೆ ಹೋಗುವುದಿಲ್ಲ ! ಕಾಲು ಹಿಡಿದರೂ ಒಪ್ಪುವುದಿಲ್ಲ ! ಕೋಪಿಸಿಕೊಂಡು ಹಟದಿಂದ ಮುಖ ತಿರುಗಿಸುತ್ತದೆ !" ಯಾರು ಎಷ್ಟು ಸಮಾಧಾನವನ್ನು ಹೇಳಿದರೂ ಪ್ರಸನ್ನವಾಗುವುದಿಲ್ಲ. ವ॥ ಎಂದು ಹೇಳಿದ ಮಾತುಗಳನ್ನು ಕೇಳಿ ರಾಜಪುತ್ರನು ಮಂದಹಾಸದಿಂದ ಕೂಡಿದ ಮುಖವುಳ್ಳವನಾಗಿ ೮೬. "ಪರಿಹಾಸಕನೆಂಬ ಒಂದು ಅರಗಿಳಿಯು ಕಾದಂಬರೀ ದೇವಿಯ ಸಂಚಿಯ ಊಳಿಗದವಳನ್ನು ಮೋಹಿಸಿ ಮಿಗಿಲಾದ ವಿರಹವ್ಯಥೆಯಿಂದ ಬೆಂದುಹೋಗುತ್ತಿದೆ ಎಂಬ ಸಂಗತಿಯು ಕರ್ಣಪರಂಪರೆಯಿಂದ ಎಲ್ಲಾ ಕಡೆಯಲ್ಲೂ ಹರಡಿಕೊಂಡಿದೆ. ೮೭. ಈ ಪರಿಹಾಸಕನು ನಾಚಿಕೆಯಿಲ್ಲದೆ ತನ್ನ ಹೆಂಡತಿಯನ್ನು ಮೊದಲುಬಿಟ್ಟು, ಈಗ ಮತ್ತೆ ಬಿಡದೆ ಇಲ್ಲಿಗೆ ಬರಲಾಗಿ ಅವನನ್ನು ತಡೆಯುವುದಿಲ್ಲವೆಂದರೆ ಆಗ ಕಾದಂಬರೀದೇವಿಯರಿಗೆ ಬಹಳ ಉದಾಸೀನವುಂಟಾಗಿರಬೇಕು, ೮೮. ಚಪಲಸ್ವಭಾವದ ಈ ಹಕ್ಕಿಗೆ ಎಳೆಯವಯಸ್ಸಿನ ಏನೂ ತಿಳಿಯದ ಕಾಳಿಂದಿಯನ್ನು ವಿಚಾರಮಾಡದೆ ಹಿಂದುಮುಂದು ನೋಡದೆ ಕೊಡಬಹುದೆ ? ಕಾಳಿಂದಿಯ ಬಗ್ಗೆ

ಸವತಿಯರೆಂಬರಲ್ತೆ ಮುಳಿಸಿಂಗುರು ಕಾರಣಮಿನ್ನವಪ್ಪ ಬ
ನ್ನವನವರಾರೊ ಸೈರಿಸುವರಿನ್ನೆವರಂ ಪೆಱತಾದೊಡಾಗಳೇ
ತವೆ ಜವದಿಂದೆ ಕಿಚ್ಚುವೊಗಲಣ್ಮದೆ ನಂಜುದಿನಲ್ಕೊಡರ್ಚದಿ
ರ್ಕುವೆ ಪೆಱತೇನೊ ಭಾವಿಸುವೊಡಿಂತಿದಱಿಂ ಪಿರಿದಪ್ಪ ಲಾಘವಂ ೮೯

ವ॥ ಅಂತುಮಲ್ಲದೆಯುಂ

ಇಂತಪ್ಪಪರಾಧಂಗೆ
ಯ್ದುಂ ತಾನಲ್ಲದವೊಲೆಸೆವುದೀ ಶುಕನೊಳ್ ಮ
ತ್ತಂ ತೊಡರ್ದು ನಿಂದುದಪ್ಪೊಡಿ
ದಂ ತೊಱೆಯದೆ ನಿಲಿಸಲಕ್ಕುಮೇ ಸಾರಿಕೆಯಂ ೯೦

ವ॥ ಎಂದು ನುಡಿಯೆ ಪರಿಹಾಸನರಸನ ಮೊಗಮಂ ನೋಡಿ

ಒಳದೊರ್ಡೆ ಪರಿಹಾಸದ ನುಡಿ
ಗಳಿವೆಂಬುದನಱಿವಳಲ್ತೆ ಸಾರಿಕೆ ಬಲ್ಲಳ್
ಮುಳಿವ ತಿಳಿವೆಡೆಯುಮಂ ಮೇ
ಣೊಳಗಾಗಳ್ ವಕ್ರಭಣಿತಿಗಳ್ಗವನಿಪತೀ ೯೧

ವ॥ ಎಂದು ನುಡಿವುತ್ತಿರ್ಪನ್ನೆಗಮೊರ್ವಂ ಕಂಚುಕಿ ಬಂದು ಗಂಧರ್ವರಾಜನುಂ ಮದಿರಾಮಹಾದೇವಿಯುಂ ನಿಮ್ಮಂ ನೋಡಲುತ್ಕಂಠಿತರಾಗಿ ಕರೆಯಲಟ್ಟಿದರೆಂಬುದುಂ ಮಹಾ

ಕಾದಂಬರೀದೇವಿಯೂ ಪ್ರೀತಿಯಿಲ್ಲದವಳೇ ಆಗಿರಬೇಕು. ೮೯. ಸವತಿಯರೆಂಬುವರು ಹೆಂಗಸರಿಗೆ ಕೋಪಕ್ಕೆ ಮುಖ್ಯ ಕಾರಣರು. ಇಂತಹ ಅವಮಾನವನ್ನು ಇದುವರೆಗೂ ಯಾರು ಸಹಿಸಿಕೊಳ್ಳುತ್ತಾರೆ : ಬೇರೆ ಪಕ್ಷಿಯಾಗಿದ್ದರೆ ಬಹಳ ಬೇಗನೆ ಅಗ್ನಿಪ್ರವೇಶ ಮಾಡಲು ಹೊರಡುತ್ತಿರಲಿಲ್ಲವೆ ? ವಿಷಪಾನ ಮಾಡುವುದಕ್ಕೆ ಪ್ರಯತ್ನಮಾಡುತ್ತಿರಲಿ ಲ್ಲವೆ ? ವಿಚಾರ ಮಾಡಿದರೆ ಹೆಂಗಸರಿಗೆ ಇದಕ್ಕಿಂತಲೂ ಮಿಗಿಲಾದ ಅಗೌರವಕ್ಕೆ ಕಾರ ಣವು ಬೇರೆ ಏನಿದೆ ? ವ॥ ಅದಲ್ಲದೆ ೯೦.ಇಂತಹ ಗುರುತರವಾದ ತಪ್ಪನ್ನು ಮಾಡಿದರೂ ಈ ಗಿಳಿಯು ತಾನು ಅಪರಾಧಿಯೇ ಅಲ್ಲವೆಂಬಂತೆ ವರ್ತಿಸುತ್ತಿದೆ. ಇಂತಹ ಗಿಳಿಯಲ್ಲಿ ತಿರುಗಿ ಸೇರಿಕೊಂಡುಬಿಟ್ಟರೆ ಈ ಸಾರಿಕೆಯನ್ನು ದೇವಿಯು ತ್ಯಜಿಸದೆ ಇಟ್ಟುಕೊಳ್ಳುವುದು ಸರಿಯೆ ?" ವ॥ ಎಂದು ಹೇಳಲಾಗಿ ಪರಿಹಾಸಕನು ಚಂದ್ರಾಪೀಡನ ಮುಖವನ್ನು ನೋಡಿ ೯೧. "ಎಲೈ ರಾಜನೆ, ಹರಟಿದರೆ ಇವು ಹಾಸ್ಯದ ಮಾತುಗಳೆಂದು ಈ ಸಾರಿಕೆಯು ತಿಳಿದುಕೊಳ್ಳುತ್ತಾಳೆ. ಕೋಪಿಸಿಕೊಳ್ಳುವ ಹಾಗೂ ಪ್ರಸನ್ನಳಾಗುವ ವಿಷಯ, ಕಾಲ, ದೇಶಗಳನ್ನು ಇವಳೂ ಚೆನ್ನಾಗಿ ತಿಳಿದಿದ್ದಾಳೆ. ಹಾಗೆಯೆ ನಿನ್ನ ಕೊಂಕುನುಡಿಗಳಿಗೆ ಇವಳು ಮಾರುಹೋಗುವವಳಲ್ಲ." ವ॥ ಹೀಗೆ ಹೇಳುತ್ತಿರುವಷ್ಟರಲ್ಲಿ ಒಬ್ಬ ಕಂಚುಕಿಯು ಬಂದು ಗಂಧರ್ವರಾಜನೂ ಮದಿರಾದೇವಿಯರೂ ನಿಮ್ಮನ್ನು ನೋಡಲು ಅಪೇಕ್ಷೆಯುಳ್ಳವರಾಗಿ

ಶ್ವೇತೆ ಪೋಗಲುದ್ಯೋಗಂಗೆಯ್ದು ರಸಂಗಿಕ್ಕಿದಾಣವಾವುದೆಂದು ಕಾದಂಬರಿಯಂ ಬೆಸಗೊಳ್ವುದು ಮಾಕೆಯಿಂತೆಂದಳ್

ಮೊದಲೀಯರಸನನಾಂ ಕಾ
ಣ್ಬುದುಮೆನ್ನಯ ತನುವುವೆಂನ್ನದಲ್ತೆನೆ ಮನೆಯಾ
ರದು ನೃಪತಿಗೆಲ್ಲಿ ಬಗೆ ಬ
ರ್ಪುದಾವೆಡೆ ಭವನ್ಮನೋಜ್ಞಮಲ್ಲಿಯೆ ನಿಲಿಸಿಂ ೯೨

ವ॥ ಎಂಬುದುಂ ಮಹಾಶ್ವೇತೆ ನಿಜಪ್ರಾಸಾದಸಮೀಪವರ್ತಿಯಪ್ಪ ಪ್ರಮದವನ ಕೇಳೀಶೈಲದ ರತ್ನಭವನದೊಳರಸನಿರ್ಕೆಂದು ಪೇೞ್ದು ಚೈತ್ರರಥನಂ ಕಾಣಲ್ಕೆ ಪೋದಳಿತ್ತಲಾ ಕಾಂತೆಯ ಪಿಂತನೆ ಚಂದ್ರಾಪೀಡಂ ವಿನೋದಾರ್ಥಂ ಕಾದಂಬರಿಯ ಬೆಸದಿಂ ಪ್ರತೀಹಾರ ಪ್ರೇಷಿತೆಯರಪ್ಪ ವೀಣಾವೇಣುವಾದ್ಯನಿಪುಣೆಯರುಂ ಗೀತಕಲಾಕುಶಲೆಯರುಂ ದುರೋದರ ಕ್ರೀಡಾರಾಗಿಣಿಯರುಂ ಚಿತ್ರಕರ್ಮಚತುರೆಯರುಂ ಸುಭಾಷಿತಪಠಣಪರಿಣತೆಯರುಂ ಎನಿಸಿದ ಕನ್ನಿಕೆಯರೊಡನೆ ಕೇಯೂರಕೋಪದಿಶ್ಯಮಾನಮಾರ್ಗನಾಗಿ ಕೇಳೀಶೈಲಮಣಿಮಯಭವನಕ್ಕೆ ಬಿಜಯಂಗೆಯ್ದನನ್ನೆಗಮಿತ್ತಲ್ ಗಂಧರ್ವರಾಜಪುತ್ರಿ ವಿಸರ್ಜಿತ ಸಕಲ ಸಖೀಜನೆಯುಂ ಪರಿಮಿತ ಪರಿಚಾರಿಕಾನುಗಮ್ಯಮಾನೆಯುಮಾಗಿ ತನ್ನ ಕನ್ನೆಮಾಡಮನೇಱಿ ಶಯ್ಯಾತಳದೊಳ್

ಹೇಳಿಕಳುಹಿಸಿದ್ದಾರೆ ಎಂದು ಅರಿಕೆ ಮಾಡಲಾಗಿ ಮಹಾಶ್ವೇತೆಯು ಹೋಗಲು ಪ್ರಯತ್ನಿಸಿ ಈ ಚಂದ್ರಾಪೀಡನಿಗೆ ಎಲ್ಲಿ ಬಿಡಾರವೆಂದು ಕಾದಂಬರಿಯನ್ನು ಕೇಳಲಾಗಿ ಅವಳು ಹೀಗೆ ಹೇಳಿದಳು. ೯೨. ನಾನು ಮಹಾರಾಜನನ್ನು ನೋಡಿದಾರಭ್ಯ ನನ್ನ ದೇಹವೂ ನನ್ನದಲ್ಲ ಎಂದಾಗಿದೆ. ಹೀಗಿರಲು ಈ ಮನೆ ಯಾರದು? ಆ ಅರಸನಿಗೆ ಎಲ್ಲಿ ಇಷ್ಟವೋ ಅಥವಾ ನಿಮಗೆ ಎಲ್ಲಿ ಚೆನ್ನಾಗಿ ಕಾಣುತ್ತದೆಯೊ ಅಲ್ಲೇ ಇರುವಂತೆ ಮಡಿಾ ವ॥ ಎಂದು ಹೇಳಲಾಗಿ ಮಹಾಶ್ವೇತೆಯು ನಿನ್ನ ಮಹಲಿನ ಹತ್ತಿರದಲ್ಲಿರುವ ಉದ್ಯಾನ ವನದಲ್ಲಿ ಕ್ರೀಡಾಪರ್ವತದ ಮಣಿಗೃಹದಲ್ಲಿ ಅರಸನು ಇರಲೆಂದು ಹೇಳಿ ಚಿತ್ರರಥನನ್ನು ಕಾಣಲು ಹೊರಟುಹೋದಳು. ಇತ್ತ ಅವಳು ಹೋದ ಮೇಲೆ ಚಂದ್ರಾಪೀಡನು ಕಾದಂಬರಿಯ ಅಪ್ಪಣೆಯಂತೆ ತನ್ನ ವಿನೋದಕ್ಕಾಗಿ ದ್ವಾರಪಾಲಕನಿಂದ ಕಳುಹಿಸಲ್ಪಟ್ಟ ವೀಣೆ ಕೊಳಲು ವಾದ್ಯಗಳಲ್ಲಿ ನಿಪುಣೆಯರಾದ, ಸಂಗೀತಕಲೆಯಲ್ಲಿ ಕುಶಲೆಯರಾದ, ಜೂಜಾಟದಲ್ಲಿ ಅಭಿರುಚಿಯುಳ್ಳ, ಚಿತ್ರರಚನೆಯಲ್ಲಿ ಚತುರೆಯರಾದ, ಸುಭಾಷಿತಗಳನ್ನು (ಚಾಟು ಶ್ಲೋಕ) ಹೇಳುವುದರಲ್ಲಿ ಪರಿಣತೆಯರೆನಿಸಿದ ಕನ್ನೆಯರೊಡನೆ ಕೇಯೂರಕನು ದಾರಿ ತೋರಿಸುತ್ತಿರಲು, ಕ್ರೀಡಾಪರ್ವತದ ಮಣಿಖಚಿತ ಮಂದಿರಕ್ಕೆ ಬಿಜಯಂ ಮಾಡಿದನು. ಈ ಕಡೆ ಕಾದಂಬರಿಯು ತನ್ನ ಗೆಳತಿಯರನ್ನೆಲ್ಲ ಕಳುಹಿಸಿ ಕೆಲವಾರು ಮಂದಿ ಪರಿಚಾರಿಕೆಯರಿಂದ ಮಾತ್ರ ಕೂಡಿಕೊಂಡು, ತನ್ನ ಅಂತಃಪುರದ ಮಹಡಿಯನ್ನು ಹತ್ತಿ

ಮೆಯ್ಯನಿಕ್ಕಿ ತನ್ನಂ ತಾನಱಿಯದಲೆ ಚಪಲೆ ನೀನಿದಾವ ಕಜ್ಜಕುಜ್ಜುಗಂಗೆಯ್ದೆಯೆಂದು ಲಜ್ಜೆಯಿಂ ತರ್ಜಿತೆಯಾದಂತೆಯುಂ ಗಂಧರ್ವರಾಜನಂದನೆ ನಿನಗಿದಾವ ಯುಕ್ತಮೆಂದು ವಿನಯಮೆ ತನ್ನನುಪಾಲಂಭನಂಗೆಯ್ವಂತೆಯುಂ ಬಾಲೆ ನಿನ್ನ ಬಾಲಭಾವಮೆತ್ತವೋದುದೆಂದು ಮುಗ್ಧತೆಯೆ ತನ್ನಂ ಹಾಸ್ಯಂಮಾಡಿದಂತೆಯುಂ ಕುಲಕನ್ನೆಯರ್ಗಿದನ್ನೆಯಮೆಂದು ಮಹತ್ವಮೆ ಗರ್ಹಿಪಂತೆಯುಂ ದುರ್ವಿನೀತೆ ವಿನಯಂಗೆಟ್ಟೆಯೆಂದಾಚಾರಮೆ ತನ್ನಂ ಜಡಿವಂತೆಯುಂ ಮೂಢೆ ಮದನನಿಂ ಲಘುವಾದೆಯೆಂದಾಭಿಜಾತ್ಯಮೆ ತನ್ನನನುಶಾಸಿಪಂತೆಯುಂ ನಿನಗೆ ತರಳತೆಯಿದೆತ್ತಣಿಂ ಬಂದುದೆಂದು ಧೈರ್ಯಮೆ ಧಿಕ್ಕರಿಸುವಂತೆಯುಂ ಅತಿಲಜ್ಜಿತೆಯಾಗಿ ತನ್ನೊಳಿಂತೆಂದಳ್

ಮನಮಱಿಗುಂ ನರೇಂದ್ರಸುತನೆಂದಿನಿಸಳ್ಕೆನೆ ಸುತ್ತಲುಂ ಸಖೀ
ಜನಮಿರೆಯುಂ ವಿಚಾರಿಸೆನೆ ದುಃಖದೊಳಕ್ಕನಿರಲ್ಕೆ ಲಜ್ಜೆಗಾ
ಯೆನೆ ಗುರುಗಳ್ಗೆ ಬೆಳ್ಕಱೆನೆ ಚೇಟಕಿಯರ್ ನೆರೆದಿರ್ದರೆಂಬಿದಂ
ನೆನೆಯೆನೆ ಕೆಟ್ಟೆನೇನನಿರದಿಂತುಟು ವಿಭ್ರಮದಿಂದೊಡರ್ಚಿದಂ ೯೩

ಹಾಸಿಗೆಯಲ್ಲಿ ಮೈಯನ್ನು ಈಡಾಡಿ, ತನ್ನನ್ನು ತಾನೆ ತಿಳಿದುಕೊಳ್ಳಲಾರದೆ 'ಎಲೈ ಚಂಚಲ ಬುದ್ಧಿಯುವಳೆ, ನೀನು ಇದಾವ ಕೆಲಸವನ್ನು ಮಾಡಲು ಹೊರಟಿದ್ದೀಯೆ ?' ಎಂದು ನಾಚಿಕೆಯಿಂದ ಧಿಕ್ಕರಿಸಲ್ಪಟ್ಟಂತೆಯೂ, 'ಗಂಧರ್ವರಾಜಪುತ್ರಿ, ಇದು ನಿನಗೆ ಸರಿಯೆ ?' ಎಂದು ವಿನಯಗುಣವೇ ತನ್ನನ್ನು ತೆಗಳುತ್ತಿರುವಂತೆಯೂ, 'ಎಳೆಯಳೆ, ನಿನ್ನ ಎಳೆತನವು ಎಲ್ಲಿ ಹೋಯಿತೆಂದು ಮೊದ್ದುತನವು ತನ್ನನ್ನು ಹಾಸ್ಯಮಾಡುವಂತೆಯೂ, ಸತ್ಕುಲದಲ್ಲಿ ಹುಟ್ಟಿದ ಹುಡುಗಿಯರಿಗೆ ಇದು ನ್ಯಾಯವಲ್ಲವೆಂದು ದೊಡ್ಡತನವು ನಿಂದಿಸುತ್ತಿರುವಂತೆಯೂ, 'ಕೆಟ್ಟ ನಡತೆಯುವಳೆ, ಶಿಷ್ಟಾಚಾರವನ್ನು ಬಿಟ್ಟುಬಿಟ್ಟೆಯಲ್ಲ !' ಎಂದು ಆಚಾರವೇ ತನ್ನನ್ನು ಗದರಿಸುವಂತೆಯೂ, 'ಎಲೈ ದಡ್ಡೆ, ಮನ್ಮಥನಿಂದ ಕೆಳಮಟ್ಟಕ್ಕೆ ಇಳಿಸಲ್ಪಟ್ಟೆಯಲ್ಲ !' ಎಂದು ಕುಲೀನತೆಯೆ ತನಗೆ ಉಪದೇಶ ಮಾಡುವಂತೆಯೂ, 'ನಿನಗೆ ಈ ಚಂಚಲಬುದ್ಧಿಯು ಎಲ್ಲಿಂದ ಬಂತು ?' ಎಂದು ಧೈರ್ಯವೇ ಧಿಕ್ಕರಿಸುವಂತೆಯೂ, ಭಾವಿಸಿ ಬಹಳವಾಗಿ ನಾಚಿಕೆಪಟ್ಟು, ತನ್ನಲ್ಲಿ ಹೀಗೆ ಆಲೋಚಿಸಿದಳು.

೯೩. "ರಾಜಕುಮಾರನು ನನ್ನ ಮನಸ್ಸನ್ನು ತಿಳಿದುಕೊಂಡುಬಿಡುತ್ತಾನೆ" ಎಂದು ನಾನು ಸ್ವಲ್ಪವೂ ಹೆದರಲಿಲ್ಲವಲ್ಲ ! ಸುತ್ತಲೂ ಗೆಳತಿಯರಿದ್ದಾರೆಂದು ಆಲೋಚಿಸಲೇ ಇಲ್ಲವಲ್ಲ ! ಅಕ್ಕನು ಇಷ್ಟು ದುಃಖದಲ್ಲಿ ಮುಳುಗಿರುವಾಗ ನಾನು ಹೀಗಾಡಬಾರದೆಂದು ನಾಚಿಕೆಯನ್ನೂ ಉಳಿಸಿಕೊಳ್ಳಲಿಲ್ಲವಲ್ಲ ! ತಂದೆ ತಾಯಿಗಳಿಗೆ ಭಯಪಡಲಿಲ್ಲವಲ್ಲ. ಸೇವಕಿಯರು ನೆರೆದಿದ್ದಾರೆ ಎಂಬುದನ್ನು ಆಲೋಚಿಸಲಿಲ್ಲವಲ್ಲ ! ಅಯ್ಯೋ ಕೆಟ್ಟೆ !

ಕಿಱುಗೂಸುಗಳುಂ ಮೊದಲಾ
ಗಱಿದಪರೆನೆ ಮದನಹತಕನಿಂದಂ ನೆಱೆ ಮು
ನ್ನುಱೆವೋದಕ್ಕಂ ತಾಂ ಪೇ
ಟಱೆಯುಳೆ ಮುನ್ನಮೆ ಮದೀಯ ಧೈರ್ಯಚ್ಯುತಿಯಂ ೯೪

ಏನೆಂಬರೊ ತಾಯ್ತಂದೆಯ
ರೇನಂ ಗಂಧರ್ವಲೋಕಮೆಂಗುಮೊ ಕೇಳ್ದಿಂ
ತೇನೆಂಬೆನದೇಗೆಯ್ದಪೆ
ನೇ ನೆವದಿಂ ಮಱಸಿದಪ್ಪೆನೆನ್ನಯ ತಪ್ಪಂ ೯೫

ತನುವಂ ತೆಯ್ದಪ್ಪಳಕ್ಕಂ ಬ್ರತದೊಳೆನುತೆ ಕನ್ಯಾಬ್ರತಕ್ಕಂತೆ ಪೂಣ್ದ
ರ್ದನದಂ ಕೇಳ್ದಿರ್ದರಂತೆನ್ನಯ ಕೆಳದಿಯರಾ ಮಾರ್ಗದಿಂದಂತೆ ಕೇಯೂ
ರನ ಕೆಯ್ಯೊಳ್ ಮುಂ ಮಹಾಶ್ವೇತೆಗೆ ಮಿಗೆ ನುಡಿದಾನಟ್ಟಿಯುಂ ಮತ್ತಿದೇನೆಂ
ಬೆನೊ ಬಂದತ್ತೆತ್ತಣಿಂದೇದಱಿಯೆನೆನಗೆ ಮತ್ಪಾಪದಿಂ ವಿಪ್ರಲಂಭಂ ೯೬

ಪೆಱತಂತಿರ್ಕೆಂದುಂ ಕೇ
ಳ್ದಱಿಯೆಂ ಕಂಡಱಿಯೆಃನರಸನೆಂದಾರೆಂದಾ
ನಱಿಯೆಂ ನಾಣ್ಗೆಡುವಿನಮೀ
ತೆಱದಿಂದೆನ್ನಂ ವಿಡಂಬಿಸಲ್ಕೊಡರಿಕುಮೇ ೯೭

ಸುಮ್ಮನಿರದೆ ಬುದ್ಧಿಭ್ರಮೆಯಿಂದ ಹೀಗೆ ನಾನು ಏನು ಮಾಡಿಬಿಟ್ಟೆ ! ೯೪. ನಾನು ಹೀಗೆ ಧೈರ್ಯಗೆಟ್ಟು ಮಾಡಿದ್ದನ್ನು ಚಿಕ್ಕಮಕ್ಕಳೇ ಮೊದಲಾಗಿ ಎಲ್ಲರೂ ತಿಳಿದು ಕೊಳ್ಳುತ್ತಾರೆಂದಮೇಲೆ ಮೊದಲು ನೀಚನಾದ ಮನ್ಮಥನಿಂದ ಕಷ್ಟವನ್ನು ಅನುಭವಿಸು ತ್ತಿರುವ ಅಕ್ಕನು ತಿಳಿದುಕೊಳ್ಳದೆ ಇರುತ್ತಾಳೆಯೆ ? ೯೫. ಇದನ್ನು ಕೇಳಿ ನನ್ನ ತಾಯಿ ತಂದೆಗಳು ಏನನ್ನು ಹೇಳುತ್ತಾರೊ ? ಗಂಧರ್ವಲೋಕವು ಏನು ಹೇಳುತ್ತದೆಯೊ ? ನಾನು ಏನು ಹೇಳಲಿ ? ಏನು ಮಾಡಲಿ ? ಯಾವ ನೆಪವನ್ನು ಹೇಳಿ ನನ್ನ ತಪ್ಪನ್ನು ಮರೆಮಾಚಲಿ ? ೯೬. ನನ್ನ ಅಕ್ಕ ಮಹಾಶ್ವೇತೆ ಈ ಕಾಮನ ದೆಸೆಯಿಂದ ವ್ರತ ವನ್ನು ಹಿಡಿದು ತನ್ನ ದೇಹವನ್ನು ದಂಡಿಸುತ್ತಿದ್ದಾಳೆ. ಆದ್ದರಿಂದ ನಾನೂ ಮದುವೆ ಮಾಡಿಕೊಳ್ಳದೆ ಬ್ರಹ್ಮಚಾರಿಣಿಯಾಗಿಯೇ ಇರುತ್ತೇನೆ ಎಂದು ಪ್ರತಿಜ್ಞೆ ಮಾಡಿದ್ದೆನು. ಅದನ್ನು ನನ್ನ ಗೆಳತಿಯರೆಲ್ಲ ಕೇಳಿದ್ದರು. ಅದೇ ರೀತಿಯಿಂದ ಕೇಯೂರಕನ ಕೈಯಲ್ಲಿ ಮೊದಲು ಮಹಾಶ್ವೇತೆಗೆ ಹೇಳಿಕಳುಹಿಸಿದ್ದೆನು. ಮತ್ತೆ ಈಗ ಏನು ಹೇಳಲಿ. ಈ ವಿರಹ ವೇದನೆಯು ಪಾಪ ವಿಶೇಷದಿಂದ ನನಗೆ ಎಲ್ಲಿಂದ ಬಂತು ? ಎಂಬುದು ಗೊತ್ತಾಗುವು ದಿಲ್ಲ ೯೭. ಉಳಿದಿದ್ದೆಲ್ಲ ಹಾಗಿರಲಿ. ಇವನನ್ನು ಯಾವಾಗಲೂ ಕೇಳರಿಯೆನು ಮತ್ತು ಕಂಡರಿಯೆನು. ಈ ದೊರೆಯು ಯಾರೆಂದು ನನಗೆ ಗೊತ್ತೇ ಇಲ್ಲ. ಹೀಗೆ ಇವನು ನನ್ನನ್ನು

ಮುನಿಸಿಂ ಮನ್ಮಥನಸ್ತ್ರಪಂಜರದೊಳಿಟ್ಟೆನ್ನಂ ನೃಪಂಗೊಪ್ಪುಗೊ
ಟ್ಟನೊ ತದ್ದರ್ಶನಮಾತ್ರದಿಂ ಗುಣಪಣಕ್ಕಾನಾವಗಂ ಮಾಱುವೋ
ದೆನೊ ರಾಗೋದಯಮೆನ್ನನೋವದೆಳದೊಯ್ದೀಂ ತೊಳ್ತುಗೊಟ್ಟಿತ್ತೊ ಭೋಂ
ಕೆನಲೆನ್ನಿಂದ್ರಿಯಸಂಕುಲಂ ಪಿಡಿದುತಂದೇಂ ಕಟ್ಟಿ ಮುಂದಿಟ್ಟುದೋ ೯೮

ನೋಡಿದನಿತಱೊಳೆ ಚಂದ್ರಾ
ಪೀಡಂ ಸಂತಾಪದೊದವನೆನಗಿಂತೀಗಳ್
ಮಾಡಿದನಾತನ ದೆಸೆಯುಂ
ನೋಡಲ್ಕಂಜುವೆನೆನುತ್ತೆ ಚಿಂತಿಸುವಿನೆಗಂ ೯೯

ವ॥ ನೀನಿಂತು ಪುಸಿಸೈರಣೆಯುನೊಡರ್ಚುವೊಡಿಂ ಪೋದಪೆನೆಂದಂತರ್ಗತನಪ್ಪ ಚಂದ್ರಾಪೀಡನಿಂ ಪರಿಹಸಿತೆಯಾದಂತೆಯುಂ ಆತನಂ ಪ್ರಕ್ಷಾಳಿತಲೋಚನೆಯಾಗಿ ಮಗುೞೆ ನೋಡಿ ಕೃತಾರ್ಥೆಯಾಗೆಂದು ಬಾಷ್ಪದಿಂದಭಿಹಿತೆಯಾದಂತೆಯುಂ ನಿನ್ನ ಧೈರ್ಯಾವಲೇಪಮಂ ಪ್ರಾಣಂಬೆರಸು ತೆಗೆಯದೆ ಮಾಣೆನೆಂದು ಮನೋಭವನಿಂ ನಿರ್ಭರ್ತ್ಸಿತೆಯಾದಂತೆಯುಂ ಯುವರಾಜಾಭಿಮುಖಹೃದಯೆಯಾಗಿ ಮನಂಗೊಟ್ಟುತಿಪ್ರೇಮಪರವಶದಿನಸ್ವತಂತ್ರೀಕೃತೆಯುಂ ಪರವಶೀಭೂತೆಯುಮೆನಿಸಿ ಭೋಂಕನೆಟ್ಟು ಮಣಿಮಯಗವಾಕ್ಷನಿಕ್ಷಿಪ್ತಮುಖಿಯಾಗಿ ನೃಪರೂಪಚಂದ್ರನಿರ್ದ ಕೇಳೀಪರ್ವತಮಂ ನೋಡುತಿರ್ದು

ನಾಚಿಕೆಗೆಡುವಂತೆ ಮಾಡಿ ಅಪಹಾಸ್ಯಕ್ಕೀಡುಮಾಡಲು ಪ್ರಯತ್ನಿಸಬಹುದೆ ? ೯೮. ಮನ್ಮಥನು ನನ್ನ ಮೇಲಿನ ಕೋಪದಿಂದ ಶರಪಂಜರದಲ್ಲಿ ನನ್ನನ್ನು ಕೂಡಿ ಈ ರಾಜನಿಗೆ ಕಾಣಿಕೆಯಾಗಿ ಒಪ್ಪಿಸಿದನೋ ಅಥವಾ ಅವನನ್ನು ನೋಡಿದ ಕೂಡಲೆ ಅವನ ಸೌಂದರ್ಯಾದಿ ಗುಣಗಳೆಂಬ ಹಣಕ್ಕೆ ನಾನು ಶಾಶ್ವತವಾಗಿ ಮಾರಿಕೊಂಡೆನೊ ? ಅಥವಾ ಅನುರಾಗವು ನನ್ನನ್ನು ಬಿಡದೆ ಎಳೆದೊಯ್ದು ಅವನಿಗೆ ದಾಸಿಯನ್ನಾಗಿ ಮಾಡಿಬಿಟ್ಟಿತೋ? ತಟ್ಟನೆ ನನ್ನನ್ನು ಇಂದ್ರಿಯಗಳು ಹಿಡಿದುತಂದು ಕಟ್ಟಿ ಅವನ ಮುಂದೆ ಇರಿಸಿಬಿಟ್ಟಿತೋ ? ೯೯. ಈ ಚಂದ್ರಾಪೀಡನು ನೋಡಿದ ಮಾತ್ರದಿಂದಲೆ ನನಗೆ ಈಗ ಹೀಗೆ ಸಂತಾಪವುಂಟಾಗುವಂತೆ ಮಾಡಿದ್ದಾನೆ. ಆದ್ದರಿಂದ ಅವನಿರುವ ದಿಕ್ಕನ್ನೂ ನೋಡುವುದಕ್ಕೆ ಹೆದರಿಕೆಯಾಗುತ್ತದೆ" ಎಂದು ಚಿಂತಿಸುತ್ತಿದ್ದಳು. ವ॥ ನೀನು ಹೀಗೆ ಸುಳ್ಳು ಸಮಾಧಾನವನ್ನು ಮಾಡಿಕೊಳ್ಳುವುದಾದರೆ ನಾನಿನ್ನು ಇಲ್ಲಿ ಇರುವುದಿಲ್ಲ, ಹೊರಟುಹೋಗುತ್ತೇನೆ ಎಂದು ಅಂತರಂಗದಲ್ಲಿರುವ ಚಂದ್ರಾಪೀಡನಿಂದ ಹಾಸ್ಯ ಮಾಡಲ್ಪಟ್ಟವಳಂತೆಯೂ, ಅವನನ್ನು ಕಣ್ಣು ತೊಳೆದುಕೊಂಡು ಮತ್ತೆ ನೋಡಿ ಧನ್ಯಳಾಗು ಎಂದು ಕಣ್ಣೀರಿನಿಂದ ಹೇಳಲ್ಪಟ್ಟವಳಂತೆಯೂ, ನಿನ್ನ ಧೈರ್ಯದ ಜಂಭವನ್ನು ಪ್ರಾಣಸಹಿತ ತೆಗೆಯದೆ ಬಿಡುವುದಿಲ್ಲ ಎಂದು ಮನ್ಮಥನಿಂದ ನಿಂದಿಸಲ್ಪಟ್ಟವಳಂತೆಯೂ, ಯುವರಾಜನನ್ನೇ ಮನಸ್ಸಿನಲ್ಲಿ ಚಿಂತಿಸುವವಳಾಗಿ ಮನಸ್ಸನ್ನು ಅರ್ಪಿಸಿ, ಅತ್ಯಧಿಕವಾದ ಅನುರಾಗದಿಂದ

ಆನಂದಾಶ್ರುಜಲವ್ಯವ
ಧಾನಕ್ಕುಮ್ಮಳಿಸಿದಂತೆವೊಲ್ ಕಣ್ಮಲರಿಂ
ದಾ ನೃಪನಂ ನೋಡದೆ ಕಮಲಾ
ನನೆ ನೆನಪಿನೊಳೆ ಪದೆದು ನೋಡುತ್ತಿರ್ದಳ್ ೧೦೦

ಬೆರಲ ಬೆವರಿಂದೆ ನಾಂದಪು
ದಿರದಿನಿಸೆಂಬಂತೆ ಚಿತ್ರತೂಲಿಕೆಯಿಂದಂ
ಬರೆಯದೆ ಕಾಮಿನಿ ಏದ್ದಂ
ಬರೆದಳ್ ಚಿಂತೆಯೊಳೆ ಮನುಜಮಕರಧ್ವಜನಾ ೧೦೧

ಪುದಿದ ಪುಳಕಂಗಳಡ್ಡೈ
ಸದಿರವೆನುತ್ತಂಜಿದಂತೆ ನಳಿತೋಳ್ಗಳಿನ
ಪ್ಪದೆ ಕಾಂತೆ ಹೃದಯದಿಂದ
ಪ್ಪಿದಳುತ್ಸುಕೆಯಾಗಿ ಮನುಜಮಕರಧ್ವಜನಾ ೧೦೨

ತಡವಾದಪುದುಟಿದರನೀ
ಯೆಡೆಗೆ ನಿಯೋಜಿಸಲಿಕೆಂಬವೋಲ್ ನೃಪವರನಿ
ರ್ದೆಡೆಗೆ ನಿಯೋಜಿಸಿದಳ್ ಬಿಡ
ದೆಡೆಯಾಡುವ ಬೆಸಕೆ ಕನ್ನೆ ತನ್ನಯ ಮನಮಂ ೧೦೩

ಸ್ವಾತಂತ್ರ್ಯವಿಲ್ಲದವಳಾಗಿ ಪರವಶೆಯಾಗಿ ತಟ್ಟನೆದ್ದು ರತ್ನದ ಕಿಟಕಿಯಲ್ಲಿ ಮುಖವನ್ನಿಟ್ಟು ರಾಜರೂಪಚಂದ್ರನಾದ ಚಂದ್ರಾಪೀಡನು ಇದ್ದ ಕ್ರೀಡಾಶೈಲವನ್ನು ನೋಡುತ್ತಾ ಇದ್ದು, ೧೦೦. ಆನಂದಬಾಷ್ಪದಿಂದ ಅವನನ್ನು ನೋಡಲು ಮರೆಯಾದುದಕ್ಕೆ ದುಃಖ ಪಡುವವಳಂತೆ ಕಣ್ಣಿನಿಂದ ಅರಸನನ್ನು ನೋಡದೆ ಕಮಲಮುಖಿಯಾದ ಕಾದಂಬರಿಯು ಸ್ಮರಣೆಯಿಂದಲೆ ಪ್ರೀತಿಪೂರ್ವಕವಾಗಿ ನೋಡುತ್ತಿದ್ದಳು. ೧೦೧. ಅವನ ಚಿತ್ರವನ್ನು ಬರೆಯಬಹುದಾಗಿತ್ತು. ಆದರೆ ಬರೆಯುವಾಗ ಬೆರಳಿನ ಬೆವರಿಂದ ಚಿತ್ರವು ಸ್ವಲ್ಪವೂ ನಿಲ್ಲದೆ ತೊಯ್ದುಹೋಗುತ್ತದೆ ಎಂಬ ಭಾವನೆಯಿಂದಲೋ ಎಂಬಂತೆ ಆ ಕಾಮಿನಿಯು ಮನುಜರೂಪದ ಮನ್ಮಥನಂತಿರುವ ಆ ಚಂದ್ರಾಪೀಡನನ್ನು ಕುಂಚದಿಂದ ಬರೆಯದೆ ಕೇವಲ ಚಿಂತೆಯಿಂದಲೆ ಚಿತ್ರಿಸಿದಳು. ೧೦೨. ಆಲಿಂಗನ ಮಾಡಿಕೊಳ್ಳುವಾಗ ಉಂಟಾಗುವ ರೋಮಾಂಚನಗಳು ಇಬ್ಬರ ಮಧ್ಯೆ ಅಡ್ಡಬಾರದೆ ಇರುವುದಿಲ್ಲ ಎಂದು ಹೆದರಿದಂತೆ ಆ ರಮಣಿಯು ಮನುಜರೂಪದ ಮನ್ಮಥನಂತಿರುವ ಅವನನ್ನು ತನ್ನ ಕೋಮಲವಾದ ತೋಳುಗಳಿಂದ ತಬ್ಬಿಕೊಳ್ಳದೆ ಕುತೂಹಲದಿಂದ ಕೂಡಿದವಳಾಗಿ ಮನಸ್ಸಿನಿಂದಲೇ ತಬ್ಬಿಕೊಂಡಳು. ೧೦೩. ಬೇರೆ ಜನರನ್ನು ಈ ಕೆಲಸಕ್ಕೆ ನೇಮಿಸಿದರೆ ಹೊತ್ತಾಗಿಬಿಡುತ್ತದೆಯೊ ? ಎಂಬಂತೆ ಆ ರಾಜೇಂದ್ರನಿದ್ದ ಸ್ಥಳಕ್ಕೆ ಕಾದಂಬರಿಯು ಹೋಗಿಬಂದು

ವ॥ ಇತ್ತಲ್ ಚಂದ್ರಾಪೀಡಂ ಕ್ರೀಡಾಪರ್ವತದ ಮಣಿಮಯಭವನದೊಳ್

ಅಡಿಯೊತ್ತಲ್ ಕೇಯೂರಕ
ನೆಡೆಯಱಿದೋಲೈಸೆ ಕನ್ನಿಕಾಸಂಕುಳವಂ
ದಡಕಿಲ್ಗೊಂಡೊಪ್ಪುವ ಕೌ
ಳುಡೆಯಿಂ ಸೊಗಯಿಸುವ ಪಾಸಿನೊಳ್ ಪಟ್ಟಿರ್ದಂ ೧೦೪

ವ॥ ಇಂತು ಗಂಧರ್ವರಾಜನಂದನೆಯ ನೆಗಟ್ತಿಗೆ ಡೋಲಾಯಮಾನಚಿತ್ತನಾಗಿ ತನ್ನೊಳಿಂತೆಂದಂ

ಕುಸುಮಶರಾಸ್ತ್ರಪುಷ್ಪರಜದಿಂ ಪೊರೆದಂತಿರೆ ಬಾಷ್ಪವಾರಿಗಳ್
ಪಸರಿಸೆ ರಾಗವಗ್ಗಲಿಸೆ ಚಾರುಚಲನ್ನಯನತ್ರಿಭಾಗದಿಂ
ಕುಸಿಕುಸಿದೆನ್ನನೀಕ್ಷಿಸುವಳಾನಿನಿಸೀಕ್ಷಿಸಲಾ ಲತಾಂಗಿ ಲ
ಜ್ಜಿಸಿ ತನುವಂ ನಿಜಸ್ಮಿತಸಿತಾಂಶುಕಪಲ್ಲವದಿಂ ಮುಸುಂಕುವಳ್ ೧೦೫

ವ॥ ಮತ್ತಮಾ ಕಾಂತೆ ಲಜ್ಜಾನತವದನೆಯಾಗಿ ಪ್ರತಿಬಿಂಬಮಾದೊಡಂ ನೆಲಸುಗೆಂಬಂತೆ ಕಪೋಲಮಣಿದರ್ಪಣಮಂ ಸಮರ್ಪಿಸಿಯುಮೆನಗೆ ತಂಬುಲಂಗೊಡಲುಜ್ಜುಗಂಗೆಯ್ವಲ್ಲಿ

ಸಮಾಚಾರವನ್ನು ತಿಳಿಸುವ ಕೆಲಸಕ್ಕೆ ತನ್ನ ಮನಸ್ಸನ್ನೇ ನೇಮಿಸಿದಳು, ವ॥ ಈ ಕಡೆ ಚಂದ್ರಾಪೀಡನು ಕ್ರೀಡಾಪರ್ವತದ ರತ್ನಮಯಗೃಹದಲ್ಲಿ ೧೦೪. ಕೇಯೂರಕನು ಕಾಲನ್ನು ಒತ್ತುತ್ತಿರಲಾಗಿ, ಹುಡುಗಿಯರ ಗುಂಪು ಸಂದರ್ಭವನ್ನರಿತು ಸೇವಿಸುತ್ತಿರಲು ಒಂದರ ಮೇಲೆ ಒಂದನ್ನು ಇಟ್ಟಿರುವ ತಲೆದಿಂಬುಗಳಿಂದ ಸೊಗಸಾಗಿರುವ ಹಾಸಿಗೆಯಲ್ಲಿ ಮಲಗಿದ್ದನು. ವ॥ ಹೀಗೆ ಗಂಧರ್ವರಾಜಪುತ್ರಿಯಾದ ಕಾದಂಬರಿಯ ವರ್ತನೆಗೆ ಡೋಲಾಯಮಾನವಾದ ಮನಸ್ಸುಳ್ಳವನಾಗಿ ತನ್ನಲ್ಲಿ ಹೀಗೆ ಚಿಂತಿಸಿದನು. ೧೦೫. “ಮನ್ಮಥನ ಬಾಣಗಳಾದ ಹೂವುಗಳ ಧೂಳಿಯಿಂದ ತುಂಬಿಕೊಂಡಂತೆ ಕಣ್ಣೀರು ಸುರಿಯುತ್ತಿರಲು, ಪ್ರೀತಿ ಹೆಚ್ಚಾಗಲು, ಸುಂದರವಾದ ಹಾಗೂ ಚಂಚಲವಾದ ಕಟಾಕ್ಷದಿಂದ ಬಾಗಿ ಬಾಗಿ ನನ್ನನ್ನು ನೋಡುತ್ತಿದ್ದಳು. ನಾನು ಸ್ವಲ್ಪ ನೋಡಿದರೂ ಆ ಬಳ್ಳಿಯಂತೆ ತೆಳುವಾದ ದೇಹವುಳ್ಳ ಆ ಬಾಲೆಯು ನಾಚಿಕೆಪಟ್ಟು ತನ್ನ ಶರೀರವನ್ನು ಮುಂದಹಾಸವೆಂಬ ಚಿಗುರಿನಂತೆ ನವುರಾದ ಬಿಳಿಯ ಬಟ್ಟೆಯಿಂದ ಮುಚ್ಚುವಳು, ವ॥ ಮತ್ತು ಆ ಸುಂದರಿಯು ನಾಚಿಕೆಯಿಂದ ಬಗ್ಗಿದ ಮುಖವುಳ್ಳವಳಾಗಿ ನನ್ನನ್ನು ನೋಡಲಾರದೆ ನನ್ನ ಪ್ರತಿಬಿಂಬವಾದರೂ ಮೂಡಲೆಂಬ ಉದ್ದೇಶದಿಂದಲೋ ಎಂಬಂತೆ ಕೆನ್ನೆಯೆಂಬ ರನ್ನಗನ್ನಡಿಯನ್ನು ನನ್ನ ಕಡೆಗೆ ತೋರಿಸಿದಳು. ಮತ್ತು ನನಗೆ ವೀಳೆಯವನ್ನು ಕೊಡಲು ಪ್ರಯತ್ನಿಸುತ್ತಿರುವಾಗ ನಡುಗುತ್ತಿರುವ ಕೆಂಪಾದ ಅಂಗೈಯನ್ನು ಕೆಂದಾವರೆಯೆಂದು

ನಡುಗವ ಕೆಂದಳವುಂ ಚೆನ್ನೈದಿಲ್ಗೆತ್ತೆಱಗುವ ಮಱಿದುಂಬಿಯ ಬಂಬಲಿಂ ತಮಾಲಪಲ್ಲವಮುಂ ಪಿಡಿದು ತನ್ನ ಬಿಂದುವಿಡುವ ಪೊಗದ ಬೆಮರಂ ಬೀಸುವಂತೆಯುಮಿರ್ದಳಿವೆಲ್ಲಮೇನೆಂದು ತನ್ನೊಳಗೆ ಬಗೆಯುತ್ತಮಿಂತೆಂದಂ

> ಉದಕಾಂತಃಪಾತಿವೊಲ್ ಸ್ನೇಹದಲವಮೆನಸುಂ ಪರ್ವಿ ಪುದ್ಮೌವನೋದ
> ಸ್ಮದದೊಳ್ ತೋಱುತ್ತಮಿರ್ದಪ್ಪುದು ಕನಸಿನವೋಲೆನ್ನ ತತ್ಕಾಂಕ್ಷೆ ಕೈಸಾ
> ರದುದಂ ತೋಱುತ್ತಮಿರ್ದತ್ತೆನಗೆ ಪಿರಿದುಮೀ ಚಿತ್ತದೊಂದಾಸೆ ದಲ್ ಮಾ
> ಯದ ಕುಂಚಂಬೊಲಸಂಭಾವ್ಯಮನೆ ದಿಟಮೆನಲ್ ತೋಱುತಿರ್ದಪ್ಪುದೀಗಳ್ ೧೦೬
>
> ಪಸರಿಸಿ ಮಿಥ್ಯಾಸಂಕ
> ಲ್ಪಸಹಸ್ರದಿನಾಸೆವಡಿಸುತಿರ್ಪುದು ಕಿಱುವಾ
> ನಿಸಿಕರ್ಕಳಲ್ಲಿ ಸಾಜದೊ
> ಳೆ ಸುಲಭಮೆನಿಸಿರ್ದ ಮದನಲಾಘವಮೀಗಳ್ ೧೦೭

ವ॥ ಎಂದು ಭಾವಿಸುತ್ತಮಿರ್ದು

> ಎನಗಿನಿತು ಚಿಂತೆಯೇಕೆ ಗ
> ಡೆನಗವೆ ದಿಟಮಪ್ಪುದಾದೊಡಪ್ರಾರ್ಥಿತವಾ
> ವನಿತೆಯ ಮಾನಮುಂ ಪ್ರಕಟಿಸಿ
> ಮನೋಭವಂ ತಾನೆ ಕಳೆದಪಂ ಸಂದೆಯಮುಂ ೧೦೮

ತಿಳಿದು ಮುತ್ತುವ ಮರಿದುಂಬಿಗಳ ಗುಂಪಿನಿಂದ ಕೂಡಿಕೊಂಡವಳಾಗಿ, ಹೊಂಗೆಯ ಚಿಗುರಿನ ಗೊಂಚಲನ್ನು ಹಿಡಿದು ತನ್ನ ತೊಟ್ಟಿಕ್ಕುತ್ತಿರುವ ಮುಖದ ಬೆವರನ್ನು ಬೀಸಿಕೊಳ್ಳುತ್ತಿರುವಂತೆಯೂ ಇದ್ದಳು. ಇವೆಲ್ಲ ಏನು ಎಂದು ತನ್ನಲ್ಲೆ ಆಲೋಚಿಸುತ್ತಾ ಹೀಗೆ ಹೇಳಿದನು. ೧೦೬. ನೀರಿನ ಮಧ್ಯದಲ್ಲಿ ಬಿದ್ದ ಸ್ನೇಹಲೇಶವು (ಸ್ವಲ್ಪ ಎಣ್ಣೆ) ಹರಡಿಕೊಂಡು ಹೋಗುವಂತೆ ಈ ಹರಯದ ಹೆಚ್ಚಾದ ಮದದಲ್ಲಿ ಕಾಮಿನಿಯರ ಅಲ್ಪ ಸ್ನೇಹವು ಹೆಚ್ಚುಹೆಚ್ಚಾಗಿ ಹರಡಿದಂತೆ ಕಾಣುತ್ತದೆ. ಅವಳನ್ನು ಪಡೆಯಬೇಕೆಂಬ ಮನೋರಥವು ಕನಸಿನಂತೆ ಅನುಭವಿಸದೇ ಇರುವುದನ್ನೂ ತೋರಿಸುತ್ತದೆ. ಹಾಗೆಯೆ ಮನಸ್ಸಿನ ದೊಡ್ಡ ಆಸೆಯು ಮಾಯದ ಕುಂಚದಂತೆ ನಡೆಯಲಸಾಧ್ಯವಾದುದನ್ನೂ ನಿಜವೋ ಎಂಬಂತೆ ಈಗ ತೋರಿಸುತ್ತದೆ. ಇದು ಖಂಡಿತ. (ಟಿ). ಅವಳ ಮೇಲಿನ ಆಸೆಯಿಂದ ನಾನು ಇಲ್ಲದುದನ್ನೆಲ್ಲಾ ಊಹಿಸಿಕೊಂಡು ವೃಥಾ ಆಯಾಸಗೊಳ್ಳುತ್ತಿದ್ದೇನೆ ಎಂದು ಅಭಿಪ್ರಾಯ. ೧೦೭. ಕೀಳುಸ್ವಭಾವದ ಮನುಷ್ಯರಲ್ಲಿ ಸಹಜವಾದ ಮತ್ತು ಸರ್ವಸಾಮಾನ್ಯವಾದ ಈ ತುಚ್ಛ ಕಾಮವಿಕಾರವು ಹರಡಿಕೊಂಡು ಕೈಗೂಡದ ಸಾವಿರಾರು ಮನೋರಥಗಳನ್ನು ಹುಟ್ಟಿಸಿ ಸುಮ್ಮನೆ ಆಸೆಪಡಿಸುತ್ತದೆ. ವ॥ ಎಂದು ಭಾವಿಸುತ್ತಿದ್ದು, ೧೦೮. "ನನಗೆ ಇಷ್ಟು ಚಿಂತೆಯೇಕೆ ? ಅದೆಲ್ಲ ನಿಜವಾದರೆ ಮನ್ಮಥನು ನಾನು ಕೇಳಿಕೊಳ್ಳದಿದ್ದರೂ ತಾನಾಗಿಯೇ ಅವಳ ಇಂಗಿತವನ್ನು ಬಹಿರಂಗಪಡಿಸಿ ನನ್ನ

ವ॥ ಎಂದವಧಾರಿಸಿ ಶಯನತಳದೊಳ್ ಕುಳ್ಳಿರ್ದು ಕನ್ಯಕೆಯರೊಡನೆ ನೆತ್ತದೊಳಂ ವೀಣಾವಾದ್ಯದೊಳಂ ಸ್ವರಸಂದೇಹವಿವಾದದೊಳಂ ಸುಭಾಷಿತಗೋಷ್ಠಿಯೊಳಂ ಪಲವುಂ ಸುಕುಮಾರಂಗಳಪ್ಪ ವಿಲಾಸಂಗಳಿಂ ಕ್ರೀಡಿಸುತ್ತಮಿರ್ದು ಪೊಱಮಟ್ಟುಪವನಾಲೋಕನ ಕುತೂಹಲಿತಮಾನಸನಾಗಿ ಕ್ರೀಡಾಪರ್ವತಮನೇಱಿದ ಯುವರಾಜನಂ ನೋಡಿ

ನೋಡಲೊಡಂ ಮನಂ ಬೆದಱೆ ಕಲ್ಲೆರ್ದೆಯಂ ಕಡುಪಿಂದೆ ಕಾಮನೇ
ಸಾಡೆ ಲತಾಂಗಿ ನೊಂದಿನಿಸುಮಲ್ಲಿರದಕ್ಕನ ಬರ್ಪ ಬಟ್ಟೆಯಂ
ನೋಡುವಮೇಱಿಮೆಂದು ಪರಿಚಾರಿಕೆಯರ್ ಬೆರಸಾಗಳೇಱಿದಳ್
ಮಾಡಮನದ್ರಿರಾಜಸುತೆ ತಾರನಗೇಂದ್ರಮನೇಱುವಂದದಿಂ ೧೦೯

ವ॥ ಅಂತು ಸೌಧತಳಮನೇಱಿ ಪರಿಮಿತ ಪರಿಜನೆಯಾಗಿರ್ದಲ್ಲಿ

ತೊಳ ತೊಳ ತೊಳಗುವ ಬೆಳ್ದಿಂ
ಗಳ ಪಕ್ಕದೆ ಪೊಳೆವ ರಶ್ಮಿಜಾಲಮಿದೆನೆ ಕೋ
ಮಳೆಯ ಸಿತಚ್ಛತ್ರದ ಕೆಲ
ದೊಳದೇನೊಪ್ಪಿದುದು ಪೊಧವಳ ಚಮರರುಹಂಗಳ್ ೧೧೦

ಸಂಶಯವನ್ನು ನಿವಾರಿಸುತ್ತಾನೆ." ವ॥ ಎಂದು ತೀರ್ಮಾನಿಸಿ ಹಾಸಿಗೆಯ ಮೇಲೆ ಕುಳಿತುಕೊಂಡು ಆ ಹುಡುಗಿಯರೊಡನೆ ಪಗಡೆಯಿಂದಲೂ, ವೀಣಾವಾದ್ಯದಿಂದಲೂ, ರಾಗಗಳ ವಿಷಯದಲ್ಲಿ ಉಂಟಾದ ಸಂದೇಹಗಳ ಚರ್ಚೆಯಿಂದಲೂ, ಚಾಟುವಚನಗಳ ಕೂಟದಿಂದಲೂ, ಹಲವು ಬಗೆಯ ಹಿತಕರವಾದ ತಮಾಷೆಗಳಿಂದಲೂ ವಿಹರಿಸುತ್ತಿದ್ದು, ಅಲ್ಲಿಂದ ಹೊರಟು ಉದ್ಯಾನವನವನ್ನು ನೋಡಬೇಕೆಂಬ ಕುತೂಹಲವುಳ್ಳವನಾಗಿ ಕ್ರೀಡಾಪರ್ವತವನ್ನು ಏರಿದನು. ಹಾಗೆ ಏರಿದ ಯುವರಾಜನನ್ನು ನೋಡಿ, ೧೦೯. ಅವನನ್ನು ನೋಡುವುದಕ್ಕೂ ಮನಸ್ಸು ಹೆದರುತ್ತಿತ್ತು. ಕಲ್ಲೆದೆಯ ಕಾಮನು ಇವಳ ಮೇಲೆ ಉಗ್ರವಾಗಿ ಬಾಣಗಳನ್ನು ಬಿಡುತ್ತಿದ್ದನು. ಆಗ ಬಳ್ಳಿಯಂತೆ ದೇಹವುಳ್ಳ ಆ ಕಾದಂಬರಿಯು ನೊಂದು ಸ್ವಲ್ಪಹೊತ್ತು ಅಲ್ಲಿರದೆ ಮಹಾಶ್ವೇತೆಯು ಬರುವ ದಾರಿಯನ್ನು ನೋಡೋಣ ಏಳಿ ಎಂದು ಪರಿಚಾರಿಕೆಯರಿಂದ ಕೂಡಿ, ಪಾರ್ವತಿಯು ಕೈಲಾಸಪರ್ವತವನ್ನು ಹತ್ತುವಂತೆ ಆ ಮಹಲಿನ ಮಹಡಿಯನ್ನು ಹತ್ತಿದಳು. ವ॥ ಹಾಗೆ ಮಹಡಿಯನ್ನು ಏರಿ ಮಿತವಾದ ಪರಿಜನರೊಂದಿಗೆ ಕೂಡಿಕೊಂಡಿರುವಲ್ಲಿ, ೧೧೦. ಅತ್ಯಧಿಕವಾಗಿ ಪ್ರಕಾಶಿಸುತ್ತಿರುವ ಶುಭ್ರವಾದ ಚಂದ್ರಮಂಡಲದ ಪಕ್ಕದಲ್ಲಿ ಹೊಳೆಯುತ್ತಿರುವ ಕಾಂತಿಗಳ ಸಮೂಹವೆಂಬಂತೆ ಆ ಸುಕುಮಾರಿಗೆ ಹಿಡಿದಿರುವ ಬಿಳಿಯ ಕೊಡೆಯ ಪಕ್ಕಗಳಲ್ಲಿ ಶುಭ್ರವಾದ ಚಾಮರಗಳು ಎಷ್ಟು ಸೊಗಸಾಗಿದ್ದುವೋ !

ನೆರೆದು ಸಹಜಾವೋದಕ್ಕೆಟ್ಟಂದು ತುಂಬಿಯ ಬಂಬಲಾ
ವರಿಸಲೆನಸುಂ ತನ್ನಂ ನೀಲಾಂಬರಚ್ಛದೆಯಾಗಿ ಸುಂ
ದರಿ ಪಗಲೊಳುಂ ಚಂದ್ರಾಪೀಡಾಭಿಸಾರಣವೇಷಮಂ
ಪಿರಿದುಮೊಲವಿಂದಭ್ಯಾಸಂಗೆಯ್ವುತಿರ್ಪವೊಲೊಪ್ಪಿದಳ್ ೧೧೧

ವ॥ ಅದಲ್ಲದೆಯುಂ

ಚಮರರುಹಾಗ್ರಮಂ ಪಿಡಿದು ಬಿರ್ಚುತಮಿರ್ಪ ಸಿತಾತಪತ್ರದಂ
ಡಮನವಲಂಬಿಸಿರ್ಪಡಪದಾಕೆಯ ಮುಯ್ಪಿನ ಮೇಲೆ ಹಸ್ತಯು
ಗ್ಮಮನೊಸೆದಿಕ್ಕುತಿರ್ಪ ಮದಲೇಖೆಯನಪ್ಪುತಿರ್ಪ ಗೆ
ಯ್ತಮವೆನಿತಾನುಮುಣ್ಮಿದುವವಳ್ಗಿದಿರೊಳ್ ನೃಪರೂಪಚಂದ್ರನಾ ೧೧೨

ವ॥ ಅದಲ್ಲದೆಯುಂ

ಕೆಳದಿಯನಾಗಳ್ ಕರ್ಣೋ
ತ್ಪಳದಿಂದಂ ಮೋದೆ ತಪ್ಪಿಸಲ್ ಪರಿವಳ ಬೆ
ನ್ನೊಳೆ ಪರಿವಳಿರದೆ ನಗುತಂ
ನಳಿನಾನನೆ ಲೀಲೆಯಿಂದಮೊಂದೆರಡಡಿಯಂ ೧೧೩

ವ॥ ಅಂತು ಪಲತೆಱದೆ ನೆಗಟುತ್ತಮಿರ್ದಳಲ್ಲಿ

೧೧೧. ಅವಳ ಶರೀರದ ಸಹಜವಾದ ಸುವಾಸನೆಗೆ ಆಸೆಪಟ್ಟು ಬಂದ ದುಂಬಿಗಳ ಗುಂಪು ಇವಳನ್ನು ಮುತ್ತಿಕೊಂಡುವು. ಆಗ ಅವಳು ನೀಲವಸ್ತ್ರವನ್ನು ಹೊದ್ದುಕೊಂಡಿರುವಂತೆ ಕಾಣುತ್ತಿದ್ದಳು. ಅದರಿಂದ ಆ ಸುಂದರಿಯು ಹಗಲಿನಲ್ಲೂ ಚಂದ್ರಾಪೀಡನನ್ನು ಕುರಿತು ಅಭಿಸರಣಮಾಡುವ ವೇಷವನ್ನು ಬಹಳ ಆಸಕ್ತಿಯಿಂದ ಅಭ್ಯಾಸಮಾಡುತ್ತಿರುವಂತೆ ಶೋಭಿಸುತ್ತಿದ್ದಳು. ವ॥ ಅದಲ್ಲದೆ ಆಗ ಚಂದ್ರಾಪೀಡನು ನೋಡುತ್ತಿರುವಂತೆಯೆ ಅವಳು ಬಗೆಬಗೆಯ ಲೀಲೆಗಳನ್ನು ಆಡುತ್ತಿದ್ದಳು. ೧೧೨. ಚಾಮರದ ತುದಿಯನ್ನು ಒಮ್ಮೆ ಹಿಡಿದುಕೊಳ್ಳುತ್ತಿದ್ದಳು. ಒಮ್ಮೆ ಬಿಚ್ಚಿ ಹಿಡಿದಿರುವ ಬಿಳಿಯ ಕೊಡೆಯ ದಂಡ ವನ್ನು ಹಿಡಿದುಕೊಳ್ಳುತ್ತಿದ್ದಳು. ಒಮ್ಮೆ ಅಡಪವಳಿತಿಯ ಹೆಗಲ ಮೇಲೆ ತನ್ನ ಎರಡು ಕೈಗಳನ್ನೂ ಪ್ರೀತಿಯಿಂದ ಇಡುತ್ತಿದ್ದಳು. ಮತ್ತೊಮ್ಮೆ ಮದಲೇಖೆಯನ್ನು ಪ್ರೀತಿ ಯಿಂದ ತಬ್ಬಿಕೊಳ್ಳುತ್ತಿದ್ದಳು. ವ॥ ಅದಲ್ಲದೆ ೧೧೩. ಆಗ ಕಾದಂಬರಿಯು ಗೆಳತಿ ಯನ್ನು ತನ್ನ ಕಿವಿಯ ನೈದಿಲೆಯಿಂದ ಹೊಡೆಯಲು ಹೊರಟಳು. ಅವಳು ತಪ್ಪಿಸಿ ಕೊಂಡು ಓಡಿದಳು. ಆಗ ನಗುತ್ತಾ ವಿನೋದದಿಂದ ಅವಳ ಬೆನ್ನುಹಿಂದೆ ಬಿಡದೆ ಒಂದೆ ರಡು ಹೆಜ್ಜೆಯನ್ನಿಕ್ಕುವಳು. ವ॥ ಹಾಗೆ ಅಲ್ಲಿ ಹಲವು ಬಗೆಯ ಆಟಗಳನ್ನಾಡುತ್ತಿದ್ದಳು.

ವನಿತೆ ಮನೋಹರನಂ ತಾ
ನನುರಾಗದೆ ನೋಡುತಿರ್ಪ ತನ್ನುಮನಾತಂ
ಮನವೊಸೆದು ನೋಡುತಿರ್ಪುದ
ಱಿನಾಗಳಣಮಱಿದಳಿಲ್ಲ ಪೊೞ್ತಿನ ಪವಣಂ ೧೧೪

ವ॥ ಆಗಳೊರ್ವ ಪಡಿಯಱತಿ ಮಹಾಶ್ವೇತೆ ಬಂದಳೆಂದು ಬಿನ್ನವಿಸೆ ಮಾಡದಿಂದಿೞಿದು ಮಹಾಶ್ವೇತಾನುರೋಧದಿಂದಮೇಂತಾನುಂ ಮಜ್ಜನ ಭೋಜನಾದಿ ದಿವಸವ್ಯಾಪಾರಮಂ ಮಾಡಿದಳಿತ್ತ ಚಂದ್ರಾಪೀಡನುಂ ಕ್ರೀಡಾಪರ್ವತದಿಂದಿೞಿದು ಸ್ನಾನ ದೇವತಾರ್ಚನ ಭೋಜನಾದಿ ದಿವಸವ್ಯಾಪಾರಮಂ ತೀರ್ಚಿ ತದನಂತರಂ ಕೃತಕಾಚಲದ ತಪ್ಪಲಲ್ಲಿ

ಹರಿಣೀರೋಮಂಥಫೇನಪ್ರಸ್ರುತಕಣಲವಾಸಾರದಿಂ ನಾಂದು ಯೋಷಿ
ಚ್ಚರಣಾಲಕ್ತಾಂಶುವಿಂ ಕೆಂಪಡರ್ದು ಲತೆಯ ಬಾಳ್ಪೊಂಪದಿಂದೊಪ್ಪಿ ಪುಷ್ಪೋ
ತ್ಕರರೇಣುಃಸ್ತೋಮದೊಳ್ ತಳ್ತಚಲಿತ ಯಮುನಾವಾರಿವಿಸ್ತಾರಮಂ ಮಾಂ
ಕರಿಸಲ್ ಸಾಲ್ದಿರ್ದ ಹಾರೀತಕ ಹರಿತಶಿಲಾಪಟ್ಟದೊಳ್ ಭೂಪನಿರ್ದಂ ೧೧೫

ವ॥ ಅಂತಾ ಸಮಯದೊಳ್

೧೧೪. ಆಗ ಕಾದಂಬರಿಯು ಆ ಸುಂದರಾಂಗನನ್ನು ಅನುರಾಗದಿಂದ ನೋಡುತ್ತಿದ್ದಳು. ಇವಳನ್ನು ಅವನೂ ಮನಸಾರೆ ಪ್ರೀತಿಯಿಂದ ನೋಡುತ್ತಿದ್ದನು. ಅದರಿಂದ ಆಗ ಅವಳಿಗೆ ಅಲ್ಲಿ ಎಷ್ಟು ಹೊತ್ತು ಕಳೆಯಿತೆಂಬ ಲೆಕ್ಕವೇ ಗೊತ್ತಾಗಲಿಲ್ಲ. ವ॥ ಆಗ ಒಬ್ಬಳು ಬಾಗಿಲು ಕಾಯುವವಳು ಬಂದು ಮಹಾಶ್ವೇತೆ ಬಂದಳೆಂದು ಅರಿಕೆ ಮಾಡಲಾಗಿ ಕಾದಂಬರಿಯು ಮಹಡಿಯಿಂದ ಕೆಳಕ್ಕಿಳಿದುಬಂದಳು. ಮಹಾಶ್ವೇತೆಯ ನಿರ್ಬಂಧದಿಂದ ಹೇಗೋ ಸ್ನಾನ, ಊಟ ಮೊದಲಾದ ಹಗಲಿನ ಕೆಲಸಗಳನ್ನು ಮುಗಿಸಿದಳು. ಈ ಕಡೆ ಚಂದ್ರಾಪೀಡನು ಕ್ರೀಡಾಪರ್ವತದಿಂದ ಇಳಿದು ಸ್ನಾನ, ದೇವರಪೂಜೆ, ಭೋಜನ ಮೊದಲಾದ ಹಗಲಿನ ಕೆಲಸವನ್ನು ಮುಗಿಸಿ ಅಮೇಲೆ ಕೃತಕಪರ್ವತದ ತಪ್ಪಲಲ್ಲಿ ೧೧೫. ಹೆಣ್ಣುಜಿಂಕೆಗಳ ಮೆಲುಕಿನ ನೊರೆಯಿಂದ ಹೊರಡುತ್ತಿರುವ ಹುಂಡುಗಳ ಮಳೆಯಿಂದ ತೊಯ್ದಿರುವ, ಹೆಂಗಸರು ಕಾಲಿಗೆ ಲೇಪನಮಾಡಿಕೊಂಡಿರುವ ಅರಗಿನ ಕಾಂತಿಯಿಂದ ಕೆಂಬಣ್ಣವನ್ನು ತಾಳಿರುವ, ಬಳ್ಳಿಯ ಹಸುರು ಗೊಂಚಲಿನಿಂದ ಶೋಭಿಸುತ್ತಿರುವ, ಹೂವುಗಳ ಧೂಳಿನ ಗುಂಪಿನಿಂದ ಕೂಡಿಕೊಂಡಿರುವ, ನಿಶ್ಚಲವಾದ ಹಾಗೂ ವಿಸ್ತಾರವಾದ ಯಮುನಾಜಲವನ್ನು ತಿರಸ್ಕರಿಲು ಸಮರ್ಥವಾದ (ಯಮುನಾನದಿಯ ನೀರಿನ ಬಣ್ಣವನ್ನು ಹೊಂದಿರುವ) ಹಾರೀತಕಪಕ್ಷಿಯಂತೆ (ಹಸುಬನಹಕ್ಕಿ) ಹಸುರಾದ ಮರಕತ ಮಣಿಯ ಹಾಸರೆಯ ಮೇಲೆ ಚಂದ್ರಾಪೀಡನು ಕುಳಿತುಕೊಂಡಿದ್ದನು. ವ॥ ಆ ಕಾಲ

ಬಿಸಿಲೆಲ್ಲಂ ಬಿಸನಾಳಜಾಳಕದಿನಾಗಳ್ ಕೊಡೆ ಪೀರ್ತಂದುದಾ
ಗಸಮೆಲ್ಲಂ ಸುಧೆಯಿಂದೆ ಲೇಪಿಸಿದುದುರ್ವೀಚಕ್ರಮೆಲ್ಲಂ ಪಯಃ
ಪ್ರಸರಾಪೂರದೆ ತೇಂಕಿದತ್ತು ದೆಸೆಯೆಲ್ಲಂ ಚಂದನಾಸಾರದಿಂ
ಮುಸುಕಿತ್ತೆಂಬಿನವೋದು ಬೆಳ್ವೆಳಗು ಪರ್ವಿತ್ತೆಯ್ದೆ ರೋದೋಂತಮಂ ೧೧೬

ವ॥ ಅಂತು ಪಸರಿಸುವ ಬೆಳಗಿನ ಬಳಗಮಂ ನೋಡಿ

ಪರಿಭಾವಿಸಲಾರ್ಗಂ ತಾ
ನರಿದಾಯ್ತೊರ್ವೊದಲೆ ಚಂದ್ರನುದಯಿಸಿದನೊ ಪೇಟ್
ಸುರಸಿಂಧುಗಗನಮಂ ಶೀ
ಕರನಿಕರದೆ ಸಿಂಪಿಸುತ್ತೆ ಧರೆಗಿಟಿದಪುದೋ ೧೧೭

ವ॥ ಎಂದತಿಕುತೂಹಲಂಬೆರಸು ಬೆಳಗಿನ ಬರ್ಪ ದೆಸೆಯಂ ನೋಟ್ಪಿನಮಾಗಳಿರ್ಪಿಂ ಪೊರೆದ ದುಗುಲದಿಂ ಬಾಸಣಿಸಿ ಚಂದನಾನುಲೇಪದಿಂ ತೀವಿದ ಸಿಪ್ಪಂ ಪಿಡಿದು ಕಯ್ಗೊಟ್ಟು ನಡೆವ ಪಡಿಯಱತಿಯುಂ ಮಾಲತೀಕುಸುಮಮಾಲಿಕೆಯಂ ಪಿಡಿದ ತಮಾಳಿಕೆಯುಂ ಸುಯ್ಯೆಲರಿಂ ಪಾಱಿದಪುವೆನಿಪ ದುಕೂಲಂಗಳಂ ಪಿಡಿದು ನೆಲನನುಝ್ಘಡಿಪ ಕೇಯೂರಕನುಮೊಡವರೆ ಕನ್ಯಕಾ ಪರಿವೃತೆಯುಂ ಛತ್ರಚಾಮರವಿರಾಜಿತೆಯುಮಾಗಿ ಮದಲೇಖೆ ಬರುತಿರ್ದಳಾಕೆಯ ಕೆಲದೊಳ್ ಬರ್ಪ ತರಳಿಕೆಯ ಕಯ್ಯ ಸಿತಾಂಶುಕಾಚ್ಛಾದಿತ ರತ್ನಮಯ ಪಟಲಕದೊಳ್

ದಲ್ಲಿ ೧೧೬. ಬಿಸಿಲೆಲ್ಲ ತಾವರೆಯ ದಂಟೆಂಬ ನಾಳದಿಂದ ಕುಡಿಯಲ್ಪಟ್ಟಂತೆ ಮುಚ್ಚಿ ಹೋಯಿತು. ಆಕಾಶವೆಲ್ಲ ಸುಣ್ಣದಿಂದ ಬಳಿಯಲ್ಪಟ್ಟಂತೆಯೂ, ಭೂಮಂಡಲವೆಲ್ಲ ಹಾಲಿನ ದೊಡ್ಡ ಪ್ರವಾಹದಿಂದ ತೇಲಿಸಲ್ಪಟ್ಟಂತೆಯೂ (ತುಂಬಲ್ಪಟ್ಟಂತೆಯೂ). ದಿಕ್ಕೆಲ್ಲವೂ ಶ್ರೀಗಂಧದರಸದ ಮಳೆಯಿಂದ ಮುಚ್ಚಿಹೋದಂತೆಯೂ ಕಾಣುವ ಒಂದು ಬಿಳುಪಾದ ಕಾಂತಿಯು ಭೂಮ್ಯಾಕಾಶಗಳನ್ನು ಬಹಳವಾಗಿ ಹರಡಿತು. ವ॥ ಹಾಗೆ ಹರಡುತ್ತಿರುವ ಕಾಂತಿಯ ಪುಂಜವನ್ನು ನೋಡಿ ೧೧೭. ಈಗ ಅಕಸ್ಮಾತ್ತಾಗಿ ಒಂದೇ ಸಲ ಚಂದ್ರನು ಹುಟ್ಟಿಬಿಟ್ಟನೋ. ದೇವಗಂಗಾನದಿಯು ಆಕಾಶವನ್ನು ತುಂತುರುಗಳ ಸಮೂಹದಿಂದ ಸಿಂಪಡಿಸುತ್ತಾ ಭೂಮಿಗೆ ಇಳಿದುಬರುತ್ತಿದೆಯೋ, ಇದೇನೆಂದು ಯಾರಿಗೂ ನಿರ್ಣಯಿಸಲು ಅಸಾಧ್ಯವಾಗಿದೆ ವ॥ ಎಂದು ಬಹಳ ಕುತೂಹಲದಿಂದ ಕೂಡಿ ಬೆಳಕು ಬರುವ ಕಡೆಯನ್ನು ನೋಡಲು ಆಗ ಒದ್ದೆಯಾಗಿರುವ ಪಟ್ಟೆಬಟ್ಟೆ ಯಿಂದ ಮುಚ್ಚಿ ಗಂಧಲೇಪನವನ್ನೊಳಗೊಂಡ ಕರಂಡಕವನ್ನು ಹಿಡಿದು ಕೈಹಿಡಿದು ಕೊಂಡು ಬರುವ ಬಾಗಿಲುಕಾಯುವವಳೂ, ಮಾಲತೀಪುಷ್ಪದಮಾಲಿಕೆಯನ್ನು ಹಿಡಿದಿ ರುವ ತಮಾಲಿಕೆಯೂ, ಉಸುರಿನ ಗಾಳಿಯಿಂದಲೂ ಹಾರಿಬಿಡುತ್ತದೆಯೋ ಎಂಬಂತಿರುವ ಪಟ್ಟೆವಸ್ತ್ರಗಳನ್ನು ಹಿಡಿದು ಹಸ್ತಲಾಘವವನ್ನು ಕೊಡುತ್ತಿರುವ ಕೇಯೂರಕನೂ ಜೊತೆ

ಪೊಳೆವೆಳದಿಂಗಳೊಳ್ಮೃಣಾಳಗಳಿಂ ಸುರಸಿಂಧುವ ಶೀಕರಂಗಳಿಂ
ಜಳನಿಧಿಯಲ್ಲಿ ಮಾರ್ಪೊಳೆವ ತಾರೆಗಳಿಂ ಸಮೆದಂತೆ ಶಾರದಂ
ಗಳ ಜಸವೇಟ್ಗೆ ಲಕ್ಷ್ಮಿಯ ಮುಗುಳ್ನಗೆ ಜೊನ್ನದ ಬಾಟ್ಕೆ ರತ್ನಸಂ
ಕುಳದಧಿದೈವಮೆಂದೆಸೆದುದುಜ್ಜ್ವಳ ಮೌಕ್ತಿಕಹಾರಮಂಡಲಂ ೧೧೮

ವ॥ ಅದಂ ಕಂಡು

ಎಲೆ ಚಂದ್ರಾತಪರುಚಿಯಂ
ಗೆಲೆವಂದೀ ಧವಳಿಮಕ್ಕೆ ಕಾರಣವೀ ನಿ
ರ್ಮಳತರತಾರಹಾರಮಿಂತೀ
ಗಳೆಂದು ಬಗೆದಂ ನರೇಂದ್ರನಂದನನಾಗಳ್ ೧೧೯

ವ॥ ಅಂತು ಬಗೆಯುತ್ತುಮಿರ್ದು

ಮದಲೇಖೆಯ ಬರವಂ ಕಂ
ಡಿದಿರೇಟ್ಟುವುದುಮಾಕೆ ವಿನಯದಿಂ ತನ್ನ ಪದಾ
ಬ್ಜದ ಮೇಲೆ ಮುಟ್ಟಿಲೊದವಿದ
ಪದಪಿಂ ತೆಗೆದೆತ್ತಿ ನೃಪಸುತಂ ಮನ್ನಿಸಿದಂ ೧೨೦

ವ॥ ಅಂತು ಮದಲೇಖೆಯಂ ಪರ್ಯಂಕದೊಳ್ ಕುಳ್ಳಿರವೇಟ್ಟು ನೃಪರೂಪಚಂದ್ರಂ ಸಿಂಹಾಸನದೊಳ್ ಕುಳ್ಳಿರ್ಪುದುಮಾ ಕಾಂತೆ ತಾನೆಟ್ಟು ಮಲಯಜಾನುಲಿಪ್ತದೇಹನುಮಂ

ಯಲ್ಲಿ ಬರಲಾಗಿ ಕನ್ನಿಕೆಯರಿಂದ ಕೂಡಿಕೊಂಡವಳಾಗಿ ಛತ್ರಚಾಮರ ವಿರಾಜಮಾನಳಾಗಿ ಮದಲೇಖೆಯು ಬರುತ್ತಿದ್ದಳು. ಆಕೆಯ ಪಕ್ಕದಲ್ಲಿ ಬರುತ್ತಿರುವ ತರಳಿಕೆಯ ಕೈಯಲ್ಲಿರುವ ಬಿಳಿಯಬಟ್ಟೆಯಿಂದ ಮುಚ್ಚಿರುವ ರತ್ನನಿರ್ಮಿತವಾದ ಪೆಟ್ಟಿಗೆಯಲ್ಲಿ ೧೧೮. ಒಂದು ಪ್ರಕಾಶಮಾನವಾದ ಮುತ್ತಿನಸರವು ಶೋಭಿಸುತ್ತಿತ್ತು. ಅದು ಪ್ರಕಾಶಿಸುವ ಬೆಳದಿಂಗಳ ಉತ್ತಮವಾದ ಚೂರುಗಳಿಂದಲೂ, ದೇವಗಂಗಾನದಿಯ ನೀರುಹನಿಗಳಿಂದಲೂ, ಸಮುದ್ರದಲ್ಲಿ ಪ್ರತಿಬಿಂಬಿಸಿರುವ ನಕ್ಷತ್ರಗಳಿಂದಲೂ ಮಾಡಿಸಿರುವಂತೆ ಕಾಣುತ್ತಿತ್ತು. ಅದು ಶರತ್ಕಾಲದ ಮೇಘಗಳ ಕೀರ್ತಿಸಮೃದ್ಧಿಯಂತೆಯೂ, ಲಕ್ಷ್ಮೀದೇವಿಯ ಮಂದಹಾಸದಂತೆಯೂ, ಬೆಳದಿಂಗಳ ಜೀವನವೆಂಬಂತೆಯೂ, ರತ್ನಸಮೂಹಕ್ಕೆ ಅಧಿದೇವತೆಯಂತೆಯೂ ವಿರಾಜಿಸುತ್ತಿತ್ತು. ವ॥ ಅದನ್ನು ನೋಡಿ, ೧೧೯. 'ಎಲಾ, ಈಗ ಹೀಗೆ ಬೆಳದಿಂಗಳ ಕಾಂತಿಯನ್ನು ಗೆದ್ದಿರುವ ಈ ಬಿಳುಪಿಗೆ ಕಾರಣವು ಈ ನಿರ್ಮಲವಾದ ಹಾರವೇ ಸರಿ' ಎಂದು ಆ ರಾಜಕುಮಾರನು ಆಲೋಚಿಸಿದನು. ವ॥ ಹಾಗೆ ಆಲೋಚಿಸುತ್ತಿದ್ದು ೧೨೦. ಮದಲೇಖೆಯ ಆಗಮನವನ್ನು ಕಂಡು ಇದಿರೇಳಲು ಅವಳು ವಿನಯದಿಂದ ಇವನ ಪಾದಕಮಲಗಳಿಗೆ ಎರಗಿದಳು. ರಾಜಕುಮಾರನು ಅವಳನ್ನು ಸ್ನೇಹದಿಂದ ಮೇಲಕ್ಕೇಳಿಸಿ ಗೌರವಿಸಿದನು. ವ॥ ಹಾಗೆ ಮದಲೇಖೆಯನ್ನು ಮಂಚದ ಮೇಲೆ ಕುಳಿತುಕೊಳ್ಳುವಂತೆ ಹೇಳಿ ಚಂದ್ರಾಪೀಡನು ಸಿಂಹಾಸನದಲ್ಲಿ ಕುಳಿತು

ಮಾಲತೀಕುಸುಮದಾಮಶೇಖರನುಮಂ ಮಾಡಿ ದುಕೂಲಂಗಳನುಡೆ ಕೊಟ್ಟು ಹಾರಮಂ ಪಿಡಿದುಕೊಂಡಿಂತೆಂದಳ್

ಮನಮೊಲ್ದೀ ಮಧುರೋಕ್ತಿಗಾರೆಳಸರೀ ಮೆಲ್ಪಿಂಗದಾರ್ ಮೆಚ್ಚರೀ
ವಿನಯಕ್ಕಾರೊಳಗಾಗರೀ ಋಜುಗುಣಕ್ಕಾರ್ ಕೂರರೀ ನಿನ್ನ ಪೆ
ಪಿನ ಬಿಣ್ಪಂಗಮದಾರ್ ಮರುಳ್ಗೆಳಸರೀ ಸನ್ಮೂರ್ತಿಗಾರ್ ನೆಟ್ಟನಾ
ಳ್ತನದೊಳ್ ನಿಲ್ಲದರೀ ಮನೋಹರತೆಗಾರ್ ಸೋಲರ್ ಮಹೀವಲ್ಲಭಾ ೧೨೧

ಭುವನತ್ರಯಾಂತರಾಳ
ಪ್ರವಿದಿತ ನಿಜಮಹಿಮನೆನಿಪ ನಿನಗೇನಂ ಮಾ
ಡುವೆನಂತವೆಲ್ಲಮಾವಗ
ಮವಿನಯಮೆಂಬಂತೆ ತೋಱುತಿರ್ದಪುವೀಗಳ್ ೧೨೨

ಮೊದಲೊಳ್ ಸಂಭಾಷಣಂಗೆಯ್ವುದೆ ವಲವಿಟ್ಟೀಕೆಯ್ವಂದಮೆಂದಾದರಂಗೆ
ಯ್ವುದಹಂಕಾರಂ ಸ್ತವಂಗೆಯ್ವುದದೆಮಗೆ ದಲ್ ಗೌರವಂ ಬಿನ್ನಪಂಗೆ
ಯ್ವುದೆ ದಾರ್ಷ್ಟ್ಯಂ ಸೇವೆಯುಂ ಚಾಪಲಮುಪಕರಣಂ ಕೃತ್ರಿಮಂ ಪ್ರೀತಿಯಂ ಮಾ
ಟ್ಪುದನಾತ್ಮಜ್ಞತ್ವಮಾಮೀವುದೆ ವಿಭವದ ಗರ್ವಂಬೊಲಾದಪ್ಪುದೀಗಳ್ ೧೨೩

ಕೊಳ್ಳಲಾಗಿ ಆ ಮದಲೇಖೆಯು ಎದ್ದು ಚಂದ್ರಾಪೀಡನ ಶರೀರಕ್ಕೆ ಶ್ರೀಗಂಧದ ಲೇಪನವನ್ನು ಮಾಡಿ, ಮಾಲತೀಕುಸುಮದ ಸರವನ್ನು ತಲೆಗೆ ಮುಡಿಸಿ, ರೇಷ್ಮೆವಸ್ತ್ರಗಳನ್ನು ಉಟ್ಟುಕೊಳ್ಳಲು ಕೊಟ್ಟು ಹಾರವನ್ನು ಹಿಡಿದುಕೊಂಡು ಹೀಗೆ ಹೇಳಿದಳು· ೧೨೧. "ಎಲೈ ಮಹಾರಾಜನೆ, ಮನಸ್ಸಿಗೆ ಪ್ರೀತಿಯನ್ನುಂಟುಮಾಡುವ ಈ ನಿನ್ನ ಮೃದುಭಾಷಣಕ್ಕೆ ಯಾರುತಾನೆ ಇಷ್ಟಪಡುವುದಿಲ್ಲ ? ಈ ಮೃದುಸ್ವಭಾವಕ್ಕೆ ಯಾರು ತಾನೆ ಮೆಚ್ಚುವುದಿಲ್ಲ ? ಈ ನಿನ್ನ ನಮ್ರತೆಗೆ ಯಾರು ತಾನೆ ವಶವಾಗುವುದಿಲ್ಲ ? ಈ ಸರಳಸ್ವಭಾವಕ್ಕೆ ಯಾರು ತಾನೆ ಪ್ರೀತಿಸುವುದಿಲ್ಲ ? ನಿನ್ನ ಗೌರವಾತಿಶಯಕ್ಕೆ ಯಾರು ತಾನೆ ಆಕರ್ಷಿತರಾಗುವುದಿಲ್ಲ ? ನಿನ್ನ ಶ್ರೇಷ್ಠವಾದ ಈ ಆಕಾರಕ್ಕೆ ಯಾರು ತಾನೆ ದಾಸರಾಗುವುದಿಲ್ಲ ? ಈ ನಿನ್ನ ಸೌಂದರ್ಯಕ್ಕೆ ಯಾರು ತಾನೆ ಸೋಲುವುದಿಲ್ಲ ? ೧೨೨. ಮೂರು ಲೋಕಗಳಲ್ಲೂ ಸುಪ್ರಸಿದ್ಧವಾದ ಪ್ರಭಾವವುಳ್ಳ ನಿನಗೆ ಏನನ್ನು ಮಾಡಿದರೂ ಅವೆಲ್ಲವೂ ಶುದ್ಧ ಅವಿನಯವೆಂಬಂತೆ ನಮಗೀಗ ತೋರುತ್ತದೆ. ೧೨೩. ಈಗ ಮೊದಲು ತಮ್ಮೊಂದಿಗೆ ಮಾತನಾಡುವುದೇ (ನಮಗೆ ಮಾತನಾಡಲು ಯೋಗ್ಯತೆಯಿಲ್ಲದಿರುವುದರಿಂದ) ತಿರಸ್ಕಾರಮಾಡುವ ರೀತಿಯಾಗುತ್ತದೆ. ತಮಗೆ ಆದರ ಮಾಡಿದರೆ ಅದು (ಸರಿಸಮಾನತೆಯಿಲ್ಲದುದರಿಂದ)

ಹೃದಯಮನೊಪ್ಪುಗೊಂಡ ನಿಮಗಿಂ ಮಗುಟ್ದುಂ ಕುಡುವೊಂದು ವಸ್ತುವಾ
ವುದೊ ಗಡ ಜೀವಿತೇಶ್ವರರೆನಿಪ್ಪವರ್ಗಂ ಪ್ರತಿಪಾದ್ಯಮಪ್ಪುದಾ
ವುದೊ ಬರವಿಂದೆ ಮಾಡಿದುಪಕಾರಮನಿನ್ನದನೇತಱಿಂದೆ ನೀ
ಗಿದಪೆನೊಯೆಂದು ಚಿತ್ರರಥನಂದನೆ ತೋಱಿಸಿದಪ್ಪಳಟ್ಕಱಿಂ ೧೨೪

ಕನ್ನ ನಿಜಜೀವಿತಮುಮಂ
ತನ್ನುಮನಿರದಿತ್ತು ತೊಳ್ತುತನಮಂ ತಾಂ ಕೊಂ
ಡುಂ ನೆಱೆಯಳ್ ಸುಜನರ್ಗಿ
ನ್ನಿನ್ನನ್ನರ್ಗೇನ ಮಾಡಿಯುಂ ತಣಿವುಂಟೇ ೧೨೫

ವ॥ ಅದಱಿನಿಂಗಡಲ ಕಡೆಪದೊಳೊಗೆದ ನೂತ್ನರತ್ನಂಗಳೊಳೀಹಾರಮೇ ಶೇಷ
ಮಪ್ಪುದಱಿಂ ಶೇಷಮೆಂಬ ಪೆಸರೆಸೆಯೆ

ನಮ್ಮ ಅಹಂಕಾರವನ್ನು ತೋರ್ಪಡಿಸಿಕೊಂಡಂತಾಗುತ್ತದೆ. ತಮ್ಮನ್ನು ಸ್ತೋತ್ರ ಮಾಡುವುದೆಂದರೆ (ಸ್ತೋತ್ರಮಾಡಲು ಶಕ್ತಿ ಇಲ್ಲದುದರಿಂದ) ದಿಟಕ್ಕೂ ಅದು ಗರ್ವವೇ ಆಗುತ್ತದೆ. ತಮಗೆ ವಿಜ್ಞಾಪನೆ ಮಾಡಿಕೊಳ್ಳುವುದೆಂದರೆ (ಅಷ್ಟು ಧೈರ್ಯವೂ ಇಲ್ಲದುದರಿಂದ) ದಿಟ್ಟತನವಾಗಿಬಿಡುತ್ತದೆ. ಸೇವೆಯು (ಅದಕ್ಕೂ ಯೋಗ್ಯತೆಯಿಲ್ಲ ದಿರುವುದರಿಂದ) ಚಪಲಬುದ್ಧಿಯನ್ನು ತೋರಿಸುತ್ತದೆ. ಹಾಗೆಯೆ ಉಪಕಾರವೆಂಬುದು (ತಮಗೆ ಯಾವ ಉಪಕಾರದ ಅವಶ್ಯಕತೆಯಿಲ್ಲದುದರಿಂದ) ಮೋಸವೆನಿಸುತ್ತದೆ. ತಮ್ಮೊಂದಿಗೆ ಸ್ನೇಹ ಮಾಡುವುದು (ಸಮಾನತೆಯಿಲ್ಲದುದರಿಂದ) ತನ್ನ ಯೋಗ್ಯತೆ ಯನ್ನು ತಾನು ತಿಳಿದುಕೊಳ್ಳದಿರುವಿಕೆಯಾಗುತ್ತದೆ. ತಮಗೆ ಏನನ್ನಾದರೂ ಕೊಡುವು ದೆಂದರೆ ನಮ್ಮ ಐಶ್ವರ್ಯದ ಅಹಂಕಾರವನ್ನು ತೋರ್ಪಡಿಸಿಕೊಂಡಂತಾಗುತ್ತದೆ. ೧೨೪. ನನ್ನ ಹೃದಯವನ್ನೇ ಕೊಂಡೊಯ್ದಿರುವ ನಿಮಗೆ ಇನ್ನು ನಾನು ಮತ್ತೆ ಕೊಡುವ ವಸ್ತು ಯಾವುದಿದೆಯೊ ? ಜೀವಿತೇಶ್ವರನೆನಿಸಿದವರಿಗೂ ಒಪ್ಪಿಸುವುದು ಯಾವುದಿದೆ? ನಿಮ್ಮ ಆಗಮನದಿಂದ ಮಾಡಿದ ಉಪಕಾರವನ್ನು ನಾನು ಯಾವ ಪ್ರತ್ಯು ಪಕಾರದಿಂದ ತೀರಿಸುತ್ತೇನೋ ಎಂದು ಕಾದಂಬರೀದೇವಿಯು ತಮ್ಮಲ್ಲಿ ಪ್ರೀತಿಯನ್ನು ತೋರಿಸಿದ್ದಾಳೆ. ೧೨೫. ಆ ಕನ್ಯೆಯು ತನ್ನ ಪ್ರಾಣವನ್ನೂ ತನ್ನನ್ನೂ ನಿಮಗೆ ಒಪ್ಪಿಸಿ ನಿಮ್ಮ ಸೇವಾವೃತ್ತಿಯನ್ನು ಅಂಗೀಕರಿಸಿಯೂ ತೃಪ್ತಳಾಗಿಲ್ಲ. ನಿಮ್ಮಂತಹ ಸತ್ಪುರುಷರಿಗೆ ಏನು ಮಾಡಿದರೆ ತಾನೆ ತೃಪ್ತಿಯುಂಟಾಗುತ್ತದೆ ? ವ॥ ಆದ್ದರಿಂದ ಕ್ಷೀರ ಸಮುದ್ರವನ್ನು ಕಡೆದಾಗ ಎಲ್ಲ ಹೊಸಹೊಸ ಉತ್ಕೃಷ್ಟವಸ್ತುಗಳೂ ಹೊರಕ್ಕೆ ಬಂದು ಬಿಟ್ಟವು. ಇದೊಂದು ಹಾರ ಮಾತ್ರ ಅಲ್ಲೇ ಉಳಿದಿತ್ತು. ಆದ್ದರಿಂದಲೇ ಇದಕ್ಕೆ ಶೇಷ

ವರುಣಂಗಿತ್ತಂ ರತ್ನಾ
ಕರನಂತಾ ವರುಣನಟ್ಕಱಿಂದಿತ್ತಂ ಚಿ
ತ್ರರಥಂಗೆ ಕೂರ್ಮೆಯಿಂ ಚಿ
ತ್ರರಥಂ ನಿಜತನುಜೆಗಿತ್ತನಿದನವನಿಪತೀ ೧೨೬

ವ॥ ಇಂತಿದನಾ ಕಾದಂಬರೀದೇವಿ

ಹಾರಂಗಳೊಳೆಸೆವೀ ಮಣಿ
ಹಾರಂ ಮದನಾವತಾರಮೆನಿಸಿದ ನಿನ್ನಾ
ಕಾರಕೆಣೆಯಕ್ಕುಮೆಂದವ
ಧಾರಿಸಿ ತಾಂ ನಿಮಗೆ ಕುಡುವೆನೆಂಬೀ ಬಗೆಯಿಂ ೧೨೭

ಪೊಳೆವ ಸುಧಾಸೂತಿ ನಭ
ಸ್ಥಳದೊಳ್ ಕಣ್ಗೊಳಿಪ ತೆಱದೆ ಯುವರಾಜನುರ
ಸ್ಥಳದೊಳ್ ಮುಕ್ತಾವಳಿ ಕ
ಣ್ಗೊಳಿಸುಗುಮೆಂದಟ್ಕಱಿಂದಮಟ್ಟಿದಳೀಗಳ್ ೧೨೮

ಆಭರಣದ ಪೊಱೆಯಿಂ ತಳೆ
ವಾಭರಣಪ್ರಿಯರ ತೆಱದೆ ಸದ್ಗುಣಗಣರ
ತ್ನಾಭರಣರ್ ನಿಮ್ಮೊಂದಿಗ
ರಾಭರಣದ ಪೊಱೆಯನೇಕದಂ ಪೊತ್ತಿರ್ಪರ್ ೧೨೯

ವೆಂಬ ಹೆಸರು ಒಪ್ಪುತ್ತದೆ. ೧೨೬. ಎಲೈ ಅರಸನೆ, ಈ ಶೇಷವೆಂಬ ಮುಕ್ತಾಹಾರವನ್ನು ಸಮುದ್ರರಾಜನು ವರುಣನಿಗೆ ಕೊಟ್ಟನು. ಹಾಗೆಯೆ ವರುಣನು ಪ್ರೀತಿಯಿಂದ ಚಿತ್ರ ರಥನಿಗೆ ಕೊಟ್ಟನು. ಚಿತ್ರರಥನು ಪ್ರೀತಿಯಿಂದ ತನ್ನ ಮಗಳಾದ ಕಾದಂಬರಿಗೆ ಕೊಟ್ಟನು. ವ॥ ಹೀಗೆ ತನಗೆ ಬಂದ ಹಾರವನ್ನು ಕಾದಂಬರೀದೇವಿಯು ೧೨೭. ಹಾರ ಗಳಲ್ಲೆಲ್ಲಾ ಶ್ರೇಷ್ಠವಾದ ಈ ಹಾರವು ಮನ್ಮಥನ ಅವತಾರವೆನಿಸಿರುವ ನಿನ್ನ ಶರೀರಕ್ಕೆ ಅನುರೂಪವಾಗುವುದೆಂದು ನಿಶ್ಚಯಿಸಿ, ತಾನು ನಿಮಗೆ ಇದನ್ನು ಕೊಡಬೇಕೆಂಬ ಇಚ್ಛೆ ಯಿಂದ ೧೨೮. ಪ್ರಕಾಶಿಸುವ ಚಂದ್ರನು ಆಕಾಶಪ್ರದೇಶದಲ್ಲಿ ಕಂಗೊಳಿಸುವ ರೀತಿ ಯಿಂದ ಯುವರಾಜನ ವಕ್ಷಸ್ಥಳದಲ್ಲಿ ಈ ಮುಕ್ತಾವಳಿಯು ಕಂಗೊಳಿಸಲೆಂದು ಪ್ರೀತಿ ಯಿಂದ ಕೊಟ್ಟು ಕಳುಹಿಸಿದ್ದಾಳೆ. ೧೨೯. ಒಡವೆಗಳ ಭಾರವನ್ನು ಹೊರುವ ಆಭರಣ ಪ್ರಿಯರಂತೆ ಸದ್ಗುಣಗಳ ಸಮೂಹವೆಂಬ ರತ್ನಗಳೇ ಆಭರಣವಾಗಿರುವ ನಿಮ್ಮಂತಹ ವರು ಒಡವೆಗಳ ಆ ಭಾರವನ್ನು ಏಕೆ ಹೊರುತ್ತಾರೆ ? ಟಿ॥ ಗುಣವಂತರಿಗೆ ಗುಣಗಳೇ

ವ॥ ಆದೊಡಂ ನಿಮಗಿದು ಪ್ರೀತಿಯೆನೆ ಭಾವಿಸಲ್ವೇಟ್ಪುದಪ್ಪುದಲ್ಲದೆಯುಂ

ಸಿರಿಯೊಡನೆ ಪುಟ್ಟಿತಂದಾ
ಹರಿ ಕೌಸ್ತುಭವೆಂಬ ಕಲ್ಲುಮಂಟಿಯುಮನತ್ಯಾ
ದರದಿಂದೆಂದುಂ ತಾನಾ
ಗುರದೊಳ್ ತಳೆದಿರ್ಪನೇಕೆ ನೀವಱಿಯದುದೇ ೧೩೦

ವ॥ ಅದಱಿಂ ನಾರಾಯಣಂಗಂ ನಿಮಗಂ ಲಕ್ಷ್ಮಿಗಂ ಕಾದಂಬರಿಗಂ ಕೌಸ್ತುಭಕ್ಕಂ ಶೇಷಾಭಿಧಾನಹಾರಕ್ಕಂ ವಿಶೇಷಮೇನುಮಿಲ್ಲಮಾಗಿ ಕೆಯ್ಕೊಂಡು ಕಾದಂಬರೀಪ್ರಣಯಕ್ಕೆ ನಿರ್ವಿರ್ಕೆಯಂ ಮಾಟ್ಪುದೆಂತಾನುಂ ಕೆಯ್ಕೊಳ್ಳದಿರಲಾಕೆ ಭಗ್ನಪ್ರಣಯೆಯಾದಪ್ಪಳಪ್ಪೊಡೆ ತನ್ನಂ ಬಿಡುವಳೆಂದು

ತರಳಿಕೆಯ ಕೆಯ್ಕೊಳಟ್ಟಿದ
ಳರಸ ಮಹಾಶ್ವೇತೆ ತಾನೆ ಬೇಱೊಂದನೆನು
ತ್ತಿರಸಲ್ಲದೆಂದು ಮುತ್ತಿನ
ಸರಮನದಂ ಕೊರಲೊಳಾಕೆ ಕಟ್ಟಿದಳಾಗಳ್ ೧೩೧

ವ॥ ಅಂತು ಕಟ್ಟಿ ಬೆಱಗಾಗಿ ವಿನಯರತ್ನಾಕರನಿಂತೆಂದಂ

ಆಭರಣ ; ಬೇರೆ ಆಭರಣವೇ ಬೇಕಿಲ್ಲ ಎಂದು ಅಭಿಪ್ರಾಯ. ವ॥ ಆದರೂ ನಿಮಗಿದು ಇಷ್ಟವೆಂದೇ ತಿಳಿದುಕೊಳ್ಳಬೇಕು. ಅದಲ್ಲದೆ ೧೩೦. ಶ್ರೀಮನ್ನಾರಾಯಣನು ಕೌಸ್ತುಭ ವೆಂಬ ಕಲ್ಲಿನ ಚೂರನ್ನು ಅತ್ಯಾದರದಿಂದ ಯಾವಾಗಲೂ ತನ್ನ ಎದೆಯಮೇಲೆ ಧರಿಸಿರು ತ್ತಾನೆ. ಇದೇಕೆ ಎಂದರೆ ? ಅದನ್ನು ಮಡದಿಯಾದ ಲಕ್ಷ್ಮೀದೇವಿಯು ತಾನು ಕ್ಷೀರಸಮುದ್ರದಿಂದ ಹುಟ್ಟಿ ಹೊರಕ್ಕೆ ಬರುವಾಗ ತನ್ನ ಜೊತೆಯಲ್ಲಿ ಹುಟ್ಟಿದ ಅದನ್ನೂ ತಂದಿದ್ದಾಳೆ. ಇದು ನಿಮಗೆ ತಿಳಿಯದೇ ಇದೆಯೆ ? ವ॥ ಆದ್ದರಿಂದ ನಾರಾಯಣನಿಗೂ ನಿಮಗೂ, ಲಕ್ಷ್ಮಿಗೂ ಕಾದಂಬರಿಗೂ, ಕೌಸ್ತುಭರತ್ನಕ್ಕೂ ಶೇಷಹಾರಕ್ಕೂ ಏನೂ ಭೇದ ವಿಲ್ಲ ! ಆದ್ದರಿಂದ ಇದನ್ನು ಸ್ವೀಕರಿಸಿ ಕಾದಂಬರಿಯ ಪ್ರೀತಿಯನ್ನು ವಿಸ್ತರಿಸಬೇಕು. ಒಂದುವೇಳೆ ನೀವು ತೆಗೆದುಕೊಳ್ಳದೆ ಅವಳು ಪ್ರಣಯಭಂಗವನ್ನು ಹೊಂದಿದರೆ ತನ್ನ ಪ್ರಾಣವನ್ನು ಬಿಡುತ್ತಾಳೆ ಎಂದು ೧೩೧. ಮಹಾಶ್ವೇತೆಯು ತಾನೆ ತರಳಿಕೆಯ ಕೈಯಲ್ಲಿ ಈ ಹಾರವನ್ನು ಕೊಟ್ಟುಕಳುಹಿಸಿದ್ದಾಳೆ. ಎಲೈ ರಾಜನೆ, ಇದು ಬೇರೆ ಯಾವುದೋ ಎಂದುಕೊಂಡು ಇರುವುದು ಸರಿಯಲ್ಲ" ಎಂದು ಆ ಮುತ್ತಿನಸರವನ್ನು ಆಗ ಅವಳು ಚಂದ್ರಾಪೀಡನ ಕೊರಳಿಗೆ ಕಟ್ಟಿದಳು. ವ॥ ಹೀಗೆ ಕಟ್ಟಲಾಗಿ ಆಶ್ಚರ್ಯ ಪಟ್ಟು ವಿನಯಗುಣಕ್ಕೆ ಸಮುದ್ರದಂತಿರುವ ಚಂದ್ರಾಪೀಡನು ಹೀಗೆ ಹೇಳಿದನು,

ಮದಲೇಖೆ ಬಲ್ಲೆ ನೀಂ ಕೆಯ್ಕೊಳಿಸಲೆಮಗೆ ಮಾತಾಡಸಲ್ಲೆಂಬವೋಲ್ ತೋ
ಱದೆ ನೀಂ ನಿನ್ನೊಂದು ವಾಕ್ಕೌಶಲಗುಣಮನಿದಂ ನಿಮ್ಮ ಸೌಜನ್ಯಜಾಲಂ
ಪುದಿದಿರ್ದತ್ತೆನ್ನ ನಾನೆನ್ನನಗೊಡೆಯನೆ ಚಿತ್ತಕ್ಕೆವಂದಂತುಟೇ ಮಾ
ಱಿಪ್ಪುದು ದಲ್ ಕಾದಂಬರೀದೇವಿಯ ಗುಣಪಣದಿಂ ಮಾಱುವೋದೆನ್ನನೀಗಳ್
೧೩೨

ವ॥ ಎಂದಿಂತು ಮೊದಲಾಗಿ ಕಾದಂಬರೀಸಂಬಂಧಂಗಳಪ್ಪ ನುಡಿಯಂ ನುಡಿದು ಪಿರಿದುಬೇಗಮಿರ್ದು ಮದಲೇಖೆಯುಂ ಕಳುಪಿ

ಮದಲೇಖೆಯುಮಿತ್ತಲ್ ಪೋ
ಪುದುಮೊಯ್ಯನೆ ಕೇಳಿಶೈಲಮಂ ಚಂದನಹಾ
ರ ದುಕೂಲ ಧವಳನೇಱಿದ
ನುದಯೋದ್ಗತ ಚಂದ್ರನಂತೆ ನೃಪಕುಲಚಂದ್ರಂ ೧೩೩

ವ॥ ಆಗಳಾ ನೃಪರೂಪಚಂದ್ರನಂ ಗಂಧರ್ವರಾಜನಂದನೆ ನೋಡಲೆಂದುತ್ಸಾರಿತ ಚ್ಛತ್ರಚಾಮರಚಿಹ್ನೆಯುಂ ನಿಷಿದ್ಧಾಶೇಷಪರಿಜನೆಯುಂ ತಮಾಲಿಕಾದ್ವಿತೀಯೆಯುಮಾಗಿ ಸೌಧ ಶಿಖರಮನೇಱಿ

ಕಾಂತೆ ನಿಜಕರಸರೋರುಹ
ಮಂ ತಂದು ಕಟೀತಟಕ್ಕೆ ಮುಯ್ಪಿಂಗೆ ಸೆಱಂ
ಗಂ ತೆಗೆದು ಚಿತ್ರಿಸಿದ ಪೆ
ಣ್ಣಂತಿರೆ ಕಣ್ಣಾಲಿ ಬೀಱೆ ನೋಡುತ್ತಿರ್ದಳ್ ೧೩೪

೧೩೨. "ಮದಲೇಖೆ, ನಾನು ಇದನ್ನು ಸ್ವೀಕರಿಸುವಂತೆ ಮಾಡಲು ಚೆನ್ನಾಗಿ ತಿಳಿದುಕೊಂಡಿದ್ದೀಯೆ. ನಾನು ಮಾತನಾಡುವುದೇ ಸರಿಯಲ್ಲ ಎನ್ನುವಂತೆ ನಿನ್ನ ವಾಕ್ಚಾತುರ್ಯಗುಣವನ್ನು ತೋರಿಸಿಬಿಟ್ಟಿರುವೆ. ನಿಮ್ಮ ಒಳ್ಳೆಯತನವೆಂಬ ಬಲೆಯು ನನ್ನನ್ನು ಆವರಿಸಿಕೊಂಡಿದೆ. ಇನ್ನು ನನ್ನ ವಿಷಯದಲ್ಲಿ ನಾನೇ ಸ್ವತಂತ್ರನಲ್ಲ. ಕಾದಂಬರೀದೇವಿಯ ಗುಣವೆಂಬ ಹಣದಿಂದ ಮಾರಿಕೊಂಡಿರುವ ನನ್ನನ್ನು ನಿಮ್ಮ ಮನಸ್ಸಿಗೆ ಬಂದ ರೀತಿಯಲ್ಲಿ ಅಪ್ಪಣೆಮಾಡಬಹುದು." ವ॥ ಇವೇ ಮೊದಲಾದ ಕಾದಂಬರೀದೇವಿಗೆ ಸಂಬಂಧಪಟ್ಟ ಮಾತನ್ನು ಹೇಳಿ, ಸ್ವಲ್ಪಕಾಲವಿದ್ದು ಮದಲೇಖೆಯನ್ನು ಕಳುಹಿಸಿದನು. ೧೩೩. ಮದಲೇಖೆಯು ಹೊರಟುಹೋಗಲಾಗಿ ಈ ಕಡೆ ರಾಜವಂಶಕ್ಕೆ ಚಂದ್ರನಂತಿರುವ ಚಂದ್ರಾಪೀಡನು ಗಂಧ, ಹಾರ, ಪಟ್ಟೆವಸ್ತ್ರಗಳ ಧಾರಣೆಯಿಂದ ಶುಭ್ರವಾದ ಶರೀರವುಳ್ಳವನಾಗಿ ಉದಯಕಾಲದಲ್ಲಿ ಏಳುತ್ತಿರುವ ಚಂದ್ರನಂತೆ ಕ್ರೀಡಾಪರ್ವತವನ್ನು ಮೆಲ್ಲಮೆಲ್ಲನೆ ಹತ್ತಿದನು. ವ॥ ಆಗ ಕಾದಂಬರಿಯು ಚಂದ್ರಾಪೀಡನನ್ನು ನೋಡಬೇಕೆಂದು ಛತ್ರಿ, ಚಾಮರ ಮೊದಲಾದ ರಾಜಚಿಹ್ನೆಗಳನ್ನು ಬಿಟ್ಟು, ಪರಿಜನರೆಲ್ಲರನ್ನೂ ಹಿಂಬಾಲಿಸದಂತೆ ನಿವಾರಿಸಿ ತಮಾಲಿಕೆಯೊಬ್ಬಳೊಂದಿಗೆ ಮಹಲಿನ ತುದಿಯನ್ನು ಹತ್ತಿ ೧೩೪. ಆ ಸುಂದರಿಯು ತನ್ನ ಕರಕಮಲವನ್ನು ಸೊಂಟದಮೇಲಿಟ್ಟು, ಭುಜದ ಮೇಲೆ ಸೆರಗನ್ನು

ನಳಿನದಳನಯನೆ ತನಗಾ
ಗುಳಿವರೆ ಕರತಳದೆ ವದನಮಂ ಮುಚ್ಚುತವ
ಗ್ಗಳಿಸಿ ಪೊಱಮಡುವ ಗೋತ್ರ
ಸ್ಖಲನೆಯ ಭಯದಿಂದೆ ಮುಚ್ಚಿದಂತೆವೊಲಿರ್ದಳ್ ೧೩೫

ನಱುಸುಯ್ಯೆಲರಿಂಗೆಱಗುವ
ಮಱಿದುಂಬಿಗಳಂ ಸೆಱಂಗಿನಿಂ ಸೋವುತುಮಾ
ತೆಱದೊಳೆ ಯುವರಾಜನನ
ಟ್ಕಱಿಂದಡಿಗಡಿಗೆ ಕಾಂತೆ ಕರೆವಂತಿರ್ದಳ್ ೧೩೬

ಎಲರಲೆಪದಿಂದೆ ಮೇಲುಂದು
ತೊಲಗಲ್ ಸಂಭ್ರಮಿಸಿ ಭುಜಲತಾಯುಗದಿಂ ಪೆ
ರ್ವೊಲೆಯಂ ಮುಚ್ಚುತಮಾ ಕೋ
ಮಲೆ ಸನ್ನೆಯಿನಪ್ಪಿದಪ್ಪಳೆನೆ ಸೊಗಯಿಸುಗುಂ ೧೩೭

ಸೊಗಯಿಪ ಸೋರ್ಮುಡಿಯಿಂದ
ಲ್ಲುಗುವಲರಂ ತೀವಿ ಕೆಯ್ಯೊಳಾಘ್ರಾಣಿಸುತಂ
ಮೃಗನಯನೆ ಕಾಣ್ಕೆಯೊಳೆ ಕೆ
ಯ್ಮುಗಿದಪ್ಪಳ್ ಭೂಭುಜಂಗೆನಲ್ ಕರಮೆಸೆದಳ್ ೧೩೮

ಎಳೆದು ಚಿತ್ರಿಸಿದ ಹೆಣ್ಣಿನಂತೆ ಕಣ್ಣು ಸೋಲುವವರೆಗೂ ನೋಡುತ್ತಿದ್ದಳು. ೧೩೪. ಕಮಲದಂತೆ ಕಣ್ಣುಳ್ಳ ಆಕೆಯು ತನಗೆ ಆಕಳಿಕೆಯುಂಟಾಗಲು ಕೈಯಿಂದ ಬಾಯನ್ನು ಮುಚ್ಚಿಕೊಳ್ಳುತ್ತಿದ್ದಳು. ಇದರಿಂದ ಬಾಯಿತಪ್ಪಿ ಚಂದ್ರಾಪೀಡನ ಹೆಸರೆ ಬಹಳ ಮಟ್ಟಿಗೆ ಹೊರಬರುತ್ತದೆಯೆಂಬ ಹೆದರಿಕೆಯಿಂದ ಬಾಯಿಮುಚ್ಚಿಕೊಂಡಿರುವಂತೆ ಕಾಣು ತ್ತಿದ್ದಳು. ಟಿ॥ ಯಾರ ಹೆಸರನ್ನಾದರೂ ಹೇಳಬೇಕಾದಾಗ ತಾನು ಮನಸ್ಸಿನಲ್ಲಿ ಸದಾ ಚಿಂತಿಸುತ್ತಿರುವವರ ಹೆಸರನ್ನು ತಟ್ಟನೆ ಹೇಳಿಬಿಡುವುದಕ್ಕೆ ಗೋತ್ರಸ್ಖಲನವೆಂದು ಹೆಸರು. ೧೩೬. ಆ ಸುಂದರಿಯು ಸುವಾಸನೆಯಿಂದ ಕೂಡಿರುವ ತನ್ನ ಉಸಿರಿಗೆ ಮುತ್ತುತ್ತಿರುವ ಮರಿದುಂಬಿಗಳನ್ನು ಸೀರೆಯ ಸೆರಗಿನಿಂದ ಓಡಿಸುತ್ತ ಆ ಭಂಗಿ ಯಿಂದಲೇ ಯುವರಾಜನನ್ನು ಪ್ರೀತಿಯಿಂದ ಬಾರಿಬಾರಿಗೂ ಕರೆಯುತ್ತಿರುವಂತೆ ಕಾಣು ತ್ತಿದ್ದಳು. ೧೩೭. ಆ ಕೋಮಲೆಯು ಗಾಳಿ ಬೀಸಿ ತನ್ನ ಮೇಲುಹೊದಿಕೆಯು ಜಾರಿ ಹೋಗಲು ಆತುರವಾಗಿ ತನ್ನ ಬಳ್ಳಿದೋಳುಗಳಿಂದ ದಪ್ಪ ಮೊಲೆಗಳನ್ನು ಮುಚ್ಚಿ ಕೊಳ್ಳುತ್ತಿದ್ದಳು. ಇದರಿಂದ ಚಂದ್ರಾಪೀಡನಿಗೆ ತನ್ನನ್ನು ಬಂದು ತಬ್ಬಿಕೊಳ್ಳುವಂತೆ ಸನ್ನೆ ಮಾಡುತ್ತಿರುವವಳಂತೆ ಶೋಭಿಸುತ್ತಿದ್ದಳು. ೧೩೮. ಜಿಂಕೆಯಂತೆ ಕಣ್ಣುಳ್ಳ ಆ ಕಾದಂಬರಿಯು ತನ್ನ ಸುಂದರವಾದ ಹಾಗೂ ನೀಳವಾದ ಕೇಶಪಾಶದಿಂದ ಕೆಳಕ್ಕೆ ಉದುರುವ ಹೂವುಗಳನ್ನು ಬೊಗಸೆಗೈಯಲ್ಲಿ ತುಂಬಿಕೊಂಡು ಮೂಸಿ ನೋಡುತ್ತಿ ದ್ದಳು. ಇದರಿಂದ ಅವಳು ಕಂಡಕೂಡಲೆ ಆ ಅರಸನಿಗೆ ಕೈಮುಗಿಯುತ್ತಿದ್ದಾಳೋ

ಕೊರಲೊಳ್ ಸೊಗಯಿಪ ಹಾರಮ
ನೆರಡುಂ ಸುಟ್ಟುಂಬೆಯಿಂದವಡಿಗಡಿಗಾಗಳ್
ತಿರುಪುತ್ತುಂ ನಿಜಹೃದಯಾಂ
ತರದುತ್ಕಲಿಕೆಯನೆ ತೋಱುವಂತೆವೊಲೆಸೆದಳ್ ೧೪೯

ಕೆದಱಿದ ಪೂವಲಿಯಲರಂ
ಮದಿರೇಕ್ಷಣೆ ನಡೆಯೊಳೆಡಪಿ ಬಿಡೆ ನಡುಗುತ್ತುಂ
ಮದನನಲರ್ಗಣೆಯ ಕೋಲಿಂ
ದೊದವಿದ ವೇದನೆಯನಿದಿರ್ಗೆ ತೋರ್ಪವೊಲಿರ್ದಳ್ ೧೫೦

ಉಡೆನೂಲ್ ಸಡಿಲ್ದು ಮೇಗಾ
ಲ್ದುಡಿಗೆಯ ಕುಸುರಿಯೊಳೆ ತೊಡರೆ ಕಾಮಿನಿ ಮಿಡುಕಲ್
ಪಡೆಯದೆ ಯುವರಾಜಂಗಾ
ಗಡೆ ಕಾಮನೆ ಕಟ್ಟಿಯೊಪ್ಪುಗೊಟ್ಟವೊಲಿರ್ದಳ್ ೧೫೧

ವ॥ ಆದಲ್ಲದೆಯುಂ

ತಡವರಿಸುತ್ತಿರಲ್ಕೆ ತೊಡೆ ಜೋಲೆ ಸಡಿಲ್ದುಡೆ ಬೀೞ್ವ ಮೇಲುದಂ
ಬಿಡದೆ ಕುಚಕ್ಕೆ ತರ್ಪಿನೆಗಮಿತ್ತೊಳಮುಯ್ವಿನ ಮೇಲೆ ಬರ್ಪ ಸೋ
ರ್ಮುಡಿ ಚೆದಱುತ್ತೆ ಕೆಯ್ಯೊಳದನಂಗನೆ ಸಾವಗಿಸಲ್ ವಳಿತ್ರಯಂ
ಕಿಡುವಿನೆಗಂ ತೆಱಂದಿರಿದು ಸಂಭ್ರಮದಿಂ ಮಱೆಗೊಂಡು ನೋಡಿದಳ್ ೧೫೨

ಎಂಬಂತೆ ಬಹಳ ಚೆನ್ನಾಗಿ ಶೋಭಿಸಿದಳು ೧೪೯. ಅವಳು ತನ್ನ ಕೊರಳಿನಲ್ಲಿ ಶೋಭಿಸುವ ಹಾರವನ್ನು ತನ್ನ ಎರಡು ಬೆರಳುಗಳಿಂದ ಬಾರಿ ಬಾರಿಗೂ ತಿರುಗಿಸುತ್ತಿದ್ದಳು. ಇದರಿಂದ ಅವಳು ತನ್ನ ಹೃದಯಾಂತರಾಳದಲ್ಲಿರುವ ಚಂದ್ರಾಪೀಡನ ಮೇಲಿರುವ ಉತ್ಕಟೇಚ್ಛೆಯನ್ನು ತೋರಿಸುತ್ತಿರುವಂತೆ ಶೋಭಿಸಿದಳು. ೧೫೦. ಮದವನ್ನುಂಟುಮಾಡುವ ಕಣ್ಣುಳ್ಳ ಆ ಕಾದಂಬರಿಯು ನೆಲಗಟ್ಟಿನಲ್ಲಿ ಎರಚಿರುವ ಹೂವುಗಳನ್ನು ನಡೆಯುವಾಗ ಎಡವಿ ಭಯದಿಂದ ಹೆಚ್ಚಾಗಿ ನಡುಗುತ್ತಿದ್ದಳು. ಇದರಿಂದ ಮನ್ಮಥನ ಹೂವಿನ ಬಾಣವೆಂಬ ದಂಡದಿಂದ ಉಂಟಾದ ವೇದನೆಯನ್ನು ಎದುರಿಗೆ ತೋರಿಸುವಂತೆ ಇದ್ದಳು. ೧೫೧. ಅವಳ ಉಡಿದಾರವು ಜಾರಿ ಕಾಲಿನ ಆಭರಣದಲ್ಲಿ ಸಿಕ್ಕಿಕೊಂಡಿತು. ಆಗ ಆ ಸುಂದರಿಯು ಅಲ್ಲಾಡುವುದಕ್ಕೆ ಆಗದಂತೆ ಇರಲು ಮನ್ಮಥನು ಅವಳನ್ನು ಕಾಲುಕಟ್ಟಿಕೊಂಡೊಯ್ದು ಯುವರಾಜನಿಗೆ ಒಪ್ಪಿಸುತ್ತಾನೋ ಎಂಬಂತೆ ಕಾಣುತ್ತಿತ್ತು. ವ॥ ಅದಲ್ಲದೆ ೧೫೨. ಕಾದಂಬರಿಯು ಚಂದ್ರಾಪೀಡನನ್ನು ಮರೆಯಲ್ಲಿ ಬಹಳ ಸಂಭ್ರಮದಿಂದ ನೋಡುತ್ತಿದ್ದಳು. ಅವಳ ತೊಡೆ ನಡುಗಿ ತಡವರಿಸುತ್ತಿತ್ತು. ಅವಳ ಉಟ್ಟ ಸೀರೆ ಜೋಲಾಡುತ್ತಿತ್ತು. ಮೇಲುಹೊದಿಕೆಯು ಬಿದ್ದು ಬಿದ್ದು ಹೋಗುತ್ತಿದ್ದು ಅದನ್ನು ಮತ್ತೆ ಮತ್ತೆ ಸ್ತನಗಳಿಗೆ ಮುಚ್ಚುತ್ತಿದ್ದಳು. ನೀಳವಾದ ಕೇಶಪಾಶವು ಬಿಚ್ಚಿ ಹೆಗಲಿನ ಮೇಲೆ ಚದುರಲು ಅದನ್ನು ಸರಿಪಡಿಸುತ್ತಿದ್ದಳು. ತ್ರಿವಳಿಗಳು ಕಾಣಿಸಿಕೊಳ್ಳದಂತೆ

ವ॥ ಅಂತಾ ಸಂಭ್ರಮದೊಳ್

ಪೊಳೆಯುತ್ತಂ ತಾರಹಾರಂ ಬರಿಗೆವರೆ ಕಟಾಕ್ಷಾಂಶುವಿಂದೊಂದಿ ಕರ್ಣೋ
ತ್ಪಲಮಾಗಳ್ ಪುಂಡರೀಕಕ್ಕೆಣೆಯೆನಿಸಿ ವಿಲಕ್ಷಸ್ಮಿತಾಲೋಕದಿಂ ಪ್ರ
ಜ್ವಲಿಸಲ್ ತನ್ನೊಂದು ಗಂಡಸ್ಥಳಮೊಸೆದು ಮೊಗಂ ಸಾರ್ಚೆ ನಾನಾ ರಸಂ ಕ
ಣ್ಗೊಳಿಪನ್ನಂ ಮೂರ್ತಿನಾರಾಯಣನೃಪನನವಳ್ ಮೆಚ್ಚಿ ನೋಡುತ್ತಮಿರ್ದಳ್ ೧೪೩

ಬೆಳಗೆಲ್ಲಂ ಪೋಗೆ ವಿಯ
ತ್ತಳದೊಳ್ ಬೆಳರ್ಗೆಂಪು ಪಸರಿಸುತ್ತಿರಲಪರಾ
ಚಲ ಶಿಖರದತ್ತಲೊಯ್ಯನೆ
ತಳರ್ದಂ ರಾಜೀವಜೀವಿತೇಶ್ವರನಾಗಳ್ ೧೪೪

ಮುಟುಗದು ಗಡಿನ್ನುಮೆನುತಂ
ಮುಳಿಸಿಂ ಕಾಮಿನಿಯರೀಕ್ಷಿಸುತ್ತಿರೆ ನುಣ್ಗಿಂ
ಪೆಳಸಿದ:ದೆನೆ ಬಿಂಬಂ ಕೆಂ
ಪೆಳಸಿರ್ದುದು ಚಕ್ರವಾಕಚಕ್ರೇಶ್ವರನಾ ೧೪೫

ಅವಕಾಶ ಮಾಡಿಕೊಂಡು ಶರೀರವನ್ನು ನಿಗುರಿಸಿ ನಿಗುರಿಸಿ ಉದ್ದ ಮಾಡುತ್ತಿದ್ದಳು. ಹೀಗೆ ಬಹಳ ಸಡಗರದಿಂದ ನೋಡುತ್ತಿದ್ದಳು. ವ॥ ಆ ಸಡಗರದಲ್ಲಿ ೧೪೩. ಮುಕ್ತಾ ಹಾರವು ಪ್ರಕಾಶಿಸುತ್ತ ಪಕ್ಕಕ್ಕೆ ಸರಿಯಲು, ಕಟಾಕ್ಷದ ಕಾಂತಿಯಿಂದ ಕೂಡಿಕೊಂಡು ಕಿವಿಯ ಮೇಲಿರುವ ಕನ್ನೈದಿಲೆಯು ಆಗ ಬಿಳಿಯ ತಾವರೆಗೆ ಸಮಾನವೆನಿಸಲು, ನಾಚಿಕೆ ಯಿಂದ ಉಂಟಾದ ಕಿರುನಗೆಯ ಬೆಳಕಿನಿಂದ ತನ್ನ ಒಂದು ಕೆನ್ನೆಯು ಬೆಳಗುತ್ತಿರಲಾಗಿ, ಮುಖವನ್ನು ತಿರುಗಿಸಿ ತಿರುಗಿಸಿ ನಾನಾ ಬಗೆಯ ರಸಗಳು ಕಂಗೊಳಿಸುತ್ತಿರಲಾಗಿ ಪ್ರತ್ಯಕ್ಷ ನಾರಾಯಣನಂತಿರುವ ಅರಸನನ್ನು ಕಾದಂಬರಿಯು ಪ್ರೀತಿಸಿ ನೋಡುತ್ತಿದ್ದಳು. ೧೪೪. ಹಗಲಿನ ಪ್ರಕಾಶವು ಹೋಯಿತು. ಆಕಾಶದಲ್ಲಿ ಬಿಳುಪುಮಿಶ್ರ ಕೆಂಬಣ್ಣವು ಹರಡುತ್ತಿತ್ತು. ಕಮಲಗಳಿಗೆ ಪ್ರಾಣಪ್ರಿಯನಾದ ಸೂರ್ಯನು ಮೆಲ್ಲನೆ ಅಸ್ತಾಚಲದ ಶಿಖರದ ಕಡೆಗೆ ಹೊರಟನು. ೧೪೫. ಇದು ಇನ್ನೂ ಮುಳುಗುವುದೇ ಇಲ್ಲವಲ್ಲ ! ಎಂದು ಕೋಪದಿಂದ ಕಾಮಿನಿಯರು ನೋಡುತ್ತಿರಲು, ಸಿಟ್ಟಿನಿಂದ ಉಂಟಾದ ಅವರ ಕಣ್ಣಿನ ಸುಂದರವಾದ ಕೆಂಪು ಬಂದು ಸೇರಿಕೊಂಡಿತೋ ಎಂಬಂತೆ ಸಕಲ ಜಗನ್ಮಂಡಲಕ್ಕೂ ಚಕ್ರವರ್ತಿಯಾದ

ಪಸುರೆಸೆದುದು ಪದ್ಮಿನಿ ಬೆ
ಳ್ಪೆಸೆದುದು ಕುಮುದಿನಿ ನಿಶಾಮುಖಂ ನಸುಗರ್ಪಿಂ
ದೆಸೆದುದು ಪಡುವಣದೆಸೆ ಕೆಂ
ಪೆಸೆದುದು ದಿವಸಾವಸಾನಮಪ್ಪುದುಮಾಗಳ್ ೧೪೩

ವ॥ ಆಗಳನುರಾಗದಿಂ ದೀಧಿತಿಗಳ್ ಬೆರಸು ದಿವಸಕರನದೃಶ್ಯನಪ್ಪುದುಂ

ಇದು ಚಿತ್ರರಥತನೂಜೆಯ
ಹೃದಯದಿನಗ್ಗಲಿಪ ರಾಗರಸಮೋ ತೀ
ವಿದುದು ಭುವನಮನೆನಲ್ ತೀ
ವಿದುದಾಗಳ್ ಬಹುಳ ಸಾಂದ್ರಸಂಧ್ಯಾರಾಗಂ ೧೪೭

ವ॥ ಮತ್ತಮಿನಿಸಾನುಬೇಗದಿಂ

ಮದನನ ಪೆರ್ಗಿಚ್ಚಿಂ ಮ
ಗ್ಗಿದ ಪೊಣರ್ವಕ್ಕಿಗಳ ಹೃದಯಸಂಕುಳದಿಂದು
ಣ್ಮಿದ ಕರ್ಬೊಗೆಯೆಂಬಿನೆಗಂ
ಪುದಿದೆತ್ತಂ ಮರ್ಬಿನುರ್ಬು ಪರ್ಬಿತ್ತಾಗಳ್ ೧೪೮

ತರತರದಿಂದೆಂಟುಂ ದಿ
ಕ್ಕರಿಗಳ್ ನೆರೆದೊಟ್ಟಿಕೊಳ್ವ ಕರಪುಷ್ಕರಶೀ
ಕರಮೋ ಪೊಣ್ಮಿದುವೆನಲಂ
ಬರದೊಳ್ ತುಱುಗಿದುವು ಧವಳತಾರಾನಿಕರಂ ೧೪೯

ಸೂರ್ಯನಬಿಂಬವು ಕೆಂಬಣ್ಣವನ್ನು ಪಡೆಯಿತು. ೧೪೭. ಸಾಯಂಕಾಲವಾಗಲು ಕಮಲದಬಳ್ಳಿಯೂ ಕೆಂಬಣ್ಣದ ಕಮಲಗಳೂ ಮುಚ್ಚಿಕೊಳ್ಳಲು ಹಸುರುಬಣ್ಣವನ್ನು ಮಾತ್ರ ಪಡೆಯಿತು. ಕುಮುದಲತೆಯು ಅರಳಿದ ಬಿಳಿಯ ಹೂವುಗಳಿಂದ ಬಿಳುಪನ್ನು ಪಡೆದು ಶೋಭಿಸಿತು. ಪ್ರದೋಷಕಾಲವು ತಿಳಿಗಪ್ಪಿನಿಂದ ಶೋಭಿಸಿತು. ಪಶ್ಚಿಮದಿಕ್ಕು ಕೆಂಬಣ್ಣವನ್ನು ತಾಳಿತು. ವ॥ ಆಗ ಅನುರಾಗದಿಂದ (ಕೆಂಪು, ಪ್ರೀತಿ) ಕೂಡಿಕೊಂಡವನಾಗಿ ಕಿರಣಗಳೊಂದಿಗೆ ಸೂರ್ಯನು ಅದೃಶ್ಯನಾಗಲಾಗಿ ೧೪೭. ಕಾದಂಬರಿಯ ಹೃದಯದಲ್ಲಿ ತುಂಬಿಕೊಂಡು ಅಲ್ಲಿಂದ ಹೊರಹೊಮ್ಮುತ್ತಿರುವ ರಾಗದ (ಚಂದ್ರಾಪೀಡನ ಮೇಲಿನ ಪ್ರೀತಿ, ಕೆಂಪು) ಸಮುದ್ರವು ಪ್ರಪಂಚವನ್ನೆಲ್ಲಾ ತುಂಬಿಬಿಟ್ಟಿದೆಯೋ ಎಂಬಂತೆ ಬಹಳ ದಟ್ಟವಾದ ಸಂಜೆಗೆಂಪು ಹರಡಿತು. ವ॥ ಮತ್ತೆ ಸ್ವಲ್ಪ ಹೊತ್ತಿನಲ್ಲಿ ೧೪೮. ಆಗ ಮನ್ಮಥನ ದೊಡ್ಡ ಬೆಂಕಿಯಿಂದ (ವಿರಹಾಗ್ನಿ) ಬೆಂದ ಚಕ್ರವಾಕಪಕ್ಷಿಗಳ ಹೃದಯಗಳಿಂದ ಏಳುತ್ತಿರುವ ದಟ್ಟವಾದ ಕತ್ತಲೆಯು ಎಲ್ಲೆಲ್ಲೂ ವ್ಯಾಪಿಸಿಕೊಂಡು ಹಬ್ಬಿತು. ೧೪೯. ಅಷ್ಟ ದಿಗ್ಗಜಗಳು ಕ್ರಮವಾಗಿ ಸೇರಿ ಮೈಮೇಲೆ ಸುರಿದುಕೊಳ್ಳುವ ಸೊಂಡಲಿನ ತುದಿಯಿಂದ ಹೊರಹೊಮ್ಮುವ ನೀರಿನ ಹನಿಗಳು ಹರಡಿಕೊಂಡಂತೆ

ವ॥ ಆಗಳಾ ಕಾದಂಬರಿ ಮಾಡದಿಂದಿೞಿದಳಿತ್ತಲರಸಂ ಕೇಳೀಶೈಲದಿಂದವನಿತಳಕ್ಕವತರಿಸಿ

ಅದೊ ರಜನಿಯನನುರಾಗದೆ
ಹೃದಯಮನೇೞಿಸಿದನೆಂಬಿನಂ ಮಂಡಲಮ
ಧ್ಯದೊಳೆಸೆಯಲಾತ್ಮಲಾಂಛನ
ಮುದಯಿಸಿದಂ ರಜನಿನಾಥನುದಯಾಚಲದಿಂ ೧೫೦

ವ॥ ಅಂತು ವಿಭಾವರೀವನಿತಾವಿಲಾಸದಂತಪತ್ರನುಂ ಮದನರಾಜ್ಯೈಕಾತಪತ್ರನುಮೆನಿಸಿದ ಕುಮುದಿನೀಬಾಂಧವನುದಯಿಸೆ

ಜಗಮಿದು ಮೌಕ್ತಿಕದಿಂದಂ
ತೆಗೆದುದೊ ದಂತದೊಳೆ ಸಮೆದುದೊ ಪಾಲ್ಗಡಲಿಂ
ದೊಗೆದುದೊ ಪೇೞೆಂಬಿನೆಗಂ
ಸೊಗಯಿಸಿದುದು ಸಾಂದ್ರಚಂದ್ರಿಕಾವಿಸ್ತಾರಂ ೧೫೧

ವ॥ ಅಂತಾ ಚಂದ್ರಿಕೆಯೊಳ್ ನೃಪರೂಪಚಂದ್ರಂ ಕೇಳೀಶೈಲದ ತಪ್ಪಲೊಳ್ ನಡಪಾಡುತಿರ್ಪುದುಂ ಪರಿಜನಂಗಳ್

ತೆರೆಗಳ್ ಮೆಲ್ಪಿಂದೆ ನೀರ್ವಿಜ್ಜಣಿಗೆಯ ತೆಱದಿಂ ಬೀಸೆ ಹಂಸದ್ವಯಂಗಳ್
ತರದಿಂ ಕಣ್ಗೆಯ್ಯೆ ನೀರ್ವಕ್ಕಿಗಳುಲಿಯೆ ದಳನ್ನೀಲನೀರೇಜನೀ ಬಂ
ಧುರಗಂಧೋದ್ಗಾರಿ ಲೀಲಾಸರದ ಪುಳಿನದೊಳ್ ಸಿಂಧುವಾರೋಪಹಾರಂ
ಬೆರಸೊಪ್ಪಂಬೆತ್ತುದೀ ಮುತ್ತಿನ ಪಡುಶಿಲೆಯೊಳ್ ದೇವ ಕುಳ್ಳಿರ್ಪುದೀಗಳ್ ೧೫೨

ಆಕಾಶದಲ್ಲಿ ಶುಭ್ರವಾದ ನಕ್ಷತ್ರಗಳ ಗುಂಪು ಕವಿಯಿತು, ವ॥ ಆಗ ಕಾದಂಬರಿಯು ಮಹಡಿಯಿಂದಿಳಿದಳು. ಈ ಕಡೆ ಚಂದ್ರಾಪೀಡನು ಕೇಳೀಶೈಲದಿಂದ ಭೂಮಿಗೆ ಇಳಿದು ೧೫೦. ಇಗೊ, ರಾತ್ರಿಯ ಮೇಲಿನ ಪ್ರೀತಿಯಿಂದ ಅದನ್ನು ತನ್ನ ಹೃದಯದಲ್ಲಿ ಸೇರಿಸಿ ಕೊಂಡಿದ್ದಾನೆ ಎಂಬಂತೆ ಬಿಂಬದ ಮಧ್ಯದಲ್ಲಿ ಕಪ್ಪುಮಚ್ಚೆಯು ಶೋಭಿಸುತ್ತಿರಲು ರಾತ್ರಿಗೆ ಒಡೆಯನಾದ ಚಂದ್ರನು ಉದಯಪರ್ವತದಿಂದ ಉದಯಿಸಿದನು. ವ॥ ಹಾಗೆ ರಾತ್ರಿಯೆಂಬ ವನಿತೆಯ ವಿನೋದದ ದಂತದೋಲೆಯೆಂದೂ ಮನ್ಮಥನ ಚಕ್ರಾಧಿಪತ್ಯದ ಒಂದೇ ಆದ ಬಿಳಿಯ ಕೊಡೆಯೆಂದೂ ಹೇಳಿಸಿಕೊಳ್ಳುವ ಕುಮುದಿನೀಬಂಧುವೆನಿಸಿದ ಚಂದ್ರನು ಉದಯಿಸಲಾಗಿ, ೧೫೧. ಈ ಜಗತ್ತು ಮುತ್ತುಗಳಿಂದ ನಿರ್ಮಿಸಲ್ಪಟ್ಟಿದೆಯೊ ಅಥವಾ ದಂತದಿಂದ ಮಾಡಲ್ಪಟ್ಟಿದೆಯೊ, ಇಲ್ಲವೆ ಕ್ಷೀರಸಮುದ್ರದಿಂದ ಹುಟ್ಟಿದೆಯೊ ಎಂಬಂತೆ ದಟ್ಟವಾದ ಬೆಳದಿಂಗಳ ಪ್ರಸಾರವು ಮನೋಹರವಾಗಿತ್ತು. ವ॥ ಹಾಗೆ ಆ ಬೆಳದಿಂಗಳಲ್ಲಿ ಚಂದ್ರಾವತಾರನಾದ ಚಂದ್ರಾಪೀಡನು ಕ್ರೀಡಾಪರ್ವತದ ತಪ್ಪಲಲ್ಲಿ ಸಂಚರಿಸುತ್ತಿರಲಾಗಿ ಪರಿಜನರು ೧೫೨. "ಅಲೆಗಳು ನೀರಿನಲ್ಲಿ ಅದ್ದಿದ ಬೀಸಣಿಗೆಯಂತೆ ಮೆಲ್ಲನೆ ಬೀಸುತ್ತಿವೆ. ಹಂಸದಂಪತಿಗಳು ಕ್ರಮವಾಗಿ ನಿದ್ರೆ ಮಾಡುತ್ತಿವೆ. ಚಕ್ರವಾಕ ಪಕ್ಷಿಗಳು ವಿರಹವ್ಯಥೆಯಿಂದ ಕೂಗಿಕೊಳ್ಳುತ್ತಿವೆ. ಈಗ ಅರಳಿರುವ ನೀಲಕಮಲಗಳ

ವ॥ ಎಂಬುದುಂ ಕುಳ್ಳಿರೆ ಕೇಯೂರಕಂ ಭೋಂಕನೆ ಬಂದು ದೇವಾ ಕಾದಂಬರೀದೇವಿ ನಿಮ್ಮಂ ನೋಡಲೆಂದು ಬಂದಳೆಂದು ಬಿನ್ನವಿಸಲರಸನತಿಸಂಭ್ರಮದಿನಿದಿರೇಳ್ವನ್ನೆಗಮಿತರೆಯಂತಲ್ಪಸಖೀಜನಪರಿವೃತೆಯುಮುಪನೀತಾಶೇಷರಾಜಚಿಹ್ನೆಯುಮಾಗಿ

ಎಳವೆಱೆ ಸುತ್ತಿದಂತೆ ಮಿಱುಗುತ್ತಿರೆ ಕೇದಗೆಯೋಲೆ ಚಂದ್ರನೊ
ಳ್ವೆಳಗವೊಲೊಪ್ಪಿ ತೋಱೆ ದುಗುಲಂ ತನುವೊಳ್ಪೊಳೆಯಲ್ಕೆ ಚಂದನಂ
ತೊಳಗುವದೊಂದು ಹಾರಮಮರಲ್ ಕೊರಲೊಳ್ ನಿಜಕಾಂತಿ ಸುತ್ತಲುಂ
ಬಳಸೆ ಲತಾಂಗಿ ಚಂದ್ರನಧಿದೇವತೆಯಂತೆವೊಲಾದವೊಪ್ಪಿದಳ್ ೧೫೩

ವ॥ ಅಂತು ಮದಲೇಖಾದತ್ತಹಸ್ತಾವಲಂಬೆಯಾಗಿ ಕಾದಂಬರೀದೇವಿ ಬಂದು ನಿಜಪ್ರೀತಿಯಂ ತೋಱಲೆಂದು ಪರಿಜನದಂತೆ ನೆಲದೊಳ್ ಕುಳ್ಳಿರೆ ಚಂದ್ರಾಪೀಡದೇವನುಂ ಮೌಕ್ತಿಕಶಿಲಾತಳದೊಳ್ ಕುಳ್ಳಿರಿಮೆಂದು ಮದಲೇಖೆ ಪಿರಿದುಮಾಶ್ವಾಸಿಸೆಯುಮಾಗಳ್ ನೆಲದೊಳ್ ಕುಳ್ಳಿರ್ದು ಗಂಧರ್ವರಾಜನಂದನೆಯನಿಂತೆಂದಂ

ಮನೋಹರವಾದ ಸುವಾಸನೆಯನ್ನು ಬೀರುತ್ತಿರುವ ಈ ಕ್ರೀಡಾಸರೋವರದ ಮರಳಿನ ಮೇಲೆ ತಳೆದಿರುವ ಲಕ್ಕಿಹೂವುಗಳಿಂದ ಕೂಡಿ ಮನೋಹರವಾದ ಮುತ್ತಿನ ಹಾಸುಗಲ್ಲಿನ ಮೇಲೆ ಕುಳಿತುಕೊಳ್ಳಬೇಕು ಸ್ವಾಮಿ." ವ॥ ಎಂದು ಹೇಳಲು ಚಂದ್ರಾಪೀಡನು ಕುಳಿತುಕೊಂಡನು. ಆಗ ಕೇಯೂರಕನು ತಟ್ಟನೆ ಬಂದು "ಸ್ವಾಮಿ ಕಾದಂಬರೀದೇವಿಯು ನಿಮ್ಮನ್ನು ನೋಡಬೇಕೆಂದು ಬಂದಿದ್ದಾಳೆ" ಎಂದು ಅರಿಕೆಮಾಡಲು ಚಂದ್ರಾಪೀಡನು ಬಹಳ ಸಂಭ್ರಮದಿಂದ ಮೇಲಕ್ಕೆದ್ದನು. ಕಾದಂಬರಿಯು ಸಾಮಾನ್ಯ ಕನ್ನಿಕೆಯಂತೆ ಕೆಲವೇ ಮಂದಿ ಗೆಳತಿಯರಿಂದ ಕೂಡಿಕೊಂಡವಳಾಗಿ, ರಾಜಚಿಹ್ನೆಗಳನ್ನೆಲ್ಲಾ ತೆಗೆದಿಟ್ಟು ೧೫೩. ಕೇದಗೆಹೂವಿನ ಓಲೆಯು ಎಳೆಯಚಂದ್ರನು ಸುತ್ತಿಕೊಂಡಿರುವಂತೆ ಕಿವಿಯಲ್ಲಿ ಶೋಭಿಸುತ್ತಿರಲು, ಉಟ್ಟ ಪಟ್ಟೆಸೀರೆಯು ಚಂದ್ರನ ಬೆಳದಿಂಗಳಂತೆ ಶೋಭಿಸುತ್ತಿರಲು, ಲೇಪಿಸಿಕೊಂಡಿರುವ ಗಂಧವು ಶರೀರದಲ್ಲಿ ಹೊಳೆಯುತ್ತಿರಲು, ಪ್ರಕಾಶಿಸುವ ಒಂದು ಹಾರವು ಕೊರಳಲ್ಲಿ ಒಪ್ಪುತ್ತಿರಲು, ದೇಹದ ಪ್ರಭೆಯು ಸುತ್ತಲೂ ವ್ಯಾಪಿಸಿರಲು ಬಳ್ಳಿಯಂತೆ ದೇಹವುಳ್ಳ ಕಾದಂಬರಿಯು ಚಂದ್ರಮಂಡಲದ ಅಧಿದೇವತೆಯಂತೆ ಬಹಳ ಚೆನ್ನಾಗಿ ಶೋಭಿಸುತ್ತಿದ್ದಳು. ವ॥ ಹಾಗೆ ಮದಲೇಖೆಯು ಹಸ್ತಲಾಘವವನ್ನು ಕೊಡುತ್ತಿರಲು ಕಾದಂಬರೀದೇವಿಯು ಬಂದು ತನ್ನ ಪ್ರೀತಿಯನ್ನು ತೋರಿಸುವುದಕ್ಕಾಗಿ ಪರಿಜನರಂತೆ ನೆಲದ ಮೇಲೆ ಕುಳಿತುಕೊಂಡಳು. ಚಂದ್ರಾಪೀಡನು ಮುತ್ತಿನ ಹಾಸುಗಲ್ಲಿನ ಮೇಲೆ ಕುಳಿತುಕೊಳ್ಳಿ ಎಂದು ಮದಲೇಖೆಯು ಎಷ್ಟು ಹೇಳಿದರೂ ಕೇಳದೆ ನೆಲದ ಮೇಲೇ ಕುಳಿತುಕೊಂಡು ಕಾದಂಬರಿಯನ್ನು ಕುರಿತು ಹೀಗೆ

**ನೋಡಲೊಡಂ ಕೃತಾರ್ಥರೆನಿಪಾಳ್ಗಳೊಳೇನವಕಾಶಮುಂಟೆ ಮಾ**
**ತಾಡುವೊಡಿಂತನುಗ್ರಹಿಸುವಲ್ಲಿಗೆ ತಕ್ಕುದದಾವ ಭಂಗಿಯಿಂ**
**ನೋಡುವೊಡೆನ್ನೊಳಿಲ್ಲ ಗುಣಲೇಶಮುಮೀ ತೆಱದಿಂದನುಗ್ರಹಂ**
**ಮಾಡುವುದರ್ಕೆ ದೇವಿಯರದೊಂದು ಋಜುತ್ವಮೆ ಮುಖ್ಯಕಾರಣಂ ೧೫೪**

**ವಿಭವದೆ ನೆಗಟ್ಟನ್ವಯದೊಂ**
**ದಭಿಮಾನಮದೇವುದೆಂದು ಪೊಸ ಸೇವಕರೊಳ್**
**ರಭಸದೆ ನಿಜಸೌಜನ್ಯ**
**ಪ್ರಭಾವಮಂ ಮೆಱೆವಿರಲ್ಲದೇಂ ಪೆಱತುಂಟೇ ೧೫೫**

**ಇನಿಸುಂ ದಾಕ್ಷಿಣ್ಯಮುಮಂ**
**ಮನದೊಳ್ ಭಾವಿಸದೆ ಭೃತ್ಯನೆನೆ ಧನ್ಯನೆನಿಂ**
**ತಿನಿತಾದರಮೇಕೆಯೊ ಪರಿ**
**ಜನದೊಳ್ ಬೆಸಕೆಯ್ದು ಬರ್ದುಕಿಮೆಂಬೊಂದೆಡೆಯೊಳ್ ೧೫೬**

**ಪರಗುರ್ಪಕರಿಪೆಡೆಗಳ್ಗುಪ**
**ಕರಣಂ ತನು ತೃಣದ ತೆಱದೆ ಲಘುಜೀವಿತಮೆಂ**
**ಬೆರಡುಂ ಪಾವುಡಮಿಂತೀ**
**ಬರವಿಂಗೆನಲೆನಗೆ ಲಜ್ಜೆಯಾದಪುದೀಗಳ್ ೧೫೭**

ಹೇಳಿದನು. ೧೫೪. "ದರ್ಶನವಾದರೆ ಸಾಕು ತಾವು ಕೃತಾರ್ಥರಾದೆವೆಂದು ಭಾವಿಸುವ ಸೇವಕರಿಗೆ ಮಾತನಾಡಲು ತಾನೆ ಅವಕಾಶವೆಲ್ಲಿದೆ? ಯಾವ ರೀತಿಯಿಂದ ವಿಚಾರ ಮಾಡಿದರೂ ಈ ರೀತಿ ಅನುಗ್ರಹಿಸುವುದಕ್ಕೆ ಯೋಗ್ಯವಾದ ಗುಣಲೇಶವೂ ನನ್ನಲ್ಲಿಲ್ಲ. ಈ ರೀತಿಯಿಂದ ಅನುಗ್ರಹ ಮಾಡುವುದಕ್ಕೆ ತಮ್ಮ ಒಂದು ಸರಳ ಸ್ವಭಾವವೇ ಮುಖ್ಯಕಾರಣವು. ೧೫೫. ಐಶ್ವರ್ಯದಿಂದ ಪ್ರಸಿದ್ಧಿಗೊಂಡ ದೊಡ್ಡ ಗಂಧರ್ವವಂಶದಲ್ಲಿ ಹುಟ್ಟಿರುವೆನೆಂಬ ಅಹಂಕಾರವು ನನಗೇಕೆ ? ಎಂದು ಭಾವಿಸಿ ಈ ಹೊಸ ಸೇವಕನಲ್ಲಿ ಬೇಗನೆ ನಿಮ್ಮ ಒಳ್ಳೆಯತನದ ಪ್ರಭಾವವನ್ನು ಮೆರೆಸುತ್ತಿರುವಿರಲ್ಲದೆ ಬೇರೆ ಏನೂ ಇಲ್ಲ. ೧೫೬. ಮನಸ್ಸಿನಲ್ಲಿ ಸ್ವಲ್ಪವೂ ಸಂಕೋಚಪಡದೆ ನಾನು ನಿಮ್ಮ ಆಳು ಎಂದು ಹೇಳಿಕೊಳ್ಳುವುದರಿಂದಲೇ ನಾನು ಕೃತಾರ್ಥನಾಗುತ್ತೇನೆ. ಹೀಗಿರುವಲ್ಲಿ ನಮ್ಮ ಸೇವಕರಲ್ಲಿ ನೀವೂ ಸೇರಿ ಬದುಕಿಕೊಳ್ಳಿ ಎಂದು ಅಪ್ಪಣೆಮಾಡುವ ಬದಲು ನನಗೆ ಇಷ್ಟು ಉಪಚಾರವೇಕೆ ? ೧೫೭. ಪರೋಪಕಾರ ಮಾಡುವ ಕಾಲದಲ್ಲಿ ಸಾಧನವಾದ ಶರೀರ ಮತ್ತು ಹುಲ್ಲಿನಂತೆ ಅಲ್ಪವಾದ ಪ್ರಾಣ. ಇವೆರಡನ್ನೂ ಈ ನಿಮ್ಮ ಆಗಮನಕ್ಕೆ ಕಾಣಿಕೆಯಾಗಿ ಒಪ್ಪಿಸಿದ್ದೇನೆ ಎಂದು ಅರಿಕೆಮಾಡಲು ನನಗೆ ನಾಚಿಕೆ

ಆವಿರ್ಪವು ತನುವಿದೆ ಪ್ರಾಣ್
ಜೀವಿತಮಿರ್ದಪ್ಪುದವಯವಂಗಳುಮಿವೆ ಮೆ
ಚ್ಚಾವುದನಾತ್ಮೀಕರಿಪರೊ
ದೇವಿಯರಿಂದೀಗಳಿವಱೊಳದುವೆ ಕೃತಾರ್ಥಂ ೧೫೮

ವ॥ ಎಂದು ನುಡಿಯೆ ಮದಲೇಖೆ ಮಾರ್ಕೊಂಡು ನೀವಿನ್ನು ಕೀೞ್ಪಟ್ಟು ನುಡಿಯೆ ಕಾದಂಬರೀದೇವಿ ಖೇದಿಸುವಳೆಂದು ಮತ್ತಮಿಂತೆಂದಳ್

ಇದನಿಂತಿನಿತಂ ನೀವೆ
ನ್ನದೊಡೇಂ ಗಂಧರ್ವರಾಜನಂದನೆ ಕೈಕೊ
ಳ್ಳದ ಕಿಮ್ಮನೆ ಮತ್ತುಪಚಾ
ರದ ನುಡಿ ಸಂದೇಹಬುದ್ಧಿಯಂ ಪುಟ್ಟಿಸದೇ ೧೫೯

ವ॥ ಎಂದು ನುಡಿಯೆ ಕಾದಂಬರೀದೇವಿ ಕೃತಪ್ರಸ್ತಾವೆಯಾಗಿ

ಅವನೀಪಾಲಕಚಕ್ರವರ್ತಿ ವಿಭು ತಾರಾಪೀಡನೆನ್ನಂ ವಿಳಾ
ಸವತೀದೇವಿಯುದೆನ್ನನಾರ್ಯ ಶುಕನಾಸಂ ತಾನದೆನ್ನಂ ಮಹೀ
ಭುವನಂ ನೋಡುವಡೆಂತುಟಲ್ಲಿಗೆನಿತಾವುಜ್ಜೈನಿಯಂತಿರ್ಪುದೊ
ಪ್ಪುವುದೇ ಭಾರತವರ್ಷಮೆಂದು ಬೆಸಗೊಂಡಳ್ ಕಾಂತೆ ಭೂಕಾಂತನಂ ೧೬೦

ಯಾಗುತ್ತದೆ. ೧೫೮. ನಾನು ಇದ್ದೇನೆ. ಈ ಶರೀರವಿದೆ ಮತ್ತು ಪ್ರಾಣವಿದೆ. ಅವಯವಗಳೂ ಇವೆ. ಈಗ ಇವುಗಳಲ್ಲಿ ಯಾವುದನ್ನು ದೇವಿಯರು ಮೆಚ್ಚಿ ಅಂಗೀಕರಿಸುತ್ತಾರೋ ಅದೇ ಸಾರ್ಥಕವಾಗುತ್ತದೆ." ವ॥ ಎಂದು ಹೇಳಲಾಗಿ ಮದಲೇಖೆಯು ಆ ಮಾತನ್ನು ತಡೆದು "ನೀವು ಇನ್ನು ಹೀಗೆ ನಿಮ್ಮನ್ನು ಕೀಳಾಗಿ ಭಾವಿಸಿ ಮಾತನಾಡಿದರೆ ಕಾದಂಬರೀದೇವಿಯು ಬೇಜಾರುಪಡುತ್ತಾಳೆ" ಎಂದು ಹೇಳಿ ಮತ್ತೆ ಹೀಗೆ ಹೇಳಿದಳು. ೧೫೯. "ಇಷ್ಟು ಮಾತನ್ನು ನೀವು ಹೇಳದಿದ್ದರೆ ಏನು ಕೊರತೆ? ಕಾದಂಬರೀದೇವಿಗೆ ಇದೇನೂ ಬೇಕಿಲ್ಲ. ಸುಮ್ಮನೆ ಉಪಚಾರದ ಮಾತು ಸಂದೇಹ ಬುದ್ಧಿಯನ್ನುಂಟುಮಾಡುವುದಿಲ್ಲವೆ?" ವ॥ ಎಂದು ಹೇಳಲಾಗಿ ಕಾದಂಬರೀದೇವಿಯು ಅವಕಾಶಮಾಡಿಕೊಂಡು ೧೬೦. "ಪ್ರಪಂಚವನ್ನೆಲ್ಲಾ ಕಾಪಾಡುವ ಚಕ್ರವರ್ತಿಯಾದ ತಾರಾಪೀಡಮಹಾರಾಜನು ಹೇಗಿದ್ದಾನೆ? ಮಹಾರಾಣಿಯಾದ ವಿಲಾಸವತೀದೇವಿಯು ಹೇಗಿದ್ದಾಳೆ? ಮಂತ್ರಿಯಾದ ಶುಕನಾಸನು ಹೇಗಿದ್ದಾನೆ? ಭೂಮಿಯು ನೋಡುವುದಕ್ಕೆ ಹೇಗಿದೆ? ಉಜ್ಜಯಿನಿಯು ಇಲ್ಲಿಗೆ ಎಷ್ಟು ದೂರದಲ್ಲಿದೆ? ಹೇಗಿದೆ?

ವ॥ ಎಂದಿವು ಮೊದಲಾಗಿ ಪಲವುಮಂ ಬೆಸಗೊಳುತ್ತುಂ ಪಿರಿದುಬೇಗಮಿರ್ದು ಕಾದಂಬರಿ ಕೇಯೂರಕನುಮಂ ಪರಿಜನಮುಮನರಸನ ಸಾರೆಯಿರವೇಟ್ಟು ತನ್ನ ಕನ್ನೆಮಾಡಕ್ಕೆ ಪೋಗಿ ಶಯನತಳಮನಲಂಕರಿಸಿದಳಿತ್ತ ಕೇಯೂರಕನಡಿಯೊತ್ತೆ ಮುನ್ನಿರ್ದೆಡೆಯೊಳೆ ಯುವರಾಜನಿರ್ದು ಕಾದಂಬರೀದೇವಿಯ ನಿರಹಂಕಾರಮುಮಂ ಮಹಾಶ್ವೇತೆಯ ನಿಷ್ಕಾರಣವತ್ಸಲತೆಯುಮಂ ಮದಲೇಖೆಯ ಸುಜನತೆಯುಮಂ ಪರಿಜನದ ಮಹಾನುಭಾವತೆಯುಮಂ ಗಂಧರ್ವರಾಜಲೋಕದ ಸಮೃದ್ಧತೆಯುಮಂ ಕಿಂಪುರುಷವಿಷಯದ ರಮ್ಯತೆಯುಮಂ ಮನದೊಳ್ ಭಾವಿಸುತ್ತಿರ್ಪನ್ನೆಗಂ

ಇರುಳೋರಂತಿರೆ ಕಾದಂ
ಬರಿಯನೆ ನೋಡುತ್ತಮಿರ್ದು ರೆಪ್ಪೊಂಪಿಸೆ ನಿದ್ರಾ
ತುರನಾಗಿ ಪಟ್ಕಿಸಾರ್ವಂ
ತಿರೆ ಸಾರ್ದಂ ಚಂದ್ರನಪರವೇಲಾವನಮಂ ೧೬೧

ಇನಿಸುಂ ನಿಲಲಾಜದೆ ಕಾ
ಮಿನಿಯರ ಕರ್ಣೋತ್ಪಲಪ್ರಹಾರದ ನಿಸ್ತೇ
ಜನದಿಂ ತನುವಾದಂತಿರೆ
ತನುವಾದುವು ಕೂಡೆ ಸೆಜ್ಜೆವನೆಗಳ ಸೊಡರ್ಗಳ್ ೧೬೨

ಭಾರತವರ್ಷವು ಚೆನ್ನಾಗಿದೆಯೆ?" ಎಂದು ಕೇಳಿದಳು. ವ॥ ಇವೇ ಮೊದಲಾದ ಹಲವು ವಿಚಾರಗಳನ್ನು ಕೇಳುತ್ತಾ ಬಹಳ ಹೊತ್ತು ಇದ್ದು, ಕಾದಂಬರಿಯು ಕೇಯೂರಕನನ್ನೂ ಪರಿಜನರನ್ನೂ ಚಂದ್ರಾಪೀಡನ ಹತ್ತಿರವೇ ಇರುವಂತೆ ಹೇಳಿ ತನ್ನ ಅಂತಃಪುರಕ್ಕೆ ಹೋಗಿ ಹಾಸಿಗೆಯನ್ನು ಅಲಂಕರಿಸಿದಳು (ಮಲಗಿದಳು). ಈ ಕಡೆ ಕೇಯೂರಕನು ಕಾಲನ್ನು ಒತ್ತುತ್ತಿರಲಾಗಿ, ಮೊದಲಿದ್ದ ಸ್ಥಳದಲ್ಲೆ ಯುವರಾಜನಿದ್ದು ಕಾದಂಬರೀದೇವಿಯ ನಿರಹಂಕಾರತೆಯನ್ನೂ ಮಹಾಶ್ವೇತೆಯ ಅಕಾರಣಮಮತೆಯನ್ನೂ ಮದಲೇಖೆಯ ಒಳ್ಳೆಯತನವನ್ನೂ ಪರಿಜನರ ಉದಾರಸ್ವಭಾವವನ್ನೂ ಗಂಧರ್ವಲೋಕದ ಸಮೃದ್ಧಿಯನ್ನೂ ಕಿಂಪುರುಷವರ್ಷದ ರಮಣೀಯತೆಯನ್ನೂ ಮನಸ್ಸಿನಲ್ಲೇ ಆಲೋಚಿಸುತ್ತಿರಲಾಗಿ, ೧೬೧. ಚಂದ್ರನು ರಾತ್ರಿ ಒಂದೇ ಸಮನೆ ಕಾದಂಬರಿಯನ್ನೇ ನೋಡುತ್ತಿದ್ದು ತೂಕಡಿಕೆ ಬರಲಾಗಿ ನಿದ್ರೆಮಾಡಬೇಕೆಂಬ ತವಕದಿಂದ ಹಾಸಿಗೆಯನ್ನು ಸೇರುವಂತೆ ಪಶ್ಚಿಮ ಸಮುದ್ರತೀರದ ಕಾಡನ್ನು ಸೇರಿದನು, ೧೬೨. ಕಾಮಿನಿಯರು ರಾತ್ರಿ ತಮ್ಮ ಕಿವಿಯ ಆಭರಣವಾದ ಕನ್ನೈದಿಲೆಯಿಂದ ಹೊಡೆಯಲು ತೇಜೋಭಂಗವಾದುದರಿಂದ ಸ್ವಲ್ಪವೂ ತಡೆದುಕೊಳ್ಳಲಾರದೆ ಕೃಶ

ಬೆಳಗಾಯ್ತೆಂಬೊಂದಟಲ
ಗ್ಗಳಿಸಲ್ ಪೊಸವೇಟಕಾರ್ತಿಯರ ಬಿಸುಸುಯ್ಯೊಳ್
ಬೆಳಗಿದುದೆಂಬಿನವೂ
ಗಳದೇಂ ಕೊರಗಿದುದೊ ಕುಮುದಿನೀವಿಸ್ತಾರಂ ೧೬೩

ಬಗೆಯದೆ ವಿರಹಿಗಳಂ ವಿಗೆ
ತೆಗೆದೆಚ್ಚು ಬಟಲ್ದ ಮಧುಸಖನ ಸುಯ್ಯೆಲರ್ವೊಲ್
ಸೊಗಯಿಸಿ ಪೊತ್ತಲರ್ಗಂಪಂ
ನೆಗೆದುೞ್ ತಣ್ಣೆಲರದಿನಿಸು ತೀಡಿತ್ತಾಗಳ್ ೧೬೪

ಅರಸನನೀಕ್ಷಿಸಿ ಮದನಾ
ತುರೆಯಾದಂತಿರುಳೊಳಾವಗಂ ಕುಮುದದೊಳಾ
ದರದೊಳಿರಲ್ಕವು ಕೊರಗಲ್
ಸಿರಿ ಪಂಕಜದಲ್ಲಿ ಮೆಯ್ಯನಿಕ್ಕಿದಳಾಗಳ್ ೧೬೫

ವ॥ ತದನಂತರಂ

ಅದೆ ಜಕ್ಕವಕ್ಕಿಗಳ ಹೃದ
ಯದ ರಾಗಂ ಪುದಿದುದೆನಿಸಿ ಕೆಂಪಂ ಕೆಯ್ಕೊಂ
ಡುದಯಾದ್ರಿಯಿಂದಮುದಯಿಸಿ
ದುದು ಬಿಂಬಂ ಚಕ್ರವಾಕಚಕ್ರೇಶ್ವರನಾ ೧೬೬

ವಾದಂತೆ ಶಯನಗೃಹದ ದೀಪಗಳು ಸಣ್ಣಗಾದುವು. ೧೬೩. ಅಯ್ಯೋ, ಬೆಳಗಾಗಿ ಹೋಯಿತಲ್ಲ ಎಂದು ಅಳಲು ಹೆಚ್ಚಾಗಲು ಹೊಸದಾಗಿ ದಾಂಪತ್ಯಸುಖಕ್ಕೆ ಕಾಲಿಟ್ಟ ಕಾಮಿನಿಯರು ಬಿಸಿ ನಿಟ್ಟುಸಿರುಬಿಡುತ್ತಿರಲು ಅದರಿಂದ ಆವರಿಸಲ್ಪಟ್ಟಂತೆ ಕನ್ನೈದಿಲೆಗಳ ಗುಂಪು ಬಾಡಿತು. ೧೬೪. ಸ್ವಲ್ಪವೂ ಯೋಚಿಸದೆ ವಿರಹಿಗಳ ಮೇಲೆ ಹೆಚ್ಚಾಗಿ ಬಾಣಗಳನ್ನು ಬಿಟ್ಟು ಬಿಟ್ಟು ಆಯಾಸಗೊಂಡ ಮನ್ಮಥನ ನಿಟ್ಟುಸಿರಿನಂತೆ ಅಂದವಾದ ಹೂವಿನ ವಾಸನೆಯನ್ನು ಧರಿಸಿ ವ್ಯಾಪಿಸಿ ತಂಗಾಳಿಯು ಸಣ್ಣನಾಗಿ ಬೀಸುತ್ತಿತ್ತು. ೧೬೫, ಚಂದ್ರಾಪೀಡನನ್ನು ನೋಡಿ ಕಾಮಪೀಡಿತಳಾದ ಲಕ್ಷ್ಮಿಯು ವಿರಹತಾಪವನ್ನು ತಂಪಿಸಿಕೊಳ್ಳಲು ರಾತ್ರಿಯೆಲ್ಲಾ ಕನ್ನೈದಿಲೆಯಲ್ಲಿ ಆಸಕ್ತಿಯಿಂದಿದ್ದು ಈಗ ಅವು ಬಾಡಿಹೋಗಲು ಕಮಲಕ್ಕೆ ಬಂದು ಸೇರಿದಳು. ವ॥ ಆಮೇಲೆ ೧೬೬. ರಾತ್ರಿಯಲ್ಲೆಲ್ಲಾ ಚಕ್ರವಾಕಪಕ್ಷಿಗಳು ತಮ್ಮ ಹೃದಯದಲ್ಲಿ ಸೂರ್ಯನನ್ನೇ ನೆನೆಸಿಕೊಳ್ಳುತ್ತಿದ್ದುವು. ಇದರಿಂದ ಸೂರ್ಯನು ಅವುಗಳ ಹೃದಯ ಇದ್ದಂತಾಯಿತು. ಇದರಿಂದ ಚಕ್ರವಾಕಪಕ್ಷಿಗಳ ಹೃದಯದಲ್ಲಿದ್ದ ರಾಗವು (ಕೆಂಪು, ಅನುರಾಗ) ಅಂಟಿಕೊಂಡಿದೆಯೊ ಎಂಬಂತೆ ಕೆಂಬಣ್ಣವನ್ನು ತಾಳಿದ ಜಗನ್ಮಂಡಲಾಧಿಪತಿಯಾದ ಸೂರ್ಯನ ಬಿಂಬವು ಉದಯಪರ್ವತದಿಂದ ಉದಯಿ

ವ॥ ಆಗಳ್ ಚಂದ್ರಾಪೀಡಂ ಪ್ರಕ್ಷಾಳಿತಮುಖಕಮಲನುಂ ಕೃತಸಂಧ್ಯಾವಂದನನುಂ ಗೃಹೀತತಾಂಬೂಲನುಮಾಗಿ ಕೇಯೂರಕ ಕಾದಂಬರಿಯೆಲ್ಲಿರ್ದಳುಪ್ಪವಡಿಸಿದಳೆಲ್ಲೆಂಬುದಂ ನೋಡಿ ಬಂದಱಿಪುವುದೆಂಬುದುಮವಂ ಪೋಗಿಬಂದು ದೇವ ಮಂದರಪ್ರಾಸಾದದ ಕೆಳಗಣ ಸೌಧತಳವೇದಿಕೆಯೊಳ್ ಮಹಾಶ್ವೇತೆವೆರಸಿರ್ದಪಳ್ ಎಂದು ಬಿನ್ನಪಂಗೆಯ್ಯಲೊಡಂ ಗಂಧರ್ವ ರಾಜನಂದನೆಯಲ್ಲಿಗೆ ಬರ್ಪನ್ನೆಗಮನೇಕ ಪರಿವ್ರಾಜಿಕಾಸಮಾಜಂ ಸುತ್ತಮೋಲಗಿಸುತ್ತಿರಲಂತಃ ಪುರಾಭ್ಯರ್ಹಿತರೊಳಾದರಂಬೆರಸು ಸಂಭಾಷಿಸುತ್ತಂ ಸೌಧತಳವೇದಿಕೆಯೊಳ್ ಗಂಧರ್ವರಾಜ ಬಾಂಧವವೃದ್ಧರಂ ವೇತ್ರಾಸನಾದಿ ದಾನದಿಂ ಸನ್ಮಾನಿಸುತ್ತಮಿರ್ದ ಮಹಾಶ್ವೇತೆಯ ಪೆಱಗೆ

ಎರಡುಂ ಬಂಚಂಗಳಿಂದೀಚರವೊಸರ್ವಿನೆಗಂ ಕಿನ್ನರದ್ವಂದ್ವಮೊತ್ತು<br>
ತ್ತಿರೆ ನಾನಾ ಭಂಗಿಯಿಂ ನಾರದತನಯೆ ನಯಂಬೆತ್ತುದೆಂಬಂತೆ ಪಾಡು<br>
ತ್ತಿರೆ ಪುಣ್ಯೋಪೇತಮಂ ಭಾರತಮನೆಸೆವ ಪೌರಾಣಿಕರ್ ಪಕ್ಕದೋದು<br>
ತ್ತಿರೆ ಕೇಳುತ್ತಿರ್ದ ಕಾದಂಬರಿಯನವನಿಪಂ ದೂರದೊಳ್ ಕಂಡನಾಗಳ್ ೧೬೭

ವ॥ ಅಂತು ಬಂದು

ಲಲನೆಯ ವಕ್ತ್ರಕಾಂತಿ ದೊರೆಕೊಳ್ಗೆನಗೆಂದಮೃತಾಂಶು ಭಕ್ತಿಯಿಂ<br>
ಬಲವರುತಿರ್ದನೋ ಪಿರಿದುಮೆಂಬಿನೆಗಂ ನವಕರ್ಣಪೂರದೊಂ<br>
ದಲೆದ ಶಿರೀಷಮಂಜರಿಯನೀಕ್ಷಿಸಿ ಪಾವಸೆಗೆತ್ತು ತೃಷ್ಣೆಯಿಂ<br>
ಬಲವರುತಿರ್ದುದಂಗನೆಯನುನ್ಮುಖ ಬಾಲಮರಾಳಮಂಡಳಂ ೧೬೮

ಸಿತು. ವ॥ ಆಗ ಚಂದ್ರಾಪೀಡನು ಮುಖವನ್ನು ತೊಳೆದುಕೊಂಡು ಸಂಧ್ಯಾವಂದನೆಯನ್ನು ಮಾಡಿ, ವೀಳೆಯವನ್ನು ಮೆದ್ದು "ಕೇಯೂರಕ, ಕಾದಂಬರಿಯು ಎಲ್ಲಿದ್ದಾಳೆ? ಎದ್ದಿದ್ದಾಳೋ ಇಲ್ಲವೊ? ಎಂಬುದನ್ನು ನೋಡಿಕೊಂಡು ಬಂದು ನನಗೆ ತಿಳಿಸು" ಎಂದು ಹೇಳಿದನು. ಅವನು ಹೋಗಿ ಬಂದು "ಸ್ವಾಮಿ, ಮಂದರಪ್ರಾಸಾದವೆಂಬ ಮಹಲಿನ ಕೆಳಭಾಗದ ಸುಣ್ಣಬಳಿದು ಶುಭ್ರವಾಗಿರುವ ವೇದಿಕೆಯಲ್ಲಿ ಮಹಾಶ್ವೇತೆಯ ಜೊತೆಯಲ್ಲಿದ್ದಾಳೆ?" ಎಂದು ಅರಿಕೆಮಾಡಲು, ಚಂದ್ರಾಪೀಡನು ಕಾದಂಬರಿಯ ಬಳಿಗೆ ಬಂದನು. ಅಲ್ಲಿ ಅನೇಕ ಸಂನ್ಯಾಸಿನಿಯರ ಗುಂಪು ಸುತ್ತುವರಿದಿರಲು ರಾಣೀವಾಸದ ಹಿರಿಯರೊಂದಿಗೆ ಆದರದಿಂದ ಮಾತುಕತೆ ನಡೆಸುತ್ತ ಮಹಲಿನ ಕೆಳಗಣ ಸುಣ್ಣಬಳಿದ ಕಟ್ಟೆಯಲ್ಲಿ ಗಂಧರ್ವರಾಜನ ವೃದ್ಧರಾದ ನೆಂಟರಿಷ್ಟರನ್ನು ಬೆತ್ತದ ಕುರ್ಚಿಯಲ್ಲಿ ಕುಳ್ಳಿರುವುದೇ ಮೊದಲಾದ ಸತ್ಕಾರಗಳಿಂದ ಮನ್ನಣೆ ಮಾಡುತ್ತಿದ್ದ ಮಹಾಶ್ವೇತೆಯ ಹಿಂಭಾಗದಲ್ಲಿ ೧೬೭. ಕಿನ್ನರದಂಪತಿಗಳು ಎರಡು ಕೊಳಲುಗಳನ್ನು ಮಧುರಸ್ವರವು ಹೊರಡುವಂತೆ ಬಾರಿಸುತ್ತಿರಲು, ನಾರದನ ಸಾಕುಮಗಳಾದ ಭದ್ರೆಯೆಂಬುವಳು ನಾನಾ ರೀತಿಗಳಿಂದ ಮಧುರವಾಗಿ ಹಾಡುತ್ತಿರಲು. ಪಕ್ಕದಲ್ಲಿ ಪುರಾಣಿಕರು ಪುಣ್ಯಕರವಾದ ಮಹಾಭಾರತವನ್ನು ಓದುತ್ತಿರಲು, ಕೇಳುತ್ತಿದ್ದ ಕಾದಂಬರಿಯನ್ನು ಚಂದ್ರಾಪೀಡನು ದೂರದಲ್ಲೇ ಕಂಡನು, ವ॥ ಹಾಗೆ ಬಂದು ೧೬೮. ಕಾದಂಬರಿಯು ಕಿವಿಯಲ್ಲಿ ಬಾಗೆಹೂವಿನ ಗೊಂಚಲನ್ನು ಧರಿಸಿಕೊಂಡಿದ್ದಳು, ಅದು

ಪೊಳೆವ ಸುಲಿಪಲ್ಲ ನುಣ್ಬೆಳ
ಗೆಳಸಿದ ತಾಂಬೂಲಬದ್ಧ ಕೃಷ್ಣಿಕೆಯಿಂ ಕ
ಣ್ಗೊಳಿಪ ನಿಜಾಧರಮಂ ಕೋ
ಮಳೆ ನೋಡುತ್ತಿರ್ದಳಮಳಮಣಿದರ್ಪಣದೊಳ್ ೧೯೯

ವ॥ ಅಂತಿರ್ದಳನೆಯ್ದೆವಂದು ಸುಧಾವೇದಿಕೆಯೊಳಿಕ್ಕಿದಾಸನಮನಲಂಕರಿಸಿ ಕಿಱಿದು ಬೇಗಮಿರ್ದು ಮಹಾಶ್ವೇತೆಯಂ ಮಂದಸ್ಮಿತವದನನಾಗಿ ನೋೞ್ಪುದುಂ ವಿದಿತಾಭಿಪ್ರಾಯೆಯಾಗಿ ಕಾದಂಬರಿಯನಿಂತೆಂದಳ್

ಚಂದ್ರಿಕೆಯಿಂದಂ ದ್ರವಿಯಿಪ
ಚಂದ್ರೋಪಲದಂತೆ ನಿನ್ನ ಗುಣಗಣದಿಂದಂ
ಚಂದ್ರಮುಖಿ ನಾಂದನಾಗಿ ನ
ರೇಂದ್ರಂ ನುಡಿಯಲ್ಕಮಱಿಯದಿರ್ದಪನೀಗಳ್ ೧೭೦

ಅಱಿಯದೆ ಪೋದೆಡೆಯಂ ಬಿಡ
ದಱಸುತ್ತೆಂತಿರ್ಪನೆನುತಮುಮ್ಮಳದಿಂದಂ
ಪೆಱಗಿರ್ದ ರಾಜಲೋಕಂ
ಮಱುಗದೆ ಮಾಣದು ಕುಮಾರನಂ ಕಾಣ್ಬನೆಗಂ ೧೭೧

ಅಲುಗಾಡುತ್ತಿತ್ತು. ಅದನ್ನು ಪಾಚಿಯೆಂದು ತಿಳಿದು ತಿನ್ನಬೇಕೆಂಬ ಆಸೆಯಿಂದ ಮುಖವನ್ನು ಮೇಲಕ್ಕೆತ್ತಿಕೊಂಡಿರುವ ಮರಿಹಂಸಗಳ ಗುಂಪು ಸುತ್ತುವರಿದಿದ್ದುವು. ಅದನ್ನು ನೋಡಿದರೆ ಕಾದಂಬರೀದೇವಿಯ ಮುಖದ ಕಾಂತಿಯು ತನಗೆ ದೊರಕಬೇಕೆಂದು ಚಂದ್ರನು ಭಕ್ತಿಯಿಂದ ಅವಳಿಗೆ ಸರಿಯಾಗಿ ಪ್ರದಕ್ಷಿಣೆ ಮಾಡುತ್ತಿರುವನೋ ಎಂಬಂತೆ ಕಾಣುತ್ತಿತ್ತು. ೧೬೯. ಆ ಕೋಮಲಾಂಗಿಯು ಹೊಳೆಯುತ್ತಿರುವ ಶುಭ್ರವಾದ ಹಲ್ಲಿನ ನಯವಾದ ಕಾಂತಿಯು ವ್ಯಾಪಿಸಿರುವ, ತಾಂಬೂಲಚರ್ವಣದಿಂದ ಉಂಟಾದ ಕಪ್ಪಿನಿಂದ ರಂಜಿಸುವ ತನ್ನ ತುಟಿಯನ್ನು ನಿರ್ಮಲವಾದ ರನ್ನಗನ್ನಡಿಯಲ್ಲಿ ನೋಡಿಕೊಳ್ಳುತ್ತಿದ್ದಳು. ವ॥ ಹಾಗೆ ಇದ್ದ ಅವಳನ್ನು ಸಮೀಪಿಸಿ ಆ ಸುಣ್ಣ ಬಳಿದ ಕಟ್ಟೆಯ ಮೇಲೆ ಹಾಕಿದ ಆಸನವನ್ನು ಅಲಂಕರಿಸಿ ಸ್ವಲ್ಪಕಾಲವಿದ್ದು, ಮಹಾಶ್ವೇತೆಯನ್ನು ಮುಗುಳುನಗೆಯಿಂದ ನೋಡಲಾಗಿ, ಅವನ ಇಂಗಿತವನ್ನು ತಿಳಿದುಕೊಂಡ ಮಹಾಶ್ವೇತೆಯು ಕಾದಂಬರಿಯನ್ನು ಕುರಿತು ಹೀಗೆ ಹೇಳಿದಳು. ೧೭೦. "ಎಲೈ ಚಂದ್ರಮುಖಿ, ಬೆಳದಿಂಗಳಿಂದ ದ್ರವಿಸುವ ಚಂದ್ರಕಾಂತಶಿಲೆಯಂತೆ ನಿನ್ನ ಗುಣಗಣದಿಂದ ಕರಗಿದ ಮನಸ್ಸುಳ್ಳವನಾಗಿ ಚಂದ್ರಾಪೀಡನು ಈಗ ಮಾತನಾಡಲಾರದವನಾಗಿದ್ದಾನೆ. ೧೭೧. ಹಿಂದಿರುವ ಸಾಮಂತರಾಜರ ಸಮೂಹವು ಇವನು ಹೋಗಿರುವ ಸ್ಥಳವನ್ನು ತಿಳಿಯದೆ ಹುಡುಕುತ್ತ, ಏನಾದನೋ ಎಂಬ ದುಗುಡದಿಂದ

ಕಮಲಿನಿಗೆ ಕಮಲಬಂಧುಗೆ
ಕುಮುದಿನಿಗಾ ಕುಮುದಿನೀಶ್ವರಂಗೆಂತೀಗಳ್
ತಮಗಂತಿರ್ಪೆಡೆಗಳ್ ದೂ
ರಮಾದೊಡಂ ಪ್ರೀತಿ ಮಾಣದಾ ಕಲ್ಪಾಂತಂ ೧೭೨

ವ॥ ಅದಱಿಂದರಸಂಗೆ ಪೋಗಲ್ವೇೞ್ಕುಮೆಂದು ನುಡಿಯೆ ಕಾದಂಬರಿಯಿಂತೆಂದಳ್

ತವಗಿಂ ಪೆಱತೇಂ ಸ್ವಾಧೀ
ನವೆನಿಪ ಪರಿಜನದೊಳೆನ್ನ ಮನದೊಳ್ ಬೇಱಿಂ
ಬವಳಾನಲ್ಲಣಮದಱಿಂ
ದವಕ್ಕ ಮತ್ತಾರ್ಗೆ ತಾವಿದಂ ಪೇೞ್ದಪಿರೌ ೧೭೩

ವ॥ ಎಂದು ನುಡಿದು ಗಂಧರ್ವಕುಮಾರರಂ ಕರೆದರಸನಂ ಬೀಡಿಂಗೆಯ್ದಿಸಿಮೆಂದು ಪೇೞ್ದು ವಿದಗ್ಧವಿದ್ಯಾಧರನೆೞ್ದು ಮಹಾಶ್ವೇತೆಗೆ ನಮಸ್ಕಾರಂಗೆಯ್ದು ಕಾದಂಬರಿಗೆ ಕೆಯ್ಗಳಂ ಮುಗಿದು

ಪಿರಿದು ನುಡಿಯೇವುದೆನಗಿಂ
ಪರಿಜನದೊಳಗೊರ್ವನೆಂದು ದೇವಿಯರೆನ್ನಂ
ಪರಿಭಾವಿಪುದೆಂಬಿದನುಸಿ
ರ್ದರಸಂ ಪೊಱಮಟ್ಟನಾಗಳಂತಃಪುರಮಂ ೧೭೪

ಇವನನ್ನು ಕಾಣುವವರೆಗೂ ಸಂತಾಪಗೊಳ್ಳದೆ ಇರುವುದಿಲ್ಲ. ೧೭೨. ತಾವರೆ ಬಳ್ಳಿಗೂ [ತಾವರೆಗೆಳೆಯನಾದ ಸೂರ್ಯನಿಗೂ, ನೈದಿಲೆಬಳ್ಳಿಗೂ ನೈದಿಲೆಯೆರೆಯನಾದ ಚಂದ್ರನಿಗೂ ಹೇಗೋ ಹಾಗೆಯೆ ಈಗ ನಿಮ್ಮಿಬ್ಬರಿಗೂ ಈಗಿನ ಸ್ಥಿತಿಯಲ್ಲಿ ದೂರವಾದರೂ ಪ್ರೀತಿ ಮಾತ್ರ ಕಲ್ಪಪರ್ಯಂತ ತಪ್ಪುವುದಿಲ್ಲ." ವ॥ ಅದರಿಂದ ಅರಸನು ಹೋಗಬೇಕೆಂದು ಹೇಳಲಾಗಿ ಕಾದಂಬರಿಯು ಹೀಗೆ ಹೇಳಿದಳು. ೧೭೩. "ಚಂದ್ರಾಪೀಡಮಹಾರಾಜನಿಗೆ ಅಧೀನವಾಗಿರುವ ಅವನ ಸೇವಕಳಾಗಿರುವ ನನ್ನ ವಿಷಯದಲ್ಲಿ ನಿಮಗೆ ನಾನು ಇನ್ನು ಬೇರೆ ಹೇಳಬೇಕಾದದ್ದೇನಿದೆ? ನನ್ನ ಮನಸ್ಸಿನಲ್ಲಿ ನಾನು ನನಗೂ ಅವನಿಗೂ ಭೇದವನ್ನು ಸ್ವಲ್ಪವೂ ಎಣಿಸತಕ್ಕವಳಲ್ಲ. ಅದರಿಂದ, ಅಕ್ಕ, ಈ ಮಾತನ್ನು ನೀವು ಯಾರಿಗೆ ಹೇಳುತ್ತೀರಿ?" ವ॥ ಎಂದು ಹೇಳಿ ಗಂಧರ್ವ ಕುಮಾರರನ್ನು ಕರೆದು "ಅರಸನನ್ನು ಅವನ ಶಿಬಿರಕ್ಕೆ ಕಳುಹಿಸಿ ಬನ್ನಿ" ಎಂದು ಹೇಳಲಾಗಿ, ನಿಪುಣಾಗ್ರೇಸರನಾದ ಚಂದ್ರಾಪೀಡನು ಎದ್ದು ಮಹಾಶ್ವೇತೆಗೆ ನಮಸ್ಕಾರ ಮಾಡಿ, ಕಾದಂಬರಿಗೆ ಕೈಮುಗಿದು ೧೭೪. "ನನಗೆ ಇನ್ನು ಹೆಚ್ಚುಮಾತು ಏತಕ್ಕೆ? ದೇವಿಯರು ನನ್ನನ್ನು ನಿಮ್ಮ ಪರಿಜನರಲ್ಲಿ ಒಬ್ಬನೆಂದು ಭಾವಿಸಿಕೊಳ್ಳಬೇಕು" ಎಂದು

ವ॥ ಅಂತು ಪೊಱಮಡೆ

ಬರತೆಗೆದುದೊ ನೃಪನ ಗುಣೋ
ತ್ಕರಮೆನೆ ಕಳುಪಲ್ಕೆ ಕಡೆಯ ಬಾಗಿಲ್ವಾಡಂ
ಬರೆಗಂ ಬಂದುದು ಕಾದಂ
ಬರಿ ಪೊಱತಾಗಖಿಳ ಕನ್ಯಕಾನಿಕುರುಂಬಂ ೧೭೩

ವ॥ ಆಗಳಾ ಕನ್ನಿಕೆಯರಂ ಮಗುಟ್ಚಿ ಕೇಯೂರಕಂ ಸಾರ್ಚಿದಿಂದ್ರಾಯುಧಮನೇಱಿ ಗಂಧರ್ವರಾಜಕುಮಾರರೊಡನೆ ಹೇಮಕೂಟದಿಂ ಪೊಱಮಟ್ಟು ಪೋಗುತ್ತಮಿರ್ದು

ಅಗಲಲಸಹ್ಯಮೆಂದು ಪೆಱಗೀಬಟಿಸಲ್ವಳೆ ಮುಂದೆ ಬಂದಳೀ
ತಗೆವೊಡೆ ಚಿತ್ರದುತ್ಕಲಿಕೆಯಿಂ ನಭಕೀ ನೆಗೆತಂದಳಾಗಳುಂ
ಮೊಗಮನೆ ನೋಡಲೆಂದುರದೊಳೀ ನೆಲಸಿರ್ದಪಳೆಂದೆನುತ್ತಮಾ
ಮೃಗಶಿಶುನೇತ್ರೆಯುಂ ಬಿಡದೆ ಭಾವಿಸಿದಂ ನೃಪರೂಪಚಂದ್ರಮಂ ೧೭೬

ವ॥ ಅಂತು ಪೊಗೆವೋಗೆ ಮಹಾಶ್ವೇತಾಶ್ರಮದಚ್ಛೋದಸರೋವರದ ತೀರದೊಳಿಂದ್ರಾಯುಧದ ಪಜ್ಜೆವಿಡಿದು ಬಂದು ಬಿಟ್ಟಿರ್ದ ನಿಜಸ್ಕಂಧಾವಾರಮಂ ಕಂಡಾ ಗಂಧರ್ವ

ಹೇಳಿ ಚಂದ್ರಾಪೀಡನು ಅಂತಃಪುರದಿಂದ ಹೊರಟನು. ವ॥ ಹಾಗೆ ಹೊರಡಲಾಗಿ ೧೭೩. ಚಂದ್ರಾಪೀಡನ ಗುಣಸಮೂಹದಿಂದ ಆಕರ್ಷಿಸಲ್ಪಟ್ಟಂತೆ ಕಾದಂಬರಿಯೊಬ್ಬಳನ್ನು ಬಿಟ್ಟು ಅಂತಃಪುರದ ಹುಡುಗಿಯರ ಗುಂಪೆಲ್ಲಾ ಅವನನ್ನು ಕಳುಹಿಸಿಕೊಡುವುದಕ್ಕಾಗಿ ಹೊರಬಾಗಿಲವರೆಗೂ ಬಂದಿತ್ತು. ವ॥ ಆಗ ಆ ಕನ್ನಿಕೆಯರನ್ನು ಹಿಂದಕ್ಕೆ ಕಳುಹಿಸಿ, ಕೇಯೂರಕನು ತಂದು ನಿಲ್ಲಿಸಿದ ಇಂದ್ರಾಯುಧವನ್ನು ಹತ್ತಿ ಗಂಧರ್ವರಾಜಕುಮಾರರೊಂದಿಗೆ ಹೇಮಕೂಟದಿಂದ ಹೊರಟುಹೋಗುತ್ತಿದ್ದು ೧೭೬. "ಇಗೋ ಬಿಟ್ಟಿರಲು ಸಾಧ್ಯವೇ ಇಲ್ಲವೆಂದು ನನ್ನನ್ನೇ ಹಿಂಬಾಲಿಸುತ್ತಿದ್ದಾಳೆ. ಇಗೋ, ನನ್ನನ್ನು ಹೋಗಬೇಡವೆಂದು ತಡೆಯುವುದಕ್ಕಾಗಿ ಮುಂದೆ ಬಂದಿದ್ದಾಳೆ. ಇದೋ, ಮನಸ್ಸಿನ ಕುತೂಹಲದಿಂದ ಆಕಾಶಕ್ಕೆ ಹಾರಿ ಬಂದಿದ್ದಾಳೆ. ಯಾವಾಗಲೂ ಮುಖವನ್ನೇ ನೋಡಿಕೊಂಡಿರಬೇಕೆಂದು ವಕ್ಷಸ್ಥಳದಲ್ಲೇ ನೆಲೆಸಿದ್ದಾಳೆ" ಎನ್ನುತ್ತಾ ಎಳೆಯ ಜಿಂಕೆಯಂತೆ ಕಣ್ಣುಳ್ಳ ಕಾದಂಬರಿಯನ್ನು ಚಂದ್ರಾವತಾರನಾದ ಚಂದ್ರಾಪೀಡನು ಚಿಂತಿಸುತ್ತಿದ್ದನು. ವ॥ ಹಾಗೆ ಹೋಗುತ್ತಾ ಹೋಗುತ್ತಾ ಮಹಾಶ್ವೇತಾಶ್ರಮದಲ್ಲಿರುವ ಅಚ್ಛೋದ ಸರೋವರದ ದಡದಲ್ಲಿ ಇಂದ್ರಾಯುಧದ ಹೆಜ್ಜೆಯನ್ನು ಅನುಸರಿಸಿ ಬಂದು, ಬೀಡು ಬಿಟ್ಟಿದ್ದ ತನ್ನ ಪಾಳಯವನ್ನು ಕಂಡು ಆ ಗಂಧರ್ವಕುಮಾರರನ್ನು ಹಿಂದಕ್ಕೆ ಕಳುಹಿಸಿ

ಕುಮಾರರಂ ಮಿಗುಬ್ಬಿ ಕಟಕಜನಮಾನಂದಮುಮತಿಕೌತುಕಮುಮಂ ಕಯ್ಗಣ್ಮೆ ತನತನಗೆ ಪೊಡ ಮಡುತ್ತಿರಲರಮನೆಯಂ ಪೊಕ್ಕು ವೈಶಂಪಾಯನನುಂ ಪತ್ರಲೇಖೆಯುಂ ಬೆರಸು ಸಕಲ ರಾಜ ಲೋಕಮಂ ಮನ್ನಿಸಿ ತನ್ನ ಪೋದ ಬಂದ ವೃತ್ತಾಂತಮೆಲ್ಲಮಂ ಪೇಳುತ್ತಮಾ ಪಗಲಂ ಕಳೆದು

ತರಳಾಕ್ಷಿಯನಾ ಕಾದಂ
ಬರಿಯಂ ರಣರಣಕ ವಿಕಲಹೃದಯದಿನೋರಂ
ತಿರೆ ಚಿಂತಿಸುತ್ತಮಿರ್ದಾ
ಯಿರುಳನದೆಂತಾನುಮವನಿಪಾಲಂ ಕಳೆದಂ ೧೭೭

## ಕಾದಂಬರಿಯ ಪ್ರಥಮ ಸಂದರ್ಶನ

ಸಮಾಪ್ತ

ದನು. ಶಿಬಿರದ ಜನರೆಲ್ಲರೂ ಸಂತೋಷ ಮತ್ತು ಆಶ್ಚರ್ಯವು ಹೆಚ್ಚುತ್ತಿರಲು ತಾವು ತಾವಾಗಿ ನಮಸ್ಕರಿಸುತ್ತಿದ್ದರು. ಬಳಿಕ ಬಿಡದಿಯನ್ನು ಸೇರಿ ವೈಶಂಪಾಯನ ಮತ್ತು ಪತ್ರಲೇಖೆಯೊಂದಿಗೆ ಕೂಡಿಕೊಂಡು ಸಾಮಂತರಾಜರನ್ನು ಗೌರವಿಸಿ, ತಾನು ಹೋಗಿ ಬಂದ ವೃತ್ತಾಂತವೆಲ್ಲವನ್ನೂ ಹೇಳುತ್ತಾ ಆ ಹಗಲನ್ನು ಕಳೆದನು, ೧೭೭. ಚಂದ್ರಾ ಪೀಡನು ಚಂಚಲನೇತ್ರೆಯಾದ ಕಾದಂಬರಿಯನ್ನು ವಿರಹವ್ಯಥೆಯಿಂದ ಬೇಸತ್ತ ಮನಸ್ಸಿನಿಂದ ಒಂದೇಸಮನೆ ಚಿಂತಿಸುತ್ತಾ ಆ ರಾತ್ರಿಯನ್ನು ಹೇಗೋ ಕಳೆದನು.

## ಕಾದಂಬರಿಯ ಪ್ರಥಮ ಸಂದರ್ಶನ

ಮುಗಿಯಿತು

## ೭. ಕಾದಂಬರಿಯ ದ್ವಿತೀಯ ಸಂದರ್ಶನ

ವ॥ ಅಂತು ಕಳೆದಾ ಮಱುದಿವಸಮಾ ಕನ್ನೆಯನೆ ನೆನೆವುತ್ತಮಾಸ್ಥಾನಮಂಟಪ ದೊಳಿರ್ಪನ್ನೆಗಂ ಪಡಿಯಱಂಬೆರಸು ಕೇಯೂರಕಂ ಭೋಂಕನೆ ಬಂದು

ವಿನಯಂ ಕೈಗಣ್ಮಿ ದೂರಾಂತರದೊಳೆಱಗೆ ಕಂಡಿತ್ತಬಾಯಿತ್ತಬಾಯೆಂ
ಬಿನವೈತಂದಂಘ್ರಿಪದ್ಮಕ್ಕೆಱಗೆ ತೆಗೆದು ತಟ್ಟೈಸಿದಂ ಪ್ರೀತಿಯಿಂ ಮು
ನ್ನ ನಿಜಾಪಾಂಗಾವಲೋಕಂ ಬೞಿಕೆ ಹೃದಯವಲ್ಲಿಂ ಬೞಿಕ್ಕಂತೆ ರೋಮಾಂ
ಚನಿಕಾಯೋದ್ಭೇದವಲ್ಲಿಂ ಬೞಿಕ ಭುಜಯುಗಂ ಸುತ್ತೆ ರಾಜೇಂದ್ರಚಂದ್ರಂ ೧

ವ॥ ಅನಂತರಂ

ಒಸರ್ದಪುದು ನುಡಿಯೊಳೊಲವಿನ
ರಸವೆನೆ ನಸುವೆಳ್ಪು ಮಂದಮಂದಸ್ಮಿತದಿಂ
ಪಸರಿಸುತಿರೆ ಯುವರಾಜಂ
ಬೆಸಗೊಂಡಂ ಪ್ರೀತಿಯಿಂದೆ ಕೇಯೂರಕನಂ ೨

ಅರಸಿಯರ್ಗೆ ಮಹಾಶ್ವೇತೆಗೆ
ಪರಿಜನನಿವಹಕ್ಕೆ ಕುಶಲಮೋ ಪೇೞೆನಲಾ
ದರದಿಂದೆ ದೇವ ನೀವಿಂ
ತಿರೆ ಬೆಸಗೊಂಡಂತೆ ಕುಶಲಮಂತವರ್ಗೆಲ್ಲಂ ೩

ವ॥ ಹಾಗೆ ರಾತ್ರಿಯನ್ನು ಕಳೆದು ಮರುದಿವಸ ಆ ಕಾದಂಬರಿಯನ್ನೇ ನೆನೆಯುತ್ತಾ ಆಸ್ಥಾನಮಂಟಪದೊಳಗಿದ್ದನು, ಆಗ ದ್ವಾರಪಾಲಕನೊಂದಿಗೆ ಕೇಯೂರಕನು ತಟ್ಟನೆ ಬಂದು, ೧. ಬಹಳ ವಿನಯದಿಂದ ದೂರದಲ್ಲೇ ನಮಸ್ಕರಿಸಿದನು, ಅವನನ್ನು ನೋಡಿ ಚಂದ್ರಾಪೀಡನು "ಈ ಕಡೆ ಬಾ, ಈ ಕಡೆ ಬಾ" ಎಂದು ಕರೆದನು. ಅವನು ಬಂದು ಪಾದ ಕಮಲಕ್ಕೆ ನಮಸ್ಕರಿಸಿದನು. ಚಂದ್ರಾಪೀಡನು ಅವನನ್ನು ಮೊದಲು ತನ್ನ ಕಡೆಗಣ್ಣಿನ ನೋಟವೂ, ಬಳಿಕ ಹೃದಯವೂ, ಆಮೇಲೆ ನಿಮಿರಿದ ರೋಮಾಂಚಸಮೂಹವೂ, ಆ ಮೇಲೆ ಎರಡು ತೋಳುಗಳೂ ಸುತ್ತುಗಟ್ಟಲು ಬಾಚಿ ತಬ್ಬಿಕೊಂಡನು. ವ॥ ಆಮೇಲೆ ೨. ಮಾತಿನಲ್ಲಿ ಪ್ರೀತಿಯರಸವು ಜಿನುಗುತ್ತಿದೆಯೋ ಎಂಬಂತೆ ಮಂದಹಾಸದಿಂದ ನಸುಬಿಳುಪು ಹರಡುತ್ತಿರಲು ಯುವರಾಜನು ಪ್ರೀತಿಯಿಂದ ಕೇಯೂರಕನನ್ನು ಕೇಳಿದನು. ೩. "ಕೇಯೂರಕ, ಕಾದಂಬರೀದೇವಿಗೂ ಮಹಾಶ್ವೇತೆಗೂ ಪರಿಜನರ ಸಮುದಾಯಕ್ಕೂ ಕ್ಷೇಮವೆ ? ಹೇಳು" ಎಂದು ಆದರದಿಂದ ಕೇಳಲು, ಅವನು "ಪ್ರಭುವೆ

ವ॥ ಎಂದಾಗಳಿರ್ಪುವೊರೆದ ದುಗುಲದ ಬಾಸಣಿಗೆಯಂ ಕಳೆದು ತಾವರೆಯ ನೂಲಿಂ ಸುತ್ತಿದ ಸಿರಿಕಂಡದುರುಳಿಯಿಂ ಪತ್ತಿಸಿದ ಮೃಣಾಳನಾಳವಲಯದಿಂ ಮುದ್ರಿಸಿದ ನಳಿನೀಪತ್ರ ಪುಟಮಂ ತೆಗೆದು ಕಾದಂಬರೀದೇವಿಯಟ್ಟಿದ ಮದನವೇದನೆಯ ವಿನ್ನಾಣಂಗಳಪ್ಪ ಪಸುರೆಸೆವ ಪಾಲಡಿಕೆಯ ಗೊಂಚಲಮಂ ಖಚರಕಾಮಿನಿಯರ ಕದಂಪಿನ ಬೆಳ್ಪನಪ್ಪುಕೆಯ್ದು ಕಪ್ಪುರವಳ್ಳಿಯ ಬಿಳಿಯೆಲೆಯ ವೀಳೆಯುಮಂ ಎಳೆವೆಱೆಯ ಮುಱಿಗಳನೇಳಿಪ ಕಪ್ಪುರದ ಪಳುಕುಗಳುಮಂ ಕತ್ತುರಿಯ ಕಂಪಿನಿಂ ಸೊಂಪಂ ತಳೆದ ಮಲಯಜವಿಲೇಪನಮುಮನರಸಂಗೆ ತೋಱಿ ಕಾದಂಬರಿಯ ಚೂಡಾಮಣಿ ಮರೀಚಿರಂಜಿತಾಂಜಲಿ ಸಮಭ್ಯರ್ಚನಮುಮಂ ಮಹಾಶ್ವೇತೆಯ ಕಂಠಗ್ರಹಕುಶಲವಚನಸಂಬೋಧನಮುಮಂ •ಮದಲೇಖೆಯ ನಮಸ್ಕಾರಮುಮಂ ತಮಾಲಿಕೆಯ ಪಾದಪ್ರಣಾಮುಮಂ ಬಿನ್ನವಿಸಿ ಮಹಾಶ್ವೇತೆಯಿಂತೆಂದಟ್ಟಿದಳದೆಂತೆನೆ

ಹಿಮಕರಮಯಮೆನಿಸಿದ ನಿಜ
ವಿಮಲಗುಣವ್ರಜಮೆ ತನ್ನಗಲ್ಕೆಯೊಳುಷ್ಣಾಂ
ಶುಮಯಮೆನಿಸಿದಪುವೆನೆ ಮು
ನ್ನಮೆ ತನ್ನಂ ಕಾಣದಿರ್ಪುದದು ಸುಖಮಲ್ತೇ ೪

ನೀವು ಕೇಳಿದಂತೆ ಅವರೆಲ್ಲರೂ ಕ್ಷೇಮವಾಗಿದ್ದಾರೆ" ವ॥ ಎಂದು ಹೇಳಿ ಆಗ ಒದ್ದೆ ಯಾದ ಬಟ್ಟೆಯ ಹೊದಿಕೆಯನ್ನು ತೆಗೆದು ತಾವರೆಯ ನೂಲಿನಿಂದ ಸುತ್ತಿರುವ ತಾವರೆ ದಂಟನ್ನು ಬಳೆಯಂತೆ ಸುತ್ತಿ ಕಟ್ಟಿ, ಅದರ ಮೇಲೆ ದಟ್ಟವಾಗಿ ಗಂಧವನ್ನು ಲೇಪಿಸಿ ಮೊಹರು ಮಾಡಿರುವ ಒಂದು ತಾವರೆಯೆಲೆಯ ದೊನ್ನೆಯನ್ನು ತೆಗೆದು ಕಾದಂಬರೀ ದೇವಿಯು ಕಳುಹಿಸಿದ ತನ್ನ ವಿರಹವೇದನೆಗೆ ಸೂಚಕವಾದ ಹಸುರುಬಣ್ಣದಿಂದ ಕೂಡಿರುವ ಹಸಿಯಡಕೆಯ ಗೊಂಚಲನ್ನೂ, ದೇವತಾಸ್ತ್ರೀಯರ ಕೆನ್ನೆಯಂತೆ ಬೆಳ್ಳಗಿರುವ ಕರ್ಪೂರದಬಳ್ಳಿಯ ಬಿಳಿಯೆಲೆಯ ವೀಳೆಯವನ್ನೂ, ಬಾಲಚಂದ್ರನ ಭಾಗಗಳನ್ನು ತಿರಸ್ಕರಿಸುವ (ಬಾಲಚಂದ್ರನ ಭಾಗಗಳಂತಿರುವ) ಕರ್ಪೂರದ ಚೂರುಗಳನ್ನೂ, ಕಸ್ತೂ ರಿಯ ವಾಸನೆಯಿಂದ ಮನೋಹರವಾದ ಶ್ರೀಗಂಧದ ವಿಲೇಪನವನ್ನೂ ಚಂದ್ರಾಪೀಡನಿಗೆ ತೋರಿಸಿ, ಕಾದಂಬರೀದೇವಿಯು ತನ್ನ ತಲೆಮಣಿಯ ಕಿರಣಗಳಿಂದ ಹೊಳೆಯುತ್ತಿರುವ ಬೊಗಸೆಯನ್ನು ಜೋಡಿಸಿ ಮಾಡುವ (ತಲೆಯ ಮೇಲೆ ಅಂಜಲಿಯನ್ನಿಟ್ಟು ಮಾಡುವ) ನಮಸ್ಕಾರವನ್ನೂ, ಮಹಾಶ್ವೇತೆಯ ಸ್ನೇಹಾಲಿಂಗನಪೂರ್ವಕವಾದ ಕುಶಲಪ್ರಶ್ನೆ ಯನ್ನೂ, ಮದಲೇಖೆಯ ನಮಸ್ಕಾರವನ್ನೂ, ತಮಾಲಿಕೆಯ ಪಾದಪ್ರಣಾಮವನ್ನೂ ಅರಿಕೆಮಾಡಿ, ಮಹಾಶ್ವೇತೆಯು ಹೀಗೆ ಹೇಳಿಕಳುಹಿಸಿದ್ದಾಳೆ ಎಂದನು. ಏನೆಂದರೆ, ೪. "ಯುವರಾಜ, ಮೊದಲು ನಿನ್ನನ್ನು ನೋಡದಿದ್ದರೇ ಬಹಳ ಸುಖವಾಗಿತ್ತು. ಏಕೆಂದರೆ, ನಿನ್ನ ಭೇಟಿಯ ಕಾಲದಲ್ಲಿ ತಂಪಾದ ಕಿರಣಗಳುಳ್ಳ ಚಂದ್ರನಿಂದ ನಿರ್ಮಿ ಸಲ್ಪಟ್ಟಂತಿದ್ದ ನಿನ್ನ ಗುಣಸಮುದಾಯವು ನೀನು ಅಗಲಿದ ಮೇಲೆ ಬಿಸಿಯಾದ ಕಿರಣ ಗಳುಳ್ಳ ಸೂರ್ಯನಿಂದ ಮಾಡಲ್ಪಟ್ಟಂತೆ ಆಗಿವೆ. ಟಿ. ನಿನ್ನ ಭೇಟಿಯು

ಅಮೃತೋತ್ಪತ್ತಿಯ ದಿವಸಂ
ಸಮನಿಸಿತೆಂಬಂತೆ ದೈವದಿಂದೆಂತಾನುಂ
ಸಮನಿಸಿದಾ ನಿನ್ನಿನ ದಿವ
ಸಮನೀನಾಂ ಬಿಡದೆ ಬಯಸುತಿರ್ದಪುದು ಜನಂ ೫

ವ॥ ಮತ್ತಂ ತನ್ನಗಲ್ಕೆಯಿಂ ಗಂಧರ್ವರಾಜನಂದನೆಗೆ ಶೀತೋಷ್ಣಭವನಮದು ಮದುವೆಗಳಿಪಿದ ಮನೆಯಂತೆ ನಿರ್ವೃತ್ತ ಮಹೋತ್ಸವಮಾಗಿರ್ಪುದಂತುಮಲ್ಲದೆಯುಂ

ವಿದಿತೆಯೆನಾಂ ತನಗೆಲ್ಲಂ
ದದೊಳಂ ಪರಿಹೃತ ಸಮಸ್ತಸಂಗೆಯನೆನ್ನೀ
ಹೃದಯಂ ನೋಡಲ್ಬಯಸಿದ
ಪುದಕಾರಣಪಕ್ಷಪಾತಿಯೆನಿಸಿದ ತನ್ನಂ ೬

ತನು ಬಸಮಲ್ತು ಮತ್ಸಖಿಗೆ ಮನ್ಮಥನನ್ನನೆನಿಪ್ಪ ತನ್ನುಮಂ
ನೆನೆದಪಳೊರ್ಮೆ ಬಂದೆನಗೆ ಮಾಳ್ಪುದು ಪೆರ್ಮೆಯ ನಿಮ್ಮ ನಣ್ಪನಿಂ
ಜನಿಯಿಸಿದೀ ಕದರ್ಥನೆಗೆ ಸೈರಿಪುದಿಲ್ಲಿಗೆ ಬರ್ಪುದೆಂದು ಪೇ
ಳ್ದಿನಿವಿರಿದೊಂದು ದರ್ಪಮೆನಗಾದುದು ತನ್ನಯ ನಿರ್ಮಳತ್ವದಿಂ ೭

ಸುಖಮಯವಾಗಿತ್ತು. ಈಗ ಅಗಲಿಕೆಯು ಕೇವಲ ದುಃಖಮಯವಾಗಿದೆ ಎಂದು ತಾತ್ಪರ್ಯ. ೫. ಸುದೈವದಿಂದ ನಿನ್ನ ದರ್ಶನಭಾಗ್ಯವುಂಟಾದ ನೆನ್ನೆದಿನವು ಅಮೃತವು ಹುಟ್ಟಿದ ದಿವಸವೇ ಒದಗಿಬಂದಂತೆ ಬಹಳ ಆಪ್ಯಾಯಮಾನವಾಗಿತ್ತು. ಆ ದಿನವನ್ನೇ ನನ್ನಿಂದ ಮೊದಲ್ಗೊಂಡು ಇಡೀ ಗಂಧರ್ವಲೋಕದ ಜನರೆಲ್ಲರೂ ಮತ್ತೆ ಬಯಸುತ್ತಿದ್ದಾರೆ. ವ॥ ಮತ್ತು ನಿನ್ನ ವಿಯೋಗದಿಂದ ಗಂಧರ್ವ ರಾಜಪುತ್ರಿಯಾದ ಕಾದಂಬರಿಗೆ ವಾಸಸ್ಥಾನವಾದ ಶೀತೋಷ್ಣಭವನವು (ಶೀತವೂ ಉಷ್ಣವೂ ಸಮನಾಗಿದ್ದು ಹಿತಕರವಾದ ಮನೆ), ಮದುವೆ ಮುಗಿದ ಮನೆಯಂತೆ ಸಡಗರವು ನಿಂತು ಬಿಕೋ ಎನ್ನುತ್ತಿದೆ. ಅದಲ್ಲದೆ, ೬. ನಾನು ಎಲ್ಲಾ ಬಗೆಯಲ್ಲೂ ಸರ್ವಸಂಗ ಪರಿತ್ಯಾಗ ಮಾಡಿರುವಳೆಂಬುದು ನಿನಗೆ ಗೊತ್ತೇ ಇದೆ. ಇಂತಹ ನನ್ನ ಮನಸ್ಸು ಯಾವ ಕಾರಣವಿಲ್ಲದಿದ್ದರೂ ನನ್ನ ಮೇಲೆ ಮಮತೆಯನ್ನಿಟ್ಟಿರುವ ನಿನ್ನನ್ನು ನೋಡಬೇಕೆಂದು ಬಯಸುತ್ತಿದೆ. ೭. ನನ್ನ ಗೆಳತಿಯಾದ ಕಾದಂಬರಿಗಂತೂ ನಿನ್ನ ಅಗಲಿಕೆಯಿಂದ ಶರೀರದ ಮೇಲಿನ ಹತೋಟಿಯೇ ತಪ್ಪಿಹೋಗಿದೆ. ಮನ್ಮಥನಿಗೆ ಸಮಾನನಾದ ನಿನ್ನನ್ನು ನೆನೆಸಿಕೊಳ್ಳುತ್ತಿದ್ದಾಳೆ. ಮತ್ತೊಮ್ಮೆ ಬಂದು ನನಗೆ ಹೆಮ್ಮೆಯನ್ನುಂಟುಮಾಡು. ನಿನ್ನೊಂದು ಸ್ನೇಹದಿಂದ ನಾನು ಕೊಡುತ್ತಿರುವ ಕಾಟವನ್ನು ಕ್ಷಮಿಸಬೇಕು. ಇಲ್ಲಿಗೆ ಬರಬೇಕೆಂದು ಹೇಳಿಕಳುಹಿಸುವಷ್ಟು ದಿಟ್ಟತನವು ನನಗೆ ಉಂಟಾಗಿರು

ವ॥ ಎಂದು ನುಡಿಯಲ್ ಪೇಟ್ಟಿಳಿದಲ್ಲದೆಯುಂ

ಇದನಂದಾ ಶಯನೀಯದೊಳ್ ಮಱೆತು ದೇವರ್ಬಂದಿರೆಂದೀಗಳ
ಟ್ಟಿದಳೆಂದೊಯ್ಯನೆ ಚಾಮರಾಂಗನೆಯ ಕೆಯ್ಯೊಳ್ ಕೊಟ್ಟನಾತ್ಮೋತ್ತರೀ
ಯ ದುಕೂಲಾಂಚಲ ಸೂಕ್ಷ್ಮಸೂತ್ರ ವಿವರವ್ರಾತಂಗಳಿಂ ಕೂಡೆ ನು
ಣ್ಗದಿರ್ಗಳ್ ಸೂಸುವ ಶೇಷವೆಂಬವಮಳ ತಾರೋದಾರಮಂ ಹಾರಮಂ ೮

ವ॥ ಕುಡುವುದುಂ ವಿದಗ್ಧವಿದ್ಯಾಧರನಿಂತೆಂದಂ

ಪದಪಿಂ ತಮ್ಮಾಳ್ಗಳನಿಂ
ತು ದೇವಿಯರ್ ನೆನೆವುದೆಂಬುದಿದು ಸಕಲಗುಣಾ
ಸ್ಪದೆಯೆನಿಪ ಮಹಾಶ್ವೇತೆಯ
ಪದಕಮಲಾರಾಧನೆಯ ತಪಃಫಲಮಲ್ತೇ ೯

ವ॥ ಎನುತ್ತಮೆಲ್ಲಮಂ ಪ್ರೀತಿವೆರಸು ತಾನೇ ಕೆಯ್ಕೊಂಡು ಕಿಱಿದುಬೇಗಮಿರ್ದಲ್ಲಿಂದ ಮೆಟ್ಟು ಸನ್ಮಾನಪುರಸ್ಸರಮಖಿಳ ರಾಜಲೋಕಮುಮಂ ಪ್ರಧಾನ ನಿವಹಮುಮಂ ವಿಸರ್ಜಿಸಿ ಗಜಗಮನರಾಜಪುತ್ರಂ ಗಂಧಮಾದನ ನಾಗೇಂದ್ರನಲ್ಲಿಗೆ ಬಂದು ನಿಜನಖಾಂಶುಜಾಲಜಟಿಲಮಾಗಿ ಮೃಣಾಳನಾಳದಂತೆ ಸೊಗಯಿಸುವೆಳವುಲ್ಲಕವಳಮಂ ನೀಡುತ್ತಂ ಮದಲೇಖೆಗೆಱಗುವ ಚಂಚರೀಕ

ವುದಕ್ಕೆ ನಿಮ್ಮ ಸೌಜನ್ಯವೇ ಕಾರಣವಲ್ಲದೆ ಮತ್ತೆ ಬೇರೆ ಅಲ್ಲ." ವ॥ ಹೀಗೆ ಹೇಳಲು ತಿಳಿಸಿದ್ದಾಳೆ. ಅದಲ್ಲದೆ, ೮. "ಪ್ರಭುಗಳು ಇದನ್ನು ಆದಿನ ಹಾಸಿಗೆಯಲ್ಲೇ ಮರೆತು ಬಂದುಬಿಟ್ಟಿರೆಂದು ಈಗ ಅದನ್ನು ಕಳುಹಿಸಿದ್ದಾಳೆ" ಎಂದು ಹೇಳಿ ತನ್ನ ಹೊದೆಯುವ ಬಟ್ಟೆಯ ಸೆರಗಿನ, ಸಣ್ಣ ಸಣ್ಣ ಎಳೆಗಳ ತೂತುಗಳಿಂದ ಒಟ್ಟಿಗೆ ಹೊರಸೂಸುತ್ತಿರುವ ಸೊಗಸಾದ ಕಾಂತಿಗಳಿಂದ ಕೂಡಿರುವ, ಹಿಂದೆ ಕೊಟ್ಟಿದ್ದ ಶೇಷವೆಂಬ ಸ್ವಚ್ಛವಾದ ಹಾಗೂ ಶ್ರೇಷ್ಠವಾದ ಮುತ್ತಿನ ಹಾರವನ್ನು ಚಾಮರಿತಿಯ ಕೈಗೆ ಮೆಲ್ಲನೆ ಕೊಟ್ಟನು. ವ॥ ಕೊಡಲಾಗಿ ರಸಿಕಾಗ್ರೇಸರನಾದ ಚಂದ್ರಾಪೀಡನು ಹೀಗೆಂದನು. ೯. "ಕಾದಂಬರೀ ದೇವಿಯರು ತಮ್ಮ ಸೇವಕರನ್ನು ಹೀಗೆ ಪ್ರೀತಿಯಿಂದ ಸ್ಮರಿಸುವುದೆಂಬುದು ಸಮಸ್ತ ಗುಣಗಳಿಗೂ ನೆಲೆಯೆನಿಸಿರುವ ಮಹಾಶ್ವೇತೆಯ ಪಾದಕಮಲಗಳ ಸೇವೆಯೆಂಬ ತಪಸ್ಸಿನ ಫಲವೇ ಅಲ್ಲವೆ ?" ವ॥ ಎಂದು ಹೇಳುತ್ತ ಅವೆಲ್ಲವನ್ನೂ ಪ್ರೀತಿಯಿಂದ ತೆಗೆದು ಕೊಂಡು ಸ್ವಲ್ಪಕಾಲವಿದ್ದು, ಅಲ್ಲಿಂದ ಎದ್ದು, ಸನ್ಮಾನಪೂರ್ವಕವಾಗಿ ಸಮಸ್ತ ರಾಜ ರನ್ನೂ ಸಮಸ್ತ ಮಂತ್ರಿಗಳನ್ನೂ ಕಳುಹಿಸಿ, ಆನೆಯಂತೆ ನಡಗೆಯುಳ್ಳ ರಾಜಪುತ್ರನು ಗಂಧಮಾದನವೆಂಬ ಆನೆಯ ಸಮೀಪಕ್ಕೆ ಬಂದನು. ತನ್ನ ಉಗುರುಗಳ ಕಾಂತಿಯಿಂದ ಕೂಡಿಕೊಂಡು, ತಾವರೆಯ ದಂಟಿನಂತೆ ಮನೋಹರವಾದ ಎಳೆಯ ಹುಲ್ಲುಗಳ ಕವಳ ವನ್ನು ಆ ಆನೆಗೆ ತಿನ್ನಿಸಿದನು. ಅದರ ಮದೋದಕದ ಧಾರೆಗೆ ಎರಗುತ್ತಿರುವ ದುಂಬಿಗಳ

ದಿಂಚರದಿನುತ್ಕಂಠಿತನಾಗಿ ವಲ್ಲಭವಾಜಿಯ ಮಂದುರದಲ್ಲಿಗೆ ಕೇಯೂರಕದ್ವಿತೀಯನಾಗಿ ಬಂದಿಂದ್ರಾಯುಧದ ಕುಂಕುಮಕಪಿಲಕೇಸರ ಸಟೆಯನೊಯ್ಯನೋಸರಿಸುತ್ತಂ ಖುರಮಣಿಕೆಯೊಳ್ ಕಾಲನಿಕ್ಕಿ ಮಂದುರದ ಮುಂಡಿಗೆಯುಂ ಮಲಂಗಿ ಕೌತುಕಂಬೆರಸು ಕೇಯೂರಕನನಿಂತೆಂದಂ

ಆನೆಟ್ಟಿಂದ ಬಟಿಕ್ಕೆ ಚಿತ್ರರಥರಾಜಾವಾಸದೊಳ್ ವಾರ್ತೆಯೇ
ನಾ ನೀರೇಜದಳಾಕ್ಷಿಗೇಂ ಬಿನದಮೇಗೆಯ್ವಳ್ ಮಹಾಶ್ವೇತೆ ತಾ
ನೇನೆಂಬಳ್ ಮದಲೇಖೆ ತತ್ಪರಿಜನಾಲಾಪಂಗಳೇನಲ್ಲಿ ನೀ
ನೇನಂ ಮಾಡುತಮಿರ್ದೆಯೆಂದು ಬೆಸಗೊಂಡಂ ಚಂದ್ರಚೂಡಾಹ್ವಯಂ ೧೦

ವ॥ ಎಂದು ಬೆಸಗೊಳ್ವುದುಂ ಕೇಯೂರಕಂ ದೇವರ್ ಬಿಜಯಂಗೆಯ್ಯಲೊಡನೆ

ಹೃದಯಭವಪ್ರಯಾಣಪಟಹಧ್ವನಿಯೆಂಬಿನಮೆತ್ತಲುಂ ಪೊದ
ಱ್ದುದವಿದ ರತ್ನನೂಪುರಕಲಾಪಕಲಧ್ವನಿಗಂಚೆವಿಂಡು ತಂ
ಡದಿನುಲಿವುತ್ತಿರಲ್ ಕೆಳದಿಯರ್ವೆರಸಾಗಳೆ ನಿಮ್ಮನೀಕ್ಷಿಸಲ್
ಪದೆದಿರದೇಱಿದಳ್ ತರುಣಿ ತನ್ನಯ ರನ್ನದ ಕನ್ನೆಮಾಡಮಂ ೧೧

ಇಂಪಾದ ದನಿಯಿಂದ ಲವಲವಿಕೆಯನ್ನು ಹೊಂದಿದನು. ಬಳಿಕ ಹಾಗೆಯೆ ಕೇಯೂರಕನೊಂದಿಗೆ ಒಳ್ಳೊಳ್ಳೆಯ ಕುದುರೆಗಳನ್ನು ಕಟ್ಟಿರುವ ಲಾಯಕ್ಕೆ ಬಂದನು. ಅಲ್ಲಿ ಇಂದ್ರಾಯುಧದ ಕಣ್ಣುಗಳ ಮೇಲೆ ಬೀಳುತ್ತಿದ್ದ ಕುಂಕುಮದಂತೆ ನಸುಕೆಂಬಣ್ಣದ ಕೊರಳು ಕೂದಲುಗಳ ಸಮೂಹವನ್ನು ಮೆಲ್ಲಮೆಲ್ಲನೆ ಪಕ್ಕಕ್ಕೆ ಸರಿಸುತ್ತಲೂ, ಕುದುರೆಯ ಕಾಲನ್ನು ಕಟ್ಟುವ ಗೂಟದ ಮೇಲೆ ಕಾಲನ್ನಿಟ್ಟುಕೊಂಡು ಲಾಯದ ಕಂಭವನ್ನು ಒರಗಿ ಕುತೂಹಲದಿಂದ ಕೂಡಿ ಕೇಯೂರಕನನ್ನು ಕುರಿತು ಹೀಗೆ ಹೇಳಿದನು. ೧೦. "ಕೇಯೂರಕ, ನಾನು ಈ ಕಡೆ ಬಂದ ಮೇಲೆ ಚಿತ್ರರಥನ ಅರಮನೆಯ ಸಮಾಚಾರವೇನು ? ಆ ಕಮಲಾಕ್ಷಿಯಾದ ಕಾದಂಬರಿಯು ಹೇಗೆ ಕಾಲ ಕಳೆಯುತ್ತಿದ್ದಾಳೆ ? ಮಹಾಶ್ವೇತೆಯು ಏನು ಮಾಡುತ್ತಿದ್ದಾಳೆ ? ಮದಲೇಖೆಯು ಏನು ಮಾಡುತ್ತಿದ್ದಾಳೆ ? ಅಲ್ಲಿ ಪರಿಜನರ ಮಾತುಕತೆಗಳೇನು ? ನೀನು ಏನು ಮಾಡುತ್ತಿದ್ದೆ ?" ಎಂದು ಚಂದ್ರಾಪೀಡನು ಕೇಳಿದನು. ವ॥ ಆಗ ಕೇಯೂರಕನು "ಪ್ರಭುಗಳು ಈಕಡೆ ಪ್ರಯಾಣ ಮಾಡಿದ ಮೇಲೆ ೧೧. ಕಾದಂಬರೀದೇವಿಯು ಮನ್ಮಥನ ಪ್ರಯಾಣಕಾಲದ ತಮಟೆಯ ಧ್ವನಿಯೋ ಎಂಬಂತೆ ಉಂಟಾಗಿ ಹರಡಿರುವ ರತ್ನದ ಕಾಲುಗಡಗಗಳ ಇಂಪಾದ ಶಬ್ದವನ್ನು ಕೇಳಿ ಹಂಸಗಳು ತಂಡತಂಡವಾಗಿ ದನಿಮಾಡುತ್ತಿರಲು, ಕೆಳದಿಯರೊಂದಿಗೆ ನಿಮ್ಮನ್ನು ನೋಡುವುದಕ್ಕಾಗಿ ಆಸಕ್ತಿಯಿಂದ ಕೂಡಲೆ ಅಂತಃಪುರದ ರತ್ನದ ಮಹಡಿ

ಪರಪುರುಷನೆನಿಪ್ಪ ದಿವಾ
ಕರನ ಕರಸ್ಪರ್ಶನಕ್ಕೆ ಸೈರಿಸದೆ ಸುಧಾ
ಕರಬಿಂಬಮನದ ಮಱೆಯಾ
ಗಿರಿಸಿದಳೆನಲೆತ್ತಿದತ್ತು ಧವಳಚ್ಛತ್ರಂ ೧೨

ವ॥ ಆಗಳ್ ಚಿತ್ರರಥನಂದನೆ ತುರಗಖುರಲುಳಿತಧೂಳೀಧೂಸರಮಪ್ಪ ಭವದ್ಗಮನ ಮಾರ್ಗಮಂ ನೋಡುತ್ತುಮಿರ್ದು ಕಿಱಿದುಬೇಗದಿಂ ನೀಂ ತಿರೋಹಿತದರ್ಶನನಪ್ಪುದುಮಾ ದಿಗಂತಮೆಲ್ಲಮಂ ದುಗ್ಧೋದಧಿಧವಳದೀರ್ಘಂಗಳಪ್ಪಪಾಂಗಾವಲೋಕನದಿಂ ತೇಂಕಾಡಿಸುತ್ತುಂ ಪಿರಿದುಬೇಗಮಲ್ಲಿಯೆ ನಿಂದು ಬಿಸುಸುಯ್ದಲ್ಲಿಂದಮೆಟ್ಟಿದ್ದು ಬಿಜಯಂಗೆಯ್ಯೆ

ಅಲರೆಡೆಪಿಡಿದಪ್ಪೆ ನೀಂ ಕೋ
ಮಲೆಯೆಂದಡಿಗಡಿಗೆವಂದು ಪೇೞ್ವಂದದೆ ಪೂ
ವಲಿಯಲ್ಲಿ ಜಿನುಗುತಿರ್ದುದು
ಬಲವಂದಳಿಮಾಲೆ ಮಧುರಮಂದ್ರಧ್ವನಿಯಿಂ ೧೩

ವ॥ ಮತ್ತಮಾ ಲಾವಣ್ಯವತಿಯ ಪದನಖಮಯೂಖಂಗಳಂ ಜಲಧಾರೆಗೆತ್ತುತ್ಕಂಠಂಗ ಳಾದ ಸೋಗೆಗಳ ಕೇಗುಗಳ್ಗಗಿದವರ ಕೊರಲಂ ಬಗಿವಂತೆ ಕೆಯ್ಯಿಂದಮರ್ಚುವ ಮಣಿಕಂಕಣಂ

ಯನ್ನು ಹತ್ತಿದಳು. ೧೨. ಆಗ ಅವಳಿಗೆ ಹಿಡಿದಿರುವ ಬಿಳಿಯ ಕೊಡೆಯು ಪರಪುರುಷ ನಾದ ಸೂರ್ಯನ ಕರಸ್ಪರ್ಶಕ್ಕೆ (೧. ಕರಣಗಳ ಸಂಪರ್ಕಕ್ಕೆ ೨. ಕೈಯಿಂದ ಮುಟ್ಟು ವಿಕೆಗೆ) ಇಷ್ಟಪಡದೆ ಸೂರ್ಯಮಂಡಲಕ್ಕೆ ಚಂದ್ರಬಿಂಬವನ್ನು ಮರೆಯಾಗಿಟ್ಟಿದ್ದಾಳೋ ಎಂಬಂತೆ ಕಾಣುತ್ತಿತ್ತು. ವ॥ ಆಗ ಕಾದಂಬರೀದೇವಿಯು ಕುದುರೆಯ ಗೊರಸಿನಿಂದ ಎಬ್ಬಿಸಲ್ಪಟ್ಟ ಧೂಳುಗಳಿಂದ ಮಲಿನವಾದ ನಿಮ್ಮ ಪ್ರಯಾಣಮಾರ್ಗವನ್ನೇ ನೋಡುತ್ತಾ ಇದ್ದಳು. ಸ್ವಲ್ಪ ಹೊತ್ತಾದ ಮೇಲೆ ನೀವು ಕಣ್ಮರೆಯಾಗಲು ಆ ದಿಗ್ಭಾಗವ ನ್ನೆಲ್ಲ ಕ್ಷೀರಸಮುದ್ರದಂತೆ ಶುಭ್ರವಾದ ಹಾಗೂ ನೀಳವಾದ ಕಡೆಗಣ್ಣಿನ ನೋಟದಿಂದ ತೊಳೆಯುತ್ತಾ ಬಹಳಹೊತ್ತು ಅಲ್ಲಿಯೇ ನಿಂತಿದ್ದು ನಿಟ್ಟುಸಿರು ಬಿಟ್ಟು ಅಲ್ಲಿಂದ ಎದ್ದು ಹೊರಡಲಾಗಿ, ೧೩. "ಕೋಮಲೆಯಾದ ನೀನು ಈ ಹೂವುಗಳನ್ನು ಎಡವಬೇಡ ! ಎಚ್ಚರಿಕೆ !" ಎಂದು ಹೇಳುತ್ತಿವೆಯೋ ಎಂಬಂತೆ ನೆಲದಮೇಲೆ ಚೆಲ್ಲಿರುವ ಹೂವುಗಳ ಮೇಲೆ ಕುಳಿತುಕೊಂಡಿರುವ ತುಂಬಿಗಳ ಗುಂಪು ಪ್ರದಕ್ಷಿಣೆಮಾಡಿ ಮೃದುವಾಗಿಯೂ ಗಂಭೀರವಾಗಿಯೂ ಇರುವ ಧ್ವನಿಯಿಂದ ಝೇಂಕರಿಸುತ್ತಿದ್ದುವು. ವ॥ ಮತ್ತು ಆ ಸುಂದರಿಯ ಕಾಲಿನ ಉಗುರುಗಳ ಕಾಂತಿಯನ್ನು ಜಲಧಾರೆಯೆಂದು ಭ್ರಮಿಸಿ ನವಿಲು ಗಳು ಕೊರಳನ್ನು ಮೇಲಕ್ಕೆ ಎತ್ತಿ ಕೂಗುತ್ತಿದ್ದುವು. ಆ ಕೇಕಾರವಕ್ಕೆ ಕಾದಂಬ ರಿಯು ಹೆದರಿ ಅವುಗಳ ಕೊರಳಿನಿಂದ ಧ್ವನಿ ಹೊರಡದಂತೆ ಮಾಡುವುದಕ್ಕಾಗಿ ತನ್ನ ಕೈಯಿಂದ ಜಾರಿ ಬೀಳುತ್ತಿರುವ ರತ್ನದ ಕಡಗಗಳನ್ನು ಅವುಗಳ ಕತ್ತಿಗೆ ತೊಡಿಸು

ಗಳಂ ತುಡಿಸುತ್ತುಂ ಕರದಿಂ ಕುಸುಮಧವಳಂಗಳಪ್ಪ ಭವನಲತಾಪಲ್ಲವಂಗಳಂ ಮನದಿಂ ಭವದ್ಗುಣಂಗಳುಮನವಲಂಬಿಸುತ್ತುಂ ಕ್ರೀಡಾಪರ್ವತಕ್ಕೆವಂದು

ಇದು ನಿಂದ ನವೇಂದೂಪಲ
ಮಿದಭವನಂ ಪೂಜೆಗೆಯ್ದ ಶಿಲಾತಲಮಿಂ
ತಿದು ನೃಪನಾರೋಗಿಪ ಪವ
ಳದ ನೆಲೆಯಿದು ಪವಡಿಸಿರ್ದ ಚಂದನತಲ್ಪಂ ೧೪

ವ॥ ಎಂದು ಪರಿಜನಂಗಳ್ ಪೇಟೆ ಮಗುಟೆ ಮಗುಟೆ ಕೇಳುತ್ತುಂ ನೀವಿರ್ದೆಡೆಗಳಂ ನೋಡುತ್ತುಂ ಪಗಲಂ ಕಟಿಪಿ ಮಹಾಶ್ವೇತಾನಿರೋಧದಿಂದೇತಾನುಮಲ್ಲಿಯೆ ಕೃತಾಹಾರೆಯಾಗಿ ಕಿಱಿದುಬೇಗಮಿರ್ದು ಚಂದ್ರೋದಯಮಾಗಲೊಡಮೇನಾನುಮಂ ಚಿಂತಿಸುತ್ತುಮಲ್ಲಿಂದಮೆೞ್ದು

ಚರಣನಖಾಂತರ್ಗತ ಹಿಮ
ಕಿರಣಪ್ರತಿಬಿಂಬಭೂರಿಭಾರದಿನತಿಮಂ
ಥರತೆ ದೊರೆಕೊಂಡುದೆಂಬಂ
ತಿರೆ ಮೆಲ್ಲನೆ ತರುಣಿ ಸೆಜ್ಜೆವನೆಗೆಟ್ಟಂದಳ್ ೧೫

ವ॥ ಅಂತುವಂದು ಸೆಜ್ಜೆವನೆಯೊಳ್ ಮೆಯ್ಯನೀಡಾಡಿ ದಾರುಣವೆನಿಪ ದಾಹಜ್ವರ ದಿನಿಕ್ಕುವಟ್ಟಂತೇನಾನುಂ ವ್ಯಾಧಿ ಕೆಯ್ಕೊಂಡಂತಾರೊಳಂ ನುಡಿಯದೆ ಪೊರಳುತ್ತುಮಿರ್ದು

ತ್ತಿದ್ದಳು. ಹೂವುಗಳಿಂದ ಶುಭ್ರವಾದ ಅರಮನೆಯ ಬಳ್ಳಿಗಳ ಚಿಗುರನ್ನು ಕೈಯಲ್ಲಿ ಧರಿಸಿ, ಅಂತೆಯೆ ಹೂವಿನಂತೆ ಶುಭ್ರವಾದ ನಿನ್ನ ಗುಣಗಳನ್ನು ಮನಸ್ಸಿನಲ್ಲಿ ಧರಿಸಿ ಕ್ರೀಡಾಪರ್ವತಕ್ಕೆ ಬಂದಳು. ಟಿ॥ ಕೈಯಿಂದ ಹೂಬಳ್ಳಿಗಳ ಚಿಗುರನ್ನು ಮುಟ್ಟಿ ಮುಟ್ಟಿ ನೋಡುತ್ತಾ ಮನಸ್ಸಿನಲ್ಲಿ ನಿನ್ನ ಗುಣಗಳನ್ನು ಚಿಂತಿಸುತ್ತಾ ಬಂದಳು ಎಂದು ಅಭಿಪ್ರಾಯ. ೧೪. ಇದು ಯುವರಾಜನಿದ್ದ ಹೊಸ ಚಂದ್ರಕಾಂತಶಿಲೆ. ಇದು ಪರಮೇಶ್ವರನನ್ನು ಪೂಜೆಮಾಡಿದ ತಂಪಾದ ಪ್ರದೇಶ. ಇದು ಆ ಅರಸನು ಊಟ ಮಾಡಿದ ಹವಳದಿಂದ ಅಲಂಕರಿಸಲ್ಪಟ್ಟ ಸ್ಥಳ. ಇದು ಅವನು ಮಲಗಿದ್ದ ಸುಗಂಧ ಮಯವಾದ ಹಾಸಿಗೆ. ವ॥ ಎಂದು ಪರಿಜನರು ಹೇಳುತ್ತಿರಲು ಮತ್ತೆ ಮತ್ತೆ ಕೇಳುತ್ತಾ, ನೀವು ಇದ್ದ ಸ್ಥಳಗಳನ್ನು ನೋಡುತ್ತಾ, ಹಗಲನ್ನು ಕಳೆದು ಇಷ್ಟವಿಲ್ಲದಿ ದ್ದರೂ ಮಹಾಶ್ವೇತೆಯ ಬಲಾತ್ಕಾರದಿಂದ ಅಲ್ಲಿಯೆ ಊಟಮಾಡಿ ಸ್ವಲ್ಪ ಹೊತ್ತು ಇದ್ದು, ಚಂದ್ರೋದಯವಾಗಲಾಗಿ ಏನನ್ನೋ ಚಿಂತಿಸುತ್ತಾ ಅಲ್ಲಿಂದ ಎದ್ದು ೧೫. ಕಾದಂಬರಿಯು ಮೆಲ್ಲಮೆಲ್ಲನೆ ಮಲಗುವ ಮನೆಗೆ ಬಂದಳು. ಆಗ ಅವಳು ಕಾಲಿನ ಉಗುರುಗಳಲ್ಲಿ ಪ್ರತಿಬಿಂಬಿಸಿರುವ ಚಂದ್ರನಿಂದ ಉಂಟಾದ ಹೆಚ್ಚಾದ ಭಾರದಿಂದ ಬಹಳ ನಿಧಾನವಾಗಿ ನಡೆಯುತ್ತಿರುವವಳಂತೆ ಕಾಣುತ್ತಿದ್ದಳು. ವ॥ ಹಾಗೆ ಬಂದು ಶಯನ ಗೃಹದಲ್ಲಿ ದೇಹವನ್ನು ಈಡಾಡಿ ಭಯಂಕರವಾದ ಸಂತಾಪವನ್ನುಂಟುಮಾಡುವ ಜ್ವರ ದಿಂದ ಪೀಡಿತಳಾದವಳಂತೆಯೂ, ಯಾವುದಾದರೂ ರೋಗ ಬಂದಿದೆಯೊ ಎಂಬಂತೆಯೂ

ಪೊಳೆವ ಭುವನಪ್ರದೀಪಂ
ಗಳೊಡನೆ ಕುಮುದಿನಿಗಳೊಡನೆ ಚಕ್ರಾಹ್ವಯಸಂ
ಕುಳದೊಡನೆ ನಿದ್ರೆಯಿಂದು
ತ್ಪಳಾಕ್ಷಿ ಕೋಟಲೆಗೊಳುತ್ತಮಿರುಳಂ ಕಳೆದಳ್

೧೬

ವ|| ಅಂತು ಕಳೆದು ಬೆಳಗಾಗಲೊಡನೆನ್ನಂ ನಿಮ್ಮಲ್ಲಿಗಟ್ಟಿದಳೆಂಬುದುಮದೆಲ್ಲಮಂ ಕೇಳ್ದಲ್ಲಿಗೆ ಪೋಗಲುದ್ಯುಕ್ತನಾಗಿ ಮನುಜೇಂದ್ರಚಂದ್ರನಿಂದ್ರಾಯುಧದ ಬೆಂಗೆವಂದು ಪತ್ರಲೇಖೆಯಂ ಪೆಱಗನೇಱಿಸಿ ವೈಶಂಪಾಯನಾದಿ ಪರಿಜನಮನಿರಲ್ವೇಟ್ಟು ತುರಗಾರೂಢನಪ್ಪ ಕೇಯೂರಕನೊಡವರೆ ಹೇಮಕೂಟಕ್ಕೆವಂದು ಕನ್ಯಾಂತಃಪುರದ್ವಾರಮನೆಯ್ದೆವಂದು ಪಡಿಯಱನ ಕೆಯ್ಯೊಳ್ ಕುದುರೆಯಂ ಕೊಟ್ಟು ಕಾದಂಬರೀಪ್ರಥಮದರ್ಶನಕೌತುಕೆಯಪ್ಪ ಪತ್ರಲೇಖೆವೆರಸು ಪುಗುತಂದಿದಿರ್ವಪ್ಪ ಪುರುಷವರನಂ ಕಾದಂಬರೀದೇವಿಯೆಲ್ಲಿರ್ದಪಳೆಂಬುದುಮಾತಂ ಪೊಡವಟ್ಟು ವೇವ ಮತ್ತಮಯೂರಕವೆಂಬ ಕೇಳೀಶೈಲದ ತಾವರೆಗೊಳದ ಹಿಮಗೃಹದೊಳಿರ್ದಪಳೆಂದು ಬಿನ್ನವಿಸೆ ಕೇಯೂರಕೋಪದಿಶ್ಯಮಾನಮಾರ್ಗನಾಗಿ ಪ್ರಮದವನದೊಳಗೆ ಬರುತಂ

ಯಾರೊಂದಿಗೂ ಮಾತನಾಡದೆ ಹೊರಳಾಡುತ್ತಿದ್ದು ೧೬. ಕನ್ನೈದಿಲೆಯಂತೆ ಕಣ್ಣುಳ್ಳ ಕಾದಂಬರಿಯು ಪ್ರಕಾಶಿಸುತ್ತಿರುವ ಮನೆದೀಪಗಳ ಜೊತೆಯಲ್ಲೂ, ಕನ್ನೈದಿಲೆಗಳ ಜೊತೆಯಲ್ಲೂ, ಚಕ್ರವಾಕಪಕ್ಷಿಗಳ ಜೊತೆಯಲ್ಲೂ ನಿದ್ರೆಯಿಲ್ಲದೆ ಕಷ್ಟಪಡುತ್ತಾ ರಾತ್ರಿಯನ್ನು ಕಳೆದಳು. ವ|| ಹಾಗೆ ರಾತ್ರಿಯನ್ನು ಕಳೆದು ಬೆಳಗಾಗಲು ನನ್ನನ್ನು ನಿಮ್ಮಲ್ಲಿಗೆ ಕಳುಹಿಸಿದಳು" ಎಂದು ಹೇಳಲಾಗಿ, ಅದೆಲ್ಲವನ್ನೂ ಕೇಳಿ ಚಂದ್ರನಂತೆ ಆಹ್ಲಾದಕರನಾದ ಚಂದ್ರಾಪೀಡಮಹಾರಾಜನು ಅಲ್ಲಿಗೆ ಹೋಗಲು ಉದ್ಯುಕ್ತನಾದನು. ಇಂದ್ರಾಯುಧವನ್ನು ಹತ್ತಿ ಪತ್ರಲೇಖೆಯನ್ನೂ ಹಿಂದುಗಡೆ ಕೂರಿಸಿಕೊಂಡನು. ವೈಶಂಪಾಯನನೇ ಮೊದಲಾದ ಪರಿಜನರನ್ನು ಅಲ್ಲೇ ಇರುವಂತೆ ತಿಳಿಸಿದನು. ಬಳಿಕ ಕುದುರೆಯನ್ನು ಹತ್ತಿ ಕೇಯೂರಕನು ಜೊತೆಯಲ್ಲೇ ಬರುತ್ತಿರಲು ಹೇಮಕೂಟಕ್ಕೆ ಬಂದನು. ಅಲ್ಲಿ ಕನ್ಯಕಾಂತಃಪುರದ ಬಾಗಿಲಿಗೆ ಬಂದು, ದ್ವಾರಪಾಲಕನ ಕೈಯಲ್ಲಿ ಕುದುರೆಯನ್ನು ಕೊಟ್ಟು, ಕಾದಂಬರಿಯನ್ನು ಮೊದಲಬಾರಿಗೆ ನೋಡಬೇಕೆಂಬ ಕುತೂಹಲವುಳ್ಳ ಪತ್ರಲೇಖೆಯೊಡನೆ ಒಳಕ್ಕೆ ಬಂದನು. ಅಲ್ಲಿದ್ದ ನಪುಂಸಕಸೇವಕನನ್ನು 'ಕಾದಂಬರೀದೇವಿಯು ಎಲ್ಲಿದ್ದಾಳೆ?' ಎಂದು ಕೇಳಿದನು. ಅವನು ನಮಸ್ಕರಿಸಿ 'ಸ್ವಾಮಿ, ಮತ್ತಮಯೂರವೆಂಬ ಕ್ರೀಡಾಪರ್ವತದಲ್ಲಿರುವ ತಾವರೆಗೊಳದ ಹತ್ತಿರದಲ್ಲಿ ಶೀತಗೃಹದಲ್ಲಿದ್ದಾಳೆಂದು ಅರಿಕೆ ಮಾಡಿದನು. ಬಳಿಕ ಕೇಯೂರಕನು ದಾರಿಯನ್ನು ತೋರಿಸುತ್ತಿರಲು, ಉದ್ಯಾನವನದ

ಬಿಸಿಲೆಲ್ಲ ಪಸಲೆಗವಿದುದು
ಪಸುರ್ವೆಳಗಿಂದೆನಿಪ ಬಾಲಕದಳೀವನದೊಳ್
ಬಿಸರುಹದಳಂಗಳಿಂ ಪೊದೆ
ಯಿಸಿರ್ದ ಹಿಮಗೃಹಮನವನಿಪಾಲಂ ಕಂಡಂ ೧೭

ನಳಿನೀಪತ್ರಾಂಶುಕಾಚ್ಛಾದಿತ ಕುಚಯುಗಳಂ ಚಂದನಾಪಾಂಡು ಗಂಡ
ಸ್ಥಳಯುಗ್ಮಂ ಕೇತಕೀಕೋಮಲದಳ ವಿಲಸತ್ಕರ್ಣಪತ್ರಂ ಮೃಣಾಳೀ
ವಳಯಾಲಂಕಾರಕಾಂತಂ ವಕುಳಮುಕುಳಹಾರಾಂಚಿತಂ ಪದ್ಮಸೂತ್ರೋ
ಜ್ವಳ ಚಂಚಚ್ಚಾಮರಂ ಛೋಂಕನೆ ಪೊಱಮಡುತ್ತಿರ್ದತ್ತು ಕಾಂತಾಕದಂಬಂ ೧೮

ದಳಿತ ಪ್ರೋನ್ನಾಳನೀರೇರುಹ ಕುವಲಯರಂಭಾದಳಾಂಭೋಜಪತ್ರಾ
ವಳಿಯುಂ ಲೀಲಾತಪತ್ರಾವಳಿ ಸೊಗಯಿಸೆ ತವ್ಮೊಳ್ ಜಲಶ್ರೀಸಮಾಜಂ
ಜಳಜಾತಶ್ರೀಸಮೂಹಂ ಸಕಲಜಲಧಿಪಶ್ರೀಚಯುಂ ಶಾರದಶ್ರೀ
ಕುಳಮೊಂದೊಂದಾಗಿ ಬಂದತ್ತೆನಿಸಿ ಬರುತುಮಿರ್ದತ್ತು ಕನ್ಯಾಕದಂಬಂ ೧೯

ವ॥ ಅಂತಾ ಶಿಶಿರೋಪಚಾರನಿಪುಣೆಯರಪ್ಪ ಕಾದಂಬರೀಪರಿಜನಂಗಳ್ ತಮತಮಗೆ ಪೊಡವಟ್ಟೋಸರಿಸಿ ಪೋಗೆವೋಗೆ

ಒಳಕ್ಕೆ ಬಂದನು. ೧೭. ಅಲ್ಲಿ ಒಂದು ಬಾಳೆಯ ಗಿಡದ ಪೊದರಿತ್ತು. ಅದರ ಹಸಿರು ಕಾಂತಿಯಿಂದ ಬಿಸಿಲೆಲ್ಲ ಹಸಿರು ಹುಲ್ಲುಮಯವಾಗಿರುವಂತೆ ಕಾಣುತ್ತಿತ್ತು. ಅಲ್ಲಿ ತಾವರೆ ಎಲೆಗಳನ್ನು ಹೊದಿಸಿರುವ ಒಂದು ಹಿಮಗೃಹವನ್ನು ಅರಸನು ನೋಡಿದನು. ೧೮. ಅಲ್ಲಿ ಹೆಂಗಸರ ಗುಂಪು ಬೇಗ ಬೇಗನೆ ಹೊರಕ್ಕೆ ಬರುತ್ತಿತ್ತು. ಆ ಹೆಂಗಸರು ತಮ್ಮ ಸ್ತನಗಳನ್ನು ತಾವರೆಯೆಲೆಯಿಂದ ಮುಚ್ಚಿಕೊಂಡಿದ್ದರು. ಅವರ ಎರಡು ಕೆನ್ನೆಗಳೂ ಲೇಪನದಿಂದ ಶುಭ್ರವಾಗಿದ್ದುವು. ಕಿವಿಗಳಲ್ಲಿ ಕೇತಕೀಪುಷ್ಪದ ಕೋಮಲವಾದ ಎಸಳು ಗಳು ಕರ್ಣಾಭರಣವಾಗಿ ಶೋಭಿಸುತ್ತಿದ್ದುವು. ಅಲ್ಲದೆ ಅವರು ತಾವರೆದಂಟಿನಿಂದ ಮಾಡಿದ ಬಳೆಗಳನ್ನು ತೊಟ್ಟುಕೊಂಡು ಚೆನ್ನಾಗಿ ಕಾಣುತ್ತಿದ್ದರು. ವಕುಳದ ಮೊಗ್ಗು ಗಳಿಂದ ಕಟ್ಟಿದ ಹಾರದಿಂದ ಶೋಭಿಸುತ್ತಿದ್ದರು. ತಾವರೆಯ ದಂಟಿನ ಎಳೆಗಳಿಂದ ಮಾಡಿರುವ ಪ್ರಕಾಶಮಾನವಾದ ಹಾಗೂ ಚಲಿಸುತ್ತಿರುವ ಚಾಮರಗಳನ್ನು ಹಿಡಿದು ಕೊಂಡಿದ್ದರು. ೧೯. ದಂಟಿನಿಂದ ಕೂಡಿರುವ ಅರಳಿರುವ ಕಮಲ, ಕನ್ನೈದಿಲೆ, ಬಾಳೆ ಗರಿ, ತಾವರೆಯೆಲೆಗಳ ಸಮೂಹದಿಂದ ಮಾಡಿರುವ ವಿಲಾಸಮಯವಾದ ಛತ್ರಿಗಳು ಸಾಲುಸಾಲಾಗಿ ಶೋಭಿಸುತ್ತಿರಲು, ಜಲಸಂಪತ್ತಿನ ಅಧಿದೇವತೆಗಳೂ ಕಮಲದಲ್ಲಿ ವಾಸಿಸುವ ಲಕ್ಷ್ಮಿಯರೂ ಸಕಲ ಸಾಗರಾಧಿಪತಿಯಾದ ವರುಣನ ಸಂಪದ್ದೇವತೆಗಳೂ ಒಟ್ಟಿಗೆ ಸೇರಿ ಬಂದಿದ್ದಾರೋ ಎಂಬಂತೆ ಕನ್ಯೆಯರ ತಂಡವು ಬರುತ್ತಿತ್ತು. ವ॥ ಹೀಗೆ ಶಿಶಿರೋಪಚಾರನಿಪುಣೆಯರಾದ ಕಾದಂಬರಿಯ ಪರಿಜನರು ಚಂದ್ರಾಪೀಡನಿಗೆ ತಾವು ತಾವೇ ನಮಸ್ಕರಿಸಿ ಸರಿದು ಸರಿದು ಹೋಗುತ್ತಿರಲಾಗಿ, ಬಾಳೆಮರಗಳಿಗೆ ಕಟ್ಟಿರುವ

ಒದವಿದ ತೋರಮಲ್ಲಿಗೆಯ ಹಾರದ ಸೂಸಕದಿಂದೆ ಸಿಂಧುವಾ
ರದ ಚಮರೀಜದಿಂದೆ ಕುಮುದಧ್ವಜಮಾಲಿಕೆಯಿಂದೆ ಪುಂಡರೀ
ಕದ ಕಿಱುಗಂಟೆಯಿಂದೆ ಸಹಕಾರದ ಕೆಂದಳಿರಿಂದೆ ಚೆಲ್ವುವೆ
ತ್ತುದು ಕದಳೀದ್ರುಮಗ್ರಥಿತ ಸುಂದರವಂದನಮಾಲಿಕಾವೃತಂ ೨೦

ವ॥ ಅಂತದಂ ನುಸುಳುತ್ತಂ ಪೋಗೆ ನಾಲ್ದೆಸೆಯುಮಂ ನೋಟ್ಪಾಗಳೊಂದೊಂದು ದೆಸೆಯೊಳಿರ್ತಡಿವಿಡಿದು ನಟ್ಟ ತಮಾಲದ ತಳಿರ್ಗೊಂಬುಗಳಿಂ ಸಮೆದ ವನಲೇಖೆಗಳುಮಂ ಕುಸುಮರಜಮೆಂಬ ನುಣ್ಮಳಲ ಪುಳಿಲ್ಗಳಿಂದಮೆಸೆವ ಚಂದನರಸದ ಪಳ್ಳಂಗಳುಮಂ ಓರೊಂದೆಡೆಯೊಳಿಟಲ್ವಲರ್ಗೊಂಚಲ ಚಾಮರಂಗಳೊಳಂ ನಾಂದ ನಾರಂಗವಟ್ಟೆಯ ಮೇಲ್ಕಟ್ಟನೊಳ ಮಿಟ್ಟಳಮೆಸೆವ ಸಿಂಧೂರದ ನೆಲಗಟ್ಟಿನೊಳ್ ಪಾಸಿದ ಕೇದಾವರೆಯೆಸಳ ಪಸೆಗಳುಮಂ ಮತ್ತೊಂದೆಡೆಯೊಳೇಲಾರಸದಿಂ ಸಿಂಪಣಿಗೆಗೊಟ್ಟು ಮುಟ್ಟಿದೊಡಲ್ಲದಱಿಯಲ್ಬಾರದೆಂದೆನಿಪ ಭೃಂಗದ ಚಪ್ಪರಂಗಳುಮಂ ಪೆಱತೊಂದೆಡೆಯೊಳ್ ಸಹಕಾರರಸದಿಂ ತೊಯ್ದ ರನೇಱಿಲ ತಳಿರ್ಗಳಿಂ ಪೊದೆಯಿಸಿದ ಕುಳಿರ್ವ ಕಾವಣಂಗಳುಮಂ ಮತ್ತಮೊಂದೆಡೆಯೊಳ್ ಸಿರಿಸದೆಸಳ

ಸುಂದರವಾದ ತೋರಣದಿಂದ ಕೂಡಿರುವ ೨೦. ಹಿಮಗೃಹದ ಮುಂಬಾಗಿಲು, ಸೇರಿಸಿ ಕಟ್ಟಿರುವ ದಪ್ಪಮಲ್ಲಿಗೆಯ ಸರಗಳ ಕುಚ್ಚಿನಿಂದಲೂ, ಲಕ್ಕೀಹೂವಿನ ಚಾಮರದಿಂದಲೂ, ಬಿಳಿನೈದಿಲೆಯ ಧ್ವಜಪಂಕ್ತಿಯಿಂದಲೂ, ಕಿರುಗಂಟೆಯಂತೆ ಕಟ್ಟಿರುವ ಬಿಳಿಕಮಲಗಳ ಮೊಗ್ಗುಗಳಿಂದಲೂ, ಸಿಹಿಮಾವಿನ ಮರದ ಕೆಂಪುಚಿಗುರುಗಳಿಂದಲೂ ಶೋಭಿಸುತ್ತಿತ್ತು.
ವ॥ ಹಾಗೆಯೆ ಅದನ್ನು ದಾಟಿಕೊಂಡು ಹೋಗಿ ನಾಲ್ಕು ದಿಕ್ಕುಗಳನ್ನೂ ನೋಡುತ್ತಿರಲಾಗಿ ಅಲ್ಲಿ ಒಂದು ಕಡೆ ಎರಡು ದಡವನ್ನೂ ಅನುಸರಿಸಿ ನೆಟ್ಟಿರುವ ಹೊಂಗೆಮರಗಳ ಚಿಗುರುಗಳಿಂದ ತುಂಬಿದ ಕೊಂಬೆಗಳುಳ್ಳ ವನಪಂಕ್ತಿಯಿಂದಲೂ, ಹೂವಿನ ಧೂಳುಗಳೆಂಬ ನುಣುಪಾದ ಮರಳುಗಳ ದಿಣ್ಣೆಗಳಿಂದಲೂ ಶೋಭಿಸುವ ಗಂಧೋದಕದ ನದಿಗಳನ್ನು ಕಂಡನು. ಮತ್ತೊಂದು ಕಡೆಯಲ್ಲಿ ಜೋಲಾಡುತ್ತಿರುವ ಹೂವಿನ ಗೊಂಚಲಿನ ಚಾಮರಗಳಿಂದಲೂ ಒದ್ದೆಯಾದ ಕೆಂಪುಬಟ್ಟೆಯ ಮೇಲ್ಕಟ್ಟಿನಿಂದಲೂ ಅತಿಶಯವಾಗಿ ಶೋಭಿಸುವ ಚಂದ್ರದ ಪುಡಿಗಳಿಂದ ಕೂಡಿರುವ ನೆಲಗಟ್ಟಿನ ಮೇಲೆ ಹಾಸಿರುವ ಕೆಂದಾವರೆದಳದ ಹಾಸಿಗೆಗಳನ್ನು ನೋಡಿದನು. ಮತ್ತೊಂದು ಕಡೆಯಲ್ಲಿ ಏಲಕ್ಕಿಯ ರಸದಿಂದ ಸೇಚನವನ್ನು ಹೊಂದಿ ಮುಟ್ಟುವುದರಿಂದಲೇ ತಿಳಿಯಲು ಸಾಧ್ಯವಾಗಿರುವ (ಸ್ಪರ್ಶಾನುಮೇಯ) ಕಾಗೆಬಂಗಾರದ ಚಪ್ಪರಗಳನ್ನು ನೋಡಿದನು. ಮತ್ತೊಂದು ಕಡೆ ಸಿಹಿಮಾವಿನ ರಸದಿಂದ ನೆನೆಸಿದ ಜಂಬುನೇರಿಳೆ ಚಿಗುರನ್ನು ಹೊದೆಸಿರುವ ತಂಪಾದ ಚಪ್ಪರಗಳನ್ನು ಕಂಡನು. ಮತ್ತೊಂದುಕಡೆ ಬಾಗೆಹೂವಿನ ಎಸಳುಗಳಿಂದ ಹಸಿರುಹುಲ್ಲಿನ ಪ್ರದೇಶದಂತೆ ಮಾಡಲ್ಪಟ್ಟ ತಾವರೆದಂಟುಗಳಿಂದ ನಿರ್ಮಿಸಲ್ಪಟ್ಟ

ಪಸಲೆಯ ಮೃಣಾಳನಾಳಧಾರಾಗೃಹಂಗಳ ಮೇಲೆ ಮುಗಿಲ್ಗಡವಿನಲರಧೂಳಿಯೊಳ್ ಪೊರೆದು ನಿಲಿಸಿದ ಯಂತ್ರಮಯೂರಂಗಳುಮಂ ಒಂದೆಡೆಯೊಳ್ ಜಂತ್ರದ ಮಾಱಿಯಾನೆಯ ಕರಪುಟಂಗಳಿಂ ಕದಡಿದ ತಾವರೆಗೊಳಂಗಳುಮನಂತುಮಲ್ಲದೊಂದೆಡೆಯೊಳ್

ಮಲಯಜವಾರಿಯಿಂ ಕುಳಿರ್ವ ಬಾವಿಗಳಲ್ಲಿ ಮೃಣಾಳದಂಡಮಂ
ಡಲಿಗಳ ದಂಡತೋರಣಕದಿಂ ನವಕಾಂಚನ ಕೇತಕೀದಳಂ
ಗಳ ಪರಿಡೋಣಿಯಿಂ ವಕುಳಮಾಲೆಯೊಳಾಲಿಸಿದಬ್ಜನೀದಳಾ
ವಳಿಗಳ ಮಾಲೆಗುಂಡಿಗೆಗಳಿಂ ಸಮೆದಾಡುವ ಱಾಟಳಂಗಳಂ ೨೧

ವ॥ ಅಂತವಂ ನೋಡುತ್ತುಂ ಪೋಗೆ ಮತ್ತಮಲ್ಲಿಗಲ್ಲಿಗೆ ಪಳುಕಿನ ಬಲಾಕೆಗಳೊಳಂ ಬರೆದ ಸುರಶರಾಸನಂಗಳೊಳಂ ಸೊಗಯಿಸುವ ವಾರಿಧಾರೆಗಳಂ ಸುರಿಯುತಂ ನಡೆವ ಜಂತ್ರದ ಮುಗಿಲ್ಗಳುಮನಲ್ಲಲ್ಲಿಗೆ ಮುತ್ತಿನಪುಡಿಯ ನುಣ್ಮರಳ್ಗಳಾಲವಾಲಂಗಳಿಂ ಕೂಡಿರ್ದಡೆವಿಡದೆ ಸುರಿವ ತೋರವನಿಗಳಿಂ ದುರ್ದಿನಂ ಮಸಗಿಸುವ ಪತ್ರ [ಯಂತ್ರ] ವೃಕ್ಷಂಗಳುಮನಲ್ಲಲ್ಲಿಗೆ ನಾಂದೆಱಕೆಗಳಂ ಬದಿರೆ ಕಿದಱುವ ತುಂತುಱಿಂ ಮಂಜು ಮಸಗೆ ಪಾರ್ವ ಜಂತ್ರದ ಪತ್ರಶಕುನಿಗಳುಮನಲ್ಲಲ್ಲಿಗೆ ಮಧುಕರನಿಕರಮೆಂಬ ಕಿಂಕಿಣಿಗಳ ನುಣ್ಚರಂಗಳಿಂದೆಸೆವಲರುಯ್ಯಲೆಗಳುಮನಲ್ಲ

ಧಾರಾಗೃಹಗಳ ಮೇಲೆ ನಿಲ್ಲಿಸಿರುವ, ಮೇಘೋದಯದಿಂದ ಪುಷ್ಪಿತವಾಗುವ ಕಡಪದ ಮರದ ಹೂವಿನ ಪರಾಗಗಳನ್ನು ಬಳಿದಿರುವ ಯಂತ್ರದ ನವಿಲುಗಳನ್ನು ಕಂಡನು. ಮತ್ತೊಂದುಕಡೆ ಯಂತ್ರದ ಆನೆಮರಿಯ ಸೊಂಡಿಲಿನಿಂದ ಕದಡಿದ ತಾವರೆಗೊಳಗಳನ್ನು ಅವಲೋಕಿಸಿದನು. ಅದಲ್ಲದೆ ಒಂದುಕಡೆ ೨೧. ಗಂಧೋದಕದಿಂದ ತುಂಬಿರುವ ತಂಪಾದ ಬಾವಿಗಳಲ್ಲಿ ತಾವರೆಯ ದಂಟುಗಳಿಂದ ಮಾಡಿದ ಅರೆಕಾಲುಗಳಿಂದಲೂ, ಹೊಸದಾದ ಹೊಂಬಣ್ಣದ ಕೇತಕೀದಳಗಳಿಂದ ಮಾಡಿದ ನೀರು ಹರಿಯುವ ದೋಣಿಗಳಿಂದಲೂ ಕೂಡಿದ, ವಕುಳಮಾಲಿಕೆಗಳಿಂದ ಜೋಡಿಸಿದ ತಾವರೆಯೆಲೆಗಳ ದೊನ್ನೆಗಳೆಂಬ ಮಾಲಿಕೆಯಂತೆ ಜೋಡಿಸಿದ ಗಡಿಗೆಗಳಿಂದ ನಿರ್ಮಿಸಿರುವ ತಿರುಗುತ್ತಿರುವ ರಾಟೆಗಳನ್ನು ನೋಡಿದನು. ವ॥ ಹಾಗೆಯೆ ಅವುಗಳನ್ನೆಲ್ಲ ನೋಡುತ್ತಾ ಹೋಗುತ್ತಿರಲಾಗಿ ಅಲ್ಲಿ ಸ್ಫಟಿಕಶಿಲೆಯಿಂದ ನಿರ್ಮಿತವಾದ ಬೆಳ್ಳಕ್ಕಿಗಳಿಂದಲೂ, ಚಿತ್ರಿಸಿರುವ ಕಾಮನಬಿಲ್ಲುಗಳಿಂದಲೂ ಕೂಡಿಕೊಂಡು ಸುಂದರವಾದ ಜಲಧಾರೆಗಳನ್ನು ಸುರಿಸುತ್ತಾ ಚಲಿಸುವ ಯಂತ್ರದ ಕೃತಕಮೇಘಗಳನ್ನೂ, ಅಲ್ಲಲ್ಲಿ ಮುತ್ತಿನಪುಡಿಯೆಂಬ ನುಣುಪಾದ ಮರಳುಗಳಿಂದ ಕಟ್ಟಿರುವ ಪಾತಿಗಳಿಂದ ಕೂಡಿಕೊಂಡು ಒಂದೇಸಮನೆ ಸುರಿಯುತ್ತಿರುವ ದಪ್ಪ ದಪ್ಪ ನೀರುಹನಿಗಳಿಂದ ಮಳೆದಿವಸವನ್ನುಂಟುಮಾಡುತ್ತಿರುವ ಯಂತ್ರದ ಕೃತಕ ವೃಕ್ಷಗಳನ್ನೂ, ಅದಲ್ಲದೆ ಒದ್ದೆಯಾದ ರೆಕ್ಕೆಗಳನ್ನು ಕೊಡಹಿದರೆ ತುಂತುರುಗಳಿಂದ ಮಂಜುಬೀಳುವಂತೆ ಮಾಡುತ್ತಾ ಹಾರಾಡುತ್ತಿರುವ ಎಲೆಗಳಿಂದ ಮಾಡಿರುವ ಯಂತ್ರದ ಕೃತಕಪಕ್ಷಿಗಳನ್ನೂ, ಅಲ್ಲಲ್ಲಿ ದುಂಬಿಗಳ ಗುಂಪೆಂಬ ಕಿರುಗಂಟೆಗಳ ಇಂಪಾದ ಧ್ವನಿಯಿಂದ

ಲ್ಲಿಗೆ ತಾವರೆಯ ಕೊಡೆಯೆಲೆಗಳಿಂ ಮುಚ್ಚಿದ ಪಚ್ಚೆಯ ಪವಳದ ಪದ್ಮರಾಗದ ಪಳುಕಿನ ತಣ್ಗಳ ಸಂಗಳುಮನಲ್ಲಲ್ಲಿಗೆ ಕರ್ಪೂರಪಲ್ಲವರಸದಿನಧಿವಾಸಿಸಿದ ತಾವರೆಯನೂಲ ದುಗುಲಂಗಳುಮನಲ್ಲಲ್ಲಿ ಗೆಱವಾೞಿಯ ತಿರುಳೆಲೆಗಳೊಳಂ ತಾವರೆಯ ತಳಿರೆಲೆಗಳೊಳಂ ಪೊಸವೂಗಳೆಸಳ್ಗಳೊಳಂ ಸಮೆದ ಬಿಜ್ಜಣಿಗೆಗಳುಮಂ ಪೆಱವುಂ ಪಲತೆಱದ ಶಿಶಿರೋಪಚಾರಂಗಳಂ ಮಾಟ್ಪ ಪರಿಜನಂಗಳುಮಂ ನೋಡುತ್ತುಂ ಪೋಗೆವೋಗೆ

> ಘನಸಮಯಂಗಳಿಕ್ಕೆವನೆ ಮಾಗಿಯಿರುಳ್ಗಳ ಬಿಟ್ಟಬೀಡು ಚಂ
> ದನಕುಲಮಂದಿರಂ ಜಲನಿಧೀಶನ ವಾರಿವಿಹಾರಭೂಮಿ ನಂ
> ದನವನದೇವಿಯರ್ಕಳೆಱೆವಟ್ಟ ಹಿಮಾಲಯದಂತರಂಗಮೆಂ
> ಬಿನೆಗಮುಳುಂಬವೊಪ್ಪುವ ಹಿಮಾಲಯಮಂ ನಡೆನೋಡಿದಂ ನೃಪಂ ೨೨

> ಅಕ್ಕರ॥ ಉಡುಪ ವಿರಹ ದುಸ್ಸಹವಾಸರಂಗಳಂ ಕಳಿಪಲ್ಕೆ ಕುಮುದಿನಿಯಿರ್ಪ ತಾಣಂ
> ಸಿಡಿಲ ಕಿಚ್ಚಿನ ಬೇಗೆಯನಾಱಿಸಲ್ ಜಲಧರಸಂಕುಲಮಿರ್ಪ ತಾಣಂ
> ಕಡಲಬಳಗಂ ಬಾಡಬವಹ್ನಿತಾಪಮಂ ಪರಿಹರಿಸಲ್ಕೆ ಬಂದಿರ್ಪ ತಾಣಂ
> ಮೃಡನ ಭಾಳೇಕ್ಷಣಾನಲನಳುರಲ್ಕೆ ಮುಗ್ಗಿಸಲ್ ಮನುಮತನಿರ್ಪ ತಾಣಂ ೨೩

ರಮ್ಯವಾದ ಹೂವಿನ ಉಯ್ಯಾಲೆಗಳನ್ನೂ, ಅಲ್ಲಲ್ಲಿ ತಾವರೆಯ ಕೊಡೆಯಂತಿರುವ ಎಲೆಗಳಿಂದ ಮುಚ್ಚಿದ ಪಚ್ಚೆಯ, ಹವಳದ, ಪದ್ಮರಾಗದ ಮತ್ತು ಸ್ಫಟಿಕದ ತಂಪಾದ ಗಡಿಗೆಗಳನ್ನೂ, ಅಲ್ಲಲ್ಲಿ ಕರ್ಪೂರವೃಕ್ಷದ ಚಿಗುರಿನ ರಸದಿಂದ ಸುವಾಸನೆಕಟ್ಟಿರುವ ತಾವರೆ ನೂಲಿನಿಂದ ಮಾಡಿದ ಉತ್ತಮ ವಸ್ತ್ರಗಳನ್ನೂ, ಅಲ್ಲಲ್ಲಿ ಎಳೆ ಬಾಳೆಯ ಸುಳಿಯೆಲೆಗಳಿಂದಲೂ, ತಾವರೆಯ ಚಿಗುರೆಲೆಗಳಿಂದಲೂ, ಹೊಸ ಹೂವುಗಳ ದಳಗಳಿಂದಲೂ ಮಾಡಿರುವ ಬೀಸಣಿಗೆಗಳನ್ನೂ, ಹೀಗೆಯೆ ಹಲವಾರು ಬಗೆಯಾದ ಶೈತ್ಯೋಪಚಾರಕ್ಕೆ ಬೇಕಾದ ಸಾಮಗ್ರಿಗಳನ್ನು ಮಾಡುತ್ತಿರುವ ಪರಿಜನರನ್ನು ನೋಡುತ್ತಾ ಹೋಗುತ್ತಿದ್ದನು. ೨೨. ಮಳೆಗಾಲಕ್ಕೆ ವಾಸಸ್ಥಳದಂತೆಯೂ ಚಳಿಗಾಲದ ರಾತ್ರಿಗಳಿಗೆ ತಂಗುವ ಸ್ಥಳದಂತೆಯೂ ಚಂದನಕ್ಕೆ ತೌರುಮನೆಯಂತೆಯೂ ವರುಣನಿಗೆ ಜಲಕ್ರೀಡೆಯಾಡುವ ಪ್ರದೇಶದಂತೆಯೂ ಇಂದ್ರನ ನಂದನವನದ ದೇವತೆಗಳಿಗೆ ಆಶ್ರಯಸ್ಥಾನದಂತೆಯೂ ಹಿಮಾಲಯಪರ್ವತದ ಹೃದಯದಂತೆಯೂ ಬಹಳ ಚೆನ್ನಾಗಿ ಶೋಭಿಸುವ ಹಿಮಗೃಹವನ್ನು ಚಂದ್ರಾಪೀಡನು ಚೆನ್ನಾಗಿ ನೋಡಿದನು. ೨೩. "ಇದು ಚಂದ್ರನ ವಿರಹದಿಂದ ಸಹಿಸಲಸಾಧ್ಯವಾದ ಹಗಲುಗಳನ್ನು ಕಳೆಯುವುದಕ್ಕಾಗಿ ಕುಮುದಿನಿಯು ಇರುವ ಸ್ಥಳ. ತಮ್ಮಲ್ಲಿ ಸೇರಿಕೊಂಡಿರುವ ಸಿಡಿಲಿನ ಬೆಂಕಿಯ ತಾಪವನ್ನು ಪರಿಹರಿಸಿಕೊಳ್ಳಲು ಮೇಘಸಮೂಹವು ಬಂದು ಇರುವ ಸ್ಥಳ. ಒಳಗಿರುವ ಬಡಬಾಗ್ನಿಯ ತಾಪವನ್ನು ನಿವಾರಿಸಿಕೊಳ್ಳುವುದಕ್ಕಾಗಿ ಸಮುದ್ರಗಳು ಬಂದಿರುವ ಸ್ಥಳ. ಪರಮೇಶ್ವರನ ಹಣೆಗಣ್ಣಿನ

ವ॥ ಎಂದು ಭಾವಿಸುತ್ತಂ ಪೋಗೆವೋಗೆ ಕಡವಿನಲರ ಕೇಸರಂಗಳಿಂ ಪೊರೆದೆಲರ್ಗಳುಂ ಹಿಮಸ್ಪರ್ಶನದಿಂ ಕಂಟಕಿತವಾದಂತೆಯುಂ ಎಲರಲೆಪದಿಂ ನಡುಗುವೆಲೆದುಱುಗಲಿಂ ಕದಳೀವನಂಗಳುಮೈಕಿಲಡರ್ದು ನಡುಗಿದಪುವೆಂಬಂತೆಯುಂ ಅಲರ್ವಂಡಸುಂಡು ಸೊಕ್ಕಿ ಮೊರೆವ ಮೊರೆಪದಿಂ ತುಂಬಿಗಳುಂ ಪಲ್ಪಱಿಗುಟ್ಟಿದಪುವೆಂಬಂತೆಯುಂ ಕೂಡೆ ಮುಸುಱುವ ಮಱಿದುಂಬಿಯ ಬಂಬಲಿಂ ಲತೆಗಳುಂ ಕರಿಯದಡ್ಡಿಯಂ ಕವಿದಂತೆಯುಮಾಗೆ ಪಿಡಿಕೈಸಲಪ್ಪ ತಂಪಿಂ ತೀವಿದಂತಾಗಿ

ಮನಮಮೃತಾಂಶುಮಯಂ ಚೇ
ತನೆ ಬಿಸಮಯಮಿಂದ್ರಿಯೋತ್ಕರಂ ಕುಮುದಮಯಂ
ತನು ಸಾಂದ್ರಚಂದ್ರಿಕಾಮಯ
ಮೆನಿಸಿದುದು ನರೇಂದ್ರಚಂದ್ರಮಂಗಾಕ್ಷಣದೊಳ್ ೨೪

ವಾರಿಮಯಂ ದಿವಸಂ ಮಣಿ
ಹಾರಮಯಂ ತಿಗ್ಮರೋಚಿ ಕಿರಣಾವಳಿ ಕ
ರ್ಪೂರಮಯಂ ಪವನಂ ನೀ
ಹಾರಮಯಂ ಭುವನಮೆನಿಸಿ ತೋಱಿತ್ತಾಗಳ್ ೨೫

ಬೆಂಕಿಯು ಹರಡಿಕೊಳ್ಳಲು ಅದನ್ನು ಅಡಗಿಸಲು ಮನ್ಮಥನು ಬಂದಿರುವ ಸ್ಥಳ." ವ॥ ಎಂದು ಭಾವಿಸುತ್ತ ಹೋಗುತ್ತಿರಲಾಗಿ ಕದಂಬಪುಷ್ಪಗಳ ಒಳಗಿನ ಕುಸುಮಗಳನ್ನು ತರುತ್ತಿರುವ ಗಾಳಿ (ಕುಸುಮಗಳು ನವಿರಿನಂತಿರುವುದರಿಂದ) ಅಲ್ಲಿನ ಚಳಿಯಿಂದ ಮೈ ನವಿರುಗೊಂಡಂತಿದ್ದಿತು. ಗಾಳಿ ಬೀಸುವುದರಿಂದ ಅಲ್ಲಾಡುತ್ತಿರುವ ಎಲೆಗಳಿಂದ ಕೂಡಿರುವ ಬಾಳೆಯತೋಪು ಇಲ್ಲಿನ ಚಳಿ ಆವರಿಸಿಕೊಳ್ಳಲು ಗಡಗಡನೆ ನಡುಗುತ್ತಿರುವಂತೆ ಕಾಣುತ್ತಿತ್ತು. ದುಂಬಿಗಳು ಹೂವಿನ ಬಂಡನ್ನು ಕುಡಿದು ಸೊಕ್ಕಿ ಝೇಂಕರಿಸುತ್ತಿರಲು ಅವು ಇಲ್ಲಿನ ಚಳಿಯಿಂದ ಹಲ್ಲುಮೊರೆಯುವಂತೆ ಕಾಣುತ್ತಿದ್ದುವು. ಅಲ್ಲಿನ ಲತೆಗಳ ಮೇಲೆ ಮರಿದುಂಬಿಗಳ ಗುಂಪು ಆವರಿಸಿಕೊಂಡಿರಲು ಆ ಲತೆಗಳು ಇಲ್ಲಿನ ಚಳಿಯನ್ನು ತಡೆಯಲಾರದೆ ಕರಿಯ ಹಚ್ಚಡವನ್ನು ಹೊದ್ದುಕೊಂಡಂತೆ ಕಾಣುತ್ತಿದ್ದುವು. ಹೀಗೆ ಹಿಡಿಯಿಂದ ಉಂಡೆಮಾಡಿ ಹಿಡಿದುಕೊಳ್ಳಬಹುದೋ ಎಂಬಂತೆ ಗಾಢವಾದ ಚಳಿಯಿಂದ ತುಂಬಿದಂತಾಗಿತ್ತು. ೨೪. ಆ ಚಂದ್ರಾಪೀಡನಿಗೆ ಕೂಡಲೆ ತನ್ನ ಮನಸ್ಸು ಚಂದ್ರನಿಂದ ನಿಷ್ಪನ್ನವಾದಂತೆಯೂ ಚೈತನ್ಯವು ತಾವರೆದಂಟಿನಿಂದ ನಿಷ್ಪನ್ನವಾದಂತೆಯೂ ಇಂದ್ರಿಯಗಳು ನೈದಿಲೆಯಿಂದ ನಿಷ್ಪನ್ನವಾದಂತೆಯೂ ಶರೀರವು ದಟ್ಟವಾದ ಬೆಳದಿಂಗಳಿಂದ ನಿಷ್ಪನ್ನವಾದಂತೆಯೂ ಭಾಸವಾಯಿತು. ೨೫. ಮತ್ತು ದಿವಸವೆಲ್ಲ ಜಲಮಯವಾದಂತೆಯೂ ಸೂರ್ಯಕಿರಣಗಳು ಮಣಿಸರಮಯವಾದಂತೆಯೂ ಗಾಳಿಯು ಕರ್ಪೂರಮಯ

ವ॥ ಅಂತು ಪೊರ್ದೆ

ಕುಳಿರ್ವ ಹಿಮಾಲಯದೊಳ್ ಕೋ
ಮಳೆ ನಿಜಪರಿವಾರಸಹಿತವಿರ್ದಳ್ ಹಿಮವ
ತ್ತಳದೊಳ್ ತರಂಗಿಣೀಸಂ
ಕುಳದಿಂ ಬಳಸಿರ್ದ ದಿವಿಜನದಿಯೆಂಬಿನೆಗಂ ೨೬

ಪರಿವೇಷದ ತೆಱದಿಂದನ
ವರತಂ ಕರ್ಪೂರರಸದ ಪರಿಕಣೆಸುತ್ತಂ
ಪರಿಯಲ್ ಮೃಣಾಳಪೊಸವಂ
ದರ ನಡುವಣ ಪೂವಿನೆಸಳ ಪಾಸಿನೊಳಿರ್ದಳ್ ೨೭

ವ॥ ಆಗಳ್

ಅಪರಿಮಿತಂ ಪೊಣ್ಮುವ ಬಾ
ಷ್ಪಪಯೋಧಾರಾಳಿ ಪರಿವ ಪರಿನಾಳಿಕೆಯೊಂ
ದುಪಮೆಗೆ ಬಂದಿರ್ದುದು ಕ
ರ್ಣಪೂರನವಕೇತಕೀದಳಂ ಕಾಮಿನಿಯಾ ೨೮

ಸಂತಾಪಭೀತಿಯಿಂ ತನು
ಕಾಂತಿ ತೆರಳ್ದೋಡಿದಪುದೆನಲ್ ನಿಡುಸುಯ್ಯಿಂ
ದಂ ತೊಲಗೆ ಮೇಲುದೆಸೆದುದು
ಕಾಂತೆಯ ಚಂದನವಿಲಿಪ್ತಘನಕುಚಯುಗಳಂ ೨೯

ವಾದಂತೆಯೂ ಜಗತ್ತೆಲ್ಲ ಹಿಮಮಯವಾದಂತೆಯೂ ಅವನಿಗೆ ತೋರಿತು. ವ॥ ಹಾಗೆ ಅಲ್ಲಿಗೆ ಹೋಗಲಾಗಿ ೨೬. ತಣ್ಣಗಿರುವ ಆ ಹಿಮಗೃಹದಲ್ಲಿ ಕೋಮಲೆಯಾದ ಕಾದಂಬರಿಯು ತನ್ನ ಪರಿವಾರದೊಂದಿಗೆ ಇದ್ದಳು. ಆಗ ಅವಳು ಹಿಮಾಚಲಪ್ರದೇಶದಲ್ಲಿ ಇತರ ನದಿಗಳಿಂದ ಸುತ್ತುವರಿಯಲ್ಪಟ್ಟಿರುವ ಗಂಗಾನದಿಯಂತೆ ಶೋಭಿಸುತ್ತಿದ್ದಳು. ೨೭. ತಾವರೆದಂಟುಗಳಿಂದ ಕಟ್ಟಿದ ಒಂದು ಹೊಸ ಚಪ್ಪರದ ಮಧ್ಯದಲ್ಲಿ ಹಾಸಿದ್ದ ಹೂವಿನ ದಳಗಳಿಂದ ಮಾಡಿದ ಹಾಸಿಗೆಯಲ್ಲಿ ಕಾದಂಬರೀದೇವಿಯು ಮಲಗಿದ್ದಳು. ಆ ಚಪ್ಪರದ ಸುತ್ತಲೂ ಪರಿವೇಷದಂತೆ ಯಾವಾಗಲೂ ಕರ್ಪೂರರಸದ ಕಾಲುವೆಯು ಸುತ್ತಲೂ ಹರಿಯುತ್ತಿತ್ತು. ವ॥ ಆಗ ೨೮. ಅವಳು ತನ್ನ ಕಿವಿಯಲ್ಲಿ ಹೊಸದಾದ ಕೇದಗೆಹೂವಿನ ದಳವೊಂದನ್ನು ಮುಡಿದುಕೊಂಡಿದ್ದಳು. ಅದು ಅತ್ಯಧಿಕವಾಗಿ ಹರಿಯುತ್ತಿರುವ ಕಣ್ಣೀರಿನ ಧಾರೆಯ ಪರಂಪರೆಯು ಹರಿದುಹೋಗಲು ಇಟ್ಟಿರುವ ನಲ್ಲಿಯಂತೆ ಕಾಣುತ್ತಿತ್ತು. ೨೯. ದೇಹದಲ್ಲಿ ವ್ಯಾಪಿಸಿರುವ ತಾಪದ ಭಯದಿಂದ ಅವಳ ಶರೀರಕಾಂತಿಯು ಓಡಿಹೋಗುತ್ತಿದೆಯೋ ಎಂಬಂತೆ ನಿಟ್ಟುಸಿರಿನಿಂದ ಅವಳ ಮೇಲು ಹೊದಿಕೆಯು ದೂರ ಸರಿಯುತ್ತಿತ್ತು. ಇದರಿಂದ ಗಂಧಲೇಪನದಿಂದ ಕೂಡಿದ ಅವಳ ದಪ್ಪ

ಅರಸಂ ಬರಲೌತ್ಸುಕ್ಯದೆ
ಪರಿಯಲ್ ಗಱಿಯಿಟ್ಟುವೆನಿಸಿ ಮಾರ್ತೊಳಗುವ ಚಾ
ಮರದಿಂದಮೆಸೆವ ಕುಚಮಂ
ಕರಕಮಲದಿನೊತ್ತಿ ಕಾಂತೆ ಕಣ್ಗೆಸೆದಿರ್ದಳ್ ೩೦

ಯುವತಿ ಹಿಮೋಪಲಪ್ರತಿಮೆಯಂ ನಳಿತೋಳ್ಗಳಿನಾಗಳಾಗಳ
ಪ್ಪುವ ಶಶಿಸಾಲಭಂಜಿಕೆಯನೊಯ್ದು ಕದಂಪಿನೊಳಾಗಳಾಗಳೊ
ತ್ತುವ ಶಶಿಕಾಂತಪುತ್ರಿಕೆಯ ಮೇಲೆ ನಿಜಾಂಘ್ರಿಯನಾಗಳಾಗಳಿ
ಕ್ಕುವ ಪಿರಿದಪ್ಪ ಬೇವಸದೊಳಂ ತಡೆದಿರ್ದಳದೊಂದು ಬೇಗಮಂ ೩೧

ಸ್ಮರಪರವಶಂಗಳಾದಂ
ತಿರೆ ಮುಕ್ತಾತ್ಮಂಗಳೆನಿಸಿಯುಂ ಹಾರಂಗಳ್
ಕರನಿಕರದಿಂದೆ ಮುಂ ತಾಂ
ಸರಸಿಜಲೋಚನೆಯನಾದವಪ್ಪಿದುವಾಗಳ್ ೩೨

ಸುಂದರಿ ನವೇಂದುಮಣಿಮುಕು
ರಂದಳೆದೊತ್ತಿರ್ದಳುರದೊಳಿನ್ನುದಯಂ ಗೆ
ಯ್ವಂದೆನ್ನ ಕೊಂದೆ ನೀನೆಂ
ದಿಂದುವಿನೆರ್ದೆಯಂಟೆ ಸೂರುಳಿಡಿಸುವ ತೆಱದಿಂ ೩೩

ವಾದ ಸ್ತನಗಳು ಶೋಭಿಸುತ್ತಿದ್ದುವು. ೩೦. ಎರಡು ಕಡೆಗಳಲ್ಲೂ ಬೀಸುತ್ತಿರುವ ಚಾಮರಗಳು ಅವಳ ಸ್ತನಗಳಲ್ಲಿ ಪ್ರತಿಬಿಂಬಿಸಿದ್ದುವು. ಇದರಿಂದ ಚಂದ್ರಾಪೀಡನು ಬರಲಾಗಿ ಅವನ ಹತ್ತಿರಕ್ಕೆ ಹೋಗಬೇಕೆಂಬ ಉತ್ಸಾಹದಿಂದ ಅಲ್ಲಿಗೆ ಹಾರಿಹೋಗಲು ಆ ಎರಡು ಸ್ತನಗಳೂ ರೆಕ್ಕೆಯನ್ನು ಕಟ್ಟಿಕೊಂಡಿರುವಂತೆ ಶೋಭಿಸುತ್ತಿದ್ದುವು. ಅವುಗಳ ಮೇಲೆ ಕೈಯಿಟ್ಟುಕೊಂಡಿದ್ದ ಕಾದಂಬರಿಯು ಅವು ಹಾರಿಹೋಗದಿರುವಂತೆ ಒತ್ತಿ ಹಿಡಿದುಕೊಂಡಿರುವಂತೆ ಕಾಣುತ್ತಿದ್ದಳು. ೩೧. ಆ ತರುಣಿಯು ಪದೇಪದೇ ನೀರ್ಗಲ್ಲಿನ ಪ್ರತಿಮೆಯನ್ನು ತನ್ನ ಕೋಮಲವಾದ ತೋಳುಗಳಿಂದ ತಬ್ಬಿಕೊಳ್ಳುತ್ತಿದ್ದಳು; ಕರ್ಪೂರದ ಬೊಂಬೆಯನ್ನು ಪದೇಪದೇ ತನ್ನ ಕೆನ್ನೆಗೆ ಒತ್ತಿಹಿಡಿದುಕೊಳ್ಳುತ್ತಿದ್ದಳು ಮತ್ತು ಪದೇಪದೇ ಚಂದ್ರಕಾಂತಪುತ್ಥಳಿಯ ಮೇಲೆ ತನ್ನ ಕಾಲನ್ನು ಇಡುತ್ತಿದ್ದಳು, ಹೀಗೆ ಹೆಚ್ಚಾದ ವಿರಹವ್ಯಥೆಯ ತೀವ್ರತೆಯನ್ನು ತಡೆಯುತ್ತಿದ್ದಳು. ೩೨. ಹಾರಗಳು "ಮುಕ್ತಾತ್ಮ"ಗಳು (೧. ಮುತ್ತಿನಿಂದ ನಿರ್ಮಿತವಾದುವು. ೨. ಸಂಸಾರಬಂಧನದಿಂದ ಬಿಡುಗಡೆ ಹೊಂದಿದ ಜೀವನ್ಮುಕ್ತರು). ಹೀಗಿದ್ದರೂ ಕಮಲನೇತ್ರೆಯಾದ ಕಾದಂಬರಿಯ ಸೌಂದರ್ಯವನ್ನು ನೋಡಿ ಕಾಮಪರವಶತೆಯಿಂದ ಅವಳನ್ನು ಗಾಢವಾಗಿ ತಬ್ಬಿಕೊಂಡಿದ್ದುವು! ೩೩. ಆ ಸುಂದರಿಯು ಹೊಸದಾದ ಚಂದ್ರಕಾಂತಶಿಲೆಯಿಂದ ಮಾಡಿದ ಕನ್ನಡಿಯನ್ನು ಕಾಮಸಂತಾಪಶಾಂತಿಗಾಗಿ ತನ್ನ ಎದೆಗೆ ಅವುಚಿಕೊಂಡಿದ್ದಳು. ಅದನ್ನು ನೋಡಿದರೆ ನೀನು ಉದಯಿಸಿದರೆ, ನಾನು ಸತ್ತಂತೆಯೇ, ಆದ್ದರಿಂದ ಉದಯಿಸಬೇಡ ಎಂದು ಚಂದ್ರ

ವ॥ ಅಂತು ಕಾದಂಬರೀದೇವಿಯುಂ ನೋಡಿ ದೂರದೊಳೆ ಕಂಡನನ್ನೆಗಂ ಮೂರ್ತಿ ನಾರಾಯಣಂ ಬಂದನೆಂದು ಪೇೞಲುತ್ತರಳತಾರಕೆಯಾಗಿ

ಬರವನದಾರ್ ಪೇೞ್ದಟ್ಟಿದ
ರರಸಂ ಬಂದಪನೆ ಕಂಡಿರೇಂ ನೀವೆನಿತಂ
ತರಮಾಪೆಡೆಯೆನುತೆನುತಂ
ಪರಿಜನಮಂ ಕಣ್ಣಸನ್ನೆಯಿಂ ಬೆಸಗೊಂಡಳ್ ೩೪

ವ॥ ಅಂತು ಬೆಸಗೊಳ್ಳುತ್ತುಂ ಗೆಂಟಣೊಳೆ ಬರುತಿರ್ದ ಯುವರಾಜನಂ ಭೋಂಕನೆ ಕಂಡು ನವಗ್ರಾಹಕರಿಣಿಯುಂದದಿನೂರುಸ್ತಂಭವಿಧೃತೆಯಾಗಿ

ನವರೋಮರಾಜಿ ತಾಮ್ರ [ತಾಮ್ಯ]
ತ್ರಿ [ತ್ರಿ]ವಳಿಯೊಳ್ ತೆರೆಗೊಳಲ್ಕೆ ಮುರಿದೇೞ್ವಿಡೆಯೊಳ್
ಯುವತಿ ನಿಜಾಂಗಮನಂಗೋ
ದ್ಭವನಾಗಳ್ ಪಿಂಡಿ ಪಿೞಿದನೆಂಬವೊಲಿರ್ದಳ್ ೩೫

ವ॥ ತದನಂತರಂ

ನಡುಗುತ್ತುಂ ಮೇಲುದೆಂದೊರ್ವೋದಲೆ ತೆಗೆದು ಹಾರಾಂಶುವಂ ಸಾರ್ಚುತಂ ಸೋ
ರ್ಮುಡಿಯಂ ಸಸ್ವೇದಹಸ್ತಾಬ್ಜದಿನೆೞೆವುತಾತ್ಮಪ್ರತಿಚ್ಛಾಯೆಯುಂ ಕೆ
ಯ್ಯುಗ್ಗಡು ನೀನೆಂಬಂದದಿಂ ನಿರ್ಮಲತರ ಮಣಿಬದ್ಧಾವನೀಭಾಗಮಂ ತ
ನ್ನೆಡಗೆಯ್ಯಿಂ ಮೆಲ್ಲನೊತ್ತುತ್ತೆಸೆವಲರ್ವಸೆಯಿಂ ಕಾಂತೆಯೆಂತಾನುಮೆಟ್ದಳ್ ೩೬

ನನ್ನು ಎದೆಮುಟ್ಟಿಸಿ ಆಣೆಯಿಡಿಸುತ್ತಿರುವಳೋ ಎಂಬಂತೆ ಕಾಣುತ್ತಿದ್ದಳು. ವ॥ ಹಾಗೆ ಕಾದಂಬರೀದೇವಿಯುನ್ನು ದೂರದಲ್ಲೆ ನೋಡುತ್ತಿರುವಷ್ಟರಲ್ಲಿ ಶ್ರೀಮನ್ನಾರಾಯಣಸ್ವರೂಪನಾದ ಚಂದ್ರಾಪೀಡನು ಬಂದನೆಂದು ಅವಳಿಗೆ ತಿಳಿಸಿದರು. ಕೂಡಲೆ ಕಣ್ಣುಗುಡ್ಡೆಗಳು ಚಲಿಸುತ್ತಿರಲು, ೩೪. "ಅವನು ಬರುವಂತೆ ಯಾರು ಹೇಳಿಕಳುಹಿಸಿದ್ದಾರೆ? ಅರಸನು ಬರುತ್ತಿರುವನೆ? ನೀವು ನೋಡಿದಿರಾ? ಎಷ್ಟು ದೂರದಲ್ಲಿದ್ದಾನೆ? ಯಾವ ಸ್ಥಳದಲ್ಲಿದ್ದಾನೆ?" ಎಂಬುದಾಗಿ ಕಣ್ಣುಸನ್ನೆಯಿಂದ ಕೇಳಿದಳು. ವ॥ ಹಾಗೆ ಕೇಳುತ್ತಾ, ಯುವರಾಜನು ಬರುತ್ತಿರುವುದನ್ನು ದೂರದಲ್ಲೆ ತಟ್ಟನೆ ನೋಡಿ, ಹೊಸದಾಗಿ ಹಿಡಿದಿರುವ ಆನೆಮರಿಯಂತೆ ಊರುಸ್ತಂಭವಿಧೃತೆಯಾಗಿ (೧. ನಿಶ್ಚಲವಾದ ತೊಡೆಗಳಿಂದ ಮುಂದೆ ಹೆಜ್ಜೆಯಿಕ್ಕದವಳಾಗಿ, ತೊಡೆಗಳನ್ನು ಕಟ್ಟಿಹಾಕುವ ಕಂಭದಲ್ಲಿ ಕಟ್ಟಲ್ಪಟ್ಟದ್ದಾಗಿ (ಟಿ. ಚಂದ್ರಾಪೀಡನನ್ನು ಕಂಡಕೂಡಲೇ ಕಾದಂಬರಿಗೆ ಅವನನ್ನು ಎದುರುಗೊಳ್ಳುವುದಕ್ಕೆ ಹೊರಟರೂ ನಡೆಯಲಾಗಲಿಲ್ಲ ಎಂದು ಭಾವ). ೩೫. ಆಗ ಕಾದಂಬರಿಯು ಶರೀರವನ್ನು ಸ್ವಲ್ಪಮುರಿದು ಏಳುವಾಗ, ಚಲಿಸುವುದರಿಂದ ಮುದುರಿಕೊಂಡ ತ್ರಿವಳಿಗಳಮೇಲೆ ಹೊಸ ಕೂದಲಿನ ಸಾಲು ಕಂಪಿಸುತ್ತಿತ್ತು. ಅದರಿಂದ ಅವಳ ದೇಹವನ್ನು ಮನ್ಮಥನು ಹಿಂಡಿಹಿಸುಕುತ್ತಿರುವನೋ ಎಂಬಂತೆ ಕಾಣುತ್ತಿತ್ತು. ವ॥ ಅನಂತರ ೩೬. ಏಳುವ ಸಡಗರದಲ್ಲಿ ಉತ್ತರೀಯವು ಅಲುಗಾಡುತ್ತಿದ್ದುದರಿಂದ ಅದನ್ನುಬಿಟ್ಟು,

ವ|| ಆಗಳ್ ಮನುಜಮಕರಧ್ವಜನೆಯ್ದೆವಂದು ಮುನ್ನಿನಂದದೊಳೆ ಕಾದಂಬರಿಗೆ ಮಹಾಶ್ವೇತಾಪ್ರಣಾಮಪುರಸ್ಸರಮುಪದರ್ಶಿತವಿನಯನುಮಾಗಿ ಕೆಯ್ಗಳಂ ಮುಗಿವುದು ಮಾಕೆಯುಂ ಕೆಯ್ಗಳಂ ಮುಗಿದು ಲಲಾಟಿಕಾಚಂದನಭರದಿನೆಱಗಿದಂತೆ ಕಿಂಚಿದವನತಮುಖಿಯಾಗಿ

ನಳಿನದಳಾಯತಾಕ್ಷಿ ಯುವರಾಜನಿಜಪ್ರತಿಬಿಂಬಮಿಲ್ಲಿ ಬಂ
ದೆಳಸಿದುದಪ್ಪೊಡಂ ಸಫಲಮೆನ್ನಯ ಜೀವನಮೆಂಬ ಮಾಟ್ಕೆಯಿಂ
ಪೊಳೆವವತಂಸಪುಷ್ಪರಜದಿಂ ಪೊರೆದಿರ್ದ ಕಪೋಲಪಟ್ಟಮಂ
ತೊಳೆದಳನಾರತಂ ಸುರಿವ ಚಂದನಶೀತಲಹರ್ಷವಾರಿಯಿಂ ೩೭

ವ|| ಆಗಳಾ ಗಂಧರ್ವರಾಜನಂದನೆ ಮುನ್ನಿರ್ದ ಕುಸುಮಶಯನದೊಳ್ ಕುಳ್ಳಿರೆ ವಿದಗ್ಧ ವಿದ್ಯಾಧರಂ ದೌವಾರಿಕೆಯರ್ ಕೆಲದೊಳಿಕ್ಕಿದ ಮಣಿಮಯಾಸನಮಂ ಕಾಲೊಳ್ ನೂಂಕಿ ನೆಲ ದೊಳ್ ಕುಳ್ಳಿರ್ಪುದುಂ ಕಾದಂಬರೀದೇವಿಗೆ ಕೇಯೂರಕಂ ಪೊಡಮಟ್ಟು

ಹಾರದಕಾಂತಿಯನ್ನೇ ಎದೆಗೆ ಆವರಣವನ್ನಾಗಿ ಮಾಡಿಕೊಳ್ಳುತ್ತಾ, ಸಡಿಲವಾದ ತುರು ಬನ್ನು ಬೆವರಿನಿಂದ ಕೂಡಿದ ಬಲಗೈಯಿಂದ ಸರಿಯಾಗಿ ಕಟ್ಟಿಕೊಳ್ಳುತ್ತಾ, ತನ್ನ ಪ್ರತಿ ಬಿಂಬವನ್ನೇ "ನೀನು ನನಗೆ ಕೈಗೊಟ್ಟು ಎತ್ತು" ಎಂದು ಪ್ರಾರ್ಥಿಸುವಂತೆ ಬಹಳ ಸ್ವಚ್ಛ ವಾದ ರತ್ನನಿರ್ಮಿತವಾದ ನೆಲವನ್ನು ತನ್ನ ಎಡಗೈಯಿಂದ ಮೆಲ್ಲನೆ ಒತ್ತುತ್ತಾ ಹೂವಿನ ಹಾಸಿಗೆಯಿಂದ ಕಾದಂಬರಿಯು ಬಹಳ ಪ್ರಯಾಸದಿಂದ ಮೇಲಕ್ಕೆದ್ದಳು. ವ|| ಆಗ ನರರೂಪವನ್ನು ತಾಳಿದ ಮನ್ಮಥನಂತಿರುವ ಚಂದ್ರಾಪೀಡನು ಹತ್ತಿರಕ್ಕೆ ಬಂದು, ಹಿಂದಿನಂತೆಯೇ ವಿನಯವನ್ನು ತೋರ್ಪಡಿಸುತ್ತಾ, ಮೊದಲು ಮಹಾಶ್ವೇತೆಗೆ ನಮಸ್ಕಾರ ಮಾಡಿ ಬಳಿಕ ಕಾದಂಬರಿಗೆ ಕೈಮುಗಿದನು. ಆಗ ಅವಳೂ ಕೈಮುಗಿದು, ಹಣೆಗೆ ಹಾಕಿ ಕೊಂಡಿರುವ ಚಂದನತಿಲಕದ ಭಾರದಿಂದ ಬಗ್ಗಿರುವಳೋ ಎಂಬಂತೆ ಸ್ವಲ್ಪತಗ್ಗಿದ ಮುಖ ವುಳ್ಳವಳಾಗಿ, ೩೭. ತಾವರೆಯಂತೆ ವಿಶಾಲವಾದ ಕಣ್ಣುಳ್ಳ ಕಾದಂಬರಿಯು ಯುವ ರಾಜನ ಪ್ರತಿಬಿಂಬವಾದರೂ ಇಲ್ಲಿ ಮೂಡಿದರೆ ನನ್ನ ಜೀವಮಾನವೇ ಸಾರ್ಥಕವಾಯಿ ತೆಂಬ ಒಂದು ಅಭಿಪ್ರಾಯದಿಂದಲೋ ಎಂಬಂತೆ ಕಿವಿಯಲ್ಲಿ ಮುಡಿದುಕೊಂಡಿದ್ದ ಹೂವಿನ ಪುಡಿಯಿಂದ ಕೂಡಿಕೊಂಡಿದ್ದ ಹೊಳೆಯುತ್ತಿರುವ ತನ್ನ ಕೆನ್ನೆಯನ್ನು ನಿರಂತರ ವಾಗಿ ಸುರಿಯುತ್ತಿರುವ ಗಂಧೋದಕದಂತೆ ತಂಪಾದ ಆನಂದಬಾಷ್ಪದಿಂದ ತೊಳೆಯು ತ್ತಿದ್ದಳು. ವ|| ಆಗ ಗಂಧರ್ವರಾಜಕುಮಾರಿಯಾದ ಕಾದಂಬರಿಯು ತಾನು ಮೊದಲು ಮಲಗಿದ್ದ ಹಾಸಿಗೆಯಮೇಲೆ ಎದ್ದು ಕುಳಿತುಕೊಂಡಳು. ರಸಿಕಾಗ್ರೇಸರ ನಾದ ಚಂದ್ರಾಪೀಡನು ದ್ವಾರಪಾಲಕಳು ಹತ್ತಿರದಲ್ಲಿ ಹಾಕಿದ ರತ್ನಪೀಠವನ್ನು ಕಾಲಿನಿಂದ ನೂಕಿ ನೆಲದಮೇಲೆ ಕುಳಿತುಕೊಂಡನು. ಬಳಿಕ ಕೇಯೂರಕನು ಕಾದಂಬರೀದೇವಿಗೆ

೩೯೭

ವಸುಧಾಧೀಶನ ಪರಮ
ಪ್ರಸಾದಭಾಗಿನಿಯುನಡಪವಳಿತಿಯನವಧಾ
ರಿಸು ಪತ್ರಲೇಖೆಯೆಂಬುದು
ಪೆಸರೆಂದಾ ಸತಿಯನರಸಿಯಂ ಕಾಣಿಸಿದಂ ೩೮

ವ॥ ಅಂತಾ ಪತ್ರಲೇಖೆಯಂ ನೋಡಿ

ಎನಿತೊಂದು ಪಕ್ಷಪಾತವೊ
ವನಿತೆಯರಂ ಮಾಡುವೆಡೆಯೊಳಬ್ಜಭವಂಗಂ
ದೆನಸುಂ ಕಾಂತೆಯ ರೂಪನೆ
ಮನದೊಳ್ ಗಂಧರ್ವಕನ್ನೆ ಭಾವಿಸುತಿರ್ದಳ್ ೩೯

ತನಗಾಗಳ್ ಪೊಡವಟ್ಟಳಂ ಪದಪಿನಿಂ ಪೊಣ್ಮುತ್ತಬಾಯಿತ್ತ ಬಾ
ಯೆನುತಂ ತನ್ನ ಕೆಲಕ್ಕೆ ಕಾಂತೆ ಕರೆದಾದಂ ಭ್ರಾಂತಿಯಿಂದಂ ಸಖೀ
ಜನಮೆಲ್ಲಂ ನಡೆನೋಡೆ ಪಿಂತಿರಿಸಿಕೊಂಡಾಗಳ್ಮೊದಲ್ಗೊಂಡಲಂ
ಪಿನೊಳಾ ಕಾಂತೆಯ ಮೆಯ್ಯನೊಯ್ಯನೆಳವುತ್ತಿರ್ದಳ್ ಕರಾಂಭೋಜದಿಂ ೪೦

ವ॥ ಆಗಳ್ ಯುವರಾಜಂ ಕೃತಸಕಲಾಗಮನೋಚಿತೋಪಚಾರನಾಗಿ ತದವಸ್ಥೆಯಪ್ಪ ಚಿತ್ರರಥನಂದನೆಯಂ ನೋಡಿ

ಇಂತಪ್ಪವಸ್ಥೆಯಿಂದಿವ
ಳಿಂತಿರೆಯುಂ ದುರ್ವಿದಗ್ಧವೆನ್ನ ಮನಂ ಮ
ತ್ತೆಂತುಂ ನಂಬಿದುದಿಲ್ಲಾ
ನಿಂ ತಿಳಿವೆಂ ನಿಪುಣವಚನದಿಂ ಕಾಮಿನಿಯಂ ೪೧

ನಮಸ್ಕರಿಸಿ, ೩೮. "ಇವಳು ಚಂದ್ರಾಪೀಡಮಹಾರಾಜನ ಪರಮಾನುಗ್ರಹಕ್ಕೆ ಪಾತ್ರಳಾದ ಸಂಚಿಯುೞಿಗದವಳು. ಇವಳ ಹೆಸರು ಪತ್ರಲೇಖೆಯೆಂದು ತಿಳಿಯುವುದು" ಎಂದು ಅವಳನ್ನು ಕಾದಂಬರೀದೇವಿಗೆ ತೋರಿಸಿದನು. ವ॥ ಹಾಗೆ ಪತ್ರಲೇಖೆಯನ್ನು ನೋಡಿ, ೩೯. "ಬ್ರಹ್ಮನು ಹೆಂಗಸರನ್ನು ಸೃಷ್ಟಿಮಾಡುವಾಗ ಅದೆಷ್ಟು ಪಕ್ಷಪಾತವನ್ನು ತೋರಿಸಿದ್ದಾನೆ" ಎಂದು ಕಾದಂಬರಿಯು ಆ ಪತ್ರಲೇಖೆಯ ಸೌಂದರ್ಯವನ್ನೇ ತನ್ನ ಮನಸ್ಸಿನಲ್ಲಿ ಆಲೋಚಿಸುತ್ತಿದ್ದಳು. ೪೦. ಆಗ ತನಗೆ ನಮಸ್ಕಾರ ಮಾಡಿದ ಆ ಪತ್ರಲೇಖೆಯನ್ನು ಪ್ರೀತಿಯುಕ್ಕಿ ಬರುತ್ತಿರಲು, 'ಇತ್ತಬಾ, ಇತ್ತಬಾ' ಎಂದು ಹೇಳುತ್ತಾ, ತನ್ನ ಹತ್ತಿರಕ್ಕೆ ಕರೆದಳು. ಗೆಳತಿಯರೆಲ್ಲ ಬೆರಗಾಗಿ ನಿಟ್ಟಿಸಿ ನೋಡುತ್ತಿರಲು ಅವಳನ್ನು ತನ್ನ ಹಿಂದೆಯೆ ಕುಳ್ಳಿರಿಸಿಕೊಂಡು, ಪ್ರೀತಿಯಿಂದ ಪತ್ರಲೇಖೆಯ ಮೈಯನ್ನು ತನ್ನ ಕರಕಮಲದಿಂದ ಮೆಲ್ಲಮೆಲ್ಲನೆ ನೇವರಿಸುತ್ತಿದ್ದಳು. ವ॥ ಆಗ ಕಾದಂಬರಿಯು ಚಂದ್ರಾಪೀಡನಿಗೆ ಅತಿಥಿಗಳು ಬಂದಾಗ ಮಾಡಬೇಕಾದ ಉಪಚಾರಗಳನ್ನು ಮಾಡಿದಳು. ಚಂದ್ರಾಪೀಡನು ಹಾಗೆ ಸೊರಗಿರುವ ಕಾದಂಬರಿಯನ್ನು ನೋಡಿ, ೪೧. "ಇವಳು ಇಂತಹ ಅವಸ್ಥೆಯಿಂದ ಹೀಗಿದ್ದರೂ ಸರಿಯಾಗಿ ನಿಶ್ಚಯಿಸಲು ಶಕ್ತಿಯಿಲ್ಲದ ನನ್ನ ಹೆಡ್ಡಮನಸ್ಸು

ವ॥ ಎಂದು ತನ್ನ ಮನದೊಳೆ ಬಗೆದು ವಾಗ್ವಿಲಾಸಿನೀವಲ್ಲಭಂ ವಿದಗ್ಧವಿದ್ಯಾಧರಂ ಗಂಧರ್ವರಾಜನಂದನೆಯನಿಂತೆಂದಂ

ಪರಿತಾಪಮಾವತೆಱದಿಂ
ದೊರೆಕೊಂಡುದೊ ದೇವಿ ನಿನಗೆ ನೋವಿದು ನಿನ್ನಿಂ
ಪಿರಿದೆನ್ನದದಱಿಂನೆಂತುಂ
ಸರೋಜಮುಖಿ ನಿನ್ನ ಸುಖಮನಾಂ ಬಯಸಿದಪೆಂ ೪೨

ಎನಿತಂಗಜಾತತಾಪಮೊ
ತನು ಕಂಪಿಸುತಲರಮೇಲೆ ಬೀೞ್ದುದಿದಂ ಕಂ
ಡನುಕಂಪಮಾನಮೆನ್ನಯ
ತನುವುಂ ಬೀೞಲ್ಕೆ ಬಗೆದಪುದು ಮೃಗನಯನೇ ೪೩

ವ॥ ಅದಲ್ಲದೆಯುಂ ದೇವಿ ಭವದವಸ್ಥೆಯಂ ಕಂಡೀ ಪರಿಜನಂ ಮಱುಗುತ್ತಿರ್ಪುದದು ಕಾರಣದಿಂ

ಲಲಿತಾಂಗಿ ನೀಂ ವಿವಾಹೋ
ಜ್ವಲಮೆನಿಸಿದ ಮಂಗಳಪ್ರಸಾಧನಚಯಮುಮಂ
ತಳೆ ಕುಸುಮಶಿಳೀಮುಖಮಂ
ತಳೆದೊಡೆ ನವಲತಿಕೆ ಪಿರಿದುಮೊಪ್ಪುವುದಲ್ತೇ ೪೪

ಏನಾದರೂ ನಂಬಲೇ ಇಲ್ಲವಲ್ಲ. ಇನ್ನು ನಾನು ಜಾಣತನದ ಮಾತುಗಳಿಂದ ಇವಳ ಹೃದ್ಗತವನ್ನು ತಿಳಿದುಕೊಳ್ಳುತ್ತೇನೆ" ವ॥ ಎಂದು ತನ್ನ ಮನಸ್ಸಿನಲ್ಲಿ ಆಲೋಚಿಸಿ, ಜಾಣತನದ ಮಾತುಗಳಲ್ಲಿ ನಿಪುಣನಾದ ಹಾಗೂ ರಸಿಕತನದಲ್ಲಿ ಕುಶಲನಾದ ಚಂದ್ರಾಪೀಡನು ಗಂಧರ್ವರಾಜಪುತ್ರಿಯನ್ನು ಕುರಿತು ಹೀಗೆಂದನು, ೪೨. "ದೇವಿ, ನಿನಗೆ ಈ ಸಂತಾಪವು ಹೇಗೆ ಉಂಟಾಯಿತು? ನನ್ನ ಮನಸ್ಸಿನ ಬಾಧೆಯು ನಿನ್ನದಕ್ಕಿಂತಲೂ ಮಿಗಿಲಾಗಿದೆ. ಆದ್ದರಿಂದ ಎಲೈ ಕಮಲಮುಖಿಯೆ, ನಾನು ನಿನ್ನ ಸುಖವನ್ನು ಬಯಸುತ್ತೇನೆ. ೪೩. ಎಲೈ ಹರಿಣನೇತ್ರೆ, ನಿನ್ನ ಅಂಗಜಸಂತಾಪವು ಎಷ್ಟು ಮಿಗಿಲಾಗಿದೆಯೋ? ನಿನ್ನ ದೇಹವು ನಡುಗುತ್ತಾ ಹೂವಿನ ಹಾಸಿಗೆಯಮೇಲೆ ಬಿದ್ದಿರುವುದನ್ನು ಕಂಡು ಅನುಕಂಪಮಾನವಾದ (೧. ನಿನ್ನಂತೆಯೆ ನಡುಗುತ್ತಿರುವ ೨. ದಯೆಯಿಂದ ಕೂಡಿಕೊಂಡಿರುವ) ನನ್ನ ಶರೀರವೂ ಬೀಳಲು ಇಚ್ಛಿಸುತ್ತಿದೆ. ಟಿ. ನೀನು ಹೂವಿನ ಹಾಸಿಗೆಯಮೇಲಿರುವುದನ್ನು ನೋಡಿ ನನಗೂ ಅಲ್ಲಿ ಸೇರಿ ನಿನ್ನನ್ನು ಅಪ್ಪಿಕೊಳ್ಳಬೇಕೆಂಬ ಆಸೆಯಾಗಿದೆ ಎಂಬ ವ್ಯಂಗ್ಯಾರ್ಥವೂ ಇಲ್ಲಿ ತೋರುತ್ತದೆ. ವ॥ ಅದಲ್ಲದೆ ದೇವಿ, ನಿನ್ನ ಈ ಸ್ಥಿತಿಯನ್ನು ನೋಡಿ ಪರಿಜನರು ದುಃಖಪಡುತ್ತಿರುವರು. ಆದ್ದರಿಂದ ೪೪. ಎಲೈ ಸುಂದರಿ, ನೀನು ಮದುವೆಗೆ ಯೋಗ್ಯವಾದ ತಳತಳಿಸುವ ಮಂಗಳಾಲಂಕಾರಗಳನ್ನು ಧರಿಸು. ಹೊಸಬಳ್ಳಿಯು ಹೂವುಗಳಿಂದಲೂ ದುಂಬಿಗಳಿಂದಲೂ ಕೂಡಿ

ವ॥ ಎಂದು ನುಡಿಯೆ ಕಾದಂಬರೀದೇವಿ ಬಾಲ್ಯದಿಂ ಸ್ವಭಾವಮುಗ್ಧೆಯಾಗಿಯುಂ ಮನ್ಮಥೋಪದಿಷ್ಟಪ್ರಜ್ಞೆಯಿಂ ರಾಜಸರ್ವಜ್ಞನವ್ಯಕ್ತವ್ಯಾಹಾರಸೂಚಿತಮಪ್ಪರ್ಥಮಂ ಮನದೊಳಱಿದಿನಿವಿರಿದು ಮನೋರಥಮಸಂಭಾವ್ಯಮೆಂದು ಭಾವಿಸುತ್ತಂ ಶಾಲೀನತೆಯನವಲಂಬಿಸಿ ನುಡಿಯಲಱಿಯದೆ

ಸುದತಿ ಪೆಱತೊಂದು ನೆವದಿಂ
ಕೆದಱಿದಳೊಂದಿನಿಸು ಮಂದಹಾಸದ್ಯುತಿಯಂ
ವದನಾಬ್ಜಪರಿಮಳಾಗತ
ಮದಾಳಿಪಟಲಾಂಧಕಾರಮಂ ಚೆದಱಿಪವೋಲ್ ೪೫

ವ॥ ಆಗಳಾ ಕಾದಂಬರೀದೇವಿಯ ಕೆಳದಿ ಮದಲೇಖೆಯೆಂಬಳ್ ಮೂರ್ತಿನಾರಾಯಣನ ಮೊಗಮಂ ನೋಡಿ

ಇದನೇನೆಂದಪುದಿಂತುಟೆಂದುಸಿರಲಾರ್ಗಂ ಬಾರದೀ ತಾಪದೊಂ
ದೊದವಿಂತೀ ಸುಕುಮಾರಭಾವಯುತೆಗಾದಂ ತಾಪಮಂ ಮಾಡದಾ
ವುದು ಪೇಟಿಂತುಟೆ ದಲ್ ಮೃಣಾಳಿನಿಗೆ ತೀವ್ರಾಗ್ನಿಸ್ವರೂಪಂಗಳಾ
ಗದೆ ಮಾಣ್ದಿರ್ದಪೆ ಚಂದ್ರಿಕಾಪ್ರಸರಮುಂ ನೀಹಾರವಿಸ್ತಾರಮುಂ ೪೬

ಕೊಂಡಿದ್ದರೆ ಬಹಳ ಚೆನ್ನಾಗಿ ಒಪ್ಪುತ್ತದೆ!" ವ॥ ಎಂದು ಚಂದ್ರಾಪೀಡನು ಹೇಳಲಾಗಿ, ಕಾದಂಬರೀದೇವಿಯು ಎಳೆಯತನದಿಂದ ಸರಳಸ್ವಭಾವದವಳಾದರೂ ಮನ್ಮಥನಿಂದ ಉಪದೇಶಿಸಲ್ಪಟ್ಟ ಪ್ರಜ್ಞೆಯಿಂದ ನಿಪುಣನಾದ ರಾಜಕುಮಾರನ ಅಸ್ಪಷ್ಟವಾದ ಮಾತುಗಳಿಂದ ಸೂಚಿತವಾದ ಅಭಿಪ್ರಾಯವನ್ನು ಮನಸ್ಸಿನಲ್ಲಿ ತಿಳಿದುಕೊಂಡು ಇಷ್ಟುಮಟ್ಟಿಗೆ ಇಷ್ಟಾರ್ಥವು ಕೈಗೂಡಲಾರದೆಂದು ಭಾವಿಸುತ್ತ ಹಿಂಜರಿದು ಮಾತನಾಡದೆ ಹೋದಳು. ೪೫. ಆ ಕಾದಂಬರಿಯು ತನ್ನ ಮುಖಕಮಲದ ಸುವಾಸನೆಗಾಗಿ ಬಂದಿರುವ ಕೊಬ್ಬಿದ ದುಂಬಿಗಳ ಗುಂಪೆಂಬ ಕತ್ತಲೆಯನ್ನು ಚದುರಿಸುವವಳಂತೆ, ಬೇರೊಂದು ನೆಪದಿಂದ ನಸುನಗೆಯ ಬೆಳಕನ್ನು ಕೊಂಚ ಹರಡಿದಳು. ವ॥ ಆಗ ಆ ಕಾದಂಬರೀದೇವಿಯ ಗೆಳತಿಯಾದ ಮದಲೇಖೆಯೆಂಬುವಳು ನಾರಾಯಣಸ್ವರೂಪನಾದ ರಾಜಕುಮಾರನ ಮುಖವನ್ನು ನೋಡಿ, ೪೬. "ಕುಮಾರ, ನಾನು ಏನು ಹೇಳಲಿ ? ಈಗ ಇವಳಿಗೆ ಉಂಟಾಗಿರುವ ಸಂತಾಪವು ಇಷ್ಟೆಂದು ಹೇಳಲು ಯಾರಿಗೂ ಸಾಧ್ಯವಿಲ್ಲದಂತಾಗಿದೆ. ಇಂತಹ ಸುಕುಮಾರಭಾವಯುತೆಗೆ (೧. ಕೋಮಲಪ್ರಕೃತಿಯುಳ್ಳವಳಿಗೆ, ೨. ರಾಜಕುಮಾರನಾದ ನಿನ್ನಲ್ಲಿ ಪ್ರೀತಿಯಿಟ್ಟಿರುವವಳಿಗೆ) ಯಾವುದು ತಾನೆ ಸಂತಾಪವನ್ನುಂಟುಮಾಡುವುದಿಲ್ಲ? ಹೇಳು. ಇದು ಖಂಡಿತ. ತಾವರೆಬಳ್ಳಿಗೆ ಬೆಳದಿಂಗಳ ಪ್ರಸಾರವೂ ಮಂಜುಕವಿಯುವುದೂ ತೀಕ್ಷ್ಣವಾದ ಬೆಂಕಿಯ ರೂಪವನ್ನು ತಾಳದೆ ಇರುತ್ತವೆಯೆ? ಟಿ. ಇಲ್ಲಿ "ಸುಕುಮಾರಭಾವಯುತೆ" ಎಂಬಲ್ಲಿ ಶ್ಲೇಷೆಯಿಂದ ಕಾದಂಬರಿಯು ರಾಜ

ನೀರೇಜ ತಾಳವೃಂತ ಸ
ಮೀರಾದಿಗಳಿಂದೆ ತಾಪಮೊದವಿದಪುದು ನೋ
ಡೀ ರಮಣಿಗೆ ಧೀರತ್ವದ
ನಾರತ ಸಂಗತಿಯದೊಂದೆ ಜೀವಾಧಾರಂ ೪೭

ವ॥ ಎಂದು ಕಾದಂಬರೀಹೃದಯಗತಮಪ್ಪುದನೇ ಮದಲೇಖೆ ನುಡಿಯೆ ತನ್ನ ನುಡಿಗಳ್ಗೆ ಪ್ರತ್ಯುತ್ತರದಂತೇತೆಱದೊಳಮೀ ನುಡಿ ಘಟಿಯಿಸುವುದೆಂದು ಸಂದೇಹ ಡೋಲಾಧಿರೂಢಚಿತ್ತನಾಗಿ ಮಹಾಶ್ವೇತೆವೆರಸು ಪ್ರೀತ್ಯುಪಚಯಚತುರಂಗಳಪ್ಪ ವಚನಂಗಳಂ ನುಡಿಯುತ್ತಂ ಪಿರಿದುಬೇಗಮಿರ್ದು ಗಂಧರ್ವರಾಜನಂದನೆಯುಂ ತನ್ನಂತೆಸಂ ಬಿಡಿಸಿ ಬೀೞ್ಕೊಂಡು ನಿಜಸ್ಕಂಧಾವಾರಕ್ಕೆ ಪೋಗಲೆಂದು ತದೀಯ ಭವನಮಂ ಪೊಱಮಟ್ಟಿಂದ್ರಾಯುಧದ ಬೆಂಗೆವಂದಾಗಳ್ ಕೇಯೂರಕಂ ದೇವ ಪತ್ರಲೇಖೆಯುಂ ಕೆಲವು ದಿನಕ್ಕೆ ಕಳುಪಿದಪೆವಿರಿಸುವುದೆಂದು ಪ್ರಥಮದರ್ಶನಜನಿತಪ್ರೀತಿಯಪ್ಪ ಕಾದಂಬರೀದೇವಿಯು ಬೆಸದಿಂ ಮದಲೇಖೆ ಬಿನ್ನಪಂಗೆಯ್ದಟ್ಟಿದಳೆಂಬುದುಂ ಮನುಜಮಕರಧ್ವಜನಿಂತೆಂದಂ

ಕುಮಾರನ ಮೇಲೆ ಪ್ರೀತಿಯಿಟ್ಟಿರುವುದನ್ನು ಸೂಚಿಸಿದಂತಾಯಿತು. ೪೭. ಇವಳಿಗೆ ಕಮಲದ ಎಲೆಯು ಬೀಸಣಿಗೆಯ ಗಾಳಿ ಮೊದಲಾದ ಶೈತ್ಯೋಪಚಾರಗಳಿಂದ ಎಷ್ಟು ಸಂತಾಪವಾಗುತ್ತಿದೆ ಎಂಬುದನ್ನು ನೀನೇ ನೋಡು. ಒಟ್ಟಿನಲ್ಲಿ ಈ ಸುಂದರಿಗೆ ಧೈರ್ಯವೊಂದು ಎಡಬಿಡದೆ ಇರುವುದರಿಂದ ಅದೇ ಇವಳ ಜೀವಕ್ಕೆ ಮುಖ್ಯಾಧಾರವಾಗಿದೆ. ಟಿ. "ಧೀರತ್ವದನಾರತ ಸಂಗತಿ" ಎಂಬಲ್ಲಿ ಧೀರತ್ವದ, ಅನಾರತ ಸಂಗತಿ. ಧೈರ್ಯದ ಎಡಬಿಡದ ಸಂಬಂಧ. ಧೀರ, ತ್ವತ್ + ಅನಾರತ + ಸಂಗತಿ. ಎಲೈ ಧೈರ್ಯವಂತನೆ ನಿನ್ನ ಎಡಬಿಡದ ಸಹವಾಸವು ಎಂಬ ಎರಡರ್ಥವಿದೆ. ವ॥ ಹೀಗೆ ಕಾದಂಬರಿಯ ಮನಸ್ಸಿನಲ್ಲಿರುವ ಆಶಯವನ್ನೇ ಮದಲೇಖೆ ನುಡಿದಳು. ಚಂದ್ರಾಪೀಡನು ತನ್ನ ಮಾತಿಗೆ ಈ ಮದಲೇಖೆಯ ಮಾತು ಹೇಗಾದರೂ ಪ್ರತ್ಯುತ್ತರವಾಗಿ ಹೊಂದಾಣಿಕೆಯಾಗುತ್ತದೆಯೆ? ಎಂದು ಸಂಶಯವೆಂಬ ತೊಟ್ಟಿಲನ್ನು ಏರಿರುವ ಮನಸ್ಸುಳ್ಳವನಾಗಿ(ಸಂಶಯಚಿತ್ತನಾಗಿ), ಮಹಾಶ್ವೇತೆಯೊಂದಿಗೆ ಹೆಚ್ಚು ಸ್ನೇಹವನ್ನು ತೋರ್ಪಡಿಸುವ ಜಾಣತನದ ಮಾತುಗಳನ್ನಾಡುತ್ತಾ ಬಹಳ ಹೊತ್ತನ್ನು ಕಳೆದನು. ಬಳಿಕ ಕಾದಂಬರಿಯಿಂದ ಬಹಳ ಕಷ್ಟಪಟ್ಟು ಬಿಡಿಸಿಕೊಂಡು ಬೀಳ್ಕೊಂಡು ತನ್ನ ಪಾಳೆಯಕ್ಕೆ ಹೋಗಬೇಕೆಂದು ಆವಳ ಮನೆಯಿಂದ ಹೊರಟು ಇಂದ್ರಾಯುಧವನ್ನು ಹತ್ತುವಷ್ಟರಲ್ಲಿ ಕೇಯೂರಕನು ಬಂದು "ಸ್ವಾಮಿ, ಪತ್ರಲೇಖೆಯನ್ನು ಕೆಲವು ದಿನಗಳವರೆಗೆ ಇಲ್ಲೇ ಇರಿಸಿಕೊಂಡು ಆಮೇಲೆ ಕಳುಹಿಸಿಕೊಡುತ್ತೇವೆ. ಇಲ್ಲೇ ಬಿಟ್ಟುಹೋಗಬೇಕು ಎಂದು ಅವಳನ್ನು ಮೊದಲು ಕಂಡಮಾತ್ರದಿಂದಲೆ ಸ್ನೇಹವುಂಟಾಗಿರುವ ಕಾದಂಬರಿಯ ಅಪ್ಪಣೆಯಂತೆ ಮದಲೇಖೆಯು ಅರಿಕೆಮಾಡಲು ಹೇಳಿಕಳುಹಿಸಿದ್ದಾಳೆ" ಎಂದು ಹೇಳಲು ಮಾನವ ರೂಪಿ

ಆರೊ ಪಡೆದಪರಿದಂ ಕೇ
ಯೂರಕ ದೇವೀಪ್ರಸಾದಮಂ ಧನ್ಯೆಯಿವಳ್
ಸಾರಿರ್ದಪಳ್ ಗಡಿಂತೀ
ಕಾರುಣ್ಯಪದಕ್ಕೆ ಪತ್ರಲೇಖೆಯೆ ನೋಂತಳ್ ೪೮

ವ॥ ಎಂದು ಪತ್ರಲೇಖೆಯನಿರಲ್ವೇಟ್ಟು ನಡೆಗೊಂಡು ನಿಜಸ್ಕಂಧಾವಾರಮಂ ಪುಗು ವಾಗಳ್

ಚರನುಜ್ಜೈನಿಯಿನೊರ್ವನಾಗಳೆ ಬರಲ್ ಕಾಣುತ್ತಮೌತ್ಸುಕ್ಯದಿಂ
ಪರಿವಾರಂಬೆರಸೆಮ್ಮ ತಂದೆಯುಮಶೇಷಾಂತಃಪುರಸ್ತ್ರೀಜನಂ
ಬೆರಸೆಮ್ಮಬ್ಬೆಯುಮಿರ್ದರೇ ಸುಖದಿನೆಂದಾವಿರ್ಭವತ್ಪ್ರೀತಿನಿ
ರ್ಭರವಿಸ್ಫಾರಿತನೇತ್ರನಂದು ಬೆಸಗೊಂಡಂ ಚಂದ್ರಚೂಡಾಹ್ವಯಂ ೪೯

ವ॥ ಅಂತು ಬೆಸಗೊಳ್ವುದುಮಾ ಲೇಖವಾಹಕಂ ಪೊಡಮಡುತ್ತೈದೆವಂದು ದೇವರ್ ಬೆಸಸಿದಂದದೊಳೆಲ್ಲರುಂ ಸುಖದಿನಿರ್ದರೆಂದು ಬಿನ್ನವಿಸಿ ನಿಮ್ಮ ತಂದೆಯರಟ್ಟಿದ ರಾಜಾದೇಶ ಮಿದೆಂದು ಲೇಖನದ್ವಿತಯಮುಮಂ ನೀಡೆ

ಯುವರಾಜನೃಪಂ ನಯವಿನ
ಯವಿನೂತಂ ತಲೆಯೊಳಾಂತು ಕೈಕೊಂಡು ಮಹೋ
ತ್ಸವದಿಂದಂ ರಾಜಾದೇ
ಶವನಾಗಳ್ ಬಿರ್ಚಿನೋಡಿ ತಾಂ ಬಾಚಿಸಿದಂ ೫೦

ನಿಂದ ಶೋಭಿಸುವ ಮನ್ಮಥನಂತಿರುವ ಚಂದ್ರಾಪೀಡನು ಹೀಗೆಂದನು. ೪೮. "ಕೇಯೂ ರಕ, ಕಾದಂಬರೀದೇವಿಯರ ಇಂತಹ ಅನುಗ್ರಹವು ಮತ್ತಾರಿಗೆ ಲಭಿಸುತ್ತದೆ? ಇವಳೇ ಧನ್ಯಳಲ್ಲವೆ? ಇದ್ದು ಬರಲಿ. ದೇವಿಯ ದಯೆಗೆ ಪಾತ್ರಳಾಗಲು ಪತ್ರಲೇಖೆಯು ಎಷ್ಟು ಪುಣ್ಯ ಮಾಡಿದ್ದಳೊ!" ವ।। ಎಂದು ಪತ್ರಲೇಖೆಯನ್ನು ಇರುವುದಕ್ಕೆ ಹೇಳಿ, ಪ್ರಯಾಣಬೆಳಸಿ, ತನ್ನ ಪಾಳೆಯಕ್ಕೆ ಬರುತ್ತಿರುವಲ್ಲಿ, ೪೯. ಆಗ ಉಜ್ಜಯಿನಿಪಟ್ಟಣ ದಿಂದ ಒಬ್ಬ ದೂತನು ಬಂದನು. ಅವನನ್ನು ಕಂಡಕೂಡಲೇ ಚಂದ್ರಾಪೀಡನು ಉಕ್ಕು ತ್ತಿರುವ ಪ್ರೀತಿಯಿಂದ ಬಹಳ ಅಗಲವಾದ ಕಣ್ಣುಳ್ಳವನಾಗಿ, "ನಮ್ಮ ತಂದೆಯವರು ಪರಿ ವಾರಸಮೇತರಾಗಿ ಕ್ಷೇಮವಾಗಿದ್ದಾರೆಯೆ ? ನಮ್ಮ ತಾಯಿಯವರು ರಾಣಿವಾಸದ ಎಲ್ಲರೊಂದಿಗೆ ಕ್ಷೇಮದಿಂದಿದ್ದಾರೆಯೆ?" ಎಂದು ಬಹಳ ಕುತೂಹಲದಿಂದ ಕೇಳಿದನು. ವ।। ಹಾಗೆ ಕೇಳಲಾಗಿ, ಆ ಓಲೆಕಾರನು ನಮಸ್ಕರಿಸಿ, ಹತ್ತಿರಕ್ಕೆ ಬಂದು, "ಪ್ರಭುಗಳು ಕೇಳಿದಂತೆ ಎಲ್ಲರೂ ಸುಖವಾಗಿದ್ದಾರೆ" ಎಂದು ಅರಿಕೆಮಾಡಿ, "ನಿಮ್ಮ ತಂದೆಯವರು ಕಳುಹಿಸಿರುವ ರಾಜಾಜ್ಞೆಯಿದು" ಎಂದು ಎರಡು ಪತ್ರಗಳನ್ನು ಕೊಟ್ಟನು. ೫೦. ವಿನಯದಿಂದ ಶೋಭಿಸುವ ಯುವರಾಜನು ಆ ರಾಜಸಂದೇಶವನ್ನು ಬಹಳ ಸಂತೋಷ

ವ॥ ಆದೆಂತೆನೆ ಸ್ವಸ್ತಿ ಸಕಲರಾಜಶಿಖಂಡಶೇಖರಾರ್ಚಿತ ಚರಣಾರವಿಂದನುಂ ಪರಮ ಮಾಹೇಶ್ವರನುಂ ಮಹಾರಾಜಾಧಿರಾಜನುಮೆನಿಸಿದ ಶ್ರೀಮತ್ತಾರಾಪೀಡದೇವಂ ಸಕಲಗುಣಸಂಪ ದಾಯತನನಪ್ಪ ಯುವರಾಜನಂ ಪರಮಾಶೀರ್ವಾದಪುರಸ್ಸರಂ ಕಾರ್ಯಮಂ ಬೆಸಸಿರ್ಪಂ

ಪ್ರಜೆಯೆಲ್ಲಂ ಕ್ಷೇಮದಿಂದಿರ್ದುದು ಕುಶಲದಿನಿರ್ದಪ್ಪೆವಾವಾದೊಡಂ ದಿ
ಗ್ವಿಜಯಂಗೆಯ್ಯಲ್ಕೆ ಪೋದಂ ಪಲವು ದಿವಸಮಾದತ್ತು ಕಾಣಲ್ಕೆವೇಟ್ಕುಂ
ವಿಜಯಾಲಂಕಾರನಂ ಪುತ್ರನನೆನುತೆ ಮಹೋತ್ಕಂಠೆಯಿಂ ತನ್ನ ಮಾತೃ
ಪ್ರಜಮಿರ್ದತ್ತೋಲೆಯಂ ಬಾಚಿಸುವುದು ತಡಮೆಟ್ಟಂದು ತಾಂ ಕಾಣ್ಬುದೆಮ್ಮಂ
೫೧

ವ॥ ಎಂದು ಬಾಚಿಸಿ ಕುದುರೆಯನೇಱರ್ದಂದದೊಳೆ ಪ್ರಯಾಣಭೇರಿಯಂ ಪೊಯ್ಸಿ

ಮುಂದಿರ್ದ ಮೇಘನಾದನ
ನೆಂದಂ ನೀನಿರ್ದು ಪತ್ರಲೇಖಾಂಗನೆಯಂ
ಮುಂದಿಟ್ಟು ಬಟ್ಟೆಕೆ ಬರ್ಪುದು
ತಂದಪನಿಲ್ಲಿವರಮಾಕೆಯಂ ಕೇಯೂರಂ ೫೨

ದಿಂದ ತಲೆಯಮೇಲಿಟ್ಟುಕೊಂಡು ತಾನೇ ಬಿಚ್ಚಿನೋಡಿ ಓದಿಕೊಂಡನು. ವ|| ಅದು ಹೇಗೆಂದರೆ, "ಸ್ವಸ್ತಿ ಸಮಸ್ತರಾಜರ ಶಿಖಾಮಣಿಗಳಿಂದ ಪೂಜಿಸಲ್ಪಡುವ ಪಾದಕಮಲ ವುಳ್ಳ ಪರಮೇಶ್ವರನ ಪರಮಭಕ್ತನಾದ ಮಹಾರಾಜಾಧಿರಾಜನಾದ ಶ್ರೀ ತಾರಾಪೀಡ ಮಹಾರಾಜನು ಸಮಸ್ತ ಗುಣಸಂಪತ್ತಿಗೆ ಮನೆಯಂತಿರುವ ಯುವರಾಜನಿಗೆ ಅಮೋಘ ವಾದ ಆಶೀರ್ವಾದದೊಂದಿಗೆ ಕರ್ತವ್ಯವನ್ನು ನಿರೂಪಿಸುತ್ತಾನೆ. ಏನೆಂದರೆ, ೫೧. ಪ್ರಜೆಗಳೆಲ್ಲರೂ ಕ್ಷೇಮದಿಂದಿದ್ದಾರೆ. ನಾವೂ ಕ್ಷೇಮದಿಂದಿದ್ದೇವೆ. ನೀನು ದಿಗ್ವಿಜಯ ಕ್ಕಾಗಿ ಪ್ರಯಾಣಮಾಡಿ ಬಹಳ ದಿನಗಳಾದುವು. ನಿನ್ನ ತಾಯಂದಿರು ಜಯದಿಂದ ಶೋಭಿಸುತ್ತಿರುವ ಮಗನನ್ನು ನೋಡಬೇಕೆಂದು ತವಕಿಸುತ್ತಿದ್ದಾರೆ. ಆದ್ದರಿಂದ ಈ ಪತ್ರವನ್ನು ಓದಿದ ಕೂಡಲೇ ತಡಮಾಡದೆ ಬಂದು ನಮ್ಮನ್ನು ಕಾಣತಕ್ಕದ್ದು." ಟಿ. ಓಲೆಕಾರನು ಎರಡು ಪತ್ರಗಳನ್ನು ಕೊಟ್ಟನೆಂದು ಹಿಂದೆ ಹೇಳಿದೆ. ಮತ್ತೊಂದು ಪತ್ರವು ಶುಕನಾಸನು ಇದೇ ಅಭಿಪ್ರಾಯವನ್ನು ತಾನೂ ತಿಳಿಸಿ ಬರೆದಿದ್ದ ಪತ್ರವೆಂದು ಮೂಲಕಾದಂಬರಿಯಲ್ಲಿದೆ. ಇಲ್ಲಿ ಬಿಟ್ಟುಹೋಗಿದೆ. ವ|| ಹೀಗೆ ಓದಿ ಕುದುರೆಯ ಮೇಲೆ ಕುಳಿತುಕೊಂಡೇ ಪ್ರಯಾಣಭೇರಿಯನ್ನು ಹೊಡೆಸಿದನು. ೫೨. ಮುಂದಿದ್ದ ಮೇಘನಾದನನ್ನು ಕುರಿತು, "ನೀನು ಪತ್ರಲೇಖೆಯು ಬರುವವರೆಗೂ ಇಲ್ಲೇ ಇದ್ದು, ಅವಳನ್ನು ಕರೆದುಕೊಂಡು ಬಾ. ಇಲ್ಲಿಯವರೆಗೆ ಕೇಯೂರಕನು ಕರೆದುಕೊಂಡು ಬರು

ವ॥ ಕೇಯೂರಕಂಗೆ ನೀನಿಂತು ಪೇಟ್ವುದು

ನೆನೆಯದೆ ತಮ್ಮ ವತ್ಸಲತೆಯಂ ಪರಿಭಾವಿಸದೊಳ್ಪನಟ್ಕಱಿಂ
ಮನದೊಳಣಂ ವಿಚಾರಿಸದೆ ನಿಸ್ಪೃಹತಾತ್ಮಕನೆಂಬಳೀಕಭ
ಕ್ತನುಮುಪಚಾರಶೀಲನುಮೆನಿಪ್ಪೆನಗಂ ನುಡಿಯೊಂದು ಮಾಟವೊಂ
ದೆನಿಸಿದ ಮಾನವಂಗೆನಗೆ ದೇವಿ ಪಸಾದಮನೇಕೆ ಮಾಡಿದಳ್ ೫೩

ವ॥ ಅದಲ್ಲದೆಯುಂ

ಏನುಮಂ ಕೈವಾರದಿಂದಿಲ್ಲದ ಗುಣಗಣಮಂ ರಾಗದಿಂ ಕೆಮ್ಮನೀ ಪಾಂ
ಥನೊಳಧ್ಯಾರೋಪಣಂಗೆಯ್ದಿನಗನವರತಂ ಬಣ್ಣಿಸುತ್ತಿರ್ದಳೀ ಮ
ರ್ತ್ಯನೊಳಾವೊಳ್ಪಪ್ಪುದೆಂತೀ ತೆಱನುಮಱಿದೆನುತ್ತಂ ಮಹಾಶ್ವೇತೆಯಂತಾ
ಮನದೊಳ್ ಮೇಣ್ ಮಾತಿನೊಳ್ ಮೇಣಜಱಿಗುಮರಸಿಯೇಂದಾಂ ಕರಂ
ನಾಣ್ಚಿದಪ್ಪೆಂ ೫೪

ಜನಕಾಜ್ಞೆ ಮೀಱಲಂಗಮೆ
ತನುವಿಂತವರೊಡವೆಯಾಗಿ ಸಲ್ಗೆಮ ಗಂಧ
ರ್ವನಿವಾಸಕ್ಕನುವಿಸುವೀ
ಮನವಪ್ಪೊಡೆ ತನಗೆ ಮಾಱುವೋದತ್ತೀಗಳ್ ೫೫

ತ್ತಾನೆ. ವ॥ ಕಾದಂಬರೀದೇವಿಗೆ ಹೀಗೆ ಹೇಳುವಂತೆ ಕೇಯೂರಕನಿಗೆ ತಿಳಿಸು. ೫೩. ನೀವು ನನ್ನಮೇಲೆ ಇಟ್ಟಿರುವ ವಾತ್ಸಲ್ಯವನ್ನೂ ನೆನೆಯದೆ, ನಿಮ್ಮ ಸೌಜನ್ಯವನ್ನೂ ಗಮನಿಸದೆ, ನಿಮ್ಮ ಪ್ರೀತಿಯನ್ನೂ ಮನಸ್ಸಿನಲ್ಲಿ ಸ್ವಲ್ಪವೂ ವಿಚಾರಮಾಡದೆ ಉದಾಸೀನ ಮಾಡಿರುವ ಹಾಗೂ ಕಪಟವಿಶ್ವಾಸವನ್ನು ತೋರಿಸುತ್ತಾ ಕೃತಕ ಉಪಚಾರದಲ್ಲಿ ನಿಪುಣನಾದ, ನುಡಿಯಲ್ಲೇ ಒಂದು ನಡೆಯಲ್ಲೇ ಒಂದು ಮಾಡುತ್ತಿರುವ ಮನುಷ್ಯನಾದ ನನಗೆ, ನೀವು ಏಕೆ ಇಷ್ಟೊಂದು ಅನುಗ್ರಹವನ್ನು ಮಾಡಿದಿರಿ ! ವ॥ ಅದೂ ಅಲ್ಲದೆ ೫೪. ಈ ಮಹಾಶ್ವೇತೆಯು ಒಬ್ಬ ದಾರಿಹೋಕನನ್ನು ಮಮತೆಯಿಂದ ಸುಮ್ಮನೆ ಏನೇನೂ ಇಲ್ಲದ ಗುಣಗಳನ್ನು ಅವನಲ್ಲಿ ಆರೋಪಿಸಿ ಒಂದೇ ಸಮನೆ ಹೊಗಳಿಬಿಟ್ಟಳು. ಈ ಮನುಷ್ಯನಲ್ಲಿ ಅಷ್ಟು ಒಳ್ಳೆತನವಾದರೂ ಎಲ್ಲಿ ಬಂತು? ಇದನ್ನು ತಿಳಿಯುವುದೇ ಕಷ್ಟವಾಗಿದೆ ಎನ್ನುತ್ತ ಮಹಾಶ್ವೇತೆಯನ್ನು ದೇವಿಯವರು ಮನಸ್ಸಿನಿಂದಲೂ ಮಾತಿನಿಂದಲೂ ಜರೆಯುತ್ತಾರಲ್ಲ ಎಂದು ನನಗೆ ಬಹಳ ನಾಚಿಕೆಯಾಗಿದೆ. ೫೫. ತಂದೆಯ ಮಾತನ್ನು ಮೀರುವುದು ಸರಿಯೆ? ಈ ಶರೀರವು ಅವರ ಒಡವೆಯಾಗಿ ಇದ್ದುಕೊಂಡಿರಲಿ. ಆದರೆ ಹೇಮಕೂಟದಲ್ಲೇ ನೆಲೆಸಲು ಬಯಸುವ ಈ ನನ್ನ ಮನಸ್ಸಾದರೋ ನಿಮ್ಮ ಅಧೀನವಾಗಿದೆ.”

ವ॥ ಎಂದಿವು ಮೊದಲಾಗಿ ಪಲವುಮಂ ಗಂಧರ್ವರಾಜನಂದನೆಗೆ ಕೇಯೂರಕನಿಂ ಬಿನ್ನವಿಸಲ್ವೇಳ್ಕುಮೆಂದು ಮೇಘನಾದಂಗೆ ಪೇಳ್ದು ಕೆಲದೊಳಿರ್ದ ವೈಶಂಪಾಯನಂಗಂ ಕಟಕಮುಂ ಸಂವರಿಸಿಕೊಂಡು ಬರ್ಪುದೆಂದುಮೊಪ್ಪಿಸಿ

ಖುರನಿರ್ಭಿಣ್ಣ [ನ್ನ] ಮಹೀತಲಂ ಗಮನಹೇಲಾಹರ್ಷಹೇಷಾರವಂ
ಸ್ಫುರಿತಾಂತಧ್ವಜವಾತ್ತಕುಂತಲತಿಕಂ ಸಂವಾಹವಾಜಿವ್ರಜಂ
ಬರೆ ತಾನೇಱಿದ ದಿವ್ಯವಾಜಿಗನಿಸುಂ ಪಕ್ಕಾಗಿ ಕಾದಂಬರೀ
ವಿರಹೋತ್ಕಂಠಿತಚಿತ್ತನಂದು ತಳರ್ದಂ ವೈರೀಭಕಂಠೀರವಂ ೫೬

## ಕಾದಂಬರಿಯ ದ್ವಿತೀಯ ಸಂದರ್ಶನ

### ಸಮಾಪ್ತ

ವ|| ಹೀಗೆಯೆ ಪಲವು ಮಾತುಗಳನ್ನು ಕೇಯೂರಕನ ಮೂಲಕ ಕಾದಂಬರೀದೇವಿಗೆ ಅರಿಕೆ ಮಾಡಬೇಕೆಂದು ಮೇಘನಾದನಿಗೆ ತಿಳಿಸಿ, ಪಕ್ಕದಲ್ಲಿದ್ದ ವೈಶಂಪಾಯನನಿಗೆ ಪಾಳೆಯವನ್ನು ಪ್ರಯಾಣಕ್ಕೆ ಸಿದ್ಧಪಡಿಸಿಕೊಂಡು ಬರುವಂತೆ ನೇಮಿಸಿ, ೫೬. ಶತ್ರುಗಳೆಂಬ ಆನೆಗಳಿಗೆ ಸಿಂಹಪ್ರಾಯನಾದ ರಾಜಕುಮಾರನು ಗೊರಸುಗಳಿಂದ ನೆಲವನ್ನು ಸೀಳುತ್ತಿರುವ, ಪ್ರಯಾಣದ ವಿನೋದದಿಂದ ಉಂಟಾದ ಸಂತೋಷದಿಂದ ಕೆನೆಯುತ್ತಿರುವ, ಚಲಿಸುತ್ತಿರುವ ಬಾವುಟಗಳ ಅಂಚುಳ್ಳ ನೀಳವಾದ ಭಲ್ಲೆಗಳನ್ನು ಹಿಡಿದಿರುವ ಸವಾರರು ಏರಿರುವ ಸವಾರಿ ಕುದುರೆಗಳ ಗುಂಪು ಜೊತೆಯಲ್ಲಿ ಬರುತ್ತಿರಲಾಗಿ, ತಾನು ಸವಾರಿ ಮಾಡುವ ಇಂದ್ರಾಯುಧದ ಮೇಲೆ ಮುಂಡಿಸಿ, ಕಾದಂಬರಿಯ ವಿರಹದಿಂದ ತಳಮಳಗೊಳ್ಳುತ್ತಿರುವ ಮನಸ್ಸುಳ್ಳವನಾಗಿ ಪ್ರಯಾಣ ಮಾಡಿದನು.

## ಕಾದಂಬರಿಯ ದ್ವಿತೀಯ ಸಂದರ್ಶನ

### ಮುಗಿಯಿತು

# ೮. ಚಂದ್ರಾಪೀಡನ ಪುನರಾಗಮನ

ವ॥ ಅಂತು ತಳರ್ದು ನಡೆಗೊಂಡು ಮೊದಲೊಳ್ ಎಳಿಸುತ್ತಿಂಗಗ್ಗಳವಾಗಿ ಕಡು ಗೊರ್ಬಿಂ ಬಳೆದ ಪೆರ್ಮರಂಗಳ ತಿಂತಿಣಿಯೊಳಂ ಕಾಡಾನೆಗಳೊತ್ತಿ ಕೀಟ್ತಿಡೆಗೆಡೆದ ಮರಂಗಳಿಂ ಕೊಂಕುವೆತ್ತ ಬಟ್ಟೆಗಳೊಳಂ ಪೆರ್ಮರಂಗಳ ಮೊದಲೊಳ್ ಕಂಡರಿಸಿದ ಚಂಡಿಕಾಪ್ರತಿಮೆಗಳೊಳ ಮತಿವಿಸ್ಮಯಕರಮಾಗಿ ತಡಿವಿಡಿದು ಮಂದೈಸಿನಿಂದ ಕರಂಜದ ಪೂಗೊಂಚಲುಗಳುಮಂ ಬಟ್ಟೆ ವೋಪರ್ ಬಟಲ್ಕೆಗಟಿದುದನಱಿಪುವ ಬಾಡುಂದಳಿರ ಪಾಸಿಕೆಗಳುಮಂ ಪಲವುಂ ಬಣ್ಣದೆಲೆಗೊ ಳೆಯನೀರ್ಗಳುಮನಪ್ಪುಕೆಯ್ದು ನಿಡುಮರದ ತುದಿಗೋಡುಗಳೊಳ್ ಕಟ್ಟಿದ ತೃಣಪುಲೀ ಚಿಹ್ನಂ ಗಳಿನಱಿಯಲಾದ ಕಾಡಪಟವಾವಿಗೆಗಳೊಳಂ ಬಿಡದೆ ಬಂಡನುಗುಟ್ವಲರ್ದುಱುಗಲಿಂ ಮಂದೈ ಸಿದ ಸಿಂಧುವಾರ ವನರಾಜಿಯಿಂ ನಸುಬೆಳರ್ತ ತಡಿಗಳುಮಂ ಮರದ ತುದಿಗೋಡುಗಳೊಳುಲಿವ ಪಕ್ಕಿಗಳುಮಂ ಲತೆಯ ಪೊದಱ ಪುದುವಿಂ ಪೆಣೆದ ಮಣಲ್ದಾಣಂಗಳುಮಂ ಪಥಿಕರಱಲ್ಗೊಂಡು ತೋಡಿದಱುಂಬನೀರ ಬಗರಗೆಗಳುಮನೊಳಕೆಯ್ದು ಬತ್ತಿದ ಪಳ್ಳಂಗಳೊಳಮತಿರೌದ್ರಮಾದ ಪೇರಡವಿಯೊಳಗೆ ಬರ್ಪಾಗಳ್

ವ॥ ಹಾಗೆ ಹೊರಟು ಪ್ರಯಾಣಮಾಡುತ್ತಾ, ಬುಡದಲ್ಲಿ ಚರ್ಮದ ಹಗ್ಗದ ಅಳತೆ ಯನ್ನೂ ಮೀರಿ (ಬಹಳ ದಪ್ಪನಾಗಿರುವುದರಿಂದ ಕುದುರೆಗಳನ್ನು ಕಟ್ಟಲು ಹಗ್ಗ ಬಿಗಿಯಲು ಆಗದಿರುವ) ಬಹಳ ದಪ್ಪವಾಗಿ ಬೆಳೆದಿರುವ ಹೆಮ್ಮರಗಳ ಗುಂಪು ಗಳಿಂದಲೂ, ಕಾಡಾನೆಗಳು ತಳ್ಳಿ ಕಿತ್ತುಹಾಕಿರುವುದರಿಂದ ದಾರಿಗೆ ಅಡ್ಡಲಾಗಿ ಬಿದ್ದಿರುವ ಮರಗಳ ದೆಸೆಯಿಂದ ಬಳಸು ಬಳಸಾದ ದಾರಿಗಳಿಂದಲೂ, ದೊಡ್ಡ ದೊಡ್ಡ ಮರಗಳ ಬುಡದಲ್ಲಿ ಕೊರೆದಿರುವ ವನದುರ್ಗಾದೇವಿಯ ಪ್ರತಿಮೆಗಳಿಂದಲೂ, ಬೆರಗನ್ನುಂಟು ಮಾಡುವ ಮತ್ತು ದಡವನ್ನೇ ಅನುಸರಿಸಿ ದಟ್ಟವಾಗಿ ಬೆಳೆದಿರುವ ಹುಲುಗಿಲಿಮರದ (ಕರಂಜ ವೃಕ್ಷ) ಹೂಗೊಂಚಲುಗಳಿಂದಲೂ, ದಾರಿಗರು ಆಯಾಸಪರಿಹಾರ ಮಾಡಿಕೊಂಡಿ ರುವುದನ್ನು ಸೂಚಿಸುವ ಬಾಡಿದ ಚಿಗುರುಗಳ ಹಾಸಿಗೆಗಳಿಂದಲೂ ಕೂಡಿಕೊಂಡಿರುವ ಮತ್ತು ಎಲೆಗಳು ಬಿದ್ದು ಕೊಳೆತು ಬಣ್ಣಬಣ್ಣವನ್ನು ಹೊಂದಿರುವ ನೀರುಳ್ಳ, ದಾರಿ ಗರು ನೀರು ಸೇದುವುದಕ್ಕಾಗಿ ಮಾಡಿಕೊಂಡಿದ್ದು ಮರದ ತುದಿಗೊಂಬೆಗಳಿಗೆ ಕಟ್ಟಿ ಹೋಗಿರುವ ಮಡಕೆಯೊಂದಿಗಿರುವ ಹುಲ್ಲಿನ ಉಕ್ಕಡಗಳಿಂದ ಗೊತ್ತುಹಚ್ಚಬಹು ದಾದ ಕಾಡಿನ ಹಳೆಬಾವಿಗಳಿಂದಲೂ, ಒಂದೇಸಮನೆ ಹೂವಿನರಸವನ್ನು ಸುರಿಸುವ ಹೂವುಗಳ ಗುಂಪಿನಿಂದ ದಟ್ಟವಾದ ಲಕ್ಕಿಮರದ ಸಾಲುಗಳಿಂದ ನಸುಬಿಳುಪಾದ ದಡ ಗಳುಳ್ಳ, ಮರದ ತುದಿಗೊಂಬೆಗಳಲ್ಲಿ ಧ್ವನಿಮಾಡುತ್ತಿರುವ ಹಕ್ಕಿಗಳುಳ್ಳ, ಬಳ್ಳಿಯ ಪೊದರುಗಳ ಸಮೂಹದಿಂದ ಹೆಣೆದುಕೊಂಡಿರುವ ಮರಳುನೆಲಗಳುಳ್ಳ, ದಾರಿಗರು

ದೆಸೆದೆಸೆಯೊಳ್ ಪಸರಿಸುತಿರೆ
ಪೊಸತೊಂಡೆಯಪಣ್ಣ ಬಣ್ಣಮಂ ಮಸುಳಿಪ ಕೆಂ
ಬಿಸಿಲ ಮಿಸುಪಿನಿಸು ಪಡುವಣ
ದೆಸೆಗವಲಂಬಿಸಲೊಡರ್ಚಿದತ್ತಿನಬಿಂಬಂ ೧

ದಿನಕೃದ್ಬಿಂಬಸ್ಫುರದ್ದರ್ಪಣಕಲಿತಕರಾಳತ್ರಿಶೂಲಂ ಕನತ್ಕಾಂ
ಚನ ಚಂದ್ರಾರ್ಧಾವಳೀಪ್ರಾಂಚಿತ ಶಿಖರಮಯಶ್ಶೃಂಖಲಾಬದ್ಧ ಘಂಟಾ
ಘನಘೋಷಂ ರಕ್ತಸಿಕ್ತಾಸಿತಚಮರರುಹೋಚ್ಚಾವಚೂಲಂ ಬೃಹಚ್ಛಿಂ
ದನಶಾಖಾಬದ್ಧ ರಕ್ತಧ್ವಜವಿನಿಸಿನಿಸುಂ ಕಾಣಲಾದತ್ತದಾಗಳ್ ೨

ವ॥ ಅಂತಾ ಧ್ವಜಮಂ ಕಂಡದನೆಯ್ದೆವಂದು ಲೋಹದ ತೋರಗಭಂಗಳೊಳಗೆ ಮುರಿ ಗೇಶದಿನೆಸೆವ ಶಬರರ ತಲೆಗಳೋಳಿಯಂತೆ ರಕ್ತಚಾಮರಂಗಳನೊಳಕೆಯ್ದು ಕರ್ಬೊನ್ನ ಕನ್ನಡಿಯ ತೋರಣಂಗಳೊಳಮುಗುರ್ವಿಸುವ ಚಂಡಿಕಾಗೋಪುರದ್ವಾರಪುರೋಭಾಗದೊಳ್ ಚಂದ್ರ ಚೂಡಾಹ್ವಯನಿಂದ್ರಾಯುಧದಿಂದವನಿತಳಕ್ಕವತರಿಸಿ ಪುಗುವಲ್ಲಿಂಜನಶಿಲಾವೇದಿಕೆಯೊಳ್ ನೆತ್ತರಿಂ ಪೊರೆದ ಕೆಯ್ಗಳಿಂ ಜವನಪ್ಪಳಿಸಿದಂತಿರ್ದ ರಕ್ತಚಂದನಚರ್ಚೆಗಳಂ ನೆತ್ತರಂಗೆತ್ತು ನೆಕ್ಕುವ ಬಳ್ಳು ಗಳುಮನತಿರೌದ್ರದೇಹನಪ್ಪ ಲೋಹದ ಮಹಾಮಹಿಷನುಮನೊಂದೊಂದೆಡೆಯೊಳ್ ಬೇಡರರ್ಚಿ

ಬಾಯಾರಿಕೆಯ ಪರಿಹಾರಕ್ಕಾಗಿ ತೋಡಿದ ಚಿಲುಮೆನೀರಿನ ಬಾವಿಗಳನ್ನು ಒಳಕೊಂಡಿ ರುವ ಬತ್ತಿದ ಕಿರುಹೊಳೆಗಳಿಂದ ಕೂಡಿದ ಭಯಂಕರವಾದ ದೊಡ್ಡ ಕಾಡಿನಲ್ಲಿ ಬರುತ್ತಿ ದ್ದನು. ೧. ಹೊಸದಾದ ತೊಂಡೆಯಹಣ್ಣಿನ ಬಣ್ಣವನ್ನು ಕಳೆಗುಂದಿಸುವ (ತೊಂಡೆಯ ಹಣ್ಣಿನಂತೆ ಕೆಂಪಾದ) ಕೆಂಬಿಸಿಲು ದಿಕ್ಕುದಿಕ್ಕುಗಳಲ್ಲೆಲ್ಲಾ ಹರಡುತ್ತಿರ ಲಾಗಿ ಸೂರ್ಯಮಂಡಲವು ಪಶ್ಚಿಮದಿಕ್ಕನ್ನು ಸೇರಲು ಪ್ರಾರಂಭವಾಯಿತು. ೨. ಆಗ ದೊಡ್ಡದಾದ ಗಂಧದಮರದ ಕೊಂಬೆಗೆ ಕಟ್ಟಿದ್ದ ಒಂದು ಕೆಂಬಣ್ಣದ ಬಾವುಟವು ಸ್ವಲ್ಪಸ್ವಲ್ಪ ಕಣ್ಣಿಗೆ ಬೀಳುತ್ತಿತ್ತು. ಅದು ಸೂರ್ಯಬಿಂಬದಂತೆ ಪ್ರಕಾಶಿ ಸುವ ಕನ್ನಡಿಯಿಂದಲೂ ಭಯಂಕರವಾದ ತ್ರಿಶೂಲದಿಂದಲೂ ಕೂಡಿಕೊಂಡಿತ್ತು. ಮತ್ತು ಅದರ ತುದಿಯಲ್ಲಿ ತಳತಳಿಸುವ ಚಿನ್ನದಿಂದ ಮಾಡಿದ ಅರ್ಧಚಂದ್ರಪ್ರತಿಮೆ ಗಳು ಶೋಭಿಸುತ್ತಿದ್ದುವು. ಅದರ ಮೇಲೆ ಕಬ್ಬಿಣದ ಸರಪಣಿಗೆ ಬಿಗಿದಿರುವ ಘಂಟೆಯು ದೊಡ್ಡದಾಗಿ ದನಿಗಯ್ಯುತ್ತಿತ್ತು. ಮತ್ತು ಅದು ಅಲಂಕಾರಕ್ಕಾಗಿ ಕಟ್ಟಿರುವ ನೇಲುವ ಕುಚ್ಚುಳ್ಳ ರಕ್ತದಿಂದ ತೊಯಿದ ಕರಿಯ ಚಾಮರದಿಂದ ಕೂಡಿಕೊಂಡಿತ್ತು. ವ॥ ಆ ಧ್ವಜವನ್ನು ಕಂಡು ಹತ್ತಿರಕ್ಕೆ ಬಂದನು. ಅಲ್ಲಿ ಕಬ್ಬಿಣದ ಹೆಬ್ಬಾಗಿಲಲ್ಲಿ ಗುಂಗುರುಕೂದಲುಗಳಿಂದ ಶೋಭಿಸುವ ಬೇಡರ ತಲೆಗಳ ಸಾಲುಗಳೊ ಎಂಬಂತಿರುವ ಕೆಂಬಣ್ಣದ ಚಾಮರಗಳನ್ನು ಹೊಂದಿರುವ, ಕಬ್ಬಿಣದ ಕನ್ನಡಿಗಳ ತೋರಣಗಳಿಂದ ಶೋಭಿಸುವ, ಚಂಡಿಕಾಲಯದ ಹೆಬ್ಬಾಗಿಲಿನ ಮುಂದೆ ಚಂದ್ರಾಪೀಡನು ಇಂದ್ರಾ ಯುಧದಿಂದ ನೆಲಕ್ಕಿಳಿದು ಒಳಹೊಕ್ಕನು. ಅಲ್ಲಿ ಕಪ್ಪು ಶಿಲೆಯ ವೇದಿಕೆಯ ಮೇಲೆ ಪ್ರತಿಷ್ಠಿಸಿರುವ ಬಹಳ ಭಯಂಕರವಾದ ಆಕಾರವುಳ್ಳ ಕಬ್ಬಿಣದ ಕೋಣನ ಪ್ರತಿಮೆ

ಸಿದ ಕಾಡೆಮ್ಮೆವೋರಿಗಳ ಕಣ್ಗಳಂತಿರ್ದ ರಕ್ತೋತ್ಪಲಂಗಳುಮನೊಂದೊಂದೆಡೆಯೊಳ್ ಸಿಂಗದುಗುರ್ಗಳೆ ನರ್ಚಿಸಿದಂತಿರ್ದ ಕೆನ್ನಗಸೆಯ ಮುಗುಳ್ಗಳುಮನೊಂದೊಂದೆಡೆಯೊಳ್ ಕಾಡೆಮ್ಮೆವೋರಿಗಳ ತಿಂತಿಣಿಯುಮನೊಂದೊಂದೆಡೆಯೊಳ್ ಕೊಯ್ದಿರ್ದ ನಾಲಗೆಯ ರಾಶಿಗಳುಮನೊಂದೊಂದೆಡೆಯೊಳ್ ಕಳೆದಿರ್ದ ಕಣ್ಣಾಲಿಗಳ ಪುಂಜಂಗಳುಮನೊಂದೊಂದೆಡೆಯೊಳರಿದಿಕ್ಕಿದ ಪಂದಲೆಗಳ ಸಂದಣಿಗಳುಮಂ ಕೊಂಬುಕೊಂಬುದಪ್ಪದೆಜಗಿದ ರಕ್ತಕುಕ್ಕುಟಂಗಳಿಂ ಭಯದೊಳಕಾಲಕುಸುಮಸ್ತಬಕಮಂ ತೋಱುವಂತಿರ್ದ ರಕ್ತಾಶೋಕಾನೋಕಹಂಗಳುಮಂ ಶಂಕಾಜ್ವರಕಂಪಿತಮೆನಿಸಿದ ಕದಳಿಕಾವನಮುಮಂ ಚಂಡಿಕಾಪರಿಗ್ರಹಪ್ರಚಂಡಂಗಳಪ್ಪ ಕಿಶೋರಕೇಸರಿಗಳುಮನವಲೋಕಿಸುತ್ತಂ ಪೋಗೆವೋಗೆ

> ನೆಗೆದೆತ್ತಂ ಧೂಪಧೂಮಂ ಪಸರಿಸೆ ನಸುಗಂದಿರ್ದ ಕೆಂಬಟ್ಟೆಯಿಂ ಗಂ
> ಟೆಗಳಿಂ ಮಾಯೂರಕಂಠಾವಳಿಯಿನೆಸೆದಿರಲ್ ತೋರಣಂ ಕೂಡೆ ಕಣ್ಗ
> ಬ್ಬೆಗಮಂ ತಾಳ್ದಿರ್ದ ದಂತಾರ್ಗಳಕಲಿತ ಕವಾಟಂಗಳಿಂ ಚಂಡಿಕಾಗ
> ರ್ಭಗೃಹದ್ವಾರಪ್ರದೇಶಂ ಜನಪನ ಬಗೆಗಾಶ್ಚರ್ಯಮಂ ಮಾಡಿತಾಗಳ್ ೩

ಯನ್ನು ಕಂಡನು. ಅದರ ಬೆನ್ನಮೇಲೆ ಕೆಂಬಣ್ಣದ ಹಸ್ತಚಿಹ್ನೆಗಳನ್ನು ಹಾಕಿದ್ದರು. ಅದು ಯಮನು ಬೇಗ ಹೋಗುವಂತೆ ತನ್ನ ರಕ್ತಸಿಕ್ತವಾದ ಕೈಗಳಿಂದ ಅದರ ಬೆನ್ನನ್ನು ತಟ್ಟಿದ್ದಾನೋ ಎಂಬಂತೆ ಕಾಣುತ್ತಿತ್ತು! ಆ ಕೆಂಪು ಹಸ್ತಚಿಹ್ನೆಗಳನ್ನು ರಕ್ತವೆಂದು ಭ್ರಮಿಸಿ ನರಿಗಳು ನೆಕ್ಕುತ್ತಿದ್ದುವು. ಮತ್ತೊಂದು ಕಡೆಯಲ್ಲಿ ಬೇಡರು ದೇವರಿಗೆ ಒಪ್ಪಿಸಿದ ಕಾಡುಕೋಣಗಳ ಕಣ್ಣುಗಳಂತಿರುವ ಕೆಂಪುಕಮಲಗಳಿದ್ದುವು. ಮತ್ತೊಂದು ಕಡೆಯಲ್ಲಿ ದೇವಿಗೆ ಅರ್ಪಿಸಲು ತಂದಿರುವ ಸಿಂಹದ ಉಗುರುಗಳಂತಿದ್ದ ಕೆಂಪು ಅಗಸೆಯ ಹೂವುಗಳಿದ್ದುವು. ಮತ್ತೊಂದು ಕಡೆಯಲ್ಲಿ ದೇವಿಗೆ ಬಲಿಗೊಡಲು ತಂದಿರುವ ಕಾಡುಕೋಣಗಳ ಗುಂಪಿದ್ದಿತು. ಇನ್ನೊಂದು ಕಡೆಯಲ್ಲಿ ಕೊಯ್ದಿದ್ದ ನಾಲಿಗೆಗಳ ರಾಶಿಯಿದ್ದಿತು. ಬೇರೊಂದು ಕಡೆ ಕಿತ್ತು ತೆಗೆದಿದ್ದ ಕಣ್ಣುಗುಡ್ಡೆಗಳ ಗುಂಪಿದ್ದಿತು. ಒಂದುಕಡೆ ಕತ್ತರಿಸಿ ಒಟ್ಟಿರುವ ಹಸಿತಲೆಗಳ ಸಮೂಹವಿದ್ದಿತು. ಅಂಗಳದಲ್ಲಿದ್ದ ಕೆಂಪು ಅಶೋಕವೃಕ್ಷದ ಕೊಂಬೆಕೊಂಬೆಗಳಲ್ಲೂ ಕೆಂಪುಕೋಳಿಗಳು (ನಾಯಿಗಳ ಭಯದಿಂದ) ಏರಿ ಕುಳಿತಿದ್ದುವು! ಅದರಿಂದ ಆ ಮರವು ಆಗ ಹೂವಿನ ಗೊಂಚಲುಗಳನ್ನು ಬಿಟ್ಟಿದೆಯೊ ಎಂಬಂತೆ ತೋರುತ್ತಿತ್ತು! ತಮ್ಮನ್ನೆಲ್ಲಿ ಬಲಿಕೊಡುತ್ತಾರೋ ಎಂಬ ಹೆದರಿಕೆಯಿಂದ ಉಂಟಾದ ಜ್ವರದಿಂದಲೋ ಎಂಬಂತೆ ಅಲ್ಲಿನ ಬಾಳೆ ಗಿಡಗಳು ಗಾಳಿಯಿಂದ ತೊನೆದಾಡುತ್ತಿದ್ದುವು. ಚಂಡಿಕಾದೇವಿಯು ತಮ್ಮ ಜಾತಿಯ ಸಿಂಹವೊಂದನ್ನು ವಾಹನ ಮಾಡಿಕೊಂಡಿರುವ ಜಂಭದಿಂದಲೋ ಎಂಬಂತೆ ಸಿಂಹದ ಮರಿಗಳು ಸ್ವೇಚ್ಛೆಯಾಗಿ ಓಡಾಡುತ್ತಿದ್ದುವು. ಇವುಗಳನ್ನೆಲ್ಲ ನೋಡುತ್ತಾ ಮುಂದೆ ಹೋಗಲಾಗಿ ೩. ಧೂಪದ ಹೊಗೆಯು ಮೇಲಕ್ಕೇರಿ ಹರಡುತ್ತಿರಲು ಮಾಸಲಾಗಿದ್ದ ಕೆಂಪು ಬಟ್ಟೆಯಿಂದಲೂ ಗಂಟೆಗಳಿಂದಲೂ ನವಿಲುಗಳ ಕೊರಳುಗಳನ್ನು ಪೋಣಿಸಿ

ವ॥ ಅದಂ ನೋಡುತ್ತೆ ಪೋಗೆವೋಗೆ

ಲಲಿತ ರಗಳೆ॥

ಕರಿಗೊರಡನುಡುವಡರ್ದವೆನಿಪ ಸೆರೆಗಾಲ್ಗಳಿಂ
ಬಿಡದೆ ಪೊಡೆವಡೆ ದಡ್ಡುಗಟ್ಟಿದ ನೊಸಲ್ಗಳಿಂ
ಕುಮತಿ ಸಿದ್ಧಾಂಜನದಿನೊಡೆದೊಂದು ಕಣ್ಗಳಿಂ
ತಱಿದುಕೊಳೆ ದೋಣವೋಗಿರ್ದ ಪೆರ್ಬುಣ್ಗಳಿಂ
ಕಿಮ್ಮನಿಟ್ಟಿಗೆಗಳಿಂದಿಡಲುಡಿದ ಕೆಯ್ಗಳಿಂ
ಸೆರೆದೆಗೆಯೆ ಸೂಜಿಯಿಂ ಪೊಲ್ತಿರ್ದ ಕೆಯ್ಗಳಿಂ
ಅಱಿಯದೆಸಗಿದ ರಸಾಯನದ ಸೇವನೆಯಿಂದೆ
ಭೋಂಕೆನಲಕಾಲದೊಳ್ ಸಂಧಿಸಿದ ಜರೆಯಿಂದೆ
ಧೂಮರಕ್ತಾಲಕ್ತಕಂಗಳ ರಸಂಗಳಿಂ
ಬರೆದ ಬಹುಕುಹಕ ಮಂತ್ರದ ಪುಸ್ತಕಂಗಳಿಂ
ಯಕ್ಷಿಣಿಯರಂ ಬಯಸಿ ಮಾಡುವ ಜಪಂಗಳಿಂ
ಬಿಲದುರ್ಗಮಂ ಪೊಕ್ಕು ಪಡೆವ ಶಾಪಂಗಳಿಂ

ಕಟ್ಟಿರುವ ಮಾಲಿಕೆಯಿಂದಲೂ ತೋರಣವನ್ನು ಕಟ್ಟಿದ್ದ, ಕಣ್ಣಿಗೆ ಭಯವನ್ನುಂಟು ಮಾಡುವ ದಂತದ ಅಗಳಿಗಳಿಂದ ಕೂಡಿದ ಬಾಗಿಲುಳ್ಳ ಆ ಚಂಡಿಕಾದೇವಾಲಯದ ಗರ್ಭಗೃಹದ್ವಾರಪ್ರದೇಶವು ಚಂದ್ರಾಪೀಡನ ಮನಸ್ಸಿಗೆ ಬಹಳ ಆಶ್ಚರ್ಯವನ್ನುಂಟು ಮಾಡಿತು. ವ॥ ಅದನ್ನು ನೋಡುತ್ತ ಮುಂದೆ ಹೋಗಲು ೪. ಲಲಿತರಗಳೆ॥ ದ್ರಾವಿಡ ದೇಶದಿಂದ ಬಂದಿರುವ ವೃದ್ಧರಾದ ಉಪಾಸಕರನ್ನು ಕಂಡನು. ಅವರು ಹೇಗಿದ್ದ ರೆಂದರೆ ; ನರಗಳು ಉಡಿದುಕೊಂಡಿರುವ ಅವರ ಕಾಲುಗಳು ಉಡು ಹತ್ತಿರುವ ಸುಟ್ಟು ಕಪ್ಪಾದ ಮರದ ಕೊರಡಿನಂತೆ ಕಾಣುತ್ತಿದ್ದುವು! ನಮಸ್ಕಾರ ಮಾಡುವಾಗ ನೆಲಕ್ಕೆ ಹೊಡೆದು ಹೊಡೆದೂ ಅವರ ಹಣೆ ಜಡ್ಡು ಕಟ್ಟಿಕೊಂಡಿತ್ತು. ಮೋಸಗಾರ ರಾದ ವೈದ್ಯರು ಮಾಡಿಕೊಟ್ಟ ಕಣ್ಣುಕಪ್ಪನ್ನು ಉಪಯೋಗಿಸಿದ್ದರಿಂದ ಅವರ ಒಂದು ಕಣ್ಣು ಹಾಳಾಗಿಹೋಗಿತ್ತು. ದೇವಿಗೆ ತಮ್ಮ ರಕ್ತವನ್ನು ಒಪ್ಪಿಸುವುದಕ್ಕಾಗಿ ದೇಹವನ್ನು ಇರಿದುಕೊಳ್ಳುವುದರಿಂದ ಕುಳಿಬಿದ್ದುಹೋಗಿದ್ದ ದೊಡ್ಡ ಹುಣ್ಣುಗಳು ಮೈಮೇಲೆ ಕಾಣುತ್ತಿದ್ದುವು ! (ವಾಯುರೋಗ ಪರಿಹಾರಕ್ಕಾಗಿ) ಸುಮ್ಮನೆ ಇಟ್ಟಿಗೆಯ ಶಾಖವನ್ನು ಕೊಡುವಾಗ ಅಕ್ರಮವಾಗಿ ಕೊಟ್ಟಿದ್ದರಿಂದ ಅವರ ಒಂದು ತೋಳಿನ ಚಲ ನೆಯೇ ಉಡುಗಿಹೋಗಿದ್ದಿತು! ಮತ್ತೊಂದು ಕೈಯಲ್ಲಿ ನರಗಳು ಸೆಳೆದುಕೊಂಡಿರಲು ಸೂಜಿಯಿಂದ ಹೊಲೆದುಕೊಂಡಿದ್ದರು. ತಿಳಿಯದೆ ಯಾವುದೋ ರಸಾಯನವನ್ನು

ಶ್ರೀಪರ್ವತಾದ್ಭುತ ಕಥಾಪ್ರಕಥನಂಗಳಿಂ
ದಧ್ವಗೋದ್ವೇಗಕರ ವೀಣಾಸ್ವನಂಗಳಿಂ
ಲಿಖಿತ ದುರ್ಗಾಸ್ತೋತ್ರ ಪಟ್ಟಿಕಾವ್ರಾತದಿಂ
ತಲೆದೂಗಿ ಬಿಕ್ಕಿರಿವವೊಲ್ಮೊರೆವ ಗೀತದಿಂ
ವಿಧೃತ ತುರಗಬ್ರಹ್ಮಚರ್ಯತೆಯ ಮುಸಕದಿಂ
ಮುದುಪರೆಳವೆಂಡಿರಂ ಬಯಸಿಪೊಂದೆಸಕದಿಂ
ಬಿಡದೆ ಪಥಿಕರ್ಕರೊಳ್ ಪೋರ್ದುಡಿದ ಬೆಂಗಳಿಂ
ಪೂಮರನನೇಱಿ ಕೆಡೆದುಡಿದವಯುವಂಗಳಿಂ
ಕೆಣಕಿ ಗೋವುಗಳೊದೆಗೆ ಬೆನ್ನೊಳತಿಕೋಪದಿಂ
ಪರಿದೆಡಪಿ ಕೆಡೆದುಡಿದ ಪುಸ್ತಕಕಳಾಪದಿಂ
ಬಿಡೆ ಬಾದುಗೆಯ್ವೊದರಿಸುವ ತಮ್ಮ ಕಡುಪಿಂದೆ
ಓರೊರ್ವರಂ ತಿವಿಯೆ ನೆಗ್ಗಿರ್ದ ಕದಪಿಂದೆ
ಹಾಸ್ಯ ಭೀಭತ್ಸಾದಿ ನಾನಾ ರಸಂಗಳಿಂ
ದೊಂದಿದ ಜರದ್ದ್ರಾವಿಳ ಧಾರ್ಮಿಕಜನಂಗಳಿಂ

ತಿಂದುದರಿಂದ ಅವರಿಗೆ ಅಕಾಲದಲ್ಲಿ ಮುಪ್ಪು ಅಡಸಿತ್ತು. ಅರಗಿನರಸದಿಂದ ಬರೆದು ಹೊಗೆ ಹಾಕಿಟ್ಟುಕೊಂಡಿರುವ ಅನೇಕ ಬಗೆಯ ಇಂದ್ರಜಾಲಮಂತ್ರದ ಪುಸ್ತಕಗಳು ಅವರಲ್ಲಿದ್ದುವು. ಯಕ್ಷಿಣಿಗಳನ್ನು ಕೈವಶಪಡಿಸಿಕೊಳ್ಳಲು ಅವರು ಅನೇಕ ಜಪಗಳನ್ನು ಮಾಡಿದ್ದರು, (ಪಾತಾಳಲೋಕಕ್ಕೆ ಹೋಗಿ ರಾಕ್ಷಸನನ್ನು ಕೈವಶಪಡಿಸಿಕೊಳ್ಳಬೇಕೆಂಬ ಹುಚ್ಚಿನಿಂದ) ದುರ್ಗಮವಾದ ಗುಹೆಗಳಿಗೆ ನುಗ್ಗಿ ಅಲ್ಲಿ ತಪಸ್ಸುಮಾಡುತ್ತಿರುವ ಯೋಗಿಗಳಿಂದ ಶಾಪ (ನಿಂದೆ) ವನ್ನು ಪಡೆಯುತ್ತಿದ್ದರು. ಅಲ್ಲದೆ ಶ್ರೀಶೈಲದಲ್ಲಿ ಸಿದ್ಧಿಪಡೆದ ಸಾಧಕರ ಅದ್ಭುತವಾದ ಬಗೆಬಗೆಯ ದಂತಕಥೆಗಳನ್ನು ಬಣ್ಣಿಸುವುದರಲ್ಲಿ ನಿಸ್ಸೀಮರಾಗಿದ್ದರು. ಅಪಸ್ವರದಿಂದ ವೀಣೆಯನ್ನು ಬಾರಿಸುತ್ತ ದಾರಿಗರಿಗೆಲ್ಲ ಬಹಳ ಬೇಜಾರನ್ನುಂಟುಮಾಡುತ್ತಿದ್ದರು, ದುರ್ಗಾಸ್ತೋತ್ರಗಳನ್ನು ಬರೆದಿರುವ ತಾಳೆಗರಿಗಳ ದೊಡ್ಡ ಸಂಗ್ರಹವೇ ಅವರಲ್ಲಿತ್ತು. ಸೊಳ್ಳೆಯಂತೆ ಗುಂಯ್‌ಗುಂಯ್‌ಗುಟ್ಟುತ್ತಾ ತಲೆಯನ್ನು ತೂಗಿ ತೂಗಿ ಕುರುಪದಗಳನ್ನು ಹಾಡುತ್ತಿದ್ದರು. ಅವರು ತಾಳಿದ್ದ ತುರಗಬ್ರಹ್ಮಚರ್ಯದ (ಹೆಣ್ಣು ಕೊಡುವವರಿಲ್ಲದುದರಿಂದ ಗತಿಯಿಲ್ಲದೆ ಬ್ರಹ್ಮಚಾರಿಯಾಗಿರುವುದು) ಪ್ರಭಾವದಿಂದ ಮುದುಕರ ಹೆಂಡತಿಯರಾದ ತರುಣಿಯರನ್ನು ಕಾಮಿಸುವ ಚಟವನ್ನಿಟ್ಟುಕೊಂಡಿದ್ದರು. ದೇವಾಲಯಕ್ಕೆ ಬಂದ ದಾರಿಗರೊಡನೆ ಕೀಟಲೆ ಮಾಡಿದಾಗ ನಡೆದ ಹೊಡೆದಾಟದಿಂದ ಅವರ ಬೆನ್ನು ಒಡೆದುಹೋಗಿದ್ದಿತು ! ಹಸುಗಳನ್ನು ಹಿಂದುಗಡೆ ಕೆಣಕಲಾಗಿ ಅವು ಕೋಪದಿಂದ ಒದೆಯಲು, ಹಿಂದಕ್ಕೆ ಸರಿಯುವಾಗ ಪುಸ್ತಕಗಳನ್ನು ಎಡವಲು ಅವು ಕೆಳಗೆ

ಬೆಳಸಿ ನೆರೆಬೆಳೆದ ನಿಡುಧೂಪಧೂಮಂಗಳಿಂ
ಪರಶು ಪಟ್ಟಿಸ ಮಂಡಲಾಗ್ರಧಾಮಂಗಳಿಂ
ಪಾತಾಳಗುಹೆಯೊಳಗೆ ತೋಱುವಂತಿರ್ದಳಂ
ಕೃಷ್ಣಚಾಮರಚಯಂ ಪೊಳೆಯಲೊಪ್ಪಿರ್ದಳಂ
ರಕ್ತಚಂದನಕುಸುಮಕಲಿಕಾಸಮೂಹದಿ
ಪ್ರಾಲಂಬರಕ್ತಾಮ್ರಗುಚ್ಛಸಂದೋಹದಿಂ
ಕನಕಪಟ್ಟಗ್ರಥಿತ ಪೃಥುಫಾಲಫಲಕದಿಂ
ಶಬರಕಾಂತಾರಚಿತ ಸಿಂಧೂರತಿಲಕದಿಂ
ದಾಡಿಮೀಕುಸುಮಕೃತ ನವಕರ್ಣಪೂರದಿಂ
ರಕ್ತೋತ್ಪಲಪ್ರತಿಮ ನೇತ್ರವಿಸ್ತಾರದಿಂ
ಭ್ರುಕುಟಿಕುಟಿಲ ಭ್ರೂಲತಾ ಬಭ್ರುರೋಚಿಯಿಂ
ರುಚಿರ ತಾಂಬೂಲಾರುಣಾಧರ ಮರೀಚಿಯಿಂ
ಕೌಸುಂಭಶುಂಭದ್ದುಕೂಲಕಲಿತಾಂಗದಿಂ
ಕಣ್ಗೆಸೆದು ತೋಱುವ ಕರಾಳತ್ರಿಭಂಗಿಯಿಂ
ರೌದ್ರಭಾವಂ ನೆಲಸಿನಿಲೆ ತನ್ನೊಳೆಸೆದಳಂ
ಮಾಕಾಳದೇವನಭಿಸಾರಿಕೆವೊಲೆಸೆದಳಂ

ಬಿದ್ದು ಹರಿದುಹೋಗುತ್ತಿದ್ದುವು! ಬಂದವರೊಂದಿಗೆ ಜಗಳವಾಡುವಾಗ ಉಂಟಾದ ಕ್ರೂರತನದ ತಿವಿದಾಟದಲ್ಲಿ ಇವರ ಕೆನ್ನೆಗಳು ಗಾಯಗೊಂಡಿದ್ದುವು! ಹೀಗೆ ಅವರ ವೃತ್ತಾಂತವು ಹಾಸ್ಯ ಬೀಭತ್ಸ ಮೊದಲಾದ ರಸಗಳಿಗೆ ಆಸ್ಪದವಾಗಿದ್ದಿತು. ಇಂತಹ ದ್ರಾವಿಡರಾದ ಉಪಾಸಕಜನಗಳಿಂದ ಕೊಡಿಕೊಂಡಿರುವ ಚಂಡಿಕಾದೇವಿಯನ್ನು ಯುವ ರಾಜನು ಕಂಡನು. ಟಿ. ಮೂಲಕಾದಂಬರಿಯಲ್ಲಿ ಒಬ್ಬನೇ ಉಪಾಸಕನೆಂದು ಹೇಳಿದೆ. ನಾಗವರ್ಮನು ಮಾತ್ರ "ಧಾರ್ಮಿಕಜನಂಗಳಿಂ" ಎಂದಿದ್ದಾನೆ. ಆ ದೇವಿಯು ಮೇಲಕ್ಕೆ ಅಡರಿ ಗರ್ಭಗುಡಿಯಲ್ಲೆಲ್ಲ ಹರಡಿಕೊಂಡಿರುವ ಧೂಪದ ಹೊಗೆಯಿಂದಲೂ, ಕೈಯಲ್ಲಿ ಹಿಡಿದಿರುವ ಕೊಡಲಿ, ಈಟಿ ಮೊದಲಾದ ಆಯುಧಗಳ ಕಪ್ಪುಪ್ರಭೆಯಿಂದಲೂ ಆವೃತಳಾಗಿ ಪಾತಾಳಗುಹೆಯಲ್ಲಿ ನೆಲೆಸಿರುವವಳೋ ಎಂಬಂತೆ ತೋರುತ್ತಿದ್ದಳು. ಕೆಂಪು ಗಂಧದ ಮರದ ಹೂವು ಮೊಗ್ಗುಗಳಿಂದಲೂ, ಕೆಂಬಣ್ಣದ ಮಾವಿನ ಎಲೆಯ ಗೊಂಚಲು ಗಳಿಂದಲೂ ಕಟ್ಟಿರುವ ಇಳಿಬಿದ್ದಿರುವ ಮಾಲಿಕೆಯನ್ನು ಧರಿಸಿದ್ದಳು. ಚಿನ್ನದ ತಗಡನ್ನು ಜೋಡಿಸಿರುವ ವಿಶಾಲವಾದ ಹಣೆಯಿಂದಲೂ, ಆ ಹಣೆಗೆ ಬೇಡಿತಿಯರು ಇಟ್ಟಿ ರುವ ಚಂದ್ರದ ಬೊಟ್ಟಿನಿಂದಲೂ, ದಾಳಿಂಬಿಹೂವಿನಿಂದ ಮಾಡಿರುವ ಕಿವಿಯೋಲೆ ಯಿಂಧಲೂ, ಕೆಂದಾವರೆಯಂತಿರುವ ಅಗಲವಾದ ಕಣ್ಣುಗಳಿಂದಲೂ ಶೋಭಿಸು

ಲಂಬಕೂರ್ಚಾಕಳಾಪಚ್ಛಾಗನಿಕರದಿಂ
ಸ್ಫುರದಧರಪುಟಧವಳ ಮೂಷಕಪ್ರಕರದಿಂ
ಕೃಷ್ಣಾಜಿನಪ್ರಾವೃತೈಣ ನಿಕರಂಗಳಿಂ
ಸೊಡರ್ವಾವೆನಿಪ್ಪ ಪೆಡೆವಣಿಯ ಸರ್ಪಂಗಳಿಂ
ದಾರಾಧ್ಯಮಾನೆಯುಮೊಲಂತೆಸೆವ ತೋರ್ಪಳಂ
ಸಾಧಕಜನಾಭೀಷ್ಟಸಿದ್ಧಿಯಂ ಮಾಳ್ಪಳಂ
ಚಂಡಿಕಾದೇವಿಯಂ ಕಂಡನುರ್ವೀಶ್ವರಂ
ಸದ್ಭಕ್ತಿಪೂರ್ವಂ ಪ್ರತಾಪಲಂಕೇಶ್ವರಂ ೪

ವ|| ಅಂತು ಕಂಡು ಪೂಜಾಪುರಸ್ಸರಂ ಪೊಡಮಟ್ಟು ಕೃತಪ್ರದಕ್ಷಿಣನಾಗಿ ನಮಸ್ಕಾರಂಗೆಯ್ದು ತದನಂತರಂ ಬೀಡಂಬೀಡಲ್ವೇಟ್ಟಲ್ಲಿಯ ಮೂರ್ಖದ್ರವಿಡಧಾರ್ಮಿಕಜನಂಗಳೇ ಜನ್ಮಭೂಮಿಜಾತಿವಿದ್ಯಾಕಳತ್ರಪುತ್ರಮುಮಂ ತಪೋನಿಮಿತ್ತಮುಮಂ ಹಾಸವಿಳಾಸಂ ಬೆಸಗೊಳ್ವುದುಮವಂದಿರ್ ಪಸರಂಬಡೆದು ತಂತಮ್ಮ ಕಲಿತರೂಪಶೌರ್ಯವಿಭವಂಗಳಂ ವಾಚಾಲರಾಗಿ ಬಣ್ಣಿಸು

ತ್ತಿದ್ದಳು. ಗಂಟಿಕ್ಕಿದ ಹಾಗೂ ವಕ್ರವಾದ ಕಂದುಬಣ್ಣದ ಹುಬ್ಬುಗಳಿಂದಲೂ, ತಾಂಬೂಲದಿಂದ ಕೆಂಬಣ್ಣವನ್ನು ತಾಳಿ ರಂಜಿಸುವ ತುಟಿಗಳಿಂದಲೂ ಶೋಭಿಸುತ್ತಿದ್ದಳು. ಕುಸುಬೆಹೂವಿನಂತೆ ಕೆಂಪುಬಣ್ಣವುಳ್ಳ ಪಟ್ಟೆಸೀರೆಯುಡಿಸಿದ್ದ ಶರೀರದಿಂದಲೂ, ಒಪ್ಪಿತೋರುವ ಭಯಂಕರವಾದ ತ್ರಿಭಂಗಿಯಿಂದಲೂ ರೌದ್ರಭಾವವು ನೆಲೆಸಿರಲು, ಮಹಾಕಾಳೇಶ್ವರನನ್ನು ಅಭಿಸರಣ ಮಾಡಲು ಹೊರಟಿರುವವಳಂತೆ ತೋರುತ್ತಿದ್ದಳು. ನೀಳವಾದ ಗಡ್ಡಗಳುಳ್ಳ (ಋಷಿಗಳಂತಿರುವ) ಹೋತಗಳ ಗುಂಪಿನಿಂದಲೂ, (ಜಪ ಮಾಡುವುದಕ್ಕಾಗಿಯೋ ಎಂಬಂತೆ) ತುಟಿ ನಡುಗುತ್ತಿರುವ ಬಿಳಿಇಲಿಗಳ ಸಮೂಹದಿಂದಲೂ, (ಜಿಂಕೆ ಚರ್ಮವನ್ನು ಹೊದ್ದುಕೊಂಡು ಮುನಿಗಳಂತೆ ಕಾಣುವ) ಜಿಂಕೆಗಳಿಂದಲೂ, (ವ್ರತಕ್ಕಾಗಿ ದೀಪವನ್ನು ತಲೆಯ ಮೇಲೆ ಇಟ್ಟುಕೊಂಡಿರುವಂತೆ ಕಾಣುವ) ತಲೆಮಣಿಯಿಂದ ಕೂಡಿದ ಸರ್ಪಗಳಿಂದಲೂ ಸೇವಿಸಲ್ಪಡುವವಳಂತೆ ಸುತ್ತುವರಿಯಲ್ಪಟ್ಟಿದ್ದಳು. ಹೀಗೆ ಶೋಭಿಸುತ್ತಿರುವ ಮತ್ತು ಸಾಧಕರ ಇಷ್ಟಾರ್ಥವನ್ನು ನೆರವೇರಿಸುವ ಆ ಚಂಡಿಕಾಪರಮೇಶ್ವರಿಯನ್ನು ಪರಾಕ್ರಮಶಾಲಿಯಾದ ರಾಜಕುಮಾರನು ಭಕ್ತಿಪೂರ್ವಕವಾಗಿ ದರ್ಶನಮಾಡಿದನು. ವ|| ಹಾಗೆ ದರ್ಶನಮಾಡಿ ಆ ದೇವಿಗೆ ಅಡ್ಡಬಿದ್ದು ಪ್ರದಕ್ಷಿಣ ನಮಸ್ಕಾರವನ್ನು ಮಾಡಿದನು. ಬಳಿಕ ಅಲ್ಲಿಯೆ ಬಿಡಾರ ಮಾಡುವಂತೆ ಸೈನಿಕರಿಗೆ ಆಜ್ಞಾಪಿಸಿ, ಅಲ್ಲಿದ್ದ ಮೂರ್ಖರಾದ ದ್ರವಿಡ ಸಾಧಕರನ್ನು ಅವರ ಊರು, ಜಾತಿ, ವಿದ್ಯೆ, ಹೆಂಡತಿ, ಮಕ್ಕಳು—ಮುಂತಾದ ವಿಷಯಗಳನ್ನೂ, ಮನೆ ಬಿಟ್ಟು ದುರ್ಗಾದೇವಿಯ ಉಪಾಸನೆಗೆ ಬರಲು ಕಾರಣವನ್ನೂ ಹಾಸ್ಯಚತುರನಾದ ರಾಜಕುಮಾರನು

ತ್ರಮಿರೆ ವಿರಹವಿಧುರಹೃದಯನಾಗಿಯುಮವಂ ಕೇಳುತ್ತುಂ ಕಿಱಿದುಂಪೊೞ್ತು ಕಳೆದುಮವಂ ದಿರ್ಗಳ್ಗುಪಜಾತಪರಿಚಯದಿಂ ತಂಬುಲಂಗುಡಲ್ವೇೞ್ದಲ್ಲಿಂದಮೆೞ್ದು ಬೀಡಿಂಗೆವಂದು ನೇಸರ್ ಪಡ ಲೊಡಂ ಕೃತಸಂಧ್ಯಾವಂದನನಾಗಿ ಕಿಱಿದುಬೇಗಮೋಲಗಂಗೊಟ್ಟಿರ್ದು ಸಕಲ ರಾಜಲೋಕಮಂ ವಿಸರ್ಜಿಸಿ ಸೆಜ್ಜೆಗೆ ಬಿಜಯಂಗೆಯ್ದು ಪಸಾಯಿತರೊಳಂ ನುಡಿಯದುನ್ಮೀಲಿತಲೋಚನನಾಗಿ ಗಂಧರ್ವರಾಜನಂದನೆಯಿರ್ದ ಹೇಮಕೂಟಮಂ ನೆನೆಯುತ್ತುಮಿರ್ದಾಯಿರುಳಂ ಕಳೆದು ಪ್ರಭಾತ ಸಮಯದೊಳಖಿಲದ್ರವಿಡಧಾರ್ಮಿಕಜನಂಗಳ್ಗುಡಲುಂ ತೊಡಲುಂ ಕೊಟ್ಟು ಚಂಡಿಕಾದೇವಿಯಂ ಬೀೞ್ಕೊಂಡು ರಮಣೀಯಪ್ರದೇಶಂಗಳೊಳ್ ಬೀಡಂ ಬಿಡುತುಂ ಕೆಲವಾನುಂ ದಿವಸದಿಂ ನಿಜರಾಜಧಾನಿಯುಜ್ಜಯಿನಿಯಂ ಪೊಕ್ಕಾಕಸ್ಮಿಕಾಗಮನಸಂಜಾತಹರ್ಷರಾಗಿ ಪೌರಜನಂಗಳ್ ಪೊಡವಡುತಿರೆ ಭೋಂಕನೆ ರಾಜಭವನಮನೆಯ್ದೆವರ್ಪಾಗಳ್

ಯುವರಾಜಂ ಬಂದೀಗಳ್
ತವಂಗದಲ್ಲಿರ್ದನೆಂದು ಪರಮೋತ್ಸವದಿಂ
ತವತವಗೆ ಪರಿದು ಪರಿಜನ
ನಿವಹಂ ಬಿನ್ನವಿಸೆ ಕೇಳ್ದು ತಾರಾಪೀಡಂ ೫

ಕೇಳಿದನು. ಆಗ ಅವರು ಸದರ ಸಿಕ್ಕಿತೆಂದು ತಮ್ಮ ತಮ್ಮ ರೂಪು ಶಕ್ತಿ ಸಾಹಸ ಮೊದಲಾದುವನ್ನು ನಿರರ್ಗಳವಾದ ಶೈಲಿಯಿಂದ ಬಣ್ಣಿಸುತ್ತಿರಲು ಕಾದಂಬರಿಯ ವಿರಹ ದಿಂದ ಖಿನ್ನಮನಸ್ಸುಳ್ಳವನಾದರೂ ವಿನೋದಕರವಾಗಿದ್ದುದರಿಂದ ಕೇಳುತ್ತ ಸ್ವಲ್ಪ ಕಾಲವನ್ನು ಕಳೆದನು. ಚೆನ್ನಾಗಿ ಪರಿಚಯವುಂಟಾದುದರಿಂದ ಅವರಿಗೆ ವೀಳೆಯವನ್ನು ಕೊಡುವಂತೆ ಆಜ್ಞಾಪಿಸಿ ಅಲ್ಲಿಂದ ಎದ್ದು ಬಿಡಾರಕ್ಕೆ ಬಂದನು. ಸೂರ್ಯನು ಮುಳುಗ ಲಾಗಿ ಸಂಧ್ಯಾವಂದನೆಯನ್ನು ಮಾಡಿ, ಸ್ವಲ್ಪಕಾಲ ದರ್ಬಾರು ನಡೆಸಿ ಸಾಮಂತ ರಾಜರನ್ನೆಲ್ಲ ಕಳುಹಿಸಿ ಹಾಸಿಗೆಯಲ್ಲಿ ಮಲಗಿದನು. ಬಹಳ ಪ್ರೀತಿಪಾತ್ರರಾದ ವರೊಂದಿಗೂ ಮಾತನಾಡದೆ ಕಣ್ಣುಮುಚ್ಚಿಕೊಂಡು ಗಂಧರ್ವರಾಜಪುತ್ರಿಯಿದ್ದ ಹೇಮಕೂಟವನ್ನೇ ನೆನೆಸಿಕೊಳ್ಳುತ್ತಾ ಇದ್ದು ಆ ರಾತ್ರಿಯನ್ನು ಕಳೆದನು. ಬೆಳಗಿನ ಜಾವದಲ್ಲಿ ಅಲ್ಲಿದ್ದ ದ್ರವಿಡಧಾರ್ಮಿಕರಿಗೆ ಉಡಿಗೆ ತೊಡಿಗೆಗಳನ್ನು ಕೊಟ್ಟು ಚಂಡಿಕಾ ದೇವಿಯ ಸನ್ನಿಧಾನದಿಂದ ಮುಂದಕ್ಕೆ ಪ್ರಯಾಣ ಮಾಡಿದನು. ರಮಣೀಯವಾದ ಸ್ಥಳಗಳಲ್ಲಿ ಬಿಡಾರ ಮಾಡುತ್ತ, ಕೆಲವು ದಿನಗಳಲ್ಲಿ ತನ್ನ ರಾಜಧಾನಿಯಾದ ಉಜ್ಜಯಿನಿ ಯನ್ನು ತಲಪಿದನು. ಹೀಗೆ ಅನಿರೀಕ್ಷಿತವಾಗಿ ಬಂದ ರಾಜಕುಮಾರನ ಆಗಮನದಿಂದ ಸಂತೋಷಗೊಂಡ ಪಟ್ಟಣಿಗರು ನಮಸ್ಕರಿಸುತ್ತಿರಲು ಕೂಡಲೆ ಅರಮನೆಗೆ ಬಂದನು.
೫. 'ಯುವರಾಜನು ಈಗ ಬಂದು ಬಾಗಿಲು ಜಗಲಿಯಲ್ಲಿದ್ದಾನೆ' ಎಂದು ಪರಮೋತ್ಸಾಹ ದಿಂದ ಪರಿಜನರು ನಾನು ಮುಂದು ತಾನು ಮುಂದು ಎಂದು ಬಂದು ಅರಿಕೆ ಮಾಡಿದರು.

ಸುರಿಯುತ್ತಿರ್ದ್ದತ್ತು ಮುಕ್ತಾಫಲದ ಸರಿಗಳಂ ಕಲ್ಪಭೂಜಾತಮೆಂಬಂ
ತಿರಲೆತ್ತಂ ಹರ್ಷವಾರ್ಬಿಂದುಗಳುಗುತರೆ ಭೋರೆಂಬಿನಂ ಪಾಲಮುನ್ನೀರ್
ತೆರೆಯಂತಿರ್ದುತ್ತರೀಯಂ ನೆಲದೊಳಲೆಯಿಸುತ್ತಿರ್ದ ಮೂರ್ಧಾಭಿಷಿಕ್ತರ್
ಬೆರಸಾನಂದಾತಿಭಾರಾಲಸಪದನಿದಿರೊಳ್ ಬಂದನಾ ಸಾರ್ವಭೌಮಂ ೬

ವ॥ ಅಂತು ಬರ್ಪ ತನ್ನ ತಂದೆಯಂ ಕಂಡು ಕುದುರೆಯಿಂದಿೞಿದು ಪಲವೆಡೆ ಪೊಡವ ಡುತ್ತಮೆಯ್ದೆವಂದು ಕಾಲಮೇಲೆ ಮುಟ್ಟಿಗಿದ ವಿನಯಾಭಿರಾಮನಂ ತೆಗೆದು ತಟ್ಟಿಕೈಸಿ ಪರಸಿ ಕೆಲದೊಳ್ ಕುಳ್ಳಿರ್ದರಸುಮಕ್ಕಳೆಲ್ಲರುಮಂ ಪೊಡಮಡಿಸಿ ನಿಜಾಂತಃಪುರಕ್ಕೊಡಗೊಂಡು ಪೋಪುದುಂ ವಿಳಾಸವತಿಮಹಾದೇವಿ ಸಮಸ್ತಾಂತಃಪುರಪರಿವಾರಂಬೆರಸಿದಿರ್ವಂದು ಕೃತ ಪ್ರಣಾಮನಾದ ಮಗನಂ ಪರಸಿ ಸಕಲ ಮಂಗಳಾಚಾರಮಂ ಮಾಡಿ ತಂದು ಕುಳ್ಳಿರಿಸಿ ದಿಗ್ವಿಜಯ ಸಂಬಂಧಿಯಪ್ಪ ವಾರ್ತೆಯಂ ಕೇಳೆ ಪೇೞುತ್ತಂ ಕಿಱಿದುಬೇಗಮಿರ್ದು ವೈಶಂಪಾಯನಂ ಬೀಡ ನೊಡಗೊಂಡು ಬಂದಪನೆಂದಾರ್ಯಶುಕನಾಸಂಗೆ ಪೇೞ್ದು ನಿಜಜನನೀಗೃಹದೊಳ್ ಮಜ್ಜನ ಭೋಜನಾದಿಗಳಂ ಮನವಲ್ಲದ ಮನದೊಳಗೆ ಮಾಡಿ ಬೈಗುಂಬೊಟ್ಟಪ್ಪುದುಂ ನಿಜಭವನಕ್ಕೆ ಬಂದು

ತಾರಾಪೀಡನು ಅದನ್ನು ಕೇಳಿದಾಗ, ೬. ಕಲ್ಪವೃಕ್ಷವು ಮುತ್ತಿನ ಮಳೆಗಳನ್ನು ಸುರಿಸು ತ್ತಿದೆಯೊ ಎಂಬಂತೆ ಅವನ ಕಣ್ಣುಗಳಿಂದ ಆನಂದಾಶ್ರುಬಿಂದುಗಳು ಗಳಗಳನೆ ಸುರಿಯು ತ್ತಿದ್ದುವು. ಕ್ಷೀರಸಮುದ್ರದ ಅಲೆಯಂತಿರುವ ಉತ್ತರೀಯವು ಸಂಭ್ರಮದಿಂದ ಜಾರಿ ನೆಲದ ಮೇಲೆ ಬೀಳುತ್ತಿದ್ದರೂ, ಅದನ್ನು ಹಾಗೆಯೆ ಎಳೆದುಕೊಂಡೇ ಹೋಗುತ್ತಿರುವ ಸಾಮಂತರಾಜರೊಂದಿಗೆ ಚಕ್ರವರ್ತಿಯು ಆನಂದದ ಬಲು ಹೊರೆಯಿಂದ ಮಂದಗಮನ ವುಳ್ಳವನಾಗಿ ಮಗನನ್ನು ಎದುರುಗೊಳ್ಳಲು ಬಂದನು. ವ॥ ಹಾಗೆ ಬರುತ್ತಿರುವ ತಂದೆ ಯನ್ನು ಕಂಡು ಕುದುರೆಯಿಂದ ಇಳಿದು ದೂರದಲ್ಲೆ ನಮಸ್ಕರಿಸಿ, ಹತ್ತಿರಕ್ಕೆ ಬಂದು ಕಾಲಿಗೆ ತಲೆತಗ್ಗಿಸಿದ ವಿನಯದಿಂದ ಶೋಭಿಸುವ ಕುಮಾರನನ್ನು ತಾರಾಪೀಡನು ಬಾಚಿ ತಬ್ಬಿ ಆಶೀರ್ವದಿಸಿದನು. ತಾರಾಪೀಡನ ಜೊತೆಯಲ್ಲಿದ್ದ ಸಾಮಂತರಾಜಕುಮಾರರು ಚಂದ್ರಾಪೀಡನಿಗೂ ನಮಸ್ಕರಿಸಿದರು. ಬಳಿಕ ಮಹಾರಾಜನು ಮಗನನ್ನು ತನ್ನ ರಾಣಿ ವಾಸಕ್ಕೆ ಕರೆದುಕೊಂಡು ಹೋದನು. ಅಲ್ಲಿ ವಿಲಾಸವತಿ ಮಹಾರಾಣಿಯು ರಾಣೀ ವಾಸದ ಸಮಸ್ತ ಪರಿವಾರದಿಂದ ಸಮೇತಳಾಗಿ ಎದುರುಗೊಳ್ಳಲು ಬಂದಳು. ಚಂದ್ರಾ ಪೀಡನು ತಾಯಿಗೆ ನಮಸ್ಕಾರ ಮಾಡಲು ಅವನನ್ನು ಹರಸಿ ಸಂಪ್ರದಾಯದಂತೆ ಮಂಗಳ ವಿಧಿಗಳನ್ನೆಲ್ಲ ನೆರವೇರಿಸಿ ಕರೆದುಕೊಂಡು ಬಂದು, ತನ್ನ ಹತ್ತಿರದಲ್ಲೆ ಕುಳ್ಳಿರಿಸಿಕೊಂಡು ದಿಗ್ವಿಜಯಕ್ಕೆ ಸಂಬಂಧಪಟ್ಟ ಸಮಾಚಾರವನ್ನು ವಿಚಾರಿಸಿದಳು. ರಾಜಕುಮಾರನು ಎಲ್ಲವನ್ನೂ ಹೇಳಿ ಕೆಲವುಕಾಲ ಅಲ್ಲಿದ್ದು ಶುಕನಾಸನಿಗೆ ವೈಶಂಪಾಯನನು ಪಾಳೆಯ ದೊಂದಿಗೆ ಹಿಂದೆ ಬರುತ್ತಿರುವನೆಂಬ ಸಂಗತಿಯನ್ನು ತಿಳಿಸಿ, ತನ್ನ ತಾಯಿಯ ಮನೆಯಲ್ಲಿ

ಅರಮನೆಯುಮುಮವಂತಿಯುಮು
ರ್ವರಿಯುಂ ರಾಜ್ಯಮುಮಿವೆಲ್ಲಮೇವುದೊ ಕಾದಂ
ಬರಿಯಿಲ್ಲದೆಂದು ವಿರಹಾ
ತುರಹೃದಯಂ ನೃಪತನೂಭವಂ ಚಿಂತಿಸಿದಂ ೭

ಅರಸನಿರುಳಾಗೆ ಪಗಲಿನ
ಬರವಂ ಪಗಲಾಗಲಿರುಳ ಬರವಂ ಪಾರು
ತ್ತಿರುಳುಂ ಪಗಲುಂ ಪಾರು
ತ್ತಿರುಳುಂ ಪಗಲುಂ ಗಂಧ
ರ್ವರಾಜನಂದನೆಯು ವಿರಹದಿಂ ಚಿಂತಿಸಿದಂ ೮

ವ|| ಮತ್ತಂ ಚಿತ್ರರಥನಂದನೆಯ ವಾರ್ತೆಯಂ ಕೇಳಲುತ್ಕಂಠಿತನಾಗಿ ಪತ್ರಲೇಖೆ ಬರ್ಪ ಸೈಪನೇ ಬಯಸುತ್ತಮಿರಲಾಕೆಯಂ ಕೆಲವಾನುದಿವಸಕ್ಕೊಡಗೊಂಡು ಬಂದು ಮೇಘ ನಾದಂ ಪ್ರಣಾಮಪುರಸ್ಸರಂ ಕಾಣಿಸೆ ನೃಪರೂಪಚಂದ್ರನಿದಿರೇಟ್ಟುದುಂ ಪತ್ರಲೇಖೆ ತದಂಘ್ರಿ ಕಮಲಕ್ಕೆಱಗಿದಾಗಳ್

ಜನಪತಿ ಸಾಜದಿಂದಮೆ ಪಸಾದಮನಾದಮೆ ಮಾಡುತಿರ್ದನಾ
ವನಿತೆಯ ಮೇಲೆ ಚಿತ್ರರಥನಂದನೆಯತ್ತಣಿನಾಗಳೆಟ್ಟರಲ್
ಮನದ ಪಸಾದಮುಂ ಪದಪುಮೊರ್ಮೆಯೆ ನೂರ್ಮಡಿಯಾಗೆ ಸಸ್ಮಿತಾ
ನನನಮರ್ದಪ್ಪಿದಂ ತೆಗೆದು ನಿರ್ಭರಹರ್ಷದೆ ಪತ್ರಲೇಖೆಯಂ ೯

ಸ್ನಾನ ಊಟ ಮೊದಲಾದುವನ್ನು ಮನಸ್ಸಿಲ್ಲದ ಮನಸ್ಸಿನಿಂದ ಮಾಡಿ ಸಾಯಂಕಾಲ ವಾಗಲು ತನ್ನ ಮನೆಗೆ ಬಂದನು. ೭. ಅಲ್ಲಿ ವಿರಹಪೀಡಿತನಾದ ರಾಜಕುಮಾರನು "ಈ ಅರಮನೆ ಈ ಉಜ್ಜಯಿನಿ ಈ ಭೂಮಿ ಈ ರಾಜ್ಯ ಇವೆಲ್ಲವೂ ಕಾದಂಬರಿಯಿಲ್ಲದ ಮೇಲೆ ಏತಕ್ಕೆ ?" ಎಂದು ಚಿಂತಿಸುತ್ತಿದ್ದನು. ೮. ಚಂದ್ರಾಪೀಡನು ರಾತ್ರಿಯಾದರೆ ಹಗಲಾಗಲೆಂದೂ ಹಗಲಾದರೆ ರಾತ್ರಿಯಾಗಲೆಂದೂ ನೋಡುತ್ತಾ ರಾತ್ರಿಯೂ ಹಗಲೂ ವಿರಹದಿಂದ ಕಾದಂಬರಿಯನ್ನೇ ನೆನಸಿಕೊಳ್ಳುತ್ತಿದ್ದನು. ವ|| ಮತ್ತು ಕಾದಂಬರಿಯ ಸಮಾಚಾರವನ್ನು ತಿಳಿದುಕೊಳ್ಳಬೇಕೆಂಬ ಕುತೂಹಲದಿಂದ ಪತ್ರಲೇಖೆಯು ಬರುವ ಭಾಗ್ಯವನ್ನೇ ಬಯಸುತ್ತಾ ಇದ್ದನು. ಹೀಗೆ ಹಲವು ದಿನಗಳು ಕಳೆಯಲು ಮೇಘ ನಾದನು ಪತ್ರಲೇಖೆಯನ್ನು ಕರೆದುಕೊಂಡುಬಂದು ನಮಸ್ಕಾರಪೂರ್ವಕವಾಗಿ ಭೇಟಿ ಮಾಡಿಸಲು ಚಂದ್ರಾಪೀಡನು ಕೂಡಲೆ ಸ್ವಾಗತಿಸಿದನು. ಪತ್ರಲೇಖೆಯು ಅವನ ಪಾದ ಕಮಲಗಳಿಗೆ ಎರಗಿದಳು ೯. ಚಂದ್ರಾಪೀಡನು ಪತ್ರಲೇಖೆಯ ಮೇಲೆ ಸಹಜವಾಗಿಯೇ ಮಮತೆಯನ್ನಿಟ್ಟಿದ್ದನು. ಈಗ ಅವಳು ಕಾದಂಬರಿಯ ಜೊತೆಯಲ್ಲಿದ್ದು ಬಂದದ್ದರಿಂದ ಅವನ ಮನಸ್ಸಿನ ಅನುಗ್ರಹವೂ ಪ್ರೀತಿಯೂ ಒಟ್ಟಿಗೆ ನೂರ್ಮಡಿಯಾದಂತಾಗಿ, ಮಂದ ಹಾಸದಿಂದ ಕೂಡಿದವನಾಗಿ ಅತಿಶಯವಾದ ಸಂತೋಷದಿಂದ ಅವಳನ್ನು ಗಾಢವಾಗಿ

ವ॥ ಅನಂತರಮಾಕೆಯುಂ ಕುಳ್ಳಿರವೇಟ್ಟು

ನಿರುಪಮ ಚಾರಿತ್ರಾಲಂ
ಕರಣೆ ಮಹಾಶ್ವೇತೆಗಂ ಸಪರಿಜನ ಕಾದಂ
ಬರಿಗಂ ಕುಶಲಮೆ ಪೇೞೆಂ
ದರಸಂ ತಾಂ ಪತ್ರಲೇಖೆಯುಂ ಬೆಸಗೊಂಡಂ ೧೦

ವ॥ ಅಂತು ಬೆಸಗೊಳ್ವುದುಮಾಕೆ ದೇವರ್ ಬೆಸಸಿದಂದದೊಳೆಲ್ಲರುಂ ಕುಶಲದಿನಿರ್ದ ರಲ್ಲದೆಯುಂ ಕಾದಂಬರೀದೇವಿ ಪರಿಜನಂಬೆರಸು ನಿಮಗೆ ತನ್ನ ಪೊಡವಡಿಕೆಯುಂ ಬಿನ್ನವಿಸಲ್ ಪೇೞ್ದಟ್ಟಿದಳೆಂಬುದುಂ ತತ್ಸಂಬಂಧಿಯಪ್ಪ ವಾರ್ತೆಯುಂ ಕೇಳಲತಿಕುತೂಹಲನಾಗಿ ಮೇಘ ನಾದಂಗೆ ಮೆಚ್ಚುಗೊಟ್ಟಾತಂಬೆರಸು ರಾಜಲೋಕಮಂ ವಿಸರ್ಜಿಸಿ ದೂರೋತ್ಸಾರಿತ ಪರಿಜನಂ ಪತ್ರಲೇಖಾದ್ವಿತೀಯನಾಗಿ ವಲ್ಲಭಬಾಲೋದ್ಯಾನಮಂ ಪೊಕ್ಕು

ಅರೆದುಱುಗಿರ್ದ ಬಯಲ್ದಾ
ವರೆಯೆಲೆಗೊಡೆಯಿಡುವಿನಲ್ಲಿ ಸುಖದಿಂ ಕಣ್ಗೆ
ಯ್ದಿರೆ ಹಂಸಮಿಥುನಮಂ ನಿಜ
ಚರಣಾಬ್ಜದೆ ನೂಂಕಿ ನೃಪಸುತಂ ಕುಳ್ಳಿರ್ದಂ ೧೧

ತಬ್ಬಿಕೊಂಡನು. ವ॥ ಬಳಿಕ ಅವಳನ್ನು ಕುಳಿತುಕೊಳ್ಳುವಂತೆ ಹೇಳಿ ೧೦. "ಸಾಟಿಯಿಲ್ಲದ ಪರಿಶುದ್ಧವಾದ ನಡವಳಿಕೆಯಿಂದ ಶೋಭಿಸುತ್ತಿರುವ ಮಹಾಶ್ವೇತೆಯೂ ಪರಿಜನರಿಂದ ಕೂಡಿಕೊಂಡಿರುವ ಕಾದಂಬರೀದೇವಿಯೂ ಕ್ಷೇಮದಿಂದಿದ್ದಾರೆಯೆ ? ಹೇಳು" ಎಂದು ಚಂದ್ರಾಪೀಡನು ಪತ್ರಲೇಖೆಯನ್ನು ಕೇಳಿದನು. ವ॥ ಹಾಗೆ ಕೇಳಲಾಗಿ ಅವಳು "ತಾವು ಕೇಳಿದಂತೆ ಅವರೆಲ್ಲರೂ ಕ್ಷೇಮದಿಂದಿದ್ದಾರೆ. ಅಲ್ಲದೆ ಕಾದಂಬರೀದೇವಿಯು ಪರಿಜನ ರೊಂದಿಗೆ ತನ್ನ ನಮಸ್ಕಾರವನ್ನು ನಿಮಗೆ ಅರಿಕೆ ಮಾಡುವಂತೆ ಹೇಳಿ ಕಳುಹಿಸಿದ್ದಾಳೆ" ಎಂದಳು. ಚಂದ್ರಾಪೀಡನಿಗೆ ಕಾದಂಬರಿಗೆ ಸಂಬಂಧಿಸಿದ ಸಮಾಚಾರವನ್ನು ಕೇಳಲು ಬಹಳ ಕುತೂಹಲವುಂಟಾಯಿತು. ಕೂಡಲೆ ಮೇಘನಾದನಿಗೆ ಇನಾಮು ಕೊಟ್ಟು ಅವನನ್ನೂ ಸಾಮಂತರಾಜರನ್ನೂ ಕಳುಹಿಸಿ, ಪರಿಜನರನ್ನೂ ಹೊರಕ್ಕೆ ಹೋಗುವಂತೆ ಆಜ್ಞಾಪಿಸಿ ಪತ್ರಲೇಖೆಯನ್ನು ಮಾತ್ರ ಕರೆದುಕೊಂಡು ತನಗೆ ಇಷ್ಟವಾದ ಹೊಸ ಕೈ ದೋಟಕ್ಕೆ ಬಂದನು. ೧೧. ಅಲ್ಲಿ ಅರ್ಧಭಾಗದಿಂದ ಮೇಲೆ ಛತ್ರಿಯಂತೆ ಹರಡಿ ಕೊಂಡಿದ್ದ ನೆಲದಾವರೆ ಎಲೆಗಳ ಮಧ್ಯದಲ್ಲಿ ಸುಖವಾಗಿ ಮಲಗಿದ್ದ ಹಂಸದಂಪತಿ ಗಳನ್ನು ತನ್ನ ಪಾದಕಮಲದಿಂದ ತಳ್ಳಿ ಅಲ್ಲಿ ರಾಜಕುಮಾರನು ಕುಳಿತುಕೊಂಡನು.

ವ॥ ಅಂತು ಕುಳ್ಳಿರ್ದು ಪತ್ರಲೇಖೆಯ ಮೊಗಮಂ ನೋಡಿ

ಎನಿತು ದಿನಮಿರ್ದೆ ಗಂಧ
ರ್ವನ ನಂದನೆಯೊಂದು ಪದಪದೆಂತುಟು ನುಡಿಗಳ್
ಮನಮೊಸೆದು ನಮ್ಮ ದೆಸೆಯಂ
ನೆನೆವವರಾರಲ್ಲಿ ಗೋಷ್ಠಿಯೇನೆಂದುಮುಖೀ ೧೨

ವ॥ ಎಂದು ನೃಪರೂಪಚಂದ್ರಂ ಬೆಸಗೊಳ್ವುದುಂ ದೇವ ತಾತ್ಪರ್ಯದಿನವಧಾರಿಸು ವುದೆಂದು ನೀವಿತ್ತ ಬಿಜಯಂಗೆಯ್ಯಲೊಡನೆಯಾ ಕೇಯೂರಕನೊಡನೆ ಪೋಗಿ ಮುನ್ನಿನಂದ ದೊಳೆ ಪಟ್ಟಿರ್ದ ಕಾದಂಬರೀದೇವಿಯ ಕೆಲದೊಳ್ ಕುಳ್ಳಿರ್ದು ಪೊಸತೆನಿಸಿದ ಪಸಾದಮನನು ಭವಿಸುತ್ತಮಿರ್ದೆನಲ್ಲದೆಯುಂ

ಪದಪಿನ ಮಾತುಗಳ್ ಪಲವುಮಂ ಬಿಡದಾಡಿದೊಡಲ್ಲಿ ಬರ್ಪುದಾ
ವುದು ಗಡ ದೇವ ಮನ್ನಯನದೊಳ್ ನಯನಂ ಕರದೊಳ್ ಕರಾಬ್ಜಮಂ
ಗದೊಳೆಸೆವಂಗಯಷ್ಟಿ ಪೆಸರಕ್ಕರದೊಳ್ ನಿಜವಾಣಿ ಕೂರ್ಮೆಯೊಳ್
ಹೃದಯಮದೊರ್ಮೆಯುಂ ನೆಲಸಲಂಗನೆಗಿಂತಿರೆ ಪೋದುದಾದಿನಂ ೧೩

ವ॥ ಅಂತು ಬೈಗುಂಬೊಟ್ಟುಪ್ಪುದುಮೆನ್ನ ಕೆಯ್ಯಂ ಪಿಡಿದು ಹಿಮಗೃಹದಿಂ ಪೊಱ ಮಟ್ಟು ಸುಯ್ಯುತ್ತಂ ಬಂದು ನಿಷಿದ್ಧಾಶೇಷಪರಿಜನೆಯಾಗಿ ವಲ್ಲಭಬಾಲೋದ್ಯಾನಮಂ ಪೊಕ್ಕು ಮರಕತಸೋಪಾನಶೋಭಿತಮುಂ ಸುಧಾಧವಳಿತಮುಮಪ್ಪ ರಮಣೀಯ ಪ್ರಮದ ವನ ಮಧ್ಯವೇದಿಕೆಯ ಮಣಿಸ್ತಂಭಮಂ ನೆಮ್ಮಿ

ವ॥ ಹಾಗೆ ಕುಳಿತುಕೊಂಡು ಪತ್ರಲೇಖೆಯ ಮುಖವನ್ನು ನೋಡಿ ೧೨. "ಎಲೈ ಚಂದ್ರ ಮುಖಿ, ನೀನು ಅಲ್ಲಿ ಎಷ್ಟು ದಿನಗಳವರೆಗೆ ಇದ್ದೆ? ಕಾದಂಬರಿಯ ಪ್ರೀತಿಯು ಹೇಗಿದೆ ? ಮಾತು ಹೇಗಿದೆ ? ಅಲ್ಲಿ ನಮ್ಮನ್ನು ಯಾರು ಯಾರು ಮನಸಾರೆ ನೆನಸಿಕೊಳ್ಳುತ್ತಾರೆ ? ಪರಸ್ಪರ ಮಾತುಕತೆಗಳು ಹೇಗೆ ನಡೆಯಿತು ?" ವ॥ ಎಂದು ಚಂದ್ರರೂಪನಾದ ಚಂದ್ರಾ ಪೀಡನು ಕೇಳಲಾಗಿ "ಸ್ವಾಮಿ ಮುಖ್ಯಾಂಶವನ್ನು ಅರಿಕೆ ಮಾಡುತ್ತೇನೆ, ಚಿತ್ತೈಯಿಸ ಬೇಕು. ನೀವು ಈ ಕಡೆ ದಯಮಾಡಿಸಿದ ಮೇಲೆ ನಾನು ಕೇಯೂರಕನೊಡನೆ ಹೋಗಿ ಮೊದಲಿನಂತೆಯೆ ಮಲಗಿದ್ದ ಕಾದಂಬರೀದೇವಿಯ ಪಕ್ಕದಲ್ಲಿ ಕುಳಿತುಕೊಂಡು ಹೊಸ ದಾದ ಅನುಗ್ರಹವನ್ನು ಅನುಭವಿಸುತ್ತಿದ್ದೆನು. ಅಲ್ಲದೆ ೧೩. ಸ್ವಾಮಿ, ಅವಳು ಹೇಗೆ ಪ್ರೀತಿಯನ್ನು ತೋರಿಸಿದಳೆಂಬುದನ್ನು ಅನೇಕ ಮಾತುಗಳಿಂದ ಒಂದೇ ಸಮನೆ ಹೇಳುವು ದೇತಕ್ಕೆ ? ನನ್ನ ಕಣ್ಣಿನಲ್ಲಿ ಅವಳ ಕಣ್ಣು, ನನ್ನ ಕೈಯಲ್ಲಿ ಅವಳ ಕರಕಮಲ, ನನ್ನ ಮೈಯಲ್ಲಿ ಅವಳ ತೆಳುವಾದ ಮೈ, ನನ್ನ ಹೆಸರಿನಲ್ಲಿ ಅವಳ ಮಾತು, ನನ್ನ ಪ್ರೀತಿಯಲ್ಲಿ ಅವಳ ಹೃದಯ ನೆಲಸಿರಲು ಹಾಗೆಯೆ ಆ ಹಗಲೆಲ್ಲ ಕಳೆಯಿತು. ವ॥ ಹಾಗೆಯೆ ಸಾಯಂಕಾಲವಾಗಲು ನನ್ನ ಕೈಯನ್ನು ಹಿಡಿದುಕೊಂಡು ಹಿಮಗೃಹದಿಂದ ಹೊರಟು ನಿಟ್ಟುಸಿರು ಬಿಡುತ್ತಾ ಬಂದು, ಪರಿಜನರಾರನ್ನೂ ಬರದಂತೆ ಮಾಡಿ ತನಗೆ ಇಷ್ಟ

ಅವಧರಿಸಿ ಮನದೊಳೇನಾ
ನುವನಾಗಳ್ ಕನ್ನೆ ನುಡಿಯಲೊಡರಿಸಿ ನಿಷ್ಕಂ
ಪವೆನಿಪ್ಪ ತಾರೆಗಳ್ವೆರ
ಸೆವೆಯಿಕ್ಕದೆ ನೋಡುತಿರ್ದಳೆನ್ನಯ ಮೊಗಮಂ ೧೪

ವ॥ ಅಂತು ನೋಡಿ ಬೆವರೊಳ್ ಮುಳುಂಗಿ ನಡುಗುತ್ತಂ ವಿಷಾದಮನವಲಂಬಿಸಿ ರ್ಪುದುಮಾಂ ವಿದಿತಾಭಿಪ್ರಾಯೆಯಾಗಿ ತನ್ಮುಖವಿನಿವೇಶನಿಷ್ಪಂದಿತನಯನೆಯೆಂ ಬೆಸನಾವುದೆನಗೇ ಗೆಯ್ವುದೆಂದು ಬಿನ್ನವಿಸೆ

ತೊಲಗಿಪಳೊ ರಹಸ್ಯಶ್ರವ
ಣಲಜ್ಜೆಯಿಂ ತನ್ನ ಪೊಳೆವ ನೆಬಿಲುಮನೆನೆ ನಿ
ರ್ಮಲ ಮಣಿಕುಟ್ಟಿಮಮಂ ಕೋ
ಮಲೆ ಚರಣಾಂಗುಷ್ಠದಿಂದೆ ಬರೆಯುತ್ತಿರ್ದಳ್ ೧೫

ಭವನಮರಾಳಮಂಡಲಮುಮಂ ನಿಜಪಾದಪಯೋಜದಿಂದೆ ನೂಂ
ಕುವ ಕುಮುದಾವತಂಸ ಮಧುಪಂಗಳುಮಂ ಕರದಿಂದೆ ಪಿಂಗೆ ಬೀ
ಸುವ ವನದೇವತಾಶ್ರವಣಶಂಕಿತೆಯಾಲವೊಲತ್ತಮಿತ್ತ ನೋ
ಡುವ ಪಿರಿದಪ್ಪ ಬೇವಸಮನಾವರಿಸಿರ್ದಳದೊಂದು ಬೇಗಮಂ ೧೬

ವಾದ ಬಾಲೋದ್ಯಾನಕ್ಕೆ ಬಂದಳು. ಅಲ್ಲಿ ಹೂದೋಟದ ಮಧ್ಯದಲ್ಲಿರುವ ಪಚ್ಚೆಯ ಮೆಟ್ಟಿಲುಗಳಿಂದ ಶೋಭಿಸುವ ಸುಣ್ಣಬಳಿದು ಬೆಳ್ಳಗಿರುವ ರತ್ನದ ಕಂಭವನ್ನು ಒರಗಿಕೊಂಡು, ೧೪. ಮನಸ್ಸಿನಲ್ಲಿ ಆಲೋಚಿಸಿ ಏನನ್ನೋ ಹೇಳಲು ಹೊರಟು ಚಲಿಸದಿರುವ ಗುಡ್ಡೆಗಳುಳ್ಳ ಕಣ್ಣುಗಳಿಂದ ಎವೆಯಿಕ್ಕದೆ ನನ್ನ ಮುಖವನ್ನೇ ನೋಡು ತ್ತಿದ್ದಳು. ವ॥ ಹಾಗೆ ನೋಡಿ ಬೆವರಿನಲ್ಲಿ ಮುಳುಗಿ ನಡುಗುತ್ತಾ ಖೇದವನ್ನನು ಭವಿಸುತ್ತಿರಲು, ನಾನೂ ಅವಳ ಆಶಯವನ್ನು ತಿಳಿದುಕೊಂಡು ಅಲುಗಾಡದ ದೃಷ್ಟಿ ಯಿಂದ ಅವಳ ಮುಖವನ್ನು ನೋಡುತ್ತಾ 'ನಾನು ಏನು ಮಾಡಬೇಕೆಂಬುದನ್ನು ಅಪ್ಪಣೆ ಮಾಡಿ' ಎಂದು ಅರಿಕೆ ಮಾಡಿದೆನು. ೧೫. ಆಗ ಅವಳು ತಾನು ನನಗೆ ಈಗ ಹೇಳ ಲಿರುವ ಗುಟ್ಟನ್ನು ತನ್ನ ನೆಳಲೂ ಕೇಳಬಾರದೆಂದು ನಾಚಿಕೆಯಿಂದ ಅದನ್ನು ಅಳಿಸುತ್ತಿರು ವಳೊ ಎಂಬಂತೆ ನಿರ್ಮಲವಾದ ರತ್ನದ ಜಗಲಿಯನ್ನು ತನ್ನ ಕಾಲಿನ ಹೆಬ್ಬೆರಳಿಂದ ಬರೆ ಯುತ್ತಿದ್ದಳು. ೧೬. ಯಾರೂ ಕೇಳಬಾರದೆಂಬ ಅಭಿಪ್ರಾಯದಿಂದಲೋ ಎಂಬಂತೆ ಸಾಕಿದ ಹಂಸಗಳ ಗುಂಪನ್ನು ತನ್ನ ಪಾದಕಮಲದಿಂದ ನೂಕುತ್ತಿದ್ದಳು. ಕಿವಿಯ ಮೇಲಿ ರುವ ಕನ್ನೈದಿಲೆಗೆ ಮುತ್ತಿರುವ ದುಂಬಿಗಳನ್ನು ಹಿಂದಕ್ಕೆ ಹೋಗುವಂತೆ ಕೈಯಿಂದ ಬೀಸುತ್ತಿದ್ದಳು. ವನದೇವತೆಗಳು ಎಲ್ಲಿ ಕೇಳಿಬಿಡುತ್ತಾರೋ ಎಂಬ ಅಳುಕಿನಿಂದಲೋ ಎಂಬಂತೆ ಆಕಡೆ ಈಕಡೆ ನೋಡುತ್ತಿದ್ದಳು. ಹೀಗೆ ಸ್ವಲ್ಪಕಾಲ ಹೆಚ್ಚಾದ ದುಮ್ಮಾನ

ಮದನಾಗ್ನಿಜ್ವಾಲೆಯಿಂ ಮುಗ್ಗಿದುದೊ ಬಹುಳ ಬಾಷ್ಪಾಂಬುಪೂರಂಗಳಿಂದ
ಬ್ದುದೊ ನಿಶ್ವಾಸಂಗಳಿಂ ಪಾಱಿದುದೊ ಕುಸುಮಬಾಣಂಗಳಿಂ ನುಚ್ಚುನೂಱಾ
ದುದೊ ಸುಯ್ಗೆಯ್ತಂದ ಭೃಂಗಾವಳಿಯಿನಿರದೆ ಪೀರ್ಱಂದುದೋ ಪೇೞೆಮೆಂಬಂ
ದದೆ ಲಜ್ಜಾಮಗ್ನೆಗೇನುಂ ನುಡಿ ಪೊಱಮಡದಾಯ್ತೆಂತುಮಾ ಕಾಂತೆಗಾಗಳ್ ೧೭

ಅನುಭವಿಸಿದ ಕೋಟಲೆಗಳ
ನಿನಿಸೆಂದೆಣಿಸಲ್ಕೆ ಮೌಕ್ತಿಕಾಕ್ಷಾವಳಿಯಂ
ವನಜದಳನಯನೆ ಸಮೆದಪ
ಳೆನೆ ಸುರಿದುವು ತರದೆ ತೋರ ಕಣ್ಬನಿದುಱುಗಲ್ ೧೮

ಸಮಸಂದೊಂದಿದ ಲಜ್ಜೆಯುಜ್ಜುಗಮೆ ಲಜ್ಜಾಭಾವಮಂ ಬಾಲಭಾ
ವಮೆ ಬಾಲ್ಯೋದಯಮಂ ವಿಷಾದಮೆ ವಿಷಾದೋದ್ರೇಕಮಂ ಭೀತಿಭಾ
ವಮೆ ಭೀತಿಕ್ರಮಮಂ ವಿಳಾಸಮೆ ವಿಳಾಸೋಲ್ಲಾಸಮಂ ಮುಗ್ಧಭಾ
ವಮೆ ಮುಗ್ಧತ್ವಮಹತ್ವಮಂ ನೆಱೆಯೆ ಕಲ್ತಂತಾದುದಾ ಕನ್ಯೆಯೊಳ್ ೧೯

ವ|| ಆಗಳಿದೇನೆಂದಾಂ ಮಗುೞೆ ಮಗುೞೆ ಬಿನ್ನಪಂಗೆಯ್ವುದುಮುಸಿರಲ್ ನಾಣ್ಚಿ ರಹಸ್ಯಾಲಾಪಮನೆನಗೆ ಬರೆದು ತೋರ್ಪಂತೆ ನಖಮುಖದಿಂ ಕೇತಕೀದಳಮಂ ಬರೆಯುತ್ತುಂ ಕ್ಷಿತಿತಳನಿಹಿತ ನಿಶ್ಚಲನಯನೆಯಾಗಿ ಪಿರಿದುಬೇಗಮಿರ್ದನಂತರಮೊಯ್ಯನೆನ್ನ ಮೊಗಮಂ ನೋಡಿ

ವನ್ನು ಅನುಭವಿಸುತ್ತಿದ್ದಳು. ೧೭. ನಾಚಿಕೆಯಲ್ಲಿ ಮುಳುಗಿರುವ ಕಾದಂಬರಿಯ ವಾಕ್ಕು ವಿರಹಾಗ್ನಿಜ್ವಾಲೆಯಿಂದ ಸುಟ್ಟುಹೋದಂತೆಯೂ ಅತ್ಯಧಿಕವಾದ ಕಣ್ಣೀರುಗಳ ಪ್ರವಾಹದಲ್ಲಿ ಮುಳುಗಿಹೋದಂತೆಯೂ ನಿಟ್ಟುಸಿರುಗಳಿಂದ ಹಾರಿಹೋದಂತೆಯೂ ಮನ್ಮಥನ ಬಾಣಗಳಿಂದ ಚೂರು-ಚೂರು ಮಾಡಲ್ಪಟ್ಟಂತೆಯೂ ಉಸಿರಿನ ಸುವಾಸನೆಗಾಗಿ ಬಂದಿರುವ ದುಂಬಿಗಳ ಗುಂಪಿನಿಂದ ಕುಡಿಯಲ್ಪಟ್ಟಂತೆಯೂ ಆಗಿ ಏನಾದರೂ ಅದು ಹೊರಡಲೇ ಇಲ್ಲ. ೧೮. ಕಾದಂಬರಿಯು ತಾನು ವಿರಹದಿಂದ ಅನುಭವಿಸುತ್ತಿರುವ ಕಷ್ಟಗಳು ಎಷ್ಟೆಂದು ಎಣಿಸುವುದಕ್ಕೆ ಒಂದು ಮುತ್ತಿನ ಜಪಸರವನ್ನು ನಿರ್ಮಾಣ ಮಾಡುತ್ತಿರುವಳೋ ಎಂಬಂತೆ ದಪ್ಪದಪ್ಪ ಕಂಬನಿಗಳು ಒಂದೇಸಮನೆ ಸುರಿಯುತ್ತಿದ್ದುವು. ೧೯. ಅವಳು ನಾಚಿಕೆಗೆ ನಾಚಿಕೆಯನ್ನೂ ಎಳೆತನಕ್ಕೆ ಎಳೆತನವನ್ನೂ ದುಃಖಕ್ಕೆ ದುಃಖಾತಿಶಯವನ್ನೂ ಭಯಕ್ಕೆ ಭಯವನ್ನೂ ಬೆಡಗಿಗೆ ಬೆಡಗನ್ನೂ ಮೊದ್ದುತನಕ್ಕೆ ಮೊದ್ದುತನವನ್ನೂ ಚೆನ್ನಾಗಿ ಕಲಿಸಿಕೊಡುತ್ತಿರುವಂತೆ ಕಾಣುತ್ತಿದ್ದಳು. ವ|| ಆಗ ನಾನು ಇದೇನೆಂದು ಮತ್ತೆ ಮತ್ತೆ ಅರಿಕೆ ಮಾಡುತ್ತಿರಲು, ಹೇಳಲು ನಾಚಿ ಗುಟ್ಟು ಮಾತನ್ನು ನನಗೆ ಬರೆದು ತೋರಿಸುವಂತೆ ಉಗುರಿನ ತುದಿಯಿಂದ ಕೇದಗೆಹೂವಿನ ಎಸಳನ್ನು ಗೀರುತ್ತಾ, ನೆಟ್ಟ ಕಣ್ಣುಗಳಿಂದ ನೆಲವನ್ನೇ ನೋಡುತ್ತಾ ಬಹಳ ಹೊತ್ತು

ಮದನಾನಲಧೂಮಶ್ರೋ
ಮದೆ ದೂಸರವಾದ ವಚನಮಂ ತೊಳೆಯಲ್ ಪೊ
ಣ್ಮೆದುವೆನೆ ಮತ್ತಂ ಪೊಱಪೊ
ಣ್ಮೆದುವೆಳೆಯಳ ಬಾಷ್ಪವಾರಿಧಾರಾಪೂರಂ ೨೦

ಉಸಿರ್ವುಜ್ಬುಗದಿಂದಧರಂ
ನಸುಗೆತ್ತಲ್ ಶ್ವಾಸಮಧುಪಮಾಲೆಗೆ ಸಂದೇ
ಶಿಸಿದಪಳೊ ರಹಸ್ಯಮನೆನೆ
ಲೆಸೆದೆಂತೆಂತಾನುಮುಸಿರಲುದ್ಯುಕ್ತೆಯಾದಳ್ ೨೧

ವ॥ ಅದೆಂತೆನೆ

ಎನಗೀಗಳ್ ನಿಕ್ಕುವಂ ವಲ್ಲಭತೆಯೆಡೆಯೊಳೆಮ್ಮಬ್ಬೆಯಿಂದಯ್ಯನಿಂದ
ಕ್ಕ ನಿನೀ ಪ್ರಾಣಂಗಳಿಂದತ್ಯಧಿಕಮೆನಿಸಿ ಮಚ್ಚಿತ್ತದೊಳ್ ನಿಂದೆ ನೀಂ ನಿ
ನ್ನನವೆಂದಾಂ ಕಂಡೆನಂದಿಂಬಟ್ಟಿಕೆ ಸಖಿಯರಂ ಪತ್ತುವಿಟ್ಟೀ ಮನಂ ನಿ
ನ್ನನೆ ನೀಡುಂ ನಾಡೆ ನಂಬಿರ್ದಪುದಱಿಯೆನಿದಿನ್ನೆಂತುವಾಂ ಪತ್ರಲೇಖೇ ೨೨

ಎನಗಾದದೊಂದು ಪರಿಭವ
ಮನಾರ್ಗೆ ದೂಱಿದಪೆನಾರ್ಗೆ ಪೇಟ್ದಪೆನಿದನಾಂ
ನಿನಗುಸಿರ್ದನಂತರಂ ಸುಖ
ದಿನೆನ್ನ ತನುವಿಂದೆ ಪತ್ತುವಿಡಿಸುವೆನಸುವಂ ೨೩

ಹಾಗೆಯೆ ಇದ್ದಳು. ಬಳಿಕ ಮೆಲ್ಲನೆ ನನ್ನ ಮುಖವನ್ನು ನೋಡಿದಳು. ೨೦. ಕಾಮಾಗ್ನಿಯ ಹೊಗೆಯ ಗುಂಪಿನಿಂದ ಮಲಿನವಾದ ಮಾತನ್ನು ತೊಳೆಯಲು ಹೊರಹೊಮ್ಮುತ್ತಿವೆಯೊ ಎಂಬಂತೆ ಮತ್ತೆ ಆ ಬಾಲಿಕೆಯ ಕಣ್ಣೀರು ಧಾರಾಕಾರವಾಗಿ ಹರಿಯುತ್ತಿತ್ತು. ೨೧. ಮಾತನಾಡುವ ಪ್ರಯತ್ನದಿಂದ ಕೆಳದುಟಿಯು ಸ್ವಲ್ಪಮಟ್ಟಿಗೆ ಅದುರುತ್ತಿರಲು, ಉಸಿರಿನ ವಾಸನೆಗೆ ಎರಗುವ ಭ್ರಮರಪಂಕ್ತಿಗೆ ತನ್ನ ಗುಟ್ಟನ್ನು ತಿಳಿಸಲು ಆಸೆಪಡುತ್ತಿರುವಳೋ ಎಂಬಂತೆ ಕಾಣುತ್ತಿದ್ದಳು. ಹಾಗೆಯೆ ಅವಳು ಬಹಳ ಪ್ರಯಾಸದಿಂದ ಹೇಳಲು ತೊಡಗಿದಳು. ವ॥ ಅದು ಹೇಗೆಂದರೆ, ೨೨. "ಪತ್ರಲೇಖೆ, ನನಗೆ ನಿಜವಾಗಿಯೂ ನನ್ನ ತಾಯಿಗಿಂತಲೂ ತಂದೆಗಿಂತಲೂ ಮಹಾಶ್ವೇತೆಗಿಂತಲೂ ಈ ಪ್ರಾಣಗಳಿಗಿಂತಲೂ ಈಗ ನೀನೇ ಹೆಚ್ಚು ಪ್ರೀತಿಗೆ ಪಾತ್ರಳಾಗಿ ನನ್ನ ಮನಸ್ಸಿನಲ್ಲಿ ನೆಲಸಿದ್ದೀಯೆ. ನಿನ್ನನ್ನು ನೋಡಿದ ಮೇಲೆ ಗೆಳತಿಯರನ್ನೆಲ್ಲಾ ಬಿಟ್ಟು ನನ್ನ ಮನಸ್ಸು ನಿನ್ನನ್ನೇ ನಂಬಿಬಿಟ್ಟಿದೆ. ಇದೇಕೆ ಎಂಬುದು ನನಗೆ ತಿಳಿಯದು!" ೨೩. ಈಗ ನನಗೆ ಒದಗಿರುವ ಅವಹೇಳನವನ್ನು ಯಾರಲ್ಲಿ ದೂರಿಕೊಳ್ಳಲಿ ? ಯಾರಲ್ಲಿ ಹೇಳಿಕೊಳ್ಳಲಿ ? ಇದನ್ನು ಈಗ ನಿನಗೆ ಹೇಳಿ

ವ॥ ಎಂದು ಚಿತ್ರರಥನಂದನೆ

ನಿನಗೆನ್ನಂದಮನೇನೆಂ
ದು ನುಡಿವೆನೆನ್ನೊಂದು ತಪ್ಪನಱಿದತ್ತೆಂದೀ
ಮನಕಂ ಪಿರಿದುಂ ಲಜ್ಜಿಸು
ವೆನೆನಲ್ ಪೇೞ್ ಪೆಱರ್ಗದಾಗಳುಂ ಲಜ್ಜಿಸನೇ ೨೪

ಪಿರಿದೆನಿಸಿದ ಪೞಿಗೆಡೆಯಾ
ಗಿರಲೆನ್ನನದಾರುಮಿಲ್ಲಮೀತಪೆಯುರೆನ್ನಂ
ತಿರೆ ಗರ್ವದಿಂದೆ ಪಿರಿದುಂ
ಪರಿಭವಿಸಿದನಿಂದಕಾರಣಂ ನೃಪತನಯಂ ೨೫

ಪಿರಿಯರ್ಗಿದು ಗುಣಮೋ ಪೇೞ್
ಪರಿಚಯಕಿದು ಫಲಮೊ ತರುಣ ಬಿಸತಂತುವಿನೊಳ್
ದೊರೆಯೆನಿಪೆಳಮನದೆನ್ನಂ
ಪರಿಭವಿಪುದೆ ಕಂಡು ಕನ್ನೆಯುಂ ಯುವರಾಜಂ ೨೬

ಇನ್ನೆನ್ನನೀತು ನೃಪನೆಸ
ಕಂ ನಿತ್ತರಿಸಲ್ಕೆ ಕುಡದು ಮಱುವುಟ್ಟಿನೊಳಂ
ನಿನ್ನೊಡನೆ ಕೂಟವೆನಗ
ಕ್ಕೆನ್ನೆಯ ತಪ್ಪಿಂಗೆ ಸತ್ತು ಶುದ್ಧಿಯೆನಪ್ಪೆಂ ೨೭

ಬಿಟ್ಟು ಬಳಿಕ ನೆಮ್ಮದಿಯಿಂದ ಪ್ರಾಣವನ್ನು ಬಿಡುತ್ತೇನೆ" ವ॥ ಎಂದಳು. ಆಮೇಲೆ ಕಾದಂಬರೀದೇವಿಯು ೨೪. "ನಿನಗೆ ನನ್ನ ಈ ಅವಸ್ಥೆಯನ್ನು ಏನೆಂದು ಹೇಳಲಿ ? ನನ್ನ ಮನಸ್ಸು ಈ ತಪ್ಪನ್ನು ತಿಳಿದುಕೊಂಡುಬಿಟ್ಟಿತಲ್ಲ ಎಂದು ನನಗೇ ಬಹಳ ನಾಚಿಕೆಯಾಗಿದೆ. ಹೀಗಿರಲು ಇನ್ನೊಬ್ಬರಿಗೆ ತಿಳಿದರೆ ನಾಚಿಕೆಯಾಗುವುದಿಲ್ಲವೆ ? ೨೫. ಅಹಂಕಾರದಿಂದ ಇದ್ದ ನನ್ನನ್ನು ಯುವರಾಜನು ನಿಷ್ಕಾರಣವಾಗಿ ಬಹಳವಾಗಿ ಅವಮಾನಗೊಳಿಸಿದ್ದಾನೆ. ಆದರಿಂದ ಮಿಗಿಲಾದ ಜನಾಪವಾದಕ್ಕೆ ಗುರಿಯಾಗಿಬಿಟ್ಟೆ. ೨೬. ಪತ್ರಲೇಖೆ, ತಾವರೆದಂಟಿನ ಎಳೆಯಂತೆ ಕೋಮಲವಾದ ಮನಸ್ಸುಳ್ಳ ಕನ್ನಿಕೆಯಾದ ನನ್ನನ್ನು ನೋಡಿ ಯುವರಾಜನು ಹೀಗೆ ಅವಮಾನಗೊಳಿಸಬಹುದೆ ? ಇದು ದೊಡ್ಡವರಿಗೆ ತಕ್ಕ ನಡವಳಿಕೆಯೆ ? ಅಥವಾ ಸ್ನೇಹಕ್ಕೆ ತಕ್ಕ ಪ್ರತಿಫಲವೆ ? ೨೭. ಹೀಗೆ ಯುವರಾಜನು ಮಾಡಿದ ಕೃತ್ಯವನ್ನು ಸಹಿಸಿಕೊಳ್ಳುವುದಕ್ಕೆ ನನಗೆ ಇನ್ನು ಸಾಧ್ಯವಿಲ್ಲ. ಮುಂದಿನ ಜನ್ಮದಲ್ಲಿ ನಾವಿಬ್ಬರೂ ಮತ್ತೆ ಸೇರೋಣ. ಈಗ

ವ॥ ಎಂದು ಚಿತ್ರರಥನಂದನೆ ನುಡಿದು ಮಾಣ್ಬುದುಮಾನತಿಭೀತೆಯೆನಾಗಿ ದೇವಿ ನಿನ್ನ ಯುವರಾಜಂ ನಿನ್ನ ಕುಸುಮಸುಕುಮಾರಮಪ್ಪ ಮನವನೇತಱಿಂ ನೋಯಿಸಿದನ ದಾವುದಪರಾಧಂ ಮಾಡಿದನಾನೆ ಮುನ್ನೆನ್ನ ಜೀವಮಂ ಬಿಡುವೆಂ ಬೆಸಸೆಂದು ಬಿನ್ನವಿಸುವುದುಮಾ ಕಾಂತೆಯಿಂತೆಂದಳ್

ಕನಸಿನೊಳಾವನಾಂ ಮಱೆದು ನಿದ್ರೆಗೆಯುತ್ತಿರೆ ಬಂದುವಂದು ಕೆ
ಮ್ಮನೆ ಕಿವಿಯೋಲೆಯಲ್ಲಿ ಕುರುಪಂ ಬರೆವಂ ಛಲದಿಂದ ಬೇಡವೇ
ಡೆನೆ ನಡೆನೋಡುವಂ ಭವನನಂದನದೊಳ್ ಸುಟಿಯುತ್ತಿರಲ್ಕೆ ಪಿಂ
ತನೆ ಮಱೆಯಿಕ್ಕಿ ಬಂದು ಕಡುಗೂರ್ತವೊಲೆನ್ನಯ ಬೆನ್ನನಪ್ಪುವಂ ೨೮

ಶ್ವಸಿತಾನೀಕಂಗಳಿಂದಂ ಕದಪಿನ ಬೆಮರಂ ನಾಡೆ ಕೂರ್ತಂದದಿಂದಾ
ರಿಸುವಂ ಕಸ್ತೂರಿಯಿಂದೆನ್ನಯ ಮೊಲೆಗೆಲದೊಳ್ ಪತ್ರಭಂಗಂಗಳಂ ಚಿ
ತ್ರಿಸುವಂ ಕಂಕೆಲ್ಲಿಯಂ ಲೀಲೆಯಿನೊದೆವೆಡೆಯೊಳ್ ಮಾಣದಾತ್ಮಾಂಗವಂ ಸಂ
ದಿಸುವಂ ಪೇೞೇವೆನೆಂತಾಂ ನಿಯಮಿಸಿದಪೆನಾ ಧೂರ್ತನಂ ಪತ್ರಲೇಖೇ ೨೯

ವ॥ ಎಂದು ಗಂಧರ್ವರಾಜನಂದನೆ ನುಡಿಯೆ ಕೇಳ್ದೀಕೆ ಮನುಜಮಕರಧ್ವಜಂಗಿಕ್ಕು ವಟ್ಟಳೆಂಬುದನಱಿದು ಸಕಲಭುವನಮಂ ಧವಳಿಸುವ ನಿನ್ನ ಸೌಭಾಗ್ಯಯಶಕ್ಕೆ ಸಂತಸಂಬಟ್ಟು

ನಾನು ಮಾಡಿದ ತಪ್ಪಿಗಾಗಿ ಸತ್ತು ಪರಿಶುದ್ಧಳಾಗುತ್ತೇನೆ." ವ॥ ಕಾದಂಬರಿಯು ಹೀಗೆ ಹೇಳಿ ಸುಮ್ಮನಾದಳು. ಆಗ ನಾನು ಬಹಳ ಭಯಪಟ್ಟು "ರಾಜಪುತ್ರಿ, ಯುವರಾಜನು ನಿನ್ನ ಹೂವಿನಂತೆ ಕೋಮಲವಾದ ಮನಸ್ಸನ್ನು ಹೇಗೆ ನೋಯಿಸಿದ್ದಾನೆ ? ನಿನಗೆ ಅವನು ಯಾವ ತಪ್ಪನ್ನು ಮಾಡಿದ್ದಾನೆ ? ತಿಳಿಸು. ಅದನ್ನು ಕೇಳಿ ನಿನಗಿಂತ ಮೊದಲು ನಾನೇ ಪ್ರಾಣವನ್ನು ಬಿಡುತ್ತೇನೆ" ಎಂದು ಅರಿಕೆ ಮಾಡಲಾಗಿ ಅವಳು ಹೀಗೆ ಹೇಳಿದಳು. ೨೮. "ನಾನು ಮೈಮರೆತು ನಿದ್ರೆಮಾಡುತ್ತಿರಲು ಕನಸಿನಲ್ಲಿ ಕಾಣಿಸಿಕೊಂಡು ಕಿವಿಯ ದಂತದ ಓಲೆಯ ಮೇಲೆ ಗುರುತನ್ನು ಬರೆಯುತ್ತಾನೆ. ನಾನು ಬೇಡ ! ಬೇಡ ! ಎಂದು ಹೇಳಿದರೂ ಕೇಳದೆ ನನ್ನನ್ನೇ ಹಟದಿಂದ ನಿಟ್ಟಿಸಿ ನೋಡುತ್ತಾನೆ. ನಾನು ಉದ್ಯಾನವನದಲ್ಲಿ ಓಡಾಡುತ್ತಿದ್ದರೆ ಹಿಂದುಗಡೆಯಿಂದ ನನಗೆ ಗೊತ್ತಾಗದಂತೆ ಬಂದು ಬಹಳ ಪ್ರೀತಿಯನ್ನು ತೋರಿಸುವವನಂತೆ ನನ್ನ ಬೆನ್ನನ್ನು ತಬ್ಬಿಕೊಳ್ಳುತ್ತಾನೆ. ೨೯. ನನ್ನ ಕೆನ್ನೆಯ ಮೇಲೆ ಮೂಡಿರುವ ಬೆವರನ್ನು ಬಹಳ ಪ್ರೀತಿಯನ್ನು ತೋರಿಸುವವನಂತೆ ಬಾಯಿಂದ ಊದುತ್ತಾ ಉಸಿರುಗಳಿಂದ ಆರಿಸುತ್ತಾನೆ. ನನ್ನ ಸ್ತನಗಳ ಎಡೆಯಲ್ಲಿ ಕಸ್ತೂರಿಯಿಂದ ಚಿತ್ರಗಳನ್ನು ಬರೆಯುತ್ತಾನೆ. ಕಸಿಮಾಡಲು ಅಶೋಕಮರವನ್ನು ನಾನು ಒದೆಯಲು ಹೋದರೆ, ತಾನೂ ಹೇಗೋ ಬಂದು ತನಗೇ ನನ್ನ ಕಾಲಿನ ಒದೆತ ಬೀಳುವಂತೆ ದೇಹವನ್ನು ಒಡ್ಡುತ್ತಾನೆ! ಪತ್ರಲೇಖೆ, ನೀನೇ ಹೇಳು. ನಾನು ಈ ಧೂರ್ತನನ್ನು ಹೇಗೆ ಹತೋಟಿಗೆ ತರಲಿ ?" ವ॥ ಹೀಗೆ ಗಂಧರ್ವರಾಜಕುಮಾರಿಯು ಹೇಳಲು ಅದನ್ನು ಕೇಳಿ ಇವಳು ಮನುಷ್ಯರೂಪಿನ ಮನ್ಮಥನಂತಿರುವ

ಮಲಯಾನಿಲನ ಸೋಂಕುಂ ಮಧುಮಾಸಕುಸುಮಸಮೃದ್ಧಿಯುಂ ಚಂದ್ರೋದಯ ಸೌಂದರ್ಯಮುಂ ಸಫಲಮಾದುದೆಂದು ಮನದೊಳ್ ಬಗೆದು ನಸುನಗುತ್ತಮಾ ಕಾಂತೆಯ ನಿಂತೆಂದೆಂ

ಮುನಿಯಲ್ಕಾಗದು ಯುವರಾ
ಜನ ದೋಷಮಿದಲ್ತು ಕಮಲಮುಖಿ ಕೇಳಿದು ಕಾ
ಮನ ದೋಷಮೆಂಬುದುಂ ಕಾ
ಮನೆಂಬನಾರೆಂದುಮಱಿಯೆನಿಂತಿರೆ ನೆಗಟ್ದಂ ೩೦

ವ॥ ಎಂದು ಮತ್ತಮಾ ಕಾಂತೆ ನೀನೆಂಬ ಕಾಮನ ರೂಪೆಂತುಟೆಂದು ಬೆಸಗೊಳ್ವುದು ಮನಂಗಂಗೆ ರೂಪೆಂಬುದೆಲ್ಲಿ ಬಂದುದು ಈತಂ ತನುವಿಲ್ಲದನಲನೆಂದು ಪೇಟ್ದು ಮತ್ತಮಿಂತೆಂದೆಂ

ಮದನೋಗ್ರಾಗ್ನಿ ಮನಕ್ಕೆ ಮಾಟ್ಪುದು ಮಹಾಸಂತಾಪಮಂ ಜ್ವಾಲೆಯಿ
ಲ್ಲದೆಯುಂ ಕಣ್ಮಲರ್ಗಳ್ಗೆ ಪೊಣ್ಮಿಸುವುದಂಭೋಧಾರೆಯುಂ ಧೂಮವಿ
ಲ್ಲದೆಯುಂ ಮೆಯ್ಯೊಗೆಯಿಪ್ಪುದಗ್ಗಲಿಪ ಪಾಂಡುಚ್ಛಾಯೆಯುಂ ಭಸ್ಮಮಿ
ಲ್ಲದೆಯುಂ ತಾನೆನಿಸಲ್ ವಿಚಿತ್ರಮಿದನಂತಿಂತುಂತೆನಲ್ ಬರ್ಕುಮೇ ೩೧

ವ॥ ಅಂತೆನಿಸಿದ ಮನಸಿಜನ ನನೆಯಂಬಿನ ಕೋಳ್ಗೆ ಪಕ್ಕಾಗಲೊಡನೆ

ನಿನ್ನಲ್ಲಿ ಮೋಹಿಂತಳಾಗಿದ್ದಾಳೆ–ಎಂಬುದನ್ನು ತಿಳಿದು, ಜಗತ್ತನ್ನು ಬೆಳ್ಳಗೆ ಮಾಡುತ್ತಿರುವ ನಿನ್ನ ಸೌಂದರ್ಯದ ಕೀರ್ತಿಗೆ ಬಹಳ ಸಂತೋಷಪಟ್ಟು, ಮಲಯಮಾರುತವು ಬೀಸುವುದೂ, ವಸಂತಕಾಲದ ಪುಷ್ಪಸಂಪತ್ತೂ, ಚಂದ್ರೋದಯದ ಸೌಂದರ್ಯವೂ ಇದೀಗ ಸಾರ್ಥಕವಾಯಿತೆಂದು ಮನಸ್ಸಿನಲ್ಲಿ ಆಲೋಚಿಸಿ ನಗುತ್ತಾ ಅವಳನ್ನು ಕುರಿತು ಹೀಗೆ ಹೇಳಿದೆನು. ೩೦. "ಕಮಲಮುಖಿ, ಕೇಳು, ಕೋಪಿಸಿಕೊಳ್ಳಬೇಡ, ಇದು ಯುವ ರಾಜನ ತಪ್ಪಲ್ಲ, ಇದು ಮನ್ಮಥನ ದೋಷ" ವೆಂದು ನಾನು ಹೇಳಿದೆನು. ಅದಕ್ಕೆ ಅವಳು "ಹೀಗೆಲ್ಲ ಮಾಡುವ ಕಾಮನಾರೆಂಬದು ನನಗೆ ತಿಳಿಯದು." ವ॥ ಎಂದವಳೆ ಮತ್ತೆ "ನೀನು ಹೇಳುವ ಮನ್ಮಥನ ಆಕಾರವು ಹೇಗಿದೆ ?" ಎಂದು ಕೇಳಿದಳು. ಅದಕ್ಕೆ ನಾನು 'ಮನ್ಮಥನಿಗೆ ರೂಪವೆಲ್ಲಿ ಬಂತು ? ಇವನು ಆಕಾರವಿಲ್ಲದ ಬೆಂಕಿ !' ಎಂದು ಹೇಳಿ ಮತ್ತೆ ಹೀಗೆಂದೆನು. ೩೧. "ಈ ಮನ್ಮಥನೆಂಬ ತೀಕ್ಷ್ಣವಾದ ಬೆಂಕಿಯು ಜ್ವಾಲೆಯಿಲ್ಲದಿದ್ದರೂ ಮಹಾಸಂತಾಪವನ್ನುಂಟುಮಾಡುತ್ತದೆ ! ಹೊಗೆಯಿಲ್ಲದಿದ್ದರೂ ಕಣ್ಣಿನಲ್ಲಿ ನೀರು ಸುರಿಯುವಂತೆ ಮಾಡುತ್ತದೆ! ಬೂದಿಯಿಲ್ಲದಿದ್ದರೂ ಶರೀರಕ್ಕೆ ಅತ್ಯಧಿಕವಾದ ಬಿಳುಪನ್ನುಂಟುಮಾಡುತ್ತದೆ! ಹೀಗೆ ಆಶ್ಚರ್ಯಕರವಾದ ಇದನ್ನು ಹೀಗೆಂದು ವರ್ಣಿಸುವುದಕ್ಕೆ ಸಾಧ್ಯವೇ ಇಲ್ಲ. ವ॥ ಹೀಗಿರುವ ಮದನನ ಹೂವಿನಬಾಣದ ಹೊಡೆತಕ್ಕೆ ಪಾತ್ರರಾದ ಕೂಡಲೆ,

ಇನಿಯರ ಕೂಟಮಂ ನೆನೆಯುತಿರ್ಪೊಡೆ ಕಾಮಿನಿಯರ್ಗೆ ಪದ್ಮಗ
ರ್ಭನ ದಿನಮಂತದುಂ ಕಿಱಿದು ರೂಪನೆ ಚಿತ್ರಿಸಿ ನೋಡುತಿರ್ಪವಾ
ವನುದಿನವೆಂದೊಡೀ ನೆಲನುಮೆಯ್ದದದಲ್ಲದೆ ತದ್ಗುಣಪ್ರಶಂ
ಸನಮನೆ ಕೇಳ್ವೆನೆಂಬೊಡೆ ಸರಸ್ವತಿಯುಂ ಜಡೆಯಾಗಿ ತೋಱುವಳ್ ೩೨

ವ॥ ಎಂದು ಬಿನ್ನವಿಸೆ ನೀನೆಂದುದೆಲ್ಲ ಮಾತಿನೊಳ್ ನೆಱೆಯುಂಟು ಮನುಜೇಂದ್ರನೊಳ್ ಮನೋಭವಂ ಪಕ್ಷಪಾತಮಂ ನೆಗಟ್ಟಿನ್ನೊಳೆ ಕಾಯ್ಪಂ ತೋಱಿ ನಿತ್ತರಿಸಲಿತ್ತನಿಲ್ಲ ನಿಮ್ಮಡಿಯ ಹೃದಯದಿನತ್ಯನುರಕ್ತೆಯಾದೆನಗೆರಡಿಲ್ಲದೆ ಕೂಡಿರ್ಪೆಯೆಂಬುದನಿಂಬಾಗಱಿದೆ ನಿಲ್ಲಿಗುಪಾಯಮಾವುದೆಂಬುದುಂ

ಇಲ್ಲಿಗೆ ಮನುಜಮನೋಜನೆ
ಬಲ್ಲನುಪಾಯಮನದರ್ಕೆ ನೀನೀಗಳ್ ತ
ಳ್ವಿಲ್ಲದೆ ಬೆಸಸೆನ್ನಂ ಭೂ
ವಲ್ಲಭನುಮನಿಂದೆ ತಂದಪೆಂ ಚಂದ್ರಮುಖೀ ೩೩

ವ॥ ಎಂದು ಬಿನ್ನವಿಸೆ

ಮನುಜಮನೋಜ ನಿನ್ನ ಪೆಸರ್ಗೇಟಲೊಡಂ ಬೆಮರಿಂದೆ ಕಣ್ಣಲಾ
ಗನೆ ನೆಱೆನಾಂದು ಪತ್ತಿದ ನಿಜಾಂಶುಕಮಂ ಪುಳಕಂಗಳೆತ್ತೆ ಕಾ
ಮನ ಸರದಿಂದೆ ಲಜ್ಜೆ ಪರಿಯಲ್ ಪದವೆತ್ತನುರಾಗವಿಭ್ರಮಂ
ಜನಿಯಿಸಲಾಗಳಾಕುಲತೆಯಂ ತಳೆದೆನ್ನನೊಱಲ್ದು ನೋಡಿದಳ್ ೩೪

೩೨. ಕಾಮಿನಿಯರಿಗೆ ನಲ್ಲರ ಸಮಾಗಮವನ್ನು ನೆನೆಯುತ್ತಿದ್ದರೆ ಬ್ರಹ್ಮನ ದಿನಮಾನವೂ ಕಮ್ಮಿಯಾದಂತೆ ಆಗುತ್ತದೆ. ಪ್ರತಿದಿನವೂ ಅವನ ರೂಪನ್ನು ಚಿತ್ರದಲ್ಲಿ ಬರೆದು ನೋಡಬೇಕೆಂದರೆ ಬರೆಯುಲು ಈ ಭೂಮಿಯು ಸಾಕಾಗುವುದಿಲ್ಲ. ಅಲ್ಲದೆ ಅವನ ಗುಣಪ್ರಶಂಸೆಯನ್ನು ಕೇಳೋಣವೆಂದರೆ, ಈ ವಿಷಯದಲ್ಲಿ ಸರಸ್ವತಿಯೂ ವರ್ಣಿಸಲಾರದೆ ಮೂಕಳಾಗುತ್ತಾಳೆ" ವ॥ ಎಂದು ಅರಿಕೆ ಮಾಡಿದೆನು. ಅವಳು "ನೀನು ಹೇಳುವುದೆಲ್ಲ ಆ ಮನ್ಮಥನಲ್ಲಿ ಸಂಪೂರ್ಣವಾಗಿ ಉಂಟು. ಅವನು ಚಂದ್ರಾಪೀಡನಲ್ಲಿ ಪಕ್ಷಪಾತವನ್ನು ಮಾಡಿ ನನ್ನಲ್ಲಿ ಮಾತ್ರ ಬಹಳ ಕಾರ್ಯವನ್ನು ತೋರಿಸಿದ್ದಾನೆ! ಅದನ್ನು ಸಹಿಸಿಕೊಳ್ಳಲು ಆಗುವುದಿಲ್ಲ. ನಾನು ನಿನ್ನಲ್ಲಿ ಬಹಳ ಪ್ರೀತಿಯನ್ನಿಟ್ಟಿದ್ದೇನೆ. ನೀನು ನನ್ನ ಮನಸ್ಸಿನಲ್ಲಿ ಪರಸ್ಪರ ಭೇದವಿಲ್ಲದಂತೆ ಸೇರಿಕೊಂಡಿರುವೆ. ಇದನ್ನು ನಾನು ಚೆನ್ನಾಗಿ ತಿಳಿದುಕೊಂಡಿದ್ದೇನೆ. ಪ್ರಕೃತ ಈ ವಿಷಯದಲ್ಲಿ ಸರಿಯಾದ ಉಪಾಯವಾವುದು?" ಎಂದು ಕೇಳಿದಳು. ೩೩. "ಚಂದ್ರಮುಖಿ, ಇದಕ್ಕೆ ಉಪಾಯವು ಮನ್ಮಥಾಕಾರನಾದ ಚಂದ್ರಾಪೀಡನಿಗೇ ಗೊತ್ತು. ಆದ್ದರಿಂದ ಈಗ ನೀನು ನನಗೆ ಕೂಡಲೆ ಅಪ್ಪಣೆ ಕೊಡು. ಈಗಲೆ ಹೋಗಿ ಯುವರಾಜನನ್ನು ಕರೆತರುತ್ತೇನೆ, ವ॥ ಎಂದು ನಾನು ಅರಿಕೆ ಮಾಡಿದೆನು. ೩೪. ಎಲೈ ಮನುಷ್ಯರೂಪಿನ ಕಾಮನೆ, ನಿನ್ನ ಹೆಸರನ್ನು ಕೇಳಿದ ಕೂಡಲೆ ಕ್ಷಣಮಾತ್ರದಲ್ಲಿ ಅವಳ ಶರೀರವೆಲ್ಲ ಬೆವರಿನಿಂದ ಬಳಘವಾಗಿ ನೆಂದು ಸೀರೆಯು

ವ॥ ಅನಂತರಮೆನ್ನನಿಂತೆಂದಳ್ ನೀನೆನಗೆರಡಿಲ್ಲದೆ ಕೂಡಿರ್ಪೆಯೆಂಬುದನಿಂಬಾಗಱಿದೆ ನಾದೊಡಮಕಠೋರ ಶಿರೀಷಪುಷ್ಪಸುಕುಮಾರಪ್ರಕೃತಿಯಪ್ಪ ನಾರೀಜನಕೆ ಪಾಗಲ್ಭ್ಯಂ ದೊರೆಕೊಳ್ವುದಲ್ಲೆನೆ ವಿಶೇಷದಿಂ ಬಾಲಭಾವಮನಪ್ಪುಕೆಯ್ದು ಕುಮಾರೀಜನಕ್ಕೆ ಮುನ್ನಮೆ ದೊರೆಕೊಳದು ತಾನೆ ಪೇೞ್ದಟ್ಟುವುದುಂ ಸಾಹಸಮದೆಂತೆನೆ

ಪದದೆನ್ನಂ ಕಾಮನಿತ್ತಂ ತನಗೆನಲದು ಪೊರ್ದಲ್ ನೆವಂ ಕೂರ್ಪೆ ನಾನೆಂ
ಬುದು ವೇಶ್ಯಾಲಾಪವಾಂ ತನ್ನಯ ವಿರಹದೆ ಸತ್ತಪ್ಪೆನೆಂಬುದು ದೃಷ್ಟ
ಕೃದಸತ್ಯಂ ಬರ್ಪೆ ನಾನೆಂಬುದು ಚಪಲತೆ ತಾಂ ಬರ್ಪುದೆಂದೆಂದು ಸೌಭಾ
ಗ್ಯದ ಗರ್ವಂ ಮೇಲೆ ಬಿಟ್ಟಾನೆಳಸಿದಪೆನೆನಲ್ ಬಂಧಕೀಧಾರ್ಷ್ಟ್ಯಮಲ್ತೇ ೩೫

ವ॥ ಅದಱಿನೊಂದುಮಂ ಪೇೞ್ದಟ್ಟಲಱಿಯೆನಿತ್ತ ಚಿತ್ತಜನುಂ ನಿತ್ತರಿಸಲಿತ್ತಪ ನಿಲ್ಲೆಂತಾನುಮಖಿಲಜನಾವಿಭಾವ್ಯನಾಗಿ ಸಿದ್ಧನಂತೆನಗೆಡೆವಿಡದೆ ರೂಪುದೋಱಿಸುವ ಸಂಕಲ್ಪ

ಅಂಟಿಕೊಳ್ಳಲು, ಎದ್ದ ರೋಮಾಂಚಗಳು ಅದನ್ನು ಮೇಲಕ್ಕೆ ಎತ್ತುವಂತೆ ಕಾಣುತ್ತಿತ್ತು. ಮನ್ಮಥನ ಬಾಣದಿಂದ ನಾಚಿಕೆಯು ಓಡಿಹೋಗಲು, ಅವಕಾಶವನ್ನು ಪಡೆದು ಪ್ರೀತಿಯ ವಿಲಾಸಗಳು ಉಂಟಾದವು. ಮನಸ್ಸು ಚಂಚಲತೆಯನ್ನು ಪಡೆಯಿತು. ಹಾಗೆಯೆ ಅವಳು ನನ್ನನ್ನು ಪ್ರೀತಿಯಿಂದ ನೋಡಿದಳು." ವ॥ ಬಳಿಕ ಅವಳು ನನ್ನನ್ನು ಕುರಿತು ಹೀಗೆ ಹೇಳಿದಳು. "ಪತ್ರಲೇಖೆ, ನೀನು ನನ್ನಲ್ಲಿ ಏಕದೇಹದಂತೆ ಕೂಡಿಕೊಂಡು ಪ್ರೀತಿ ಯಿಟ್ಟಿರುವುದನ್ನು ಚೆನ್ನಾಗಿ ತಿಳಿದುಕೊಂಡಿದ್ದೇನೆ. ಆದರೂ ಮೃದುವಾದ ಬಾಗೆ ಹೂವಿನಂತೆ ಕೋಮಲವಾದ ಸ್ವಭಾವವುಳ್ಳ ಹೆಂಗಸರಿಗೆ ಸಾಮಾನ್ಯವಾಗಿ ತಾನಾಗಿಯೇ ಹೇಳಿಕಳುಹಿಸುವಷ್ಟು ದಿಟ್ಟತನವಿರುವುದಿಲ್ಲ. ಹೀಗಿರಲು ವಿಶೇಷವಾಗಿ ಇನ್ನೂ ಎಳೆ ತನದಲ್ಲಿ ಇರುವ ಕನ್ನಿಕೆಯರಿಗಂತೂ ಮೊದಲೇ ಇರುವುದಿಲ್ಲ, ಅಲ್ಲದೆ ತಾನೇ ಹೇಳಿ ಕಳುಹಿಸುವುದು ಸಾಹಸವೇ ಸರಿ. ಹೇಗೆಂದರೆ ೩೫. 'ಮನ್ಮಥನು ನನ್ನನ್ನು ನಿನಗೆ ಪ್ರೀತಿ ಯಿಂದ ಒಪ್ಪಿಸಿದ್ದಾನೆ' ಎಂದು ಹೇಳಿಕಳುಹಿಸೋಣವೆಂದರೆ, ಅವನನ್ನು ಸೇರಿಕೊಳ್ಳಲು ನೆವ ಹೇಳಿದಳೆಂಬ ಭಾವನೆಯುಂಟಾಗುತ್ತದೆ. 'ನಾನು ನಿನ್ನನ್ನು ಪ್ರೀತಿಸುತ್ತೇನೆ' ಎಂದರೆ ಅದು ಸೂಳೆ ಹೇಳುವ ಮಾತಾಗುತ್ತದೆ. 'ನಾನು ನಿನ್ನಯ ವಿರಹವ್ಯಥೆಯಿಂದ ಸಾಯುವೆನೆ'ಂದರೆ ಅದು ಕಣ್ಣೆದುರಿಗೇ ಬದುಕಿರುವುದರಿಂದ ಸುಳ್ಳು ಹೇಳಿದಂತಾಗುತ್ತದೆ. 'ನಾನು ನೀನು ಇರುವ ಕಡೆಗೇ ಬಂದುಬಿಡುತ್ತೇನೆ' ಎಂದರೆ ನನ್ನ ಚಾಪಲ್ಯವನ್ನು ತೋರಿಸಿಕೊಂಡಂತಾಗುತ್ತದೆ. 'ನೀನೇ ನನ್ನಲ್ಲಿಗೆ ಬರಬೇಕೆಂದು' ಹೇಳಿದರೆ ಅವನು ನನ್ನ ಕೈವಶದಲ್ಲಿರುವನೆಂಬ ಜಂಭವನ್ನು ತೋರಿಸಿಕೊಂಡಂತಾಗುತ್ತದೆ ! 'ನಾನೇ ನಿನ್ನನ್ನು ಬಯಸಿದ್ದೇನೆ' ಎಂದರೆ ಅದು ಜಾರೆಯರ ದಿಟ್ಟತನದ ಮಾತಾಗುತ್ತದೆ. ವ॥ ಆದ್ದರಿಂದ ನನಗೆ ಏನು ಹೇಳಿಕಳುಹಿಸುವದಕ್ಕೂ ತಿಳಿಯುವುದಿಲ್ಲ. ಈ ಕಡೆ ಮನ್ಮ ಥನು ನನ್ನನ್ನು ಸಹಿಸಿಕೊಂಡಿರಲು ಬಿಡುವುದಿಲ್ಲ. ಹೇಗೋ ಯಾರ ಕಣ್ಣಿಗೂ ಕಾಣದಂತೆ ಯೋಗಿಯ ಹಾಗೆ ಏಕಪ್ರಕಾರವಾಗಿ ರೂಪವನ್ನು ತೋರಿಸುತ್ತಿರುವ ಭಾವನಾಮಯ

ಮಯನಪ್ಪ ಯುವರಾಜನೆ ಮದೀಯ ವಿರಹಮರಣಭಯಹರಣನಪ್ಪುದಕ್ಕೆ ಕಾರಣನೆಂದು ಕಾದಂಬರಿ ನುಡಿದುಸಿರದಿರ್ಪುದುಂ

ಬರಪಾರದೆ ದೂದವಿಯರ
ಹರಿಸದೆ ಮೞೆ ಮಂಜು ಕಾಳಗತ್ತಲೆಯೆಂದೋ
ಸರಿಸದೆ ಮನವೊಲ್ದಾಗಳ್
ನೆರೆಯಲ್ ದೊರೆಕೊಳ್ವ ರತಮೆ ಸಂಕಲ್ಪರತಂ  ೩೬

ವ॥ ಎಂದು

ಒಸೆದಪ್ಪಲ್ ತಾನದಿಲ್ಲಂ ಕುಚಯುಗಳ ತಿರೋಧಾನಜಾತಶ್ರಮಂ ಚುಂ
ಬಿಸುವಾಗಳ್ ಶಬ್ದಮಿಲ್ಲ ವ್ರಣನಖಮುಖದಂತಕ್ಷತಂ ನಾಣ್ಗೆ ಪಕ್ಕಾ
ಗಿಸದೆಂತುಂ ಕುಂತಳೋತ್ಕರ್ಷಣಮಳಕೆಗಳಂ ಸೂಸದೆಂಬೊಂದು ಸಂಕ
ಲ್ಪ ಸಮಾಯೋಗಂ ವಿಯೋಗಾಕುಲಕುಲಲಲನಾಜೀವನಾಧಾರಮಲ್ತೇ  ೩೭

ವ॥ ಇಂತೆನ್ನೊಳ್ ಬಗೆಯುತ್ತಿರ್ಪನ್ನೆಗಂ ದಿವಸಾವಸಾನಸಮಯದೊಳನುರಕ್ತೆಯಾದ ಕಾದಂಬರೀದೇವಿಯ ಹೃದಯಮೆ ಪೋದಪುದೆಂಬಂತೆ ರವಿಬಿಂಬಮಪರಾಂಬುಧಿವಿಲಂಬಿಯಾಗೆ

ನಾದ ಯುವರಾಜನೇ ನನಗೆ ವಿರಹದಿಂದ ಉಂಟಾಗಿರುವ ಮರಣಭೀತಿಯನ್ನು ಪರಿಹರಿಸುವುದಕ್ಕೆ ಕಾರಣನಾಗಿದ್ದಾನೆ" ಎಂದು ಹೇಳಿ ಕಾದಂಬರಿ ಮಾತು ನಿಲ್ಲಿಸಿದಳು. ೩೬. ಆಗ ನಾನು "ವಿರಹಪೀಡಿತರಾದ ಕಾಮಿನಿಯರು ಕಾಂತನನ್ನು ಮನಸ್ಸಿನಲ್ಲೇ ಪ್ರೀತಿಸಿ ಮನಸ್ಸಿನಲ್ಲೇ ಬೆರೆತರೆ ಉಂಟಾಗುವ ಸಂಭೋಗವೆ ಸಂಕಲ್ಪಸಂಭೋಗ. ಅದರಲ್ಲಿ ನಾಯಕನ ಆಗಮನವನ್ನು ನಿರೀಕ್ಷಿಸಬೇಕಾದ್ದಿಲ್ಲ. ದೂತಿಯರನ್ನು ಕಳುಹಿಸಬೇಕಾಗಿಲ್ಲ. ಮಳೆ, ಮಂಜು, ಕಗ್ಗತ್ತಲೆ ಎಂಬುದಾಗಿ ಹಿಂಜರಿಯಬೇಕಾದ್ದಿಲ್ಲ. ವ॥ ಎಂದು ೩೭. ಸಂಕಲ್ಪಸುರತದಲ್ಲಿ ಪ್ರೀತಿಯಿಂದ ತಬ್ಬಿಕೊಳ್ಳುವಾಗ ಮಧ್ಯೆ ಎರಡು ಕುಚಗಳು ಅಡ್ಡಬಂದು ಶ್ರಮವನ್ನುಂಟುಮಾಡುವುದಿಲ್ಲ. ಚುಂಬಿಸುವಾಗ ಶಬ್ದವುಂಟಾಗುವುದಿಲ್ಲ. ಮತ್ತು ನಖಕ್ಷತ ದಂತಕ್ಷತಗಳುಂಟಾಗಿ ನಾಚಿಕೆಯನ್ನುಂಟುಮಾಡುವುದಿಲ್ಲ. ಕೂದಲುಗಳನ್ನು ಎಳೆಯುವ ಪ್ರಸಂಗವಿಲ್ಲದ್ದರಿಂದ ಮುಂಗುರುಳು ಚದರುವುದಿಲ್ಲ. ಇಂತಹ ಸಂಕಲ್ಪಸಮಾಗಮವು ವಿರಹಪೀಡಿತರಾದ ಕುಲಸ್ತ್ರೀಯರಿಗೆ ಜೀವನಾಧಾರವಾಗಿದೆ" ಎಂದುಕೊಂಡೆನು. ವ॥ ಹೀಗೆ ನಾನು ಮನಸ್ಸಿನಲ್ಲೇ ಆಲೋಚಿಸುತ್ತಿರುವಾಗ ಸಾಯಂಕಾಲವಾಯಿತು. ಅನುರಕ್ತಳಾದ ಕಾದಂಬರಿಯ ಹೃದಯವೇ ಹೋಗುತ್ತಿರುವಂತೆ ಸೂರ್ಯಬಿಂಬವು ಪಶ್ಚಿಮ ಸಮುದ್ರಕ್ಕೆ

ತರುಣಿಯ ವಿಯೋಗತಾಪ
ಕ್ಕೆ ರಜನಿಯುಂ ಕೆಳದಿಯಂತೆ ತಳಿರ್ವಾಸಂ ಬಿ
ತ್ತರಿಸುತ್ತಮಿರ್ದಳೆಂಬಂ
ತಿರೆ ಬಿತ್ತರಿಸಿತ್ತು ಸಾಂದ್ರ ಸಂಧ್ಯಾರಾಗಂ ೩೮

ವ॥ ಅಂತಾ ಸಮಯದೊಳ್ ಗಂಧರ್ವರಾಜನಂದನೆ ಸುರಭಿಗಂಧೋದ್ಗಾರಿಗಳಪ್ಪ ದೀವಿಗೆಗಳಂ ಪಿಡಿದು ದೀಪಧಾರಿಣಿಯರ್ವಂದು ನಿಜನಿಯೋಗಾಶೂನ್ಯಾರ್ಥವಾಗಿ ಗೆಂಟಱೊಳೆ ಬಳಸಲವಂ ಸೈರಿಸದೆ ನಿವಾರಿಸುತ್ತಮಿರ್ದು

ಒದವಿದ ತನುರುಚಿಯೊಳ್ ಪೊಳೆ
ಯೆ ದೀಪಿಕಾಪ್ರಕರಮತನುಶರಸಂತತಿಯಿಂ
ಪುದಿದವೊಲಿರ್ದಳ್ ಮುಗುಳೇ
ಱಿದ ಚಂಪಕಲತೆವೊಲಿರ್ದಳಂತಾ ಕ್ಷಣದೊಳ್ ೩೯

ವ॥ ಅಂತು ಕಿಱಿದುಬೇಗಮಿರ್ದು ಪೊಱಗಿರ್ದವ್ವಂ ಕಾದಂಬರಿ ಬೆಸಗೊಳ್ವುದುಮಾವಿರ್ದಪೆವೆಂಬಂತೆ ಕಲಹಂಸಕಲಾಲಾಪ ಮೃದುರವಂಗಳಪ್ಪ ನೂಪುರರವಂಗಳುಣ್ಮೆ ಬೆಸನಂ ಪಾಱುತ್ತಿರ್ದ ಪರಿಜನಂಗಳಂ ನೋಡಿ ತರಳಿಕೆಯ ಕೆಯ್ಯ ತಂಬುಲಮಂ ತಳೆದುಕೊಂಡೆನಗೆ ಪಿರಿದನುಗ ಹದಿನಿತ್ತು ಕೇಯೂರಕ ನೀಂ ಪತ್ರಲೇಖೆಯನೊಡಗೊಂಡು ಪೋಗಿ ಕಟಕಮಂ ಪುಗಿಸೆಂದು ತನ್ನ

ಜೋತು ಬೀಳಲಾರಂಭಿಸಿತು. ೩೮. ರಾತ್ರಿಯು ತಾನೂ ಒಬ್ಬಳು ಗೆಳತಿಯಾಗಿ ಕಾದಂಬರಿಯ ವಿರಹತಾಪ ಪರಿಹಾರಕ್ಕಾಗಿ ಚಿಗುರಿನ ಹಾಸಿಗೆಯನ್ನು ಹಾಸುತ್ತಿರುವಳೋ ಎಂಬಂತೆ ದಟ್ಟವಾದ ಸಂಜೆಗೆಂಪು ವ್ಯಾಪಿಸಿತು. ವ॥ ಆ ವೇಳೆಯಲ್ಲಿ ಸುವಾಸನೆಯನ್ನು ಬೀರುತ್ತಿರುವ ದೀವಟಿಗೆಗಳನ್ನು ಹಿಡಿದುಕೊಂಡು ದೀವಟಿಗೆಯವರು ಬಂದು ತಮ್ಮ ಊಳಿಗವನ್ನು ಮಾಡುವುದಕ್ಕಾಗಿ ಹತ್ತಿರದಲ್ಲೇ ಸುತ್ತುವರಿಯಲು ಕಾದಂಬರಿಯು ಅವುಗಳನ್ನು ತಾಳಲಾರದೆ ತಡೆಯುತ್ತಿದ್ದಳು. ೩೯. ಆಗ ಅವಳ ಕಾಂತಿಮಯವಾದ ಶರೀರದಲ್ಲಿ ದೀಪಗಳು ಪ್ರತಿಬಿಂಬಿಸಿರಲು, ಮನ್ಮಥನ ಬಾಣಗಳು ದೇಹದಲ್ಲೆಲ್ಲ ನಾಟಿ ಕೊಂಡಿರುವಂತೆ ಕಾಣುತ್ತಿತ್ತು. ಆಗ ಅವಳು ಮೊಗ್ಗುಗಳೇದ ಭರಿತವಾದ ಸಂಪಿಗೆಗಿಡ ದಂತೆ ಕಾಣುತ್ತಿದ್ದಳು. ವ॥ ಹಾಗೆ ಸ್ವಲ್ಪಕಾಲವಿದ್ದು ಹೊರಗಿದ್ದವರನ್ನು ಕರೆದಾಗ "ನಾವು ಇಲ್ಲೆ ಇದ್ದೇವಮ್ಮಾ" ಎಂದು ಹೇಳುವಂತೆ ಕಲಹಂಸಗಳ ಇಂಪಾದ ಧ್ವನಿಯಂತೆ ಮಧುರವಾದ ಕಾಲ್ಗಡಗಗಳ ಧ್ವನಿಗಳು ಹೊಮ್ಮುತ್ತಿರಲು, ಅವಳ ಅಪ್ಪಣೆಯನ್ನೇ ನಿರೀಕ್ಷಿಸುತ್ತಿರುವ ಪರಿಜನರನ್ನು ನೋಡಿ ತರಳಿಕೆಯ ಕೈಯಲ್ಲಿದ್ದ ತಾಂಬೂಲವನ್ನು ತೆಗೆದುಕೊಂಡು ನನಗೆ ಬಹಳ ಅನುಗ್ರಹದಿಂದ ಕೊಟ್ಟಳು. ಬಳಿಕ ಕೇಯೂರಕನನ್ನು ಕರೆದು "ಕೇಯೂರಕ ನೀನು ಪತ್ರಲೇಖೆಯನ್ನು ಕರೆದುಕೊಂಡುಹೋಗಿ ಯುವರಾಜನ ಶಿಬಿರಕ್ಕೆ ಮುಟ್ಟಿಸಿ ಬಾ" ಎಂದು ಅಪ್ಪಣೆ ಮಾಡಿದಳು. ನನಗೆ ತಾನು ಧರಿಸಿದ್ದ ಒಡವೆ

ತೊಟ್ಟ ತೊಡಿಗೆಗಳೆಲ್ಲಮನೆನಗಂಗಚಿತ್ತಮನಿತ್ತಂತಾನುಂ ಬೇಟಱ್ಕೊಳಿಸಿ ಕಳಿಪಿ ತ್ವದೀಯಪ್ರೇಮ ಪ್ರಸಾರಿತದೃಷ್ಟಿಗಳೆನೆನ್ನಂ ಕಿಱಿದಂತರಮುಂ ಕಳುಪುತ್ತಂ ಬರೆ ಕೇಯೂರಕಂಬೆರಸು ಮೇಘನಾದ ನಲ್ಲಿಗೆವಂದಾಗಳಾತಂ ದೇವರ್ ಬೆಸಸಿದಂದದೊಳೆ ಕೇಯೂರಕಂಗೆ ಪೇಟ್ವುದುಮದೆಲ್ಲಮಂ ಕೇಳ್ದಾತಂ ಹೇಮಕೂಟಕ್ಕೆ ಪೋದನಾನುಂ ಮೇಘನಾದನೊಡನಿತ್ತಂ ಬಂದೆನಲ್ಲದೆಯುಂ

ನಿನ್ನಯ ವಿರಹೋದ್ರೇಕದಿ
ನಿನ್ನಂ ತಳಿರ್ವಾಸೆಯ ಮೇಲೆ ಪೊರಳುತ್ತಿರ್ದಾ
ಕನ್ನೆಯ ರೂಪೆನ್ನಿದಿರೊಳ್
ಸನ್ನಿದಮಾದಂತೆ ತೋಱುತಿರ್ದಪುದೀಗಳ್ ೪೦

ವ॥ ಮತ್ತಮಾ ಚಿತ್ರರಥನಂದನೆಯ ಮದನಾನಲಂ ದಿನಕರೋದಯಂ ಮೊದಲ್ಗೊಂಡು ಸೂರ್ಯಕಾಂತೋಪಲಾನಲನಂತೆ ಗಾಳಿಯಿಲ್ಲದುರಿಯುತಂ ಪರಿಜನಂಗಳ ಕೆಯ್ಯ ಕೆಂದಳಿರ ಸಂದಣಿಯೊಳಂ ನಾಂದ ಬೀಸುವ ಬಿಜ್ಜಣಿಗೆಗಳ ತೋರ ಸೀರ್ಪನೀಯ ಸರಿಯೊಳಂ ನಂದನಹರಿ ಚಂದನಚ್ಛಟಾಚ್ಛುರಣದೊಳಮೊಡವಱಿಯದೆ ಪುಡಿಗುಟ್ಟಿದ ಮುತ್ತಿನ ಮಳಲ್ಗದಱಿದ ಮಣಿ ಕುಟ್ಟಿಮಂದೊಳಂ ಮಾಣದುತ್ಕೀಲಿತ ದಂತಮಯ ಕಲಹಂಸಪಂಕ್ತಿ ಮುಕ್ತಾಂಬುಧಾರೆಗಳಪ್ಪ ಧಾರಾಗೃಹಂಗಳಿನುಪಶಮಿಸದೆಂತೆಂತು ವಿಚಲಿತ ಜಲಯಂತ್ರವಿನಿರ್ಗಳಿತಂಗಳಪ್ಪ ಶಿಶಿರಶೀಕರನಿಕರ ತಾರಕಿತ ವಾರಿಧಾರೆಗಳಿಂ ತಳ್ಪೊಯ್ವುದಂತಂತೆ ಸಿಡಿಲ ಕಿಚ್ಚಿನವೊಲಗ್ಗಳಮುರಿವುದಂತು ಮಲ್ಲದೆಯುಂ

ಗಳನ್ನು ಉಡುಗೊರೆಯನ್ನಾಗಿ ಕೊಟ್ಟು, ನಿನ್ನ ಮೇಲಿನ ಪ್ರೀತಿಯಿಂದ ಅಗಲವಾದ ಕಣ್ಣುಗಳಿಂದ ನನ್ನನ್ನೇ ನೋಡುತ್ತಾ ಇಷ್ಟವಿಲ್ಲದಿದ್ದರೂ ಬಹಳ ಕಷ್ಟದಿಂದ ಪ್ರಯಾಣ ಮಾಡಿಸಿದಳು. ನಾನು ಕೇಯೂರಕನೊಂದಿಗೆ ಪ್ರಯಾಣ ಮಾಡುತ್ತಾ ಮೇಘನಾದನಿದ್ದ ಲ್ಲಿಗೆ ಬಂದೆನು. ಮೇಘನಾದನು ತಾವು ಹೇಳಿದುದನ್ನೆಲ್ಲ ಅವನಿಗೆ ತಿಳಿಸಿದನು. ಕೇಯೂರ ಕನು ಅದನ್ನೆಲ್ಲ ಕೇಳಿಕೊಂಡು ಹೇಮಕೂಟಕ್ಕೆ ಹೋದನು. ನಾನು ಮೇಘನಾದನ ಜೊತೆಯಲ್ಲಿ ಈ ಕಡೆ ಬಂದೆನು. ಅಲ್ಲದೆ ೪೦. ನಿನ್ನ ವಿರಹವ್ಯಥೆಯಿಂದ ಚಿಗುರಿನ ಹಾಸಿಗೆಯ ಮೇಲೆ ಹೊರಳಾಡುತ್ತಿರುವ ಆ ಕಾದಂಬರಿಯ ಆಕಾರವು ಈಗಲೂ ನನ್ನ ಎದುರಿಗೆ ಕಣ್ಣಿಗೆ ಕಟ್ಟಿದಂತೆ ತೋರುತ್ತದೆ. ವ॥ ಮತ್ತು ಆ ಕಾದಂಬರಿಯ ವಿರಹಾಗ್ನಿಯು ಸೂರ್ಯೋದಯದಿಂದ ಪ್ರಾರಂಭವಾಗಿ ಸೂರ್ಯಕಾಂತಶಿಲೆಯ ಬೆಂಕಿಯಂತೆ ಗಾಳಿ ಯಿಲ್ಲದೆ ಉರಿಯುತ್ತಿರುತ್ತದೆ. ಪರಿಜನರ ಕೈಯಲ್ಲಿರುವ ಕೆಂದಳಿರುಗಳಿಂದಲೂ, ನೀರಿನಿಂದ ತೋಯಿಸಿ ಬೀಸುತ್ತಿರುವ ಬೀಸಣಿಗೆಗಳ ದಪ್ಪವಾದ ನೀರಿನಹನಿಯ ಧಾರೆಯಿಂದಲೂ, ನಂದನವನದ ಶ್ರೀಗಂಧದ ಲೇಪನದಿಂದಲೂ ಶಾಂತವಾಗುವುದಿಲ್ಲ. ಚೂರ್ಣ ಮಾಡಿದ ಮುತ್ತಿನ ಮರಳುಗಳನ್ನು ದಟ್ಟವಾಗಿ ಹರಡಿರುವ ರತ್ನದ ನೆಲಗಟ್ಟುಗಳಿಂದಲೂ ಪರಿಹಾರವಾಗುವುದಿಲ್ಲ. ಸ್ಥಾಪಿಸಿರುವ ದಂತಮಯವಾದ ಯಂತ್ರದ ಕಲಹಂಸಪಂಕ್ತಿ

ಅಳುರುತ್ತಮಿರ್ಪ ಮದನಾ
ನಳನಿಂದೆಂತೆಂತು ಬೇವುದನಿತಂತತಿನಿ
ರ್ಮಳಮಪ್ಪುದು ಲಾವಣ್ಯಂ
ನಳಿನಾನನೆಗಗ್ನಿಶೌಚವಸ್ತ್ರದ ತೆಱದಿಂ ೪೧

ವ॥ ಅಂತುಮಲ್ಲದೆಯುಂ

ಮೆಲ್ಲಿದುವಪ್ಪ ವಾರಿಕಣಜಾಲದೆ ಮೌಕ್ತಿಕಜಾಲಮಪ್ಪವೊಲ್
ಮೆಲ್ಲೆರ್ದೆಯುಂ ವಿಯೋಗಜನಕಂತದು ಕಲ್ಲೆರ್ದೆಯಪ್ಪುದಲ್ತೆ ಅಂ
ತಲ್ಲದೊಡಾವಗಂ ಕರಗದಿರ್ಪರೆ ಪೆರ್ಚಿದ ತಾಪದಿಂದೆ ಮೇಣ್
ನಲ್ಲರ ಕೂಡುವಾಸೆಯೆ ಬರ್ದುಂಕುವುದರ್ಕೆ ನಿಮಿತ್ತಮಾಗದೇ ೪೨

ವ॥ ಅಂತಾ ಕಾಂತೆಗಾದ ಸಂತಾಪಮುಂ ಕನಸಿನೊಳಾದೊಡಂ ಬರ್ದುಂಕುವುದರ್ಕರಿದೆಂಬುದಂ ನೀಂ ಕಂಡುದಿಲ್ಲ ನಿನಗದೇನೆಂದು ಪೇೞ್ವೆನಾವುದುಪಾಯದಿಂ ಪ್ರತ್ಯಕ್ಷಂ ಮಾಡಿ ತೋಱುವೆಂ ಪ್ರಚಂಡಕಿರಣಾತಪಸಹಸ್ರಂಗಳುಮಂ ಸೈರಿಸುವ ಸರಸಿಜಂಗಳುಮಾಕೆಯ ಮೆಯ್ ಸೋಂಕಿತನಿತಱೊಳೆ ಕಱಂಗಿ ಕರಿಯಪ್ಪುವದುಕಾರಣದಿನಕಾರಣದಾರುಣನಪ್ಪ ಮನ್ಮಥನಿನೆಡೆವಿಡದೆ ಬೇವಸಂಬಡುತಿರ್ದಳದಲ್ಲದೆಯುಂ

ಗಳಿಂದ ಚಿಮ್ಮುತ್ತಿರುವ ಜಲಧಾರೆಗಳುಳ್ಳ ಸ್ನಾನದಮನೆಗಳಿಂದಲೂ ನಿವಾರಣೆಯಾಗುವುದಿಲ್ಲ. ಅಲ್ಲದೆ ಕಾರಂಜಿಗಳಿಂದ ಸುರಿಯುತ್ತಿರುವ ತಂಪಾದಹನಿಗಳಿಂದ ಕೂಡಿಕೊಂಡಿರುವ ಜಲಧಾರೆಗಳಿಂದ ಎಷ್ಟೆಷ್ಟು ಹೊಡೆದರೂ ಸಿಡಿಲಿನ ಬೆಂಕಿಯಂತೆ ಹೆಚ್ಚುಹೆಚ್ಚಾಗಿ ಉರಿಯುತ್ತಲೇ ಇರುತ್ತದೆ. ಅದಲ್ಲದೆ ೪೧. ವ್ಯಾಪಿಸುತ್ತಿರುವ ವಿರಹಾಗ್ನಿಯಿಂದ ಎಷ್ಟೆಷ್ಟುಮಟ್ಟಿಗೆ ಅವಳ ಶರೀರಸೌಂದರ್ಯವು ಬೇಯುತ್ತದೆಯೋ ಅಷ್ಟಷ್ಟುಹೆಚ್ಚಾಗಿ ಅದು ಉಬ್ಬೆಗೆ ಹಾಕಿದ ಬಟ್ಟೆಯಂತೆ ಸ್ವಚ್ಛವಾಗುತ್ತದೆ. ವ॥ ಅದಲ್ಲದೆ ೪೨. ನೀರು ಸ್ವಭಾವವಾಗಿ ಮೃದುವಾದುದು. ಅದು ಕಪ್ಪೆಯ ಚಿಪ್ಪಿನಲ್ಲಿ ಬಿದ್ದು ಕಠಿನವಾದ ಮುತ್ತಾಗುತ್ತದೆ. ಹಾಗೆಯೆ ಹೆಂಗಸರ ಕೋಮಲವಾದ ಹೃದಯವು ವಿರಹಾವಸ್ಥೆಯಲ್ಲಿ ಕಲ್ಲೆದೆಯಾಗಿಬಿಡುತ್ತದೆ. ಹಾಗಲ್ಲದಿದ್ದರೆ ಆಗಿನ ಹೆಚ್ಚಾದ ಸಂತಾಪದಿಂದ ಅದು ಕರಗಿಹೋಗದೆ ಇರುತ್ತಿತ್ತೆ ? ಮತ್ತು ಪ್ರಿಯರೊಂದಿಗೆ ಸಮಾಗಮವಾಗುವುದೆಂಬ ಆಸೆಯೇ ಅವರು ಬದುಕಿರುವುದಕ್ಕೆ ಅವಲಂಬನವಾಗಿರುತ್ತದೆ. ವ॥ ಹಾಗೆ ಆ ಕಾದಂಬರಿಯು ಅನುಭವಿಸುತ್ತಿರುವ ಸಂತಾಪವನ್ನೂ ಅವಳು ಬದುಕುವುದು ಅಸಾಧ್ಯವೆಂಬುದನ್ನೂ ನೀವು ಕನಸಿನಲ್ಲೂ ಕಂಡುಕೊಂಡಿಲ್ಲ. ನಿಮಗೆ ನಾನು ಅದನ್ನು ಹೇಗೆ ತಿಳಿಸಲಿ ? ಯಾವ ಉಪಾಯದಿಂದ ಕಣ್ಣಿಗೆ ಕಟ್ಟುವಂತೆ ಮಾಡಲಿ ? ಸೂರ್ಯನ ತೀಕ್ಷ್ಣವಾದ ಸಹಸ್ರಾರು ಕಿರಣಗಳ ಬಿಸಿಲನ್ನು ತಾಳಿಕೊಳ್ಳಬಲ್ಲ ತಾವರೆಗಳು ಅವಳ ದೇಹಕ್ಕೆ ಸೋಕಿದ ಕೂಡಲೆ ಬಾಡಿ ಕರಿಕಾಗುತ್ತವೆ. ಆ ಕಾರಣದಿಂದ ನಿಷ್ಕಾರಣವಾಗಿ ಕ್ರೂರನಾದ ಮನ್ಮಥನಿಂದ ಒಂದೇಸಮನೆ ತಳಮಳಗೊಳ್ಳುತ್ತಿದ್ದಾಳೆ. ಅದಲ್ಲದೆ,

ತರುಣಿಗೆ ದೇವ ನಿಜಾನು
ಸ್ಮರಣದೆ ಮಂದೈಸಿ ಮೆಯ್ಯೊಳುಣ್ಮಿದ ಪುಳಕಾಂ
ಕುರನಿಕರಂ ಕುಸುಮಾಯುಧ
ಶರಪಾತಕ್ಕಗಿದು ತೊಟ್ಟ ಕವಚಮಿದೆನಿಕುಂ ೪೩

ಚಕಿತಮೃಗೀವಿಲೋಚನೆಯ ಸುಯ್ಯೆಲರಿಂದೆ ತೆರಳ್ದು ಪಾಱುವಂ
ಶುಕಮನದೊರ್ಮೆಯಾ ಪುಳುಕಿತೋದ್ಧಕುಚದ್ವಯದೊಳ್ ತಗುಳ್ಚುತಂ
ಪ್ರಕಟಿಸಿದಂತೆ ತೋಱುವುದು ನಿನ್ನಯ ಕೆಯ್ವಿಡಿಯಲ್ಕೆವೇಡಿ ಕಂ
ಟಕಶಯನವ್ರತಾಚರಣಮಂ ತಳೆದೊಂದಿರವಂ ಕರಾಂಬುಜಂ ೪೪

ಅರುಣಮಣಿವಲಯರುಚಿ ಪ
ರ್ವಿರಲಂತರ್ಜ್ವಲಿತ ಮದನಶಿಖಿ ಪರ್ವಿದುದೆಂ
ದಿರದೆ ಬಿದಿರ್ವಳ್ ಕದಪಿನ
ಭರದಿಂ ಜೋಲ್ವೇಱಿದೊಂದು ಕರಕಿಸಲಯಮಂ ೪೫

ವ॥ ಅದಲ್ಲದೆಯುಂ

ಚರಣದೆ ಕಾಂಚಿಯುಂ ಗುರುನಿತಂಬದ ಪರ್ವುಗೆಯಿಂದೆ ಮಧ್ಯಮಂ
ನೆರೆವತಿತೃಷ್ಣೆಯಿಂ ಹೃದಯಮಂ ಕುಚದೊಳ್ ನಳಿನೀದಳಂಗಳಂ
ಕೊರಲೊಳೆ ಜೀವಮಂ ಕರಸರೋರುಹದೊಳ್ ಕದಪಂ ಲಲಾಟದೊಳ್
ಪರೆದ ಕುರುಳ್ಗಳಂ ವಿರಹವಿಹ್ವಲೆಯಾಗಿ ಲತಾಂಗಿ ತಾಳ್ದುವಳ್ ೪೬

೪೩. ಎಲೈ ಪ್ರಭುವೆ, ಆ ಕಾದಂಬರಿಗೆ ನಿನ್ನ ಸ್ಮರಣೆಯಿಂದ ಶರೀರದಲ್ಲೆಲ್ಲಾ ದಟ್ಟವಾಗಿ ರೋಮಾಂಚನವುಂಟಾಗುತ್ತದೆ. ಅದು ಮನ್ಮಥನ ಬಾಣಕ್ಕೆ ಹೆದರಿ, ಅವಳು ತೊಟ್ಟು ಕೊಂಡಿರುವ ಕವಚದಂತೆ ತೋರುತ್ತದೆ. ೪೪. ಹೆದರಿದ ಜಿಂಕೆಯಂತೆ ಕಣ್ಣುಳ್ಳ ಕಾದಂಬರಿಯು ನಿಟ್ಟುಸಿರಿನ ಗಾಳಿಯಿಂದ ಜಾರಿ ಹಾರುವ ಬಟ್ಟೆಯನ್ನು ಒಮ್ಮೊಮ್ಮೆ ರೋಮಾಂಚನದಿಂದ ಮುಳ್ಳು ಹಾಸಿದಂತಿರುವ ತನ್ನ ತೋರಮೊಲೆಗಳ ಮೇಲೆ ಬಲಗೈಯಿಂದ ಇರಿಸುತ್ತಿದ್ದಳು. ಇದರಿಂದ ಅವಳ ಬಲಗೈ ನಿನ್ನ ಪಾಣಿಗ್ರಹಣ ಮಾಡ ಬೇಕೆಂಬ ಉದ್ದೇಶದಿಂದ ಮುಳ್ಳಿನ ಹಾಸಿಗೆಯ ಮೇಲೆ ಮಲಗುವ ವ್ರತವನ್ನು ಆಚರಿಸು ತ್ತಿರುವಂತೆ ತೋರುತ್ತಿತ್ತು. ೪೫. ಅವಳು ಕೆಂಪುರತ್ನದ ಕಡಗವನ್ನು ಧಾಕಿಕೊಂಡಿರುವ ತನ್ನ ಎಡಗೈಯನ್ನು ಕೆನ್ನೆಯ ಮೇಲೆ ಇಟ್ಟುಕೊಂಡಿದ್ದಳು. ಕಡಗದ ಕೆಂಬೆಳಗು ಸುತ್ತಲೂ ಹರಡಿಕೊಂಡಿತ್ತು. ಇದರಿಂದ ಅವಳು ಒಳಗೆ ಉರಿಯುತ್ತಿರುವ ಕಾಮಾಗ್ನಿಯು ಹೊರಹೊಮ್ಮಿ ಕೈ ಸುಡುವಂತಾಗಲು, ಅದನ್ನು ಕೊಡಹುತ್ತಿರುವಳೋ ಎಂಬಂತೆ ಕೆನ್ನೆಯ ಭಾರದಿಂದ ಬೆಂಡಾದ ಆ ಮೃದುವಾದ ಕೈಯನ್ನು ಕೊಡಹುತ್ತಿದ್ದಳು. ಟಿ. ರತ್ನದ ಕೆಂಬೆಳಗು ಅಗ್ನಿಜ್ವಾಲೆಯಂತೆ ಕಾಣುತ್ತಿದ್ದುದರಿಂದ ಅದನ್ನು ಕಾಮಾಗ್ನಿಯ ಜ್ವಾಲೆಯೆಂದು ವರ್ಣಿಸಿದ್ದಾನೆ. ವ॥ ಅದಲ್ಲದೆ ೪೬. ವಿರಹಪೀಡಿತಳಾದ ಕಾದಂಬರಿಯು (ಬಹಳ ಕೃಶಳಾಗಿದ್ದುದರಿಂದ) ಸೊಂಟದಿಂದ ಜಾರಿಬೀಳುತ್ತಿರುವ ಡಾಬನ್ನು ಕಾಲು

ವ॥ ಅದಲ್ಲದೆಯುಮೋರೊರ್ವಳ್ ರಣರಣಕವ್ಯಥಾವ್ಯಜನ ಪಲ್ಲವಭಂಗವಾದಪ್ಪುದೆಂದಂಜಿ ನಡುಗುವಂತೆ ಸಿಡುಸುಯ್ಯ ಗಾಳಿಯಿಂ ನಡುಗುವ ಲತಾಮಂಟಪದೊಳಿರ್ಪಳೋರೊರ್ವಳ್ ವಿರಹದ ತೊಡಿಗೆಗಳ್ಗುಳ್ಳ ಮೃಣಾಳಂಗಳೆಲ್ಲಮಂ ಮುಱಿಯಿಸದಿರೆಂದು ಕೆಯ್ಮುಗಿವಂತೆ ಮುಗಿವ ಬಯಲ್ದಾವರೆಗಳೊಳಿರ್ಪಳೋರೊರ್ವಳ್ ಪೂವಾಸಿಗೆ ತಿಱಿವರೆಂಬ ಭಯದಿಂ ಮುಟುಂಗಿದ ಚೆನ್ನೆಯ್ದಿಲ್ಗಳಂತಿರೆ ನಿರಂತರಾಶ್ರುಪಾತದಿಂ ಕೆಂಪುದಳೆದ ಕಣ್ಮಲರನೊಳಕೆಯ್ದು ಪವನದ ತಿಳಿಗೊಳಂಗಳಂ ಪುಗುವಳೋರೊರ್ವಳ್ ತಳಿರ್ ಪೇಱಿದ ತಮಾಲವೀಥಿಗೆವಂದು ಸೆಳೆಗೊಂಬಂ ಪಿಡಿದು ನೇಲ್ದು ನಿಮೀಲಿತನಯನೆಯಾಗಿ ಕಿಱಿದುಬೇಗಮಿರ್ಪಳೋರೊರ್ವಳ್ ಸಂಗೀತಗೃಹಕ್ಕೆ ಬಂದು ಮಧುರ ಮುರಜ ಲಯಗತಿಲಾಸ್ಯಜನಿತ ಖೇದದಿಂ [ಮಯೂರಿಯಂತೆ ಧಾರಾಗೃಹಕ್ಕೆ ವಂದು] ಕದಂಬಕಲಿಕೆಯಂತೆ ಘನಜಲಧಾರಾಶೀಕರಾಸಾರದಿಂ ಪುಲಕಿತಾಂಗಿಯಾಗಿ ನಡುಗುತ್ತಿರ್ಪಳೋರೊರ್ವಳ್ ಶುದ್ಧಾಂತ ಕಮಲಿನೀತೀರಕ್ಕೆವಂದು ನಿನ್ನ ಮೆಯ್ವೆಂಕೆಯೆಂದೆಮಗಾಹಾರಮಪ್ಪಲ್ಲಿಯ ಮೃಣಾಳಂಗಳೆಲ್ಲಮಂ ಕೊರಗಿಸದಿರೆಂದು ಚಪ್ಪರಿಸುವಂತಿರ್ದ ಹಂಸಚಕ್ರವಾಕಂಗಳುಲಿಪಕ್ಕೆ ಬೆಗಡುಗೊಂಬಳೋರೊರ್ವಳ್ ರಮಣೀಯ ಪ್ರಮದವನಕ್ಕೆವಂದು ಶಿಶಿರೋಪಚಾರನಿಮಿ

ಗಳಿಂದ ಹಿಡಿದು ನಿಲ್ಲಿಸುತ್ತಾಳೆ. ಹಾಗೆಯೆ ಆ ಸೊಂಟವನ್ನು ದಪ್ಪ ನಿತಂಬಗಳಿಂದ ಹಿಡಿದಿದ್ದಾಳೆ. ನಿನ್ನನ್ನು ಕೂಡುವ ಆಸೆಯಿಂದ ಹೃದಯವನ್ನು ಹಿಡಿದಿದ್ದಾಳೆ. ಸ್ತನಗಳಲ್ಲಿ ತಾವರೆಯೆಲೆಯನ್ನೂ, ಕೊರಳಲ್ಲಿ ಪ್ರಾಣವನ್ನೂ, ಅಂಗೈಮೇಲೆ ಕೆನ್ನೆಯನ್ನೂ, ಹಣೆಯಲ್ಲಿ ಚದುರಿದ ಕೂದಲನ್ನೂ ತಾಳಿದ್ದಾಳೆ. ವ॥ ಅದಲ್ಲದೆ ಒಮ್ಮೊಮ್ಮೆ ವಿರಹಸಂತಾಪದ ಪರಿಹಾರಕ್ಕಾಗಿ ಬೀಸಣಿಗೆಯನ್ನು ಮಾಡಿಕೊಳ್ಳಲು ತನ್ನ ಚಿಗುರುಗಳನ್ನೆಲ್ಲ ಕೊಯ್ದುಬಿಡುತ್ತಾರೆಂದು ಹೆದರಿ ನಡುಗುತ್ತಿರುವುದೋ ಎಂಬಂತೆ ತನ್ನ ನಿಟ್ಟುಸಿರಿನ ಗಾಳಿಯಿಂದ ಕಂಪಿಸುತ್ತಿರುವ ಲತಾಮಂಟಪದಲ್ಲಿರುತ್ತಾಳೆ. ಒಮ್ಮೆ ವಿರಹಸಂತಾಪ ಪರಿಹಾರಕ್ಕೆಂದು ಇಲ್ಲಿರುವ ದಂಟುಗಳನ್ನು ಮುರಿದುಹಾಕಿಸಬೇಡವೆಂದು ಕೈಮುಗಿಯುತ್ತಿರುವಂತೆ ಕಾಣುತ್ತಿರುವ ಮೊಗ್ಗುಗಳಿಂದ ಕೂಡಿರುವ ನೆಲದಾವರೆಯ ಪೊದರಿನಲ್ಲಿರುತ್ತಾಳೆ. ಮತ್ತೊಮ್ಮೆ ಹೂವಿನ ಹಾಸಿಗೆಯನ್ನು ಮಾಡುವುದಕ್ಕಾಗಿ ಎಲ್ಲಿ ಕೊಯ್ದುಬಿಡುತ್ತಾರೋ ಎಂಬ ಭಯದಿಂದ ಮುಳುಗಿರುವ ಕೆಂಪುಕಮಲಗಳನ್ನು ಹೋಲುವ, ಒಂದೇಸಮನೆ ಅತ್ತು ಅತ್ತು ಕೆಂಪಾದ ಕಣ್ಣುಗಳಿಂದ ಕೂಡಿದವಳಾಗಿ ಉದ್ಯಾನವನದ ತಿಳಿನೀರಿನ ಸರೋವರಕ್ಕೆ ಇಳಿಯುತ್ತಾಳೆ. ಮತ್ತೊಮ್ಮೆ ಚಿಗುರುಗಳಿಂದ ಭರಿತವಾದ ಹೊಂಗೆಮರಗಳ ಸಾಲಿಗೆ ಬಂದು ಒಂದು ಸಣ್ಣ ಕೊಂಬೆಯನ್ನು ಹಿಡಿದು ತೂಗಾಡುತ್ತಾ ಕಣ್ಣುಮುಚ್ಚಿಕೊಂಡು ಸ್ವಲ್ಪಕಾಲವಿರುತ್ತಾಳೆ. ಮತ್ತೊಮ್ಮೆ ಸಂಗೀತಶಾಲೆಗೆ ಬಂದು ಇಂಪಾದ ಮದ್ದಳೆಯ ಲಯಕ್ಕೆ ಅನುಸಾರವಾಗಿ ಮಾಡುತ್ತಿರುವ ಲಾಸ್ಯನೃತ್ಯವನ್ನು ಕಂಡು, ಗುಡುಗುಧ್ವನಿಯನ್ನು ಕೇಳಿದ ಹೆಣ್ಣುನವಿಲಿನಂತೆ ತಳಮಳಗೊಂಡು ಸ್ನಾನಗೃಹಕ್ಕೆ ಬರುತ್ತಾಳೆ. ಅಲ್ಲಿ ದಟ್ಟವಾಗಿ ಸುರಿಯುತ್ತಿರುವ ಜಲಧಾರೆಗಳ ಹನಿಗಳ ಮಳೆ

ತ್ತದಿನುಳ್ಳಲರ್ಗಳೆಲ್ಲಮಂ ತಿಱಿದು ಕಿಡಿಸಿದಳೀಕೆಯೆಂದು ಜಿನುಗುವಂತಿರ್ದ ಮಧುಕರನಿವಹಕ್ಕೆ ಪಿರಿದುಮುಬ್ಬೆಗಂಬಡುವಳೋರೊರ್ಮೆ ಭವನಾಂಗಣಸಹಕಾರಭೂರುಹಕ್ಕೆವಂದು ತನ್ನ ಪಾಡುವಿಂಚರದಿಂದೆಮ್ಮ ಪಾಟವಂ ಕೀಟ್ಮಾಡಿದಳೀವಳೆಂದು ಮುಳಿಸಿಂ ಗಜಱಿಗರ್ಜಿಸುವಂತಿರ್ದ ಕೋಗಿಲೆಗಳ ಜಡಿಪಕ್ಕೆ ಬೆದಱುವಳಿಂತು ಪಲತೆಱದೆ ಮದನದುಶ್ಚೇಷ್ಟಿತಾಯಾಸಂಗಳೀದವ್ಪೆ ಪಗಲ್ಗಳಂ ಕಟಿಪುವಳಂತುಮಲ್ಲದೆಯುಂ

ಅಮೃತಮಯೂಖ ನಿರ್ಮಲ ನಿಶೀಥಿನಿಯೊಳ್ ಲಲಿತಾಂಗಮಿಂದುಕಾಂ
ತಮಯಮೆನಲ್ಕೆ ಬಿಂದುವಿದುತಿರ್ಪುದು ಸುಯ್ಯೆಲರಂಬುರಾಶಿ ವಾ
ರಿಮಯಮೆನಲ್ಕೆ ಪೆರ್ಚುವುದಪಾರಮನೋರಥಮುಂ ರಥಾಂಗಯು
ಗ್ಮಮಯಮೆನಲ್ಕೆ ಕೂಡದದಣಮಾ ವಿಕಚೋತ್ಪಲಪತ್ರನೇತ್ರೆಯಾ ೪೭

ಪೊಳೆವ ಶಶಿಕಾಂತದರ್ಪಣ
ನಿಳಯಃದೊಳಲ್ಲಲ್ಲಿ ಪೊಳೆವ ತನ್ನಯ ನೆಟಲಂ
ನಳಿನಾಕ್ಷಿ ಕಾಣುತಂ ಮನ
ದೊಳೆ ಪಱಿವಱಿಯಾದೆನೆಂದು ಚಿಂತಿಸುತಿರ್ದಳ್ ೪೮

ಯಿಂದ ಕದಂಬವೃಕ್ಷದ ಮೊಗ್ಗುಗಳಂತೆ ರೋಮಾಂಚನವನ್ನು ಹೊಂದಿ ನಡುಗುತ್ತಾಳೆ. ಮತ್ತೊಮ್ಮೆ ರಾಣೀವಾಸದ ತಾವರೆಗೊಳದ ದಡಕ್ಕೆ ಬಂದು ನಿನ್ನ ದೇಹಕ್ಕೆ ಬಳೆ ಮಾಡಿಕೊಳ್ಳುವುದಕ್ಕಾಗಿ ಬಂದು ನಮಗೆ ಆಹಾರವಾದ ತಾವರೆದಂಟುಗಳೆಲ್ಲವನ್ನೂ ಕೊಯ್ದು ಬಳಲಿಸಬೇಡವೆಂದು ಗದರಿಸುವಂತಿರುವ ಹಂಸ ಮತ್ತು ಚಕ್ರವಾಕಪಕ್ಷಿಗಳ ಶಬ್ದಕ್ಕೆ ಅಂಜುತ್ತಿದ್ದಳು. ಮತ್ತೊಮ್ಮೆ ಸುಂದರವಾದ ಉದ್ಯಾನವನಕ್ಕೆ ಬಂದು ವಿರಹ ಸಂತಾಪದ ಶೈತ್ಯೋಪಚಾರಕ್ಕಾಗಿ ಇವಳು ಇಲ್ಲಿರುವ ಹೂವುಗಳೆಲ್ಲವನ್ನೂ ಕೊಯ್ದು ಹಾಳುಮಾಡಿದಳೆಂದು ಕೋಪಗೊಂಡಂತೆ ಮೊರೆಯುತ್ತಿರುವ ದುಂಬಿಗಳನ್ನು ನೋಡಿ ಬಹಳವಾಗಿ ತಳಮಳಗೊಳ್ಳುತ್ತಾಳೆ. ಮತ್ತೊಮ್ಮೆ ಮನೆಯ ಅಂಗಳದಲ್ಲಿರುವ ಮಾವಿನ ಮರದ ಹತ್ತಿರಕ್ಕೆ ಬಂದು ತನ್ನ ಹಾಡಿನ ಇಂಪಾದ ಧ್ವನಿಯಿಂದ ನಮ್ಮ ಧ್ವನಿಯನ್ನು ಕೀಳುಮಾಡಿದ್ದಾಳೆಂದು ಕೋಪದಿಂದ ಬೆದರಿಸಿ ಗರ್ಜಿಸುವಂತಿರುವ ಕೋಕಿಲೆಗಳ ಕೂಗಿಗೆ ಹೆದರುತ್ತಾಳೆ. ಹೀಗೆ ಹಲವು ಬಗೆಯ ಕಾಮವಿಕಾರದ ಚೇಷ್ಟೆಗಳ ಆಯಾಸ ದಿಂದಲೆ ಹಗಲನ್ನು ಕಳೆಯುವಳು ! ಅದಲ್ಲದೆ, ೪೭. ಚಂದ್ರನ ಬೆಳದಿಂಗಳಿಂದ ಶುಭ್ರ ವಾದ ರಾತ್ರಿಯಲ್ಲಿ ಅರಳಿದ ಕನ್ನೈದಿಲೆಯ ಎಸಳಿನಂತೆ ಕಣ್ಣುಳ್ಳ ಕಾದಂಬರಿಯ ಕೋಮಲವಾದ ಶರೀರವು ಚಂದ್ರಕಾಂತಶಿಲೆಯಿಂದ ಮಾಡಲ್ಪಟ್ಟಂತೆ ನೀರನ್ನು ಹನಿಸುತ್ತದೆ, (ಬೆವರುವುದರಿಂದ) ನಿಟ್ಟುಸಿರು ಸಮುದ್ರದ ನೀರೋ ಎಂಬಂತೆ ಹೆಚ್ಚು ತ್ತದೆ. ಅವಳ ದೊಡ್ಡ ಮನೋರಥವು ಚಕ್ರವಾಕದಂಪತಿಗಳೋ ಎಂಬಂತೆ ಕೂಡುವು ದಿಲ್ಲ. (ಆಶೆಗೆ ಭಂಗಬರುತ್ತದೆ) ೪೮. ಆ ಕಾದಂಬರಿಯು ಕನ್ನಡಿಯಂತೆ ಹೊಳೆಯು ತ್ತಿರುವ ಚಂದ್ರಕಾಂತಮಯವಾದ ಗೋಡೆಗಳಲ್ಲಿ ಅಲ್ಲಲ್ಲಿ ಮೂಡಿರುವ ತನ್ನ ಪ್ರತಿಬಿಂಬ

ಅಲರ್ದಲರ್ವಾಸುಗಳೊಳ್ ಪರಿ
ಮಳಕ್ಕೆ ಪರಿತಂದು ಮುಸುಱುವಳಿಕುಲದಿಂದಾ
ಕುಲತೆ ಪಿರಿದಾಗೆ ಮದನಾ
ನಲನಳುರಲ್ ಕಾಂತೆ ಪೊತ್ತಿ ಪೊಗೆವಂತಿರ್ದಳ್ ೪೯

ವ॥ ಮತ್ತಮೇನೆಂದಱಿಯೆನದೊಂದು ಮುಗ್ಧತೆಯನಪ್ಪುಕೆಯ್ದಂತೆ ವಿಲಾಸಮಂ ತಾಳ್ದಿದಂತೆ ಮರುಳ್ತನಂ ತೊಡರ್ದಂತೆ ನೆಗಟುತ್ತಮಿರ್ಪಳದೆಂತೆನೆ

ಲಲನಾಮಂಜೀರನಾದಕ್ಕುಲಿಗುಮೆನುತೆ ಧಾರಾಗೃಹೋತ್ಕೀಲಿತೇಂದೂ
ಪಲ ಹಂಸಾಸ್ಯಂಗಳಂ ಮುದ್ರಿಸುವಳಿರುಳಗಲ್ವಪ್ಪುದೆಂದಬ್ಜಸೂತ್ರಾ
ವಳಿಯಿಂದಾಲೇಖ್ಯಚಕ್ರದ್ವಯದ ಚರಣಮಂ ಕಟ್ಟುವಳ್ ಕರ್ಣಪೂರೋ
ತ್ಪಲದಿಂ ಚೇತಾರತಕ್ಕಾಟಿಸಿ ಮಣಿಮಯದೀಪಂಗಳಂ ನಂದೆ ಪೊಯ್ವಳ್ ೫೦

ವ॥ ಮತ್ತಮಾಕೆ ಜಲಕಣಿಕೆಯಂತೆ ನಳಿನೀದಳಂಗಳ ಮೇಲಿರ್ದು ನಡುಗುವಳ್ ನಳಿನಿಯಂತೆ ಶೀತಕರಸ್ಪರ್ಶನದಿಂ ಕೊರಗುವಳ್ ಚಂದ್ರಮೂರ್ತಿಯಂತೆ ಕಮಲನಿಕರಸ್ಖಲಿತಪಾದೆಯಾಗಿ ತೊಟಲುತ್ತಮಿರುಳಂ ಕಟಿಪುವಳ್ ಕುಮುದಿನಿಯಂತೆ ತಿಳಿಗೊಳಂಗಳೊಳ್ ಮೂರ್ಛೆ

ವನ್ನು ನೋಡಿ ತಾನು ಒಡೆದು ಚೂರು ಚೂರು ಆಗಿಬಿಟ್ಟೆನೋ ಎಂದು ಆಲೋಚಿಸುತ್ತಾಳೆ! ೪೯. ಅವಳು ಅರಳಿರುವ ಹೂವಿನ ಹಾಸಿಗೆಯಲ್ಲಿ ಮಲಗಿರುವಾಗ ಸುವಾಸನೆಗಾಗಿ ಬಂದು ಮುತ್ತುತ್ತಿರುವ ದುಂಬಿಗಳ ಗುಂಪಿನಿಂದ ಆವರಿಸಲ್ಪಟ್ಟಿದ್ದಳು. ಇದರಿಂದ ಅವಳ ಕಾಮಾಗ್ನಿಯು ಹೆಚ್ಚಾಗಿ ಹತ್ತಿಕೊಂಡು ಉರಿದು ಹೊಗೆಯಾಡುತ್ತಿರುವಂತೆ ಕಾಣುತ್ತಿತ್ತು. ವ॥ ಮತ್ತು ಏಕೋ ತಿಳಿಯದು, ಅವಳು ಮೊದ್ದುತನವನ್ನು ಪಡೆದವಳಂತೆಯೂ ಲೀಲೆಯಾಡುವವಳಂತೆಯೂ ಹುಚ್ಚು ಹಿಡಿದವಳಂತೆಯೂ ತೋರ್ಪಡಿಸಿಕೊಳ್ಳುತ್ತಾಳೆ. ಹೇಗೆಂದರೆ ೫೦. ಹೆಂಗಸರ ಕಾಲುಗಡಗದ ಧ್ವನಿಯನ್ನು ಕೇಳಿ ತಾವೂ ಕೂಗುತ್ತವೆ ಎಂದು ನೀರುಮನೆಯಲ್ಲಿ ನಿರ್ಮಿಸಿರುವ ಚಂದ್ರಕಾಂತಶಿಲಾಮಯವಾದ ಹಂಸಗಳ ಬಾಯನ್ನು ಮುಚ್ಚುತ್ತಾಳೆ. ರಾತ್ರಿ ಅಗಲಿಬಿಡುತ್ತವೆ ಎಂದು ತಾವರೆದಂಟಿನ ದಾರಗಳಿಂದ ಚಿತ್ರದಲ್ಲಿ ಬರೆದಿರುವ ಚಕ್ರವಾಕದಂಪತಿಗಳ ಕಾಲುಗಳನ್ನು ಕಟ್ಟುತ್ತಾಳೆ. ಮತ್ತು ಮಾನಸಿಕ ಸಂಭೋಗವನ್ನು ಬಯಸಿ ರತ್ನದೀಪಗಳನ್ನು ಆರಿಸುವುದಕ್ಕಾಗಿ ಹೊಡೆಯುತ್ತಾಳೆ. ವ॥ ಮತ್ತು ಅವಳು ನೀರಿನ ಹನಿಗಳಂತೆ ತಾವರೆಯೆಲೆಗಳ ಮೇಲೆ ಮಲಗಿ ನಡುಗುತ್ತಾಳೆ. ತಾವರೆಬಳ್ಳಿಯಂತೆ ಚಂದ್ರಕಿರಣಗಳ ಸಂಪರ್ಕದಿಂದ ಬಾಡುತ್ತಾಳೆ. ಚಂದ್ರನಂತೆ ಕಮಲಗಳ ಗುಂಪಿನಲ್ಲಿ ಎಡುವುತ್ತಿರುವ ಕಾಲು (ಕಿರಣ)ಳ್ಳವಳಾಗಿ ತೊಳಲುತ್ತ ರಾತ್ರಿಯನ್ನು ಕಳೆಯುತ್ತಾಳೆ. ಕನ್ನೈದಿಲೆಯ ಬಳ್ಳಿಯಂತೆ ನಿರ್ಮಲವಾದ

ಪೋಗಿ ಪಗಲಂ ಕಟ್ಟಿಪುವಳ್ ಮಲಯನದಿಯಂತೆ ಚಂದನಪಲ್ಲವಕಲಿತ ಶಿಲಾತಲಂಗಳೊಳ್ ಮೆಯ್ಯನೀಡಾಡುವಳ್ ಕಂದಳಿಕೆಯಂತೆ [ಕುಂದಕಳಿಕೆಯಂತೆ] ಶಿಶಿರಸಂಪರ್ಕಕ್ಕೆ ಕಂದಿ ಕುಂದು ವಳಂತುಮಲ್ಲದೆಯುಂ

> ಯುವತೀರತ್ನಕ್ಕೆ ನಿನ್ನಾಕೃತಿಯೊಳೆ ಸತತಂ ಚಿತ್ರವಿದ್ಯಾವಿಲಾಸೈ
> ಕವಿನೋದಂ ನಿನ್ನ ನಾಮಾಕ್ಷರಮೆ ವಿರಹದಾಹಪ್ರತೀಕಾರಮಂ ಮಾ
> ಡುವುಪಾಯಂ ನಿನ್ನ ಸಂಬಂಧಮೆ ಸಕಲ ರಹಸ್ಯಂಗಳುಂ ನಿನ್ನ ವೃತ್ತಾಂ
> ತವೆ ಸರ್ವಪ್ರಶ್ನಮುಂ ನಿನ್ನಯ ಪೆಸರೆ ಸಖೀಸಂಕುಲಕ್ಕೆಲ್ಲಮೀಗಳ್ ೫೧

ವ॥ ಎಂದಿವು ಮೊದಲಾಗಿ ಸೋನ್ಮಾದ ಸಪ್ರಸಾದ ಸನಿರ್ವೇದ ಸೋಪಾಲಂಭ ಸಾವಷ್ಟಂಭ ಸಾಭ್ಯುಪಗಮ ಸಸಂಭ್ರಮ ಸಪರಿಹಾಸ ಸರೋಷ ಸನಿರ್ವಿಶೇಷ ಸಾಭ್ಯರ್ಥನ ಸಾನುರಾಗ ಸಾತ್ಮಾರ್ಪಣಂಗಳೆನಿಸಿ ಸರಸಂಗಳಾಗಿಯುಮತಿಶೋಷಣಹೇತುಗಳುಂ ಕೋಮಲಂಗ ಳಾಗಿಯುಮತಿಕಠೋರಂಗಳುಂ ಲಲಿತಂಗಳಾಗಿಯುಂ ಪ್ರೌಢಂಗಳುಂ ಮಧುರಂಗಳಾಗಿಯುಂ ದುಃಶ್ರವಂಗಳುಮಪ್ಪ ಕಾದಂಬರೀಸಂಬಂಧವಚನಂಗಳಂ ಪತ್ರಲೇಖೆ ಬಿನ್ನವಿಸುತ್ತಮಿರೆ ಸಾಲ್ಗುಮಿಂ ಕೇಳಲಾಱೆನೆಂದು ನಿಸರ್ಗಧೀರಪ್ರಕೃತಿಯಾಗಿಯುಂ ಅತಿಪರ್ಯಾಕುಲನಾದ ರಾಜಪುತ್ರನಂ ಪತ್ರಲೇಖೆಯಿಂತೆಂದಳ್

ಕೊಳಗಳೆಡೆಯಲ್ಲಿ ಮೈಮರೆತು ಪಗಲನ್ನು ಕಳೆಯುತ್ತಾಳೆ. ಮಲಯಪರ್ವತದ ನದಿ ಯಂತೆ ಗಂಧದ ಮರದ ಚಿಗುರುಗಳಿಂದ ಕೂಡಿಕೊಂಡಿರುವ ಕಲ್ಲುಗಳ ಮೇಲೆ ದೇಹವನ್ನು ಈಡಾಡುತ್ತಾಳೆ. (ಮಲಯಪರ್ವತದ ನದಿಯು ಅಂತಹ ಕಲ್ಲುಗಳ ಮೇಲೆ ಹರಿಯು ತ್ತದೆ). ಬಾಳೆಯಂತೆ ಶೈತ್ಯೋಪಚಾರಕ್ಕೆ ಕಂದಿಬಾಡುತ್ತಾಳೆ. ಅದಲ್ಲದೆ, ೫೧. ಆ ತರುಣಿಗೆ ಯಾವಾಗಲೂ ನಿನ್ನ ಆಕಾರವನ್ನು ಚಿತ್ರಿಸುವುದರಲ್ಲೇ ಚಿತ್ರಕಲಾಭ್ಯಾಸವು ವಿನಿಯೋಗ ವಾಗುತ್ತಿದೆ. ನಿನ್ನ ನಾಮಾಕ್ಷರವೇ ವಿರಹಸಂತಾಪಕ್ಕೆ ಪರಿಹಾರೋಪಾಯವಾಗಿದೆ; ಗೌಪ್ಯವ್ಯವಹಾರಗಳೆಲ್ಲ ನಿನಗೇ ಸಂಬಂಧಪಟ್ಟಿವೆ, ಪ್ರಶ್ನೆಗಳೆಲ್ಲವೂ ನಿನ್ನ ಸಮಾಚಾರವನ್ನು ತಿಳಿದುಕೊಳ್ಳುವುದಕ್ಕಾಗಿಯೇ ಮಾಡಲ್ಪಡುತ್ತವೆ. ಅವಳ ಗೆಳತಿಯರ ಬಾಯಲ್ಲೆಲ್ಲ ನಿನ್ನ ಹೆಸರೊಂದೆ ನೆಲಸಿಬಿಟ್ಟಿದೆ! ವ॥ ಇವೇ ಮೊದಲಾದ ಮನೋವಿಕಾರದಿಂದ ಕೂಡಿ ಕೊಂಡಿರುವ, ಅನುಗ್ರಹಪೂರ್ವಕವಾದ ಖೇದದಿಂದ ಕೂಡಿರುವ, ನಿಂದಾಪೂರ್ವಕವಾದ ಗರ್ವದಿಂದ ಕೂಡಿರುವ, ಅಂಗೀಕಾರದಿಂದಲೂ ಸಡಗರದಿಂದಲೂ ಹಾಸ್ಯದಿಂದಲೂ ಕೋಪದಿಂದಲೂ ವಿಶೇಷರೀತಿಯ ಪ್ರಾರ್ಥನೆಯಿಂದಲೂ ಪ್ರೀತಿಯಿಂದಲೂ ಆತ್ಮಾ ರ್ಪಣೆಯಿಂದಲೂ ಕೂಡಿಕೊಂಡಿರುವ ಮತ್ತು ಸರಸವಾಗಿದ್ದರೂ(೧. ಒದ್ದೆಯಾಗಿದ್ದರೂ ೨. ಶೃಂಗಾರರಸಮಯವಾಗಿದ್ದರೂ), ಶೋಷಹೇತುವಾಗಿರುವ (೧. ಒಣಗಿಸಲು ಕಾರಣ ವಾದ, ೨. ಮನಸ್ಸಿಗೆ ಕೊರತೆಯನ್ನುಂಟುಮಾಡುವ), ಮೃದುವಾಗಿದ್ದರೂ ಕಠೋರ ವಾಗಿರುವ, ಲಲಿತವಾಗಿದ್ದರೂ ಪ್ರೌಢವಾಗಿರುವ, ಇಂಪಾಗಿದ್ದರೂ ಕೇಳಲು ಕಷ್ಟಕರ ವಾಗಿರುವ ಕಾದಂಬರಿಗೆ ಸಂಬಂಧಪಟ್ಟ ಮಾತುಗಳನ್ನು ಪತ್ರಲೇಖೆಯು ಅರಿಕೆ ಮಾಡಿ

ಇನಿವಿರಿದವಸ್ಥೆಗಳ ನೀ
ನನಿಮಿತ್ತಂ ಸೃಜಿಸಿಯುಂ ನಿಜಂ ನಿಷ್ಕರುಣಾ
ತ್ಮನೆಯಾಗಿ ಚಿತ್ರರಥನಂ
ದನೆಯುಂ ಪೇಱಿಂತು ದೇವ ಕಡೆಗಣಿಸುವುದೇ ೫೨

ವ॥ ಎಂದು ಪತ್ರಲೇಖೆ ಬಿನ್ನಪಂಗೆಯ್ಯೆ ಮದನಶರಶಲಾಕಾಕೀಲಿತಾಂತರಂಗನಾಗಿ

ಮನದಟಲಿಂ ಪೊಣ್ಮುವ ಕ
ಣ್ಬನಿದುಱುಗಲನೆಮೆಯೊಳಾಂತು ನಿಡುಸುಯ್ಗೆ ಧರಂ
ತನಿಗೆತ್ತಲ್ ಮನಮಿಕ್ಕೆ
ಯ್ಯನೆ ನುಡಿದಂ ಪತ್ರಲೇಖೆಗವನಿಪತನಯಂ ೫೩

ವ॥ ಅದೇತನೆ

ಎನಗನುರೂಪಲೀಲೆ ದೊರೆಕೊಂಡಿರದೆಂದಿನಿತುಂ ಮನೋರಥಂ
ಜನಿಯಿಸದೆಂದು ದೇವಿಯರ ಗೆಯ್ತಮದೆಲ್ಲಮೆ ಸಾಜಮೆಂದು ಕೆ
ಮ್ಮನೆ ಪಲವುಂ ವಿಕಲ್ಪಶತದಿಂದಮೆ ಸಂದೆಯಮಾಯ್ತು ದಿವ್ಯಕಾ
ಮಿನಿಯರದೃಷ್ಟಪೂರ್ವತೆಯಿನೆನ್ನೆನಗೇವೆನೊ ಪೇೞ್ ತಳೋದರೀ ೫೪

ವ॥ ಅದಲ್ಲದೆಯುಂ

ದಳು. ಚಂದ್ರಾಪೀಡನು 'ಸಾಕು ಕೇಳಲಾರೆ' ಎಂದು ಹೇಳಿ ಸ್ವತಃ ಧೈರ್ಯವಂತನಾದರೂ ಬಹಳ ಕಳವಳಗೊಂಡನು. ಆ ರಾಜಪುತ್ರನನ್ನು ನೋಡಿ ಪತ್ರಲೇಖೆಯು ಹೀಗೆಂದಳು. ೫೨. "ಯುವರಾಜ, ಅವಳಿಗೆ ಇಷ್ಟು ಅವಸ್ಥೆಗಳನ್ನು ನಿಷ್ಕಾರಣವಾಗಿ ಉಂಟುಮಾಡಿ ರುವ ನೀನು ನಿಜವಾಗಿಯೂ ಕಠಿನಚಿತ್ತನೇ ಸರಿ! ಕಾದಂಬರಿಯನ್ನು ನೀನು ಹೀಗೆ ಉದಾಸೀನ ಮಾಡಬಹುದೆ ?" ವ॥ ಎಂದು ಪತ್ರಲೇಖೆಯು ಅರಿಕೆ ಮಾಡಿದಳು. ಚಂದ್ರಾಪೀಡನು ಮನ್ಮಥನ ಬಾಣಗಳು ನಾಟಿದ ಮನಸುಳ್ಳವನಾಗಿ, ೫೩. ಮನಸ್ಸಿನ ಆಳಲಿನಿಂದ ಹೊರ ಚಿಮ್ಮುತ್ತಿರುವ ಕಣ್ಣೀರು ರೆಪ್ಪೆಯ ಮೇಲೆ ಕಾಣಿಸಿಕೊಳ್ಳುತ್ತಿರಲು, ನಿಟ್ಟುಸಿರಿನಿಂದ ತುಟಿಯು ಬಹಳವಾಗಿ ನಡುಗುತ್ತಿರಲು, ಮೆಲ್ಲನೆ ಪತ್ರಲೇಖೆಯನ್ನು ಕುರಿತು ಹೇಳಿದನು. ವ॥ ಏನೆಂದರೆ ೫೪. "ಪತ್ರಲೇಖೆ, ನಾನು ಇದುವರೆಗೆ ದೇವತಾ ಸ್ತ್ರೀಯರನ್ನು ನೋಡಿಯೇ ಇರಲಿಲ್ಲ. ಆದ್ದರಿಂದ ಇದೆಲ್ಲ ದೇವಕನ್ನಿಕೆಯರಿಗೆ ಸಹಜ ವಾದ ಲೀಲೆಯೆಂದೂ ನನಗಾಗಿ ಉಂಟಾಗಿರಲಾರದೆಂದೂ ತಿಳಿದುಕೊಂಡುಬಿಟ್ಟೆ, ಅಲ್ಲದೆ ಇವಳು ನನ್ನನ್ನು ಮೋಹಿಸುತ್ತಾಳೆ–ಎಂಬುದು ನನ್ನ ಕಲ್ಪನೆಗೂ ನಿಲುಕದ ವಿಷಯ ವಾಗಿತ್ತು. ಇದರಿಂದಾಗಿ ಕಾದಂಬರಿಯ ಶೃಂಗಾರಚೇಷ್ಟೆಗಳೆಲ್ಲವೂ ಆಕೆಗೆ ಸ್ವಭಾವ ಸಿದ್ಧವಾದುದೆಂದು ಭಾವಿಸಿದೆನು. ಹೀಗೆ ಸುಮ್ಮನೆ ಅನೇಕ ವಿಧವಾದ ಆಲೋಚನೆ ಯಿಂದ ಸಂಶಯವುಂಟಾಗಿಬಿಟ್ಟಿತು. ನಾನೇನು ಮಾಡಲಿ ?. ವ॥ ಅದೂ ಅಲ್ಲದೆ

ಪ್ರಮದದೊಳೆನ್ನ ಕಂಧರದೊಳಂದಿರುಳಿಕ್ಕಿದ ತೋರಹಾರಮುಂ
ಹಿಮಗ್ರುಹಕಪ್ರವೃತ್ತಕಮುಮಂತಿರೆ ನಿನ್ನಯ ಪೇಳ್ದ ಮಾತುಮಾ
ರಮಣಿಯದೊಂದು ಭಾವಗತಮಂ ನೆಱ ಸೂಚಿಸೆ ಮತ್ತೆ ಸಂದೆಗಂ
ಸಮನಿಸಿತೆಂದೊಡಿನ್ನೆನಗದೊಂದು ವಿಮೋಹಿಪ ಶಾಪಮಾಗದೇ ೫೫

ವ॥ ಎಂದು ಪತ್ರಲೇಖೆಯೊಡನೆ ನುಡಿಯುತ್ತಮಿರ್ದಾ ಪಗಲಂ ಕಳೆದು ಸಂಜೆಯಪ್ಪುದುಂ ತನ್ನ ಚಿಂತಾಸಂತಾಪದೊಳ್ ದಿಗಂತಮೆಲ್ಲಂ ಕಟ್ತಲಿಸಿದುದೆಂಬಂತೆ ಕಟ್ತಲೆ ಕವಿಯೆ ತಂತ ಮ್ಮೊಳೋರೊಂದರ್ಕೆ ಪುಯ್ಯಲ್ವುವಂತೆ ಕರುಣಾರುತಮನೊದವಿಸುತ್ತಂ ದುರ್ನಿವಾರವಿರಹ ವೇದನೋನ್ಮಥ್ಯಮಾನಮಾನಸಾಕುಲಮಪ್ಪ ಚಕೋರಯುಗಂಗಳ್ಗೆ [ಚಕ್ರವಾಕಯುಗಂಗಳ್ಗೆ] ಮದನನ ಮಸೆದ ಕೂರ್ಗಣೆಗಳಂತಿರೆ [ಅಂಕೋಲ್ಲ] ಧೂಳಿದೂಸರಮಪ್ಪ ಚಂದ್ರಮಂಡಲಾಗ್ರ ಮಯೂಖಂಗಳ್ ನಿಮಿರೆ ತತ್ಸಮಯದೊಳ್ ಶಯನತಲಕ್ಕೆವಂದುನ್ಮೀಲಿತ ನಯನನಾಗಿಯು ಮಪ್ರಾಪ್ತಂ ನಿದ್ರಾವಿನೋದನಾಗಿ ಚಿತ್ರರಥನಂದನೆಯಂ ನೆನೆಯುತ್ತಮಿರೆಯಿರೆ

ತ್ವರಿತದೆ ಹೇಮಕೂಟನಗರಕ್ಕಿರದೆಯ್ದಿ ಬಟಿಲ್ದವೋಲ್ ಮನೋ
ಹರಿಯ ಪದಾಬ್ಜದೊಳ್ ಬೆರಸಿ ತೋಳ್ ತೊಡೆಯೊಳ್ ತೊಡರ್ದತ್ತು ಪೀನಪೀ
ವರಕುಚದೊಳ್ ಪೊರಳ್ದುದು ಮುಖೇಂದುವಿನೊಳ್ ಪೊಳೆದತ್ತು ಕುಂತಲೋ
ತ್ಕರದೊಳಡಂಗಿತಂಗರುಚಿಯೊಳ್ ಮುಟುಗಿತ್ತು ಮನಂ ಮಹೀಶನಾ ೫೬

೫೫. ಅಂದು ರಾತ್ರಿ ಸಂತೋಷದಿಂದ ನನ್ನ ಕೊರಳಿಗೆ ಹಾಕಿದ ದಪ್ಪ ಮುತ್ತಿನಹಾರವೂ ಹಿಮಗೃಹದ ವೃತ್ತಾಂತವೂ ಹಾಗೆಯೆ ನೀನು ಹೇಳಿದ ಮಾತುಗಳೂ ಆ ರಮಣಿಯ ಮನಸ್ಸಿನಲ್ಲಿರುವ ನನ್ನ ಮೇಲಿನ ಪ್ರೀತಿಯನ್ನು ಚೆನ್ನಾಗಿ ಸೂಚಿಸುತ್ತವೆ. ಹೀಗಿರಲು ಮತ್ತೆ ಸಂಶಯವುಂಟಾಗುವುದೆಂದರೆ ಅದು ನನಗೆ ಭ್ರಾಂತಿಯನ್ನುಂಟುಮಾಡುವ ಯಾವುದೋ ಒಂದು ಶಾಪವಿರಬೇಕು !" ವ॥ ಎಂದು ಪತ್ರಲೇಖೆಯೊಡನೆ ಮಾತನಾಡು ತ್ತಿದ್ದನು. ಆ ಹಗಲು ಕಳೆದು ಸಾಯಂಕಾಲವಾಗಲಾಗಿ, ಅವನ ಚಿಂತೆಯ ಬೇಗೆಯಿಂದ ದಿಕ್ಕುಗಳೆಲ್ಲವೂ ಅಂಧಕಾರಮಯವಾದಂತೆ ಕತ್ತಲೆ ಆವರಿಸಿತು. ಆಗ ಪರಿಹರಿಸಲು ಅಸಾಧ್ಯ ವಾದ ವಿರಹವೇದನೆಯಿಂದ ಕಲಕಲ್ಪಟ್ಟ ಮನಸ್ಸಿನಿಂದ ಪೀಡಿತನಾದ ಚಕ್ರವಾಕಪಕ್ಷಿಗಳಿಗೆ ಬಹಳ ದುಃಖಮಯವಾದ ಕೂಗಾಟವನ್ನುಂಟುಮಾಡುತ್ತಾ ಮನ್ಮಥನ ಮಸೆದ ಚೂಪಾದ ಬಾಣದಂತಿರುವ [ಅಂಕೋಲ್ಲಕುಸುಮದ] ಧೂಳಿಯಂತೆ ಮಾಸಲು ಬಿಳುಪಾದ ಚಂದ್ರನ ಮೊದಲ ಕಿರಣಗಳು ಹರಡುತ್ತಿದ್ದುವು. ಆ ಸಮಯದಲ್ಲಿ ಹಾಸಿಗೆಯ ಮೇಲೆ ಮಲಗಿ ಕಣ್ಣು ಮುಚ್ಚಿಕೊಂಡರೂ ನಿದ್ರೆ ಬಾರದಿರಲು ಕಾದಂಬರಿಯನ್ನೇ ನೆನೆಯು ತ್ತಿದ್ದನು. ೫೬. ಆಗ ಚಂದ್ರಾಪೀಡನ ಮನಸ್ಸು ವೇಗವಾಗಿ ಹೇಮಕೂಟಕ್ಕೆ ಧಾವಿ ಸಿದ್ದರಿಂದ ಆಯಾಸಗೊಂಡು ವಿಶ್ರಾಂತಿಯನ್ನು ಪಡೆಯುವಂತೆ ಆ ಸುಂದರಿಯ ಪಾದ ಕಮಲದಲ್ಲಿ ಕೂಡಿಕೊಂಡಿತು, ತೋಳು ಮತ್ತು ತೊಡೆಗಳಲ್ಲಿ ಸೇರಿಕೊಂಡಿತು, ತೋರ

ವ॥ ಅಂತು ನಿರ್ಭರಸ್ನೇಹಾರ್ದ್ರೀಕೃತಾಂತರಂಗನಾಗಿ ನೆನೆಯುತ್ತಮಾಯಿರುಳಂ ಕಳಿಪೆ ನೇಸರ್ ಮೂಡಲೊಡನೆ

ಸುದತೀವೃತ್ತಾಂತಮಂ ಕೇಳ್ವೆನೆಗಮನಗೆ ಮೌನಂ ದಲೆಂಬಂತು ಮಾತಾ
ಡದೆ ತದ್ವಕ್ತ್ರೇಂದುಬಿಂಬಂ ಮಱೆಯೆನಿಸಿದುದೆಂಬಂದದಿಂದೇನುಮಂ ಕಾ
ಣದೆ ತತ್ಪ್ರೇಮಾಮೃತಾರ್ದ್ರೋಕ್ತಿಗಳೆ ಕಿವಿಯೊಳ್ ತೀವಿದಂತೇನುಮಂ ಕೇ
ಳದೆ ಕಾಮೋನ್ಮುಕ್ತಸಂಮೋಹನಶರಹತಿಯಿಂ ಮೂಢನಾದಂತಿರಿರ್ದಂ ೫೭

ವ॥ ಅಂತಿರ್ದ ಮದನಾನಲದಹ್ಯಮಾನಾಂತಃಕರಣನಾಗಿರ್ದುಂ ಗುರುಜನಂಗಳ್ಗೆ ಲಜ್ಜಿಸಿ ಮಾನಕನಕಾಚಲಂ ಶಿಶಿರೋಪಚಾರಂಗಳ್ಗೆ ಮೆಯ್ದೆರಲಾಱದೆ

ಬಗೆಯೊಳೆ ಧೈರ್ಯಮಂ ಬಗೆದನಲ್ಲದೆ ಮನ್ಮಥಬಾಣಪೀಡೆಯಂ
ಬಗೆಯನೆ ಲಜ್ಜೆಯಂ ಬಗೆದನಲ್ಲದೆ ತನ್ನ ಶರೀರಕಾರ್ಶ್ಯಮಂ
ಬಗೆಯನೆ ಪೆರ್ಮೆಯಂ ಬಗೆದನಲ್ಲದೆ ಕಾಮವಿಕಾರವೇಗಮಂ
ಬಗೆಯನೆ ಭೂಭುಜಂ ಪಿರಿಯರಪ್ಪವರ್ಗಿಂತಿರೆ ದಲ್ ನೆಗಟ್ತೆಗಳ್ ೫೮

ಮೊಲೆಗಳಲ್ಲಿ ಹೊರಲಾಡಿತು, ಚಂದ್ರನಂದದ ಮುಖದಲ್ಲಿ ಸೇರಿ ಹೊಳೆಯಿತು, ಕೇಶ ಪಾಶದಲ್ಲಿ ಅಡಗಿತು, ಶರೀರದ ಲಾವಣ್ಯದಲ್ಲಿ ಮುಳುಗಿತು ! ಟಿ. ಒಟ್ಟಿನಲ್ಲಿ ಅವಳ ಅಂಗೋಪಾಂಗಗಳನ್ನೂ ಜ್ಞಾಪಿಸಿಕೊಳ್ಳುತ್ತಿತ್ತು? ವ॥ ಹಾಗೆ ಗಾಢವಾದ ಪ್ರೀತಿ ಯಿಂದ ಪರಿಪೂರ್ಣವಾದ ಮನಸ್ಸುಳ್ಳವನಾಗಿ ಅವಳನ್ನೇ ನೆನೆಯುತ್ತ ಆ ರಾತ್ರಿಯನ್ನು ಕಳೆದನು. ಸೂರ್ಯನು ಉದಯಿಸಲಾಗಿ ಕೂಡಲೆ ೫೭. ಆ ಕಾದಂಬರಿಯ ವೃತ್ತಾಂತ ವನ್ನು ಕೇಳಬೇಕಾದ್ದರಿಂದ ಅದುವರೆಗೂ ಮಾತನಾಡಬಾರದೆಂದು ಭಾವಿಸಿದವನಂತೆ ಯಾರೊಂದಿಗೂ ಮಾತನಾಡಲಿಲ್ಲ. ಅವಳ ಮುಖವು ಅಡ್ಡಬಂದು ನಿಂತಿರುವುದರಿಂದಲೋ ಎಂಬಂತೆ ಮುಂದಿದ್ದವರೂ ಯಾವುದನ್ನೂ ನೋಡುತ್ತಿರಲಿಲ್ಲ. ಅವಳ ಪ್ರೀತಿಯಿಂದ ತುಂಬಿರುವ ಮಾತುಗಳು ಕಿವಿಯಲ್ಲಿ ತುಂಬಿಕೊಂಡಿವೆಯೋ ಎಂಬಂತೆ ಯಾವುದನ್ನೂ ಕೇಳುತ್ತಿರಲಿಲ್ಲ. ಹೀಗೆ ಪರವಶತೆಯನ್ನುಂಟುಮಾಡುವ ಮನ್ಮಥನ ಬಾಣಗಳಿಂದ ಮೈ ಮರೆತವನಂತಿದ್ದನು. ವ॥ ಹಾಗೆ ಕಾಮಾಗ್ನಿಯಿಂದ ಸುಡಲ್ಪಡುತ್ತಿರುವ ಮನಸ್ಸುಳ್ಳ ವನಾದರೂ ಆತ್ಮಾಭಿಮಾನಕ್ಕೆ ಮೇರುಪರ್ವತದಂತಿರುವ ಯುವರಾಜನು ಶೈತ್ಯೋಪ ಚಾರಕ್ಕೆ ಮೈಯೊಡ್ಡಲಿಲ್ಲ, ೫೮. ಆಗ ಯುವರಾಜನು ಮನಸ್ಸಿನಲ್ಲಿ ಧೀರಭಾವವನ್ನು ತಂದುಕೊಂಡನು. ಮನ್ಮಥನ ಬಾಣಗಳ ಪೀಡೆಯನ್ನು ಗಮನಿಸಲಿಲ್ಲ, ನಾಚಿಕೆಯನ್ನು ಗಮನಿಸಿದನು. ತನ್ನ ಶರೀರದ ಕೃಶತ್ವವನ್ನು ಗಮನಿಸಲಿಲ್ಲ, ಹಾಗೆಯೆ ತನ್ನ ಹಿರಿಮೆಯನ್ನು ಗಮನಿಸಿದನು. ಕಾಮವಿಕಾರದ ತೀಕ್ಷ್ಣತೆಯನ್ನು ಗಮನಿಸಲಿಲ್ಲ. ನಿಜವಾಗಿಯೂ ಇವೆಲ್ಲ

ವ॥ ಅದಲ್ಲದೆಯುಂ

ಮೊದಲಿಂ ಗಂಭೀರಭಾವಂ ತನಗೆ ನಿಜಮೆನಲ್ ಸಂದ ರತ್ನಾಕರಂ ಕೌ
ಮುದಿಯಿಂದಂ ಕ್ಷೋಭಿಸಿರ್ದುಂ ಸಹಜವೆನಿಪ ತನ್ನೋದು ಮರ್ಯಾದೆಯುಂ ದಾಂ
ಟದವೋಲಿಂತಂತಪ್ಪವಸ್ಥಾಂತರಪಡಿಸಿದೊಡಂ ತನ್ನ ಮರ್ಯಾದೆಯುಂ ದಾಂ
ಟದನಂ ಗಾಂಭೀರ್ಯರತ್ನಾಕರನೃಪಸನನದೇಂ ಬಣ್ಣಿಪಂ ಬಣ್ಣಿಪಾತಂ ೫೯

ವ॥ ಅಂತು ಧೀರೋದಾತ್ತವೃತ್ತಿಯನವಲಂಬಿಸುತಂ ಕತಿಪಯದಿನಂಗಳ್ ದಿನಸಹಸ್ರಾಯಮಾಣಮಾಗಿ ಪೋಗುತ್ತಿರಲೊರ್ಮೆ ರಣರಣಕಾವಸ್ಥಾಂತರವಶದಿಂ ಲಬ್ಧಾವಸರನಾಗಿ ನಗರಿಯಂ ಪೊಱಮಟ್ಟುಪೋಗಿ

ತೆರೆದೊಂಗಲ್ ಪೊರೆದಿರ್ದ ತಣ್ಣೆಲರ್ಗಳಿಂ ಮೆಲ್ಲುಣ್ಚರಂಗೆಯ್ವ ಹಂ
ಸರಥಾಂಗಂಗಳಿನಿರ್ಪುವೆತ್ತೆಳವುಳಿಲ್ವಾಣಂಗಳಿಂ ಕಣ್ಗೆವಂ
ದಿರೆ ಶಿಪ್ರಾತಟಿನೀತಟಸ್ಥಲಿಗಳೊಳ್ ಲೀಲಾವಿನೋದೈಕತ
ತ್ಪರನಾಗಳ್ ನಡಪಾಡುತಿರ್ದನವನೀಶಂ ಪತ್ರಲೇಖಾನ್ವಿತಂ ೬೦

ವ॥ ಅಂತಿರ್ದ ತರಂಗಿಣೀತೀರಾಂತರದೊಳ್ ಕಾರ್ತಿಕೇಯನ ದೇಗುಲಕಾಗಿ ದೂರಾಗಮನ ಖೇದನಿವೇದಕಂಗಳಪ್ಪ ಕೆಲವು ಕುದುರೆಗಳ್ ಬೆರಸಿ ಬರ್ಪುದುಂ ಕಂಡೀ ವಾರುವಂಗಳಾರವೆಂದಾರಯಲೊರ್ವನಂ ಕಳಿಪಿ ಮಱುವಾರ್ತೆಗೇಳಲೆಂದು ತಾನುಮೂರುದಘ್ನಮಪ್ಪ ನೀರಿಂ ಪೊಱ

ದೊಡ್ಡವರ ನಡವಳಿಕೆಗಳು. ವ॥ ಅದಲ್ಲದೆ ೫೯. ಪ್ರಕೃತಿಯಿಂದ ಗಂಭೀರವಾಗಿರುವ ಸಮುದ್ರವು ಬೆಳದಿಂಗಳಿಂದ ಅಲ್ಲೋಲ ಕಲ್ಲೋಲಗೊಳಿಸಲ್ಪಟ್ಟರೂ ತನ್ನ ಸಹಜವಾದ ಎಲ್ಲೆಯನ್ನು ಮೀರುವುದಿಲ್ಲವಲ್ಲ. ಅದೇರೀತಿಯಲ್ಲಿ ಧೀರತನಕ್ಕೆ ಸಮುದ್ರದಂತಿರುವ ರಾಜಕುಮಾರನು ಈ ಬಗೆಯಾದ ಕಾಮವಿಕಾರಗಳಿಗೆ ಒಳಪಟ್ಟಿದ್ದರೂ ಕೂಡ ತನ್ನ ಶಿಷ್ಟಾಚಾರವನ್ನು ಮೀರಲಿಲ್ಲ. ಇವನ ಗುಣವನ್ನು ಬಣ್ಣಿಸಲು ಯಾರಿಗೆ ತಾನೆ ಸಾಧ್ಯವಾದೀತು.? ವ॥ ಹೀಗೆ ಅತ್ಯಧಿಕವಾದ ಧೈರ್ಯವನ್ನು ಅವಲಂಬಿಸಿ ಕೆಲವು ದಿನಗಳನ್ನು ಸಾವಿರಾರು ಯುಗಗಳಂತೆ ಬಹಳ ಕಷ್ಟದಿಂದ ಕಳೆದನು. ಒಂದು ಸಲ ಅವಕಾಶಮಾಡಿಕೊಂಡು ಮನಸ್ಸಿನ ತಳಮಳದಿಂದ ಕೂಡಿ ರಾಜಧಾನಿಯಿಂದ ಹೊರಹೊರಟು ಬಂದು, ೬೦. ಅಲೆಗಳ ಗುಂಪಿನಿಂದ ಕೂಡಿಕೊಂಡಿರುವ ತಂಗಾಳಿಯಿಂದಲೂ, ಮೃದುವಾಗಿಯೂ ಇಂಪಾಗಿಯೂ ಧ್ವನಿ ಮಾಡುತ್ತಿರುವ ಹಂಸ ಮತ್ತು ಚಕ್ರವಾಕಪಕ್ಷಿಗಳಿಂದಲೂ, ಒದ್ದೊದ್ದೆಯಾಗಿರುವ ಕೋಮಲವಾದ ಮರಳುಗುಡ್ಡೆಗಳಿಂದಲೂ ಶೋಭಿಸುತ್ತಿರುವ ಶಿಪ್ರಾನದಿಯ ದಡದಲ್ಲಿ ವಿನೋದವಾಗಿ ವಿಹರಿಸಲು ಮನಸ್ಸುಳ್ಳವನಾಗಿ ಚಂದ್ರಾಪೀಡನು ಪತ್ರಲೇಖೆಯೊಂದಿಗೆ ತಿರುಗಾಡುತ್ತಿದ್ದನು. ವ॥ ಹಾಗೆ ಇದ್ದ ನದೀತೀರದಲ್ಲಿ ಕುಮಾರಸ್ವಾಮಿಯ ದೇವಸ್ಥಾನಕ್ಕೆ ಎದುರಾಗಿ ದೂರದಿಂದ ಬಂದ ಆಯಾಸವನ್ನು ಪ್ರಕಟಪಡಿಸುತ್ತಿರುವ ಕೆಲವು ಕುದುರೆಗಳು ಒಟ್ಟಿಗೆ ಬರುವುದನ್ನು ಕಂಡು ಈ ಕುದುರೆಗಳು ಯಾರವೆಂದು ತಿಳಿದುಕೊಳ್ಳಲು ಒಬ್ಬನನ್ನು ಕಳುಹಿಸಿ ಅವನ ಉತ್ತರವನ್ನು

ಮಟ್ಟು ರುದ್ರಸುತಾಯತನಕ್ಕೆ ಪೋಗಿ ತತ್ತುರಂಗಮಂಗಳನತಿಕುತೂಹಲನಾಗಿ ನಿಂದು ನೋಡುತ್ತುಂ ಪಕ್ಕದೆ ನಿಂದ ಪತ್ರಲೇಖೆಯಂ ಬರೆತೆಗೆದು

ಜವವಟಿಯದಿದಿರೊಳೀ ಬ
ರ್ಪ ವಾಜಿಗಳ ನಡುವೆ ಪೀಲಿದಟಿಗಳ ನೆಟಲಿಂ
ದವಿಭಾವ್ಯನೆನಿಸಿ ಬರುತಿ
ರ್ಪವನೇಂ ಕೇಯೂರನಾಗದಿರ್ಕುಮೆ ಪಿರಿದುಂ ೬೧

ವ॥ ಎಂದು ಪತ್ರಲೇಖೆಗೆ ತೋಱಿ ನುಡಿಯುತ್ತಿರ್ದ ಯುವರಾಜದೇವನಂ ಕಂಡು ದೂರದಿಂ ಕುದುರೆಯಿಂದಮಿಟಿದೆಯ್ದಿವಂದು

ಒದವಿದ ವಿನಯದಿನಡಿಗೆಱ
ಗಿದ ಕೇಯೂರಕನನಿತ್ತ ಬಾಯೆನುತ ಪದಂ
ಪೊದವೆ ತೆಗೆತೆಗೆದು ತಳ್ಕೈ
ಸಿದನಾಗಳ್ ನೃಪತಿ ನಿಬಿಡ ನಿಜಭುಜಯುಗದಿಂ ೬೨

ವ॥ ಅಂತು ತಳ್ಕೈಸಿ ಮತ್ತಂ ಕೃತನಮಸ್ಕಾರನಾದ ಕೇಯೂರಕನನತಿಪ್ರೀತಿಯಿಂ ನೋಡಿ ನಿನ್ನ ಕಾಣ್ಕೆಯೊಳೆ ಸಪರಿವಾರಮಪ್ಪ ಕಾದಂಬರೀದೇವಿಯ ಕುಶಲಮಱಿಯಲಾದುದು ನಿನ್ನ ಬರವಿಂಗೆ ನಿಮಿತ್ತಮಂ ಬಟಲ್ಕೆಗಳೆದು ಪೇಟೆಂದು ತನ್ನ ಮುಂದೆ ಸಾರ್ದಿರ್ದ ವಾರುವಂ

ಕೇಳಬೇಕೆಂದು ತನ್ನ ತೊಡೆಯವರೆಗೂ ಬರುವ ನೀರನ್ನು ದಾಟಿಕೊಂಡು ಹೋಗಿ, ಕುಮಾರಸ್ವಾಮಿಯ ದೇವಸ್ಥಾನವನ್ನು ಸೇರಿ, ಆ ಕುದುರೆಗಳನ್ನೇ ಬಹಳ ಆಸಕ್ತಿಯಿಂದ ನೋಡುತ್ತ ಪಕ್ಕದಲ್ಲಿ ನಿಂತಿದ್ದ ಪತ್ರಲೇಖೆಯ ಕೈಯನ್ನು ಹಿಡಿದೆಳೆದು, ೬೧. "ಪತ್ರಲೇಖೆ, ವೇಗವನ್ನು ಕುಗ್ಗಿಸದೆ ಬರುತ್ತಿರುವ ಕುದುರೆಗಳ ಮಧ್ಯದಲ್ಲಿ ನವಿಲುಗರಿಯ ಛತ್ರಿಗಳ ನೆರಳಿನಿಂದ ಗುರುತುಹಿಡಿಯಲು ಆಗದಂತೆ ಬರುತ್ತಿರುವವನು ಬಹುಶಃ ಕೇಯೂರಕನಾಗಿರಬೇಕಲ್ಲವೆ?" ಎಂದನು. ವ॥ ಹೀಗೆ ಪತ್ರಲೇಖೆಗೆ ತೋರಿಸಿ ಹೇಳುತ್ತಿದ್ದ ಯುವರಾಜನನ್ನು ನೋಡಿ ಕೇಯೂರಕನು ದೂರದಿಂದಲೇ ಕುದುರೆಯಿಂದ ಇಳಿದು ಬಂದು ೬೨. ವಿನಯದಿಂದ ಕೂಡಿ ನಮಸ್ಕಾರ ಮಾಡಿದನು. ಕೇಯೂರಕನನ್ನು ಚಂದ್ರಾಪೀಡನು ಈ ಕಡೆ ಬಾಯೆಂದು ಹೇಳುತ್ತ ತನ್ನೆರಡು ತೋಳುಗಳಿಂದಲೂ ಪ್ರೀತಿಯಿಂದ ಬಾರಿಬಾರಿಗೂ ಗಾಢವಾಗಿ ತಬ್ಬಿಕೊಂಡನು. ವ॥ ಹಾಗೆ ತಬ್ಬಿಕೊಂಡು, ಮತ್ತೆ ನಮಸ್ಕಾರ ಮಾಡಿದ ಕೇಯೂರಕನನ್ನು ಚಂದ್ರಾಪೀಡನು ಬಹಳ ಪ್ರೀತಿಯಿಂದ ನೋಡಿ "ಕೇಯೂರಕ, ನಿನ್ನನ್ನು ನೋಡಿದ್ದರಿಂದಲೇ ಪರಿವಾರಸಮೇತಳಾದ ಕಾದಂಬರೀದೇವಿಯು ಕ್ಷೇಮವಾಗಿದ್ದಾಳೆಂದು ಗೊತ್ತಾಯಿತು ! ಆಯಾಸವನ್ನು ಪರಿಹರಿಸಿಕೊಂಡು ಆಮೇಲೆ ನಿನ್ನ ಆಗಮನಕ್ಕೆ ಕಾರಣವನ್ನು ಹೇಳುವೆಯಂತೆ" ಎಂದು ಹೇಳಿದನು.

ಎಳದೆನಿಸಿರ್ದ ಪಾವಸೆಯ ತಣ್ಣೆಳೆಯಿಂದಮೆ ನೆಯ್ದ ಸೀರೆ ಶೀ
ತಳಿಕೆಯ ಚಾಮರಂ ಪೊಸಮೃಣಾಳದ ತೋಳ್ವಳೆ ಮುತ್ತಿನಾರಮು
ತ್ಪಳದವತಂಸಮಿರ್ಪನೊಳಕೆಯ್ದ ಕುರುಳ್ ಸಿರಿಕಂಡದಣ್ಪು ಕ
ಣ್ಗೊಳೆ ನೆಲಸಿರ್ದರಲ್ಲಿ ಜಲದೇವಿಯರಂತೆ ವಿಳಾಸಿನೀಜನಂ ೧೨೪

ವ॥ ಮತ್ತಮಲ್ಲಿ ಮೃಣಾಳನಾಳ ತಾಳವೃಂತ ಕರ್ಪೂರಪಟವಾಸ ಹರಿಚಂದನ ಚಂದ್ರಕಾಂತದರ್ಪಣಾದ್ಯುಪಕರಣಪಾಣಿಗಳಪ್ಪ ಕತಿಪಯ ವಾರಾಂಗನಾಜನಂಗಳಿರ್ದರದು ನಿದಾಘಕ್ಕೆ ಪರಿಭವಸ್ಥಾನಮುಂ ಶೀತಕಾಲಕ್ಕಿಕ್ಕೆದಾಣಮುಂ ಹಿಮಶೈಲಕ್ಕೆ ಸಹೋದರಮುಮೆನಿಸಿದ ನೀರ್ಜೊಂಪಮಂ ಪೊಕ್ಕು ಶಿಶಿರಶಿಲಾತಳದೊಳ್ ಮೆಯ್ಯನಿಕ್ಕಿ

ಅಮಿತ ಮಕರಧ್ವಜೋತ್ಕಲಿ
ಕಮನಾತ್ಮಸುಹೃದ್ವಿಯೋಗವಡಬಾನಲದು
ರ್ದಮಮುಂ ದಿನಾಬ್ಧಿಯುಂ ಧೈ
ರ್ಯಮೆಂಬ ಭೈತ್ರದಿನಿಳಾಧಿಪಂ ತರಿಯಿಸಿದಂ ೧೨೫

ವ॥ ಅಂತು ನೇಸಱ್ ಪಡಲೊಡಂ ಬಯ್ಗುಂಬೊಟ್ಟುರಸಂ ನೀರ್ಜೊಂಪದಿಂ ಪೊಱಮಟ್ಟು ಸಿಂಪಿಣಿಯ ತಣ್ಪಿನಿಂ ಪೂವಲಿಯ ತಿಣ್ಪಿನಿಂ ಮನಂಗೊಳಿಸುವ ಭವನಾಂಗಣದೊಳವ

ಮಂಡಪಕ್ಕೆ ರಾಜಕುಮಾರನು ಬಂದನು. ೧೨೪. ಎಳೆಯದಾಗಿರುವ ಪಾಚಿಯ ತಂಪಾದ ದಾರಗಳಿಂದ ನೆಯ್ದ ಸೀರೆಯೂ, ಶತಾವರಿಯ ಚಾಮರವೂ, ಹೊಸ ತಾವರೆದಂಟಿನ ತೋಳುಬಳೆಯೂ, ಮುತ್ತಿನ ಹಾರವೂ, ಕನ್ನೈದಿಲೆಯ ಕಿವಿಯಾಭರಣವೂ, ಆಗತಾನೆ ಸ್ನಾನಮಾಡಿರುವುದರಿಂದ ಒದ್ದೆಯಾದ ತಲೆಗೂದಲುಗಳೂ, ಶ್ರೀಗಂಧದ ಲೇಪನವೂ ಶೋಭಿಸುತ್ತಿರಲು ಅಲ್ಲಿದ್ದ ವಾರಾಂಗನೆಯರು ಜಲದೇವಿಯರಂತೆ ಕಂಗೊಳಿಸುತ್ತಿದ್ದರು. ವ॥ ಮತ್ತು ಅಲ್ಲಿ ತಾವರೆದಂಟಿನ ಬೀಸಣಿಗೆ, ಕರ್ಪೂರದ ವಾಸನೆಪುಡಿ, ಶ್ರೀಗಂಧ, ಚಂದ್ರಕಾಂತಶಿಲೆಯ ಕನ್ನಡಿ ಮೊದಲಾದ ಉಪಕರಣಗಳನ್ನು ಕೈಯಲ್ಲಿ ಹಿಡಿದುಕೊಂಡಿರುವ ಕೆಲವರು ವಾರಾಂಗನೆಯರಿದ್ದರು. ಅದು ಬೇಸಿಗೆಕಾಲಕ್ಕೆ ಅವಮಾನಗೊಳಿಸುವ ಸ್ಥಳವೆನಿಸಿ, ಶೀತಕಾಲಕ್ಕೆ ವಾಸಸ್ಥಾನವೆನಿಸಿ, ಹಿಮಾಲಯಕ್ಕೆ ಒಡಹುಟ್ಟಿದವನೆನಿಸಿ ಶೋಭಿಸುತ್ತಿತ್ತು. ಇಂತಹ ಜಲಮಂಡಪವನ್ನು ಪ್ರವೇಶಿಸಿ ತಂಪಾದ ಶಿಲಾತಲದಲ್ಲಿ ದೇಹವನ್ನು ಈಡಾಡಿ ೧೨೫. ರಾಜಕುಮಾರನು ಮನ್ಮಥಸಂತಾಪವುಳ್ಳ—ಮೊಸಳೆಯಿಂದ ಅಲೆಗಳನ್ನೆಬ್ಬಿಸುವ, ತನ್ನ ಗೆಳೆಯನ ಅಗಲಿಕೆಯೆಂಬ ಬಡಬಾಗ್ನಿಯಿಂದ ನಿವಾರಿಸಲಸಾಧ್ಯವಾದ ಆ ಹಗಲೆಂಬ ಸಮುದ್ರವನ್ನು ಧೈರ್ಯವೆಂಬ ಹಡಗಿನಿಂದ ದಾಟಿದನು. ವ॥ ಹಾಗೆ ಸೂರ್ಯನು ಮುಳುಗಲಾಗಿ ಸಾಯಂಕಾಲದಲ್ಲಿ ರಾಜಕುಮಾರನು ಆ ಜಲಮಂಡಪದಿಂದ ಹೊರಟು ಜಲಸೇಚನದ ತಂಪಿನಿಂದಲೂ, ಹೂವಿನ ಚೆಲ್ಲುವಿಕೆಯಿಂದಲೂ, ಮನೋಹರವಾದ ಬಿಡಾರದ ಅಂಗಳದಲ್ಲಿಳಿದು ಸನ್ನಿಹಿತರಾದ

ಅಂತಾ ಪದದೊಳ್ ಮೂರ್ಛಿತೆ
ಯಂತೆವೊಲುನ್ಮತ್ತೆಯಂತೆವೋಲರ್ದಿತಳಾ
ದಂತೆವೊಲಂತಃಪೀಡಾ
ಕ್ರಾಂತಿಯಿನೊಂದಿನಿತು ಪೊಟ್ತು ಮಱವಟ್ಟಿರ್ದಳ್ ೭೪

ವ॥ ಅಂತಿರ್ದು ಮಹಾಶ್ವೇತೆವೋದುದನಱಿಯದೆ ಕಿಱಿದುಬೇಗಕ್ಕಾಕೆ ಕಣ್ಗಳಂ ತೆಱೆದು ಲಜ್ಜಿತೆಯಾದಂತೆಯುಂ ವಿಸ್ಮೃತೆಯಾದಂತೆಯುಂ ವಿಸ್ಮಯಸ್ತಬ್ಧದೃಷ್ಟಿಯಾಗಿ ಮಹಾ ಶ್ವೇತೆಗೀ ವೃತ್ತಾಂತಮಂ ಪೇೞೆಂದಲ್ಲಿಂದೆಟ್ದು ನಿವಾರಿತಾಶೇಷಪರಿಜನಪ್ರವೇಶೆಯಾಗಿ

ನಾಡೆ ಬೞಲ್ದಟಲ್ದು ನಿಲಲಾಱದೆ ಸೆಜ್ಜೆಗೆವಂದು ಮೆಯ್ಯನೀ
ಡಾಡಿ ನಿಜೋತ್ತರೀಯ ವಸನಾಂಚಲದಿಂ ಮುಸುಕಿಟ್ಟು ಚಿಂತೆಯೊಳ್
ಮೂಡಿ ಮುೞುಂಗಿ ತನ್ನ ಮನದನ್ನರೊಳಂ ಮೊದಲಾಗಿ ಕನ್ನೆ ಮಾ
ತಾಡದೆ ಜಾನಿಸುತ್ತಿರಲು ಪಿಂಗಿದುದಂದಿನದೊಂದಹರ್ನಿಶಂ ೭೫

ವ॥ ಅಂತು ಮಱುದಿವಸಂ ನೇಸಱ್ ಮೂಡಲೊಡನೆ ತನ್ನಿದಿರೊಳ್ ನಿಂದಿರ್ದೆನ್ನಂ ನೋಡಿ

ಇಂತು ಭವದ್ವಿಧರ್ ಪರಿಜನಂಗಳಿರಲ್ಕೆನಗೀಯವಸ್ಥೆಯೆಂ
ಬಂತೆಯುಮೀ ನಿರರ್ಥಕರಿನಾವುದು ತೀರ್ದಪುದೆನ್ನ ಕಜ್ಜಮೆಂ
ಬಂತೆಯುಮಿನ್ನುಮೆನ್ನಿದಿರೊಳಿರ್ದಪೆ ನಿರ್ದಯ ಪೋಗು ಬೇಗಮೆಂ
ಬಂತೆಯುಮೆನ್ನನಶ್ರುಪಿಹಿತಾಕುಲದೃಷ್ಟಿಗಳಿಂದೆ ನೋಡಿದಳ್ ೭೬

ಕೊಂಡಳು. ೭೪. ಹಾಗೆ ಆ ಸಮಯದಲ್ಲಿ ಕಾದಂಬರಿಯು ಮೂರ್ಛೆಗೊಂಡವಳಂತೆಯೂ ಹುಚ್ಚುಹಿಡಿದವಳಂತೆಯೂ ಪೀಡಿಸಲ್ಪಟ್ಟವಳಂತೆಯೂ ಆಗಿ ಮನಸ್ಸಿನ ದುಃಖೋದ್ರೇಕ ದಿಂದ ಸ್ವಲ್ಪ ಹೊತ್ತು ಮೈಮರೆತಿದ್ದಳು. ವ॥ ಹಾಗಿದ್ದು ಸ್ವಲ್ಪಕಾಲ ಕಳೆದ ಮೇಲೆ ಅವಳು ಕಣ್ಣುತೆರೆದಳು. ಮಹಾಶ್ವೇತೆಯು ಹೊರಟುಹೋದ ಅರಿವೇ ಅವಳಿಗಿರಲಿಲ್ಲ. ನಾಚಿಕೆಗೊಂಡವಳಂತೆಯೂ, ಏನನ್ನೋ ಮರೆತವಳಂತೆಯೂ ಬೆರಗಿನಿಂದ ನಿಶ್ಚಲವಾದ ಕಣ್ಣುಳ್ಳವಳಾಗಿ ಮಹಾಶ್ವೇತೆಗೆ ಈ ಸಂಗತಿಯನ್ನು ತಿಳಿಸಿ ಎಂದು ಹೇಳಿ ಅಲ್ಲಿಂದೆದ್ದು ಪರಿಜನರಾರೂ ಒಳಕ್ಕೆ ಬರಬಾರದೆಂದು ಹೇಳಿ, ೭೫. ಬಹಳ ಬಳಲಿ ವ್ಯಥೆ ಪಟ್ಟು, ನಿಲ್ಲಲಾರದೆ ಹಾಸಿಗೆಯ ಮೇಲೆ ಬಿದ್ದುಕೊಂಡು, ಹೊದೆಯುವ ಬಟ್ಟೆಯಿಂದ ಮುಸುಕುಹಾಕಿಕೊಂಡು, ಚಿಂತಾಕ್ರಾಂತಳಾಗಿ ತನ್ನ ಆಪ್ತರಾದ ಗೆಳತಿಯರೊಂದಿಗೂ ಮಾತಾನಾಡದೆ ಧ್ಯಾನಿಸುತ್ತಿದ್ದಳು. ಹೀಗೆ ಅಂದಿನ ಹಗಲು ರಾತ್ರಿ ಕಳೆಯಿತು. ವ॥ ಹಾಗೆಯೆ ಮರುದಿನ ಸೂರ್ಯೋದಯವಾಗಲು ತನ್ನ ಎದುರಿನಲ್ಲಿ ನಿಂತಿರುವ ನನ್ನನ್ನು ನೋಡಿ ೭೬. ನಿನ್ನಂತಹ ಪರಿಜನರಿದ್ದರೂ ನನಗೆ ಈ ಗತಿಯುಂಟಾ ಯಿತಲ್ಲ ! ಎಂದು ತೆಗಳುವಂತೆಯೂ, ಈ ಅಪ್ರಯೋಜಕರಾದ ಜನರಿಂದ ನನಗೆ ಯಾವ ಕಾರ್ಯವು ತಾನೆ ಈಡೇರುತ್ತದೆ ಎಂದು ಧಿಕ್ಕರಿಸುವಂತೆಯೂ, 'ದಯಾ ಹೀನನೆ, ಇನ್ನೂ ನನ್ನ ಎದುರಿನಲ್ಲೇ ನಿಂತಿದ್ದೀಯಾ ? ಬೇಗ ಆಕಡೆ ಹೋಗು' ಎಂದು

ವ॥ ಅಂತು ನೋಡಲೊಡನೆನ್ನಂ ಪೋಗೆಂದಳೆಂದಱಿದು ದೇವಿಗೆ ಪೇೞದೆ ದೇವರ ಶ್ರೀಪಾದಂಗಳಂ ಕಾಣಲ್ಕೆ ಬಂದೆಂ ದೇವ ನೀನೊರ್ವನೆ ಶರಣಮೆಮಗೆ ಪರಿಜನಪ್ರಾಣತ್ರಾಣಾ ಕುಲಮತಿಯಪ್ಪೆನ್ನ ಬಿನ್ನಪಮಂ ದೇವರವಧಾರಿಸಿ ಪ್ರಸಾದಂಗೆಯ್ವುದು ದೇವರ್ ಬಿಜಯಂಗೆಯ್ದಂದು ಮೊದಲ್ಗೊಂಡು ಮದನದುಶ್ಚೇಷ್ಟಿತಾಯಾಸಂಗಳಿಂದಮೆ ದಿವಸಂಗಳಂ ಕಳಿಪುತ್ತಮಿರ್ದಳ್ ಪತ್ರಲೇಖೆ ಪೇೞ್ದವಸ್ಥಾಂತರಂಗಳನಾಂ ಬಿನ್ನವಿಪೊಡೆ ಪುನರುಕ್ತಮೆಂದು ಬಿನ್ನವಿಸಿದ ಕೇಯೂರಕನ ಮಾತಂ ಕೇಳ್ದು ಸಾಲ್ಗುಮಿಂ ಕೇಳಲಾಱೆನೆಂದು ಮದನಶರಶಿಖಾಕೀಲಿ ತಾಂತರಂಗನುಮಂತರ್ಬಾಷ್ಪರುಧ್ಯಮಾನಕಂಠನುಮನಂಗತಾಪಸಂಭ್ರಮೋತ್ಕಂಠಾವೇಗವಿಹ್ವಲ ಹೃದಯನುಮಾಗಿ ಮನುಜೇಂದ್ರಚಂದ್ರನೆಂತಾನುಂ ಕೇಯೂರಕನನಿಂತೆಂದಂ

> ಅನುರಾಗಮಿಲ್ಲದಂ ಮೇಣ್
> ಪುನರಾಗಮರಹಿತನೆಂದು ಬಗೆದೆನ್ನಂ ಮಾ
> ನಿನಿ ಸಂದೇಶಮನೇನುಮ
> ನೆನಗೀಗಳ್ ನಿನ್ನ ಕೆಯ್ಯೊಳಟ್ಟಿದಳಿಲ್ಲಂ ೬೭

ವ॥ ಮಹಾಶ್ವೇತೆಯುಂ ಸಮುಪಾಹೃತಾನುಬಂಧೆಯಾಗಿಯುಂ ನಿನ್ನ ಕೆಯ್ಯೊಳೇನುಮಂ ಪೇೞ್ದಟ್ಟಿದಳಿಲ್ಲೆಮ್ಮ ಪತ್ರಲೇಖೆಯು ಪೇೞ್ಕಿಯೊಳಂ ನಿನ್ನ ನುಡಿಯೊಳಮದೆಲ್ಲಮಂ

ಅಪ್ಪಣೆ ಮಾಡುವಂತೆ ಕಣ್ಣೀರಿನಿಂದ ತುಂಬಿದ ಕಣ್ಣುಗಳಿಂದ ನನ್ನನ್ನು ನೋಡಿದಳು. ವ॥ ಹಾಗೆ ನೋಡಲು ನನ್ನನ್ನು ಹೋಗು ಎಂದು ಹೇಳಿದಳೆಂದು ತಿಳಿದುಕೊಂಡು ಅವಳಿಗೆ ತಿಳಿಸದೆಯೆ ತಮ್ಮ ಪಾದದರ್ಶನಕ್ಕಾಗಿ ಬಂದಿದ್ದೇನೆ. ಎಲೈ ದೊರೆಯೆ, ಈಗ ನಮಗೆ ನೀವೊಬ್ಬರೇ ಗತಿ. ನಿಮ್ಮ ಸೇವಕಳಾದ ಕಾದಂಬರಿಯ ಜೀವವನ್ನು ಉಳಿಸುವ ಚಿಂತೆಯಿಂದ ಕೂಡಿರುವ ಮನಸ್ಸುಳ್ಳ, ನನ್ನ ವಿಜ್ಞಾಪನೆಯನ್ನು ಲಾಲಿಸಿ ಅನುಗ್ರಹಿಸಬೇಕು. ಅವಳು ನೀವು ಈ ಕಡೆಗೆ ಪ್ರಯಾಣ ಬೆಳಸಿದಂದಿನಿಂದ ಮೊದಲ್ಗೊಂಡು ಮನ್ಮಥನ ಪೀಡೆಯಿಂದ ಉಂಟಾದ ಆಯಾಸಗಳಿಂದಲೇ ದಿನಗಳನ್ನು ಕಳೆಯುತ್ತಿದ್ದಾಳೆ. ಪತ್ರಲೇಖೆಯು ಹೇಳಿದ ಅವಸ್ಥೆಗಳನ್ನೆಲ್ಲಾ ನಾನು ಹೇಳಿದರೆ ಸುಮ್ಮನೆ ಹೇಳಿದ್ದನ್ನೇ ಹೇಳಿದಂತಾಗುತ್ತದೆ" ಎಂದು ಅರಿಕೆಮಾಡಿದ ಕೇಯೂರಕನ ಮಾತನ್ನು ಕೇಳಿ "ಸಾಕು! ಇನ್ನು ಕೇಳಲಾರೆ" ಎಂದು ಮನ್ಮಥನ ಬಾಣಗಳ ತುದಿ ನಾಟಿದ ಮನಸ್ಸುಳ್ಳವನಾಗಿಯೂ, ಒಳಗೆ ಉಂಟಾಗುತ್ತಿರುವ ಕಣ್ಣೀರುಗಳಿಂದ ಕಟ್ಟಿಕೊಂಡ ಕೊರಳುಳ್ಳವನಾಗಿಯೂ, ಕಾಮ ಸಂತಾಪದಿಂದ ಉಂಟಾದ ಅತಿಶಯವಾದ ಕಳವಳದಿಂದ ಬೇಸತ್ತ ಮನಸ್ಸುಳ್ಳವನಾಗಿಯೂ ಚಂದ್ರಾಪೀಡನು ಪ್ರಯಾಸದಿಂದ ಕೇಯೂರಕನನ್ನು ಕುರಿತು ಹೀಗೆಂದನು. ೬೭. "ಕೇಯೂರಕ, ಕಾದಂಬರೀದೇವಿಯು ನಿನ್ನ ಸಂಗಡ ನನಗೆ ಸಂದೇಶವನ್ನೇನೂ ಕಳುಹಿಸಲಿಲ್ಲ. ಅದಕ್ಕೆ ಕಾರಣವೇನೆಂದರೆ–ಅವಳು ನನ್ನನ್ನು ಪ್ರೀತಿಯಿಲ್ಲದವನೆಂದೂ ಮರಳಿ ತನ್ನಲ್ಲಿಗೆ ಬರುವನಲ್ಲವೆಂದೂ ಭಾವಿಸಿಬಿಟ್ಟಿದ್ದಾಳೆ ! ವ॥ ಮಹಾಶ್ವೇತೆಯು ಕೂಡ ನನ್ನೊಡನೆ ಸ್ನೇಹವನ್ನು ಬಿಟ್ಟಿರುವುದರಿಂದಲೇ ನನಗೆ ಏನನ್ನೂ ನಿನ್ನ ಮೂಲಕ ಹೇಳಿ

ನೆಱೆಯಱಿದಂ ದೇವಿಯರಾಭಿಜಾತ್ಯಮುಮಂ ಮಹಾನುಭಾವತೆಯುಮಂ ದಾಕ್ಷಿಣ್ಯಮುಮಂ ಭಾವಿಸುತ್ತಿರ್ದೆಂ ಚಂದ್ರಮೂರ್ತಿಯಾಲೋಕನದ ದೆಸೆಯಿಂ ನಿಶ್ಚೇತನಮಪ್ಪ ಚಂದ್ರಕಾಂತದ ಪಾಷಾಣಕ್ಕಾರ್ದ್ರಭಾವೋಪಗಮನಮಾಯತ್ತಮಲ್ಲದೆ ತತ್ಕರಾಕರ್ಷಣಂ ದೊರಕೊಳದು ದಿವಸಕರಸಂತಾಪಕ್ಲಾಂತಮಪ್ಪ ಕುಮುದಾಕರಕುನ್ಮುಖತೆಯೆ ದೊರೆಕೊಳ್ಗುಮದರ್ಕಲರ್ಕೆ ಯೆಂಬುದು ಚಂದ್ರಿಕಾಭಿರಾಮಮಪ್ಪ ರಜನಿಯ ಕೆಯ್ಯೆಡೆವಲಂ ಅದಱಿನಧರಸ್ಪಂದಿತಮಾತ್ರ ಮನೆ ಪಾರ್ದಿರ್ದ ಪರಿಜನಂಗಳೊಳಿನಿತು ಗೌರವಮನೇಱಿಸಿ ಸುಖಪರಿಪಂಥಿನಿಯುಂ ದುಃಖೈಕ ದಾನನಿಪುಣೆಯುಂ ಪರಹೃದಯಪೀಡಾಪೇಕ್ಷಿಣಿಯುಮಪ್ಪ ಲಜ್ಜೆಯಂ ಕಾಯಲುಜ್ಜುಗಂಗೆಯ್ದು ಬೆಸಸದಿರ್ಪುದೆಲ್ಲಂ ದೇವಿಯರುಪರೋಧಮೆ ತಂಬೆಲರಲೆಪದಿಂ ಮೆಲ್ಲನುಗುವಲರ್ಗಳಂ ಸೈರಿಸದ ದೇವಿಯರ ಶರೀರಂ ವಜ್ರಸಾರಹೃದಯರ್ಗಂ ದುಸ್ಸಹಮೆನಿಪ ಸಮಶರಶತಪ್ರಹಾರಮನೆಂತು

ಕಳುಹಿಸಲಿಲ್ಲ. ಇದೆಲ್ಲವನ್ನೂ ನಮ್ಮ ಪ್ರತಲೇಖೆಯ ಮಾತುಗಳಿಂದಲೂ ನಿನ್ನ ಮಾತುಗಳಿಂದಲೂ ಚೆನ್ನಾಗಿ ತಿಳಿದುಕೊಂಡಿದ್ದೇನೆ. ಹಾಗೆಯೆ ಕಾದಂಬರೀದೇವಿಯ ಒಳ್ಳೆಯ ಮನೆತನವನ್ನೂ ದೊಡ್ಡತನವನ್ನೂ ದಾಕ್ಷಿಣ್ಯಸ್ವಭಾವವನ್ನೂ ಆಲೋಚಿಸುತ್ತಿದ್ದೆನು. ಚಂದ್ರಮಂಡಲವನ್ನು ನೋಡುವುದರಿಂದ ಅಚೇತನವಾದ ಚಂದ್ರಕಾಂತಶಿಲೆಯು ಒಸರಿ ಒದ್ದೆಯಾಗುವುದು ಅದಕ್ಕೆ ಸೇರಿದೆ. ಆದರೆ ಚಂದ್ರನ ಕಿರಣಗಳನ್ನು ತನ್ನ ಕಡೆಗೆ ಎಳೆದುಕೊಳ್ಳುವಿಕೆಯು ಅದರ ಕೈಯಿಂದ ಆಗದ ಕೆಲಸ! ಸೂರ್ಯನ ಬಿಸಿಲಿನಿಂದ ಸೊರಗಿದ ಕನ್ನೈದಿಲೆಗಳ ಗುಂಪು ಚಂದ್ರನಿಗೆ ಅಭಿಮುಖವಾಗಿ ನಿಲ್ಲುತ್ತದೆ ; ಆದರೆ ಅರಳುವಿಕೆಯು ಮಾತ್ರ ಅದರ ಕೈಯಲ್ಲಿಲ್ಲ ! ಅದು ಬೆಳದಿಂಗಳಿಂದ ರಂಜಿಸುವ ರಾತ್ರಿಯ ಕೈಯಲ್ಲಿರುತ್ತದೆ. ಆದರಿಂದ ಅವಳ ತುಟಿ ಅಲುಗುವುದನ್ನೇ ನೋಡುವ ಸೇವಕನಂತಿರುವ ನನ್ನನ್ನು ಬಹಳ ದೊಡ್ಡವನೆಂದು ಭಾವಿಸಿ, ತನ್ನ ಇಚ್ಛೆಯನ್ನು ಬಾಯಿಬಿಟ್ಟು ತಿಳಿಸಲು ಹಿಂಜರಿದು ಬಿಟ್ಟಳು. ಸುಖಕ್ಕೆ ವಿಘ್ನಕಾರಿಯಾದ, ದುಃಖವನ್ನು ಮಾತ್ರ ಕೊಡುವುದರಲ್ಲಿ ನಿಪುಣವಾದ, ಇನ್ನೊಬ್ಬರ ಮನಸ್ಸಿಗೆ ಪೀಡೆಯುಟಾಗಲೆಂದು ಬಯಸುವ, ನಾಚಿಕೆಯನ್ನು ರಕ್ಷಿಸಿಕೊಂಡು ಬರಲು ಪ್ರಯತ್ನಪಟ್ಟು ನನಗೆ ಏನನ್ನೂ ಹೇಳದಿರುವುದೇ ಕಾದಂಬರೀ ದೇವಿಗೆ ಪ್ರತಿಬಂಧಕವಾಯಿತು! ತಂಗಾಳಿ ಬೀಸುವುದರಿಂದ ಮೆಲ್ಲನೆ ಮೈಮೇಲೆ ಬೀಳುವ ಹೂವುಗಳನ್ನೂ ಸೈರಿಸಲಾರದ ಕಾದಂಬರೀದೇವಿಯ ಶರೀರವು ವಜ್ರದಂತೆ ಕಠಿನವಾದ ಹೃದಯವುಳ್ಳವರಿಗೂ ಸೈರಿಸಲು ಅಸಾಧ್ಯವಾದ ಅನೇಕ ಮದನಬಾಣಗಳ ಹೊಡೆತವನ್ನು ಹೇಗೆ ಸಹಿಸಿಕೊಳ್ಳುವುದು ? ಅಲ್ಲದೆ ಹೇಮಕೂಟದ ದಾರಿಯು ಅನೇಕ ದಿನಗಳು ಪ್ರಯಾಣ ಮಾಡಬೇಕಾದಷ್ಟು ದೂರವಿರುವುದರಿಂದ ನನಗೂ ಅಲ್ಲಿಗೆ ಬೇಗ ಹೋಗಲು ಸಾಧ್ಯವಿಲ್ಲ. ದುಃಖವನ್ನೇ ಮುಖ್ಯವಾಗಿ ಕೊಡುವ ಹವ್ಯಾಸವುಳ್ಳ, ಕೂಡಿಸಲಸಾಧ್ಯವಾದುದನ್ನೂ ಕೂಡಿಸುವುದರಲ್ಲಿ ನಿಷ್ಣಾತನಾದ ಏನೇನನ್ನೋ ಮಾಡುವ ದುರ್ವಿಧಿಯ ಘಟನಾಮಾರ್ಗವನ್ನು ಯೋಚಿಸಲು ಕೂಡ ಅಸಾಧ್ಯವಾಗಿದೆ. ಹೇಗೆಂದರೆ,

ಸ್ವೈರಿಸದಪುದು ದಿವಸಕ್ರಮುಗಮ್ಯಮಾರ್ಗಮೆಮಗೆ ಬೇಗಮೆಯ್ದೆ ಬಾರದು ದುಃಖೈಕದಾನವ್ಯಸನಿಯುಂ ದುರ್ಘಟಘಟನಾಪಂಡಿತನುಂ ಯತ್ಕಿಂಚನಕಾರಿಯುಮಪ್ಪ ಹತವಿಧಿಯೋಗಮಾರ್ಗಂ ಬಗೆಯಲಗೋಚರಮದೆಂತೆನೆ

ಮೊದಲೊಳ್ ತತ್ಕಿನ್ನರದ್ವಂದ್ವದ ಬಟ್ಟೆಸಲಲೆತ್ತಾನಚ್ಛೋದಮಂ ಸಾ
ರ್ದುದದೆತ್ತಂತಲ್ಲಿಗೋದಿಂಚರಮೆಸಗುವುದೆತ್ತಾ ಮಹಾಶ್ವೇತೆಯಂ ಕಾ
ಣ್ಬುದದೆತ್ತಾ ಕಾಂತೆ ಕಾದಂಬರಿಯನೆನಗೆ ತಾಂ ತೋರ್ಪುದೆತ್ತಾನುಮನ್ನೊಳ್
ಮದನವ್ಯಾಪಾರವೆತ್ತಾಂ ಜನಕನ ಬೆಸದಿಂದಿಂತಗಲ್ದಿರ್ಪುದೆತ್ತಂ ೭೮

ವ॥ ಎಂದು ನೃಪರೂಪಚಂದ್ರಂ ಕೇಯೂರಕನೊಡನೆ ನುಡಿಯುತ್ತಿರ್ಪನ್ನೆಗಂ

ಎನಸುಂ ಗಂಧರ್ವರಾಜಾತ್ಮಜೆಯ ವಿರಹವೃತ್ತಾಂತಸಂತಪ್ತನಾಗಿ
ರ್ದನೊಳಾನುಂ ಕಾಯೆನೆಂದಾದವೆ ಕರುಣಿಸಿದಂತೆಯ್ದೆ ಸಂಕೋಚಿಸಿತ್ತೊ
ಯ್ಯನೆ ಸುತ್ತಂ ಸೂಸಿದೀಶಾನನ ಜಡೆಗಳವೊಲ್ ಕಾಯ್ದ ಪೊನ್ನೀರ್ಗವಿಲ್ಗೆಂ
ಪಿನ ಪೆಂಪಂ ಸಿಂಪಿಸುತ್ತಿರ್ದ ಹಿಮರುಚಿಗಳಂ ತಿಗ್ಮರುಙ್ಮಾಲಿಬಿಂಬಂ ೭೯

೭. ಕಾದಂಬರಿದೇವಿಯು ನನ್ನ ವಿರಹದಿಂದ ಬಗೆಬಗೆಯಾದ ಸಂತಾಪವನ್ನು ಅನುಭವಿಸುತ್ತಿರುವುದರಲ್ಲಿ ನನ್ನ ತಪ್ಪೇನೂ ಇಲ್ಲ. ಅವಳಾಗಿಯೇ ಕಷ್ಟವನ್ನು ತಂದುಹಾಕಿಕೊಂಡಿದ್ದಾಳೆ. ತನ್ನ ಕುಲಗೌರವಕ್ಕೆ ಬೆಲೆಕೊಟ್ಟು ನಾಚಿಕೆಯನ್ನು ತಾಳಿ ನನ್ನನ್ನು ಪ್ರೀತಿಸುವ ಸಂಗತಿಯನ್ನು ನನಗೆ ತಿಳಿಸಲೇ ಇಲ್ಲ. ನಾನಾಗಿಯೆ ಮುಂದುವರಿಯುವುದು ಹೇಗೆ? ಬೆಳದಿಂಗಳು ಬಂದರೆ ತಾನೆ ಚಂದ್ರಕಾಂತಶಿಲೆಯಲ್ಲಿ ನೀರು ಒಸರುವುದು. ಇಂತಹ ಸಂದರ್ಭಗಳಲ್ಲಿ ಮೊದಲು ಹೆಂಗಸು ತನ್ನ ಮನೋಗತವನ್ನು ತಿಳಿಸಬೇಕು, ಗಂಡಸು ಸಿದ್ಧನಾಗಿಯೇ ಇರುತ್ತಾನೆ. ಹೆಂಗಸಿನ ಭಾವವನ್ನು ತಿಳಿಯದೆ ಗಂಡಸು ದುಡುಕಿಬಿಟ್ಟರೆ ರಸಾಭಾಸವಾಗಬಹುದು. ಆದ್ದರಿಂದ ನಾನಾಗಿಯೇ ಮೇಲೆಬಿದ್ದು ಹೋಗಲಿಲ್ಲ ಎಂಬುದು ಚಂದ್ರಾಪೀಡನ ಮಾತುಗಳ ಅಭಿಪ್ರಾಯ. ಇಲ್ಲಿ ಬಾಣಕಾದಂಬರಿಯ ವಾಕ್ಯಗಳು ಸರಿಯಾಗಿ ಕನ್ನಡಿಸಲ್ಪಟ್ಟಿಲ್ಲ ಅಥವಾ ವಾಕ್ಯಗಳು ಬಿಟ್ಟುಹೋಗಿರಬಹುದು. ೭೮. ಮೊದಲು ನಾನು ಕಿನ್ನರದಂಪತಿಗಳ ಬೆನ್ನುಹತ್ತಿ ಹೋಗುವುದೆಂದರೇನು ? ಅಚ್ಛೋದಸರೋವರಕ್ಕೆ ಬರುವುದೆಂದರೇನು ? ಅಲ್ಲಿ ಇಂಪಾದ ಸಂಗೀತಧ್ವನಿಯು ಕೇಳಿಬರುವುದೆಂದರೇನು ? ಮಹಾಶ್ವೇತೆಯನ್ನು ಕಾಣುವುದೆಂದರೇನು ? ಅವಳಾದರೂ ಕಾದಂಬರಿಯನ್ನು ನನಗೆ ಭೇಟಿಮಾಡಿಸುವುದೆಂದರೇನು ? ಅವಳು ನನ್ನನ್ನು ಪ್ರೀತಿಸುವುದೆಂದರೇನು ? ನಾನು ತಂದೆಯ ಅಪ್ಪಣೆಯಿಂದ ಅಗಲಿಬರುವುದೆಂದರೇನು ?" ವ॥ ಹೀಗೆ ಚಂದ್ರಾಪೀಡನು ಕೇಯೂರಕನೊಡನೆ ಹೇಳುತ್ತಿರುವಷ್ಟರಲ್ಲಿ ೭೯. "ಈ ಚಂದ್ರಾಪೀಡನು ಕಾದಂಬರಿಯ ವಿರಹವೇದನೆಯಿಂದ ಬಹಳಮಟ್ಟಿಗೆ ಸಂತಪ್ತನಾಗಿದ್ದಾನೆ. ಆದ್ದರಿಂದ ನಾನು ಇವನಿಗೆ ಬಿಸಿಲಿನಿಂದ ತಾಪವನ್ನುಂಟುಮಾಡುವುದಿಲ್ಲ" ಎಂದು ಬಹಳ ಕರುಣೆಯಿಂದ ಕೂಡಿ ದಿಕ್ಕುಗಳಲ್ಲೆಲ್ಲ ಹರಡಿರುವ, ಪರಶಿವನ ಜಟೆಗಳಂತೆಯೂ

ವ॥ ಆಗಳ್ ಪೆರ್ಮರದ ತುದಿಗೋಡುಗಳೊಳ್ ತೊಡರ್ದ ಕೆಂಬಿಸಿಲ ಮುಱಿಗಳ ನುಡಿಗೆಡೆಗೆಯ್ಯುತ್ತಮಾದಿತ್ಯನೊಡನೆ ವಾಸರವೊಯ್ಯನೋಸರಿಸೆ ನೃಪರೂಪಚಂದ್ರಂಗೆ ಕೆಳದಿಯಂತೆ ಕರುಣಿಸಿ ನಾಂದ ನಾರಂಗವಟ್ಟೆಯ ಮೇಲ್ಕಟ್ಟನಂಬರದೊಳ್ ಕಟ್ಟಿದಳೆಂಬಂತೆ ಸಂಜೆ ಸಂಜಾತಸ್ವರಾಗಪಟಲಮುಂ ಪಸರಿಸೆ ಗಂಧರ್ವರಾಜನಂದನಾಭೀಕ್ಷಣಕ್ಕೆ ಸಮೆದ ನೀಲಪಟಮೆಂಬಂತೆ ನಿಶಾಗಮನವೆಣ್ದೆಸೆಯೊಳಮೆಸೆವ ಕತ್ತಲೆಯುಂ ಬಿತ್ತರಿಸೆ ಅರಲ್ದಿರೆ [ಕೊರಗಿ] ದುಸ್ಸಹ ವಿರಹಶಯನರಚನೆಗೆ ಬಾರ್ತೆಯಾಗಲಾಱೆವೆಂದಗಿದು ಮೆಯ್ದೆಗೆದುವೆಂಬಂತೆ ತಾವರೆಗಳ್ ಮುಗಿಯೆ ಶುಚಿಸ್ವಭಾವಂಗಳಪ್ಪುದಱಿನಾರ್ದ್ರತೆಯನಪ್ಪುಕೆಯ್ದುತ್ಕಂಠಶಯನಪರಿಕಲ್ಪನಕ್ಕಾವಾವೆ ಮುಂಚುವೆವೆಂಬಂತೆ ಕುಮುದಿನಿಗಳೊಂದೊಂದು ಗಱಿಗಳುಳ್ಳಲರೆ ಕಾದಂಬರಿಯ ಸಮೀಪಕ್ಕೆ ಪೋಗೆಂದು ಯುವರಾಜಂಗುಪದೇಶಂಗೆಯ್ವಂತೊಡನೊಡನಗಲ್ವ ಜಕ್ಕವಕ್ಕಿಗಳ್ ಕಳರುತಮನೊದವಿಸೆ ತತ್ಸಮಯದೊಳ್

ಕಾಯಿಸಲ್ಪಟ್ಟ ಚಿನ್ನದ ರಸದಂತೆಯೂ ಅತಿಶಯವಾದ ಕಪಿಲವರ್ಣದ (ಮಾಸಲುಕೆಂಪು) ಕೆಂಬೆಳಗನ್ನು ಹರಡುತ್ತಿರುವ ಉಷ್ಣಕಿರಣಗಳನ್ನು ಸೂರ್ಯದೇವನು ಉಪಸಂಹರಿಸುತ್ತಿದ್ದನು. ವ॥ ಆಗ ಹಗಲು ದೊಡ್ಡ ದೊಡ್ಡ ಮರಗಳ ತುದಿಗೊಂಬೆಗಳಲ್ಲಿ ಸೇರಿಕೊಂಡಿದ್ದ ಕೆಂಬಿಸಿಲಿನ ಖಂಡಗಳನ್ನು ತನ್ನ ಜೊತೆಯಲ್ಲೇ ಎಳೆದುಕೊಂಡು ಸೂರ್ಯನೊಂದಿಗೆ ಮೆಲ್ಲನೆ ಸರಿದುಹೋಯಿತು. ಸಂಧ್ಯಾದೇವಿಯು ಗೆಳತಿಯಂತೆ ಕರುಣೆಯಿಂದ ಕೂಡಿದವಳಾಗಿ ಚಂದ್ರಾಪೀಡನಿಗೆ ಒದ್ದೆಯಾದ ಕೆಂಪುಬಟ್ಟೆಯ ಮೇಲ್ಕಟ್ಟನ್ನು ಆಕಾಶದಲ್ಲಿ ಕಟ್ಟಿದಳೊ ಎಂಬಂತೆ ಆಗ ಉಂಟಾದ ತನ್ನ ಕೆಂಬೆಳಗಿನ ಸಮೂಹವನ್ನು ಹರಡುತ್ತಿದ್ದಳು. ಕಾದಂಬರಿಯನ್ನು ನೋಡದಿರಲೆಂದು (ಮದವಣಗಿತ್ತಿಗೆ ತೆರೆಹಾಕುವಂತೆ) ಪ್ರದೋಷಕಾಲವು ಕಟ್ಟಿರುವ ಕಪ್ಪುಬಟ್ಟೆಯೊ ಎಂಬಂತೆ ಎಂಟು ದಿಕ್ಕುಗಳಲ್ಲೂ ಕತ್ತಲೆಯನ್ನು ಹರಡುತ್ತಿತ್ತು. ನಾವು ಅರಳಿಬಿಟ್ಟರೆ ದಾರುಣವಾದ ವಿರಹವ್ಯಥೆಯನ್ನು ಅನುಭವಿಸುತ್ತಿರುವ ಚಂದ್ರಾಪೀಡನಿಗೆ ಹಾಸಿಗೆಯನ್ನು ಕಲ್ಪಿಸಲು ಉಪಯೋಗಿಸಿಕೊಂಡುಬಿಡುತ್ತಾರೆಂದು ಹೆದರಿ ಮರೆಯಾದಂತೆ ತಾವರೆಗಳು ಮುಚ್ಚಿಕೊಂಡವು! ನೈದಿಲೆಗಳು ಶುಚಿಸ್ವಭಾವ (೧. ನಿರ್ಮಲಸ್ವಭಾವ ೨. ಸದ್ಭಾವನೆ)ವುಳ್ಳವುಗಳಾದುದರಿಂದ ಆರ್ದ್ರತೆ (೧. ಒದ್ದೆಯಾಗಿರುವಿಕೆ ೨. ದಯಾಪರತೆ)ಯನ್ನು ಹೊಂದಿ ವಿರಹತಾಪಶಾಂತಿಗಾಗಿ ಹಾಸಿಗೆಯನ್ನು ಮಾಡಿಕೊಡಲು ನಾವೇ ಮುಂದೆ ಬರುತ್ತೇವೆಂದು ತೋರಿಸುವಂತೆ ಒಂದೊಂದು ದಳವಾಗಿ ಅರಳುತ್ತಿದ್ದುವು. "ಕಾದಂಬರಿಯ ಹತ್ತಿರಕ್ಕೆ ಹೋಗು" ಎಂದು ಯುವರಾಜನಿಗೆ ಉಪದೇಶ ಮಾಡುವಂತೆ ಆಗ ಪರಸ್ಪರ ಅಗಲುವ ಚಕ್ರವಾಕಗಳು ಇಂಪಾಗಿ ಧ್ವನಿ ಮಾಡುತ್ತಿದ್ದುವು. ಆ ಸಮಯದಲ್ಲಿ ಟಿ. "ಗಂಧರ್ವರಾಜನಂದನಾಭೀಕ್ಷಣಕ್ಕೆ" ಎಂಬುದು ಬಾಣಕಾದಂಬರಿಯಲ್ಲಿಲ್ಲ. ಅಲ್ಲಿ "ನಿಶಾಗಮನವು ಶೂನ್ಯಹೃದಯನಾಗಿ ಸಂಕಟಪಡುತ್ತಿರುವ ಚಂದ್ರಾಪೀಡನನ್ನು ಯಾರೂ ನೋಡದಿರಲೆಂದು

ನಯದಿಂ ರಾಜೇಂದ್ರಚಂದ್ರಂಗಭಿಷವವಿಧಿಯಂ ಮಾಡುವೆಂ ಚಂದ್ರಿಕಾವಾ
ರಿಯಿನೆಂಬಂತೆತ್ತಲುಂ ತಣ್ಪೆಳಗಿನ ಬಳಗಂ ಸಿಂಪಿಸಲ್ ಪೂರ್ವದಿಕ್ಕಾಂ
ತೆಯ ಲೀಲಾದಂತಪತ್ರಂ ತ್ರಿಭುವನವಿಭವೈಕಾತಪತ್ರಂ ನಭೋಲ
ಕ್ಷ್ಮಿಯ ಲಾವಣ್ಯಹ್ರದಂ ಬಂದುದಯಿಸಿತುದಯಾದ್ರೀಂದ್ರದೊಳ್ ಚಂದ್ರಬಿಂಬಂ
೭೦

ವ॥ ಅಂತು ಚಂದ್ರೋದಯದೊಳ್ ನೃಪರೂಪಚಂದ್ರಂ ಚಂದ್ರಾತಪಸ್ಪರ್ಶದರ್ಶಿತ ವಿಶದ ಬಿಂದುಸಂದೋಹಶೀತಳವಪ್ಪ ಚಂದ್ರಮಣಿಶಿಲಾತಲದೊಳ್ ಪಟ್ಟಿರ್ದಡಿಯೊತ್ತುತಿರ್ದ ಕೇಯೂರಕನಂ ಮೆಲ್ಲನಿಂತೆಂದಂ

ಮಗುಳಿನ್ನಾನಿಲ್ಲಿಗೆ ಬರ್ಪುದುಂ ತನುವಿನೊಳ್ ಪ್ರಾಣಂಗಳಂ ದೇವಿ ತಾ
ಳ್ದುಗುಮೋ ಪೇಳ್ ಮದಲೇಖೆ ವಾರ್ತೆಯುಣಿಂದೊಂದುದ್ಯೋಗದೆತ್ತಾನುಮಿ
ಲ್ಲಿಗೆ ತಾಂ ಬರ್ಕುಮೊ ನಾಣ್ಚಿ ಮತ್ಪರಿಚಯಕ್ಕಾದಂ ಮಹಾಶ್ವೇತೆ ತೊ
ಟ್ಟಗೆ ತನ್ನಂ ತನುವಿಂದೆ ಪತ್ತುವಿಡಳಲ್ತೇ ಪಿಂದೆ ಕೇಯೂರಕಾ ೭೧

ಅಪ್ಪನಂತೆ ಕತ್ತಲೆಯನ್ನು ಹರಡುತ್ತಿರಲು" ಎಂದಿದೆ. 'ಕೊರಗಿ' ಎಂಬುದಕ್ಕೆ ಅನ್ವಯವಾಗುವುದಿಲ್ಲ. ೭೦. ಪೂರ್ವದಿಕ್ಕೆಂಬ ರಮಣಿಯ ವಿಲಾಸದ ದಂತದೋಲೆಯಂತೆಯೂ, ಮೂರು ಲೋಕಗಳಿಗೂ ಲೋಕೋತ್ತರವಾದ ಒಂದೇ ಬಿಳಿಗೋಡೆಯಂತೆಯೂ, ಆಕಾಶಲಕ್ಷ್ಮಿಯ ಸೌಂದರ್ಯದ ಕೊಳದಂತೆಯೂ ಇರುವ ಚಂದ್ರನು ಈ ರಾಜೇಂದ್ರ ಚಂದ್ರನಿಗೆ ವಿರಹತಾಪಶಮನಕ್ಕಾಗಿ ತಿಂಗಳಬೆಳಕೆಂಬ ನೀರಿನಿಂದ ಮೆಲ್ಲನೆ ಸ್ನಾನ ಮಾಡಿಸಲು ಉದ್ದೇಶಿಸಿದ್ದಾನೋ ಎಂಬಂತೆ ತಂಪಾದ ಚಂದ್ರಿಕೆಯನ್ನು ಎಲ್ಲೆಲ್ಲೂ ಪ್ರಸರಿಸುತ್ತಾ ಉದಯಪರ್ವತದ ಮೇಲೆ ಮೂಡಿದನು. ವ॥ ಅಂತಹ ಚಂದ್ರೋದಯದಲ್ಲಿ ಚಂದ್ರಾಪೀಡನು ಬೆಳದಿಂಗಳ ಸಂಪರ್ಕದಿಂದ ಒಸರಿ ಕಾಣುತ್ತಿರುವ ಸ್ವಚ್ಛವಾದ ಜಲಬಿಂದುಗಳಿಂದ ತಂಪಾದ ಚಂದ್ರಕಾಂತಶಿಲೆಯ ಮೇಲೆ ಮಲಗಿ ಕಾಲನ್ನು ಒತ್ತುತ್ತಿರುವ ಕೇಯೂರಕನನ್ನು ಕುರಿತು ಮೆಲ್ಲನೆ ಹೀಗೆ ಹೇಳಿದನು. ೭೧. "ಕೇಯೂರಕ, ನಾನು ಈ ಕಡೆ ಬಂದುಬಿಟ್ಟ ಮೇಲೆ ಕಾದಂಬರಿಯು ತನ್ನ ಶರೀರದಲ್ಲಿ ಪ್ರಾಣವನ್ನು ಉಳಿಸಿಕೊಂಡಿರುವಳೆ ? ಮದಲೇಖೆಯು ಅವಳ ಸಮಾಚಾರವನ್ನು ತಿಳಿದುಕೊಂಡು ಯಾವುದಾದರೂ ಕಾರ್ಯಕ್ಕಾಗಿ ಈ ಕಡೆ ಬರುತ್ತಾಳೊ ? ಅಥವಾ ಮಹಾಶ್ವೇತೆಯು ನನ್ನ ಪರಿಚಯಕ್ಕೆ ನಾಚಿ ಕೂಡಲೆ ತನ್ನ ಶರೀರದ ದೆಸೆಯಿಂದ ಸಂಬಂಧವನ್ನು ಬಿಡಳಲ್ಲವೆ ? (ಪ್ರಾಣವನ್ನು ಬಿಡುವುದಿಲ್ಲವಲ್ಲ). ಟಿ. ಈ ಪದ್ಯದ ಅರ್ಥಕ್ಕೂ ಮೂಲ ಕಾದಂಬರಿಯ ಅರ್ಥಕ್ಕೂ ವ್ಯತ್ಯಾಸವಿದೆ. ಮೂಲದಲ್ಲಿ 'ಕೇಯೂರಕ, ಏನು ಹೇಳುತ್ತೀಯೆ ? ನಾನು ಅಲ್ಲಿಗೆ ಬರುವವರೆಗೂ ಕಾದಂಬರಿಯು ಪ್ರಾಣಧಾರಣೆ ಮಾಡಿರುತ್ತಾಳೋ ? ಅವಳ ಬೇಜಾರನ್ನು ಕಳೆಯಲು ಮದಲೇಖೆಗೆ ಸಾಧ್ಯವಾಗುತ್ತದೆಯೆ ? ಅವಳನ್ನು ಸಮಾಧಾನ

ಮನದನ್ನರೆನಿಪ ನಿಜಪರಿ
ಜನದ ಸಖೀಜನದ ದೆಸೆಯೊಳಾದ ಸಮಭ್ಯ
ರ್ಥನೆಯಿಂದೆ ದೇವಿ ತನ್ನಯ
ತನುವಂ ನಿಲೆಪಿಡಿವ ಬಾಸೆಯುಂ ಮಾಡುಗುವೋ ೭೨

ವ॥ ಎಂಬುದುಂ ಕೇಯೂರಕನಿಂತೆಂದಂ

ಪರಿಜನಮುಮಾಪ್ತರುಂ ಸಂ
ವರಿಸಲ್ ನಿತ್ತರಿಪರೆಂಬುದಂತಿರ್ಕ ಚಿ
ತ್ರರಥತನೂಜೆಯೆ ನಿನ್ನಯ
ಬರವಿನೊಳಾದಾಸೆಯಿಂದೆ ನಿತ್ತರಿಸಿದಪಳ್ ೭೩

ವ॥ ಅದಱಿಂ ದೇವರ್ ಬರವಿನೊಳಾದಂ ಬವಸೆಯುನೆ ಮಾಳ್ಪುದೆನೆ ಕಿಱಿದು ಬೇಗಮೇನಾನುಮಂ ತನ್ನೊಳೆ ಭಾವಿಸುತಿರ್ದು ಕೇಯೂರಕನಂ ವಿಶ್ರಮಿಸೆ ವಿಸರ್ಜಿಸಿ ತಾನುಂ ಸೆಜ್ಜೆಗೆ ಬಿಜಯಂಗೆಯ್ದು ಗಮನಚಿಂತಾನಿಮಗ್ನಸ್ವಾಂತನಾಗಿ

ತಂದೆಗೆ ತಾಯ್ಗೆ ಪೇೞ್ದು ಗಮನೋದ್ಯಮನಾಗಲೆವೇೞ್ಕುಮಲ್ಲದಿ
ರ್ದಂದವರ್ಗಕ್ಕುಮಾವಗನುತಾಪಪರಂಪರೆ ಪೇೞ್ದು ಪೋಪೆನಂ
ಬಂದದು ನಾಡೆ ಲಜ್ಜೆ ಪೆಱತಿನ್ನದಱಿಂ ಶುಕನಾಸನಂದನಂ
ಬಂದಪನಾತನಿಂದಮಱಿವಂತಿರೆ ಪೇೞಿಸಿ ಮತ್ತಪಂಚಮಂ ೭೪

ಪಡಿಸಲು ಮತ್ತೆ ಮಹಾಶ್ವೇತೆಯು ಬರುತ್ತಾಳೊ ? ನನ್ನ ಪ್ರೀತಿಯಿಂದ ಖೇದ ಗೊಂಡಿರುವ ಕಾದಂಬರಿಯು ಬದುಕುವ ವಿಷಯದಲ್ಲಿ ಅವರ ಪ್ರಾರ್ಥನೆಗೆ ಕಿವಿಗೊಡು ತ್ತಾಳೊ ?' ಎಂದಿದೆ. ೭೨. ಕಾದಂಬರಿಯು ಪ್ರೀತಿಪಾತ್ರರಾದ ಪರಿಜನರ ಮತ್ತು ಗೆಳತಿಯರ ಪ್ರಾರ್ಥನೆಯನ್ನು ಮನ್ನಿಸಿ ತನ್ನ ಶರೀರವನ್ನು ಉಳಿಸಿಕೊಳ್ಳಲು ಮಾತು ಕೊಡುತ್ತಾಳೊ ?" ವ॥ ಎಂದು ಹೇಳಲು ಕೇಯೂರಕನು ಹೀಗೆ ಹೇಳಿದನು. ೭೩. "ಸ್ವಾಮಿ, ಪರಿಜನರಾಗಲಿ ಆಪ್ತರಾಗಲಿ ಅವಳನ್ನು ಸಮಾಧಾನಪಡಿಸಲು ಸಮರ್ಥ ರಾಗುತ್ತಾರೆ ಎಂಬ ಮಾತು ಹಾಗಿರಲಿ, ಕಾದಂಬರಿಯು ನೀವು ಮರಳಿ ಬರುವಿರೆಂಬ ಆಸೆಯಿಂದ ತನ್ನ ಪ್ರಾಣಗಳನ್ನು ಇಟ್ಟುಕೊಂಡಿರಲು ಸಮರ್ಥಳಾಗಿದ್ದಾಳೆ. ವ॥ ಆದರಿಂದ ಯುವರಾಜರು ಅಲ್ಲಿಗೆ ಬರುವ ಪ್ರಯತ್ನವನ್ನು ಮಾಡಬೇಕು" ಎಂದು ಹೇಳಲಾಗಿ ಸ್ವಲ್ಪಕಾಲ ಏನನ್ನೋ ತನ್ನಲ್ಲೇ ಯೋಚಿಸುತ್ತಿದ್ದು ಕೇಯೂರಕನನ್ನು ವಿಶ್ರಮಿಸಿಕೊಳ್ಳು ವಂತೆ ಕಳುಹಿಸಿ, ತಾನು ಶಯ್ಯಾಗೃಹಕ್ಕೆ ಬಂದು ಪ್ರಯಾಣಮಾಡುವ ಚಿಂತೆಯಲ್ಲಿ ಮುಳುಗಿದನು. ೭೪. "ತಂದೆಗೂ ತಾಯಿಗೂ ಹೇಳಿ ಪ್ರಯಾಣಕ್ಕೆ ಸಿದ್ಧನಾಗಬೇಕು. ಹಾಗಿಲ್ಲದಿದ್ದರೆ ಅವರು ಯಾವಾಗಲೂ ದುಃಖಪರಂಪರೆಯನ್ನು ಅನುಭವಿಸುತ್ತಾರೆ. ನಾನೇ ಅವರಿಗೆ ಹೇಳಿ ಹೋಗುವೆನೆಂದರೆ ಹೆಚ್ಚಾದ ನಾಚಿಕೆ ಬೇರೆ. ಆದ್ದರಿಂದ ವೈಶಂಪಾ ಯನನು ಬರಲಿ. ಅವನಿಂದ ತಾಯಿ ತಂದೆಗಳಿಗೆ ನನ್ನ ವಿಷಯವನ್ನೆಲ್ಲ ತಿಳಿಯುವಂತೆ

ವ॥ ಮಹಾರಾಜಾಧಿರಾಜನುಮಪ್ಪೆನ್ನ ತಂದೆಯುಂ ಗಂಧರ್ವಲೋಕಾಧಿಪತಿಯಪ್ಪ ಚಿತ್ರರಥರಾಜನುಮೊಂದಾಗಿ ಮದುವೆಯಂ ಸಂಧಿಸುವಂತು ಮಾೞ್ಪೆನಿಲ್ಲಿಗೆನ್ನೊಳಲ್ಲದೆಯುಂ ಜನಕಂಗಮಱಿಪುವೊಡೆ ಮದೀಯ ಹೃದಯದ್ವಿತೀಯನಪ್ಪ ವೈಶಂಪಾಯನಂ ಪೆಱಗಾಗಿ ಪೆಱನಾವನಱಿದಪ್ಪನೆಂದು ಆತನ ಬರವನೆ ಬಯಸುತ್ತಮಾಯಿರುಳಂ ಕಳೆದು ನೇಸಱ್ ಮೂಡಲೊಡನೆ

ಬಂದುದು ಕಟಕಂ ದಶಪುರ
ಕೆಂದೆಲ್ಲರ್ ನುಡಿಯೆ ಕೇಳ್ದು ಭೋಂಕನೆ ಜೀವಂ
ಬಂದಂತುತ್ಸಾಹದಿನಾ
ನಂದಪರಂಪರೆಯನೆಯ್ದಿದಂ ಯುವರಾಜಂ ೭೫

ವ॥ ಅನ್ನೆಗಂ ಬಂದು ದೂರದೊಳೆ ಕೃತನಮಸ್ಕಾರನಾದ ಕೇಯೂರಕನಂ ಕರೆದು ವೈಶಂಪಾಯನಂ ಬಂದನಿನ್ನೆಮ್ಮ ಕಾರ್ಯಸಿದ್ಧಿ ಕರತಲವರ್ತಿಯಾದುದೆನೆ ಗಮನಕ್ಕೆ ಕಿಱಿದು ತಡಮನೊಡರಿಸುಗುಮೆಂದು ಮನದೊಳ್ ಬಗೆಯುತ್ತುಂ ದೇವ ಕರಮೊಳ್ಳಿತಾಯ್ತೆಂದೆಯ್ದೆ ವಂದು ಕೆಲದೊಳ್ ಕುಳ್ಳಿರ್ದು ವೈಶಂಪಾಯನಾಲಾಪಂಗಳಿಂದಮೆ ಕಿಱಿದುಬೇಗಮಿರ್ದು ಸನ್ನೆಯಿಂ ಪರಿಜನಂಗಳಂ ತೊಲಗೆವೇೞ್ದು ಕೇಯೂರಕವರ್ಮನಂ ಕೇಯೂರಕನಿಂತೆಂದಂ

ಹೇಳಿಸಿ, ವ॥ ಚಕ್ರವರ್ತಿಯಾದ ನನ್ನ ತಂದೆಯೂ ಗಂಧರ್ವಲೋಕಾಧಿಪತಿಯಾದ ಚಿತ್ರರಥನೂ ಒಂದಾಗಿ ಮದುವೆಯನ್ನು ಏರ್ಪಡಿಸುವಂತೆ ಮಾಡುತ್ತೇನೆ. ಅದಲ್ಲದೆ ತಂದೆಗೂ ತಿಳಿಸಬೇಕಾದರೆ ನನ್ನ ಎರಡನೆಯ ಅಂತರಂಗದಂತಿರುವ ವೈಶಂಪಾಯನನನ್ನು ಬಿಟ್ಟರೆ ಮತ್ತಾರಿಗೆ ಗೊತ್ತಾಗುತ್ತದೆ ?"–ಎಂದು ಅವನ ಆಗಮನವನ್ನೇ ಬಯಸುತ್ತ ಆ ರಾತ್ರಿಯನ್ನು ಕಳೆದನು. ಸೂರ್ಯನು ಹುಟ್ಟಲಾಗಿ, ೭೫. ಸೈನ್ಯವು ದಶಪುರದ ಹತ್ತಿರಕ್ಕೆ ಬಂದಿದೆ ಎಂದು ಎಲ್ಲರೂ ಹೇಳುತ್ತಿರುವುದು ಇವನ ಕಿವಿಗೆ ಬಿತ್ತು. ಕೂಡಲೆ ಜೀವ ಬಂದಂತಾಗಿ ಯುವರಾಜನು ಹುರುಪಿನಿಂದ ಅತ್ಯಾನಂದಗೊಂಡನು. ವ॥ ಅಷ್ಟರಲ್ಲಿ ಕೇಯೂರಕನು ಬಂದು ದೂರದಲ್ಲೇ ನಮಸ್ಕಾರ ಮಾಡಿದನು. ಚಂದ್ರಾಪೀಡನು ಅವನನ್ನು ಕರೆದು "ಕೇಯೂರಕ, ವೈಶಂಪಾಯನನು ಬಂದನು. ಇನ್ನು ನಮ್ಮ ಕಾರ್ಯ ಸಿದ್ಧಿಯೂ ಅಂಗೈಯಲ್ಲೇ ಇದ್ದಂತೆ" ಎಂದು ಹೇಳಿದನು. ಅವನು ಚಂದ್ರಾಪೀಡನ ಪ್ರಯಾಣಕ್ಕೆ ಸ್ವಲ್ಪಕಾಲ ವಿಳಂಬವುಂಟಾಗುವುದೆಂದು ಮನಸ್ಸಿನಲ್ಲಿ ಆಲೋಚಿಸುತ್ತಾ "ಒಡೆಯ, ಬಹಳ ಒಳ್ಳೆಯದಾಯಿತು" ಎಂದು ಹೇಳಿ ಹತ್ತಿರ ಬಂದು ಪಕ್ಕದಲ್ಲಿ ಕುಳಿತು ಕೊಂಡನು. ಆಮೇಲೆ ಸನ್ನೆಯಿಂದ ಪರಿಜನರನ್ನು ಹೊರಕ್ಕೆ ಕಳುಹಿಸಿದ ಕೇಯೂರ ಧಾರಿಯಾದ ಚಂದ್ರಾಪೀಡನನ್ನು ಕುರಿತು ಕೇಯೂರಕನು ಹೀಗೆ ಹೇಳಿದನು.

ಸುರುಚಿರ ಪಾಂಡುರಪ್ರಭೆ ಸುಧಾಕಿರಣೋದಯಮಂ ಸುಗಂಧಬಂ
ಧುರ ಮಲಯಾನಿಲಾಗತಿ ಮಧೂದ್ಗಮಮಂ ವಿಕಸಲ್ಲತಾಂತಮಂ
ಜರಿಫಲದೇಟಿಸ್ಗಿಯಂ ನೆರೆಯೆ ಪೇಲ್ವವೊಲೀ ಸಮವಸ್ಥೆ ತಾನೆ ದೇ
ವರ ಬರವಂ ನಿರಾಕುಳಮೆ ಪೇಳ್ದಪುದೆನ್ನ ಮನಕ್ಕೆ ನಿಕ್ಕುವಂ ೭೬

ವ॥ ಅದಲ್ಲದೆಯುಂ

ತೊಡಳೇಂ ದೇವಿಯರನಗ
ಲ್ದು ದೇವರಿರಲರಿಯಿರೆಂತೆನಲ್ ಬಿಸಲತೆಯಿ
ಲ್ಲದೆ ಕಮಲಾಕರಮುಂ ಕೌ
ಮುದಿಯಿಲ್ಲದೆ ಕುಮುದಸಖನುಮಿರಲರಿದಪನೇ ೭೭

ವ॥ ಆದೊಡೆ ವೈಶಂಪಾಯನನೊಳ್ ನೆರೆದು ದೇವರ್ ಬಿಜಯಂಗೆಯ್ವನ್ನೆಬರಮ
ನಿತು ಕಾಲಾತಿಪಾತಮಂ ದೇವಿಯರ ಶರೀರಾವಸ್ಥೆ ಸೈರಿಸುವುದಲ್ತು ತದೀಯ ಜೀವ
ಸಂಧಾರಣಮುಮಂ ಭವದೀಯ ಗಮನವಿಶ್ವಾಸಮುಮಂ ಮಾಡಲ್ವೇಟ್ಕುಮದಱಿಂದೆನ್ನ
ಬಿನ್ನಪಮಂ ದೇವರವಧಾರಿಸುವುದದೆಂತೆನೆ

೭೬. "ಒಡೆಯ, ಪೂರ್ವದಿಕ್ಕಿನಲ್ಲಿ ಕಾಣಿಸಿಕೊಳ್ಳುವ ಸುಂದರವಾದ ಬಿಳಿಯ ಕಾಂತಿಯು ಚಂದ್ರನು ಮೂಡಿ ಬರುವುದನ್ನು ತಿಳಿಸುತ್ತದೆ. ಸುವಾಸನೆಯಿಂದ ಮನೋಹರವಾಗಿ ಬೀಸುವ ಮಲಯಮಾರುತವು ವಸಂತಸಮಯದ ಪ್ರಾರಂಭವನ್ನು ತಿಳಿಸುತ್ತದೆ. ಮರಗಳಲ್ಲಿ ಅರಳಿರುವ ಹೂವಿನ ಗೊಂಚಲು ಹಣ್ಣುಗಳು ಸಮೃದ್ಧಿಯಾಗಿ ಬಿಡುವುದನ್ನು ತಿಳಿಸುತ್ತದೆ. ಅದೇ ರೀತಿಯಲ್ಲಿ ಈಗ ನಿಮ್ಮ ಸ್ಥಿತಿಯು ನೀವು ಹೇಮಕೂಟಕ್ಕೆ ಬರುವುದನ್ನು ನನ್ನ ಮನಸ್ಸಿಗೆ ಸಂದೇಹಕ್ಕೆಡೆಯಿಲ್ಲದಂತೆ ಖಚಿತವಾಗಿ ತಿಳಿಸುತ್ತಿದೆ! ವ॥ ಅದಲ್ಲದೆ ೭೭. ಕಾದಂಬರೀದೇವಿಯನ್ನು ಬಿಟ್ಟು ಚಂದ್ರಾಪೀಡಮಹಾರಾಜನು ಇರಲು ಸಾಧ್ಯವೇ ಇಲ್ಲ ಎಂಬುದು ಸುಳ್ಳಲ್ಲ. ಹೇಗೆಂದರೆ ತಾವರೆಬಳ್ಳಿಯಿಲ್ಲದಿದ್ದರೆ ತಾವರೆಗೊಳವು ಇರಲು ಸಾಧ್ಯವೆ ? ಬೆಳದಿಂಗಳನ್ನು ಬಿಟ್ಟು ಚಂದ್ರನು ಇರಲು ಸಾಧ್ಯವೆ ? ವ॥ ಆದರೆ ವೈಶಂಪಾಯನನು ಬಂದು ನೀವು ಪ್ರಯಾಣ ಮಾಡುವಷ್ಟು ಕಾಲ ವಿಳಂಬವನ್ನು ಕಾದಂಬರೀದೇವಿಯ ಶರೀರಸ್ಥಿತಿಯು ತಡೆದುಕೊಳ್ಳಲಾರದು. ನೀವು ಬರುವ ವಿಷಯದಲ್ಲಿ ಅವಳಿಗೆ ಭರವಸೆಯನ್ನು ಕೊಟ್ಟು, ಅವಳು ಜೀವವನ್ನು ಹಿಡಿದುಕೊಂಡಿರುವಂತೆ ನಾನು ಮಾಡಬೇಕಾಗಿದೆ. ಅದರಿಂದ ನನ್ನ ವಿಜ್ಞಾಪನೆಯನ್ನು ತಾವು ಪರಾಂಬರಿಸ

ಲಲನೆಯನೆಯ್ದಿದತ್ತು ಮನವಪ್ಪೊಡೆ ದೇವರುಮೆಯ್ದುವಿರ್ದಿರಾ
ಕುಲವಿದು ಮನ್ಮನಂ ಗಮನದೀನ ನಿಜಪ್ರಣಯಪ್ರಸಾದ ದು
ರ್ಲಲಿತತವಾಂ ತ್ವದಾಗಮನದುತ್ಸವಮಂ ನೃಪ ಮುಂದೆ ಪೋಗಿ ಪೇ
ಟಲೆ ಪದೆದಾಸೆಗೆಯ್ದಪುದು ಬೀಳ್ಕೊಳಿಪೊಂದು ಭವತ್ಪ್ರಸಾದಮಂ ೭೮

ವ॥ ಎಂಬುದುಂ ಪರಿತೋಷವಿಕಚ ನೀಲೋತ್ಪಲ ದೀರ್ಘದೃಷ್ಟಿಗಳಿಂ ದರ್ಶಿತ ಪ್ರಸಾದನಾಗಿ ಕೇಯೂರವಪ್ಪುಂ ಕೇಯೂರಕನನಿಂತೆಂದಂ

ಇನಿಸಂ ಬಂದ ಬಟಲ್ಕೆಯಂ ಬಗೆಯದಾಂ ಪೋದಪ್ಪೆನೆಂಬನ್ನನಾ
ವನೊ ಪೇಟಿಂತಿರೆ ದೇಶಕಾಲಗತಿಯಂ ನಿನ್ನಂತಿರಲ್ ಬಲ್ಲನಾ
ವನೊ ನಿವ್ಯಾ೯ಜದೆ ಭಕ್ತಿಭಾವನೆಯನೆನ್ನೊಳ್ ನಿನ್ನವೊಲ್ ತೋರ್ಪನಾ
ವನೊ ನೀನೆಂದುದೆ ಕಜ್ಜಮಿಂತಿದನೆ ಬೇಗಂ ಮಾಡು ಕೇಯೂರಕಾ ೭೯

ಈಗಲೆ ಪತ್ರಲೇಖೆವೆರಸಂಗನೆಯಲ್ಲಿಗೆ ಮುಂದೆ ಪೋಗು ನೀಂ
ಬೇಗಮಿವಳ್ ಪಸಾಯಿತೆ ಮನೋಹರಿಗೀಕೆಯದೊಂದು ಕಾಣ್ಕೆಯಿಂ
ದಾಗಿಯುಮಾ ತನೂದರಿಗೆ ಧೀರತೆಯುಂ ನಿಜಜೀವರಕ್ಷಣೋ
ದ್ಯೋಗಮುಮಸ್ಮದಾಗಮನನಿಶ್ಚಯಮುಂ ದೊರೆಕೊಳ್ಗುಮಾವಗಂ ೮೦

ಬೇಕು, ಏನೆಂದರೆ : ೭೮. ನಿಮ್ಮ ಮನಸ್ಸು ಈಗಾಗಲೆ ಕಾದಂಬರಿಯೊಂದಿಗೆ ಕೂಡಿಕೊಂಡಿದೆ. ಈಗ ನೀವು ಅಲ್ಲಿಗೆ ಬರಲು ಸಿದ್ಧರಾಗಿಯೇ ಇದ್ದೀರಿ. ಇವರಲ್ಲಿ ಸಂಶಯವಿಲ್ಲ. ಆದ್ದರಿಂದ ನಿಮ್ಮ ಈ ಪ್ರೀತಿಪೂರ್ವಕವಾದ ಅನುಗ್ರಹದಿಂದ ದಿಟ್ಟತನವನ್ನು ಹೊಂದಿರುವ ನನ್ನ ಮನಸ್ಸು, ನಾನು ಮುಂದೆ ಹೋಗಿ ನೀವು ಬರುವ ಸಂತೋಷ ಸಮಾಚಾರವನ್ನು ದೇವಿಗೆ ತಿಳಿಸಲು ಹಾತೊರೆಯುತ್ತಿದೆ. ಅಲ್ಲದೆ ನನಗೆ ಪ್ರಯಾಣ ಮಾಡಲು ಅನುಮತಿಯನ್ನು ಕೊಟ್ಟು ಅನುಗ್ರಹ ಮಾಡಬೇಕೆಂದು ತಮ್ಮನ್ನು ವಿಜ್ಞಾಪಿಸಲು ಇಷ್ಟಪಡುತ್ತಿದೆ. ಟಿ. 'ಗಮನದೀನ' ಎಂಬ ಪದವು ಸರಿಯಾದ ಅರ್ಥವನ್ನು ಕೊಡುವುದಿಲ್ಲ. ವ॥ ಎಂದು ಹೇಳಲಾಗಿ ಅರಳಿರುವ ಕನ್ನೈದಿಲೆಯಂತೆ ಸಂತೋಷದಿಂದ ಅಗಲವಾದ ಕಣ್ಣುಗಳಿಂದ ಅನುಗ್ರಹವನ್ನು ಪ್ರದರ್ಶಿಸುತ್ತ, ತೋಳುಬಂದಿಗಳಿಂದ ಶೋಭಿಸುವ ಶರೀರವುಳ್ಳ ಚಂದ್ರಾಪೀಡನು ಕೇಯೂರಕನನ್ನು ಕುರಿತು ಹೀಗೆ ಹೇಳಿದನು: ೭೯. "ಕೇಯೂರಕ, ದೂರಪ್ರಯಾಣದಿಂದ ಉಂಟಾದ ಆಯಾಸವನ್ನು ಸ್ವಲ್ಪವೂ ಲೆಕ್ಕಿಸದೆ 'ನಾನು ಹೋಗಿ ಬರುತ್ತೇನೆ' ಎಂದು ಹೇಳುವವರು ನಿನ್ನನ್ನು ಬಿಟ್ಟರೆ ಮತ್ತಾರಿದ್ದಾರೆ ? ದೇಶಕಾಲಗಳ ವಿದ್ಯಮಾನವನ್ನು ನಿನ್ನಂತೆ ತಿಳಿದುಕೊಂಡಿರುವವರು ಯಾರಿದ್ದಾರೆ ? ನನ್ನ ಮೇಲೆ ಇಷ್ಟುಮಟ್ಟಿಗೆ ಸಹಜವಾದ ಭಕ್ತಿಯು ಯಾರಿಗಿದೆ ? ನೀನು ಹೇಳುವುದು ಸರಿಯಾದುದು. ಹಾಗೆಯೆ ಬೇಗನೆ ಮಾಡು ೮೦. ನೀನು ಪತ್ರಲೇಖೆಯನ್ನು ಕರೆದುಕೊಂಡು ಈಗಲೆ ಕಾದಂಬರಿಯ ಸಮೀಪಕ್ಕೆ ಮುಂದಾಗಿ ಹೊರಡು. ಈ ಪತ್ರಲೇಖೆ ಕಾದಂಬರೀದೇವಿಯ ಪ್ರೀತಿ ವಿಶ್ವಾಸಕ್ಕೆ ಪಾತ್ರಳಾಗಿದ್ದಾಳೆ. ಇವಳನ್ನು

ವ॥ ಎಂದು ರಾಜಪುತ್ರಂ ಪೆಱಗಿರ್ದ ಪತ್ರಲೇಖೆಯಂ ನೋಡಿ

ಪಿರಿದುಂ ಕೂರ್ಪೆಯೊ ಕಾದಂ
ಬರಿಗೇಂ ಪೋದಪ್ಪೆ ಮುಂದೆ ಪೇೞೆನಲಾಜ್ಞಾ
ಕ್ಷರಮನೆ ಬೆಸಗೊಳ್ವೆಂ ದೇ
ವರೆನ್ನನಿಂತೇಕೆ ಮಗುೞೆ ಬೆಸಗೊಂಡಪಿರಿಂ ೮೧

ವ॥ ಎಂದು ಪತ್ರಲೇಖೆ ತನ್ನ ಗಮನಮಂ ನಿಶ್ಚೈಸುವುದುಮರಸಂ ಮೇಘನಾದನಂ ಕರೆದು ಕೇಯೂರಕನೊಡನೆ ಪತ್ರಲೇಖೆಯನೊಡಗೊಂಡು ಮುಂದೆ ಪೋಗು ವೈಶಂಪಾಯನ ನೊಳ್ ನೆರೆದಾನುಂ ಪಿಂತೆ ನಡೆದುಬರ್ಪೆನೆಂದು ಪೇೞೆ ದೇವರ್ ಬೆಸಸಿದಂತೆ ಗೆಯ್ವೆನೆಂದು ಪೊಡವಟ್ಟು ಬೇಗಂ ಪೋಗೆ ಸಮಕಟ್ಟಂ ಮಾಡಲೆಂದು ಮೇಘನಾದಂ ಪೊಱಮಡಲೊಡಂ ಕೇಯೂ ರಕನೆೞ್ದು ದೇವ ತಡವೆನಗೇವುದೆಂದು ಗಮನಪ್ರಣಾಮಮಂ ಮಾಡೆ

ಪದಪಿಂದಂ ನೋಡಿ ಬಾಷ್ಪಾಕುಲನಯನದೆ ತಳ್ಕೈಸಿ ರೋಮಾಂಚದಿಂದಂ
ಪುದಿದಿರ್ದುದ್ದಾಮಬಾಹುದ್ವಿತಯದಿನದು ಬೇಱೊಂದು ಸಂದೇಶಮೆಂಬಂ
ದದಿನಾಗಳ್ ತಾನೆ ಕೇಯೂರಕನ ಕಿವಿಯೊಳುಲ್ಲಾಸಿತಾನೇಕ ವರ್ಣಾ
ಸ್ಪದಮಪ್ಪಾತ್ಮೀಯ ಕರ್ಣಾಭರಣಮನೊಲವಿಂದಿಕ್ಕಿದಂ ರಾಜಪುತ್ರಂ ೮೨

ಕಂಡರೆ ಕಾದಂಬರಿಗೆ ಧೈರ್ಯವೂ ಪ್ರಾಣವನ್ನು ಉಳಿಸಿಕೊಂಡಿರಬೇಕೆಂಬ ಆಸಕ್ತಿಯೂ ನಾನು ಬಂದೇಬರುತ್ತೇನೆಂಬ ನಿಶ್ಚಯವೂ ಉಂಟಾಗುತ್ತದೆ." ವ॥ ಎಂದು ಹೇಳಿ ರಾಜಕುಮಾರನು ಹಿಂದೆ ಇದ್ದ ಪತ್ರಲೇಖೆಯನ್ನು ನೋಡಿ ೮೧. "ಕಾದಂಬರೀ ದೇವಿಗೆ ನೀನು ಬಹಳ ವಿಶ್ವಾಸಪಾತ್ರಳಾಗಿದ್ದೀಯಲ್ಲವೆ ? ಮುಂದೆ ಹೋಗುವೆಯಾ ?" ಎಂದು ಕೇಳಿದನು. ಅದಕ್ಕೆ ಅವಳು "ಅಪ್ಪಣೆಯಾಗಲಿ. ನನ್ನನ್ನು ಕೇಳುವುದೇನಿದೆ ?" ಎಂದಳು. ವ॥ ಹೀಗೆ ಪತ್ರಲೇಖೆಯು ತನ್ನ ಪ್ರಯಾಣವನ್ನು ನಿಶ್ಚಯಿಸಲಾಗಿ, ಯುವ ರಾಜನು ಮೇಘನಾದನನ್ನು ಕುರಿತು "ಪತ್ರಲೇಖೆಯನ್ನು ಕರೆದುಕೊಂಡು ಕೇಯೂರಕನ ಜೊತೆಯಲ್ಲಿ ನೀನು ಮುಂದೆ ಹೋಗು. ನಾನು ವೈಶಂಪಾಯನನ್ನು ಕಂಡು ಮಾತಾಡಿ ಹಿಂದೆಯೇ ಬರುತ್ತೇನೆ" ಎಂದು ಹೇಳಿದನು. ಅವನು "ಮಹಾಸ್ವಾಮಿಯವರು ಅಪ್ಪಣೆ ಮಾಡಿದಂತೆ ಮಾಡುತ್ತೇನೆ" ಎಂದು ನಮಸ್ಕರಿಸಿ ಜಾಗ್ರತೆ ಪ್ರಯಾಣ ಮಾಡಲು ಸಿದ್ಧತೆಯನ್ನು ಮಾಡುವುದಕ್ಕಾಗಿ ಹೊರಟುಹೋದನು. ಕೇಯೂರಕನು ಎದ್ದು "ಸ್ವಾಮಿ, ತಡವೇತಕ್ಕೆ ?" ಎಂದು ಬೀಳ್ಕೊಳ್ಳುವ ನಮಸ್ಕಾರವನ್ನು ಮಾಡಲಾಗಿ ೮೨. ರಾಜಪುತ್ರನು ಅವನನ್ನು ಪ್ರೀತಿಪೂರ್ವಕವಾಗಿ ನೀರು ತುಂಬಿದ ಕಣ್ಣುಗಳಿಂದ ನೋಡಿ, ರೋಮಾಂಚನದಿಂದ ಕೂಡಿದ ನೀಳವಾದ ತೋಳುಗಳಿಂದ ತಬ್ಬಿಕೊಂಡು, ಅನೇಕ ವರ್ಣಗಳಿಂದ (೧. ಬಣ್ಣ ೨. ಅಕ್ಷರ) ಇದೊಂದು ಬೇರೆ ಸಂದೇಶವೆಂಬಂತೆ ಶೋಭಿಸುವ ರಮಣೀಯವಾದ ತನ್ನ ಕರ್ಣಾಭರಣವನ್ನು ಕೇಯೂರಕನ ಕಿವಿಗೆ ಸ್ನೇಹಪೂರ್ವಕವಾಗಿ

ವ॥ ಅನಂತರಂ ಕಂಠಗತಬಾಷ್ಪಗದ್ಗದಿಕಾವಗೃಹ್ಯಮಾಣಾಕ್ಷರನಾಗಿ ಕೇಯೂರಕನ ನಿಂತೆಂದಂ

ಸಂದೇಶಂ ದೇವಿಯ ದೆಸೆ
ಯಿಂದಂ ನೀಂ ತಂದುದಿಲ್ಲದರ್ಕೀಗಳ್ ತ
ಕ್ಕಂದದೆ ದೇವಿಯರ್ಗಾಂ ಪ್ರತಿ
ಸಂದೇಶಮನೇನಱಿಪವೇಟ್ಟೆಂ ನಿನ್ನಂ ೮೩

ವ॥ ಅದಱಿನಾನಪೂರ್ವಮೆನೆ ಬಿನ್ನವಿಸಲ್ವೇಡಿದಪ್ಪುದಿಲ್ಲಮಳೀಕಲಜ್ಜೆಯಿನೇಂ ನಿನಗೆ ಗಮನಾಯಾಸಮನೆ ತೊಡರ್ಚಿದಪ್ಪೆಂ ಪತ್ರಲೇಖೆಯೆ ಪೋಗಿ ಗಂಧರ್ವರಾಜನಂದನೆಗೆ ಬಿನ್ನವಿಸಿದ ಪ್ಪಳೆಂಬುದುಂ ತನಗಾದಗಲ್ಕೆಯ ನೋವಿಂದೊಗೆತರ್ಪ ಬಾಷ್ಪವೇಗಮನೆಂತಾನುಂ ತೋಱುತ್ತಂ ಉಪದರ್ಶಿತಲಕ್ಷ್ಯಶೂನ್ಯದೃಷ್ಟಿಸಂಚಾರೆಯುಂ ಚರಣಪಾತಾಭಿಮುಖಿಯುಮಾದ ಪತ್ರಲೇಖೆ ಯನಿಂತೆಂದಂ ನೀಂ ಪೋಗಿ ಕಾದಂಬರೀದೇವಿಗೆ ಬದ್ಧಾಂಜಲಿಯಾಗಿ ಪ್ರಣಾಮಪುರಸ್ಸರಮಪ್ಪೆನ್ನ ಬಿನ್ನಪಮಂ ಪೇಟ್ವುದದೆಂತೆನೆ

ಮೊದಲೊಳೆ ಬಂದು ಕಾಣಲೊಡನಂತಿರೆ ತನ್ನ ನಿಸರ್ಗವತ್ಸಲ
ತ್ವದಿನೆನಗಾ ಪ್ರಸಾದಪದಮಂ ದಯೆಗೆಯ್ದ ಮಹಾನುಭಾವೆಗಾ
ಸುದತಿಗೆ ಪೇಟ್ವ ಬರ್ಪನಿತು ಗೌರವಮಂ ಮೊದಲಾಗಿ ಮಾಡಲಾ
ಱದೆ ಖಳರೋಳಿಯೊಳ್ ದೊರೆಗೆವಂದನನೆನ್ನನದೇನನೆಂದಪೆಂ ೮೪

ತೊಡಿಸಿದನು. ವ॥ ಬಳಿಕ ಕೊರಳಲ್ಲಿ ತುಂಬಿದ ಕಣ್ಣೀರಿನಿಂದ ಅಸ್ಪಷ್ಟವಾದ ವರ್ಣೋ ಚ್ಚಾರಣೆಯುಳ್ಳವನಾಗಿ ಕೇಯೂರಕನನ್ನು ಕುರಿತು ಹೀಗೆ ಹೇಳಿದನು. ೮೩. "ಕೇಯೂ ರಕ, ನೀನು ಕಾದಂಬರೀದೇವಿಯರ ಕಡೆಯಿಂದ ನನಗೆ ಯಾವ ಸಂದೇಶವನ್ನೂ ತರಲಿಲ್ಲ. ಆದ್ದರಿಂದ ನಾನು ನಿನ್ನೊಂದಿಗೆ ಯಾವ ಪ್ರತಿಸಂದೇಶವನ್ನು ಹೇಳಿಕಳುಹಿಸಲಿ ? ವ॥ ಆದ್ದರಿಂದ ಹೊಸದಾಗಿ ಏನನ್ನೂ ತಿಳಿಸಬೇಕಾದ್ದಿಲ್ಲ. ಅಲ್ಲದೆ ಕೃತಕವಾದ ಲಜ್ಜೆಯ ನುಡಿಗಳಿಂದ ನಾನು ನಿನಗೇಕೆ ಹೊರಡುವ ಕಾಲದಲ್ಲಿ ಶ್ರಮವನ್ನುಂಟುಮಾಡಲಿ ? ಪತ್ರ ಲೇಖೆಯೇ ಗಂಧರ್ವರಾಜಪುತ್ರಿಗೆ ಅರಿಕೆ ಮಾಡುತ್ತಾಳೆ." ಎಂದು ಹೇಳಿದನು. ಪತ್ರ ಲೇಖೆಯು ಚಂದ್ರಾಪೀಡನನ್ನು ಅಗಲಬೇಕಾಯಿತೆಂಬ ದುಃಖದಿಂದ ಕಣ್ಣೀರನ್ನು ತುಂಬಿ ಅವನಿಗೆ ನಮಸ್ಕರಿಸಲು ಬಂದಳು. ಅವಳ ದೃಷ್ಟಿ ಶೂನ್ಯವಾಗಿತ್ತು. ಅವಳನ್ನು ಕುರಿತು ಹೀಗೆ ಹೇಳಿದನು : "ಪತ್ರಲೇಖೆ, ನೀನು ಹೋಗಿ ಕಾದಂಬರೀದೇವಿಗೆ ಕೈ ಜೋಡಿಸಿ ನಮಸ್ಕಾರಪೂರ್ವಕವಾಗಿ ನನ್ನ ಬಿನ್ನಪವನ್ನು ಹೀಗೆ ತಿಳಿಸು. ೮೪. "ಕಾದಂಬರೀ ದೇವಿಯು ಪ್ರಥಮ ದರ್ಶನದಲ್ಲೆ ತನ್ನ ನೈಜವಾದ ಮಮತೆಯಿಂದ ನನ್ನ ಮೇಲೆ ಪ್ರಸನ್ನಳಾಗಿ ಪ್ರೀತಿಯಿಡುವಷ್ಟುಮಟ್ಟಿಗೆ ಕರುಣೆಯನ್ನು ತೋರಿಸಿದ್ದಾಳೆ. ಇಂತಹ ಮಹಾನುಭಾವಳಾದ ಅವಳಿಗೆ ನಾನು ಹೇಳಿಬರುವಷ್ಟು ಗೌರವವನ್ನೂ ತೋರಿಸಲಿಲ್ಲ. ಆದ್ದರಿಂದ ಕೆಟ್ಟವರ ಸಾಲಿನಲ್ಲಿ ಸೇರಿಸಲು ಅರ್ಹನಾದ ನನ್ನ ವಿಷಯದಲ್ಲಿ ಈಗ ಏನು

ಮತಿಯುಂ ಮೂಢತೆ ಧೈರ್ಯಮಂ ತರಳಭಾವಂ ಲಜ್ಜೆಯಂ ಧಾರ್ಷ್ಟ್ಯಮು
ನ್ನತಿಯಂ ಕ್ಷುದ್ರತೆ ಸತ್ಯಮಂ ಪುಸಿ ದೃಢಪ್ರೀತಿತ್ವಮಂ ಪ್ರೀತಿಶೂ
ನ್ಯತೆ ಮೆಲ್ಪಂ ಕಠಿನತ್ವವಾದರಮನೌದಾಸೀನ್ಯವೊಳ್ಪಂ ಕೃತ
ಘ್ನತೆಯೆಂಬಂತಿರೆ ತದ್ಗುಣೋತ್ಕರಮನೇರ್ವಟ್ಟಿತ್ತು ದೋಷೋತ್ಕರಂ ೮೫

ವ॥ ಅದಱಿಂ

ಏನಂ ಗುಣಲವಮಂ ಪಿಡಿ
ದಾನೆಳಸಿ ಪರಿಗ್ರಹಾರ್ಥದಿಂ ಬಿನ್ನವಿಪೆಂ
ಮಾನಿನಿಗಾ ಮಾನಿನಿಯುಮ
ದೇನೆಂದು ಗಡೆನ್ನನೀಗಳಂಗೀಕರಿಪಳ್ ೮೬

ಪುಸಿಯೊಲವಿಂದಮೆನ್ನನಿರದೊಪ್ಪಿಸಿ ತೋರ್ಪುದಱಿಂದಮಾಂ ಪ್ರತಾ
ರಿಸಿದವನಾಗದಿರ್ದಪನೆ ದೇವಿಯ ಚಿತ್ತಮನಲ್ಲದಂದುಪೇ
ಕ್ಷಿಸಿದವನಾಗದಿರ್ದಪನೆ ನಿಷ್ಕರುಣಾತ್ಮನೆನಿನ್ನದೆಂತು ಜೀ
ವಿಸಿದಪಳೆಂಬ ಸಂದೆಗಮನಾಗಿಪ ಕಾಮಿನಿಗಾದವಸ್ಥೆಯಂ ೮೭

ವ॥ ಇಂತಖಿಲಗುಣವಿಹೀನನಾದೊಡಮೆನ್ನನಾ ನಿಖಿಲ ಗುಣಾಭಿರಾಮೆಯ ಗುಣಸ್ತೋಮಮೆ ಸೇವೆಗೊಡರ್ಚಿದಪ್ಪುದಿನಿತು ಗೆಂಟಾಗಿಯುಂ ಮದನದಹನಸಂತಪ್ತನಾದೆನ್ನನಾ ಸ್ವಭಾವ

ಹೇಳಲಿ ! ೮೫. ನನ್ನ ಬುದ್ಧಿಯನ್ನು ದಡ್ಡತನವೂ, ಧೈರ್ಯವನ್ನು ಚಂಚಲತ್ವವೂ, ನಾಚಿಕೆಯನ್ನು ದಿಟ್ಟತನವೂ, ದೊಡ್ಡತನವನ್ನು ಅಲ್ಪತನವೂ, ಸತ್ಯವನ್ನು ಸುಳ್ಳೂ, ದೃಢವಾದ ಒಲುಮೆಯನ್ನು ಪ್ರೀತಿರಾಹಿತ್ಯವೂ, ಮೃದುತನವನ್ನು ಒರಟುತನವೂ, ಆದರವನ್ನು ಉದಾಸೀನತೆಯೂ, ಒಳ್ಳೆಯತನವನ್ನು ಕೃತಘ್ನತೆಯೂ, ಹೀಗೆ ನನ್ನ ಸದ್ಗುಣಗಳನ್ನೆಲ್ಲಾ ದುರ್ಗುಣಗಳು ಹಾಳುಮಾಡಿಬಿಟ್ಟಿವೆ. ವ॥ ಅದರಿಂದ ೮೬. ನಾನು ಯಾವ ಗುಣಲೇಶವನ್ನು ಮುಂದಿಟ್ಟುಕೊಂಡು ಅವಳನ್ನು ಪ್ರೀತಿಸಿ ನನ್ನನ್ನು ಕೈಹಿಡಿಯಬೇಕೆಂದು ಪ್ರಾರ್ಥಿಸಿಕೊಳ್ಳಲಿ ? ಅವಳು ತಾನೆ ಯಾವ ಗುಣವನ್ನು ನೋಡಿ ನನ್ನನ್ನು ಕೈಹಿಡಿಯುತ್ತಾಳೆ ? ೮೭. ನಾನು ಇಲ್ಲದ ಪ್ರೀತಿಯನ್ನು ತೋರ್ಪಡಿಸಿ, ನನ್ನನ್ನು ಅವಳಿಗೆ ಒಪ್ಪಿಸಿ ಬಿಟ್ಟಿರುವವನಂತೆ ನಟಿಸಿ, ಅವಳ ಮನಸ್ಸನ್ನು ಮೋಸಪಡಿಸಿದವನಲ್ಲವೆ ? ಅಲ್ಲದೆ ಹೇಗೆ ಬದುಕಿರುತ್ತಾಳೆ ? ಎಂಬ ಶಂಕೆಯನ್ನುಂಟುಮಾಡುವಷ್ಟುಮಟ್ಟಿಗೂ ಹದಗೆಟ್ಟಿರುವ ಅವಳ ದುಃಸ್ಥಿತಿಯನ್ನು ಹೀಗೆ ಕನಿಕರವಿಲ್ಲದವನಾಗಿ ಉಪೇಕ್ಷೆ ಮಾಡಿರುವವನಲ್ಲವೆ ? ವ॥ ಹೀಗೆ ಯಾವ ಒಂದು ಒಳ್ಳೆಯ ಗುಣವಿಲ್ಲದವನಾದರೂ ನನ್ನನ್ನು ಸಮಸ್ತ ಸದ್ಗುಣಗಳಿಂದ ಶೋಭಿಸುವ ಅವಳ ಸದ್ಗುಣಗಳ ಸಮೂಹವೆ ಸೇವೆಗೆ ಉದ್ಯುಕ್ತನನ್ನಾಗಿ ಮಾಡುತ್ತದೆ. ಸ್ವಭಾವದಿಂದಲೆ ಸ್ನೇಹಮಯಿಯಾದ ಅವಳ ಸ್ನೇಹವೆ

**ಸರಸತೆಯ ಸರಸತೆಯೆ ರಕ್ಷಿಸಿದಪುದಾ ಸ್ಥಿರಪ್ರಕೃತಿಯ ಸತ್ಯಪ್ರಕೃತಿಯೆ ತೆಗೆಯಿಸಿದಪುದಾ ದಕ್ಷಿಣಹೃದಯೆಯ ದಕ್ಷಿಣತ್ವಮೆ ಗಮಿಯಿಸಿದಪುದಾ ನಿಸರ್ಗವತ್ಸಲೆಯ ವಾತ್ಸಲ್ಯಮೆ ಕೆಯ್ಕೊಳಿಸಿದಪ್ಪುದಾ ಮೃದುಹೃದಯೆಯ ಮೃದುಹೃದಯಮೆ ಚರಣಪತಿತನಂ ಚಪ್ಪರಿಸದಿರ್ಪುದಾ ಮಹಾನುಭಾವೆಯ ಮಹಾನುಭಾವತೆಯೆ ಮಾಣದತಿಸಂಭಾವನೆಗೆಯ್ಸದಪ್ಪುದಾ ಮನೋಹರಾಲಾಪೆಯ ಪ್ರಿಯಾಲಾಪಮೆ ನುಡಿಯಿಸಿದಪ್ಪುದಾ ಮಹೋದಾರೆಯುದಾರತೆಯೆ ಮನಂಗೊಳಿಸಿದಪ್ಪುದೆಂತಾದೊಡಂ ಪೋಗಿ ನಾಣ್ಚದೆ ಮಗುೞಿ ಮೊಗಮಂ ನೋಟ್ಪ ಸಾಹಸಮನಪ್ಪುಕೆಯ್ದಪ್ಪೆನೆಂಬುದರ್ಕತ್ಯುದಾರಂಗಳುಂ ಸತ್ಪ್ರಕೃತಿಗಳುಮಪ್ಪ ದೇವೀಪ್ರಸಾದಂಗಳೆ ಕಾರಣಮಾದಱಿನವು ತಡೆಯದೆ ತಾಮೆ ಅಕಾಲೋಪಸರ್ಪಣಕೋಪಮಂ ನೋಡಿದೊಡನನುನೈಸಲುಂ ಗುಣಾನುವಾದದಿಂ ಲಜ್ಜಿತನಂ ಬರೆತೆಗೆಯಲುಂ ಕಡುಗೆಂಟಾದನಂ ಬೞಿಯಟ್ಟದೆಯುಂ ಬಲ್ಪಿನಿಂ ದೇವಿಯ ಪಾದಮೂಲಮನೆಯ್ದಿಸಲುಂ ಸಾಲ್ವುವೆಂದು ನಿಶ್ಚೈಸಿ ನಿರಪೇಕ್ಷಿತಗಮನಾನುಜ್ಞನಾಗಿ ತಂದೆಯ ನಿಯಾಮದಿಂ ಪೋದನದಲ್ಲದೆಯುಂ**

ಇಷ್ಟು ದೂರದಲ್ಲಿದ್ದರೂ ಕಾಮಾಗ್ನಿಯಿಂದ ಬೆಂದುಹೋಗುತ್ತಿರುವ ನನ್ನನ್ನು ಕಾಪಾಡುವುದು. ಸ್ಥಿರಸ್ವಭಾವವುಳ್ಳ ಅವಳ ಸತ್ಯಪ್ರಕೃತಿಯೆ ನನ್ನನ್ನು ಸೆಳೆಯುತ್ತಿದೆ. ಸರಳವಾದ ಮನಸ್ಸುಳ್ಳ ಅವಳ ನಿಷ್ಕಪಟತನವೆ ಅಲ್ಲಿಗೆ ಬರುವಂತೆ ಮಾಡುತ್ತದೆ. ಮಮತೆಯ ಸ್ವಭಾವವುಳ್ಳ ಅವಳ ಮಮತೆಯೆ ನನ್ನನ್ನು ಅಂಗೀಕರಿಸುವಂತೆ ಮಾಡುತ್ತದೆ. ಆ ಮೃದುಹೃದಯಳ ಮೃದುಹೃದಯವೆ ಕಾಲಿಗೆ ಬೀಳುವ ನನ್ನನ್ನು ಗದರಿಸುವುದಿಲ್ಲ. ಆ ದೊಡ್ಡಸ್ವಭಾವದವಳ ದೊಡ್ಡತನವೆ ನನ್ನನ್ನು ಬಿಡದೆ ಸಂತೋಷಪಡಿಸುತ್ತದೆ. ಹಿತವಾಗಿ ಮಾತನಾಡುವ ಅವಳ ಹಿತವಾದ ಮಾತುಗಳೆ ನನ್ನನ್ನು ಮಾತನಾಡಿಸುತ್ತವೆ. ಧಾರಾಳಸ್ವಭಾವದ ಅವಳ ಧಾರಾಳತನವೆ ನನ್ನನ್ನು ಅಂತರಂಗಕ್ಕೆ ತೆಗೆದುಕೊಳ್ಳುತ್ತದೆ. ಅಲ್ಲದೆ ಹೇಗಾದರೂ ಹೋಗಿ ನಾಚಿಕೆಯನ್ನು ಬಿಟ್ಟು ಮತ್ತೆ ಮುಖವನ್ನು ನೋಡುವ ಸಾಹಸವನ್ನು ಕೈಗೊಳ್ಳಲಿದ್ದೇನೆ ಎಂಬುದಕ್ಕೆ ಬಹಳ ಘನವಾದ ಒಳ್ಳೆಯ ಸ್ವಭಾವದ ಕಾದಂಬರೀದೇವಿಯ ಅನುಗ್ರಹಗಳೇ ಕಾರಣವಾಗಿವೆ. ಅವು ಅಕಾಲದಲ್ಲಿ ಭೇಟಿ ಮಾಡುವುದರಿಂದ ಉಂಟಾದ ಕೋಪವನ್ನು, ನನ್ನನ್ನು ನೋಡಿದ ಕೂಡಲೆ ಶಮನ ಮಾಡುವುದಕ್ಕೂ, ನಾಚಿಕೆಯಿಂದ ಕೂಡಿದ ನನ್ನ ಗುಣಗಳನ್ನು ಹೊಗಳಿ ಹತ್ತಿರಕ್ಕೆ ಬರುವಂತೆ ಮಾಡುವುದಕ್ಕೂ, ಬಹಳ ದೂರದಲ್ಲಿರುವ ನನ್ನನ್ನು ದೂತರನ್ನು ಕಳುಹಿಸದಿದ್ದರೂ ಬಲಾತ್ಕಾರವಾಗಿ ದೇವಿಯ ಪಾದಮೂಲಕ್ಕೆ ಕರೆದೊಯ್ಯುವುದಕ್ಕೂ ಸಾಮರ್ಥ್ಯವನ್ನು ಹೊಂದಿವೆ ಎಂದು ನಿಶ್ಚಯಿಸಿ ಉಜ್ಜಯಿನಿಗೆ ಬರುವಾಗ ಅವಳ ಅನುಮತಿಯನ್ನು ಪಡೆಯದೆ, ತಂದೆಯ ಒಂದು ನಿರೂಪದಿಂದ ಹೊರಟು ಬಂದು

ಅದೆಂತು ದೊರೆಕೊಳ್ಗುಮೆನ್ನ ಬರವಿಂಗೆ ಸಾಫಲ್ಯಮಿ
ನ್ನದೆಂತುಚಿತಮಕ್ಕುಮಾತ್ಮಗುಣಬೃಂದವಿಂತೀ ಜಗ
ಕ್ಕದೆಂತು ನಯನೋತ್ಸವಂ ಸತತಮಕ್ಕುಮಂತಾಗೆ ಯ
ತ್ನದಿಂ ನಿಜಶರೀರಮಂ ನಿಲಿಸವೇಟ್ಪುದಿಂ ದೇವಿಯರ್ ೮೮

ವ॥ ಎಂದು ಬಿನ್ನವಿಸೆಂದು ಬೆಸಸಿ ರಾಜಪುತ್ರಂ ಪತ್ರಲೇಖೆಯನಿಂತೆಂದಂ

ತಡಮೆನಗಿಲ್ಲ ಮದ್ವಿರಹವೇದನೆಯುಂ ನೆನೆಯಲ್ಕಳುಂಬಮೀ
ಯೆಡೆಯೊಳನಾದರಂ ಗೆಯದಿರನ್ಯರ ಪೇಟ್ಕೆಯುದೆಂಬ ಬಟ್ಟೆಯೊಳ್
ನಡೆಯದಿರೇತಱಿಂದಱಿಯದಲ್ಲಿರದಿರ್ ಮಱಿದಾರ್ಗಮಂತರಂ
ಗುಡದಿರನಾರತಂ ಮಱೆಯದಾಗಿಸು ನೀಂ ತನುಗಪ್ಪ ಯತ್ನಮಂ ೮೯

ಇದನಿನ್ನೆಂತೆಂದಪೆಂ ವಲ್ಲಭತರವೆನಗಾದತ್ತು ನಿನ್ನಿಂದಮಂತಾ
ಸುದತೀಪ್ರಾಣಂ ದಲಿನ್ನೀನದನೆ ನಿಲಿಸಲೆಂದೊರ್ಬಳಂ ನಿನ್ನನಿಂತ
ಟ್ಟಿದಪೆಂ ಮಜ್ಜೀವಿತಂ ನಿನ್ನಯ ಕರತಲದೊಳ್ ನೀದುದೆಂತಾದೊಡಂ ಯ
ತ್ನದಿನೆನ್ನಂ ರಕ್ಷಿಸೆಂದಟ್ಕಱಿೊಳೆ ತೆಗೆದು ತಳ್ಕೈಸಿದಂ ರಾಜಪುತ್ರಂ ೯೦

ಬಿಟ್ಟೆ. ಅಲ್ಲದೆ ೮೮. ನಾನು ಅಲ್ಲಿಗೆ ಬರುವುದು ಸಾರ್ಥಕವಾಗುವಂತೆಯೂ, ಅವಳ ಸದ್ಗುಣಗಳಿಗೆ ಒಪ್ಪುವಂತೆಯೂ, ಜನರ ಕಣ್ಣುಗಳಿಗೆ ಅವಳ ದರ್ಶನದಿಂದ ಯಾವಾಗಲೂ ಹಬ್ಬವಾಗುವಂತೆಯೂ ಕಾದಂಬರೀದೇವಿಯರು ತಮ್ಮ ಶರೀರವನ್ನು ಉದಾಸೀನ ಮಾಡದೆ ಕಾಪಾಡಿಕೊಂಡಿರಬೇಕು." ವ॥ ಹೀಗೆ ಕಾದಂಬರಿಗೆ ಅರಿಕೆ ಮಾಡುವಂತೆ ತಿಳಿಸಿ, ರಾಜಕುಮಾರನು ಪತ್ರಲೇಖೆಯನ್ನು ಕುರಿತು ಮತ್ತೆ ಹೀಗೆ ಹೇಳಿದನು. ೮೯. "ಪತ್ರಲೇಖೆ, ನಾನು ವಿಳಂಬ ಮಾಡುವುದಿಲ್ಲ. ನನ್ನ ವಿರಹವೇದನೆಯಾದರೋ ನೆನಸಿಕೊಳ್ಳಲೂ ಅಸಾಧ್ಯವಾಗಿದೆ. ಈ ವಿಷಯವನ್ನು ಉದಾಸೀನ ಮಾಡಬೇಡ. ಯಾರು ಯಾರೋ ತೋರಿಸಿದ ದಾರಿಯಲ್ಲಿ ಹೋಗಬೇಡ. ಗುರುತಿಲ್ಲದ ಕಡೆ ಇರಬೇಡ. ಎಲ್ಲಾದರೂ ಮರೆತು ಪರಿಚಯವಿಲ್ಲದವರಿಗೆ ಅವಕಾಶವನ್ನು ಕೊಟ್ಟುಬಿಟ್ಟೀಯೆ. ಮುಖ್ಯವಾಗಿ ಸ್ವಲ್ಪವೂ ಉಪೇಕ್ಷೆ ಮಾಡದೆ ನಿನ್ನ ಶರೀರದ ರಕ್ಷಣೆ ಮತ್ತು ಪೋಷಣೆಗೆ ಸರಿಯಾಗಿ ಗಮನಕೊಡು. ೯೦. ನಾನು ಇನ್ನು ಏನು ಹೇಳಲಿ ? ಈಗ ನನಗೆ ನಿನಗಿಂತಲೂ ಕಾದಂಬರಿಯ ಪ್ರಾಣವು ಹೆಚ್ಚಾಗಿದೆ. ಆದ್ದರಿಂದ ಅದನ್ನು ಉಳಿಸಬೇಕೆಂದು ನಿನ್ನೊಬ್ಬಳನ್ನೇ ಕಳುಹಿಸಿಕೊಡುತ್ತಿದ್ದೇನೆ. ಈಗ ನನ್ನ ಪ್ರಾಣವು ನಿನ್ನ ಕೈಯಲ್ಲಿದೆ. ಹೇಗಾದರೂ ಪ್ರಯತ್ನಿಸಿ ನನ್ನನ್ನು ಕಾಪಾಡು" ಎಂದು ಹೇಳಿ ಯುವರಾಜನು ಅವಳನ್ನು

ವ॥ ಅನಂತರಮೀ ಬಿನ್ನಪಮಂ ಪತ್ರಲೇಖೆ ಮಱೆಯದಂತು ಮಾಳ್ಪುದೆನ್ನನೊಡ ಗೊಂಡು ಪೋಗಲ್ಕೀಕೆವೆರಸು ಮಹಾಶ್ವೇತಾಶ್ರಮಕ್ಕೆ ನೀನೆ ಮಗುೞ್ಚಿ ಬರ್ಪುದೆಂದು ಕೇಯೂ ರಕಂಗೆ ಬೆಸಸಿ ಬೀೞ್ಕೊಳಿಸಲೊಡಮವನನೇಕಾಶ್ವೀಯಬಲಸಮನ್ವಿತನಪ್ಪ ಮೇಘನಾದಂಬೆರಸು ಪೋದನಿತ್ತ ನೃಪರೂಪಚಂದ್ರನವರಗಲ್ಕೆಯಿಂ ಸಚಿಂತನಾಗಿ ಕಿಱಿದುಬೇಗಮಿರ್ದು ಕಟಕ ವಾರ್ತೆಗೆ ವಾರ್ತಾಹರರನಟ್ಟಿ ತಾನುಂ ವೈಶಂಪಾಯನಂಗಿದಿರ್ವೋಪುದರ್ಕೆ ಬೀೞ್ಕೊಳಲೆಂದು ತಂದೆಯುಲ್ಲಿಗೆವಂದು ಕೃತಪ್ರಣಾಮನಾಗಿ ಓಲೈಸುತ್ತಮಿರೆ ತಾರಾಪೀಡಂ ಸರ್ವಾಂಗಸುಂದರನಪ್ಪ ಕುಮಾರನಂಗಪ್ರತ್ಯಂಗಂಗಳನತಿಪ್ರೀತಿಯಿಂ ಕರತಲದಿನೆಟವುತ್ತಮಿರ್ದು

ಘನಶೌರ್ಯಾನಲಧೂಮವಲ್ಲಿ ವದನಾಂಭೋಜಾಳಿನೀಮಾಲೆ ಯೌ
ವನಗಂಧದ್ವಿಪದಾನಲೇಖೆ ವಪುರಾಲೇಖ್ಯಪ್ರಭೋನ್ಮೀಲನಾಂ
ಜನರುಗ್ಲೇಖೆ ವಿವಾಹಮಂಗಳಕಿದೇ ಭ್ರೂಸಂಜ್ಞೆಯೆಂಬಂತೆ ಚೆ
ಲ್ವನದೇಂ ಶ್ಮಶ್ರುವಿಕಾಸರೇಖೆ ತಳೆದತ್ತೀಗಳ್ ಕುಮಾರಾಸ್ಯದೊಳ್ ೯೧

ವ॥ ಎಂದು ತನ್ನೊಳೆ ಭಾವಿಸುತ್ತಿರ್ದ ತಾರಾಪೀಡನ ಮನೋಗತಾಭಿಪ್ರಾಯಮನ ಱಿದು ಶುಕನಾಸನಿಂತೆಂದಂ

ಪ್ರೀತಿಯಿಂದ ತಬ್ಬಿಕೊಂಡನು. ವ॥ ಬಳಿಕ "ಈ ನನ್ನ ಬಿನ್ನಹವನ್ನು ಪತ್ರಲೇಖೆಯು ಮರೆಯದಂತೆ ನೋಡಿಕೊ ಮತ್ತು ನನ್ನನ್ನು ಕರೆದುಕೊಂಡು ಹೋಗುವುದಕ್ಕಾಗಿ ಮಹಾ ಶ್ವೇತೆಯ ಆಶ್ರಮಕ್ಕೆ ಇವಳನ್ನೂ ಕರೆದುಕೊಂಡು ನೀನೇ ಮತ್ತೆ ಬರಬೇಕು" ಎಂದು ಕೇಯೂರಕನಿಗೆ ಅಪ್ಪಣೆ ಮಾಡಿ ಪ್ರಯಾಣ ಮಾಡಿಸಿದನು. ಬಳಿಕ ಕೇಯೂರಕನು ಅನೇಕ ಕುದುರೆಪಡೆಯೊಂದಿಗೆ ಕೂಡಿಕೊಂಡು ಬಂದ ಮೇಘನಾದನೊಂದಿಗೆ ಪ್ರಯಾಣ ಬೆಳೆಸಿದನು. ಈ ಕಡೆ ಚಂದ್ರಾಪೀಡನು ಅವರ ಅಗಲಿಕೆಯಿಂದ ಚಿಂತಾಕ್ರಾಂತನಾಗಿ ಅಲ್ಲಿಯೆ ಸ್ವಲ್ಪಕಾಲವಿದ್ದು, ಬರುತ್ತಿರುವ ಸೈನ್ಯದ ಸಮಾಚಾರವನ್ನು ತಿಳಿದುಕೊಂಡು ಬರಲು ದೂತರನ್ನು ಕಳುಹಿಸಿದನು. ತಾನೂ ವೈಶಂಪಾಯನನನ್ನು ಎದುರುಗೊಂಡು ಕರೆತರುವುದಕ್ಕೆ ಅನುಮತಿಯನ್ನು ಪಡೆಯಲು ತಂದೆ ಇದ್ದಲ್ಲಿಗೆ ಬಂದು ನಮಸ್ಕರಿಸಿ ಪಕ್ಕದಲ್ಲಿ ನಿಂತಿರಲು, ತಾರಾಪೀಡನು ಸರ್ವಾಂಗಸುಂದರನಾದ ಕುಮಾರನ ಅಂಗೋ ಪಾಂಗಗಳನ್ನು ಬಹಳ ಪ್ರೀತಿಯಿಂದ ತನ್ನ ಕೈಯಿಂದ ನೇವರಿಸುತ್ತಿದ್ದು ೯೧. "ಈಗ ಈ ಕುಮಾರನ ಮುಖದಲ್ಲಿ ಮೂಡುತ್ತಿರುವ ಗೆರೆ-ಮೀಸೆಯು ಇವನ ಘನವಾದ ಪರಾ ಕ್ರಮವೆಂಬ ಅಗ್ನಿಯ ಬಳ್ಳಿಯಂದದ ಹೊಗೆಯಂತೆಯೂ, ಮುಖಕಮಲದಲ್ಲಿ ಕೂಡಿ ರುವ ದುಂಬಿಗಳ ಸಾಲಿನಂತೆಯೂ, ಹರಯವೆಂಬ ಮದ್ದಾನೆಯ ಮದೋದಕದ ಗೆರೆ ಯಂತೆಯೂ, ಶರೀರವೆಂಬ ಚಿತ್ರದ ಶೋಭೆಯನ್ನು ಮೂಡಿಸುವ ನೀಲವರ್ಣದ ಜೀವ ರೇಖೆಯಂತೆಯೂ, ವಿವಾಹಮಂಗಳವನ್ನು ನೆರವೇರಿಸಲು ಕೊಡುವ ಹುಬ್ಬಿನ ಸಂಕೇತ ದಂತೆಯೂ ಸೊಬಗನ್ನು ಪಡೆದಿದೆ" ವ॥ ಎಂದು ತನ್ನಲ್ಲೇ ಆಲೋಚಿಸುತ್ತಿದ್ದ ತಾರಾ

ವಿವಿಧಾಶೇಷಕಲಾಧಿಪತ್ಯಪದಮಂ ಕೆಯ್ಕೊಂಡನೇಕಾತಪ
ತ್ರವೆನಲ್ ಭಾವಿಸಿದು ಜಗತ್ಪ್ರಭುತೆಯುಂ ಪಾರ್ವಂತುಟನ್ನೇನೊ ದೇ
ವವಧೂಸಂಗತನಾಗೆ ಮಾಡಿ ಬಟಿಯಿಂ ನಿನ್ನೀ ಕುಮಾರಾನನೇಂ
ದುವನಾನಂದದೆ ನೋಡಿ ಮಾಡುವುದು ನೀಂ ನೋಟಕ್ಕೆ ಸಾಫಲ್ಯಮಂ ೯೨

ವ॥ ಎಂಬುದುಂ ತಾರಾಪೀಡನಿದೇ ಚಿತ್ತದೊಳಿರ್ದುದಾದೊಡಂ ವೈಶಂಪಾಯನನುಂ ಬಂದೊಡಲ್ಲದೊಂದುವಂ ಮಾಡಲಱಿಯದಿರ್ದನೆನಲೊಡಂ ಲಜ್ಜಾವನತವದನನಾಗಿ ಯುವರಾಜ ನುಮದನೆ ಮನದೆಗೊಂಡೆನ್ನ ಮನೋರಥಂ ನೀಡಿರದೆ ಕೂಡಿದಪ್ಪುದೆಮ್ಮಯ್ಯಂ ವೈಶಂಪಾಯನನ ಬರವನೆ ಪಾರ್ದಿರ್ದಪನದುವೆ ಕಾದಂಬರೀದರ್ಶನಕ್ಕಂತರಮಾಗಿರ್ಪುದೆಂದು ತನ್ನೊಳೆ ಬಗೆದು ಚಿಂತಿಸುತ್ತಂ ಸಂತಸದಂತನೆಯ್ದೆ ಕಿಱಿದುಬೇಗಕ್ಕೆ ತದಾಸ್ಥಾನದಿಂದುತ್ಥಿತನಾಗಿ

ವಿನಯಭರಾವನಮ್ರತನುವಪ್ಪ ತನೂಭವನಂಸದೇಶದೊಳ್
ವನಧಿವೃತಾವನೀಭರಧುರಂಧರ ದಕ್ಷಿಣಬಾಹುದಂಡಮಂ
ಮನವೊಸೆದಿಕ್ಕಿ ಮಂತ್ರಿ ಶುಕನಾಸಸಮೇತನಿಳಾಧಿನಾಥನೊ
ಯ್ಯನೆ ನಡೆತಂದನಾ ವಿಭು ವಿಲಾಸವತೀಭವನಕ್ಕೆ ಲೀಲೆಯಿಂ ೯೩

ಪೀಡನ ಇಂಗಿತವನ್ನು ತಿಳಿದು ಶುಕನಾಸನು ಹೀಗೆ ಹೇಳಿದನು. ೯೨. "ದೇವ, ಯುವ ರಾಜನು ಸಮಸ್ತ ಕಲೆಗಳಲ್ಲೂ ಸಂಪೂರ್ಣ ಪಾಂಡಿತ್ಯವನ್ನು ಪಡೆದಿದ್ದಾನೆ. ಜಗತ್ತಿನ ಪ್ರಭುತ್ವವನ್ನು ತನ್ನ ಏಕಚ್ಛತ್ರಾಧಿಪತ್ಯಕ್ಕೆ ಒಳಪಡಿಸಿದ್ದಾನೆ. ಇನ್ನು ನೋಡುವುದೇನಿದೆ ? ಇವನಿಗೆ ಮದುವೆಮಾಡಿ ಸೊಸೆಯೊಂದಿಗೆ ಕೂಡಿರುವ ಕುಮಾರನ ಮುಖಚಂದ್ರನನ್ನು ಆನಂದದಿಂದ ನೋಡಿ ನೀವು ಕಣ್ಣುಗಳನ್ನು ಸಾರ್ಥಕ ಮಾಡಿಕೊಳ್ಳಬೇಕು." ವ॥ ಎಂದು ಹೇಳಲಾಗಿ ತಾರಾಪೀಡನು ಮನಸ್ಸಿನಲ್ಲಿ ಇದೇ ಅಭಿಪ್ರಾಯವನ್ನು ಹೊಂದಿದ್ದರೂ ವೈಶಂಪಾಯನನು ಬರುವವರೆಗೂ ಏನೂ ಮಾಡುವಂತಿಲ್ಲ" ಎಂದನು. ಯುವರಾಜನು ನಾಚಕೆಯಿಂದ ಮುಖವನ್ನು ತಗ್ಗಿಸಿಕೊಂಡು ಅದೇ ಅಭಿಪ್ರಾಯವನ್ನು ಮನಸ್ಸಿನಲ್ಲಿ ತಾಳಿ "ನನ್ನ ಮನೋರಥವು ತಡವಿಲ್ಲದೆ ಈಡೇರುತ್ತದೆ. ನಮ್ಮ ತಂದೆಯು ವೈಶಂಪಾ ಯನನ ಆಗಮನವನ್ನೇ ಎದುರುನೋಡುತ್ತಿದ್ದಾನೆ. ಇಷ್ಟುಮಾತ್ರ ಕಾದಂಬರೀ ದರ್ಶನಕ್ಕೆ ಅಡ್ಡಿಯಾಗಿದೆ !" ಎಂದು ಚಿಂತಿಸುತ್ತ ಸಂತೋಷದ ಪರಾಕಾಷ್ಠೆಯನ್ನು ಹೊಂದಿದನು. ತಾರಾಪೀಡನು ಸ್ವಲ್ಪಕಾಲದನಂತರ ಆ ಸ್ಥಾನದಿಂದ ಎದ್ದನು. ೯೩. ಅತ್ಯಧಿಕವಾದ ವಿನಯದಿಂದ ತಗ್ಗಿದ ದೇಹವುಳ್ಳ ಮಗನ ಹೆಗಲಮೇಲೆ ಸಮುದ್ರದಿಂದ ಸುತ್ತುವರಿಯಲ್ಪಟ್ಟ ಭೂಮಿಯ ಭಾರವನ್ನು ಹೊರಲು ಸಮರ್ಥವಾದ ತನ್ನ ದಂಡಾ ಕಾರವಾದ ಬಲದೋಳನ್ನು ಪ್ರೀತಿಯಿಂದಿಟ್ಟು, ಮಂತ್ರಿಯಾದ ಶುಕನಾಸನೊಂದಿಗೆ ಕೂಡಿ ಮಹಾರಾಜನು ಮೆಲ್ಲನೆ ವಿಲಾಸವತಿಯ ಅಂತಃಪುರಕ್ಕೆ ವಿನೋದದಿಂದ

ವ॥ ಆಗಳಿಂದೂದಯಾವಲೋಕನದಿಂ ವಿಲೋಲಮಾದ ಸಮುದ್ರವೇಲೆಯಂತೆ ಸಂಭ್ರಮದಿನಿದಿರೆೞ್ದ ವಿಲಾಸವತೀಮಹಾದೇವಿಯ ಮೊಗಮಂ ರಾಜಾಧಿರಾಜಂ ನೋಡಿ

ಪದೆಯುತ್ತಿರ್ದೆ ವಧೂವಿಲೋಕನಸುಖಕ್ಕೆಂದುಂ ವಿವಾಹೋತ್ಸವ
ಕ್ಕಿದೆ ನೋಡಾಗ್ರಹಮಂ ಕುಮಾರವದನಶ್ಮಶ್ರೂದ್ಗಮಂ ಮಾಡಿದ
ಪ್ಪುದು ನಿಮ್ಮಿಜ್ಜುಗಮೇನೊ ಪೇೞ್ ನೆ ಕರಂ ನಾಣ್ಚಿರ್ಪುದುಂ ದೇವಿ ಪೇ
ೞದಿರಲ್ ಕಾರಣವೇಂ ಮಗಂಗೆ ಪಿರಿದುಂ ನೀಂ ಕೂರ್ಪುದಿಲ್ಲಾಗದೇ ೯೪

ವ॥ ಎಂದಿವು ಮೊದಲಾಗಿ ಪಲವುಂ ನರ್ಮಾಲಾಪಂಗಳಿಂದವೆ ಸುಖಾಯಮಾನಸ್ವಾಂತನಾಗಿ ರಾಜಾಧಿರಾಜಂ ಕಿಱಿದುಬೇಗಮಿರ್ದು ಪೋಪುದುಂ ಚಂದ್ರಾಪೀಡನುಂ ವೈಶಂಪಾಯನ ಪ್ರತ್ಯುದ್ಗಮನಾರ್ಥಂ ಶುಕನಾಸಮುಖದಿಂ ತಂದೆಯಂ ಬೆಸಗೊಂಡು ನಿಜರಾಜಭವನಕ್ಕೆ ಬಂದು ಗಮನಸಂವಿಧಾನವಿನೋದದಿಂದಮಾ ಪಗಲಂ ಕಳೆದು ಸುಹೃದ್ದರ್ಶನೋತ್ಸುಕಚಿತ್ತನಾಗಿ ಶಯನತಲಕ್ಕೆವಂದೆಚ್ಚತ್ತಂದದೊಳೆ ಯಾಮಿನೀಯಾಮದ್ವಯಮಂ ಕಳಿಪಿ

ಮನವೊಲ್ದು ಯಾಮಿನೀಕಾ
ಮಿನಿಯಂ ತನ್ನಯ ಕರಂಗಳಿಂ ಚಂದ್ರಂ ಚಂ
ದನರಸಮಂ ಪೂಸಿದನೆಂ
ಬಿನಮೆಸೆದುದು ಸಾಂದ್ರಚಂದ್ರಿಕಾವಿಸ್ತಾರಂ ೯೫

ಬಂದನು. ವ॥ ಆಗ ಚಂದ್ರೋದಯದ ದರ್ಶನದಿಂದ ಚಲಿಸುವ ಸಮುದ್ರಜಲದಂತೆ ಸಂಭ್ರಮದಿಂದ ಇದಿರೆದ್ದ ವಿಲಾಸವತೀಮಹಾರಾಣಿಯ ಮುಖವನ್ನು ಚಕ್ರವರ್ತಿಯು ನೋಡಿ ೯೪. "ಮಹಾರಾಣಿ, ಸೊಸೆಯ ಮುಖವನ್ನು ನೋಡಿ ಸಂತೋಷಪಡಬೇಕೆಂದು ಯಾವಾಗಲೂ ತವರಿಸುತ್ತಿದ್ದೆಯಲ್ಲ! ಈಗ ನೋಡು! ಮಗನ ಮುಖದಲ್ಲಿ ಮೂಡಿರುವ ಮೀಸೆಯು 'ಬೇಗ ಮದುವೆ ಮಾಡಿಬಿಡಿ!' ಎಂದು ನಮ್ಮನ್ನು ಒತ್ತಾಯ ಮಾಡುತ್ತಿದೆ! ನಿನ್ನ ಉದ್ದೇಶವೇನು? ಹೇಳು" ಎಂದು ಕೇಳಿದನು. ವಿಲಾಸವತಿಯು ನಾಚಿಕೆಯಿಂದ ಸುಮ್ಮನಿದ್ದಳು. ರಾಜನು "ದೇವಿ, ಹೇಳದಿರಲು ಕಾರಣವೇನು? ಮಾತನಾಡದಿದ್ದರೆ 'ಮಗನನ್ನು ನೀನು ಪ್ರೀತಿಸುವುದಿಲ್ಲ' ಎಂದಾಗುವುದಿಲ್ಲವೆ!" ಎಂದನು. ವ॥ ಇದೇ ಮೊದಲಾದ ಹಲವು ಬಗೆಯ ಪರಿಹಾಸ ವಚನಗಳಿಂದ ಸಂತೋಷಗೊಂಡ ಮನಸ್ಸುಳ್ಳವನಾಗಿ ತಾರಾಪೀಡನು ಸ್ವಲ್ಪಕಾಲವಿದ್ದು ಹೊರಟುಹೋದನು. ಚಂದ್ರಾಪೀಡನು ವೈಶಂಪಾಯನನನ್ನು ಎದುರುಗೊಳ್ಳುವುದಕ್ಕಾಗಿ ಶುಕನಾಸನ ಮೂಲಕ ತಂದೆಯಿಂದ ಅನುಮತಿಯನ್ನು ಪಡೆದು, ತನ್ನ ಅರಮನೆಗೆ ಬಂದು ಪ್ರಯಾಣದ ಏರ್ಪಾಡುಗಳ ವಿನೋದದಿಂದ ಆ ಹಗಲನ್ನು ಕಳೆದು, ಗೆಳೆಯನನ್ನು ನೋಡಬೇಕೆಂಬ ಕುತೂಹಲದಿಂದ ಕೂಡಿದ ಮನಸ್ಸುಳ್ಳವನಾಗಿ ಹಾಸಿಗೆಯಲ್ಲಿ ಮಲಗಿ ಎಚ್ಚರವಾಗಿಯೆ ಇರುಳಿನ ಎರಡು ಜಾವಗಳನ್ನು ಕಳೆದನು. ೯೫. ಚಂದ್ರನೆಂಬ ನಾಯಕನು ರಾತ್ರಿಯೆಂಬ ನಾಯಿಕೆಗೆ ತನ್ನ ಕಿರಣಗಳೆಂಬ ಕೈಗಳಿಂದ ಪ್ರೀತಿಪೂರ್ವಕವಾಗಿ

ಮೋಗೆನಿಸಿರ್ದದೊಂದು ಸಕಲಗ್ರಹತೇಜಮನೊಯ್ಯನಿಂಗಿಸು  
ತ್ತಾಗಸಮಂ ನೆಲಕ್ಕಿಟಿಪುತಿರ್ದಪನೀ ನೆಲನಂ ಹಿಮಾಂಶು ಮೇ  
ಣಾಗಸಕೆತ್ತುತಿರ್ದಪನೆನಲ್ಕನಿತುಂ ಬಿಳಿದಾಗೆ ರೋದಸೀ  
ಭಾಗಮನಾವಗಂ ತಗುಳೆ ಪೆರ್ಚಿಸಿದಂ ನಿಜರಶ್ಮಿಜಾಲಮಂ ೯೬

ವನಜದಳಂಗಳೊಳೊಂದೊಂ  
ದನೆ ಮುಗಿಯಿಸಿ ಕುಮುದವನದಳಂಗಳೊಳೊಂದೊಂ  
ದನೆ ಪಿಡಿದಲರ್ಚುತಿರ್ದಪು  
ದನೆ ಪೂಗೊಳದೊಳಗೆ ಪೊಳೆದುವಿಂದುಕರಂಗಳ್ ೯೭

ಗಿರಿಶಿಖರಂಗಳೊಳ್ ಪರೆದು ಸೌಧಗೃಹಂಗಳೊಳೊಂದಿ ರಥ್ಯೆಯೊಳ್  
ಪರಿದು ಸರಸ್ತರಂಗಿಕೆಗಳೊಳ್ ಪೊರೆದಂಚೆಗಳೋಳಿವೆಳ್ಪಿನೊಳ್  
ಬೆರಸಿ ಲತಾಂಗಿಯರ್ಕಳ ಕದಂಪುಗಳೊಳ್ ಪುದಿದಿಂದುಕಾಂತದಿಂ  
ಸುರಿವ ಜಲಂಗಳಿಂ ತೊಳೆದು ಪರ್ವಿದುದಿಂದುಮರೀಚಿಮಾಲೆಗಳ್ ೯೮

ಸುರತಾಂತಶ್ರಾಂತಿಯಿಂ ನೀರಡಿಸಿದಬಲೆಯರ್ಗೀಂಟಲೌತ್ಸುಕ್ಯದಿಂ ನ  
ಲ್ಲರೊಳೊಂದಲ್ ಪೋಪ ನಾರೀಜನಕೆ ಪಜಿಗಲೆಂದೇಜಲುದ್ಯಾನಮಾಲಾಂ  
ತರದೊಳ್ ಬಚ್ಚಲ್ಗಳಂ ತಿರ್ದಿಸಲವಿರಳ ಘರ್ಮಾರ್ದ್ರಕಾಂತಾಜನಕ್ಕಾ  
ದರದಿಂ ಮಾರಾಟಮಾಡಲ್ ನೆಱೆಗುಮೆನೆ ಪೊದಟ್ದತ್ತು ಚಂದ್ರಾಂಶುಜಾಲಂ ೯೯

ಬಿಳಿಯ ಗಂಧದ ರಸವನ್ನು ಲೇಪನ ಮಾಡಿದ್ದಾನೋ ಎಂಬಂತೆ ದಟ್ಟವಾದ ಬೆಳದಿಂಗಳ ಪ್ರಸಾರವು ಶೋಭಿಸುತ್ತಿತ್ತು. ೯೬. ಚಂದ್ರನು ಎಲ್ಲಾ ಗ್ರಹಗಳ ಹೆಚ್ಚಾದ ಬೆಳಕನ್ನೆಲ್ಲಾ ತನ್ನ ಕಾಂತಿವಿಶೇಷದಿಂದ ಮೆಲ್ಲನೆ ಮುಚ್ಚುತ್ತಾ, ಆಕಾಶವನ್ನು ಭೂಮಿಗೆ ಇಳಿಸುತ್ತಿರುವವನಂತೆಯೂ ಭೂಮಿಯನ್ನು ಆಕಾಶಕ್ಕೆ ಎತ್ತುತ್ತಿರುವವನಂತೆಯೂ ಕಾಣುವಂತೆ ಎಲ್ಲವೂ ಬೆಳ್ಳಗಾಗಲು ಭೂಮ್ಯಂತರಿಕ್ಷಗಳನ್ನು ಆವರಿಸುವಂತೆ ತನ್ನ ಕಿರಣಗಳನ್ನು ವಿಸ್ತರಿಸಿದನು. ೯೭. ತಾವರೆದಳಗಳನ್ನು ಒಂದೊಂದನ್ನಾಗಿ ಮುಚ್ಚಿಸಿ, ಕನ್ನೈದಿಲೆದಳಗಳನ್ನು ಒಂದೊಂದನ್ನೂ ಹಿಡಿದು ಅರಳಿಸುತ್ತಿವೆಯೋ ಎಂಬಂತೆ ತಾವರೆಗೊಳದಲ್ಲಿ ಚಂದ್ರನ ಕಿರಣಗಳು ಹೊಳೆಯುತ್ತಿದ್ದುವು. ಚಂದ್ರನ ಕಿರಣಗಳ ಸಮೂಹವು ಬೆಟ್ಟದ ಶಿಖರಗಳಲ್ಲಿ ೯೮. ಹರಡಿಕೊಂಡು ದೊಡ್ಡ ದೊಡ್ಡ ಮಹಲುಗಳಲ್ಲಿ ಸೇರಿ, ರಾಜಮಾರ್ಗದಲ್ಲಿ ಹರಿದಾಡಿ, ಸರೋವರದ ಅಲೆಗಳಲ್ಲಿ ವೃದ್ಧಿ ಹೊಂದಿ, ರಾಜಹಂಸಗಳ ಪುಂಜೀಭೂತವಾದ ಧವಳವರ್ಣದಲ್ಲಿ ಕೂಡಿಕೊಂಡು, ಸುಂದರಿಯರ ಕೆನ್ನೆಗಳಲ್ಲಿ ಸೇರಿಕೊಂಡು, ಚಂದ್ರಕಾಂತಶಿಲೆಗಳಿಂದ ಸುರಿಯುತ್ತಿರುವ ನೀರುಗಳಿಂದ ತೊಳೆಯಲ್ಪಟ್ಟು ಹರಡುತ್ತಿತ್ತು. ೯೯. ರತಿಕ್ರೀಡೆಯಿಂದ ಉಂಟಾದ ಬಳಲಿಕೆಯಿಂದ ನೀರಡಸಿರುವ ಅಬಲೆಯರಿಗೆ ನೀರು ಕುಡಿಯುವುದಕ್ಕೆ ಉಪಯೋಗವಾಗುವಂತೆಯೂ, ಹುರುಪಿನಿಂದ ಇನಿಯರನ್ನು ಕೂಡಲು ಹೋಗುತ್ತಿರುವ ಕಾಮಿನಿಯರಿಗೆ ಹರಿಗೋಲೆಂದು ಏರಿಹೋಗಲು ಅನುಕೂಲವಾಗಿರುವಂತೆಯೂ,

ವ॥ ಅಂತುಜ್ವಲವಾದ ಚಂದ್ರಿಕಾವಿಲಾಸದಿಂ ಮನುಜೇಂದ್ರಚಂದ್ರಂ ದ್ವಿಗುಣೀಕೃತ ಗಮನೋತ್ಸಾಹನಾಗಿ ಗಮನಸಂಜ್ಞಾಶಂಖಮಂ ಪೂರಿಸಲ್ವೇಟ್ಟಾದಗಳ್

ನಗರಪ್ರಾಕಾರಕೂಟೋತ್ಕರದೊಳೆಜಿಗಿತೆಂಬಂತೆ ಹರ್ಮ್ಯಾವಳೀಕು
ಕ್ಷಿಗಳೊಳ್ ಕೆಯ್ಗೆಯ್ದುದೆಂಬಂತುಪವನತಳದೊಳ್ ತಳ್ತುದೆಂಬಂತೆ ದಿಗ್ಬಾ
ಜಿಗಳೊಳ್ ಧಿಂಕಿಟ್ಟುದೆಂಬಂತನಿಲಪಥದೊಳಾವರ್ತಿಸುತ್ತಿರ್ದುದೆಂಬಂ
ತೊಗೆದತ್ತುತ್ತಾರರಾಗಂ ತ್ರಿಭುವನಭವನೋದ್ಭೇದಿ ಶಂಖಪ್ರಣಾದಂ ೧೦೦

ವ ತದನಂತರಂ

ಘನಮಾರ್ಗಂ ಕುಂತಶಾಖಾಕಬಳಿತಮಖಿಲೋರ್ವೀವಿಭಾಗಂ ಖುರಾನೀ
ಕನಿರುದ್ಧಂ ಶ್ರೋತ್ರಪಾತ್ರೋದರಮವಿರಳ ಹೇಷಾರವಾಪೂರಿತಂ ರಾ
ಜನಿವಾಸದ್ವಾರದೇಶಂ ವಿಗಳದಮಲಫೇನಪ್ರತಾನಾಂಚಿತಂ ತಾ
ನೆನೆರ ತ್ನಾಭೋಗರೋಚಿರ್ಜಟಿಲತತನು ಬಂದತ್ತನಂತಾಶ್ವಜಾಲಂ ೧೦೧

ಉದ್ಯಾನವನಗಳಲ್ಲಿ ಅತ್ಯಧಿಕವಾದ ಸೆಕೆಯಿಂದ ಬೆವರಿ ಒದ್ದೆಯಾದ ಶರೀರವುಳ್ಳ ಮಹಿಳೆಯರಿಗೆ ಜಲಕ್ರೀಡೆಯಾಡಲು ಉಪಯೋಗವಾಗುವ ಕಾಲುವೆಗಳಂತೆಯೂ ಇದ್ದ ಬೆಳದಿಂಗಳು ಹರಡುತ್ತಿತ್ತು. ಟಿ. ಬೆಳದಿಂಗಗಳ್ನು ನೀರೆಂದು ಭ್ರಮಿಸಿ ಕಾಮಿನಿಯರು ಕುಡಿಯಲು ಪ್ರಯತ್ನಿಸುತ್ತಿದ್ದರು, ಹರಿಗೋಲೆಂದು ಭ್ರಮಿಸಿ ಏರಲು ಹೋಗುತ್ತಿದ್ದರು, ಕಾಲುವೆಯೆಂದು ಭ್ರಮಿಸಿ ಜಲಕ್ರೀಡೆಯಾಡಲು ಮನಸ್ಸುಮಾಡುತ್ತಿದ್ದರು ಎಂದು ಅಭಿಪ್ರಾಯ. (ಸಂಸ್ಕೃತ ಕಾದಂಬರಿಯಲ್ಲಿಲ್ಲ.) ವ॥ ಹೀಗೆ ಪ್ರಕಾಶಮಾನವಾದ ಬೆಳದಿಂಗಳ ಶೋಭೆಯಿಂದ ಚಂದ್ರಾಪೀಡನು ಇಮ್ಮಡಿ ಯಾದ ಗಮನೋತ್ಸಾಹವುಳ್ಳವನಾಗಿ ಪ್ರಯಾಣಸೂಚಕವಾದ ಶಂಖವನ್ನು ಊದು ವಂತೆ ಅಪ್ಪಣೆ ಮಾಡಿದನು." ಆಗ ೧೦೦. ಪಟ್ಟಣದ ಕೋಟೆಯ ತುದಿಗಳನ್ನು ಮುತ್ತಿ ಕೊಂಡಂತೆಯೂ, ಉಪ್ಪರಿಗೆಮನೆಗಳ ಸಾಲುಗಳ ಮಧ್ಯವನ್ನು ಸಿಂಗರಿಸುವಂತೆಯೂ, ಉದ್ಯಾನವನಗಳಲ್ಲಿ ದಟ್ಟೈಸಿದಂತೆಯೂ, ದಿಗಂತಗಳನ್ನು ದಾಟಿ ಹೋದಂತೆಯೂ ವಾಯುಮಾರ್ಗದಲ್ಲಿ ಸುತ್ತಾಡುತ್ತಿರುವಂತೆಯೂ ಮೂರು ಲೋಕವೆಂಬ ಮನೆಯನ್ನು ಒಡೆದುಹಾಕುವಂತೆಯೂ ತೋರುವ ಗಂಭೀರವಾದ ಶಂಖನಾದವು ಮೊಳಗಿತು. ವ॥ ಅನಂತರದಲ್ಲಿ ೧೦೧. ಆಕಾಶಮಾರ್ಗವೆಲ್ಲ ಭರ್ಜಿಗಳ ತುದಿಗಳಿಂದ ಆವರಿಸ ಲ್ಪಟ್ಟಂತೆಯೂ, ಭೂತಲವೆಲ್ಲ ಗೊರಸುಗಳಿಂದ ತುಂಬಿಕೊಂಡಂತೆಯೂ, ಕರ್ಣವಿವರ ಗಳೆಲ್ಲ ದಟ್ಟವಾದ ಕೆನೆಯುವ ಧ್ವನಿಯಿಂದ ತುಂಬಿಕೊಂಡಂತೆಯೂ, ಅರಮನೆಯ ಮುಂಭಾಗವೆಲ್ಲ ಕುದುರೆಗಳ ಬಾಯಿಂದ ಸೋರುತ್ತಿರುವ ನೊರೆಗಳಿಂದ ತುಂಬಿ ಕೊಂಡಂತೆಯೂ, ರತ್ನಮಯವಾದ ಆಭರಣಗಳ ಕಾಂತಿಯಿಂದ ವ್ಯಾಪ್ತವಾದ ಶರೀರ

ವ॥ ಅನಂತರಂ ಪಲ್ಲಣಿಸಿದಿಂದ್ರಾಯುಧಮಂ ಗೃಹೀತಸಮಾಯೋಗನಾಗಿ ನೃಪರೂಪ ಚಂದ್ರನೇಱಲೊಡನೆ

ತಿಲಕಿತ ಭುವನಂಗೆನ್ನಯ
ಬೆಳಗಂ ಸಲೆ ಮಾಟ್ಪೆನೆಂದು ಚಂದ್ರಮನೊಡನೀ
ತಳರ್ದಪನೆಂಬಿನೆಗಂ ಮಂ
ಗಳಧವಳಚ್ಛತ್ರಮೆಸೆದುತೋಱಿತ್ತಾಗಳ್ ೧೦೨

ವ॥ ಅಂತಾ ಸಮಯದೊಳಖಿಲ ರಾಜಲೋಕದಿಂ ಪ್ರಣಮ್ಯಮಾನನಾಗಿ ಪರಸ್ಪರಾರ್ದಿತ ಜಾನುಭಾಗರಪ್ಪನೇಕಾಶ್ವಿಕಬಲಸಮನ್ವಿತನಾಗಿ ನಗರಿಯಂ ಪೊಱಮಟ್ಟನತಿದೂರದೊಳ್ ತ್ರಸ್ತ ಹಂಸಸಾರ್ಥೋತ್ಪಲವ್ಯತಿಕರೆಯಪ್ಪ ಶಿಪ್ರಾನದಿಯಂ ದಾಂಟಿ ಬೆಳ್ದಿಂಗಳಂ ಬಿತ್ತರಿಸಿದಂತಿರ್ದ ದಶ ಪುರದ ಬಟ್ಟೆವಿಡಿದು ನಡೆಯುತ್ತಮಪರರಾತ್ರಿವೇಳೆಯನಿತರ್ಕೆ ಯೋಜನತ್ರಿತಯಮಂ ಪೋಗೆ

ಎನಸುಂ ನಿರ್ಭರಚಂದ್ರಿಕಾಜಲದೊಳೊಲ್ದೋಲಾಡಿ ಮೆಯ್ವೆಟ್ಟು ಮಂ
ಜಿನ ತುಂತುರ್ವನಿಯೊಳ್ ಪೊದಟ್ದಲರ್ದ ಚೆನ್ನೈದಿಲ್ಗಳೊಳ್ಗಂಪಿನಿಂ
ಪನಲಂಪಿಂ ತೆಗೆದೊಟ್ಟಿಕೊಂಡವನಿಪಂಗಧ್ವಶ್ರಮಂ ಪಿಂಗುವಂ
ತು ನಿಶಾನಿರ್ಗಮಸೂಚಕಂ ತಳರ್ದು ತೀಡಿತ್ತೊಂದು ಮಂದಾನಿಲಂ ೧೦೩

ವುಳ್ಳ ಅಸಂಖ್ಯಾತ ಕುದುರೆಗಳ ಸೈನ್ಯವು ಬಂದು ನೆರೆಯಿತು. ವ॥ ಬಳಿಕ ಚಂದ್ರಾ ಪೀಡನು ಜೀನುಹಾಕಿದ ಇಂದ್ರಾಯುಧವನ್ನು ಸವಾರನಿಗೆ ಉಚಿತವಾದ ಪೋಷಾಕನ್ನು ಧರಿಸಿಕೊಂಡು ಏರಿದನು. ೧೦೨. "ಪ್ರಪಂಚಕ್ಕೆ ತಿಲಕಪ್ರಾಯನಾದ ಈ ಚಂದ್ರಾಪೀಡ ನಿಗೆ ನಾನು ಸರಿಯಾಗಿ ಬೆಳಕನ್ನು ಬೀರುತ್ತೇನೆ" ಎಂದು ಆಲೋಚಿಸಿ ಚಂದ್ರನು ಜೊತೆ ಯಲ್ಲೆ, 'ಇಗೋ! ಮುಂದೆ ಹೋಗುತ್ತಿದ್ದಾನೆ!' ಎಂಬಂತೆ ಚಂದ್ರಾಪೀಡನ ಬಿಳಿಯ ಕೊಡೆಯು ಶೋಭಿಸುತ್ತಿತ್ತು. ವ॥ ಆಗ ರಾಜಪುತ್ರನು ಸಮಸ್ತ ರಾಜಮಂಡಲಿಯಿಂದ ನಮಸ್ಕರಿಸಲ್ಪಡುವವನಾಗಿ, ಇಕ್ಕಟ್ಟಿನಿಂದ ಒಬ್ಬರ ಮೊಳಕಾಲು ಒಬ್ಬರಿಗೆ ತಾಕು ತ್ತಿರುವ ಅನೇಕ ಅಶ್ವಸೈನ್ಯದಿಂದ ಕೂಡಿಕೊಂಡು ಪಟ್ಟಣದಿಂದ ಹೊರಕ್ಕೆ ಬಂದನು. ಸ್ವಲ್ಪದೂರದಲ್ಲೆ ಗಾಬರಿಗೊಂಡ ಹಂಸಗಳ ಗುಂಪಿನಿಂದ ಕೂಡಿದ ನೈದಿಲೆಗಳುಳ್ಳ ಶಿಪ್ರಾನದಿಯನ್ನು ದಾಟಿ ತಿಂಗಳ ಬೆಳಕನ್ನು ಹರಡುತ್ತಿರುವಂತೆ ಕಾಣುತ್ತಿರುವ ದಶ ಪುರದ ದಾರಿಯನ್ನು ಹಿಡಿದು ನಡೆಯುತ್ತ, ಅರ್ಧರಾತ್ರಿಯ ವೇಳೆಗೆ ಮೂರು ಯೋಜನ ದಾರಿಯನ್ನು ಅತಿಕ್ರಮಿಸಿ ಹೋದನು. ೧೦೩. ದಟ್ಟವಾದ ಬೆಳದಿಂಗಳೆಂಬ ನೀರಿನಲ್ಲಿ ಸ್ವೇಚ್ಛೆಯಿಂದ ನೀರಾಟವಾಡಿ, ಮಂಜಿನ ತುಂತುರುಗಳಲ್ಲಿ ಸೇರಿಕೊಂಡು, ಅರಳಿರುವ ಕುಮುದಿನಿಗಳ ಸುವಾಸನೆಯ ಇಂಪನ್ನು ಪ್ರೀತಿಯಿಂದ ಸಂಗ್ರಹಿಸಿಕೊಂಡು, ಚಂದ್ರಾ ಪೀಡನಿಗೆ ಪ್ರಯಾಣದ ಆಯಾಸವನ್ನು ಪರಿಹರಿಸುತ್ತಾ ರಾತ್ರಿ ಕಳೆಯಿತೆಂಬುದನ್ನು

ವ॥ ಅನಂತರಂ ಮೆಲ್ಲಮೆಲ್ಲನೆ ಯಾಮಿನಿಯಗಲ್ಕೆಗೆ ಚಿಂತಿಸಿದಂತೆ ಚಂದ್ರಬಿಂಬಂ ಬೆಳರ್ಪನಪ್ಪುಕೆಯ್ಯೆ ಕುಮುದವತೀವಿರಹಸಂತಾಪದಿಂದಿೞಿಯುವಿಟ್ಟ ಕುಮುದಿನೀಪ್ರಿಯನ ಧವಳೋತ್ತರೀಯಮೆಂಬಂತೆ ಬೆಳ್ದಿಂಗಳ ಬೆಳಗಿನ ಬಳಗಮೋಸರಿಸೆ ಪಡುವಣ ಕಡಲ್ವಗೆ ಪರಿವ ಬೆಳ್ದಿಂಗಳ ಬೆಳ್ವೊನಲೊಳುರ್ಚಿದ ಬೊಬ್ಬುಳಿಕೆಗಳಂತೆ ತಾರಕೆಗಳ್ ತಲೆಗರೆಯೆ ಪೊಯ್ನೀರಿಂ ಪೊಱಮಡುವಂತೆ ಲತಾವಿಟಪಂಗಳ್ ನಿಜಮಾದ ಪಸುರ್ವೆಳ್ಪನೊಳಕೆಯ್ಯೆ ದಿವಾಕರನುದಯ ದೊಸಗೆಗಿಂದ್ರಂ ದಿಗ್ಭಿತ್ತಿಯಂ ಕುಂಕುಮದ ಪಂಕದಿಂ ಕಾರಳೆಗೊಳಿಸಿದನೆಂಬಂತೆ ಸಂಜೆಗೆಂಪು ರಂಜಿಸೆ ಕಿಱಿದಾನುಂಬೇಗದೊಳ್

ಒದವಿರೆ ರಾಗದೇೞ್ಗೆ ನಿಜಮಂಡಲದೊಳ್ ಕರದಿಂದೆ ಮುಂದೆ ಪ
ರ್ವಿದ ರಜನೀತಿರಸ್ಕರಣಿಯಂ ಪೆಱಪಿಂಗಿಸಿ ಪದ್ಮಿನೀವಧೂ
ವದನಸರೋಜಮಂ ಪದಪಿನಿಂದಮೆ ನೋಡುವೆನೆಂಬ ಮಾೞ್ಕೆಯಿಂ
ದುದಯಗಿರೀಂದ್ರವೇದಿಕೆಯನೇಱಿದನೊಯ್ಯನೆ ಪದ್ಮಿನೀಪ್ರಿಯಂ ೧೦೪

ವ॥ ಆಗಳಖಿಲ ಜಗದ್ದೀಪಿಕೆಯಂತೆ ದಿವಸಕರದೀಧಿತಿಗಳಗ್ಗಳಿಸೆ ನಿರಂತರ ದೃಷ್ಟಿಪ್ರಸರನಾಗಿ ಭೋಂಕನೆ ದುಂದರ್ಧಗವ್ಯೂತಿಮಾತ್ರದಲ್ಲಿ

ಸೂಚಿಸುವ ಮಂದಮಾರುತವು ಎಲ್ಲೆಲ್ಲೂ ಬೀಸುತ್ತಿತ್ತು. ವ॥ ಬಳಿಕ ಮೆಲ್ಲ ಮೆಲ್ಲನೆ ರಾತ್ರಿದೇವಿಯ ಅಗಲಿಕೆಯ ಚಿಂತೆಯಿಂದಲೋ ಎಂಬಂತೆ ಚಂದ್ರ ಮಂಡಲವು ಬಿಳುಪಾಯಿತು. ಕುಮುದಿನಿಯ ವಿರಹದಿಂದ ಉಂಟಾದ ಸಂತಾಪ ವನ್ನು ತಾಳಲಾರದೆ ಕುಮುದಿನೀಪ್ರಿಯನಾದ ಚಂದ್ರನು ತೆಗೆದು ಬಿಸಾಡಿದ ಹೊದೆ ಯುವ ಬಿಳಿಯ ಪಂಚೆಯಂತಿರುವ ಬೆಳದಿಂಗಳು ಸರಿದುಹೋಯಿತು. ಸಮುದ್ರಕ್ಕೆ ಹರಿದು ಹೋಗುತ್ತಿರುವ ಬೆಳದಿಂಗಳೆಂಬ ನೀರಿನ ಪ್ರವಾಹದಲ್ಲಿ ಏಳುತ್ತಿರುವ ಗುಳ್ಳೆಗಳಂತಿರುವ ನಕ್ಷತ್ರಗಳು ಮಾಯವಾದುವು. ತುಂಬಿದ ನೀರಿನಿಂದ ಮೇಲಕ್ಕೆ ತಲೆಯೆತ್ತುವಂತೆ ಮರ ಬಳ್ಳಿಗಳು ತಮ್ಮ ಸಹಜವಾದ ಹಸುರುಕಾಂತಿಯನ್ನು ಮತ್ತೆ ಪಡೆದುವು. ಸೂರ್ಯನು ಉದಯಿಸುವಾಗ ಮಂಗಳಾರ್ಥವಾಗಿ ಇಂದ್ರನು ದಿಕ್ಕೆಂಬ ಗೋಡೆಗಳನ್ನು ಕುಂಕುಮದ ದ್ರವದಿಂದ ಬಳಿದಿದ್ದಾನೋ ಎಂಬಂತೆ ಬೆಳಗಿನ ಸಂಜೆಗೆಂಪು ಶೋಭಿಸುತ್ತಿತ್ತು. ಆಗ ಸ್ವಲ್ಪಕಾಲದಲ್ಲಿ ೧೦೪. ಪದ್ಮಿನೀಪ್ರಿಯನಾದ ಸೂರ್ಯನಿಗೆ ರಾತ್ರಿಯೆಲ್ಲ ತನ್ನ ವಿರಹದಿಂದ ಸೊರಗುತ್ತಿರುವ ಪದ್ಮಿನಿಯ ಮುಖವನ್ನು ಕಂಡೇನೆ ಎನಿಸಿದೆ. ಇದರಿಂದ ಅತಿಶಯವಾದ ರಾಗ (೧. ಪ್ರೀತಿ ೨. ಕೆಂಪು) ಉಂಟಾಗಿದೆ. ಅವಳನ್ನು ನೋಡೋಣವೆಂದರೆ ರಾತ್ರಿಯು ಕಪ್ಪುಪರದೆಯಂತೆ ಮುಂದೆ ತನಗೆ ಅಡ್ಡ ಲಾಗಿ ಮುಚ್ಚಿಕೊಂಡಿದೆ. ಅವನು ಅದನ್ನು ತನ್ನ ಕಿರಣಗಳೆಂಬ ಕೈಗಳಿಂದ ಹಿಂದಕ್ಕೆ ಸರಿಸಿ ತನ್ನ ಪ್ರಿಯಳಾದ ಪದ್ಮಿನಿಯನ್ನು ನೋಡಬೇಕೆಂಬ ಉದ್ದೇಶದಿಂದಲೋ ಎಂಬಂತೆ ಉದಯಪರ್ವತವೆಂಬ ಜಗಲಿಯನ್ನು ಮೆಲ್ಲನೆ ಏರಿಬರುತ್ತಿದ್ದಾನೆ. ವ॥ ಆಗ ಪ್ರಪಂಚಕ್ಕೆಲ್ಲ ದೀಪದಂತಿರುವ ಸೂರ್ಯನ ಕಿರಣಗಳು ಹೆಚ್ಚುತ್ತಿರಲಾಗಿ ರಾಜ

ಇರದಂತಃಕ್ಷೋಭವೇಗಕ್ಕಗಿದುಗುಟ್ಟುದೊ ಪಾತಾಳಮಾಕ್ರಾಂತ ಸೈನ್ಯೋ
ತ್ಕರಭಾರೋದ್ಭೂತಿಯಿಂ ನೂಂಕಿದುದೊ ವಸುಮತೀಭಾಗಮೊತ್ತೊತ್ತಿನಿಂ ನಿ
ತ್ತರಿಸಲ್ ತಾನಾಱದೇನೊಂದೆಡೆಗೆ ತೆಗೆದುದೋ ವಿಶ್ವದಿಕ್ಚಕ್ರಮೆಂಬಂ
ತಿರುಳೆಲ್ಲಂ ಬಂದು ಬೀಡಂ ಬಿಡುವ ಕಟಕಮಂ ಕಂಡನಾಗಳ್ ನರೇಂದ್ರಂ ೧೦೫

ವ॥ ಅಂತು ಕಂಡು

ಎನಗಿದು ಲೇಸಾದುದದೆಂ
ತೆನಲಿದಿರ್ವರುತಿರ್ದ ಬೀಡಿನೊಳ್ ಮೆಯ್ಗರೆದೊ
ರ್ವನೆ ಪೋಗಿ ಕಾಣ್ಕೆಯಿಂ ಭೋಂ
ಕನೆ ಮಾಟ್ಪೆಂ ಪ್ರಿಯಸಖಂಗೆ ಸಂತಸದೊದವಂ ೧೦೬

ವ॥ ಎಂದು ಮನದೊಳೆ ಬಗೆದರಸಂ ಛತ್ರಚಾಮರಾದಿ ಚಿಹ್ನಂಗಳುಮನಖಿಲರಾಜ ಪುತ್ರಲೋಕಮುಮನಗಲ್ದು ತನ್ನೇಱಿದ ವಾರುವದೊಡವರ್ಪ ನಾಲ್ಕಯ್ದು ಕುದುರೆಗಳ್ವೆರಸು ತನ್ನನಱಿಯಲಾಗದಂತುತ್ತರೀಯದಿಂ ಮೊಗಮಂ ಸುತ್ತಿ ಕಟಕದೊಳವಿದಿತ ವೃತ್ತಾಂತನಾಗಿ ವೈಶಂಪಾಯನನ ಬೀಡಾವುದೆಂದಲ್ಲಿಗಲ್ಲಿಗೆ ಬೆಸಗೊಳ್ವುದುಂ

ಕುಮಾರನು ನಿರಾತಂಕವಾಗಿ ತನ್ನ ದೃಷ್ಟಿಯನ್ನು ಹರಿಸಿದನು. ಕೂಡಲೆ ಮುಂದೆ ಅರ್ಧ ಗವ್ಯೂತಿ (ಸುಮಾರು ಎರಡು ಮೈಲಿ) ದೂರದಲ್ಲಿ ೧೦೫. ಒಳಗೆ ಉಂಟಾದ ಬಾಧೆಯ ರಭಸಕ್ಕೆ ಹೆದರಿ ಪಾತಾಳವು ಹೊರಕ್ಕೆ ಉಗುಳಿಬಿಟ್ಟಿದೆಯೊ ಎಂಬಂತೆಯೂ, ಮತ್ತು ಆಕ್ರಮಿಸಿಕೊಂಡಿರುವ ಈ ಸೇನಾಸಮೂಹದ ಭಾರವು ಬಹಳ ಉಂಟಾಗಲು ತಾಳಲಾರದೆ ಭೂದೇವಿಯು ಒಂದು ಕಡೆ ತಳ್ಳಿಬಿಟ್ಟಿದೆಯೋ ಎಂಬಂತೆಯೂ, ಸೈನ್ಯವು ಭರ್ತಿಯಾಗಿ ಬಹಳ ಇಕ್ಕಟ್ಟಾದುದರಿಂದ ನಿರ್ವಾಹಮಾಡುವುದಕ್ಕೆ ಸಾಧ್ಯವಾಗದೆ ದಿಕ್ಚಕ್ರವು ಈ ಸೈನ್ಯವನ್ನು ಒಂದು ಕಡೆ ರಾಶಿಹಾಕಿದೆಯೋ ಎಂಬಂತೆಯೂ ಕಾಣು ತ್ತಿರುವ, ರಾತ್ರಿಯೆಲ್ಲ ಪ್ರಯಾಣಮಾಡಿ ಈಗ ಒಂದು ಕಡೆ ಬಿಡಾರ ಮಾಡುತ್ತಿರುವ ಮಹಾಸೈನ್ಯವನ್ನು ಕಂಡನು. ವ॥ ಹಾಗೆ ನೋಡಿ (ಅದು ವೈಶಂಪಾಯನನ ಸೇನೆ ಯೆಂದು ಬಗೆದು) ೧೦೬. "ಓಹೋ, ಎದುರಿಗೆ ಕಾಣುತ್ತಿರುವ ಈ ಪಾಳೆಯ ದೊಳಕ್ಕೆ ಯಾರಿಗೂ ಕಾಣಿಸಿಕೊಳ್ಳದಂತೆ ಒಳಹೊಕ್ಕು, ಒಬ್ಬನೇ ಹೋಗಿ ತಟ್ಟನೆ ಕಾಣಿಸಿಕೊಂಡು ಆಪ್ತಮಿತ್ರನಿಗೆ ಸಂತೋಷವನ್ನುಂಟುಮಾಡಬೇಕು. ಆಗ ಸರಿಹೋಗು ತ್ತದೆ!" ವ॥ ಎಂದು ಚಂದ್ರಾಪೀಡನು ಮನಸ್ಸಿನಲ್ಲಿ ಆಲೋಚಿಸಿ, ಛತ್ರಿ ಚಾಮರ ಮೊದಲಾದ ರಾಜಚಿಹ್ನೆಗಳನ್ನು ತೆಗೆದಿಟ್ಟು, ಜೊತೆಯಲ್ಲಿದ್ದ ಅರಸುಮಕ್ಕಳನ್ನೆಲ್ಲ ದೂರಮಾಡಿ, ತಾನು ಏರಿರುವ ಕುದುರೆಯ ಜೊತೆಯಲ್ಲಿ ಬರುತ್ತಿರುವ ನಾಲ್ಕೈದು ಕುದುರೆಗಳಿಂದ ಕೂಡಿಕೊಂಡು, ತನ್ನನ್ನು ಯಾರೂ ಗುರುತಿಸದಿರಲೆಂದು ಹೊದೆಯುವ ವಸ್ತ್ರದಿಂದ ಮುಖವನ್ನು ಮರೆಮಾಡಿಕೊಂಡು, ಯಾರಿಗೂ ತಿಳಿಸದೆ ಪಾಳೆಯವನ್ನು ಹೊಕ್ಕು 'ವೈಶಂಪಾಯನನ ಬಿಡಾರವೆಲ್ಲಿದೆ ?' ಎಂದು ಅಲ್ಲಲ್ಲಿ ವಿಚಾರಿಸುತ್ತಿದ್ದನು.

ಮನೆಮನೆದಪ್ಪದಿದೇಂ ಮರು
ಳಿನವೋಲ್ ಬೆಸಗೊಳ್ವೆಯಣ್ಣ ನೀಂ ವೈಶಂಪಾ
ಯನನೆಲ್ಲಿರ್ಪನಸಂಬ
ದ್ಧನೆ ಪೋಗೆಂದೆನಸುವಲ್ಲಿಗಲ್ಲಿಗೆ ಜಡಿದರ್ ೧೧೭

ವ॥ ಅಂತು ಜಡಿಯಲಿದೇನೆಂದು ಸುಹೃತ್ಸ್ನೇಹಕಾತರಹೃದಯನಪ್ಪುದಱಿಂ ಮತ್ತ ಮಲ್ಲಲ್ಲಿಗೆ ಬೆಸಗೊಳ್ವುದುಮವರುಮಂತೆ ಜಡಿಯೆ ವಿಹತಯೂಥಪತಿಯಪ್ಪ ಕರಿಕಲಭದಂತತಿ ತ್ರಸ್ತನಾಗಿ ಮುಂದುಗಾಣದೆ ವಿಹ್ವಲನಾಗಿ ತೊಟಲುತ್ತುಂ ಕಟಕದ ನಡುವನೆಯ್ದುವರ್ಪನ್ನೆಗ ಮಿಂದ್ರಾಯುಧದ ಪ್ರತ್ಯಭಿಜ್ಞೆಯೊಳಪಸುಪ್ರಧಾವಿತ ರಾಜಪುತ್ರಲೋಕದೊಳಂ ಚಂದ್ರಾ ಪೀಡದೇವನೆಂದಱಿದು ದೆಸೆದೆಸೆಯೊಳಂ ತಳವೆಳಗಾಗಿ ಪರಿತಂದು ನಾಣ್ಚಿ ಮೊಗಂಬುಗದೋರೊ ರ್ವರ ಪೆಱಗಡಂಗಿ ಗೆಂಟಿನೊಳೆ ಮೆಲ್ಲಮೆಲ್ಲನೆಱಗುವ ರಾಜಪುತ್ರಸಹಸ್ರಂಗಳ ಮೊಗಮಂ ನೋಡಿ ಚಂದ್ರಾಪೀಡಂ ವೈಶಂಪಾಯನನೆಲ್ಲಿರ್ದಪನೆಂದು ಬೆಸಗೊಳ್ವುದುಂ

ಮರದಡಿಯಲ್ಲಿ ದೇವರಿೞಿಯಿಂ ಶುಕನಾಸತನೂಜವಾರ್ತೆಯುಂ
ನಿರವಿಸಿದಪ್ಪೆವೆಂಬುದುಮಿದೇನೆನುತಂತೆ ಸುಹೃದ್ವಿಯೋಗಕಾ
ತರಹೃದಯಂ ನರೇಂದ್ರಸುತನಚ್ಚರಿಯಾಗಿರೆ ಮೂರ್ಛೆವೋಗಿ ಬೀ
ೞ್ವರಲಿರದೆತ್ತಿಕೊಂಡಿೞಿಪಿದರ್ ಧರಣೀಪತಿಯುಂ ತುರಂಗದಿಂ ೧೧೮

೧೧೭. ಆ ಪಾಳೆಯದವರು "ಮನೆಮನೆಯನ್ನೂ ಬಿಡದೆ ಹುಚ್ಚನಂತೆ ಕೇಳುತ್ತಿದ್ದೀ ಯಲ್ಲಪ್ಪ ! ಇದೇನು ? ವೈಶಂಪಾಯನನು ಎಲ್ಲಿದ್ದಾನಯ್ಯ ! ಅಯ್ಯೋ, ದಡ್ಡ ! ಹೋಗು" ಎಂದು ಹೋದೆಡೆಯಲ್ಲೆಲ್ಲಾ ಸಾಕಷ್ಟು ಗದರಿಸುತ್ತಿದ್ದರು. ವ॥ ಹಾಗೆ ಗದರಿಸುತ್ತಿದ್ದರೂ ಇದೇನೆಂದು ಮಿತ್ರಸ್ನೇಹದಿಂದ ಗಾಬರಿಗೊಂಡ ಮನಸ್ಸುಳ್ಳವ ನಾದುದರಿಂದ ಮತ್ತೆ ಮತ್ತೆ ಅಲ್ಲಲ್ಲಿ ಕೇಳುತ್ತಲೇ ಇದ್ದನು. ಅವರೂ ಹಾಗೆಯೆ ಗದರಿ ಸುತ್ತಲೂ ಇದ್ದರು. ಸಲಗನಿಂದ ಅಗಲಿದ ಆನೆಮರಿಯಂತೆ ಚಂದ್ರಾಪೀಡನು ಬಹಳ ಗಾಬರಿಗೊಂಡವನಾಗಿ, ಮುಂದುಗಾಣದೆ ಕಳವಳಗೊಂಡು ತೊಳಲುತ್ತಾ ಶಿಬಿರದ ಮಧ್ಯಭಾಗಕ್ಕೆ ಬಂದನು. ಅಷ್ಟರಲ್ಲಿ ಇಂದ್ರಾಯುಧದ ಗುರುತಿನಿಂದ ಹಿಂಬಾ ಲಿಸಿ ಓಡಿಬರುತ್ತಿರುವ ರಾಜಪುತ್ರರಿಂದಲೂ, ಇವನು ಚಂದ್ರಾಪೀಡನೆಂದು ತಿಳಿದು ಎಲ್ಲಾ ಕಡೆಯಿಂದಲೂ ತಲ್ಲಣಿಸಿ ಓಡಿಬಂದು ನಾಚಿಕೆಯಿಂದ ಮುಖವನ್ನು ತೋರಿಸ ಲಾರದೆ ಒಬ್ಬರ ಹಿಂದೆ ಒಬ್ಬರು ಅವಿತುಕೊಂಡು ದೂರದಲ್ಲೇ ಮೆಲ್ಲಮೆಲ್ಲನೆ ನಮಸ್ಕರಿ ಸುತ್ತಿರುವ ಸಾವಿರಾರು ಮಂದಿ ಅರಸುಮಕ್ಕಳ ಮುಖವನ್ನು ನೋಡಿ ಚಂದ್ರಾಪೀಡನು ವೈಶಂಪಾಯನನು ಎಲ್ಲಿದ್ದಾನೆಂದು ಕೇಳಿದನು. ೧೧೮. "ಈ ಮರದ ಬುಡದಲ್ಲಿ ಇಳಿಯೋಣವಾಗಲಿ. ವೈಶಂಪಾಯನನ ಸಂಗತಿಯನ್ನು ಅರಿಕೆ ಮಾಡುತ್ತೇವೆ" ಎಂದು ಅವರು ಹೇಳಿದರು. ಕೂಡಲೆ 'ಇದೇನು ಬಂತು ?' ಎಂದು ಗೆಳೆಯನ ಅಗಲಿಕೆಯಿಂದ ಕಳವಳಗೊಂಡ ಮನಸ್ಸುಳ್ಳವನಾಗಿ ರಾಜಕುಮಾರನು ಆಶ್ಚರ್ಯದಿಂದ ಕೂಡಿ ಮೂರ್ಛೆ

ದೇವತನುವೆರಸಿರೆಂತಂ
ತಾ ವೈಶಂಪಾಯನಂ ಸುಖಂ ನಿಶ್ಚಯದಿಂ
ಜೀವಿಸುತಿರ್ದಪನೆನಲಂ
ತಾ ವಚನಾಮೃತದೆ ಮೂರ್ಛೆಯಿಂದೆಚ್ಚೆತ್ತಂ ೧೧೯

ಎನಗಿದು ವಿಸ್ಮಯಂ ಕ್ಷಣಮಗಲ್ದು ಬರ್ದುಂಕದನೆನ್ನನಿಂತಗ
ಲ್ದಿನಿತುದಿನಂ ಬರ್ದುಂಕಿದಪನಾದೊಡಮಕ್ಕೆವುದೇಕೆ ಬಾರವಾ
ಙನೆ ಸಖನೆಲ್ಲಿ ನಿಂದನಿರದೊರ್ವನನಿಂತಿರೆ ಬಿಟ್ಟು ಬಂದಿರೇ
ಕೆನೆ ನೃಪನಂದನಂಗೆ ವೊದಲಿಂ ನೆಱೆ ಬಿನ್ನವಿಕುಂ ಬಲಾಹಕಂ ೧೨೦

ವ॥ ದೇವರ್ ಬಿಜಯಂಗೆಯ್ಯಲೊಡನೆ ಮಱುದಿವಸಂ ವೈಶಂಪಾಯನಂ ಪ್ರಯಾಣ ಭೇರಿಯಂ ಪೊಯ್ಸಿ ಕಟಕಮೆಲ್ಲಮಂ ಮುಂದೆ ನಡೆಯಲ್ವೇಟ್ಟಿದು ಪುರಾಣಂಗಳೊಳ್ ಪುಣ್ಯ ತೀರ್ಥಮೆಂದು ಕೇಳ್ದಿರ್ಪುದಱಿನಾನೀಯಚ್ಛೋದಮಂ ಮಿಂದು ಸಿದ್ಧಾಯತನದ ಭಗವ ದ್ಭವಾನೀವಲ್ಲಭಂಗೆ ಪೊಡವಟ್ಟು ಪೆಱಗೆ ಪೋಪೆನೆಂದು ಪಾದಮಾರ್ಗದೊಳೆ ನಡೆಯುತವಚ್ಛೋ ದಕ್ಕೆವಂದು ಆ ಪ್ರದೇಶದ ರಮಣೀಯತೆಗೆ ಸೋಲ್ತೆಲ್ಲಾ ದೆಸೆಯುಮಂ ನೋಡುತ್ತುಂ ಪೋಗೆ

ಹೊಂದಿ, ಕುದುರೆಯಿಂದ ಬೀಳುವುದರಲ್ಲಿದ್ದನು. ಅಷ್ಟರಲ್ಲಿ ರಾಜರು ಅವನನ್ನು ಎತ್ತಿ ಕೊಂಡು ಕುದುರೆಯಿಂದ ಇಳಿಸಿದರು. ೧೧೯. "ಸ್ವಾಮಿ, ದೇವತೆಗಳು ಹೇಗೆ ಚಿರ ಕಾಲ ಬದುಕುತ್ತಾರೋ ಹಾಗೆಯೆ ವೈಶಂಪಾಯನನೂ ಖಂಡಿತವಾಗಿ ಸುಖದಿಂದ ಜೀವಿಸಿದ್ದಾನೆ" ಎಂದು ಅವರು ಹೇಳಲಾಗಿ, ಅವರ ಅಮೃತಕ್ಕೆ ಸಮಾನವಾದ ಮಾತಿನಿಂದ ಚಂದ್ರಾಪೀಡನು ಮೂರ್ಛೆಯಿಂದ ಎಚ್ಚೆತ್ತನು. ೧೨೦. "ನನಗೆ ಇದು ಸೋಜಿಗವನ್ನುಂಟುಮಾಡಿದೆ! ನನ್ನನ್ನು ಬಿಟ್ಟು ಒಂದು ಕ್ಷಣವೂ ಜೀವಿಸಿರಲಾರದ ಅವನು ಹೀಗೆ ನನ್ನನ್ನು ಬಿಟ್ಟು ಬದುಕಿರುವುದಾದರೂ ಹೇಗೆ? ಆಗಲಿ, ಹಾಗೆ ಬದುಕಿ ದ್ದರೆ ಏಕೆ ಬರಲಿಲ್ಲ? ನನ್ನ ಗೆಳೆಯನು ಎಲ್ಲಿ ನಿಂತುಬಿಟ್ಟನು? ಹಾಗೆ ನಿಂತಿದ್ದರೆ ಅವನನ್ನು ಬಿಟ್ಟು ನೀವು ಏಕೆ ಬಂದಿರಿ?" ಎಂದು ಚಂದ್ರಾಪೀಡನು ಅವರನ್ನು ಕೇಳಿ ದನು. ಆಗ ಬಲಾಹಕನು ರಾಜಕುಮಾರನಿಗೆ ಆಮೂಲಾಗ್ರವಾಗಿ ಅರಿಕೆಮಾಡಲು ಪ್ರಾರಂಭಿಸಿದನು. ವ॥ "ಯುವರಾಜರು ಉಜ್ಜಯಿನಿಗೆ ಪ್ರಯಾಣ ಬೆಳೆಸಿದ ಮೇಲೆ ಮಾರನೆಯದಿನ ವೈಶಂಪಾಯನನು ಪ್ರಯಾಣಭೇರಿಯನ್ನು ಹೊಡೆಸಿ ಸೈನ್ಯವನ್ನು ಮುಂದೆ ನಡೆಯಲು ಅಪ್ಪಣೆಮಾಡಿದನು. ಸೈನ್ಯವು ಪ್ರಯಾಣಕ್ಕೆ ಸಿದ್ಧತೆ ಮಾಡಿಕೊಳ್ಳು ತ್ತಿತ್ತು, ಅಷ್ಟರಲ್ಲಿ ವೈಶಂಪಾಯನನು ನಮ್ಮನ್ನು ಕುರಿತು "ಪುರಾಣಗಳಲ್ಲಿ ಅಚ್ಛೋದ ಸರೋವರವು ಪುಣ್ಯತೀರ್ಥವೆಂದು ಹೇಳಿರುವುದನ್ನು ಕೇಳಿದ್ದೇವೆ. ಆದರಿಂದ ನಾನು ಅಲ್ಲಿಗೆ ಹೋಗಿ ಅಚ್ಛೋದಸರೋವರದಲ್ಲಿ ಸ್ನಾನಮಾಡಿ, ಅಲ್ಲಿನ ದೇವಾಲಯದಲ್ಲಿರುವ ಪರಮೇಶ್ವರಲಿಂಗಕ್ಕೆ ನಮಸ್ಕರಿಸಿ ಹಿಂದಕ್ಕೆ ಬರೋಣವೆಂದು ಮನಸ್ಸುಮಾಡಿದ್ದೇನೆ" ಎಂದು ಹೇಳಿ, ಕಾಲುನಡಗೆಯಲ್ಲೇ ನಡೆಯುತ್ತ (ನಮ್ಮೊಂದಿಗೆ) ಅಚ್ಛೋದಸರಸ್ಸಿನ

ಸುರಕಾಂತಾಕರ್ಣಪೂರೋಚಿತ ಕಿಸಲಯದಿಂದೊಂದಿ ಸಂದಿರ್ದ ಪುಷ್ಪೋ
ತ್ಕರದೊಳ್ ತಳ್ತೊಪ್ಪುವ ಭೃಂಗೀನಿವಹನಿನದದೊಳ್ ಕೂಡಿ ಬರ್ಹಂಗಳಿಂದಂ
ಪೊರೆದಾಶಾಭಿತ್ತಿಯಂ ತನ್ನಯ ಪಸುರ್ವೆಳಗಿಂ ಪೂಸುತಿರ್ಪಂತೆ ಚೆಲ್ವಾ
ಗಿರೆ ಮುಂದೊಂದಂ ಲತಾಮಂಟಪವನವನಿವೃಂದಾರಕಂ ಕಂಡನಾಗಳ್ ೧೧೧

ವ|| ಅಂತದನಚ್ಚರಿವಟ್ಟು ನೋಡುತ್ತಿರ್ಪುದುಂ

ಕುಳಿರ್ವಚ್ಛೋದದ ತೆರೆಯೆಲ
ರೊಳೆ ಪುಳಕಂ ಪೊಣ್ಮಿದಂತೆ ತಣ್ಗದಿರ್ಗಳ್ ಕ
ಣ್ಗೊಳಿಸಿರೆ ಶಶಿಕಾಂತಶಿಲಾ
ತಳವೊಂದುಜ್ವಳಿಸಿತಾ ಲತಾಮಂಡಪದೊಳ್ ೧೧೨

ಕಂಡಜಿಪಂತೆ ಮುನ್ನ ಶುಕನಾಸತನೂಭವನಾಗಳಾ ಲತಾ
ಮಂಡಪಮಂ ಕರಂ ಮನದೆ ಮತ್ತವೊಱಲ್ದು ನೋಡುತಂ
ಕಂಡರಿಸಿಟ್ಟರೋ ಕಡೆದರೋ ಕರುವಿಟ್ಟರೊ ನಿದ್ದೆ ಬಂದು ಕೆ
ಯ್ಕೊಂಡುದೊ ಪೇಟಿಮೆಂಬಿನೆಗಮಲ್ಲಿಯೆ ನಿಂದನದೊಂದು ಜಾವಮಂ ೧೧೩

ಸಮೀಪಕ್ಕೆ ಬಂದು, ಆ ಪ್ರದೇಶದ ಸೌಂದರ್ಯಕ್ಕೆ ಮನಸೋತು ಎಲ್ಲಾ ಕಡೆಯಲ್ಲೂ ನೋಡುತ್ತಾ ಹೋಗುತ್ತಿದ್ದನು. ೧೧೧. ಅಲ್ಲಿ ದೇವತಾಸ್ತ್ರೀಯರ ಕರ್ಣಾಲಂಕಾರಕ್ಕೆ ಯೋಗ್ಯವಾದ ಚಿಗುರುಗಳಿಂದ ಭರಿತವಾದ, ಹೂವುಗಳಿಗೆ ಎರಗುವ ಹೆಣ್ಣುದುಂಬಿಗಳ ಗುಂಜಾರವದಿಂದ ಕೂಡಿಕೊಂಡಿರುವ, ನವಿಲುಗರಿ [ನವಿಲು]ಗಳಿಂದ ತುಂಬಿಕೊಂಡಿರುವ ಮತ್ತು ತನ್ನ ಹಸಿರುಕಾಂತಿಯಿಂದ ದಿಗಂತವೆಂಬ ಗೋಡೆಗಳಿಗೆ ಹಸಿರುಬಣ್ಣವನ್ನು ಬಳಿಯುತ್ತಿರುವಂತೆ ಶೋಭಿಸುತ್ತಿರುವ ಒಂದು ಲತಾಮಂಟಪವನ್ನು ವೈಶಂಪಾಯನನು ನೋಡಿದನು. ವ|| ಹಾಗೆ ಆಶ್ಚರ್ಯಪಟ್ಟು ನೋಡುತ್ತಿರುವಲ್ಲಿ ೧೧೨. ಆ ಲತಾಮಂಡಪದಲ್ಲಿ ಬಹಳ ಶೀತವಾದ ಅಚ್ಛೋದಸರಸ್ಸಿನ ಅಲೆಗಳ ಮೇಲೆ ಬೀಸಿ ಬರುವ ಗಾಳಿಯ ಚಳಿಯಿಂದ ಪುಳಕವೆದ್ದಿದೆಯೋ ಎಂಬಂತೆ ಕಾಣುವ ತಂಬೆಳಕನ್ನು ಸೂಸುತ್ತಾ ಶೋಭಿಸುವ ಚಂದ್ರಕಾಂತಶಿಲೆಯೊಂದು ಪ್ರಕಾಶಿಸುತ್ತಿತ್ತು. ೧೧೩. ಶುಕನಾಸಪುತ್ರನು ಆ ಲತಾಮಂಡಪವನ್ನು ಹಿಂದೆ ನೋಡಿರುವವನಂತೆ ಮನಸ್ಸಿನಲ್ಲಿ ಬಹಳ ಇಷ್ಟಪಟ್ಟು ಮತ್ತೆ ಮತ್ತೆ ನೋಡುತ್ತಾ ಕೆತ್ತಿ ನಿಲ್ಲಿಸಿದವನಂತೆಯೂ, ಕಡೆದು ಮಾಡಿರುವನಂತೆಯೂ, ಎರಕಹೊಯ್ದು ನಿರ್ಮಿಸಿದವನಂತೆಯೂ, ನಿದ್ರೆಯಿಂದ ಪರವಶನಾದಂತೆಯೂ ಒಂದು ಜಾವದವರೆಗೆ ಅಲ್ಲಿ ಸ್ತಬ್ಧನಾಗಿ ನಿಂತು

ವ॥ ಅಂತು ನಿಂದು

ತನುವಂ ತಾಳ್ದಿರಲಾಱದೊರ್ವೊದಲೆ ಮೂರ್ಛಾವೇಗದಿಂದಿಕ್ಕುವ
ಟ್ಟನವೊಲ್ ಝೊಂಪಿಸಿ ಜೋಲ್ದು ನೇಲ್ದು ನೆಲದೊಳ್ ಕುಳ್ಳಿರ್ದನೇನಾನುಮೊಂ
ದನೆ ತನ್ನೊಳ್ ಪರಿಭಾವಿಸುತ್ತಮನಿತಾನುಂ ಪೊಟ್ತು ನಿಷ್ಪಂದಗಾ
ತ್ರನುಮುದ್ಬಾಷ್ಪನಿಮಗ್ನನೇತ್ರನುಮೆನಲ್ ತನ್ಮಂತ್ರಿಮುಖ್ಯಾತ್ಮಜಂ ೧೧೪

ವ॥ ಅಂತಿರ್ದನಂ ನೋಡಿ ರಸಿಕರಪ್ಪರೆನ್ನರ್ [ಏನಂ] ಕಂಡೊಡಂ ಸೋಲ್ವರೆಂದೆಮ್ಮ ಮನದೊಳ್ ಬಗೆದು ವೈಶಂಪಾಯನನನಿಂತೆಂದೆವು

ಇದು ದಲ್ ಚಿತ್ರರಥಾಹ್ವಯಂ ಜನಮಿದಚ್ಛೋದಂ ಸರಂ ನೋಟ್ಪೊಡೀ
ತ್ರಿದಶಾವಾಸಮಿದಿಂತುಟಲ್ತೆ ರಮಣೀಯಂ ಬೀಡುಮುಂತೆತ್ತಿಪೋ
ದುದು ರಾಜಾತ್ಮಜರಿಂತು ನಿನ್ನ ಬರವಂ ಪಾರುತ್ತಮಿರ್ದಪ್ಪರಂ
ತದಱಿಂ ಬೇಗಮೆ ಮಿಂದು ಕಾಣಭವನಂ ಸದ್ವಿಪ್ರವಿದ್ಯಾಧರಾ ೧೧೫

ವ॥ ಏಬುದುಂ ಮೂಗನಂತೇನುಮುಂ ನುಡಿಯದೆ ಲತಾಮಂಡಪಮನೆ ನೀಡುಂ ನೋಡುತ್ತಮಿರ್ಪುದುಂ ಮತ್ತಾವಾಗಳಡಿಗಡಿಗನಿಬಿಸಲೆಮ್ಮನಿವಕ್ಕೆ ಸೈರಿಸದೆ ಚಂದ್ರಾಪೀಡ ಭುಜಪರಿರಕ್ಷಿತಮಪ್ಪ ತುರಂಗಬಲಂಬೆರಸು ನೀವಿಲ್ಲಿರವೇಡಿಂ ಕಟಕಮಂ ಮುಂದಿಟ್ಟೊಡಗೋಡು ಬಿಟ್ಟನು.

ವ॥ ಹಾಗೆ ನಿಂತು, ೧೧೪. ಶರೀರವನ್ನು ಹಿಡಿದು ನಿಲ್ಲಿಸಲಾರದೆ ಒಂದೇ ಸಲ ಮೂರ್ಛಾವೇಗದಿಂದ ಹೊಡೆಯಲ್ಪಟ್ಟವನಂತೆ ಮೈಮರೆತು, ಇಳಿಬಿದ್ದು ತೂಗಾಡಿ ಕುಸಿದು, ತನ್ನ ಮನಸ್ಸಿನಲ್ಲಿ ಏನನ್ನೊ ಚಿಂತಿಸುತ್ತಾ, ಶರೀರವನ್ನು ಅಲುಗಾಡಿಸದೆ ಹರಿಯುತ್ತಿರುವ ಕಣ್ಣೀರಿನಲ್ಲಿ ಮುಳುಗಿ ಬಹಳ ಹೊತ್ತು ನೆಲದ ಮೇಲೆ ಕುಳಿತುಬಿಟ್ಟನು. ವ॥ ಆಗ ರಸಿಕರು ಏನನ್ನು ಕಂಡರೂ ಪರವಶರಾಗುವುದು ಸ್ವಾಭಾವಿಕವೆಂದು ನಮ್ಮ ಮನಸ್ಸಿನಲ್ಲಿ ಆಲೋಚಿಸಿ ವೈಶಂಪಾಯನನನ್ನು ಕುರಿತು ಹೀಗೆ ಹೇಳಿದೆವು. ೧೧೫. "ಬ್ರಾಹ್ಮಣೋತ್ತಮ, ಇದೇ ಚಿತ್ರರಥವೆಂಬ ಉದ್ಯಾನವನ. ಇದೇ ಅಚ್ಛೋದ ಸರೋವರ. ಈ ಸುಂದರವಾದ ಪ್ರದೇಶವು ದೇವತೆಗಳ ವಾಸಸ್ಥಾನವಾಗಿದೆ. ಅದರಿಂದ ಇಲ್ಲಿ ಬಹಳ ಹೊತ್ತು ಇರಬಾರದು. ನಮ್ಮ ಸೈನ್ಯವೂ ಪ್ರಯಾಣಕ್ಕೆ ಸಿದ್ಧವಾಗಿದೆ. ಅರಸು ಮಕ್ಕಳು ನಿನ್ನ ಆಗಮನವನ್ನೇ ನಿರೀಕ್ಷಿಸುತ್ತಿದ್ದಾರೆ. ಆದ್ದರಿಂದ ಬೇಗನೆ ಸ್ನಾನಮಾಡಿ ಪರಮೇಶ್ವರನ ದರ್ಶನವನ್ನು ಮಾಡು." ವ॥ ಎಂದು ಹೇಳಲಾಗಿ ಮೂಗನಂತೆ ಏನನ್ನೂ ಹೇಳದೆ ಲತಾಮಂಡಪವನ್ನೇ ಬಹಳ ಹೊತ್ತು ನೋಡುತ್ತಿದ್ದನು. ನಾವು ಮತ್ತೆ ಮತ್ತೆ ಒತ್ತಾಯಪಡಿಸುತ್ತಲೇ ಇದ್ದೆವು. ಮಂತ್ರಿಕುಮಾರನು ನಮ್ಮ ಒತ್ತಾಯವನ್ನು ಸಹಿಸದೆ "ಚಂದ್ರಾಪೀಡನ ಭುಜಬಲದಿಂದ ಕಾಪಾಡಲ್ಪಟ್ಟ ಕುದುರೆಪಡೆಯೊಂದಿಗೆ ನೀವು ಇಲ್ಲಿರದೆ ಸೈನ್ಯವೆಲ್ಲವನ್ನೂ ಮುಂದಿಟ್ಟು ಪ್ರಯಾಣಮಾಡಿಬಿಡಿ!

ಪೋಗಿವಮಾಂ ಬರ್ಪುದಿಲ್ಲೆಂದು ಜಡಿದೆಮ್ಮಂ ಬೆಟ್ಟವೆಟ್ಟರಾಗಿ ಪಲಪಡೆ ನುಡಿದು ಮುನ್ನಿನಂದ ದೊಳೆ ಮನಂಗೊಂಡು ಜಾನಿಸುತ್ತಿರ್ದನನಿಂತೆಂದೆವು

ನಿನಗೀ ವೈರಾಗ್ಯಮೇಕೊರ್ಮೊದಲೊಗೆದುದಿದೆಮ್ಮಿಂದವಾಯ್ತೋ ಭವನ್ಮಿ
ತ್ರನಿದಾಯ್ತೋ ನಿನ್ನ ನಾವೀ ತೆಱದೆ ನಿಲಿಸಿ ಪೋದಂದು ರಾಜೇಂದ್ರಚಂದ್ರಾಂ
ಕನ ತಾರಾಪೀಡಭೂಪಾಲಕನ ಮುಳಿಸನಾರಾಂಪರೇಟಿರ್‌ಪೋಪಮೆಂದಿಂ
ತನಿವಂ ಗೆಯ್ಯುತ್ತಿರಲ್ಕಂ ನುಡಿಯನೆ ಶುಕನಾಸಾತ್ಮಜಂ ಮತ್ತಮೆಮ್ಮೊಳ್ ೧೧೬

ವ॥ ಮತ್ತಂ ಬರವಿಂಗಾಗ್ರಹಿಸಲಿಂ ನುಡಿಯದಿರಿಂ ಚಂದ್ರಾಪೀಡನೊಳ್ ನೆರೆವ ಪುಣ್ಯ ಮೆನಗಿಲ್ಲೆನ್ನನಗಲ್ಚಿದ ಬಿದಿ ಬಲ್ಲಿದನೆಂದಲ್ಲಿಂದೆಟ್ದು ಪೋಪನ ಬೆನ್ನೊಳಾವೆಲ್ಲಂ ಪೋಗೆವೋಗೆ ನೀವೇಕೆ ಬಂದಪ್ಪಿರೆಂದೆಮ್ಮಂ ಬಿಡೆ ಜಡಿದು ಕಿಱಿದಂತರಂ ಪೋಗಿ

ತರುವೀಥೀವ್ರಾತದೊಳ್ ಕತ್ತಲೆವಿಡುವ ತಮಾಲಂಗಳೊಳ್ ಮಲ್ಲಿಕಾಮಂ
ದಿರದೊಳ್ ನಾನಾ ಲತಾಮಂಟಪದೊಳೆಸೆವ ಬೀಟ್ಜೊಂಪದೊಳ್ ದಿವ್ಯ ಪದ್ಮಾ
ಕರತೀರೋಪಾಂತ ಸಿದ್ಧಾಯತನದೊಳೆನಸುಂ ಭ್ರಾಂತಿಯಿಂ ಭಾವಿಸುತ್ತ
ಚ್ಚರಿವಟ್ಟೇನಾನುಮಂ ಕೆಟ್ಟುದನಱಸುವವೋಲ್ ಕೂಡೆ ನೋಡುತ್ತಮಿರ್ದಂ ೧೧೭

ನಾನಂತೂ ಬರುವುದಿಲ್ಲ ! ಎಂದು ಕಡ್ಡಿಯೆರಡು ತುಂಡಾಗುವಂತೆ ನಮ್ಮನ್ನು ಗದರಿಸಿ ದನು. ಹಿಂದಿನಂತೆಯೇ ಚಿಂತಾಮಗ್ನನಾಗಿರುವ ಅವನನ್ನು ಕುರಿತು ಹೀಗೆ ಹೇಳಿದೆವು. ೧೧೬. "ಇದ್ದಕ್ಕಿದ್ದ ಹಾಗೆ ನಿನಗೆ ವಿರಕ್ತಿಯು ಏಕೆ ಉಂಟಾಯಿತು. ನಮ್ಮಿಂದ ಏನಾದರೂ ಅಪರಾಧವುಂಟಾಯಿತೆ ? ನಿಮ್ಮ ಮಿತ್ರನಾದ ಯುವರಾಜ ಚಂದ್ರಾಪೀಡದೇವನಿಂದ ಅಪರಾಧವೇನಾದರೂ ಉಂಟಾಗಿದೆಯೆ ? ನಾವು ನಿನ್ನನ್ನು ಹೀಗೆ ಒಬ್ಬಂಟಿಗರನ್ನಾಗಿ ಬಿಟ್ಟುಹೋದರೆ ರಾಜಾಧಿರಾಜನಾದ ತಾರಾಪೀಡಮಹಾರಾಜನ ಕೋಪವನ್ನು ಯಾರು ತಡೆಯಬಲ್ಲರು ? ಏಳು, ಹೋಗೋಣ" ಎಂದು ನಿರ್ಬಂಧಮಾಡುತ್ತಿದ್ದರೂ ವೈಶಂಪಾಯನನು ನಮ್ಮೊಂದಿಗೆ ಏನೂ ಹೇಳಲಿಲ್ಲ. ವ॥ ಮತ್ತು "ನಾನು ಬರಬೇಕೆಂದು ಬಲಾತ್ಕಾರವನ್ನು ಮಾಡಲು ಏನನ್ನೂ ಹೇಳಬೇಡಿ. ಚಂದ್ರಾಪೀಡನ ಜೊತೆಯಲ್ಲಿರುವ ಪುಣ್ಯವು ನನಗಿಲ್ಲ. ಅವನಿಂದ ನನ್ನನ್ನು ಬೇರ್ಪಡಿಸಿದ ವಿಧಿಯು ಬಲಿಷ್ಠನಾಗಿದ್ದಾನೆ" ಎಂದು ಹೇಳಿ ಎದ್ದು ಹೋಗುತ್ತಿರುವ ಅವನ ಬೆನ್ನ ಹಿಂದೆ ನಾವೆಲ್ಲರೂ ಹೋಗುತ್ತಿದ್ದೆವು. ಅವನು "ನೀವೇಕೆ ನನ್ನ ಹಿಂದೆ ಬರುತ್ತಿದ್ದೀರಿ ?" ಎಂದು ನಮ್ಮನ್ನು ಬಹಳ ಗದರಿಸಿ ಸ್ವಲ್ಪದೂರ ಹೋಗಿ, ೧೧೭. ಮರಗಳ ಸಾಲುಗಳಲ್ಲೂ ಕತ್ತಲೆ ಹರಡಿರುವ ಹೊಂಗೆಮರಗಳಲ್ಲೂ ಮಲ್ಲಿಗೆಬಳ್ಳಿಮನೆಗಳಲ್ಲೂ ನಾನಾಬಗೆಯ ಲತಾಮಂಡಪಗಳಿಂದ ಶೋಭಿಸುವ ಬಳ್ಳಿಪೊದರುಗಳಲ್ಲೂ ದಿವ್ಯವಾದ ಅಚ್ಛೋದಸರೋವರದ ಸಮೀಪದಲ್ಲಿರುವ ದೇವಾಲಯದಲ್ಲೂ ಬಹಳ ಭ್ರಾಂತಿಯಿಂದ ಏನನ್ನೋ ನೆನಸಿಕೊಳ್ಳುತ್ತ ಬೆರಗುಗೊಂಡು ಕಳೆದುಹೋದ ಏನನ್ನೋ ಹುಡುಕುವವನಂತೆ ನೋಡು

ವ॥ ಅಂತವನನನ್ಯದೃಷ್ಟಿಯಾಗಿ ತೊಟಲುತ್ತುಂ ಪಲವುದಿವಸಮುಣ್ಣದೆ ಕುಡಿಯು ದಿರ್ದನನೆಂತಾನುಮಾಹಾರಾಭಿಮುಖನಂ ಮಾಡೆ ಕಂದಮೂಲಫಲಂಗಳನಲ್ಲದೆ ಮೆಲ್ಲೆನೆಂದು ನಿಯಮಮಂ ಮಾಡಿರ್ದನಂ ನೋಡಿ

ಬರವಿನ ಮಾತು ಮಂತ್ರಿಸುತನೊಳ್ ಪಱಿವಟ್ಟುದನೆಯ್ದೆ ಕಂಡು ದೇ
ವರ ಬಟಿಗಲ್ಲದಿಂ ಬರವು ಕೂಡದು ನಿಕ್ಕುವಮೆಂದು ವಾಜಿಗಳ್
ಬೆರಸು ಕೆಲಂಬರಂ ಪೆಱಗೆ ಕಾಪಿರಿಸಿಟ್ಟು ಸಮಸ್ತಸೇನೆಗ
ಲ್ಲಿರವಿದಯುಕ್ತಮೆಂದು ನಡೆತಂದೆವಿದಿಂತುಟು ವೃತ್ತಕಂ ನೃಪಾ ೧೧೮

ವ॥ ಎಂದು ಬಿನ್ನವಿಸೆ ಚಂದ್ರಾಪೀಡನದೆಲ್ಲಮಂ ಕೇಳ್ದು

ಜನಿಯಿಸಿದಂದು ತೊಟ್ಟಗಲದಾತನನಿಂತಿರಗಲ್ದು ಪಾಪಕ
ರ್ಮನನವಿವೇಕಿಯಂ ಗುಣವಿಹೀನನನೆನ್ನನಳೀಕಮಿತ್ರನಂ
ನೆನೆಯದೆ ನಿಂದೊಡಂ ಗುರುಜನಂಗಳ ಮೇಗಣದೊಂದು ಭಕ್ತಿಯಂ
ನೆನೆದು ಮನೋರಮಾಪ್ರಿಯಸುತಂ ಬರವೇಟ್ಕುಮದೇಕೆ ನಿಂದನೋ ೧೧೯

ಪುರುಷಾರ್ಥತ್ರಿತಯಮನವ
ಧರಿಸದೆ ವೈರಾಗ್ಯಮೇಕೆ ಪುಟ್ಟಿದುದೋ ಚಿ
ತ್ತರಮೆಂಬುದನಾಂ ಪೋಗಿಯೆ
ನೆರೆದಲ್ಲಿಯಮಾತ್ಯಮುಖ್ಯಸುತನೊಳ್ ತಿಳಿವೆಂ ೧೨೦

ತ್ತಿದ್ದನು. ವ॥ ಹಾಗೆ ಅಲ್ಲೆ ನಟ್ಟ ನೋಟವುಳ್ಳವನಾಗಿ ತೊಳಲುತ್ತಾ ಕೆಲವು ದಿನ ಊಟವನ್ನೇ ಮಾಡದೆ ನೀರನ್ನೂ ಕುಡಿಯದೆ ಹಾಗೇ ಇದ್ದನು. ಬಹಳ ಪ್ರಯಾಸದಿಂದ ಆಹಾರವನ್ನು ತೆಗೆದುಕೊಳ್ಳುವಂತೆ ಮಾಡಿದೆವು. ಆಗಲೂ ಗೆಡ್ಡೆ ಗೆಣಸುಗಳನ್ನು ಬಿಟ್ಟು ಮತ್ತೇನನ್ನೂ ತಿನ್ನುವುದಿಲ್ಲವೆಂದು ನಿಯಮವನ್ನು ಮಾಡಿಬಿಟ್ಟನು. ನಾವು ಅವನನ್ನು ನೋಡಿ, ೧೧೮. ಆತನು ಆಡುವ ಮಾತು ನಿಂತುಹೋದುದನ್ನು ಕಂಡು ಇನ್ನು ತಮ್ಮಲ್ಲಿಗೆ ನಾವು ಬರುವುದನ್ನು ಬಿಟ್ಟು ಬೇರೆ ಮಾರ್ಗವಿಲ್ಲವೆಂದು ಖಚಿತಮಾಡಿಕೊಂಡು ಕುದುರೆಗಳೊಂದಿಗೆ ಕೂಡಿ, ಕೆಲವರನ್ನು ವೈಶಂಪಾಯನನ ರಕ್ಷಣೆಗೆ ನಿಲ್ಲಿಸಿ ಸೈನ್ಯವೆಲ್ಲವೂ ಅಲ್ಲಿರುವುದು ಅಯುಕ್ತವೆಂದು ನಿಶ್ಚಯಿಸಿ ಹೊರಟುಬಂದೆವು. ನಡೆದ ವೃತ್ತಾಂತವಿದು, ಮಹಾಸ್ವಾಮಿ." ವ॥ ಎಂದು ಅರಿಕೆ ಮಾಡಿದರು. ಚಂದ್ರಾಪೀಡನು ಎಲ್ಲವನ್ನೂ ಕೇಳಿ ಹೀಗೆ ಆಲೋಚಿಸಿದನು. ೧೧೯. "ಹುಟ್ಟಿದಂದಿನಿಂದ ಒಂದು ಕ್ಷಣವೂ ಅಗಲದ ಅವನನ್ನು ಹೀಗೆ ನಾನು ಬಿಟ್ಟು ಬಂದೆನು. ಪಾಪಿಷ್ಠನಾದ, ಅವಿವೇಕಿಯಾದ, ಗುಣಹೀನನಾದ ಹಾಗೂ ಕಪಟಮಿತ್ರನಾದ ನನ್ನನ್ನು ನೆನೆಯದೆ ಅವನು ಹೀಗೆ ಅಲ್ಲಿ ನಿಂತರೂ ನಿಲ್ಲಲಿ, ತಾಯಿತಂದೆಗಳ ಮೇಲಿನ ಭಕ್ತಿಯನ್ನಾದರೂ ನೆನೆಸಿಕೊಂಡು ವೈಶಂಪಾಯನನು ಬರಬೇಕಾಗಿತ್ತು. ಅದೇತಕ್ಕೆ ನಿಂತುಬಿಟ್ಟನೊ ! ೧೨೦. ಧರ್ಮ, ಅರ್ಥ, ಕಾಮಗಳೆಂಬ ಮೂರು ಪುರುಷಾರ್ಥಗಳನ್ನು ಗಮನಿಸದೆ ಇದ್ದಕ್ಕಿದ್ದಂತೆ ಅವನಿಗೆ ವೈರಾಗ್ಯವೇಕೆ ಉಂಟಾಯಿತು ?–

ವ॥ ಅದಲ್ಲದೆಯುಂ ಪತ್ರಲೇಖೆಯುಂ ಪೋದಳಲ್ಲಿಯೆ ವೈಶಂಪಾಯನನುಮಿರ್ದಪ ನದಱಿನಾತನನೊಡಗೊಂಡು ಬಂದಪ್ಪೆನೆಂದು ತಂದೆಯಂ ಬೀಟ್ಕೊಂಡು ಪೋಗಿ ಮಹಾಶ್ವೇತಾ ಶ್ರಮದೊಳಿರ್ದ ವೈಶಂಪಾಯನನಂ ಹೇಮಕೂಟಕ್ಕಟ್ಟಿ ನಡೆಯಿಸಿ ಕಾದಂಬರಿಯೊಳ್ ಮದುವೆ ನೆರೆದು ಶುಕನಾಸ ನಂದನಂಗೆ ಮದಲೇಖೆಯಂ ಮದುವೆಯಂ ಮಾಡಿ ಸಂತೋಷದಿಂ ಬಂದು ಜ್ಜೈನಿಯಂ ಪುಗುವೆನೆಂದು ತನ್ನ ಮನದೊಳ್ ಬಗೆದು ಮನಮಂ ಬಲಿಕೆಯ್ದಲ್ಲಿಂದಮೆಟ್ದು ದ್ವಾರಪ್ರಭೃತಿಸಂಮೃಷ್ಟ ಭೂಮಿಭಾಗಮುಮಂತರ್ಬಹಿಃಪ್ರಕೀರ್ಣ ಸುರಭಿಕುಸುಮ ಪ್ರಕರಮುಂ ಗೃಹೀತ ಚಾಮರ ತಾಳವೃಂತ ಭೃಂಗಾರುವಾರಾಂಗನಾಸಹಸ್ರಸಂಗತಮುಂ ಗಂಧ ಮಾದನವಿಜಯಗಜಸನಾಥೀಕೃತಮುಂ ಪರಿಕಲ್ಪಿತೇಂದ್ರಾಯುಧಾವಸ್ಥಾನಮುಂ ಉತ್ತುಂಗ ತೋರಣಾಬದ್ಧವಂದನಮಾಲಮುಮಪ್ಪ ರಾಜಮಂದಿರಮಂ ಪೊಕ್ಕು ಸಕಲ ರಾಜಲೋಕಮಂ ಬೀಡುದಾಣಂಗಳ್ಗೆ ಪೋಗಲ್ವೇಟ್ಟುಪನೀತ ಸಮಾಯೋಗನಾಗಿ ಶಯ್ಯಾತಳದೊಳ್ ಮೆಯ್ಯನೀ ಡಾಡಿ

> ಅನುನಯದಿಂ ವಾರವಿಲಾ
> ಸಿನಿಯರ್ ಮೆಲ್ಲಲರ ಪೀಲಿಬಿಜ್ಜಣಿಗೆಯನೊ
> ಯ್ಯನೆ ಬೀಸುತ್ತಿರೆ ನೃಪನಂ
> ದನನನಿಸಿನಿಸಂ ಬಟಲ್ಕೆಗಟ್ಟಿಯುತ್ತಿರ್ದಂ ೧೨೧

ಎಂಬುದನ್ನು ನಾನು ಅಲ್ಲಿಗೆ ಹೋಗಿ, ವೈಶಂಪಾಯನನನ್ನೇ ಕಂಡು ಮಾತನಾಡಿ ತಿಳಿದು ಕೊಳ್ಳುತ್ತೇನೆ. ವ॥ ಅದಲ್ಲದೆ ಪತ್ರಲೇಖೆಯೂ ಹೋಗಿದ್ದಾಳೆ. ಅಲ್ಲಿಯೇ ವೈಶಂಪಾ ಯನನೂ ಇದ್ದಾನೆ. ಅದರಿಂದ ಅವನನ್ನು ಕರೆದುಕೊಂಡುಬರುವೆನೆಂದು ತಂದೆಯಿಂದ ಅನುಮತಿಯನ್ನು ಪಡೆದುಕೊಂಡು ಹೋಗಿ, ಮಹಾಶ್ವೇತೆಯ ಆಶ್ರಮದಲ್ಲಿರುವ ವೈಶಂಪಾಯನನನ್ನು ಹೇಮಕೂಟಕ್ಕೆ ಮಾತುಕತೆಗಾಗಿ ಕಳುಹಿಸಿ ಕಾದಂಬರಿಯನ್ನು ಮದುವೆಮಾಡಿಕೊಳ್ಳುತ್ತೇನೆ. ವೈಶಂಪಾಯನನಿಗೆ ಮದಲೇಖೆಯೊಂದಿಗೆ ಮದುವೆ ಮಾಡಿಸಿ ಬಹಳ ಸಂತೋಷದಿಂದ ಉಜ್ಜಯಿನಿಗೆ ಹೋಗುತ್ತೇನೆ" ಎಂದು ತನ್ನ ಮನಸ್ಸಿ ನಲ್ಲಿ ಆಲೋಚಿಸಿ ಧೈರ್ಯ ತಂದುಕೊಂಡನು. ಬಳಿಕ ಅಲ್ಲಿಂದೆದ್ದು ಬಾಗಿಲಿನಿಂದ ಹಿಡಿದು ಶುದ್ಧಿಮಾಡಲ್ಪಟ್ಟ ಭೂಮಿಭಾಗವುಳ್ಳ, ಒಳಗೂ ಹೊರಗೂ ತಳಿಯಲ್ಪಟ್ಟ ಸುವಾಸನೆ ಯಾದ ಹೂವುಗಳುಳ್ಳ, ಚಾಮರ ಬೀಸಣಿಗೆ ಚಿನ್ನದ ಕೊಡಗಳನ್ನು ಹಿಡಿದುಕೊಂಡಿರುವ ಅನೇಕ ವೇಶ್ಯೆಯರಿಂದ ಸಹಿತವಾದ ಗಂಧಮಾದನವೆಂಬ ಆರಮನೆ, ಆನೆಯಿಂದ ಕೂಡಿದ, ಇಂದ್ರಾಯುಧವನ್ನು ಕಟ್ಟಿಹಾಕಲು ಲಾಯವನ್ನು ಕಟ್ಟಿರುವ. ಎತ್ತರವಾದ ಹೆಬ್ಬಾಗಿಲಿಗೆ ಕಟ್ಟಿರುವ ತೋರಣವುಳ್ಳ, ತನ್ನ ವಸತಿಶಾಲೆಯನ್ನು ಪ್ರವೇಶಿಸಿ, ರಾಜರನ್ನು ಅವರವರ ಬಿಡಾರಗಳಿಗೆ ಕಳುಹಿಸಿ, ಪೋಷಾಕನ್ನು ತೆಗೆದು ಹಾಸಿಗೆಯಲ್ಲಿ ಮೈಯನ್ನು ಈಡಾಡಿದನು. ೧೨೧. ವಾರಾಂಗನೆಯರು ನವಿಲುಗರಿಯ ಬೀಸಣಿಗೆಯಿಂದ ಮೃದುವಾದ ಗಾಳಿ ಯನ್ನು ಹಿತವಾಗುವಂತೆ ಬೀಸುತ್ತಿರಲು ರಾಜಕುಮಾರನು ಕೊಂಚಕೊಂಚವಾಗಿ

ವ॥ ಅಂತಿರ್ದು ನಿಜಾಂತರಂಗದೊಳ್

ಜನನಿಗೆ ಪೇೞದಾರ್ಯ ಶುಕನಾಸನನೀಕ್ಷಿಸದಾದವಾತ್ಮನಂ
ದನನ ವಿಯೋಗದಿಂ ಮಱುಗುತಿರ್ದ ಮನೋರಮೆಯಲ್ಲಿಗೆಯ್ದಿದಾ
ನನುನಯದಿಂದಮಾದರಿಸದಿತ್ತಣಿನಿತ್ತಲೆ ಪೋದೊಡಾನುಮಾ
ತನ ತೆಱನಪ್ಪೆನಿರ್ಮಡಿಸುಗುಂ ಗುರುಗಳ್ಗಿತಿದುಃಖಮೇವೆನೋ ೧೨೨

ವ॥ ಅದಱಿನವರನಾಶ್ವಾಸಿಸಿ ವೈಶಂಪಾಯನಪ್ರತ್ಯಾನಯನಕ್ಕೆ ತಂದೆಯುಂ ಬೀೞ್ಕೊಂಡು ಪೋಗಲ್ವೇೞ್ಕುಂ ಅಲ್ಲಿ ಕಾದಂಬರಿಯಿರ್ಪಳಲ್ಲಿಯೆ ವೈಶಂಪಾಯನನುಮಿರ್ದಪನೆಂದು ಧೈರ್ಯ ಮನವಲಂಬಿಸಿ ದಿವಸವ್ಯಾಪಾರಮನೆಂತಾನುಂ ತೀರ್ಚಿ ತದನಂತರಂ ಸಕಲ ದಿಗಂತರಂಗಳೊಳ್ ದಳ್ಳುರಿಯನುಗುೞ್ವ ತೀವ್ರರಶ್ಮಿಜಾಲಮುಂ ಪಸರಿಸುತ್ತುಂ ನಿಧಾಘಸಮಯಸಹಸ್ರಭಾನುಮಂಡಲಂ ಮಧ್ಯಾಹ್ನವರ್ತಿಯಾಗೆ ತತ್ತಪನತಾಪದೊಳಂ ಸುಹೃದ್ವಿಯೋಗತಾಪದೊಳಂ ಕಾದಂಬರೀ ವಿರಹತಾಪದೊಳಂ ಸಂತಪ್ತನಾಗಿ ತಾರಾಪೀಡತನಯಂ ತಣ್ಪನಾಸೆಗೆಯ್ದಲ್ಲಿಂದಮೆೞ್ದು

ಬಳಸಿದ ಬಚ್ಚಲಿಂ ಮಲಯಜದ್ರುವದಿಂ ಪೊರೆದಬ್ಜನೀದಳಂ
ಗಳ ನೆಲಗಟ್ಟನಿಂ ಕುಳಿರ್ವ ಬಾಳದ ಬೇರ್ಗಳ ಕೇರ್ಗಳಿಂ ಲತಾ
ವಳಿಯನೆ ಸುತ್ತುಗೊಂಡ ಪಸುರ್ಗಂಬದಿನೆಯ್ದೆ ಮುಸುಂಕಿನಿಂದ ತ
ಣ್ದಳಿರ್ಗಳಿನೊಪ್ಪುತೋರ್ಪ ಜಲಮಂಟಪದಲ್ಲಿಗೆ ಬಂದನಾ ನೃಪಂ ೧೨೩

ಆಯಾಸವನ್ನು ಪರಿಹರಿಸಿಕೊಳ್ಳುತ್ತಿದ್ದನು. ವ॥ ಹಾಗೆ ಇದ್ದು ತನ್ನ ಮನಸ್ಸಿನಲ್ಲಿ ೧೨೨. "ತಾಯಿಗೆ ಹೇಳದೆ, ಶುಕನಾಸನನ್ನು ನೋಡದೆ ಮಗನ ವಿಯೋಗದಿಂದ ಮರುಗುತ್ತಿರುವ ಮನೋರಮೆಯಲ್ಲಿಗೆ ಹೋಗಿ ಅವಳನ್ನು ಸಮಾಧಾನಪಡಿಸದೆ ಇಲ್ಲಿಂದಲೇ ಹೊರಟುಬಿಟ್ಟರೆ ನಾನೂ ವೈಶಂಪಾಯನನಂತೆಯೇ ಆಗುತ್ತೇನೆ. ಇದರಿಂದ ತಂದೆತಾಯಿಗಳಿಗೆ ಈಗ ಒದಗಿದ ದುಃಖವು ಎರಡರಷ್ಟಾಗುತ್ತದೆ. ಏನುಮಾಡಲಿ? ವ॥ ಅದರಿಂದ ಅವರನ್ನು ಸಮಾಧಾನಪಡಿಸಿ ವೈಶಂಪಾಯನನನ್ನು ಕರೆತರುವುದಕ್ಕಾಗಿ ತಂದೆಯ ಅನುಮತಿಯನ್ನು ಪಡೆದು ಪ್ರಯಾಣಮಾಡಬೇಕು. ಅಲ್ಲಿ ಕಾದಂಬರಿಯಿದ್ದಾಳೆ. ಅಲ್ಲಿಯೇ ವೈಶಂಪಾಯನನೂ ಇದ್ದಾನೆ" ಎಂದು ಧೈರ್ಯವನ್ನು ಅವಲಂಬಿಸಿ ದಿವಸಕೃತ್ಯವನ್ನು ಹೇಗೋ ಮುಗಿಸಿದನು. ಬಳಿಕ ದಿಗಂತರದಲ್ಲೆಲ್ಲಾ ಹೆಚ್ಚಾಗಿ ಉರಿಯನ್ನು ಉಗುಳುತ್ತಿರುವ, ತೀಕ್ಷ್ಣವಾದ ಕಿರಣಸಮೂಹವನ್ನು ಹರಡುತ್ತ ಬೇಸಿಗೆಕಾಲದ ಸೂರ್ಯಮಂಡಲವು ನೆತ್ತಿಯ ಮೇಲಕ್ಕೆ ಬರಲಾಗಿ, ಆ ಸೂರ್ಯನ ತಾಪದಿಂದಲೂ, ಸ್ನೇಹಿತನ ವಿರಹತಾಪದಿಂದಲೂ, ಕಾದಂಬರಿಯ ವಿರಹಸಂತಾಪದಿಂದಲೂ ಸಂತಪ್ತನಾದ ಚಂದ್ರಾಪೀಡನು ತಂಪನ್ನು ಬಯಸಿ ಅಲ್ಲಿಂದ ಎದ್ದು, ೧೨೩. ಸುತ್ತಲೂ ತೋಡಿರುವ ಚರಂಡಿಯಿಂದಲೂ, ಗಂಧದ ರಸದಿಂದ ಕೂಡಿರುವ ತಾವರೆ ಎಲೆಗಳ ನೆಲಕಟ್ಟಿನಿಂದಲೂ, ಬಹಳ ಶೀತವಾದ ಲಾಮಂಚದ ತಡಿಕೆಗಳಿಂದಲೂ, ಬಳ್ಳಿಗಳ ಗುಂಪಿನಿಂದ ಸುತ್ತುವರಿಯಲ್ಪಟ್ಟಿರುವ ಹಚ್ಚನೆಯ ಕಂಭಗಳಿಂದಲೂ, ತಂಪಾದ ಚಿಗುರುಗಳಿಂದಲೂ ಶೋಭಿಸುವ ಜಲ

ಎಳದೆನಿಸಿರ್ದ ಪಾವಸೆಯ ತಣ್ಣೆಳೆಯಿಂದಮೆ ನೆಯ್ದ ಸೀರೆ ಶೀ
ತಳಿಕೆಯ ಚಾಮರಂ ಪೊಸಮೃಣಾಳದ ತೋಳ್ವಳೆ ಮುತ್ತಿನಾರಮು
ತ್ಪಳದವತಂಸಮಿರ್ಪನೆಯೊಳಕೆಯ್ದ ಕುರುಳ್ ಸಿರಿಕಂಡದಣ್ಪು ಕ
ಣ್ಗೊಳೆ ನೆಲಸಿರ್ದರಲ್ಲಿ ಜಲದೇವಿಯರಂತೆ ವಿಳಾಸಿನೀಜನಂ ೧೨೪

ವ॥ ಮತ್ತಮಲ್ಲಿ ಮೃಣಾಳನಾಳ ತಾಳವೃಂತ ಕರ್ಪೂರಪಟವಾಸ ಹರಿಚಂದನ ಚಂದ್ರಕಾಂತದರ್ಪಣಾದ್ಯುಪಕರಣಪಾಣಿಗಳಪ್ಪ ಕತಿಪಯ ವಾರಾಂಗನಾಜನಂಗಳಿರ್ದರದು ನಿದಾಘಕ್ಕೆ ಪರಿಭವಸ್ಥಾನಮುಂ ಶೀತಕಾಲಕ್ಕಿಕ್ಕೆದಾಣಮುಂ ಹಿಮಶೈಲಕ್ಕೆ ಸಹೋದರಮುಮೆನಿಸಿದ ನೀರ್ಜೊಂಪಮಂ ಪೊಕ್ಕು ಶಿಶಿರಶಿಲಾತಳದೊಳ್ ಮೆಯ್ಯನಿಕ್ಕಿ

ಅಮಿತ ಮಕರಧ್ವಜೋತ್ಕಲಿ
ಕಮನಾತ್ಮಸುಹೃದ್ವಿಯೋಗವಡಬಾನಲದು
ರ್ದಮಮುಮಂ ದಿನಾಬ್ಧಿಯಂ ಧೈ
ರ್ಯಮೆಂಬ ಭೈತ್ರದಿನಿಳಾಧಿಪಂ ತರಿಯಿಸಿದಂ ೧೨೫

ವ॥ ಅಂತು ನೇಸರ್ ಪಡಲೊಡಂ ಬಯ್ಗುಂಬೊಳ್ತರಸಂ ನೀರ್ಜೊಂಪದಿಂ ಪೊಱಮಟ್ಟು ಸಿಂಪಿಣಿಯ ತಣ್ಪಿನಿಂ ಪೂವಲಿಯ ತಿಣ್ಪಿನಿಂ ಮನಂಗೊಳಿಸುವ ಭವನಾಂಗಣದೊಳವ

ಮಂಡಪಕ್ಕೆ ರಾಜಕುಮಾರನು ಬಂದನು. ೧೨೪. ಎಳೆಯದಾಗಿರುವ ಪಾಚಿಯ ತಂಪಾದ ದಾರಗಳಿಂದ ನೆಯ್ದ ಸೀರೆಯೂ, ಶತಾವರಿಯ ಚಾಮರವೂ, ಹೊಸ ತಾವರೆದಂಟಿನ ತೋಳುಬಳೆಯೂ, ಮುತ್ತಿನ ಹಾರವೂ, ಕನ್ನೈದಿಲೆಯ ಕಿವಿಯಾಭರಣವೂ, ಆಗತಾನೆ ಸ್ನಾನಮಾಡಿರುವುದರಿಂದ ಒದ್ದೆಯಾದ ತಲೆಗೂದಲುಗಳೂ, ಶ್ರೀಗಂಧದ ಲೇಪನವೂ ಶೋಭಿಸುತ್ತಿರಲು ಅಲ್ಲಿದ್ದ ವಾರಾಂಗನೆಯರು ಜಲದೇವಿಯರಂತೆ ಕಂಗೊಳಿಸುತ್ತಿದ್ದರು. ವ॥ ಮತ್ತು ಅಲ್ಲಿ ತಾವರೆದಂಟಿನ ಬೀಸಣಿಗೆ, ಕರ್ಪೂರದ ವಾಸನೆಪುಡಿ, ಶ್ರೀಗಂಧ, ಚಂದ್ರಕಾಂತಶಿಲೆಯ ಕನ್ನಡಿ ಮೊದಲಾದ ಉಪಕರಣಗಳನ್ನು ಕೈಯಲ್ಲಿ ಹಿಡಿದುಕೊಂಡಿರುವ ಕೆಲವರು ವಾರಾಂಗನೆಯರಿದ್ದರು. ಅದು ಬೇಸಿಗೆಕಾಲಕ್ಕೆ ಅವಮಾನಗೊಳಿಸುವ ಸ್ಥಳವೆನಿಸಿ, ಶೀತಕಾಲಕ್ಕೆ ವಾಸಸ್ಥಾನವೆನಿಸಿ, ಹಿಮಾಲಯಕ್ಕೆ ಒಡಹುಟ್ಟಿದವನೆನಿಸಿ ಶೋಭಿಸುತ್ತಿತ್ತು. ಇಂತಹ ಜಲಮಂಡಪವನ್ನು ಪ್ರವೇಶಿಸಿ ತಂಪಾದ ಶಿಲಾತಲದಲ್ಲಿ ದೇಹವನ್ನು ಈಡಾಡಿ ೧೨೫. ರಾಜಕುಮಾರನು ಮನ್ಮಥಸಂತಾಪವುಳ್ಳ—ಮೊಸಳೆಯಿಂದ ಅಲೆಗಳನ್ನೆಬ್ಬಿಸುವ, ತನ್ನ ಗೆಳೆಯನ ಅಗಲಿಕೆಯೆಂಬ ಬಡಬಾಗ್ನಿಯಿಂದ ನಿವಾರಿಸಲ ಸಾಧ್ಯವಾದ ಆ ಹಗಲೆಂಬ ಸಮುದ್ರವನ್ನು ಧೈರ್ಯವೆಂಬ ಹಡಗಿನಿಂದ ದಾಟಿದನು. ವ॥ ಹಾಗೆ ಸೂರ್ಯನು ಮುಳುಗಲಾಗಿ ಸಾಯಂಕಾಲದಲ್ಲಿ ರಾಜಕುಮಾರನು ಆ ಜಲಮಂಡಪದಿಂದ ಹೊರಟು ಜಲಸೇಚನದ ತಂಪಿನಿಂದಲೂ, ಹೂವಿನ ಚೆಲ್ಲುವಿಕೆಯಿಂದಲೂ, ಮನೋಹರವಾದ ಬಿಡಾರದ ಅಂಗಳದಲ್ಲಿಳಿದು ಸನ್ನಿಹಿತರಾದ

ತರಿಸಿ ಸಮಾಸನ್ನ ರಾಜಲೋಕದೊಡನೆ ವೈಶಂಪಾಯನವೃತ್ತಾಂತಮನೆ ನುಡಿಯುತ್ತುಂ ಕಿಱಿದು ಬೇಗಮಿರ್ದೆರಡನೆಯ ಜಾವಮುಳ್ಳಂತೆ ಬೀಡಂ ನಡೆಯಿಸೆಂದು ಪಡೆವಳ್ಳಂಗೆ ಬೆಸಸಿ ರಾಜ ಲೋಕಮಂ ವಿಸರ್ಜಿಸಿ ಸೆಜ್ಜೆಗೆವಂದನಂತರಂ ಕಿಱಿದುಬೇಗಕ್ಕೆ ಚಿರಾಂತರಿತೋಜ್ಜಯನೀದರ್ಶ ನೋತ್ಸುಕತೆಯಿಂ ಕಟಕಜನಂ ಪ್ರಯಾಣನಾಂದೀನಿನಾದಮಂ ಕೇಳದೆ ಉಜ್ಜಯಿನಿಯ ಬಟ್ಟೆ ವಿಡಿದು ನಡೆಯೆ ತಾನುಮುಲಬ್ಧನಿದ್ರಾವಿನೋದನಾಗಿ ತೃತೀಯಯಾಮದೊಳೆ ಬಹುತುರಗಕರಿಣೀ ವಾಹನಾರೂಢ ಕತಿಪಯ ರಾಜಪುತ್ರರಂಬೆರಸು ಕಟಕಜನದೆ ಸಂದಣಿಸಿದ ಬಟ್ಟೆವಿಡಿದು ನಡೆಯು ಲಿರುಳುಮಾ ಬಟ್ಟೆಯೊಡನೆ ಪಱಿಪಟ್ಟು ಪೋಗೆ

ಜಲನಿಧಿಯಂ ಪೀರ್ದಲ್ಲಿಯ
ಜಲಚರಮಂ ಕೂಡೆ ತೆಗೆಪಿದೆಂ ತೆಗೆಪುವೆನಿಂ
ಸ್ಥಲಚರಮನೆಂದು ವಡಬಾ
ನಲನೇಟ್ವವೊಲೊಗೆದುದರ್ಕಮಂಡಳಮಾಗಳ್ ೧೨೬

ವ॥ ಅಂತು ನೇಸಱ್ ಮೂಡಲೊಡಂ ಕಟಕಂಬೆರಸುಜ್ಜಯಿನಿಗೆವಂದಲ್ಲಿಗಲ್ಲಿಗೆ ಗಳ ದ್ಬಾಷ್ಪನಯನರಾಗಿ ಪರಿತಂದು ವೈಶಂಪಾಯನವೃತ್ತಾಂತಮನೆ ಬೆಸಗೊಳ್ವ ಪುರಜನಂಗಳಂ ಚಂದ್ರಾಪೀಡಂ ನೋಡಿ

ರಾಜರೊಂದಿಗೆ ವೈಶಂಪಾಯನನ ವೃತ್ತಾಂತವನ್ನೇ ಮಾತನಾಡುತ್ತ ಸ್ವಲ್ಪಕಾಲವಿದ್ದನು. ಎರಡನೆಯ ಜಾವದಲ್ಲಿ ಸೈನ್ಯವನ್ನು ಹೊರಡಿಸುವಂತೆ ಸೇನಾಪತಿಗೆ ಅಪ್ಪಣೆಮಾಡಿ, ರಾಜರನ್ನೆಲ್ಲ ಕಳುಹಿಸಿ ಹಾಸಿಗೆಯಲ್ಲಿ ಮಲಗಿ, ಸ್ವಲ್ಪಹೊತ್ತಿನಲ್ಲೇ ಬಹಳಕಾಲದಿಂದ ಅಗಲಿದ್ದ ಉಜ್ಜಯಿನಿಯನ್ನು ನೋಡಬೇಕೆಂಬ ಕುತೂಹಲದಿಂದ ಸೈನ್ಯದ ಜನರು ಪ್ರಯಾಣದ ಮಂಗಳಧ್ವನಿಯನ್ನೂ ನಿರೀಕ್ಷಿಸದೆ ಉಜ್ಜಯಿನಿಯ ದಾರಿಯನ್ನು ಹಿಡಿಯಲಪೇಕ್ಷಿಸಿದನು. ತನಗೂ ನಿದ್ರೆ ಬಾರದಿರಲು ಮೂರನೆಯ ಜಾವ ದಲ್ಲೆ ಕುದುರೆ ಹೆಣ್ಣಾನೆಗಳನ್ನೇರಿ ಹೊರಟಿರುವ ಪಲವು ಮಂದಿ ರಾಜಪುತ್ರ ರೊಂದಿಗೆ ಕೂಡಿ, ಸೈನ್ಯದ ಜನರಿಂದ ತುಂಬಿಕೊಂಡಿದ್ದ ದಾರಿಯನ್ನು ಹಿಡಿದು ನಡೆಯುತ್ತಿರಲು ದಾರಿಯೂ ರಾತ್ರಿಯೂ ಕಳೆದುಹೋದವು. ೧೨೬. "ಸಮುದ್ರ ವನ್ನು ಹೀರಿ ಅಲ್ಲಿಯ ಜಲಚರಗಳನ್ನು ಒಟ್ಟಿಗೆ ಹೊರಡಿಸಿದೆನು. ಇನ್ನು ಭೂಮಿಯ ಮೇಲಿರುವ ಪ್ರಾಣಿಗಳನ್ನು ಹೊರಡಿಸುತ್ತೇನೆ (ಎಚ್ಚರಿಸುತ್ತೇನೆ)" ಎಂದು ಬಡಬಾಗ್ನಿಯು ಏಳುತ್ತಿರುವಂತೆ ಸೂರ್ಯಮಂಡಲವು ಮೇಲಕ್ಕೆ ಬಂತು. ವ॥ ಹಾಗೆ ಸೂರ್ಯನು ಹುಟ್ಟಲಾಗಿ ಚಂದ್ರಾಪೀಡನು ಸೈನ್ಯಸಮೇತನಾಗಿ ಉಜ್ಜಯಿನಿಗೆ ಬಂದು, ಅಲ್ಲಲ್ಲಿ ಕಣ್ಣೀರು ಸುರಿಸುತ್ತ ವೈಶಂಪಾಯನನ ವೃತ್ತಾಂತವನ್ನೇ ಕೇಳುತ್ತಿರುವ ಪಟ್ಟಣಿ

ಇನಿವಿರಿದಬಲನ್ಯರೊಳಂ
ಜನಿಯಿಸಿತೆನೆ ಬಯಸಿ ಪಡೆದು ತೊಡೆಯೊಳಿರಿಸಿ ಮು
ದ್ದನೊಲಿಲ್ದು ನೋಡಿ ನಡೆಪಿದ
ಜನನೀ ಜನಕರ್ಗದೆನಿತಟಲ್ ಜನಿಯಿಕುಮೋ ೧೨೭

ತನಯವಿಯೋಗವಿಹ್ವಲತೆಯಿಂ ಮಗನೆಲ್ಲಿದನೆಂದೊಡೇನನೆಂ
ಬೆನೊ ಗುರುಗಳ್ಗೆ ಪಿಂದೆ ಪರಭೂವಿಯನಾಕ್ರಮಿಸಲ್ಕೆ ನಿಂದನೆಂ
ಬೆನೊ ಪರಭೂಪರಂ ಕವರ್ದು ಕಪ್ಪವನೀಟಿಕೊಳಲೆಂದು ನಿಂದನೆಂ
ಬೆನೊ ಪೊಸತೊಂದು ವಿದ್ಯೆಯನುಪಾರ್ಜಿಸವೇಡಿಯೆ ನಿಂದನೆಂಬೆನೋ ೧೨೮

ವ॥ ಎಂದು ನಿಜಾಂತರಂಗದೊಳ್ ಚಿಂತಿಸುತ್ತಮುಜ್ಜಯಿನಿಯಂ ಪೊಕ್ಕರಮನೆಯ ಬಾಗಿಲನೆಯ್ದೆವರ್ಪುದುಂ ವಿಳಾಸವತಿಮಹಾದೇವಿವೆರಸರಸನಾರ್ಯ ಶುಕನಾಸನರಮನೆಗೆ ಬಿಜಯಂಗೆಯ್ದನೆಂಬುದಂ ಕೇಳ್ದು ತಾನುಮಲ್ಲಿಗೆ ಪೋಪಾಗಳಭ್ಯಂತರಮಂಟಪದಲ್ಲಿ

ಇದಿರೊಳ್ ತಾನುಮಿರಲ್ಕೆ ಹಾ ! ತನಯ ವೈಶಂಪಾಯನಾ ನೀಡುಮಂ
ಕವೊಳಿನ್ನುಂ ನೆಲಸಿರ್ಪ ಬಾಲಕನೆ ನಾನಾ ವ್ಯಾಳಕೋಲಾಹಲಾ
ಸ್ಪದಮುಂ ನಿರ್ಮನುಜಪ್ರವೇಶಮುಮೆನಿಪ್ಪಾ ಘೋರಕಾಂತಾರದ ಮ
ಧ್ಯದೊಳೋರೋರ್ವರುಮಿಲ್ಲದಾವ ತೆಜದಿಂದೇಕಾಕಿಯಾಗಿರ್ದಪಯ್ ೧೨೯

ಗರನ್ನು ನೋಡಿ ೧೨೭. "ವೈಶಂಪಾಯನನ ವೃತ್ತಾಂತವನ್ನು ಕೇಳಿ ಹೊರಗಿನ ಜನಕ್ಕೇ ಇಷ್ಟೊಂದು ವ್ಯಥೆಯುಂಟಾಗುತ್ತಿದೆಯಲ್ಲ ! ಬಯಸಿ ಪಡೆದು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಮುದ್ದು ಮಗನನ್ನು ಪ್ರೀತಿಯಿಂದ ನೋಡಿ ಕಾಪಾಡಿದ ತಾಯಿ ತಂದೆಗಳಿಗೆ ಇನ್ನೆಷ್ಟು ದುಃಖವುಂಟಾಗುತ್ತದೆಯೊ ! ೧೨೮. ಪುತ್ರವಿರಹದ ಅಳಲಿನಿಂದ 'ನಮ್ಮ ಮಗನೆಲ್ಲಿ ?' ಎಂದು ಅವನ ತಾಯಿ ತಂದೆಗಳು ಕೇಳಿದರೆ, ನಾನು ಏನು ಹೇಳಲಿ ? ಶತ್ರುರಾಜ್ಯವನ್ನು ಗೆಲ್ಲುವುದಕ್ಕಾಗಿ ಹಿಂದೆ ನಿಂತಿದ್ದಾನೆ ಎಂದು ಹೇಳಲೆ ? ಶತ್ರುರಾಜರನ್ನು ಆಕ್ರಮಿಸಿ ಕಪ್ಪವನ್ನು ಸೆಳೆದುಕೊಳ್ಳಬೇಕೆಂದು ನಿಂತಿದ್ದಾನೆ ಎಂದು ಹೇಳಲೆ ? ಬೇರೊಂದು ಹೊಸ ವಿದ್ಯೆಯನ್ನು ಕಲಿತುಕೊಳ್ಳಬೇಕೆಂದು ನಿಂತಿದ್ದಾನೆ ಎಂದು ಹೇಳಲೊ ?" ವ॥ ಎಂದು ತನ್ನ ಮನಸ್ಸಿನಲ್ಲಿ ಚಿಂತಿಸುತ್ತ ಉಜ್ಜಯಿನಿಯನ್ನು ಹೊಕ್ಕು ಅರಮನೆಯ ಬಾಗಿಲಿಗೆ ಬಂದನು. ವಿಲಾಸವತಿಮಹಾರಾಣಿಯೊಂದಿಗೆ ಮಹಾರಾಜನು ಮಂತ್ರಿಯಾದ ಶುಕನಾಸನ ಅರಮನೆಗೆ ಬಿಜಯಮಾಡಿದನೆಂದು ಕೇಳಿ ತಾನೂ ಅಲ್ಲಿಗೆ ಹೋದನು. ಒಳಗಿನ ಮಂಟಪದಲ್ಲಿ ೧೨೯. "ಅಯ್ಯೊ ! ಮಗುವೆ ! ವೈಶಂಪಾಯನ, ನನ್ನ ತೊಡೆಯ ಮೇಲೆ ಇನ್ನೂ ಬೆಳೆಯುತ್ತಿರುವ ಹುಡುಗನೆ, ನಾನಾ ಬಗೆಯ ದುಷ್ಟಮೃಗಗಳ ಗದ್ದಲದಿಂದ ಕೂಡಿರುವ, ಮನುಷ್ಯಪ್ರವೇಶವೇ ಇಲ್ಲದ ಭಯಂಕರವಾದ ಕಾಡಿನ ಮಧ್ಯದಲ್ಲಿ ನಾನು ಬದುಕಿರುವಾಗಲೆ, ಜೊತೆಗೆ ಒಬ್ಬರೂ ಇಲ್ಲದೆ ಒಬ್ಬಂಟಿಗನಾಗಿ

ಮಗುೞ್ದೀಗಳ್ ಜಯಯಾತ್ರೆಯಿಂ ಮಗನೆ ನೀನೆಟ್ಟಪೂರ್ವದುಂ ನಿನ್ನ ತಂ
ದೆಗೆ ಪೇೞ್ದಿಂ ನಿನಗಲ್ತೆ ಬೇಗವೆ ವಿವಾಹೋತ್ಸಾಹಮಂ ಮಾಡಿ ಕೆಯ್
ಮಿಗುವತ್ಯುತ್ಸವದಿಂ ವಧೂವದನಮಂ ನೋೞ್ಪೆಂದಲೆಂದಿರ್ದೆನ
ನ್ನೆಗಮಂತಿರ್ಕದು ಕೂಡಿತಿಲ್ಲೆನಗೆ ಮುನ್ನಂ ನಿನ್ನುಮಂ ಕಾಣ್ಬುದುಂ ೧೩೦

ಮಗನೆ ಕಿಱಿದೆಮ್ಮನಗಲಲ್
ಬಗೆದಂದೊಡದೇನೊ ಪುಟ್ಟಿದಂದು ಮೊದಲ್ಗೊಂ
ಡಗಲದ ಚಂದ್ರಾಪೀಡನ
ನಗಲ್ದಿರಲ್ ನೀನದೆಂತು ಪೇೞ್ ಬಗೆದಂದೈ ೧೩೧

ವ॥ ಎಂದಿವು ಮೊದಲಾಗಿ ಪಲವುಮಂ ಪಲುಂಬಿ ಪಂಬಲಿಸುವ ವೈಶಂಪಾಯನನ ತಾಯ ಸರಮಂ ಕೇಳ್ದು

ಮನೆಯಂ ಮನೋರಮಾನಂ
ದನನಿಲ್ಲದದೆಂತು ಪುಗುವೆ ನಾನೀಗಳ್ ನಂ
ದನನ ವಿಯೋಗದೆ ಮಱುಗುವ
ಮನೋರಮೆಯ ಮೊಗವನಾವ ಮೊಗದೊಳ್ ನೋೞ್ಪೆಂ ೧೩೨

ವ॥ ಎಂದು ತನ್ನ ಮನದೊಳೆ ಬಗೆಯುತ್ತಂ ಶುಕನಾಸಭವನಮಂ ಪುಗುವಲ್ಲಿ

ಶರನಿಧಿಪತಿಮಥನಾನಂ
ತರದೊಳ್ ಮರವಟ್ಟು ಮಂದರಂ ಬೆರಸಿರ್ಪಂ
ತಿರುತಿರ್ದಂ ಶುಕನಾಸಂ
ಬೆರಸು ಜಡೀಭೂತನಾಗಿ ತಾರಾಪೀಡಂ ೧೩೩

ಹೇಗೆ ಇದ್ದೀಯಪ್ಪ ! ೧೩೦. ಮಗನೆ, ನೀನು ದಿಗ್ವಿಜಯಯಾತ್ರೆಯಿಂದ ಮರಳಿ ಬಂದ ಮೇಲೆ ನಿನ್ನ ತಂದೆಗೆ ಹೇಳಿ ಬೇಗನೆ ನಿನಗೆ ಮದುವೆಯನ್ನು ಬಹಳ ಉತ್ಸಾಹ ದಿಂದ ಮಾಡಿ ಸೊಸೆಯ ಮುಖವನ್ನು ನೋಡಬೇಕೆಂದಿದ್ದೆನು. ಅಷ್ಟರಲ್ಲಿ ಮದುವೆ ಮಾಡುವುದು ಹಾಗಿರಲಿ. ಈಗ ನಿನ್ನ ಮುಖವನ್ನು ಕೂಡ ನೋಡುವಂತಾಗಲಿಲ್ಲವಲ್ಲ. ೧೩೧. ಮಗನೆ, ನಮ್ಮನ್ನು ಅಗಲುವುದು ಅಲ್ಪವಿಷಯವೆಂದು ನೀನು ಆಲೋಚಿಸಿರ ಬಹುದು. ಅದೇನೋ ನನಗೆ ತಿಳಿಯದು, ಹೋಗಲಿ. ಆದರೆ ಹುಟ್ಟಿದಂದಿನಿಂದ ಒಂದು ದಿನವೂ ನಿನ್ನನ್ನು ಬಿಟ್ಟಿರದ ಚಂದ್ರಾಪೀಡನನ್ನು ಅಗಲಿರಲು ನೀನು ಹೇಗೆ ಮನಸ್ಸು ಮಾಡಿದೆ ? ಹೇಳು." ವ॥ ಎಂದು ಇವೇ ಮೊದಲಾಗಿ ಅನೇಕ ಬಗೆಯಲ್ಲಿ ಹಲುಬಿ ಹಂಬಲಿಸುತ್ತಿರುವ ವೈಶಂಪಾಯನನ ತಾಯಿಯ ಅಳುವ ಧ್ವನಿಯನ್ನು ಕೇಳಿ ೧೩೨. "ವೈಶಂಪಾಯನನಿಲ್ಲದ ಮನೆಗೆ ನಾನು ಈಗ ಹೇಗೆ ಹೋಗಲಿ ? ಮಗನ ವಿರಹದಿಂದ ಪರಿತಪಿಸುವ ಮನೋರಮೆಯ ಮುಖವನ್ನು ನಾನು ಯಾವ ಮುಖದಿಂದ ನೋಡಲಿ ?" ವ॥ ಎಂದು ತನ್ನ ಮನಸ್ಸಿನಲ್ಲೆ ಚಿಂತಿಸುತ್ತ ಶುಕನಾಸನ ಮನೆಯ ಒಳಕ್ಕೆ ಹೋದನು. ೧೩೩. ಕಡೆದ ಮೇಲೆ ಸ್ತಬ್ಧವಾದ ಸಮುದ್ರವು ಮಂದರಪರ್ವತದೊಂದಿಗೆ ಇರುವಂತೆ

ವ॥ ಅಂತಿರ್ದ ತನ್ನ ತಂದೆಯಂ ಕಂಡು ಲಜ್ಜಿಸಿ ತಲೆಯಂ ಬಾಗಿ ದೂರದೊಳ್ ಪೊಡವಟ್ಟು ಕೆಲಕ್ಕೆ ಪೋಗಲಮ್ಮದಗಲೆ ಕುಳ್ಳಿರ್ದ ಚಂದ್ರಾಪೀಡನ ಮೊಗಮಂ ನೋಡಿ

ಮೞೆ ಸುರಿಯಲ್ಕಿರ್ದ ಮುಗಿಲ್
ಮೊೞಗುವವೊಲ್ ಮೊೞಗಿ ತಳೆದು ಕಣ್ಣೀರಂ ಕೆ
ಯ್ಗೞಿದಟಲುಗೆ ಮಗನಂ ಮೆ
ಯ್ವೞಿಯಿಂದವೆ ನುಡಿದನೆಂದು ತಾರಾಪೀಡಂ ೧೩೪

ಆನ್ನೞಿಯೞಿವೆಂ ನಂದನ
ನಿನ್ನನುಜನ ಮೇಲೆ ನಿನಗೆ ನಿರತಿಶಯಸ್ನೇ
ಹನ್ನಿರುತಮುಳ್ಳುದುಮನಾ
ತನ್ನಿನ್ನನಗಲ್ದ ನೋವು ಪಿರಿದೆಂಬುದುಮಂ ೧೩೫

ವ॥ ಆದೊಡಂ

ವಿನಯಕ್ಕಂ ವಯಸಕ್ಕವಾಕೃತಿಗವೊಂದಿಂಗಂ ಗುರುವ್ರಾತಶಾ
ಸನಕಂ ಕೂರ್ವೆಗವಲ್ಲದಂತುಟನಿದೊಂದಂ ಮಾಡೆ ನೀಂ ನಿನ್ನ ತ
ಮ್ಮನ ವೃತ್ತಾಂತಮನಿಂದು ಕೇಳ್ದಿನಿತುಮಂ ನಿನ್ನಿಂದಲಾಯ್ತೆಂದು ಮ
ನ್ಮನವಾಶಂಕೆಯನಪ್ಪುಕೆಯ್ದಪುದು ನೋಡೇನೆಂಬೆನಾನಿಂತಿದಂ ೧೩೬

ವ॥ ಎಂದು ನುಡಿದ ತಾರಾಪೀಡನರೇಂದ್ರನನಾಕ್ಷೇಪಂಗೆಯ್ದು

ಸ್ತಂಭೀಭೂತನಾದ ತಾರಾಪೀಡನು ಶುಕನಾಸನ ಜೊತೆಯಲ್ಲಿದ್ದನು. ವ॥ ಹಾಗಿದ್ದ ತನ್ನ ತಂದೆಯನ್ನು ನೋಡಿ ಲಜ್ಜಿಸಿ, ತಲೆಯನ್ನು ಬಗ್ಗಿಸಿ ದೂರದಲ್ಲಿ ನಮಸ್ಕರಿಸಿ, ಹತ್ತಿರಕ್ಕೆ ಹೋಗಲಾರದೆ ದೂರದಲ್ಲೆ ಕುಳಿತುಕೊಂಡನು. ಚಂದ್ರಾಪೀಡನ ಮುಖವನ್ನು ನೋಡಿ ೧೩೪. ತಾರಾಪೀಡನು ಕಣ್ಣಿನಲ್ಲಿ ನೀರನ್ನು ತಳೆದು, ಹೆಚ್ಚಾದ ಅಳಲುಂಟಾಗಲು ಮಳೆ ಸುರಿಸಲಿರುವ ಮೋಡವು ಧ್ವನಿ ಮಾಡುವಂತೆ ಗಂಭಿರವಾಗಿ ಅನುನಯದಿಂದಲೆ ಹೇಳಿದನು. ೧೩೫. "ಮಗನೆ, ನಿನ್ನ ತಮ್ಮನಾದ ವೈಶಂಪಾಯನನ ಮೇಲೆ ನಿನಗೆ ಮಿಗಿಲಾದ ಗೆಳತನವಿರುವುದನ್ನು ನಾನು ಚೆನ್ನಾಗಿ ತಿಳಿದುಕೊಂಡಿದ್ದೇನೆ. ಅಲ್ಲದೆ ಆತನು ನಿನ್ನನ್ನು ಅಗಲಿರುವ ವ್ಯಥೆಯು ನಿನಗೆ ಬಹಳ ಹೆಚ್ಚಾಗಿದೆ ಎಂಬುದನ್ನೂ ನಾನು ಚೆನ್ನಾಗಿ ಬಲ್ಲೆನು. ವ॥ ಆದರೂ ೧೩೬. ವೈಶಂಪಾಯನನು ವಯಸ್ಸಿಗೂ ಸ್ನೇಹಕ್ಕೂ ಗುರೂಪದೇಶಕ್ಕೂ ಪ್ರೀತಿಗೂ ಉಚಿತವಲ್ಲದ ಈ ಕೆಲಸವನ್ನು ಮಾಡಿದ್ದಾನೆ. ಈಗ ನಾವು ಕೇಳಿದ ನಿನ್ನ ತಮ್ಮನ ಈ ಸಂಗತಿಗಳು ನಡೆದಿರುವುದಕ್ಕೂ ನಿನ್ನದೇ ಏನಾದರೂ ತಪ್ಪಿರ ಬಹುದೆಂದು ನನ್ನ ಮನಸ್ಸಿಗೆ ಸಂದೇಹವುಂಟಾಗಿದೆ ನೋಡಪ್ಪ ! ನಾನು ಇನ್ನು ಏನು ಹೇಳಲಿ ?" ವ॥ ಹೀಗೆ ಹೇಳಿದ ತಾರಾಪೀಡಮಹಾರಾಜನನ್ನು ಮಧ್ಯದಲ್ಲೆ ತಡೆದು

ಪೊಳೆದಪುವು ಕಾರಕರ್ಮುಗಿ
ಲೊಳಗೆಳಮಿಂಚುಗಳಿವೆನಿಸಿ ಮುಳಿಸಿಂ ಕಡುಗ
ರ್ಪೆಳಸಿದ ನಿಜವದನದೊಳ
ಗ್ಗಳವಧರಂ ಕೆತ್ತೆ ಮಂತ್ರಿಮುಖ್ಯಂ ನುಡಿದಂ ೧೩೭

ನೆಟ್ಟನೆ ಚಂದ್ರನೊಳ್ ಬಿಸುಪು ಪುಟ್ಟದವೊಲ್ ನೃಪರೂಪಚಂದ್ರನೊಳ್
ಪುಟ್ಟದುಮಂತಿದಂ ತಿಳಿವುಗೆಟ್ಟ ಕೃತಜ್ಞತೆಗೆಟ್ಟ ಪೌರುಷಂ
ಗೆಟ್ಟ ದುರಾತ್ಮನಂ ಕುಱಿತು ಭಾವಿಸದೇನುಮನೀ ಮಹಾತ್ಮನಂ
ತೊಟ್ಟನೆನಿಂತು ದೇವ ಯುವರಾಜನನೀ ತೆಱದಿಂ ಪೆಸರ್ಪುದೇ ೧೩೮

ಆರಾನುಂ ದೋಷಮನ
ಧ್ಯಾರೋಪಿಸೆ ಗುಣಿಗಳರಮೆ ನೋವರೆನಲ್ ತ
ಮ್ಮಾರಾಧ್ಯರೆ ದೋಷಮನ
ಧ್ಯಾರೋಪಿಸೆ ನೋವುದರ್ಕೆ ಪೇಟು ಕಡೆಯುಂಟೇ ೧೩೯

ಒಡಲೆರಡು ಜೀವವೊಂದೆನೆ
ಕಡುಗೂರ್ಪುದನಱಿಯದಿಂತು ದುಷ್ಕೃತದಿಂದಂ
ತೊಡರ್ದವನೆ ತಾನೆ ತನ್ನಿಂ
ಕಿಡೆ ಚಂದ್ರಾಪೀಡನಂತದರ್ಕೇಗೆಯ್ವಂ ೧೪೦

೧೩೭. ಕಪ್ಪಾದ ಮೋಡದಲ್ಲಿ ಕೋಲುಮಿಂಚುಗಳು ಹೊಳೆಯುತ್ತಿವೆಯೋ ಎಂಬಂತೆ ಕೋಪದಿಂದ ಹೆಚ್ಚಾಗಿ ಕಪ್ಪಿಟ್ಟಿರುವ ತನ್ನ ಮುಖದಲ್ಲಿ ತುಟಿಯು ಬಹಳ ಅದುರುತ್ತಿರಲು ಮುಖ್ಯಮಂತ್ರಿಯು ಹೇಳಿದನು. ೧೩೮. "ದೇವ, ಚಂದ್ರನಲ್ಲಿ ಉಷ್ಣವು ಹೇಗೆ ಹುಟ್ಟುವುದಿಲ್ಲವೋ ಹಾಗೆಯೆ ಈ ರಾಜರೂಪನಾದ ಚಂದ್ರನಲ್ಲಿ ತಪ್ಪು ಉಂಟಾಗುವುದಿಲ್ಲ. ಈ ತಪ್ಪು ತಿಳಿಗೇಡಿಯಾದ, ಕೃತಘ್ನನಾದ, ಪುರುಷತ್ವವಿಲ್ಲದ, ದುರ್ಬುದ್ಧಿಯುಳ್ಳ ಆತನದೇ ಎಂದು ತಿಳಿದುಕೊಳ್ಳದೆ ಮಹಾತ್ಮನಾದ ಈ ಯುವರಾಜನನ್ನು ನಿಷ್ಕಾರಣವಾಗಿ ಈ ರೀತಿ ದೂಷಿಸಬಹುದೆ ? ೧೩೯. ಬೇರೆ ಯಾರಾದರೂ ದೋಷವನ್ನು ಆರೋಪಿಸಿದರೂ ಗುಣವಂತರು ಬಹಳವಾಗಿ ನೊಂದುಕೊಳ್ಳುತ್ತಾರೆ. ಹೀಗಿರಲು ಪೂಜ್ಯರಾದ ಗುರುಹಿರಿಯರೇ ಆರೋಪಿಸಿಬಿಟ್ಟರೆ, ಆಗ ಉಂಟಾಗುವ ಮನೋವ್ಯಥೆಗೆ ಪಾರವಿದೆಯೆ ? ೧೪೦. ದೇಹವೆರಡು ಜೀವವೊಂದು ಎಂಬಂತೆ ಬಹಳವಾಗಿ ಪ್ರೀತಿಸುತ್ತಿರುವುದನ್ನು ತಿಳಿದುಕೊಳ್ಳದೆ ಹೀಗೆ ಪಾಪಕೃತ್ಯದಿಂದ ಕೂಡಿಕೊಂಡಿರುವ ಅವನು ತಾನೆ ತನ್ನಿಂದ ಕೆಟ್ಟುಹೋದರೆ, ಅದಕ್ಕೆ ಪಾಪ, ಚಂದ್ರಾಪೀಡನು ಏನು

ಪುಟ್ಟಿದ ತಾಣಕ್ಕಟಿವಂ
ಪುಟ್ಟಿಸಲೊಡರಿಸುವ ಕಿಚ್ಚು ತೆಟಿಕ್ರಿಮಿ ಕುತ್ತಂ
ಪುಟ್ಟುವವೋಲ್ ದುಷ್ಕೃತದಿಂ
ಪುಟ್ಟಿದನೀ ಪಾಪಕರ್ಮನೆನ್ನಯ ಬಸುಱಿಂ ೧೪೧

ಗಿಳಿಯಂತೋದಿಯೆ ಪೋದಂ
ಗಿಳಿಯುಂ ಮೊದಲಾಗಿ ನಡಪಿದರನಱಿದು ಮರು
ಳ್ಗೊಳಿಸುವುದವಱಿಚ್ಛೈಸುವ
ಫಳಮಿಂತಂತನಿತುಮಾದುದಿಲ್ಲಾ ಖಳನೊಳ್ ೧೪೨

ವ॥ ಆದೊಡಂ

ಪರಹಿತಮಿದಾತ್ಮಹಿತಮೆಂ
ಬೆರಡುಮನುಱಿದಟಲನೆಮಗೆ ಮಾಡಿದವಂ ನಿ
ತ್ತರಿಸಂ ತಿರ್ಯಗ್ಜಾತಿಯೊ
ಳೆರಡಿಲ್ಲದೆಯಿಂ ವಿಜಾತಿ ಪುಟ್ಟದೆ ಮಾಣಂ ೧೪೩

ವ॥ ಅಂತಗ್ಗಳಿಸಿದಟಲ ಮುಳಿಸಿಂ ಹೇಮಂತಸಮಯೋತ್ಪಲದಂತೆ ದೃಷ್ಟಿಗಳುದ್ಬಾಷ್ಪಂಗಳಾಗೆ ವೈಶಂಪಾಯನಂಗೆ ಶಾಪಂಗೊಟ್ಟ ಶುಕನಾಸನಂ ಪಿರಿದುಮನ್ಯಾಯಂಗೆಯ್ದನೆಂದು ಮನಂಗೊಂಡು ತಾರಾಪೀಡನಿಂತೆಂದಂ

ಮಾಡುತ್ತಾನೆ ? ೧೪೧. ತಾನು ಹುಟ್ಟುವ ಎಡೆಗೆ ನಾಶವನ್ನುಂಟುಮಾಡುವ ಬೆಂಕಿ, ಜೇಳು, ಹುಳು ರೋಗಗಳು ಹುಟ್ಟುವಂತೆ ಆ ಪಾಪಿಷ್ಠನು ನನ್ನ ಪಾಪಲೇಪದಿಂದಲೇ ನನ್ನಿಂದ ಹುಟ್ಟಿದ್ದಾನೆ. ೧೪೨. ಅವನು ಗಿಳಿಯಂತೆ ಸುಮ್ಮನೆ ಓದಿಕೊಂಡು ಹೋಗಿದ್ದಾನೆ, ಗಿಳಿಯೂ ಕೂಡ ಪೋಷಿಸಿದವರನ್ನು ತಿಳಿದುಕೊಂಡು, ಅವರಿಗೆ ಮೋಹವನ್ನುಂಟು ಮಾಡುತ್ತದೆ. ಅವರು ಬಯಸುವ ಫಲವೂ ಇದೇ. ಅಷ್ಟೂ ಕೂಡ ಆ ದುಷ್ಟನಿಂದ ಉಂಟಾಗಲಿಲ್ಲವಲ್ಲ! ವ॥ ಆದರೂ ೧೪೩. 'ಇದು ಇತರರಿಗೆ ಹಿತವಾಗುತ್ತದೆ. ಇದು ತನಗೆ ಹಿತವಾದುದು' ಎಂಬ ವಿಚಾರವನ್ನೇ ಬಿಟ್ಟು ನಮಗೆ ಅಳಲನ್ನುಂಟುಮಾಡಿದ ಇವನು ಪೂರೈಸುವುದಿಲ್ಲ (ಕೊನೆಮುಟ್ಟುವುದಿಲ್ಲ). ಇನ್ನು "ವಿಜಾತಿ" (೧. ವಿಚಿತ್ರ ೨. ಹಕ್ಕಿಯ ಜಾತಿ)ಯಾದ ಇವನು ಅದೇ ಪಶುಪಕ್ಷಿಗಳ ಜಾತಿಯಲ್ಲಿ ಹುಟ್ಟದಿರುವುದಿಲ್ಲ !" ವ॥ ಹೀಗೆ ಅತಿಶಯವಾದ ವ್ಯಥೆಯಿಂದುಂಟಾದ ಕೋಪದಿಂದ ಚಳಿಗಾಲದ ನೈದಿಲೆ ಯಂತೆ ಕಣ್ಣುಗಳು ನೀರು ತುಂಬಿಕೊಂಡಿರಲಾಗಿ ವೈಶಂಪಾಯನನಿಗೆ ಶಾಪವನ್ನಿತ್ತ ಶುಕನಾಸನು ಬಹಳ ಅನ್ಯಾಯ ಮಾಡಿಬಿಟ್ಟನೆಂದು ತಿಳಿದುಕೊಂಡು ತಾರಾಪೀಡನು

ಜಲನಿಧಿಯುಂ ಮುಗಿಲ್ವನಿಗಳಿಂದಮುಗುರ್ವಿಸುವಂತೆ ನಿಮ್ಮನಾಂ
ತಿಳಿಪೆದಪೆಂ ಗಡಾದೊಡಮುಸಹ್ಯಮೆನಿಪ್ಪತಿದುಃಖದಿಂದಮಾ
ವಿಳಮೆನಿಸಿರ್ಪುದಗ್ಗದ ವಿವೇಕಿಗಳಪ್ಪರ ಮಾನಸಂಗಳುಂ
ತಿಳಿಗೊಳನಾದೊಡಂ ಮಳೆಯ ನೀರ್ಗಳಿನಾವಿಲಮಾಗದಿರ್ಕುಮೇ ೧೪೪

ಪರಮಾರ್ಥಂ ನಿಜಜನಕರ್
ಪರಸಿದ ಪರಕೆಗಳು ಬಯ್ದು ಬಯ್ಗುಳ್ ಮಕ್ಕ
ಳ್ಗಿರದೆಯ್ದುಗುಮದರಿಂದಂ
ತಿರೆ ಶಪಿಯಿಸಲಾಗದದೇಕೆ ನೀಮರಿಯದುದೇ ೧೪೫

ನಿಡುಮರನೊಂದಂ ತಾನಿ
ಟ್ಟೊಡೆ ಕೂರ್ಮೆಯನಂತದರ್ಕೆ ಗಡ ಮಾಡುವರೆಂ
ದೊಡೆ ಮುಳಿಯಲಕ್ಕುಮೇ ತ
ಮ್ಮೊಡಲಿಂದಂ ಬಂದ ಶಿಶುಗೆ ತಿಳಿವುಳ್ಳವರ್ಗಳ್ ೧೪೬

ವ॥ ಅವರಿಂ ಶಾಪಂಗುಡುವುದುಚಿತಮಲ್ತು ಯವ್ವನೋದಯದೊಳಾರ್ಗಾದೊಡಂ ಕ್ಲೇಶಬಹುಳಮಪ್ಪ ವಿಷಯಾಸಕ್ತಿ ದೊರೆಕೊಳ್ಗುಮೇನಾನುಮೊಂದು ಕಾರಣದಿಂದಮೇನಿನ್ನಾಗ್ರಹದಿನೊಡಗೊಂಡು ಬರ್ಪಂತು ವೈಶಂಪಾಯನಂಗೆ ಬರಿಯನಟ್ಟುವಮೆಂದ ತಾರಾಪೀಡ ನರೇಂದ್ರನ ಮಾತಂ ಚಂದ್ರಾಪೀಡಂ ಕೇಳ್ದು

ಹೀಗೆ ಹೇಳಿದನು. ೧೪೪. "ನಾನು ನಿಮಗೆ ತಿಳಿವಳಿಕೆಯನ್ನು ಹೇಳುವುದು ಸಮುದ್ರವನ್ನು ಮೋಡದ ಹನಿಗಳಿಂದ ಭರ್ತಿಮಾಡುವಂತೆ ಆಗುತ್ತದೆಯಲ್ಲವೆ ? ಆದರೂ ಸಹಿಸಲಸಾಧ್ಯವಾದ ಅತಿದುಃಖದಿಂದ ದೊಡ್ಡ ವಿವೇಕಿಗಳ ಮನಸ್ಸೂಕೂಡ ಕದಡಿಹೋಗುತ್ತದೆ. ಎಂತಹ ತಿಳಿಗೊಳವಾದರೂ ಮಳೆಯ ನೀರಿನಿಂದ ಕೊಳಕಾಗದೆ ಇರುತ್ತದೆಯೆ.? ೧೪೫. ನಿಜವಾಗಿಯೂ ತಾಯಿ ತಂದೆಗಳು ಹರಸಿದ ಆಶೀರ್ವಾದಗಳೂ ಬಯ್ದ ಬೈಗುಳಗಳೂ ಮಕ್ಕಳ ವಿಷಯದಲ್ಲಿ ಬಿಡದೆ ಫಲಿಸುತ್ತವೆ. ಆದ್ದರಿಂದ ಹೀಗೆ ಶಾಪಹಾಕಬಾರದು. ಇದು ನಿಮಗೆ ಗೊತ್ತಿಲ್ಲವೆ. ? ೧೪೬. ಜನರು ಒಂದು ದೊಡ್ಡ ಮರವನ್ನು ಹಾಕಿ ಬೆಳೆಸಿದರೂ ಅದರಮೇಲೆ ಬಹಳ ಮಮತೆಯನ್ನು ಇಡುತ್ತಾರಲ್ಲವೆ ? ಅಂದಮೇಲೆ ತಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಗುವಿನ ಮೇಲೆ ತಿಳಿವಳಿಕೆಯುಳ್ಳವರು ಸಿಟ್ಟುಗೊಳ್ಳಬಹುದೆ ? ವ॥ ಆದ್ದರಿಂದ ಶಾಪಕೊಡುವುದು ಸರಿಯಲ್ಲ. ಯೌವನದ ಪ್ರಾರಂಭದಲ್ಲಿ ಯಾರಿಗಾದರೂ ಹೆಚ್ಚುಕ್ಲೇಶವನ್ನುಂಟುಮಾಡುವ ಸುಖಾಭಿಲಾಷೆಯು ಯಾವುದಾದರೂ ಒಂದು ನಿಮಿತ್ತದಿಂದ ಉಂಟಾಗುತ್ತದೆ. ಇನ್ನು ಆಗ್ರಹದಿಂದ ಏನು ಪ್ರಯೋಜನ ? ಕರೆದುಕೊಂಡು ಬರುವಂತೆ ವೈಶಂಪಾಯನನ ಬಳಿಗೆ ದೂತರನ್ನು ಕಳುಹಿಸೋಣ" ಎಂದು ಹೇಳಿದ ತಾರಾಪೀಡನ ಮಾತನ್ನು ಚಂದ್ರಾಪೀಡನು

ಅಂ ಪೋಗದೆ ಬಾರಂ ವೈ
ಶಂಪಾಯನನೆಂದುಮದಱಿನೀಗಳೆ ನೀ ಮೆ
ನ್ನಂ ಪೋಗಲೆವೇೞ್ಪುದೆನು
ತ್ತುಂ ಪೆರ್ಚಿ ಸಖೇದನಾಗಿ ಮೆಲ್ಲನೆ ನುಡಿದಂ ೦೪೭

ವ॥ ಇಂತು ನುಡಿವುದುಮೀತನೇನೆಂದಪ್ಪನೆಂದು ತಾರಾಪೀಡನರೇಂದ್ರಂ ಬೆಸಗೊಳ್ವುದುಂ ಸುಹೃತ್ಸ್ನೇಹಕಾತರಹೃದಯನಾಗಿ ವೈಶಂಪಾಯನನೊಡಗೊಂಡು ಬಂದಪ್ಪೆನೆಂದು ಶುಕ ನಾಸಂಗೆ ಬಿನ್ನವಿಸೆ ತಾರಾಪೀಡನುಂ ಪೀಡಿತಾಂತರಂಗನಾಗಿ

ವಿನುತ ಸಮಗ್ರಮಂಡಲದ ಚಂದ್ರನ ಚಂದ್ರಿಕೆವೊಲ್ ನರೇಂದ್ರಚಂ
ದ್ರನ ರುಚಿರೋತ್ಕರಗ್ರಹಣಶೋಭಿತೆಯಂ ಸೊಸೆಯಂ ನಿರೀಕ್ಷಿಸಲ್
ಮನವೊಸೆದಿರ್ದೊಡಿತ್ತ ಸಚಿವಾತ್ಮಜವೃತ್ತಕಮಿಂತು ಬಂದು ತೊ
ಟ್ಟನೆ ಘನಕಾಲದಂತೆನಗೆ ದೈವದಿನಂತರಶೋಕಮಕ್ಕುಮೇ ೧೪೮

ವ॥ ಎಂದು ತನ್ನೊಳಗೆ ಬಗೆದು ಮನಮಂ ಬಲಿಕೆಯ್ದು ಶುಕನಾಸನಿಂತೆಂದಂ

ನಂದನನೆಂದುದೆ ಮತಮೆಂ
ತೆಂದೊಡೆ ಬರಲಱಿಯನಾತನುೞಿದವರಾರ್ ಪೋ
ದಂದುಂ ಪ್ರಿಯಸಖನನಗ
ಲ್ದೊಂದು ಮುಹೂರ್ತಮುಮನಾತನುಂ ನಿಲಲಱಿಯಂ ೧೪೯

ಕೇಳಿ, ೧೪೭. "ನಾನು ಹೋಗಿ ಕರೆದುಕೊಂಡು ಬರದಿದ್ದರೆ, ವೈಶಂಪಾಯನನು ಖಂಡಿತ ಬರುವುದಿಲ್ಲ. ಆದ್ದರಿಂದ ನೀವು ಈಗಲೆ ನನ್ನನ್ನು ಕಳುಹಿಸಿಕೊಡಬೇಕು" ಎಂದು ಪಿಸುಮಾತಿನಲ್ಲಿ ದುಃಖದಿಂದ ಮೆಲ್ಲನೆ ಹೇಳಿದನು. ವ॥ ಹೀಗೆ ಹೇಳಲಾಗಿ 'ಈತನು ಏನು ಹೇಳುತ್ತಾನೆ ?' ಎಂದು ತಾರಾಪೀಡಮಹಾರಾಜನು ಕೇಳಿದನು. ಗೆಳೆಯನ ಸ್ನೇಹದಿಂದ ದುಃಖಿಗೊಂಡ ಮನಸ್ಸುಳ್ಳ ಚಂದ್ರಾಪೀಡನು ಶುಕನಾಸನನ್ನು ಕುರಿತು ವೈಶಂಪಾಯನನನ್ನು ಕರೆದುಕೊಂಡು ಬರುವೆನೆಂದು ಹೇಳಿದನು. ಇದನ್ನು ಕೇಳಿ ತಾರಾ ಪೀಡನೂ ವ್ಯಥೆಗೊಂಡ ಮನಸ್ಸುಳ್ಳವನಾಗಿ, ೧೪೮. "ರಮ್ಯವಾದ ಸಂಪೂರ್ಣ ಮಂಡಲದಿಂದ ಕೂಡಿರುವ ಚಂದ್ರನಿಗೆ ಚಂದ್ರಿಕೆಯಂತೆ ಈ ನೃಪಚಂದ್ರನ ಪಾಣಿಗ್ರಹಣ ದಿಂದ ಶೋಭಿಸುವ ಸೊಸೆಯನ್ನು ನೋಡಬೇಕೆಂದು ನನ್ನ ಮನಸ್ಸು ಹಂಬಲಿಸುತ್ತಿತ್ತು. ಆದರೆ ದುರದೃಷ್ಟದಿಂದ ಈ ಮಧ್ಯದಲ್ಲಿ ತಟ್ಟನೆ ವೈಶಂಪಾಯನನ ವೃತ್ತಾಂತದ ದುಃಖವು ಮಳೆಗಾಲದಂತೆ ಸಂಭವಿಸಿತಲ್ಲ!" ಟಿ. ಚಂದ್ರಿಕೆಯಿಂದ ಕೂಡಿದ ಚಂದ್ರನನ್ನು ನೋಡಿ ಆನಂದಿಸಲು ಮಳೆಗಾಲವು ಅಡ್ಡಿಪಡಿಸುತ್ತದೆ. ಹಾಗೆಯೇ ವೈಶಂಪಾಯನನ ವೃತ್ತಾಂತವು ಸೊಸೆಯಿಂದ ಕೂಡಿದ ಮಗನನ್ನು ನೋಡಲು ಅಡ್ಡಿಪಡಿಸಿದೆ ಎಂದು ಅಭಿಪ್ರಾಯ. ವ॥ ಎಂದು ತನ್ನಲ್ಲೆ ಆಲೋಚಿಸಿ ಮನಸ್ಸನ್ನು ಬಿಗಿಹಿಡಿದು ಶುಕನಾಸನನ್ನು ಕುರಿತು ಹೀಗೆ ಹೇಳಿದನು. ೧೪೯. "ಮಗನು ಹೇಳುವುದು ಸರಿಯಾಗಿದೆ. ಏಕೆಂದರೆ, ಬೇರೆ ಯಾರು ಹೋದರೂ ವೈಶಂಪಾಯನನು ಬರುವುದಿಲ್ಲ, ಅದಲ್ಲದೆ ಆಪ್ತಮಿತ್ರನನ್ನು,

ವ॥ ಅದಱಿಂ ಪೋಗಿ ಬೇಗಂ ವೈಶಂಪಾಯನನೊಡಗೊಂಡು ಬರ್ಕೆಂಬುದುಂ ಲಬ್ಧ ಗಮನಾಭ್ಯನುಜ್ಞನಾಗಿ ವಿನಯವಿನಮಿತ ಮಸ್ತಕನಾದ ಚಂದ್ರಾಪೀಡನಂ ಮಗನೆ ವೈಶಂಪಾಯ ನನೊಡಗೊಂಡು ಬಂದಪೆನೆಂಬಿವಂ ನುಡಿದು ಮನೋರಮೆಯನಾಶ್ವಾಸಿಸೆಂದು ಬೆಸಸಿ ತಾರಾ ಪೀಡಂ ಶುಕನಾಸನ ಕೆಯ್ಯಂ ಪಿಡಿದುಕೊಂಡು ನಿಜರಾಜಭವನಕ್ಕೆ ಬಿಜಯಂಗೆಯ್ದನಿತ್ತ ಚಂದ್ರಾ ಪೀಡನುಮೊಳಗೆ ಮನೋರಮೆಯುಂ ಸಂತೈಸುತ್ತಿರ್ದ ವಿಲಾಸವತೀಮಹಾದೇವಿಯರ್ಗೆ ಪೊಡ ಮಟ್ಟು ಕೆಲದೊಳ್ ಕುಳ್ಳಿರ್ದ ಸುತವಿಯೋಗವಿಹ್ವಲೆಯಪ್ಪ ಮನೋರಮೆಯನಿಂತೆಂದಂ

ಜನಕಂ ಬೀೞ್ಕೊಳಿಸಿದನೆ
ನ್ನನುಜನನೊಡಗೊಂಡು ಬಂದಪೆಂ ಚೆಚ್ಚರದಿಂ
ತನಯಂ ತಡೆದಪನೆಂದಿಂ
ತೆನಸುಂ ನೀವಬ್ಬೆ ಮನದೊಳುಮ್ಮಳಿಸದಿರಿಂ ೧೫೦

ವ॥ ಎಂದು ನಿಜಗಮನವೃತ್ತಾಂತಮಂ ನುಡಿದ ಚಂದ್ರಾಪೀಡನಂ ವೈಶಂಪಾಯನನ ಜನನಿಯಿಂತೆಂದಳ್

ಮನಮಂ ಪೋದಪ್ಪೆನೆಂದಾಱಿಸಿದಪೆ. ಮಿಗಿಲಾಗಿರ್ದನೇ ಕಂದ ನಿನ್ನಿಂ
ದೆನಗಾತಂ ನಿನ್ನ ತಮ್ಮಂ ಬರವಿನ ದೆಸೆಯುಂ ಮಾಣ್ದೊಡಂ ಜೀವಿಪೆಂ ನಿ
ನ್ನನಲಂಪಿಂ ನೋಡಿಯಾಂ ಪುತ್ರವತಿಯರೆನಿಸುತಿರ್ಪೆವಾವೀರ್ವರುಂ ನಂ
ದನ ಕೇಳ್ ನಿನ್ನೊರ್ವನಿಂದುಮ್ಮಳದೊದವೆನಗೇಕೊಂದುಗುಂ ವತ್ಸ ನಿನ್ನಿಂ ೧೫೧

ಅಗಲಿ ಇವನೂ ಇಲ್ಲಿ ಒಂದು ನಿಮಿಷವೂ ಇರಲಾರನು. ವ॥ ಆದ್ದರಿಂದ ಹೋಗಿ ಬೇಗ ವೈಶಂಪಾಯನನನ್ನು ಕರೆದುಕೊಂಡು ಬರಲಿ" ಎಂದು ಹೇಳಿದನು. ಬಳಿಕ ಪ್ರಯಾಣಕ್ಕೆ ಅನುಮತಿಯನ್ನು ಪಡೆದು ವಿನಯದಿಂದ ತಲೆಯನ್ನು ತಗ್ಗಿಸಿಕೊಂಡಿರುವ ಚಂದ್ರಾ ಪೀಡನನ್ನು ಕುರಿತು "ಮಗನೆ ವೈಶಂಪಾಯನನನ್ನು ಕರೆದುಕೊಂಡು ಬರುವೆನೆಂದು ಹೇಳಿ ಮನೋರಮೆಯನ್ನು ಸಮಾಧಾನಪಡಿಸು" ಎಂದು ಅಪ್ಪಣೆಮಾಡಿ ತಾರಾಪೀಡನು ಶುಕನಾಸನ ಕೈಯನ್ನು ಹಿಡಿದುಕೊಂಡು ತನ್ನ ಅರಮನೆಗೆ ಹೊರಟುಹೋದನು. ಈಕಡೆ ಚಂದ್ರಾಪೀಡನು ಒಳಗೆ ಮನೋರಮೆಯನ್ನು ಸಮಾಧಾನಪಡಿಸುತ್ತಿದ್ದ ವಿಲಾಸವತೀ ದೇವಿಗೆ ನಮಸ್ಕರಿಸಿ, ಸಮೀಪದಲ್ಲಿ ಕುಳಿತಿದ್ದ ಮಗನ ಅಗಲುವಿಕೆಯಿಂದ ಖಿನ್ನಳಾದ ಮನೋರಮೆಯನ್ನು ಕುರಿತು ಹೀಗೆ ಹೇಳಿದನು, ೧೫೦. "ತಂದೆಯವರು ನನ್ನನ್ನು ಕಳುಹಿಸಿಕೊಟ್ಟಿದ್ದಾರೆ. ತಮ್ಮನನ್ನು ಕರೆದುಕೊಂಡು ಬೇಗನೆ ಬಂದುಬಿಡುತ್ತೇನೆ. ಮಗನು ಬೇಗನೆ ಬರುವುದಿಲ್ಲವೆಂದು ನೀವು ಮನಸ್ಸಿನಲ್ಲಿ ಸ್ವಲ್ಪವೂ ದುಃಖಪಡಬೇಡಿ." ವ॥ ಎಂದು ತನ್ನ ಸಂಗತಿಯನ್ನು ಹೇಳಿದ ಚಂದ್ರಾಪೀಡನನ್ನು ವೈಶಂಪಾಯನನ ತಾಯಿಯು ಹೀಗೆಂದಳು. ೧೫೧. "ಕಂದ, ಹೋಗಿಬರುವೆನೆಂದು ಹೇಳಿ ನನ್ನ ಮನಸ್ಸನ್ನು ಸಮಾಧಾನಪಡಿಸುತ್ತೀಯಾ ? ಅವನು ನಿನಗಿಂತಲೂ ನನಗೆ ಹೆಚ್ಚೆ ? ನಿನ್ನ ತಮ್ಮನು ಬರದೇ ಇದ್ದರೂ ನಿನ್ನನ್ನೇ ಪ್ರೀತಿಯಿಂದ ನೋಡಿಕೊಂಡು ಬದುಕಿರುತ್ತೇನೆ.

ವ॥ ಅದಱಿಂ ಗಮನೋದ್ಯೋಗಮಂ ಮಾಣ್ಬುದೆಂದು ಚಂದ್ರಾಪೀಡನಂ ನುಡಿದ ಮನೋರಮೆಯುಂ ವಿಲಾಸವತಿಮಹಾದೇವಿ ವಚನಮಂ ಬಲಿಕೆಯ್ದಿಂತೆಂದಳ್

ಯುವರಾಜಂಗಲ್ಲದೆ ಮಗ
ನವರಿವರ್ಗಂ ಬಾರನೆಂದೆ ದಲ್ ಬೆಸಸಿದನಿಂ
ತಿವರಯ್ಯನೀಗಳದಱಿಂ
ದವಕ್ಕ ಮಾರ್ಕೊಳಲೆಬೇಡ ಗಮನೋದ್ಯಮಮಂ ೧೫೨

ವ॥ ಎಂದು ಕುಮಾರಂಗೆ ಗಮನಮಂಗಳಸವಿಂಧಾನಮಂ ಮಾಳ್ಪವೇಟ್ಕೆಮೆಂದು ಕೆಯ್ಯಂ ಪಿಡಿದೆತ್ತಿ ಮನೋರಮೆಯನೊಡಗೊಂಡು ವಿಲಾಸವತಿಮಹಾದೇವಿ ನಿಜರಾಜಭವನಕ್ಕೆ ಬಿಜಯಂಗೆಯ್ಯೆ ಚಂದ್ರಾಪೀಡನುಮೊಡನೆಯ್ದೆ ಪೋಗಿ ತಾಯ ಮನೆಯೊಳ್ ಮಜ್ಜನಭೋಜ ನಾದಿ ದಿವಸವ್ಯಾಪಾರಮಂ ಮಾಡಿ ಮಱುದಿವಸಂ ಪಯಣಮೆಂಬುದನಲ್ಲಿಯೆ ನಿಶ್ಚೈಸಿ ನಿಜರಾಜ ಭವನಕ್ಕೆ ಬಿಜಯಂಗೆಯ್ದು

ಇನ್ನಾ ಕಾದಂಬರಿಯುಮ
ನೆನ್ನಯ ಕೆಳೆಯನುಮನೆಂತುಮಾಂ ಕಂಡೆನೆನು
ತ್ತುನ್ನೃಪತನೂಜನಾಗಳ್
ತನ್ನೊಳೆ ಬಗೆಯುತ್ತಮೆನಸುಮುತ್ಸಾಹಿಸಿದಂ ೧೫೩

ಮಗು, ನಿನ್ನೊಬ್ಬನಿಂದಲೇ ನಾವಿಬ್ಬರೂ ಪುತ್ರವತಿಯರಾಗುತ್ತೇವೆ. ನೀನಿರಬೇಕಾ ದರೆ ನನಗೆ ದುಃಖವೇಕಪ್ಪ ಉಂಟಾಗುತ್ತದೆ? ವ॥ ಆದ್ದರಿಂದ ಹೋಗುವ ಪ್ರಯತ್ನ ವನ್ನು ಮಾಡಬೇಡ" ಎಂದು ಚಂದ್ರಾಪೀಡನಿಗೆ ಹೇಳಿದ ಮನೋರಮೆಯನ್ನು ಕುರಿತು ವಿಲಾಸವತೀದೇವಿಯು ಮನಸ್ಸನ್ನು ಬಿಗಿಹಿಡಿದುಕೊಂಡು ಹೀಗೆಂದಳು. ೧೫೨. "ಅಕ್ಕ ! ಯುವರಾಜನು ಹೋಗದಿದ್ದರೆ ನಿನ್ನ ಮಗನು ಅವರಿವರ ಮಾತಿಗೆಲ್ಲ ಖಂಡಿತ ಬಂದುಬಿಡುವುದಿಲ್ಲ. ಅದರಿಂದಲೇ ಇವನ ತಂದೆಯವರು "ಹೋಗಿ ಬಾ" ಎಂದು ಹೇಳಿದ್ದಾರೆ. ಆದ್ದರಿಂದ ಈಗ ಇವನ ಪ್ರಯಾಣಕ್ಕೆ ಅಡ್ಡಿಪಡಿಸಬೇಡ." ವ॥ ಹೀಗೆ ಹೇಳಿ ಮಗನಿಗೆ ಪ್ರಯಾಣಕಾಲದ ಮಂಗಳಾಚರಣೆಯನ್ನು ಮಾಡಬೇಕೆಂದು ಮನೋ ರಮೆಯನ್ನು ಕೈಹಿಡಿದೆಬ್ಬಿಸಿ, ಜೊತೆಯಲ್ಲಿ ಕರೆದುಕೊಂಡು ವಿಲಾಸವತಿಯು ತನ್ನ ಅಂತಃ ಪುರಕ್ಕೆ ಬಂದಳು. ಚಂದ್ರಾಪೀಡನೂ ಜೊತೆಯಲ್ಲೇ ಹೋಗಿ ತಾಯಿಯ ಮನೆಯಲ್ಲೇ ಸ್ನಾನ, ಊಟ ಮೊದಲಾದ ದಿನಚರಿಯನ್ನು ಮುಗಿಸಿ, ಮರುದಿವಸ ಪ್ರಯಾಣಮಾಡ ಬೇಕೆಂದು ಅಲ್ಲಿಯೆ ತೀರ್ಮಾನಿಸಿ ತನ್ನ ಅರಮನೆಗೆ ಬಂದನು. ೧೫೩. 'ಇನ್ನು ಆ ಕಾದಂಬರಿಯನ್ನೂ ನನ್ನ ಗೆಳೆಯನನ್ನೂ ನಾನು ಹೇಗೆ ಕಂಡೇನು!' ಎಂದು ತನ್ನಲ್ಲೇ

ವ॥ ಅಂತುತ್ಸಾಹಿಸಿ ಪತ್ರಲೇಖೆ ಮುನ್ನಮೆಯ್ದುದನ್ನೆವರಮಾನೆಯ್ದುವೇಟ್ಕೆಯೊಂದಿಂದ್ರಾಯುಧರಯಾನುಗಾಮಿಗಳಪ್ಪ ತುರಂಗಮಂಗಳಂ ತರಿಸಿ ನೋಡುತ್ತಮುತ್ಸಾಹಿಗಳಪ್ಪ ರಾಜಪುತ್ರರಂ ನಿಯಾಮಿಸುತ್ತಮಿರ್ದು ಪಗಲುಂ ಕಳೆಯೆ ರಜನೀಪ್ರವೇಶದೊಳ್

ಎನಿತು ಭವನಂಗಳೊಳವಂ
ತನಿತರ್ಕಂ ತನ್ನ ಬೆಳಗೆ ಬೆಳಗಾಗಿರೆ ಚಂ
ದ್ರನದೇನುದಯಿಸಿದನೊ ಪಡೆ
ದನುಭವಿಸಲ್ ತಾರಕಾಸಮಾಗಮಸುಖಮಂ ೧೫೪

ವ॥ ಅಂತು ಚಂದ್ರೋದಯದೊಳ್ ಚಂದ್ರಾಪೀಡಂ ತಾಯ ಮನೆಗೆ ಬೀಳ್ಕೊಳಲೆಂದು ಬಂದು ಬಿನ್ನವಿಸೆ ವಿಳಾಸವತಿಮಹಾದೇವಿ ಭೋಂಕನೆ ಮನಂ ಕಲಂಕೆ ಮಗನನಿಂತೆಂದಳ್

ಇನಿಸುಂ ಮಾಣ್ದಪುದಿಲ್ಲ ನಂದನ ಭವದ್ದಿಗ್ಜೈತ್ರಯಾತ್ರಾವಿಲಂ
ಬನದಿಂ ಪುಟ್ಟಿದ ನೋವು ಮನ್ಮನದೊಳಿನ್ನುಂ ಮತ್ತೆ ಪೋಗಾಯ್ತು ಭೋಂ
ಕೆನಲೇನಾನುವದೊಂದಱೊಳ್ ತೊಡರ್ದು ನೀನಿಃ ಪೋಗಿನೊಳ್ ನಿಲ್ಲದಿರ್
ನಿನಗಾಂ ಕೆಯ್ಮುಗಿದಪ್ಪೆನೀಯೆಡೆಗೆ ನಿನ್ನಂ ಬೇಡಿ ಕೆಯ್ನೊಡ್ಡಿದೆಂ ೧೫೫

ಚಿಂತಿಸುತ್ತ ಬಹಳಮಟ್ಟಿಗೆ ಉತ್ಸಾಹಗೊಂಡನು. ವ॥ ಹಾಗೆ ಉತ್ಸಾಹಗೊಂಡು 'ಪತ್ರಲೇಖೆಯು ಅಲ್ಲಿಗೆ ಹೋಗುವುದಕ್ಕೆ ಮೊದಲೇ ನಾನೇ ಹೋಗಿಬಿಡಬೇಕು' ಎಂದು ಯೋಚಿಸಿ, ಇಂದ್ರಾಯುಧದ ವೇಗವನ್ನು ಅನುಸರಿಸಬಲ್ಲ ಕುದುರೆಗಳನ್ನು ತರಿಸಿ ನೋಡುತ್ತಲೂ ಉತ್ಸಾಹಶಾಲಿಗಳಾದ ರಾಜಪುತ್ರರಿಗೆ ಆಜ್ಞಾಪಿಸುತ್ತಲೂ ಇದ್ದನು. ಹಗಲು ಕಳೆಯಲು ರಾತ್ರಿಯ ಪ್ರಾರಂಭದಲ್ಲಿ ೧೫೪. ಎಷ್ಟು ಮನೆಗಳಿವೆಯೊ ಅಷ್ಟಕ್ಕೂ ತನ್ನ ಬೆಳಕೆ ಬೆಳಕಾಗಿರಲು ಚಂದ್ರನು ತಾರಕೆಗಳ ಸಮಾಗಮಸುಖವನ್ನು ಅನುಭವಿಸುವುದಕ್ಕಾಗಿ ಸೊಗಸುಂಟಾಗುವಂತೆ ಹುಟ್ಟಿದನು. ಟಿ. ಬೇರೆ ಬೆಳಕಿನ ಆವಶ್ಯಕವಿಲ್ಲದಂತೆ ತನ್ನ ಬೆಳದಿಂಗಳನ್ನು ಹರಡಿದ್ದನು ಎಂದು ತಾತ್ಪರ್ಯ. ವ॥ ಹಾಗೆ ಚಂದ್ರೋದಯದಲ್ಲಿ ಚಂದ್ರಾಪೀಡನು ತಾಯಿಗೆ ಹೇಳಿಹೋಗಬೇಕೆಂದು ಬಂದು ಅರಿಕೆಮಾಡಲು ವಿಲಾಸವತಿಗೆ ತಟ್ಟನೆ ಮನಸ್ಸು ಕಲಕಿಹೋಗಲು ಮಗನನ್ನು ಕುರಿತು ಹೀಗೆ ಹೇಳಿದಳು. ೧೫೫. "ಕಂದ, ನೀನು ದಿಗ್ವಿಜಯಯಾತ್ರೆಗೆ ಹೋಗಿ ಬಹಳ ದಿನ ಅಗಲಿದ್ದರಿಂದ ಉಂಟಾದ ನೋವು ನನ್ನ ಮನಸ್ಸಿನಲ್ಲಿ ಇನ್ನೂ ಆಳಿಸಿಲ್ಲ. ಮತ್ತೆ ಈಗ ತಟ್ಟನೆ ಪ್ರಯಾಣಮಾಡಬೇಕಾಯಿತು. ನೀನು ಈ ಸಲ ಪ್ರಯಾಣದಲ್ಲಿ ಏನೇನನ್ನೋ ಹಚ್ಚಿಕೊಂಡು ತಡಮಾಡಬೇಡ. ಈ ವಿಷಯದಲ್ಲಿ ನಾನು ನಿನ್ನನ್ನು ಕೈಮುಗಿದು

ವ॥ ಎಂದು ಗದ್ಗದಕಂಠೆಯಾಗಿ ನುಡಿಯೆ ಚಂದ್ರಾಪೀಡದೇವಂ ವಿನಯವಿನಮಿತನಾಗಿ ಕೆಯ್ಗಳಂ ಮುಗಿದು ದೇವಿಯರ್ ಬೆಸಸಿದಂತೆಗೆಯ್ವೆನೆಂಬುದುಂ ಗಮನಮಂಗಳಸಂವಿಧಾನಮನೆಂತಾನುಂ ಮಾಡಿದಾಗಳ್

ಒಲವಿನೊಳಾಗಳೊಲ್ದಿಱಿಗೆ ಪೆರ್ಮೊಲೆಗಳ್ ತೊರೆದುರ್ಚೆ ಪಾಯ್ವ ಪಾ
ಲೊಳೆ ಮಿಸಿಸುತ್ತಮೆತ್ತಿ ಮಗನಂ ಬಿಗಿಯಪ್ಪಿ ಪೊದಟ್ದ ಕಣ್ಣನೀ
ರ್ಗಳನೊಳಸೇದಿ ತಾಂ ಪರಸಿ ಮತ್ತಮಲಂಪಳಿಯಾಗೆ ನೋಡಿ ಬೀ
ೞ್ಕೊಳಿಸಿದಳಾ ವಿಲಾಸವತಿ ಧೀರತೆಯಿಂ ಬಲಿಕೆಯ್ದು ಚಿತ್ತಮಂ ೧೫೬

ವ॥ ಆಗಳ್ ಮತ್ತಂ ಕೃತಪ್ರಣಾಮನಾಗಿ ತಾಯಂ ಬೀೞ್ಕೊಂಡು ತಂದೆಯಂ ಬೀೞ್ಕೊಳಲೆಂದು ತದೀಯ ವಾಸಭವನಕ್ಕೆ ಬರ್ಪುದುಂ ದ್ವಾರರಕ್ಷಕರ್ ದೇವಾ ಯುವರಾಜಂ ಬೀೞ್ಕೊಳಲೆಂದು ಬಂದನೆಂದು ಬಿನ್ನವಿಸೆ ಮೆಲ್ಲನೊಳಗಂ ಪೊಕ್ಕು ಕೃತನಮಸ್ಕಾರನಾದ ಮಗನಂ ನೋಡಿ ತಾರಾಪೀಡದೇವಂ ಕಿಂಚಿದುನ್ನಮಿತಪೂರ್ವಕಾಯನಾಗಿ ಶಯನತಳದಿರ್ದಂದದೊಳೆ ಕರೆದು ತಳ್ಕೈಸಿ ಭೋಂಕನೆ ಮನಂ ಕಲಂಕೆ ಮನಂಮಿಕ್ಕುಸಿರನುಸಿರಲೊಲ್ಲದೆಂತಾನುಮಿಂತೆಂದಂ

ಕೈಯೊಡ್ಡಿ ಬೇಡಿಕೊಳ್ಳುತ್ತೇನೆ." ವ॥ ಎಂದು ಬಿಗಿದ ಕೊರಳಿನಿಂದ ಕೂಡಿ ಹೇಳಲಾಗಿ, ಚಂದ್ರಾಪೀಡನು ವಿನಯದಿಂದ ಬಾಗಿ ಕೈಗಳನ್ನು ಮುಗಿದು "ನೀನು ಹೇಳಿದಂತೆಯೆ ಮಾಡುತ್ತೇನಮ್ಮ" ಎಂದು ಹೇಳಿದನು. ಮಹಾರಾಣಿಯು ಪ್ರಯಾಣಕಾಲಕ್ಕೆ ಉಚಿತವಾದ ಮಂಗಳಾಚರಣೆಯನ್ನು ಹೇಗೋ ಮಾಡಿದಳು. ೧೫೬. ಆಗ ಚಂದ್ರಾಪೀಡನು ಭಕ್ತಿಯಿಂದ ಬಾಗಿ ನಮಸ್ಕರಿಸಿದನು. ರಾಣಿಯು ತೋರಮೊಲೆಗಳು ಹಾಲು ತುಂಬಿ ಬಿಗಿತುಕೊಳ್ಳಲು, ದ್ರವಿಸುವ ಮೊಲೆಹಾಲಿನಿಂದ ಮಗನಿಗೆ ಅಭಿಷೇಕಮಾಡುತ್ತಾ ಅವನನ್ನು ಎತ್ತಿ ಬಿಗಿಯಾಗಿ ತಬ್ಬಿಕೊಂಡು, ಹೊಮ್ಮುವ ಕಣ್ಣೀರುಗಳನ್ನು (ಪ್ರಯಾಣಕಾಲದಲ್ಲಿ ಅಳುವುದು ಅಮಂಗಳವಾದುದರಿಂದ) ತಡೆದುಕೊಂಡು, ಆಶೀರ್ವದಿಸಿ ಸಂತೋಷವು ಕುಗ್ಗುತ್ತಿರಲು, ಧೈರ್ಯದಿಂದ ಮನಸ್ಸನ್ನು ಬಿಗಿಹಿಡಿದು ಮಗನನ್ನು ಕಳಿಸಿಕೊಟ್ಟಳು. ವ॥ ಆಗ ಮತ್ತೆ ನಮಸ್ಕಾರಮಾಡಿ ತಾಯಿಯನ್ನು ಬೀಳ್ಕೊಂಡು ತಂದೆಗೆ ಹೇಳಿಬರಬೇಕೆಂದು ಅವನ ವಾಸಗೃಹಕ್ಕೆ ಬಂದನು. ದ್ವಾರಪಾಲಕರು "ಮಹಾಸ್ವಾಮಿ ಯುವರಾಜರು ಹೇಳಿಹೋಗಲು ಬಂದಿದ್ದಾರೆಂದು" ಅರಿಕೆ ಮಾಡಿದ ಮೇಲೆ, ಮೆಲ್ಲನೆ ಒಳಕ್ಕೆ ಹೋಗಿ ನಮಸ್ಕಾರಮಾಡಿದ ಮಗನನ್ನು ನೋಡಿ ತಾರಾಪೀಡನು ಸೊಂಟದ ಮೇಲುಭಾಗದ ದೇಹವನ್ನು ಸ್ವಲ್ಪಮೇಲಕ್ಕೆತ್ತಿ, ಹಾಸಿಗೆಯಲ್ಲಿರುವಂತೆಯೆ ಹತ್ತಿರಕ್ಕೆ ಕರೆದು ತಬ್ಬಿಕೊಂಡು, ಕೂಡಲೆ ಮನಸ್ಸು ಕಲಕಿಹೋಗಲು ಮಾತನಾಡಲಾರದೆ ಬಹಳ

ಬೆಸೆದೀಯಂದದೆ ದೋಷವೇಱಿಸಿದನೆನ್ನೊಳ್ ತಂದೆಯೆಂದೆಮ್ಮ ಭಾ
ವಿಸದಿರ್ ಮೆಚ್ಚಿಸಲೆಂದುಮೆಯ್ದೆ ಜಗಮಂ ಚಿಕ್ಕಂದು ತೊಟ್ಟಾಂ ಪರೀ
ಕ್ಷಿಸಿ ನಿನ್ನಂ ಗುಣಜಾತಲಭ್ಯಮೆನಿಸಿರ್ದೀ ರಾಜ್ಯಭಾರಕ್ಕೆ ಯೋ
ಜಿಸಿದೆಂ ಕೆಮ್ಮನದುಂತೆ ಯೋಜಿಸಿದೆನೇ ಪೇೞಾತ್ಮಜಸ್ನೇಹದಿಂ ೧೫೭

ವ|| ಆ ರಾಜ್ಯಮುಂ ಪ್ರಥಿತಪೃಥ್ವೀಭಾರಮಪ್ಪುದಱಿಂ ದುರ್ವಹಮುಂ ಮಹೀಭೃತ್ಸಂಬಾಧಮಪ್ಪುದಱಿನತಿಸಂಕಟಮುಂ ಅನೇಕ ಸಾಧನಸಾಧ್ಯಮಪ್ಪುದಱಿಂ ದುಸ್ಸಾಧನಮುಮಪರ್ಯವಸಾನಕಾರ್ಯಜಾಲಮಪ್ಪುದಱಿಂ ದುಷ್ಪ್ರಾಪಮುಮೆನಿಸಿದುದದುಮೆ ನಿನಗೇಕಭೋಗ್ಯಮಾಗಿರ್ದುದದಱಿಂ ಸಕಲ ಲೋಕರಂಜನಕ್ಕೆ ಯತ್ನಂ ಮಾಡಲೆವೇೞ್ಪುದಿಂ ಪರಿಣತವಯಸರುಮನುಭೂತಪುರುಷಾರ್ಥತ್ರಯರುಮೆನಿಸಿದೆಮಗೆ ನಿನ್ನನಧಿರಾಜಪದವಿಯೊಳ್ ನಿಲಿಸಿ ಪೂರ್ವರಾಜಸೇವಿತಮಾರ್ಗಮನೆಯ್ದವೇೞ್ಕುಮೆಂಬನ್ನೆಗಂ ತೊಟ್ಟನೆ ವೈಶಂಪಾಯನವೃತ್ತಾಂತಮಂತರಾಯಹೇತುವಾದುದದಱಿಂ ಮಗನೆ ನೀಂ ತಡೆಯದೆ ಬಂದೆಮ್ಮ ಮನೋರಥಕ್ಕೆ ಸಾಫಲ್ಯಮಂ ಸಂದಿಪುದೆಂದು

ಕಷ್ಟದಿಂದ ಹೀಗೆ ಹೇಳಿದನು. ೧೫೭. "ಮಗು, ನಮ್ಮ ತಂದೆಯು ಹೀಗೆ ಹೇಳಿ ನನ್ನಲ್ಲಿ ದೋಷಾರೋಪಣೆ ಮಾಡಿದನಲ್ಲ ಎಂದು ಮನಸ್ಸಿನಲ್ಲಿ ಭಾವಿಸಬೇಡ. ಯಾವಾಗಲೂ ಪ್ರಜೆಗಳನ್ನು ಚೆನ್ನಾಗಿ ಮೆಚ್ಚಿಸಬೇಕೆಂಬ ಉದ್ದೇಶದಿಂದ ಬಾಲ್ಯದಿಂದಲೂ ನಿನ್ನನ್ನು ಚೆನ್ನಾಗಿ ಪರೀಕ್ಷಿಸಿ ಗುಣಸಮುದಾಯದಿಂದಲೇ ಪಡೆಯಲು ಯೋಗ್ಯವಾದ ಈ ರಾಜ್ಯಭಾರಕ್ಕೆ ಉತ್ತರಾಧಿಕಾರಿಯನ್ನಾಗಿ ಮಾಡಿದ್ದೇನೆ. ಕೇವಲ ಪುತ್ರಸ್ನೇಹದಿಂದ ಹಾಗೆಯೇ ಸುಮ್ಮನೆ ಮಾಡಿಬಿಟ್ಟೆನೆ ? ಹೇಳು, ನೋಡೋಣ. ವ|| ಈ ರಾಜ್ಯಭಾರವಂತೂ ದೊಡ್ಡದಾದ ಭೂಮಿಯ ಭಾರದಿಂದ ಕೂಡಿಕೊಂಡಿದೆ. ಆದರಿಂದಲೇ ಹೊರಲು ಅಸಾಧ್ಯವಾದುದು. ಬೆಟ್ಟಗಳಿಂದ ಮತ್ತು ಅನೇಕ ರಾಜರಿಂದ ತುಂಬಿರುವುದರಿಂದ ಬಹಳ ದುರ್ಗಮವಾದುದು. ಅನೇಕ ಸೈನ್ಯಗಳಿಂದ ಸಾಧಿಸಲ್ಪಡಬೇಕಾದ್ದರಿಂದ ಸಾಧಿಸಲಸಾಧ್ಯವಾದುದು. ತುದಿಯಿಲ್ಲದ ಕಾರ್ಯಕಲಾಪಗಳಿಂದ ಕೂಡಿಕೊಂಡಿರುವುದರಿಂದ ಪಡೆಯಲಸದಳವಾದುದು. ಇಂತಹ ರಾಜ್ಯವು ಪರರ ಕಾಟವಿಲ್ಲದೆ ನಿರಾತಂಕವಾಗಿ ನಿನಗೆ ದೊರಕಿದೆ.ಆದ್ದರಿಂದ ಸಮಸ್ತ ಪ್ರಜೆಗಳನ್ನೂ ಸಂತೋಷಪಡಿಸಲು ಪ್ರಯತ್ನಮಾಡಲೆಬೇಕು. ಇನ್ನೂ ವೃದ್ಧನಾದ ಹಾಗೂ ಧರ್ಮಾರ್ಥಕಾಮಗಳನ್ನು ಯಥೇಚ್ಛವಾಗಿ ಅನುಭವಿಸಿರುವ ನನಗೆ ನಿನ್ನನ್ನು ಚಕ್ರವರ್ತಿಸ್ಥಾನದಲ್ಲಿ ನಿಯಮಿಸಿ, ನಮ್ಮ ಪೂರ್ವಜರಾದ ಅರಸರು ನಡೆದ ದಾರಿಯಲ್ಲೇ ನಡೆಯಬೇಕೆಂದು (ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಬೇಕೆಂದು) ಸಂಕಲ್ಪವಿತ್ತು. ಅಷ್ಟರಲ್ಲಿ ವೈಶಂಪಾಯನನ ವೃತ್ತಾಂತವು ವಿಘ್ನವಾಯಿತು. ಆದ್ದರಿಂದ, ಮಗು, ನೀನು ವಿಳಂಬಮಾಡದೆ ಬಂದು ನನ್ನ ಇಷ್ಟಾರ್ಥವು ಈಡೇರುವಂತೆ

ಹೃದಯಮನಿತ್ತಪನಾ ಸಮ
ಯದೊಳಿನೆ ಬಾಯ್ವಾಯೊಳಿತ್ತು ತಂಬುಲಮನಲಂ
ಪೊದವಲ್ಕೆ ಪರಸಿ ಬೀಳ್ಕೊಳಿ
ಸಿದನೆಂತಾನುಂ ನಿಜಾತ್ಮಜನನಧಿರಾಜಂ ೧೫೮

## ಚಂದ್ರಾಪೀಡನ ಪುನರಾಗಮನ

### ಸಮಾಪ್ತ

ಮಾಡಬೇಕು." ೧೫೮. ಆ ಸಮಯದಲ್ಲಿ ತನ್ನ ಹೃದಯವನ್ನೇ ಒಪ್ಪಿಸುತ್ತಿರುವನೋ ಎಂಬಂತೆ ತಾಂಬೂಲವನ್ನು ಬಾಯಿಂದ ಬಾಯಿಗೆ ಕೊಟ್ಟು, ವಾತ್ಸಲ್ಯವು ಹೆಚ್ಚುತ್ತಿರಲು ಆಶೀರ್ವದಿಸಿ ತಾರಾಪೀಡನು ಕಷ್ಟದಿಂದ ತನ್ನ ಮಗನನ್ನು ಪ್ರಯಾಣ ಮಾಡಿಸಿದನು.

## ಚಂದ್ರಾಪೀಡನ ಪುನರಾಗಮನ

### ಮುಗಿಯಿತು

# ೯. ಚಂದ್ರಾಪೀಡನ ಪ್ರಾಣವಿಯೋಗ

ವ॥ ಅನಂತರಂ ಪುನಃಪ್ರಣಾಮಮಂ ಮಾಡಿ ಪೊಱಮಟ್ಟು ಬಂದು ಸುತವಿಯೋಗ ಚಿಂತಾಕ್ರಾಂತರಪ್ಪ ಶುಕನಾಸನುಮಂ ಮನೋರಮೆಯುಮನಾಱೆ ನುಡಿದು ಬೀೞ್ಕೊಂಡು ಬಂದು ವೈಶಂಪಾಯನದರ್ಶನತಾತ್ಪರ್ಯದೊಳಂ ಕಾದಂಬರೀಸಮಾಗಮೌತ್ಸುಕ್ಯದೊಳಮಕೃತ ಪರಿಲಂಬನಾಗಿ ಭವನಾಂಗಣದೊಳ್ ಸಾರ್ಚಿದಿಂದ್ರಾಯುಧಮಂ ಚಂದ್ರಾಪೀಡನೇಱೆ ದಿಗಂತರಂಗಳೆಲ್ಲಮನಂತಹಯಹೇಷಾರವಂಗಳಿಂ ತೆಕ್ಕನೆ ತೀವೆ ಭುವನತಳಮೆಲ್ಲಂ ತುರಂಗಮಯಮಾಗೆ ಪೊಱಮಟ್ಟು ಶಿಪ್ರಾನದಿಯಂ ದಾಂಟಿ ಯೋಜನತ್ರಯದನಿತಂ ಪೋಗಿ ತೃಣಜಲಸಮೃದ್ಧಮಾದೆಡೆಯೊಳ್ ಬೀಡುಗೆಯ್ದು ತನ್ನೊಳಿಂತೆಂದಂ

ಎನಗೆನಸುಂ ಲಜ್ಜಿಸಿ ಪೋ
ಪನ ಬೆನ್ನೊಳ್ ಪೋಗಿ ತೆಗೆದು ತಳ್ಕೈಸುತವಾ
ತನದೊಂದು ಲಜ್ಜೆಯಂ ಕಳೆ
ದನುಭವಿಪೆಂ ಮತ್ಸುಹೃತ್ಸಮಾಗಮಸುಖಮಂ ೧

ಆತನುಮಾನುಮಾಗಳೆ ಮದಾಗಮನೋದ್ಯತಹರ್ಷೆಯಂ ಮಹಾ
ಶ್ವೇತೆಯನೆಯ್ದೆ ಕಂಡು ಬೞಿಕಂತೆ ತದಾಶ್ರಮದೊಳ್ ತುರಂಗಸಂ
ಘಾತಮುಮಂ ನೃಪಾತ್ಮಜರುಮಂ ನಿಲಿಸಿಟ್ಟೊಲವಿಂದಮಾ ಮಹಾ
ಶ್ವೇತೆಯ ಬೇಗವೊಯ್ಯೆ ಪುಗದಿರ್ಪವೆ ನಚ್ಚಿನ ಹೇಮಕೂಟಮಂ ೨

ವ॥ ಬಳಿಕ ಮತ್ತೆ ನಮಸ್ಕಾರಮಾಡಿ ಹೊರಟುಬಂದು, ಮಗನ ಅಗಲುವಿಕೆಯಿಂದ ಚಿಂತಾಕ್ರಾಂತರಾದ ಶುಕನಾಸನನ್ನೂ ಮನೋರಮೆಯನ್ನೂ ಸಮಾಧಾನಪಟ್ಟುಕೊಳ್ಳುವಂತೆ ಬಹಳವಾಗಿ ಹೇಳಿ ಬೀಳ್ಕೊಂಡು ಬಂದು, ವೈಶಂಪಾಯನನನ್ನು ನೋಡಬೇಕೆಂಬ ಅಭಿಲಾಷೆಯಿಂದಲೂ, ಕಾದಂಬರಿಯನ್ನು ಸೇರಬೇಕೆಂಬ ಉತ್ಸಾಹದಿಂದಲೂ ಕಾಲ ವಿಳಂಬವನ್ನು ಮಾಡದೆ ಮನೆಯ ಅಂಗಳಕ್ಕೆ ಬಂದ ಇಂದ್ರಾಯುಧವನ್ನು ಚಂದ್ರಾಪೀಡನು ಹತ್ತಿದನು. ಅದರ ಕೆನೆಯುವ ದೊಡ್ಡ ಧ್ವನಿಯಿಂದ ದಿಗಂತಗಳನ್ನು ತುಂಬಲಾಗಿ, ಪ್ರಪಂಚವೆಲ್ಲ ಕುದುರೆಗಳಿಂದಲೇ ತುಂಬಿಕೊಂಡಿರುವಂತಾಗಲು ಹೊರಟು ಶಿಪ್ರಾನದಿಯನ್ನು ದಾಟಿ, ಮೂರು ಯೋಜನಗಳಷ್ಟು ದೂರ ಹೋಗಿ ಹುಲ್ಲೂ ನೀರೂ ಸಮೃದ್ಧಿಯಾಗಿ ದೊರಕುವ ಕಡೆಯಲ್ಲಿ ಬಿಡಾರಮಾಡಿ ತನ್ನ ಮನಸ್ಸಿನಲ್ಲಿ ಹೀಗೆ ಆಲೋಚಿಸಿದನು. ೧. "ನನ್ನನ್ನು ನೋಡಿ ಬಹಳವಾಗಿ ನಾಚಿಹೋಗುತ್ತಿರುವ ವೈಶಂಪಾಯನನ ಹಿಂದುಗಡೆಯಲ್ಲೇ ಹೋಗಿ ಬಾಚಿ ತಬ್ಬಿಕೊಂಡು ಆತನ ನಾಚಿಕೆಯನ್ನು ಪರಿಹರಿಸಿ ಮಿತ್ರ ಸಮಾಗಮಸುಖವನ್ನು ಅನುಭವಿಸುತ್ತೇನೆ." ೨. ಬಳಿಕ ನಾವಿಬ್ಬರೂ ನನ್ನ ಆಗಮನದಿಂದ ಪರಮಾನಂದಭರಿತಳಾದ ಮಹಾಶ್ವೇತೆಯನ್ನು ಕಂಡು, ಅವಳ ಆಶ್ರಮದಲ್ಲಿ ಕುದುರೆ

ವ|| ಅಂತು

ಆಂ ಬಂದುದನಹವುಹವಿುಕೆ
ಯಿಂ ಬೇಗಂ ಪರಿದುಪೋಗಿ ಪರವೋತ್ಸವದಿಂ
ದಂ ಬಿನ್ನವಿಪ ಜನಂ ಕಾ
ದಂಬರಿಯಿಂ ಮೆಚ್ಚುಗೊಳ್ಳದಿರ್ಕುಮೆ ಪಿರಿದುಂ ೩

ಎಂತೆಂತು ದಿಟವೆ ನೀವೆನಿ
ತಂತರದೊಳ್ ಕಂಡಿರೆಲ್ಲಿದಂ ಬಂದನೆ ಭೂ
ಕಾಂತನೆನುತ್ತಂ ಬೆಸಗೊಳು
ತಂ ತಳವೆಳಗಾಗಿ ತಣಿಪಿ ನಿಜಪರಿಜನಮಂ ೪

ಬಿಸಿನೀಪತ್ರಂಗಳಂ ಭೋಂಕನೆ ತೊಲಗಿಸಿ ಮದ್ದರ್ಶನೋತ್ಪನ್ನ ಲಜ್ಜಾ
ರಸದಿಂದಂ ಮೇಲುದಂ ಪೆರ್ಮೊಲೆಗೆ ತೆಗೆವ ಭೂಷಾಮೃಣಾಳಂಗಳಂ ಪಿಂ
ಗಿಸಿ ತತ್ಕಾಲೋಪಜಾತಪ್ರಚುರಪುಲಕಮಂ ಭೂಷಣಶ್ರೀಗೆ ಪಕ್ಕಾ
ಗಿಸುವೀ ವ್ಯಾಪಾರಸಾರಂ ಸಮನಿಸುಗೆ ಕಾದಂಬರೀದೇವಿಗಾಗಳ್ ೫

ಕದಪಂ ಪತ್ತಿರ್ದ ಶಯ್ಯಾಕಮಲಕುಮುದ ಕಿಂಜಲ್ಕಮಂ ತಳ್ತ ರೋಮಾಂ
ಚದಿನೀಡಾಡುತ್ತಮಣ್ಪಿಕ್ಕಿದ ಮಲಯಜಮಂ ಕೂಡೆ ಲಾವಣ್ಯಶೋಭಾ
ಸ್ಪದಮಪ್ಪಂಗಂಗಳೊಳ್ ನಾಣ್ ಪೊಡರೆ ತೊಡೆಯುತಂ ಬಿಟ್ಟು ಬೆನ್ನೆಲ್ಲಮಂ ಮು
ಚ್ಚಿದ ಕೇಶವ್ರಾತಮಂ ಮುಯ್ಪಿನೊಳಳವಡಿಸುತ್ತಿರ್ಕುಮೋ ಕಂಡೊಡೆನ್ನಂ ೬

ದಂಡನ್ನೂ ಅರಸುಮಕ್ಕಳನ್ನೂ ಬಿಟ್ಟು, ಆ ಮಹಾಶ್ವೇತೆಯೆ ಅಕ್ಕರೆಯಿಂದ ಬೇಗನೆ ಕರೆದುಕೊಂಡುಹೋಗಲು ಇಷ್ಟವಾದ ಹೇಮಕೂಟಕ್ಕೆ ಹೋಗುತ್ತೇವೆ. ವ|| ಹಾಗೆ ೩. ನನ್ನ ಬರುವಿಕೆಯನ್ನು ನಾನು ಮುಂದು ತಾನು ಮುಂದು ಎಂದು ಬೇಗನೆ ಓಡಿಹೋಗಿ ಬಹಳ ಸಡಗರದಿಂದ ಕಾದಂಬರೀದೇವಿಗೆ ಅರಿಕೆಮಾಡುವ ಪರಿಜನರು ಅವಳಿಂದ ದೊಡ್ಡ ಉಡುಗೊರೆಯನ್ನು ಪಡೆಯದೆ ಇರುತ್ತಾರೆಯೆ ? ೪. ಏನು ? ಏನು ? ನಿಜವೆ? ನೀವು ಎಷ್ಟು ದೂರದಲ್ಲಿ ಅವನನ್ನು ಕಂಡಿರಿ? ಎಲ್ಲಿದ್ದಾನೆ ? ರಾಜಕುಮಾರನು ಬಂದನೆ ? ಎಂದು ಕೇಳುತ್ತಾ ಬೆರಗಾಗಿ ತನ್ನ ಪರಿಜನರನ್ನು ತೃಪ್ತಿಪಡಿಸುತ್ತಾಳಲ್ಲವೆ ? ೫. ಆಗ ವಿರಹತಾಪದ ಶಾಂತಿಗಾಗಿ ಎದೆಯ ಮೇಲೆ ಇಟ್ಟುಕೊಂಡಿದ್ದ ತಾವರೆಯೆಲೆ ಗಳನ್ನು ಕೂಡಲೆ ತೆಗೆದುಹಾಕಿ, ನನ್ನನ್ನು ನೋಡಿದ್ದರಿಂದ ಉಂಟಾದ ನಾಚಿಕೆಯಿಂದ ತನ್ನ ಮೇಲುದನ್ನು ತೋರಮೊಲೆಗಳಿಗೆ ಹೊದಿಸುತ್ತಿರುವ, ಹಾಗೆಯೆ ಒಡವೆಯಂತೆ ಹಾಕಿ ಕೊಂಡಿದ್ದ ತಾವರೆದಂಟುಗಳನ್ನು ತೆಗೆದುಹಾಕಿ, ಹೆಚ್ಚಾದ ಮೈನವಿರನ್ನೇ ಒಡವೆ ಯನ್ನಾಗಿ ಮಾಡಿಕೊಳ್ಳುವ, ಈ ಕೆಲಸಗಳೆಲ್ಲಾ ಕಾದಂಬರಿಗೆ ನನ್ನನ್ನು ಕಂಡಕೂಡಲೆ ಪ್ರಾರಂಭವಾಗುತ್ತದೆಯಲ್ಲವೆ ! ೬. ಮತ್ತು ನನ್ನನ್ನು ಕಂಡಕೂಡಲೆ ಕೆನ್ನೆಗೆ ಅಂಟಿ ಕೊಂಡಿದ್ದ, ಹಾಸಿಗೆಗಾಗಿ ಉಪಯೋಗಿಸಿದ್ದ ಕೆಂದಾವರೆ ಮತ್ತು ಬಿಳಿತಾವರೆಗಳ ಕೇಸರ ಗಳನ್ನು ಮೂಡುತ್ತಿರುವ ಮೈನವಿರುಗಳಿಂದ ತೆಗೆದು ಹಾಕುತ್ತಾಳೆ. (ಟಿ. ಮೈನವಿ

ಕಣ್ಗುಡಿತೆಗಳಿಂದಾಕೆ ಪ
ವಣ್ಗಱಿದಾ ಬಾಷ್ಪವಾರಿಯಂ ಸುರಿಯುತ್ತುಂ
ಕಣ್ಗೊಳಿಸದಿರ್ಕುಮೇ ಪೇೞ್
ಮಾಣ್ಗುಂ ಮದನಾಗ್ನಿಯೆಂದು ವದಿಪುವ ತೆಱದಿಂ ೭

ವ॥ ಆ ಸಮಯದೊಳ್ ಸಂಭ್ರಮಂಬೆರಸು ಮುನ್ನಿರ್ದ ಕುಸುಮಶಯನಮಂ ಪಿಂದಿಕ್ಕಿ ಕಂಪಿಸುತ್ತುಮೆಸಗಿದಿರೆೞ್ದ ಕಾದಂಬರೀದೇವಿಯಂ ಕಣ್ಣಾರೆ ನೋಡಿ ಕಣ್ಪಡೆದುದರ್ಕೆ ಸಾಫಲ್ಯಮಂ ಸಾಧಿಸುವೆನನಂತರಂ

ಚರಣನತೆ ಪತ್ರಲೇಖೆಯ
ನಿರದೆತ್ತುವ ವಿನಯವಿನತೆ ಮದಲೇಖೆಯನಾ
ದರಿಸುವ ಕೇಯೂರಕನಂ
ಬರತೆಗೆದಪ್ಪುವ ಸುಖಕ್ಕೆ ನೆಲೆಯೆನಿಸಿರ್ಪೆಂ ೮

ವ॥ ಅನಂತರಮಾ ಮಹಾಶ್ವೇತೆಯುಮಖಿಲಜನಸಮೂಹಮುಂ ವಿವಾಹಮಂಗಳಮ ನೆಸಗೆ ಕಾದಂಬರಿಯೊಳ್ ಕೂಡಿ ಹೃದಯಜನ್ಮನಿವಾಸಮೆನಿಸಿದಾ ವಾಸಭವನಕ್ಕೆ ಸುರಭಿಕುಸುಮ ಧೂಪಾನುಲೇಪನಾಮೋದಿತಾಂಗನೆಂ ಗಂಧರ್ವಕನ್ಯಾಕರಗ್ರಹಣಪೂರ್ವಕಂ ಬಂದಾಕೆವೆರಸು ದಳಿಂಬದೊಳ್ ಕುಳ್ಳಿರ್ದು ಕಿಱಿದುಬೇಗಕ್ಕೆ ಕೃತನರ್ಮಾಲಾಪೆಯಪ್ಪ ಮದಲೇಖೆ ಮೆಲ್ಲನೇ ನಾನುಮೊಂದು ನೆವದಿಂ ಪೊಱಮಟ್ಟು ಪೋಗೆ

ರೆದ್ದುದರಿಂದ ಅವು ಉದುರಿಹೋಗುತ್ತವೆ,) ಲಾವಣ್ಯದಿಂದ ಶೋಭಿಸುವ ಶರೀರಕ್ಕೆ ಲೇಪಿಸಿಕೊಂಡಿದ್ದ ಗಂಧವನ್ನು ಬಹಳ ನಾಚಿಕೆಯುಂಟಾಗಲು ಅಳಿಸಿಹಾಕುತ್ತಿರುತ್ತಾಳೆ. ಬಿಚ್ಚಿಹೋಗಿ ಬೆನ್ನನ್ನು ಮುಚ್ಚಿಕೊಂಡಿದ್ದ ಕೂದಲನ್ನು ಓರಣವಾಗಿ ಹೆಗಲಮೇಲೆ ಅಳವಡಿಸಿಕೊಳ್ಳುತ್ತಾಳಲ್ಲವೆ ? ೭. ನನ್ನನ್ನು ಕಂಡಕೂಡಲೆ ಅವಳು ತನ್ನ ಬೊಗಸೆ ಗಣ್ಣುಗಳಿಂದ ಅಳತೆಮೀರಿದ ಆನಂದಬಾಷ್ಪವನ್ನು ಸುರಿಸುತ್ತಾಳೆ. ಆಗ ಅವಳು ಇನ್ನು 'ಕಾಮಾಗ್ನಿಯು ಸಾಕು' ಎಂದು ಭಾವಿಸಿ ಅದನ್ನು ಆರಿಸುತ್ತಿರುವವಳಂತೆ ಶೋಭಿಸುತ್ತಿರುತ್ತಾಳೆ ! ಅಲ್ಲವೆ ? ವ॥ ಆ ಸಮಯದಲ್ಲಿ ಸಡಗರದಿಂದ ಮುಂದಿದ್ದ ಹೂವಿನಹಾಸಿಗೆಯನ್ನು ಹಿಂದಕ್ಕೆ ತಳ್ಳಿ, ನಡುಗುತ್ತ ನನ್ನನ್ನು ಎದುರುಗೊಂಡ ಕಾದಂಬರೀದೇವಿಯನ್ನು ಕಣ್ಣಾರೆ ನೋಡಿ ಕಣ್ಣನ್ನು ಪಡೆದುದಕ್ಕೆ ಸಾರ್ಥಕತೆ ಯನ್ನು ಪಡೆಯುತ್ತೇನೆ. ಬಳಿಕ ೮. ನನ್ನ ಕಾಲಿಗೆ ಎರಗಿದ ಪತ್ರಲೇಖೆಯನ್ನು ಮೇಲಕ್ಕೇಳಿಸುವ, ವಿನಯದಿಂದ ಬಾಗಿರುವ ಮದಲೇಖೆಯನ್ನು ಆದರಿಸುವ, ಕೇಯೂರಕನನ್ನು ಬಾಚಿತಬ್ಬಿಕೊಳ್ಳುವ ಸುಖಕ್ಕೆ ಪಾತ್ರನಾಗುತ್ತೇನೆ ! ವ॥ ಬಳಿಕ ಮಹಾಶ್ವೇತೆಯೂ ಎಲ್ಲಾ ಬಂಧುಬಳಗದವರೂ ಸೇರಿ ನನಗೂ ಅವಳಿಗೂ ಮದುವೆಮಾಡುತ್ತಾರೆ ! ಆಮೇಲೆ ಅವಳೊಂದಿಗೆ ಕೂಡಿ ಮನ್ಮಥನ ವಾಸಗೃಹ ದಂತಿರುವ ಮನೆಗೆ ಸುವಾಸನೆಯಿಂದ ಕೂಡಿರುವ ಹೂವು, ಧೂಪಗಂಧಲೇಪನಗಳಿಂದ ಘಮಘಮಿಸುತ್ತಿರುವ ಶರೀರವುಳ್ಳವನಾಗಿ ಆ ಗಂಧರ್ವತರುಣಿಯ ಕೈಯನ್ನು ಹಿಡಿದು

ನವಲಜ್ಜಾಭಾರನಮ್ರಾನನೆಯನುರದೊಳೊತ್ತಂಬದಿಂದೊತ್ತಿ ಸರ್ವಾಂ
ಗವನೆನ್ನಂಗಂಗಳೊಳ್ ಮೆಯ್ಗರೆದುವೆನಿಸಿ ಮೆಯ್ಯಾರೆ ತಳ್ತಪ್ಪಿ ದೇವ
ರ್ಗವಣಂ ಕೆಯ್ಗೂಡದಂತಪ್ಪವಳಧರಸುಧಾಸಾರಮಂ ತೃಪ್ತಿಪರ್ಯಂ
ಕವಲಂಪಿಂ ಪೀರ್ದು ಮದ್ವಲ್ಲಭೆಯ ಸುಸಿಲ ಸೈಪಿಂ ಕೃತಾರ್ಥಾತ್ಮನಪ್ಪೆಂ ೯

ಎನಸುಂ ಮೀನೇಕ್ಷಣಂ ಸೋಲದ ರಸದೊದವಿಂ ಸೊರ್ಕಿ ಬೆಂಡೇಳ್ವಿನಂ ನ
ಚ್ಚಿನ ಮುಗ್ಧಾಲಾಪವಿಂಪಂ ಕಱೆದು ಬಱಿತುದೆಂಬನ್ನೆಗಂ ಬತ್ತಿರಲ್ ಬಾಯ್
ಮನದೊಳ್ ತೀವಿರ್ದ ಪ್ರೇಮಾಮೃತರಸಮನೆ ಸರ್ವಾಂಗಮುಂ ಚಾಗವಿಕ್ಕಿ
ತ್ತೆನಿಸಲ್ ಘರ್ಮಾಂಬು ತಳ್ತೊಪ್ಪಲುವನುನಯದಿಂದಾಕೆಯೊಳ್ ಕೂಡಿದಪ್ಪೆಂ ೧೦

ವ॥ ಅದಲ್ಲದೆಯುಮಖಿಳಜನ ಸುಲಭಮಾಗಿಯುಂ ಯೋಗೈಕಗಮ್ಯಮುಂ ಸ್ಪರ್ಶ ವಿಷಯಮಾಗಿಯುಂ ಹೃದಯಗ್ರಾಹಿಯುಂ ಮೋಹನಮಾಗಿಯುಂ ಇಂದ್ರಿಯಪ್ರಸಾದಸಂಪಾದಕಮುಮುದ್ದೀಪನಮಾಗಿಯುಂ ಮದನದಹನನಿರ್ವೃತಿಕರಮುಂ ಉಪಜಾತವಿಷಮೋಚ್ಛ್ವಾಸ

ಕೊಂಡು ಬಂದು ಅವಳ ಜೊತೆಯಲ್ಲಿ ಮೆತ್ತೆಯ ಮೇಲೆ ಕುಳಿತುಕೊಳ್ಳುತ್ತೇನೆ. ಬಳಿಕ ಮದಲೇಖೆಯು ಸ್ವಲ್ಪಹೊತ್ತು ಹಾಸ್ಯಭರಿತವಾಗಿ ಮಾತನಾಡುತ್ತಿದ್ದು ಏನೋ ಒಂದು ನೆವದಿಂದ ಮೆಲ್ಲನೆ ಹೊರಟು ಹೋಗಲು, ೯. ಹೊಸದಾದ ನಾಚಿಕೆಯ ಭಾರದಿಂದ ತಲೆಯನ್ನು ತಗ್ಗಿಸಿಕೊಂಡಿರುವ ಇನಿಯಳನ್ನು ಬಲಾತ್ಕಾರದಿಂದ ಎದೆಗೆ ಅವುಚಿಕೊಂಡು, ಅವಳ ಸರ್ವಾಂಗಗಳೂ ನನ್ನ ಅಂಗಗಳಲ್ಲಿ ಲೀನವಾಗಿಬಿಟ್ಟಿವೆಯೊ ಎಂಬಂತೆ ಶರೀರವು ತಣಿಯುವ ಹಾಗೆ ಗಾಢವಾಗಿ ತಬ್ಬಿಕೊಂಡು, ಬಹುಮಟ್ಟಿಗೆ ದೇವತೆಗಳಿಗೂ ದುರ್ಲಭವೆನಿಸಿರುವ ಅವಳ ಅಧರಾಮೃತವನ್ನು ತೃಪ್ತಿಯಾಗುವವರೆಗೂ ಪ್ರೀತಿಯಿಂದ ಹೀರಿ ನನ್ನ ಪ್ರಾಣಕಾಂತೆಯ ಭೋಗಸುಖದ ಪುಣ್ಯದಿಂದ ಕೃತಾರ್ಥನಾಗುತ್ತೇನೆ. ೧೦. ಹಾಗೆಯೆ ಅವಳ ಸುಂದರವಾದ ಕಣ್ಣುಗಳು ಹೆಚ್ಚುಹೆಚ್ಚಾದ ಆನಂದಾನುಭವದಿಂದ ಸೊಕ್ಕಿ ಜಡವಾಗುವಂತೆಯೂ, ವಿಶ್ವಾಸದಿಂದ ಕೂಡಿರುವ ಮೊದ್ದುಮಾತುಗಳು ಇಂಪನ್ನು ಸುರಿಸಿ ಸುರಿಸಿ ಬತ್ತಿಹೋಗಿದೆಯೆಂಬಂತೆ ಬಾಯಿ ಒಣಗಿ ಹೋಗಲು, ಮನಸ್ಸಿನಲ್ಲಿ ತುಂಬಿ ಭರ್ತಿಯಾಗಿರುವ ಪ್ರೀತಿಯೆಂಬ ಅಮೃತ ರಸವನ್ನು ಎಲ್ಲಾ ಅಂಗಗಳೂ ಹೊರಸೂಸುತ್ತಿವೆಯೋ ಎಂಬಂತೆ ಬೆವರುನೀರು ಶರೀರದಲ್ಲಿ ಹರಡುತ್ತಿರಲು, ನಯವಾದ ಮಾತುಗಳಿಂದ ಮನವೊಲಿಸಿ ಅವಳಲ್ಲಿ ಬೆರೆಯುತ್ತೇನೆ. ವ॥ ಅದಲ್ಲದೆ ಸರ್ವಜನಸಾಮಾನ್ಯವಾಗಿದ್ದರೂ ಏಕಾಗ್ರಚಿತ್ತತೆಯಿಂದ ಮಾತ್ರ ಆಸ್ವಾದಿಸಲ್ಪಡುವ, ತ್ವಗಿಂದ್ರಿಯವೇದ್ಯವೆನಿಸಿದ್ದರೂ ಹೃದಯ ಸಂವೇದ್ಯವಾದ, ಮತ್ತನ್ನುಂಟುಮಾಡುವುದಾದರೂ ಇಂದ್ರಿಯಗಳ ತಿಳಿವಳಿಕೆಗೆ ಪಾತ್ರವಾಗುವ, ಉಜ್ವಲಸ್ವಭಾವವುಳ್ಳದ್ದಾದರೂ ಮನ್ಮಥಾಗ್ನಿಯ ಶಮನವನ್ನುಂಟು

ಶ್ರಮಸ್ವೇದವಾಗಿಯುಂ ಮಹಾಹ್ಲಾದಕಾರಿಯುಮನುಭೂಯಮಾನವಾಗಿಯುಂ ಉತ್ಪಾದಿತಾನುಭವಸ್ಪೃಹಮುಂ ಸಹಸ್ರವಾರಾನುಭೂತಮಾಗಿಯುಮಪುನರುಕ್ತಮುಂ ಅತಿಸ್ಪಷ್ಟ ಮಾಗಿಯುಮನಿರ್ದೇಶ್ಯಸ್ವರೂಪಮುಮಸಂಸ್ಪರ್ಶನ [ಮತುಲಸ್ಪರ್ಶ] ಮನುಪಮಮರಸಮನಾಖ್ಯೇಯ ಪ್ರೀತಿಕರಮುಮಪ್ಪ ಸುರತಸುಖಮಂ ಬೇಱೊಂದು ಪರಮಾನಂದಸುಖಮನಾಕೆಯೊಳನುಭವಿಸಿ ರತಾವಸಾನಸಮಯದೊಳ್

ಅಮೃತಲವಲಲಿತಮಾದ
ತ್ರಮೃತದ್ಯುತಿಬಿಂಬಮೆನಿಪ ನಿರ್ಭರ ಸುರತ
ಶ್ರಮಜಲಲವಲಲಿತಮನವ
ಳ ಮುಖೇಂದುವನಡರೆ ನೋೞ್ಪ ಸೈಪಂ ಪಡೆವೆಂ ೧೧

ವ॥ ಮತ್ತಮೆಳವೆಂಡಿರ ತಂಡದಲತಗೆಯೂಡಿದಡಿವಜ್ಜೆಗಳಿಂದಚ್ಚೊತ್ತಿದ ಪಚ್ಚೆಯ ಪಾಸಱೆಗಳುಮಂ ಕೇಗುವ ಸೋಗೆಗಳ ಕಳಕಳಂಗಳಿಂ ತೆಕ್ಕನೆ ತೀವಿದ ತಮಾಲತರುಗಳುಮಂ ಪೊಸವಿಸಿಲ ಪೊಳಪಿನಿಂ ನುಣ್ಣನುಜ್ವಳಿಪ ರನ್ನದೆಳವೆಳಗಿನ ಬಳಗದಿಂ ಬಣ್ಣಿಸಿ ಸುರಶರಾಸನಂಗಳ ನೆೞಲಿಕ್ಕಿದಿಂತೆ ನಿಮಿರ್ವ ನಿರ್ಝರಂಗಳುಮನಪ್ಪುಕೆಯ್ದು ಕೇಳೀಪರ್ವತನಿತಂಬಂಗಳೊಳಂ ಪೂಗೊಳಂಗಳೊಳ್ ತೇಂಕಿ ಪಾಱುವ ಪಕ್ಕಿಗಳೆಱಂಕೆವಿಡಿದುದಿರ್ವ ತಂಪನೀವ ತುಂತುರ್ವನಿಯ

ಮಾಡುವ, ತಡೆಯಲಾರದಷ್ಟು ಉಚ್ಛ್ವಾಸ, ಶ್ರಮ, ಬೆವರುಗಳನ್ನು ಉಂಟುಮಾಡುವುದಾದರೂ ಪರಮಾಹ್ಲಾದವನ್ನುಂಟುಮಾಡುವ, ಅನುಭವಿಸುತ್ತಲೇ ಇದ್ದರೂ ಮತ್ತೂ ಅನುಭವಿಸಬೇಕೆಂಬ ಆಸೆಯನ್ನುಂಟುಮಾಡುವ, ಸಾವಿರಾರು ಸಲ ಅನುಭವಿಸಿದ್ದರೂ ಚರ್ವಿತಚರ್ವಣವಾಗದಿರುವ, ಬಹಳ ಸ್ಪಷ್ಟವಾಗಿದ್ದರೂ ಇದು ಹೀಗೆ ಎಂದು ನಿರೂಪಿಸಲು ಅಶಕ್ಯವಾಗಿರುವ, ಅಸಾಧಾರಣವಾದ ಸ್ಪರ್ಶಸುಖವನ್ನುಂಟುಮಾಡುವ, ಸರ್ವಾತಿಶಯವಾದ ಆನಂದವನ್ನುಂಟುಮಾಡುವ, ಹೇಳಲಾಗದಷ್ಟು ಪ್ರೀತಿಯನ್ನುಂಟುಮಾಡುವ, ಬೇರೊಂದು ಮೋಕ್ಷಸುಖದಂತಿರುವ ರತಿಸುಖವನ್ನು ಅನುಭವಿಸುವೆನು. ಕೊನೆಯಲ್ಲಿ, ೧೧. ಚಂದ್ರಮಂಡಲವು ಅಮೃತದ ಹನಿಗಳಿಂದ ಕೂಡಿಕೊಂಡು ಸುಂದರವಾಗಿರುವಂತೆ ಗಾಢವಾದ ಸುರತದ ಆಯಾಸದಿಂದ ಉಂಟಾದ ಬೆವರಿನ ಹನಿಗಳಿಂದ ಸೊಬಗನ್ನುಂಟುಮಾಡುವ ಅವಳ ಮುಖಚಂದ್ರನನ್ನು ನೋಡುವ ಭಾಗ್ಯವನ್ನು ಪಡೆಯುತ್ತೇನೆ! ವ॥ ಮತ್ತು ಗುಂಪಿನ ಅರಗಿನ ರಸವನ್ನು ಬಳಿದಿರುವ ತರುಣಿಯರ ಕಾಲಿನ ಹೆಜ್ಜೆಗಳಿಂದ ಮುದ್ರಿತವಾದ ಹಾಸುಗಲ್ಲುಗಳಿಂದಲೂ, ಕೂಗುತ್ತಿರುವ ನವಿಲುಗಳ ಕಲಕಲಧ್ವನಿಯಿಂದ ಆವರಿಸಲ್ಪಟ್ಟಿರುವ ಹೊಂಗೆಮರಗಳಿಂದಲೂ, ಎಳಬಿಸಿಲಿನ ಹೊಳಪಿನಿಂದ ಚೆನ್ನಾಗಿ ಪ್ರಕಾಶಿಸುವ ರತ್ನಗಳ ನುಣುಪಾದ ಕಾಂತಿಗಳ ಸಮೂಹದಿಂದ ಚಿತ್ರಿತವಾದ, ಆದರಿಂದಲೆ ಕಾಮನಬಿಲ್ಲಿನ ಪ್ರತಿಬಿಂಬವನ್ನು ಹೊಂದಿರುವಂತೆ ಶೋಭಿಸಿ

ತುಱುಗಲಮುಂ ತಳಿರ ನನೆಯಲರ ಕಾಯ ತನಿವಣ್ಣ ಬಣ್ಣಂಗಳಿಂ ಚಿತ್ರಿಸಿದಂತಿದಿದದಱಗೋಡು ಗಳೊಳಂಚಿತವಾದ ಗೊಂಚಲುಗಳುಮನಲರ್ವಂಡನುಂಡು ತನಿಸೊರ್ಕಿಂ ಸೊರ್ಕಿ ತೆಱಂದಿರಿದು ಪಾಱುವ ಪೆಣ್ದುಂಬಿಗಳ ಬಳಗವುಮನೊಳಗೊಂಡ ಲತಾಮಂಟಪಂಗಳೊಳಂ ತಳರೆ ತಾಗುವ ತೆರೆದುಱುಗಲಲೆಪದಿಂ ಸೂಸಿ ಪಾಸಿಱಿದು ಬಣ್ಣವುರಂ ತೀವಿದಂತೆ ಬೆಡಂಗುವಡೆದ ಬಣ್ಣ ವಣ್ಣಗೆಯ ನೀರ್ವೂಗಳ ರಜಂಗಳುಮನೊಳದೊಂದಿನ ಪಾಲ್ಗಳುಮಂ ಪೀರ್ದಿಂಗೊರಲ್ಗಳಾದ ನೀರ್ವಕ್ಕಿಗಳ ಸುಸಿಲಮುಸಕದಿಂಚರಂಗಳುಮಂ ನೀರಾಟವಾಡುವ ಗಾಡಿಕಾರ್ತಿಯರ ಘನಜಘನಂ ಗಳ ಪೆರ್ವೊಲೆಯ ಪೊರ್ಕುಳಿಯಿಂ ಪಱಿವಱಿಯಾದ ಪೆರ್ದೆರೆಗಳುಮಂ ತಳೆದ ಪೂಗೊಳಂ ಗಳೊಳಂ ಪಲತೆಱದ ರಮಣೀಯಪ್ರದೇಶಂಗಳೊಳಮೊಂದುಪೊತ್ತಗಲದೆ ಮೆಯ್ಗೆ ಮೆಚ್ಚಿದಂ ತೊಚ್ಚತಂ ಕಾದಂಬರಿಯೊಳ್ ನೆರೆದು ನಿಸರ್ಗರಮಣೀಯಮಪ್ಪ ಯುವ್ವನಮಂ ರಮಣೀಯತರ ಮಾಗೆ ನೆಗಟುತ್ತಮಿರ್ಪೆನದಲ್ಲದೆಯುಂ

ಮನದನ್ನಳೆನಿಸಿ ನೆಗಟಿತ್ತ
ನ್ನಿನಿಯಳ್ಗಾಂ ಪೇಟ್ದನಂತರಂ ಮಾಡಿಸುವೆಂ
ಮನಮೊಸೆದಾ ವೈಶಂಪಾ
ಯನಂಗೆ ಮದಲೇಖೆಯೊಳ್ ವಿವಾಹೋತ್ಸವಮಂ ೧೨

ಹರಿಯುತ್ತಿರುವ ಗಿರಿನದಿಗಳಿಂದಲೂ ಕೂಡಿಕೊಂಡಿರುವ ಕ್ರೀಡಾಪರ್ವತದ ಸಮಭೂಮಿ ಗಳಲ್ಲೂ ಮತ್ತು ತಾವರೆಗೊಳಗಳಲ್ಲಿ ಈಜಾಡಿ ಹಾರುತ್ತಿರುವ ಹಕ್ಕಿಗಳ ರೆಕ್ಕೆಗಳಲ್ಲಿ ಸೇರಿಕೊಂಡಿದ್ದು ಉದುರುತ್ತಿರುವ, ತಂಪನ್ನುಂಟುಮಾಡುವ, ತುಂತುರುಹನಿಗಳ ಗುಂಪನ್ನೂ, ಚಿಗುರಿನ, ಮೊಗ್ಗಿನ, ಕಾಯಿ, ಮಾಗಿದ ಹಣ್ಣಿನ ಬಣ್ಣಗಳಿಂದ ಚಿತ್ರಿಸಿದಂತಿ ರುವ ದಟ್ಟವಾದ ಹಾಗೂ ನೀಳವಾದ ಕೊಂಬೆಗಳ ಸುಂದರವಾದ ಗೊಂಚಲುಗಳನ್ನೂ, ಹೂವಿನರಸವನ್ನು ಕುಡಿದು ನುಸುಳಿ ನುಸುಳಿ ಹಾರುತ್ತಿರುವ ಹೆಣ್ಣುದುಂಬಿಗಳ ಗುಂಪನ್ನೂ ಒಳಗೊಂಡಿರುವ ಬಳ್ಳಿಮನೆಗಳಲ್ಲೂ ಮತ್ತು ಒಂದಕ್ಕೊಂದು ತಗುಲುತ್ತಾ ಹೊರಡುತ್ತಿರುವ ಅಲೆಗಳ ಸಮೂಹದ ಚಲನೆಯಿಂದ ಚೆಲ್ಲಿ ಹರಡಿಕೊಂಡು ಚಿತ್ರಿತ ವಾದಂತೆ ಸೊಬಗನ್ನು ಪಡೆದಿರುವ ನಾನಾಬಣ್ಣದ ನೀರುಹೂವುಗಳ ಧೂಳುಗಳನ್ನೂ ದಂಟಿನೊಳಗಣ ದೀಡಿನ ರಸವನ್ನೂ ಹೀರಿ ಮಧುರವಾದ ಕಂಠವನ್ನು ಹೊಂದಿರುವ ನೀರುಹಕ್ಕಿಗಳ ಮಿಗಿಲಾದ ಸಂಭೋಗಕ್ರೀಡೆಯಿಂದ ಉಂಟಾಗುವ ಇಂಪಾದ ಧ್ವನಿ ಯನ್ನೂ, ಜಲಕ್ರೀಡೆಯಾಡುತ್ತಿರುವ ಸುಂದರಿಯರ ನಿತಂಬಗಳ ಮತ್ತು ತೋರಮೊಲೆ ಗಳ ಹೊಡೆತದಿಂದ ಚಲ್ಲಾಪಿಲ್ಲಿಯಾದ ದೊಡ್ಡದೊಡ್ಡ ಅಲೆಗಳನ್ನೂ ಹೊಂದಿರುವ ಹೂವಿನ ಕೊಳಗಳಲ್ಲೂ, ಹೀಗೆಯೇ, ಹಲವು ತೆರದ ಮನೋಹರವಾದ ಸ್ಥಳಗಳಲ್ಲಿ ಒಂದು ಕ್ಷಣಕಾಲವೂ ಬಿಟ್ಟಿರದೆ, ಶರೀರಕ್ಕೆ ಹಿತವಾಗುವಂತೆ ಕಾದಂಬರಿಯೊಂದಿಗೆ ಕ್ರೀಡಿಸುತ್ತಾ ಸ್ವಭಾವತಃ ರಮಣೀಯವಾದ ಯೌವನವನ್ನು ಅತ್ಯಂತ ರಮಣೀಯವನ್ನಾಗಿ ಮಾಡುತ್ತಾ ಇರುತ್ತೇನೆ ! ಅಲ್ಲದೆ ೧೨. ವಿಶ್ವಾಸಪಾತ್ರಳಾದ ನನ್ನ ಪ್ರಿಯಳಿಗೆ ಹೇಳಿ

ವ॥ ಎಂದಿಂತನಂತಚಿಂತಾಂತರಂಗಂ ಪಲುಂಬಿ ಪಂಬಲಿಸುತ್ತುಂ ನಿಚ್ಚಪಯಣಂಗಳಿಂ ಯುವರಾಜನನೇಕ ಯೋಜನಂಗಳಂ ಪೆರ್ಚಿಗಿಕ್ಕಿ ಪೋಗುತ್ತಮಿರೆಯಿರೆ

ವಸುಧಾಚಕ್ರಕ್ಕೆ ಕಾಲಾಯಸಗೃಹವರಣಂ ಚಂದ್ರಬಿಂಬಕ್ಕೆ ರಾಹು
ಗ್ರಸನಂ ಚಂದ್ರಾಂಶುಬಿಂಬಕ್ಕಮಮೆಯ ರಜನೀಪ್ರೋದ್ಗಮಂ ವಜ್ರವಹ್ನಿ
ಪ್ರಸರಕ್ಕುದ್ದಾಮಧೂಮೋದಯಮಖಿಲವಿಯೋಗಾತುರರ್ಗಂಧಕಾರೋ
ಲ್ಲಸನಂ ತಾನೆಂಬಿನಂ ಬಂದುದು ಬಹುಳ ತಟಜ್ಜಾಲವಂಭೋದಕಾಲಂ ೧೩

ತಿರುವಂ ಮುಪ್ಪುರಿಗೊಂಡು ಮಿಳ್ಳಿಸುವ ಮಿಂಚಂ ಮಾಡಿ ನೀಡುಂ ಭಯಂ
ಕರಮಾಗೇಱಿಸಿಕೊಂಡು [ಶಕ್ರ]ಧನುವಂ ಧಾರಾಶರಾಸಾರಮಂ
ಸುರಿಯುತ್ತುಂ ಘನಘೋಷಗರ್ಭರತರ ಪ್ರಧ್ವಾನದಿಂದಾರ್ದು ಪಾ
ರ್ದಿರದುದ್ದಾಮ ನಿದಾಘಮಂ ಬೆದಱಿ ಬೆಂಕೊಂಡತ್ತು ಮೇಘಾಗಮಂ ೧೪

ವ॥ ಅಂತು ಬಂದ ಮೇಘಾಗಮದೊಳ್ ವಿಯೋಗಿಜನಂಗಳ ಮೊಗಂಗಳುಂ ದಿಗಂತರಂಗಳುಮೊಡನೊಡನೆ ಕತ್ತಲಿಸಿದುವವರ ಮನಮುಂ ಮರಾಳಕುಲಮುಮೊಡನೊಡನೆ ಬೆದಱಿದುವವರ ನಿಶ್ವಾಸವಾತಂಗಳುಂ ಧಾರಾಕದಂಬಂಗಳುಮೊಡನೊಡನೆ ಪೊಣ್ಮಿದುವವರ ಕಣ್ಮಲರ್ಗಳುಂ

ಪ್ರೀತಿಯಿಂದ ವೈಶಂಪಾಯನನಿಗೆ ಮದಲೇಖೆಯೊಂದಿಗೆ ವಿವಾಹೋತ್ಸವವನ್ನು ಮಾಡಿಸುತ್ತೇನೆ !" ವ॥ ಇವೇ ಮೊದಲಾದ ಅನೇಕ ಆಶೋತ್ತರಗಳಿಂದ ತುಂಬಿದ ಮನಸ್ಸುಳ್ಳವನಾಗಿ, ಹಲುಬಿ ಹಂಬಲಿಸುತ್ತಾ ನಿತ್ಯಪ್ರಯಾಣಗಳಿಂದ ಅನೇಕ ಯೋಜನಗಳನ್ನು ಅತಿಕ್ರಮಿಸಿ ಹೋದನು. ೧೩.ಭೂಮಂಡಲಕ್ಕೆ ಲೋಹಪಂಜರದ ಬಂಧನದಂತೆಯೂ, ಚಂದ್ರಬಿಂಬಕ್ಕೆ ರಾಹುಗ್ರಸನದಂತೆಯೂ, ಸೂರ್ಯಮಂಡಲಕ್ಕೆ ಅಮಾವಾಸ್ಯೆಯ ರಾತ್ರಿಯು ಒದಗಿದಂತೆಯೂ, ಸಿಡಿಲೆಂಬ ಬೆಂಕಿಯು ಹರಡುವುದಕ್ಕೆ ಮೊದಲು ದೊಡ್ಡಹೊಗೆ ಎದ್ದಿರುವಂತೆಯೂ, ವಿರಹಿಜನಕ್ಕೆಲ್ಲ ಕಗ್ಗತ್ತಲೆ ಕವಿದಂತೆಯೂ ಇರುವ ಅತ್ಯಧಿಕವಾದ ಮಿಂಚುಗಳ ಗುಂಪಿನಿಂದ ಕೂಡಿದ ಮಳೆಗಾಲವು ಬಂದಿತು. ೧೪. ಮಳೆಗಾಲವು ಚಲಿಸುವ ಮಿಂಚುಗಳನ್ನು ಒಟ್ಟಾಗಿ ಸೇರಿಸಿ ಹೊಸೆದು ಮೌರ್ವಿಯನ್ನಾಗಿ ಮಾಡಿಕೊಂಡು, ಕಾಮನಬಿಲ್ಲನ್ನು ಬಹಳ ಭಯಂಕರವಾಗುವಂತೆ ಹೆದೆಯೇರಿಸಿ ಕಟ್ಟಿ, ಜಲಧಾರೆಗಳೆಂಬ ಬಾಣಗಳ ಮಳೆಯನ್ನು ಸುರಿಸುತ್ತಾ, ಗುಡುಗು ಸಿಡಿಲುಗಳ ಗುಡುಗುಡುಧ್ವನಿಯಿಂದ ಗಟ್ಟಿಯಾಗಿ ಗರ್ಜಿಸಿ ನೋಡಿ ಮಹತ್ತರವಾದ ಬೇಸಿಗೆಯನ್ನು ಹೆದರಿಸಿ ಓಡಿಸಿತು ! ವ॥ ಹಾಗೆ ಬಂದ ಮಳೆಗಾಲದಲ್ಲಿ ತಮ್ಮ ಮಡದಿಯರಿಂದ ಅಗಲಿದ ವಿರಹಿಗಳ ಮುಖಗಳೂ ದಿಗಂತಗಳೂ ಒಟ್ಟಿಗೆ ಕಪ್ಪಾದುವು (ವಿರಹಿಗಳ ಮುಖವು ದುಃಖದಿಂದ ಕಳೆಗುಂದಿತು. ಸೂರ್ಯರಶ್ಮಿಯೇ ಇಲ್ಲದೆ ದಿಕ್ಕುಗಳು ಕಪ್ಪಾಗಿದ್ದುವು). ವಿರಹಿಗಳ ಮನಸ್ಸೂ ಹಂಸಪಕ್ಷಿಗಳ ಗುಂಪೂ ಒಟ್ಟಿಗೆ ಭಯಗೊಂಡುವು. ವಿರಹಿಗಳ ನಿಟ್ಟುಸಿರೂ ಜಲಧಾರೆಗಳೂ ಒಟ್ಟಿಗೆ ಹೊಮ್ಮಿದುವು. ಅವರ ಕಣ್ಣುಗಳೂ

ಕಾರಮುಗಿಲ್ಗಳುಮೊಡನೊಡನೆ ವಾರಿಧಾರೆಗಳಂ ಸುರಿದುವವರ ಹೃದಯಂಗಳುಂ ನದೀನದಂಗಳುಮೊಡನೊಡನುತ್ಕಲಿಕೆಗಳನೊಳಕೆಯ್ದುವವರ ರಣರಣಕಾವಸ್ಥೆಗಳುಂ ಕಂ[ಕಂ]ದಳಂಗಳುಮೊಡನೊಡನೆ ವಿಜೃಂಭಿಸಿದುವವರ ಮನೋರಥಂಗಳುಂ ಮೇಘವರ್ಣಂಗಳುಮೊಡನೊಡನೆ ಬಹುವಿಧಂಗಳಾದುವಂತುಮಲ್ಲದೆಯುಂ

ಧರೆಯೊಳ್ ಶಾಲೂರಸಂಘಂ ಪವನಪಥದೊಳಂಭೋಧರಾನೀಕವಾಶಾಂ
ತರದೊಳ್ ಜಂಝಾಸಮೀರಂ ವನಸಮುದಯದೊಳ್ ಕೇಕಿಸಂಘಾತಮುರ್ವೀ
ಧರಚಕ್ರಪ್ರಾಂತದೊಳ್ ನಿರ್ಝರತತಿ ತಟನೀವ್ಯೂಹದೊಳ್ ಪೂರವಾರಂ
ವಿರಹಿವ್ರಾತಂ ಬಿಗುರ್ವಂತೊಡನೊಡನೆ ರುತಂ ಪರ್ವಿಸುತ್ತಿರ್ದುವೆತ್ತಂ ೧೫

ಬಯಲೊಳ್ ಪರ್ವುಗೆದೋಱಿ ನುಣ್ಪಸಲೆಯೊಳ್ ಮೆಯ್ವೋಱಿ ನೀರ್ದಾಣ
ದೊಳ್
ನಯಮಂ ಬೀಱಿ ಮಹೀಧ್ರದೊಳ್ ಮಸಕಮಂ ಕೈಗೊಂಡು ಶಾಖಾಸಮು
ಚ್ಚಯದೊಳ್ ಸಂದಣಿಗೊಂಡು ತಾಳವನದೊಳ್ ಕಾರ್ಕಶ್ಯಮಂ ಮಾಡಿಕೊಂ
ಡು ಯಥಾಸಾರನಿಪಾತಮುಣ್ಮಿದುದು ಮೇಘೋನ್ಮುಕ್ತಧಾರಾರವಂ ೧೬

ಸ್ಫುರಿತ ತಟಿತ್ಪ್ರಭಾಪ್ರತತಿ ಕಟ್ಟಲೆಯಂ ಸುರಗೋಪಕಾಂತಿ ಪಾಂ
ಡುರತೆಯನಂಬುವಾಹತತಿ ಶೋಷಣಮಂ ಘನವಾರಿಧಾರೆ ನಿ
ರ್ಭರಪರಿತಾಪಮಂ ಕುಟಜಕುಂದ ನವೋದ್ಗಮವಾಟ ರಾಗಮಂ
ವಿರಹಿಜನಕ್ಕೆ ಮಾಡಿದುದು ನೋಡುವೊಡೆಯ್ದೆ ವಿರುದ್ಧಮೆಂಬಿನಂ ೧೭

ಮಳೆಮೋಡಗಳೂ ಒಟ್ಟಿಗೆ ನೀರು ಸುರಿಸಿದುವು. ಅವರ ಹೃದಯಗಳೂ ಗಂಡು ಹೆಣ್ಣು ಹೊಳೆಗಳೂ (ನದ ನದಿಗಳು) ಒಟ್ಟಿಗೆ ಉತ್ಕಲಿಕೆಗಳನ್ನು (೧. ಕಾತರತೆ ೨. ಅಲೆ) ಪಡೆದುವು. ಅವರ ವಿರಹಾವಸ್ಥೆಯೂ ಚಿಗುರುಗಳೂ ಒಟ್ಟಿಗೆ ಹೆಚ್ಚಿದುವು ಅವರ ಮನೋರಥಗಳೂ ಮೋಡದ ಬಣ್ಣಗಳೂ ಒಟ್ಟಿಗೆ ನಾನಾಬಗೆಯಾದವು. ಅದಲ್ಲದೆ, ೧೫. ಭೂಮಿಯಲ್ಲಿ ಕಪ್ಪೆಗಳೂ ಆಕಾಶಮಾರ್ಗದಲ್ಲಿ ಮೇಘಗಳೂ ದಿಕ್ಕುಗಳ ಮಧ್ಯದಲ್ಲಿ ಬಿರುಗಾಳಿಯೂ ಕಾಡುಗಳಲ್ಲಿ ನವಿಲುಗಳ ತಂಡವೂ ಬೆಟ್ಟಗಳಲ್ಲಿ ಝರಿಗಳೂ ನದಿಗಳಲ್ಲಿ ಪ್ರವಾಹಗಳೂ ವಿರಹಿಗಳೆಲ್ಲಾ ಭಯಪಡುವಂತೆ ಎಲ್ಲೆಲ್ಲೂ ಸದ್ದನ್ನು ಹೆಚ್ಚುಹೆಚ್ಚಾಗಿ ಮಾಡುತ್ತಿದ್ದುವು. ೧೬. ಮೋಡಗಳಿಂದ ಸುರಿಯುತ್ತಿರುವ ಜಲಧಾರೆಗಳ ಸಪ್ಪಳವು ಮೈದಾನಗಳಲ್ಲಿ ಹರಡಿಕೊಂಡು ಮೃದುವಾದ ಹಸುರುಹುಲ್ಲಿರುವ ಪ್ರದೇಶಗಳಲ್ಲಿ ಕಾಣಿಸಿಕೊಂಡು, ಜಲಾಶಯಗಳಲ್ಲಿ ಮೆದುವಾಗಿ, ಪರ್ವತಗಳಲ್ಲಿ ವಿಜೃಂಭಿಸಿ, ಕೊಂಬೆಗಳಲ್ಲಿ ಗುಂಪುಗೂಡಿ, ತಾಳೆಮರದ ಕಾಡುಗಳಲ್ಲಿ ಕಠಿನತನವನ್ನು ವ್ಯಕ್ತಪಡಿಸಿ, ಧಾರಾಸಂಪಾತವನ್ನನುಸರಿಸಿ ಹರಡಿತು. ೧೭. ಹೊಳೆಯುವ ಮಿಂಚಿನ ಬೆಳಕು ವಿರಹಿಗಳಿಗೆ ಕತ್ತಲೆಯನ್ನುಂಟುಮಾಡುತ್ತಿತ್ತು (ದಿಕ್ಕು ತೋಚದಂತೆ ಮಾಡುತ್ತಿತ್ತು). ಮಿಂಚುಹುಳುಗಳ ಹೊಂಬಣ್ಣದ ಬೆಳಕು ಇವರ ಶರೀರವು ಬಿಳುಪಾಗುವಂತೆ ಮಾಡುತ್ತಿತ್ತು. ಮೋಡಗಳ ಗುಂಪು ಇವರ ದೇಹವು ಒಣಗುವಂತೆ

ವ॥ ಅಂತು ಬಂದ ಮೞೆಗಾಲಮಂ ಬಗೆಯದೆ ಸುಹೃದ್ದರ್ಶನಕುತೂಹಲದೊಳಂ ಕಾದಂಬರೀಸಮಾಗಮೌತ್ಸುಕ್ಯದೊಳಮೆಲ್ಲಿಯುಂ ತಡೆಯದೆ ಪಲವು ಪಯಣಂಗಳಿಂ ಚಿತ್ರರಥವನಕ್ಕೆ ಸಮೀಪಮೆನೆ ಬರ್ಪನ್ನೆಗಂ ಪತ್ರಲೇಖೆಯಂ ಕಳುಪಿ ಮಗುಟ್ದುಂ ಬಂದು ಪೊಡಮಟ್ಟ ಮೇಘನಾದನನಿದಿರೊಳ್ ಕಂಡು ವೈಶಂಪಾಯನವಾರ್ತಾಕರ್ಣನೋತ್ಸುಕನಾಗಿ ಚಂದ್ರಾಪೀಡನಿಂತೆಂದಂ

ಪ್ರಿಯಸಖವಾರ್ತೆಯಂ ತಿಳಿಯೆ ಬಿನ್ನವಿಸನ್ನೆಗಮಿರ್ಕೆ ಪತ್ರಲೇ
ಖೆಯು ದೆಸೆ ಕಂಡುದುಂಟೆ ಸಖನೇಂ ಸುಖಮಿರ್ದನೆ ತದ್ವನಾಂತದ
ಲ್ಲಿಯೆ ನೆಲೆಸಿರ್ದ ಕಾರಣವದೇಂ ನಿನಗಾತನದೇನನೆಂದನೆ
ನ್ನಯ ಬರುತಿರ್ದುದುಂ ವಿದಿತಮಾದುದೆ ಕಾಣ್ಬೆನೆ ಪೋದೊಡಾತನಂ ೧೮

ವ॥ ಎಂದು ಬೆಸಗೊಳ್ವುದುಂ ದೇವರ್ ಬೆಸಸಿದಲ್ಲಿವರಂ ಪೋಗಿ ಪತ್ರಲೇಖೆಯಂ ಕಳುಪಿಬಂದೆನಲ್ಲದೆ ವೈಶಂಪಾಯನವೃತ್ತಾಂತಮನಱಿಯೆನೆಂದು ಮೇಘನಾದಂ ನುಡಿಯೆ ಚಂದ್ರಾಪೀಡಂ ಸುಹೃತ್ಸ್ನೇಹಕಾತರಹೃದಯನಾಗಿ ಬೇಗಂ ನಡೆಗೊಂಡು ಚಿತ್ರರಥಮನೆಯ್ದಿ

ಮಾಡುತ್ತಿತ್ತು. ದಟ್ಟವಾದ ಜಲಧಾರೆಯು ಬಹಳ ಸಂತಾಪವನ್ನುಂಟುಮಾಡುತ್ತಿತ್ತು. ಬೆಟ್ಟಮಲ್ಲಿಗೆ, ಮೊಲ್ಲೆ ಎಂಬ ಬಿಳಿಯ ಬಣ್ಣದ ಹೂವುಗಳನ್ನು ಬೆಳೆಯುವ ಹೊಸ ಕೈದೋಟವು ಇವರಿಗೆ ರಾಗವನ್ನು (೧. ಪ್ರೀತಿ ೨. ಕೆಂಪು) ಉಂಟುಮಾಡುತ್ತಿತ್ತು. ಇವೆಲ್ಲವೂ ನೋಡಿದರೆ ವಿರುದ್ಧವಾಗಿ ಕಾಣುತ್ತಿದ್ದುವು. ವ॥ ಹೀಗೆ ಬಂದ ಮಳೆಗಾಲವನ್ನೂ ಗಮನಿಸದೆ ಸ್ನೇಹಿತನನ್ನು ನೋಡಬೇಕೆಂಬ ಕುತೂಹಲದಿಂದಲೂ, ಕಾದಂಬರಿಯೊಂದಿಗೆ ಕೂಡಬೇಕೆಂಬ ಉತ್ಸಾಹದಿಂದಲೂ, ಎಲ್ಲಿಯೂ ನಿಲ್ಲದೆ ಕೆಲವು ದಿನಗಳು ಪ್ರಯಾಣ ಮಾಡಿ ಚಿತ್ರರಥೋದ್ಯಾನದ ಹತ್ತಿರಕ್ಕೆ ಬಂದನು. ಅಷ್ಟರಲ್ಲಿ ಪತ್ರಲೇಖೆಯನ್ನು ಕಳುಹಿಸಿ ಹಿಂದಿರುಗಿಬರುತ್ತಿದ್ದ ಮೇಘನಾದನು ಸಂಧಿಸಿ ನಮಸ್ಕಾರಮಾಡಿದನು. ಅವನನ್ನು ಎದುರಿನಲ್ಲೆ ಕಂಡು ವೈಶಂಪಾಯನನ ಸಮಾಚಾರವನ್ನು ಕೇಳಬೇಕೆಂಬ ಕುತೂಹಲವುಳ್ಳವನಾಗಿ ಚಂದ್ರಾಪೀಡನು ಮೇಘನಾದನನ್ನು ಕುರಿತು ಹೀಗೆಂದನು. ೧೮. "ಮೇಘನಾದ, ಪತ್ರಲೇಖೆಯ ಸಮಾಚಾರವು ಸ್ವಲ್ಪ ಹಾಗಿರಲಿ. ವೈಶಂಪಾಯನನ ವೃತ್ತಾಂತವನ್ನು ಮೊದಲು ನನಗೆ ತಿಳಿಸು. ನೀನು ನನ್ನ ಗೆಳೆಯನನ್ನು ಕಂಡಿದ್ದೆಯಾ ? ಸುಖವಾಗಿರುವನೆ ? ಕಾಡಿನಲ್ಲಿ ನೆಲೆಸಲು ಕಾರಣವೇನು ? ನಿನಗೆ ಅವನು ಏನು ಹೇಳಿದನು ? ನಾನು ಬರುವುದು ಅವನಿಗೆ ಗೊತ್ತೆ ? ನಾನು ಹೋದರೆ ಅವನು ಸಿಕ್ಕುತ್ತಾನೆಯೆ ?" ವ॥ ಎಂದು ಕೇಳಲಾಗಿ ಮೇಘನಾದನು "ಸ್ವಾಮಿ, ತಾವು ಮೊದಲು ಅಪ್ಪಣೆಮಾಡಿದ ಸ್ಥಳದವರೆಗೆ ಮಾತ್ರ ಹೋಗಿ ಪತ್ರಲೇಖೆಯನ್ನು ಕಳುಹಿಸಿ ಬಂದೆನು. ಇಷ್ಟಲ್ಲದೆ ವೈಶಂಪಾಯನನ ವೃತ್ತಾಂತವೇ ನನಗೆ ತಿಳಿಯದು" ಎಂದು ಹೇಳಿದನು. ಚಂದ್ರಾಪೀಡನು ಗೆಳೆಯನ ಮೇಲಿನ ಪ್ರೀತಿಯಿಂದ ಗಾಬರಿಗೊಂಡ ಮನಸ್ಸುಳ್ಳವನಾಗಿ, ಬೇಗೆ ಬೇಗ ಪ್ರಯಾಣ ಮಾಡಿ ಚಿತ್ರ

ತೊಲಗುಗುವೊ ಕೆಳೆಯನೊರ್ದೆಸೆ
ಗೆ ಲಜ್ಜೆಯಿಂ ನಮ್ಮ ಬರವುಗೇಳ್ದೊಡೆನುತ್ತಾ
ಕುಲಮತಿ ಯುವರಾಜಂ ರಾ
ಜಲೋಕಮಂ ಬನದ ಪೊಱಗೆ ಕಾಪಂ ಪೇೞ್ದಂ ೧೯

ವ॥ ಅನಂತರಂ ತಾನಾ ವನಮಂ ಪುಗುವಲ್ಲಿ ಜಲಧರಗಳಿತ ಧಾರಾಜಲಕ್ಲಿನ್ನತೀರ ತರುತಳಮುಮಾಪ್ಲಾವಿತೋಪಾಂತಶಾದ್ವಲಮುಂ ಅನವರತ ರೋಧೋಜಲಪ್ರವೇಶ ಕಲುಷಿತ ಪ್ರಾಂತಮುಮವಶೀರ್ಯಮಾಣೋದ್ದಂಡಕುಮುದದಳಗಹನಮುಂ ಮನೋಜ್ಞಕಮಲ ಷಂಡಮುಂ ಜರ್ಝರಿತ ಕಲ್ಹಾರಕುವಲಯಮುಮುದ್ಭ್ರಾಂತ ಭ್ರಮರಮುಂ ಉಡ್ಡೀನಹಂಸ ಸಾರ್ಥಮುಂ ಉತ್ಕಂಪಿತ ಕಾದಂಬಕದಂಬಕಾಶ್ರಯಮಾಣೋಪಕೂಲನಡ್ವಲಮುಂ ಅವಶಿಷ್ಟ ದಳನಿಲೀಯಮಾನೋಚ್ಚಕಿತ ಚಕ್ರವಾಕಯುಗಮುಮೆನಿಸಿ ತಜ್ಜಲದೋಪಹತಿಯಿಂ [ಜಲದ ಕಾಲೋಪಹತಿಯಿಂ] ಬೇಱೊಂದು ಸರೋವರಮೆಂಬ ಸಂದೆಯಮಂ ಸಂದಿಸಚ್ಛೋದ ಸರೋವರಮಂ ಕಂಡು

ವನಾಂತರದ ಪೆರ್ಮರಂ ಪೊದಱ ಪಳ್ಳಕೊಳ್ಳಂಗಳೆಂ
ಬೆನಿತ್ತೆಡೆಯೊಳಂ ತೊಟಲ್ದವನಿಪಾಲರುಂ ತಾನುಮಾ
ವನಾಂತರದೊಳಿತ್ತಲುಂ ಸುೞಿದು ಸುತ್ತಲುಂ ಸುತ್ತಿ ಕಂ
ಡನಿಲ್ಲ ಸಖನಿರ್ದಚಿಹ್ನಮುಮನಾ ನರೇಂದ್ರಾತ್ಮಜಂ ೨೦

ರಥೋದ್ಯಾನಕ್ಕೆ ಬಂದು ೧೯. "ವೈಶಂಪಾಯನನು ನಾನು ಬಂದಿರುವುದನ್ನು ಕೇಳಿ ನಾಚಿಕೆಯಿಂದ ಬೇರೊಂದುಕಡೆಗೆ ಹೋಗಿಬಿಡಬಹುದು" ಎಂದು ಮನಸ್ಸಿನಲ್ಲಿ ಆಲೋಚಿಸಿ, ಕಳವಳಗೊಂಡು ತನ್ನ ಜೊತೆಯಲ್ಲಿ ಬಂದಿದ್ದ ರಾಜರನ್ನು ಕಾಡಿನ ಹೊರಗೆ ಸುತ್ತಲೂ ಕಾಯುತ್ತುಕೊಂಡಿರುವಂತೆ ನೇಮಿಸಿದನು. ವ॥ ಬಳಿಕ ತಾನೂ ಆ ವನಕ್ಕೆ ಪ್ರವೇಶಮಾಡುತ್ತಿರುವಲ್ಲಿ ಮೋಡಗಳ ದೆಸೆಯಿಂದ ಸುರಿಯುತ್ತಿರುವ ಜಲಧಾರೆಗಳಿಂದ ನೆನೆದುಹೋದ ದಡದ ಮೇಲಿರುವ ಮರಗಳುಳ್ಳ, ತೊಯಿಸಲ್ಪಟ್ಟ ಸಮೀಪದ ಹಸಿರು ಹುಲ್ಲಿನ ಪ್ರದೇಶವುಳ್ಳ, ಒಂದೇಸಮನೆ ದಡದಿಂದ ಹರಿದುಬರುವ ನೀರು ಸೇರಿ ಕೊಳಕಾದಿ ಅಂಚುಗಳುಳ್ಳ, ಹಾಳುಮಾಡಲ್ಪಟ್ಟ ಉದ್ದವಾದ ದಂಟಿನಿಂದ ಕೂಡಿ ಕೊಂಡಿರುವ ಬಿಳಿಯ ನೈದಿಲೆದಳಗಳಿಂದ ತುಂಬಿಕೊಂಡಿರುವ, ಚಂದಗಾಣದಿರುವ ಕಮಲಗಳ ಪೊದರುಳ್ಳ, ಭಗ್ನವಾದ ಕಲ್ಹಾರ ಕನ್ನೈದಿಲೆಗಳುಳ್ಳ, ಗಾಬರಿಗೊಂಡ ದುಂಬಿಗಳುಳ್ಳ, ಹಾರಿಹೋದ ಹಂಸಸಮೂಹವುಳ್ಳ, ನಡುಗುತ್ತಿರುವ ಕಾದಂಬ ಪಕ್ಷಿಗಳಿಂದ ಆಶ್ರಯಿಸಲ್ಪಟ್ಟಿರುವ 'ನಡ'ವೆಂಬ ಹುಲ್ಲಿನ ಪ್ರದೇಶವುಳ್ಳ ಮತ್ತು ಅಳಿದುಳಿದಿರುವ ತಾವರೆಯೆಲೆಗಳೊಳಗೆ ಅಡಗಿಕೊಳ್ಳುತ್ತಿರುವ ಗಾಬರಿಗೊಂಡ ಚಕ್ರವಾಕ ದಂಪತಿಗಳುಳ್ಳ, ಹೀಗೆಯೆ ಮೋಡಗಳ ಹಾವಳಿಯಿಂದ ಬೇರೊಂದು ಸರೋವರವೋ ಎಂಬ ಸಂದೇಹವನ್ನುಂಟುಮಾಡುವ ಅಚ್ಛೋದಸರೋವರವನ್ನು ಕಂಡನು. ೨೦. ಬಳಿಕ ಚಂದ್ರಾಪೀಡನು ಸಾಮಂತರಾಜರೊಂದಿಗೆ ಕೂಡಿಕೊಂಡು ಕಾಡಿನ ಮಧ್ಯದಲ್ಲಿ

ವ॥ ಅಂತು ವೈಶಂಪಾಯನನನೆಲ್ಲಿಯುಮಱಸಿ ಕಾಣದಾತನ ವೃತ್ತಾಂತಮಂ ಮಹಾಶ್ವೇತೆಯಾದೊಡಱಿಗುಮೆಂದು ಚಂದ್ರಾಪೀಡದೇವಂ ತದಾಶ್ರಮಮನೆಯ್ದೆವಂದು ಕಿಱಿದಾಸುಂ ದೂರದೊಳ್ ನಿವೇಶಿತ ತುರಂಗಸೈನ್ಯನಪನೀತಸಮಾಯೋಗನಾಗಿ ಪಾವಿನೆರೆಯ ದೊರೆಯ ದುಕೂಲಮಂ ಪೊದೆದು ಯಥಾಸ್ಥಿತ ಪರ್ಯಾಣಕಮಪ್ಪಿಂದ್ರಾಯುಧಮನೇಱಿ ಮಹಾಶ್ವೇತಾಶ್ರಮಮಂ ಪೊಕ್ಕು ತುರಂಗಮದಿನವತರಿಸಿ ಪೆಱಗೆತೆಗೆದು ಬರ್ಪಿಂದ್ರಾಯುಧದ ಬಟ್ಟೆವಿಡಿದು ಮಹಾಶ್ವೇತಾವಲೋಕನಕುತೂಹಲದಿಂದೆ ಪರಿಜನಂ ಬರುತ್ತಮಿರೆ ಗುಹಾದ್ವಾರಮನೆಯ್ದೆವರ್ಪಲ್ಲಿ

ದೆಸೆಗಟ್ಟುದ್ಬಾಷ್ಪದಿಂದಂ ತರಳಿಕೆ ಪಿಡಿದೆಂತಾನುಮಾತ್ಮಾಂಗಮಂ ನೆ
ಮ್ಮಿಸೆ ಜೋಲ್ದಂತಾ ಗುಹಾದ್ವಾರದ ಶಿಲೆಯೊಳೆ ಮನ್ಯೂದ್ಗಮಕ್ಷೋಭದಿಂ ಕಂ
ಪಿಸುತಂ ಪ್ರಾವರ್ಷಧಾರಾವಳಿವೊಲೊಗೆಪ ಕಣ್ಣೀರ್ಗಳೊಳ್ ತೇಂಕುತಂ ದುಃ
ಖಸಹಸ್ರೋದ್ವೇಜನಾಧೋಮುಖಿಯೆನಿಪ ಮಹಾಶ್ವೇತೆಯಂ ಕಂಡನಾಗಳ್ ೨೧

ವ॥ ಅಂತು ಕಂಡು ಭೋಂಕೆನಲಾಶಂಕಿತಹೃದಯನಾಗಿ

ದೊಡ್ಡಮರ, ಪೊದರು, ಹಳ್ಳ, ಕೊಳ್ಳಗಳ ಸ್ಥಳಗಳಲ್ಲೆಲ್ಲಾ ತಿರುಗಾಡಿ ಸುತ್ತಲೂ ಸುತ್ತಿ ಅಲೆದಾಡಿದನು. ಆದರೂ ಅವನಿಗೆ ತನ್ನ ಗೆಳೆಯನ ಸುಳಿವು ಸಿಕ್ಕಲಿಲ್ಲ. ವ॥ ಹೀಗೆ ವೈಶಂಪಾಯನನನ್ನು ಎಲ್ಲೆಲ್ಲೂ ಹುಡುಕಿ ಕಾಣದೆ, ಆತನ ವೃತ್ತಾಂತವು ಮಹಾಶ್ವೇತೆಗೇನಾದರೂ ಗೊತ್ತಿರಬಹುದೆಂದು ಚಂದ್ರಾಪೀಡನು ಅವಳ ಆಶ್ರಮಕ್ಕೆ ಬಂದು ಸ್ವಲ್ಪ ದೂರದಲ್ಲಿ ಕುದುರೆಸೈನ್ಯವನ್ನು ಬೀಡುಬಿಡಿಸಿದನು. ಬಳಿಕ ತಾನು ಪೋಷಾಕನ್ನು ತೆಗೆದು, ಹಾವಿನ ಪರೆಯಂತೆ ತೆಳುವಾದ ಪಟ್ಟೆವಸ್ತ್ರಗಳನ್ನು ಧರಿಸಿ, ಹಿಂದಿನಂತೆ ಜೇನು ಹಾಕಿದ್ದ ಇಂದ್ರಾಯುಧವನ್ನು ಹತ್ತಿ ಮಹಾಶ್ವೇತಾಶ್ರಮವನ್ನು ಹೊಕ್ಕು, ಕುದುರೆಯಿಂದ ಕೆಳಗಿಳಿದು ಹಿಂದೆ ಹಿಡಿದುಕೊಂಡು ಬರುತ್ತಿದ್ದ ಇಂದ್ರಾಯುಧದ ದಾರಿಯನ್ನೇ ಹಿಡಿದು, ಮಹಾಶ್ವೇತೆಯನ್ನು ನೋಡಬೇಕೆಂಬ ಕುತೂಹಲದಿಂದ ಕೂಡಿರುವ ಪರಿಜನರು ಹಿಂಬಾಲಿಸಿ ಬರುತ್ತಿರಲಾಗಿ ಗುಹೆಯ ಬಾಗಿಲಿಗೆ ಬಂದನು. ಅಲ್ಲಿ! ೨೧. ಮಹಾಶ್ವೇತೆಯು ಗುಹೆಯ ಬಾಗಿಲಲ್ಲೆ ಒಂದು ಹಾಸರೆಕಲ್ಲಿನ ಮೇಲೆ ಕುಳಿತಿದ್ದಾಳೆ. ತರಳಿಕೆಯು ದಿಕ್ಕೆಟ್ಟು ಕಣ್ಣೀರು ಸುರಿಸುತ್ತಾ ಅವಳನ್ನು ಹಿಡಿದುಕೊಂಡು ತನ್ನ ದೇಹಕ್ಕೆ ಒರಗಿಸಿಕೊಂಡಿದ್ದಾಳೆ. ಮಹಾಶ್ವೇತೆಯು ಹಾಗೆಯೆ ಅವಳ ಶರೀರದ ಮೇಲೆ ಜೋಲು ಬಿದ್ದಿದ್ದಾಳೆ. ದುಃಖದ ಉದ್ವೇಗದಿಂದ ನಡುಗುತ್ತಿದ್ದಾಳೆ. ಧಾರಾಕಾರವಾಗಿ ಸುರಿಯುವ ಮಳೆಯಂತೆ ಹರಿಯುತ್ತಿರುವ ಕಣ್ಣೀರುಗಳಲ್ಲಿ ತೇಲುತ್ತಾ ಅಪಾರವಾದ ದುಃಖದಿಂದ ಕದಡಿದ ಮನಸ್ಸುಳ್ಳವಳಾಗಿ ತಲೆ ತಗ್ಗಿಸಿಕೊಂಡಿದ್ದಾಳೆ. ಇಂತಹ ಮಹಾಶ್ವೇತೆಯನ್ನು ಚಂದ್ರಾಪೀಡನು ಕಂಡನು. ವ॥ ಹಾಗೆ ನೋಡಿ ಶಂಕೆಯಿಂದ ಕೂಡಿದ ಮನಸ್ಸುಳ್ಳವನಾಗಿ

ಪಿರಿದುಂ ಹರ್ಷಮನೆನ್ನಯ
ಬರವಿಂದಂ ಮಾಡದೀ ಮಹಾಶ್ವೇತೆಯದೊಂ
ದಿರವಿಂತಿದೇನೊ ಕಾದಂ
ಬರಿಗೇನಾನೊಂದನಿಷ್ಟಮಾಗಲೆವೇಟ್ಕುಂ ೨೨

ವ॥ ಎಂದು ತನ್ನೊಳ್ ಬಗೆಯುತ್ತಮೊಯ್ಯನೊಯ್ಯನೆ ಪೋಗಿ ಶಿಲಾತಲದೊಳ್ ಕುಳ್ಳಿರ್ದು ಬಾಷ್ಪವಿಷಣ್ಣವದನನಾಗಿ ತರಳಿಕೆಯನಿದೇನೆಂದು ಬೆಸಗೊಳ್ವುದುಮಾಕೆ ಕುಮಾರಂ ಬಿಜಯಂಗೆಯ್ದನೆಂದು ಮಹಾಶ್ವೇತೆಗಱಿಪುವುದುಮಾ ಕಾಂತೆಯುಮುಪಸಂಹೃತ ಮನ್ಯು ವೇಗೆಯುಂ ಗದ್ಗದಿಕಾವಗೃಹ್ಯಮಾಣಕಂಠೆಯುಮಾಗಿ ಕುಮಾರನನಿಂತೆಂದಳ್

ನಿನಗೇವೇಟ್ದಪಳೀಕೆ ಕೇಳಿಸಿದೆನಾಂ ಮದ್ದುಃಖಮಂ ಮುನ್ನ ನಿ
ನ್ನನದುಃಖಶ್ರವಣಾರ್ಹನಂ ಸಕಲದುಃಖಾವಾಸೆಯೆಂ ಜೀವಿತ
ಕ್ಕೆ ನಿಬದ್ಧಾಸೆಯನತ್ರಪಾತ್ಮಿಕೆಯನೀಗಳ್ ಮತ್ತೆಯುಂ ಕೇಳಿಸ
ಲ್ಕನುಗೆಯ್ದಪ್ಪೆನಿದೊಂದು ದುಃಶ್ರವಮುಮಂ ರಾಜಾಧಿರಾಜಾತ್ಮಜಾ ೨೩

ವ॥ ಅದೆಂತೆನೆ ನೀಮುಜ್ಜಯಿನಿಗೆ ಬಿಜಯಂಗೆಯ್ದಿರೆಂಬುದನಾಂ ಕೇಯೂರಕನ ಪೇಟ್ಕೆಯಿಂದಱಿದು ಭೋಂಕನೆ ವಿದೀರ್ಣಹೃದಯೆಯಾಗಿ ಚಿತ್ರರಥಮನೋರಥಮುಂ ಮದಿರಾ ದೇವಿಯ ಮನೋಭಿಲಷಿತಮುಂ ಮದೀಯ ಸಮೀಹಿತಮುಂ ಕಾದಂಬರಿಯ ಮನಃಪ್ರಿಯಸಮಾ

೨೨. "ಈ ಮಹಾಶ್ವೇತೆಯು ನಾನು ಬಂದರೆ ಸಂತೋಷಪಡಬೇಕಾಗಿತ್ತು. ಅದನ್ನು ಬಿಟ್ಟು ಇವಳು ಈ ರೀತಿ ಇರಲು ಕಾರಣವೇನು ? ಕಾದಂಬರೀದೇವಿಗೆ ಏನೋ ಒಂದು ಅನಿಷ್ಟವುಂಟಾಗಿರಬೇಕು" ವ॥ ಎಂದು ತನ್ನಲ್ಲೇ ಆಲೋಚಿಸುತ್ತಾ ಮೆಲ್ಲಮೆಲ್ಲನೆ ಹೋಗಿ ಕಲ್ಲಿನಮೇಲೆ ಕುಳಿತುಕೊಂಡು, ಕಣ್ಣೀರಿನಿಂದ ಕಳೆಗುಂದಿದ ಮುಖವುಳ್ಳವನಾಗಿ ತರಳಿಕೆ ಯನ್ನು ಕುರಿತು ಇದೇನೆಂದು ಕೇಳಿದನು. ಅವಳು "ಯುವರಾಜನು ಬಂದಿದ್ದಾನೆ"ದು ಮಹಾಶ್ವೇತೆಗೆ ತಿಳಿಸಿದಳು. ಬಳಿಕ ಅವಳು ದುಃಖಾವೇಗವನ್ನು ತಡೆದುಕೊಂಡು ಗದ್ಗದ ಧ್ವನಿಯಿಂದ ಕೂಡಿದ ಕೊರಳುಳ್ಳವಳಾಗಿ ಯುವರಾಜನನ್ನು ಕುರಿತು ಹೀಗೆ ಹೇಳಿದಳು.
೨೩. "ಎಲೈ ಚಕ್ರವರ್ತಿಕುಮಾರನೆ, ನಿನಗೆ ಈಗ ನಾನು ಏನು ಹೇಳಲಿ ? ಸಮಸ್ತ ದುಃಖಗಳಿಗೂ ವಾಸಸ್ಥಾನಳಾದ, ಪ್ರಾಣದ ಮೇಲೆ ಅತ್ಯಾಶೆಯಿಂದ ಕೂಡಿಕೊಂಡಿರುವ, ನಾಚಿಕೆಯಿಲ್ಲದ ನಾನು ದುಃಖವೃತ್ತಾಂತಗಳನ್ನು ಕೇಳಲು ಅರ್ಹನಲ್ಲದ ನಿನಗೆ ಹಿಂದೊಮ್ಮೆ ನನ್ನ ದುಃಖವನ್ನು ಹೇಳಿದ್ದೆ. ಮತ್ತೆ ಈಗ ದುಃಖಕರವಾದ ಮತ್ತೊಂದು ವೃತ್ತಾಂತವನ್ನು ತಿಳಿಸಲು ಹೊರಟಿದ್ದೇನೆ. ವ॥ ಅದೇನೆಂದರೆ, ನೀವು ಉಜ್ಜಯಿನಿಗೆ ಪ್ರಯಾಣ ಮಾಡಿದುದನ್ನು ನಾನು ಕೇಯೂರಕನ ಮಾತಿನಿಂದ ತಿಳಿದುಕೊಂಡು ತಟ್ಟನೆ ಎದೆಯೊಡೆದವಳಂತಾಗಿ 'ಅಯ್ಯೋ, ಚಿತ್ರರಥನ ಮನೋರಥವೂ ನೆರವೇರಲಿಲ್ಲ, ಮದಿರಾದೇವಿಯ ಆಸೆಯೂ ಈಡೇರಲಿಲ್ಲ, ನನ್ನ ಇಷ್ಟವೂ ಕೈಗೂಡಲಿಲ್ಲ, ಕಾದಂಬರಿಗೆ

ಗಮನನಿರ್ವೃತಿಯುಂ ಸಮನಿಸಿತಿಲ್ಲೆಂದು ಮನಂ ನೊಂದು ವೈರಾಗ್ಯದಿಂ ಮದೀಯಪ್ರಿಯಸಖಿಯ ಕೂರ್ಮೆಯ ತೊಡರ್ಪಂ ಪಱಿದು ಮಹಾಘೋರತರ ತಪಶ್ಚರಣಾರ್ಥಂ ಮತ್ತಮಿಲ್ಲಿಗೆವಂದಿರ್ದ ನನ್ನಗವೊಂದು ದಿವಸಂ

ನಸುದೋಱುತ್ತಿರ್ದ ನುಣ್ಮೀಸೆಗಳುಮತಿಮೃದುಸ್ನಿಗ್ಧಕೇಶಂಗಳುಂ ಕ
ಣ್ಗೆಸೆಯಲ್ ಮೂಲೋಕಮಂ ಯವ್ವನಚತುರತರಾಪಾಂಗದಿಂದೊಂದು ಸೀರ್ಪು
ಲ್ಗೆಸೆವನ್ನಂ ಮಾಡುತಂಗಪ್ರಭೆಯೊಳಖಿಲ ಕಾಂತಾರಮಂ ಕೂಡೆ ತೇಂಕಾ
ಡಿಸುತಂ ವಿಪ್ರೋತ್ತಮಂ ನಿನ್ನಯ ಹರಯದವಂ ಬಂದನೊರ್ವಂ ಕುಮಾರಂ ೨೪

ವ॥ ಅಂತು ಬಂದಂತಃಕರಣದಿನುನ್ಮುಕ್ತನಾದಂತೆಯುಂ ಸಕಲೇಂದ್ರಿಯಂಗಳಿಂ ವಿಕಲನಾದಂತೆಯುಂ ಉತ್ತರಳಮುಖನುಂ ಉತ್ಫುಲ್ಲಿತಾಕ್ಷನುಮೆನಿಸಿ ಬನದೊಳಲ್ಲಿಗಲ್ಲಿಗೆ ಬದ್ಧಲಕ್ಷ್ಯದೃಷ್ಟಿಯಿನೇನಾನುಂ ಕಟ್ಟುದನಱಸುವಂತೆನ್ನ ನೋಡುತ್ತಮಯ್ದೆವಂದು ಕಂಡಱಿವನಂತೆಯುಂ ಮೇಣಾನುಮಂ ಪ್ರಾರ್ಥಿಪನಂತೆಯುಂ ಬೆಸಗೊಳ್ಳದೆಯುಂ ನಿಜಾವಸ್ಥೆಯಂ ನಿವೇದಿಸುವಂತೆಯುಂ ಲಜ್ಜಿಸುವಂತೆಯುಮುಮ್ಮಳಿಸುವಂತೆಯುಮಾಗಿ

ಸುರಿತರೆ ಬಾಷ್ಪಪೂರಮಮೆಯಿಕ್ಕದೆ ಕೆನ್ನೆಯನೆಯ್ದೆ ನೀಳ್ದು ಬಿ
ಷ್ಪುರಿಪ ಬಟಲ್ವೆಳರ್ದ್ವೆರಸು ಸುತ್ತುವ ಮುತ್ತುವಪಾಂಗಮಾಲೆಯಿಂ
ಬರೆತೆಗೆದಪ್ಪನಪ್ಪಿದಪನೆನ್ನೊಳಪೊಕ್ಕಪನೆಯ್ದೆ ಪೀರ್ದಪಂ
ಪಿರಿದುಮೆನಲ್ಕೆ ತದ್ವಿಜಕುಮಾರಕನೆನ್ನನೊಱಲ್ದು ನೋಡಿದಂ ೨೫

ಪ್ರಾಣೇಶ್ವರನ ಸಮಾಗಮಸುಖವೂ ಉಂಟಾಗಲಿಲ್ಲ'ವೆಂದು ಮನನೊಂದು, ವಿರಕ್ತಿಯಿಂದ ಪ್ರಿಯಸಖಿಯಾದ ಕಾದಂಬರಿಯ ಸ್ನೇಹದ ತೊಡಕನ್ನು ಹರಿದು ಮಹಾಕಠೋರವಾದ ತಪಸ್ಸನ್ನು ಮಾಡುವುದಕ್ಕಾಗಿ ಇಲ್ಲಿಗೆ ಬಂದುಬಿಟ್ಟೆನು. ಅಷ್ಟರಲ್ಲಿ ಒಂದು ದಿನ ೨೪. ಸ್ವಲ್ಪಮಾತ್ರ ಕಾಣುತ್ತಿದ್ದ ನುಣುಪಾದ ಮೀಸೆಯೂ, ಬಹಳ ಮೃದುವಾದ ಹಾಗೂ ಮನೋಹರವಾದ ಕೂದಲುಗಳೂ ಶೋಭಿಸುತ್ತಿರಲು, ಯೌವನದಿಂದ ಬಹಳ ಆಕರ್ಷಕವಾದ ಕುಡಿನೋಟದಿಂದ ಮೂರು ಲೋಕವನ್ನೂ ಹುಲ್ಲುಕಡ್ಡಿಗೆ ಸಮಾನವಾದುದೆಂಬಂತೆ ಮಾಡುತ್ತ ನಿನ್ನ ಸಮಾನ ವಯಸ್ಸಿನ ಬ್ರಾಹ್ಮಣತರುಣನು ಇಲ್ಲಿಗೆ ಬಂದನು. ವ॥ ಹಾಗೆ ಬಂದು ಬುದ್ಧಿಹೀನನಾದಂತೆಯೂ, ಸರ್ವೇಂದ್ರಿಯರಹಿತನಾದಂತೆಯೂ, ಅತ್ತ ಇತ್ತ ಚಲಿಸುತ್ತಿರುವ ಮುಖವುಳ್ಳವನಾಗಿಯೂ, ಅರಳಿದ ಕಣ್ಣುಳ್ಳವನಾಗಿಯೂ, ಕಾಡಿನಲ್ಲಿ ಅಲ್ಲಲ್ಲಿ ನೆಟ್ಟ ಕಣ್ಣುಗಳಿಂದ ಕಳೆದುಕೊಂಡ ಏನನ್ನೋ ಹುಡುಕುವಂತೆಯೂ, ನನ್ನನ್ನು ನೋಡಿ ಹತ್ತಿರಕ್ಕೆ ಬಂದು ಪರಿಚಯವುಳ್ಳವನಂತೆಯೂ, ಏನನ್ನೋ ಬೇಡಿಕೊಳ್ಳುವವನಂತೆಯೂ, ನಾನು ಕೇಳದಿದ್ದರೂ ತನ್ನ ಅವಸ್ಥೆಯನ್ನು ಅರಿಕೆ ಮಾಡುವವನಂತೆಯೂ, ನಾಚುವವನಂತೆಯೂ ತಳಮಳಗೊಳ್ಳುವವನಂತೆಯೂ ಆದನು. ೨೫. ಕಣ್ಣೀರಿನ ಪ್ರವಾಹವು ಕೆನ್ನೆಯ ಮೇಲೆ ಸುರಿಯುತ್ತಿರಲು, ದೀರ್ಘವಾಗಿ ಪರಡುತ್ತಿರುವ ಮತ್ತು ಬಳಲಿಕೆ ಭಯಗಳನ್ನು ಸೂಚಿಸುವ, ತಿರುಗುವ ಮತ್ತು ಮುತ್ತುವ

ವ॥ ಅಂತು ನೀಡುಂ ನೋಡುತ್ತುಮೆನ್ನನೀತೆಂದಂ

ಭುವನದೊಳೆಲ್ಲಂ ತಂತ
ಮ್ಮ ವಯೋರೂಪಕ್ಕೆ ತಕ್ಕುದಂ ನೆಗೞ್ದೊಡೆ ಮೆ
ಚ್ಚುವರೆಳವೆಗಮುಸದೃಶಮೆನಿ
ಸುವನುಷ್ಠಾನದೊಳಿದೇಕೆ ನಿನ್ನಯ ಯತ್ನಂ ೨೬

ಇರಿಸಲ್ಕೆ ತಕ್ಕುದೊಲವಿಂ
ದುರದೊಳೆನಿಪ್ಪೊಂದು ಮಾಲತೀಮಾಲಿಕೆಯೊಳ್
ದೊರೆಯೆನಿಪ ನಿನ್ನ ತನುವಂ
ಕೊರಗಿಪುದೆ ಲತಾಂಗಿ ಘೋರತರ ತಪದಿಂದಂ ೨೭

ಸುಮನೋಬಾಣಜಯಪ್ರದಾಯಕತಮಂ ನಿನ್ನೀ ತ್ರಿಲೋಕಾಭಿರಾ
ಮಮೆನಿಪ್ಪಾಕೃತಿ ದೇವದುರ್ಲಭತರಂ ನಿನ್ನೀ ಜಗದ್ವಂದನೀ
ಯಮೆನಿಪ್ಪದ್ವಯಮಪ್ರತರ್ಕ್ಯಮಹಿಮಂ ನಿನ್ನೀ ಮಹೋದಾರಮ
ಪ್ರಮಿತೈಶ್ವರ್ಯಮೆನಲ್ಕೆ ಮತ್ತೆ ತಪದಿಂ ತನ್ವಂಗಿ ನೀಂವೇಡ್ಪುದೇಂ ೨೮

ಕುಡಿನೋಟಗಳಿಂದ ನನ್ನನ್ನು ಹತ್ತಿರಕ್ಕೆ ಎಳೆದುಕೊಳ್ಳುವವನಂತೆಯೂ, ತಬ್ಬಿಕೊಳ್ಳುವವನಂತೆಯೂ, ನನ್ನ ಒಳಗೆ ಸೇರಿಕೊಂಡುಬಿಡುವವನಂತೆಯೂ, ಸಂಪೂರ್ಣವಾಗಿ ಕುಡಿದುಬಿಡುವವನಂತೆಯೂ ಆ ಬ್ರಾಹ್ಮಣಕುಮಾರನು ನನ್ನನ್ನು ಎವೆಯಿಕ್ಕದೆ ಪ್ರೀತಿಯಿಂದ ನೋಡಿದನು ! ವ॥ ಹಾಗೆ ಬಹಳ ಹೊತ್ತು ನೋಡುತ್ತಾ ನನ್ನನ್ನು ಕುರಿತು ಹೀಗೆಂದನು. ೨೬. "ಈ ಪ್ರಪಂಚದಲ್ಲಿ ಎಲ್ಲರೂ ತಮ್ಮ ವಯಸ್ಸಿಗೂ ರೂಪಕ್ಕೂ ಯೋಗ್ಯವಾದುದನ್ನು ಮಾಡಿದರೆ ಜನರು ಮೆಚ್ಚುತ್ತಾರೆ, ಈ ನಿನ್ನ ಚಿಕ್ಕವಯಸ್ಸಿಗೆ ಯೋಗ್ಯವಲ್ಲದ ತಪಶ್ಚರಣೆಯಲ್ಲಿ ಏತಕ್ಕೆ ನೀನು ತೊಡಗಿರುವೆ ? ೨೭. ಎಲೌ, ಬಳ್ಳಿಯಂತೆ ದೇಹವುಳ್ಳವಳೆ, ವಕ್ಷಸ್ಥಳದಲ್ಲಿ ಧರಿಸಲು ಅರ್ಹವಾದ ಮಾಲತೀಕುಸುಮಮಾಲಿಕೆಗೆ ಸಮಾನವಾದ ನಿನ್ನ ಶರೀರವನ್ನು ಕಠೋರವಾದ, ತಪಸ್ಸಿನಿಂದ ಕೊರಗಿಸಬಹುದೆ ? ೨೮. ಎಲೌ, ತೆಳುವಾದ ಶರೀರವುಳ್ಳವಳೆ, ಮನ್ಮಥನ ಬಾಣಗಳಿಗೆ ಜಯಗಳಿಸಿಕೊಡುವುದರಲ್ಲಿ ನೆರವಾಗುವಂತಹ ಮತ್ತು ಮೂರು ಲೋಕಗಳಲ್ಲೆಲ್ಲಾ ಅತ್ಯಂತ ರಮಣೀಯವಾದ ನಿನ್ನ ಈ ಆಕಾರವೂ, ಜಗತ್ತಿಗೆ ಪೂಜಾರ್ಹವಾದ ಅಸದೃಶವಾದ ಊಹಿಸಲಸಾಧ್ಯವಾದ ನಿನ್ನ ಪ್ರಭಾವವೂ, ಬಹಳ ಸಮೃದ್ಧಿಯಾದ, ಅಳತೆಗೆ ನಿಲುಕದ ನಿನ್ನ ಸಂಪತ್ತೂ ದೇವತೆಗಳಿಗೂ ದುರ್ಲಭವೆನಿಸಿದೆ. ಹೀಗಿರಲು ತಪಸ್ಸಿನಿಂದ ನೀನು ಬೇಡುವುದೇನಿದೆ ?

ಸರಸ ಮೃಣಾಳಿಕೆಯುಂ ಮೃದು
ತರ ತುಹಿನಂ ಕೊರಗಿಪಂತೆ ಶಾಂತಿರಸಕ್ಕಾ
ಗರವೆನಿಪ ತಪವೆ ನಿನ್ನಂ
ಕೊರಗಿಸುತಿರೆ ತರುಣಿ ಪಿರಿದುವಾಂ ಕೊರಗಿದಪೆಂ ೨೯

ಸುಂದರಿ ಜೀವಲೋಕದ ಸುಖಕ್ಕೆ ಪರಾಙ್ಮುಖಿಯರ್ಕಳಾಗಿ ನಿ
ನ್ನೊಂದಿಗರೀ ತಪಕ್ಕೆಳಸಿದಂದು ಮನೋಜನ ಬಿಲ್ಲಬಲ್ಮೆ ಪೂ
ರ್ಣೇಂದುವಿನುಜ್ವಳಿಕ್ಕೆ ಮಧುಮಾಸದ ಗೋಸನೆ ತುಂಬಿಯಿಂಚರಂ
ಬಂದೆಳಮಾವಿನೇಟಿಗ್ಗ ಬಗೆದಂದು ನಿರರ್ಥಕಮಾಗದಿರ್ಕುಮೇ ೩೦

ವ॥ ಎಂದಿವು ಮೊದಲಾಗಿ ಮತ್ತಮನೇಕ ಚಾಟುಚಪಲವಚನಂಗಳಂ ನುಡಿಯುತ್ತಮಿರೆ ಕೇಳ್ದು ಪುಂಡರೀಕದೇವನ ವೃತ್ತಾಂತದಿನಪೇತಕೌತುಕೆಯುಮುಪಗತಸುಖೆಯುಮವಧೀರಿತೋಪಭೋಗೆಯುಮಸಂಭೂತ ಪುರುಷಾನುರಾಗಿಯುಮಾಗಿರ್ಪೆನದುಕಾರಣದಿಂ

ನೀನಾರ್ಗೆ ಬಂದೆಯೆತ್ತಣಿ
ನೇನಂ ಬೆಸಗೊಳ್ವೆಯೆನ್ನನೆಂದಾತನನಂ
ತೇನುಮನಾಂ ಬೆಸಗೊಳ್ಳದೆ
ಮೌನದಿನೊರ್ದೆಸೆಗೆ ತೊಲಗಿದೆಂ ನೃಪತಿಲಕಾ ೩೧

೨೯. ಕೋಮಲವಾದ ತಾವರೆದಂಟನ್ನು ಮೃದುವಾದ ಮಂಜು ಬಾಡಿಸುವಂತೆ ಶಾಂತರಸಕ್ಕೆ ಮನೆಯಂತಿರುವ ತಪಸ್ಸೇ ನಿನ್ನನ್ನು ಸೊರಗುವಂತೆ ಮಾಡುತ್ತಿರುವುದರಿಂದ ನನಗೆ ಬಹಳವಾಗಿ ವ್ಯಥೆಯುಂಟಾಗಿದೆ ! ೩೦. ಸುಂದರಿ, ನಿನ್ನಂತಹವರು ಜೀವಲೋಕದ ಸುಖಕ್ಕೆ ವಿಮುಖರಾಗಿ ತಪಸ್ಸು ಮಾಡಲು ಹೊರಟುಬಿಟ್ಟರೆ ಮನ್ಮಥನ ಬಿಲ್ಲಿನ ಸಾಮರ್ಥ್ಯವೂ, ಪೂರ್ಣಚಂದ್ರನ ಹೊಳಪೂ, ವಸಂತಮಾಸದ ಆಡಂಬರವೂ, ದುಂಬಿಗಳ ಮೃದುಧ್ವನಿಯೂ, ಎಳೆಮಾವಿನಮರದ ಅಭಿವೃದ್ಧಿಯೂ ನಿಜವಾಗಿಯೂ ವ್ಯರ್ಥವಾಗದೆ ಇರುತ್ತದೆಯೆ ?" ವ॥ ಇವೇ ಮೊದಲಾದ ಅನೇಕ ಬಗೆಯ ಪ್ರಿಯವಚನಗಳನ್ನು ಹೇಳತೊಡಗಿದನು. ನಾನು ಕೇಳಿಸಿಕೊಂಡರೂ ಪುಂಡರೀಕನ ವೃತ್ತಾಂತದಿಂದ ಇಂತಹುದರಲ್ಲಿ ನನಗೆ ಆಸಕ್ತಿ ತಪ್ಪಿಹೋಗಿತ್ತು. ಸುಖವೇ ಬೇಕಿರಲಿಲ್ಲ, ಕಾಮಸುಖಾಭಿಲಾಷೆಯನ್ನಂತೂ ಬಿಟ್ಟೇ ಆಗಿತ್ತು. ಪುರುಷರಲ್ಲಿ ನನಗೆ ಪ್ರೀತಿಯೇ ಉಂಟಾಗುತ್ತಿರಲಿಲ್ಲ. ಆ ಕಾರಣದಿಂದ ೩೧. ಎಲೈ ರಾಜಶ್ರೇಷ್ಠನೆ ಕೇಳು, ಆಗ ನಾನು ಅವನನ್ನು "ನೀನು ಯಾರ ಮಗ ? ಎಲ್ಲಿಂದ ಬಂದೆ ? ನನ್ನನ್ನು ಏನು ಕೇಳುತ್ತಿರುವೆ ? ಎಂಬುದಾಗಿ ಏನನ್ನೂ ಕೇಳದೆ, ಮಾತನ್ನೇ ಆಡದೆ ಬೇರೆ ಕಡೆಗೆ ಹೊರಟುಹೋದೆನು.

ತರಳಿಕೆ ದೇವತಾರ್ಚನಕೆ ಪೂದಿಱಿಯುತ್ತಿರಲಾಗಳೀಕೆಯಂ
ಕರೆದೆನಗೀ ದ್ವಿಜಂ ನುಡಿವನೊಂದುವಗೆಯ್ತ್ತುವ ಕಾನನಕ್ಕಿವಂ
ದಿರವಿದು ಬೇಱಿದೊಂದೆನಿಸದಿರ್ದಪುದೀ ಗುಹೆಯತ್ತ ಸಾರದಂ
ತಿರಲಿವನಂ ನಿವಾರಿಸುಟಿದಂದೆನಸುಂ ಬಟಿಸಂದು ಪೊರ್ದುಗುಂ ೩೨

ವ॥ ಎಂದು ಪೇೞ್ವುದುಮವಳೆನ್ನತ್ತಲಾ ದ್ವಿಜಕುಮಾರನಂ ಸಾರದಂತು ನಿವಾರಿಸುತ್ತ ಮಿರೆಯಿರೆ

ಅದಯನೆನಿಪ್ಪ ಮನ್ಮಥನ ದುರ್ಜಯವೃತ್ತಿಯಿದೋದು ಪಾ
ಪದ ಫಲದಿಂ ವಿಧಾತೃವಶದಿಂ ಭವಿತವ್ಯತೆಯಿಂದಮಿಂತು ಮಾ
ಣದೆ ದಿವಸಕ್ಕಮಿಲ್ಲಿಗಸದಾಗ್ರಹದಿಂದಮೆ ಬಂದು ಪೊರ್ದಲ
ಣ್ಮದೆ ಮದನಾತುರಂ ಸುಟಿವನೆನ್ನಯ ಕಣ್ಪೊಲದೊಳ್ ನಿರಂತರಂ ೩೩

ವ॥ ಅಂತು ಸುಟಿಯುತ್ತಮಿರಲೊರ್ಮೆ ಯಾಮಿನೀಯಾಮತ್ರಯಸಮಯದೊಳುತ್ಸಾರಿತ ತಮಃಪಟಳಮುಮುದ್ದೀಪಿತ ಮದನದಹನಮುಮುತ್ತೇಜಿತ ಮನೋಜಮಾರ್ಗಣಮುದ್ದಳಿತ ವಿರಹಿಹೃದಯಮುಮುತ್ಖಂಡಿತ ಮಾನಿನೀಮಾನಮುಮುದ್ಬಾಷ್ಪೀಕೃತ ವಿರಹಿಜನಮುಮೆನಿಸಿ ಚಂದ್ರಿಕಾಪಯಃಪೂರಮನಿಂದುಮಯೂಖಂಗಳ್ ಸುರಿಯೆ ತರಳಿಕೆ ಮಱಿದು ನಿದ್ರೆಗೆಯ್ದಲೆನಗೆ ನಿದ್ರೆಬಾರದೆ ಸಂತಪ್ತಶರೀರೆಯಾಗಿ ಗುಹೆಯಂ ಪೊಱಮಟ್ಟೆನನ್ನೆಗಂ

೩೨. ಆಗ ತರಳಿಕೆಯು ದೇವರಪೂಜೆಗೆ ಹೂಕೊಯ್ಯುತ್ತಿದ್ದಳು. ನಾನು ಅವಳನ್ನು ಕರೆದು "ತರಳಿಕೆ, ಈ ಬ್ರಾಹ್ಮಣನು ನನ್ನ ಬಳಿಗೆ ಬರುವ ಕಾರ್ಯವನ್ನು ಪ್ರಸ್ತಾಪಿಸುತ್ತಿದ್ದಾನೆ. ಇವನು ಈ ಕಾಡಿಗೆ ಬಂದ ರೀತಿಯನ್ನು ನೋಡಿದರೆ, ಏನೋ ಬೇರೆ ರೀತಿಯ ಅಭಿಪ್ರಾಯ ಕಂಡುಬರುತ್ತದೆ. ಈ ಗುಹೆಯ ಹತ್ತಿರಕ್ಕೆ ಇವನು ಬಾರದಂತೆ ಮಾಡು. ಇಲ್ಲದಿದ್ದರೆ ನನ್ನ ಹತ್ತಿರಕ್ಕೆ ಮತ್ತೆ ಬಂದು ಮಾತನಾಡಿಸುತ್ತಾನೆ." ವ॥ ಎಂದು ಹೇಳಿದೆನು. ಅವಳು ಆ ಬ್ರಾಹ್ಮಣಕುಮಾರನನ್ನು ನನ್ನ ಕಡೆಗೆ ಬರದಂತೆ ತಡೆಯುತ್ತಿದ್ದಳು. ೩೩. ನಿಷ್ಕರುಣೆಯಾದ ಹಾಗೂ ತಡೆಯಲಸಾಧ್ಯವಾದ ವರ್ತನೆಯುಳ್ಳ ಮನ್ಮಥನ ದುಷ್ಟಕಾರ್ಯದಿಂದಲೂ, ವಿಧಿವಿಲಾಸದಿಂದಲೂ, ಹಾಗೆಯೇ ಆಗಬೇಕೆಂಬ ದೈವೇಚ್ಛೆಯಿಂದಲೂ ಅವನು ಕೆಟ್ಟ ಅಭಿನಿವೇಶದಿಂದಲೆ ಬಿಡದೆ ಪ್ರತಿದಿನವೂ ಬಂದು ಬಂದು, ನನ್ನ ಹತ್ತಿರಕ್ಕೆ ಮಾತ್ರ ಬರಲು ಅವಕಾಶವಿಲ್ಲದೆ, ಕಾಮಾತುರನಾಗಿ ನನ್ನ ದೃಷ್ಟಿಮಾರ್ಗದಲ್ಲೇ ಯಾವಾಗಲೂ ಸುಳಿದಾಡುತ್ತಿದ್ದನು. ವ॥ ಹಾಗೆ ಸುಳಿದಾಡುತ್ತಿರಲು ಒಂದುಸಲ ರಾತ್ರಿಯ ಮೂರನೆಯ ಜಾವದಲ್ಲಿ ಕತ್ತಲೆಯ ಸಮೂಹವನ್ನು ಓಡಿಸುವ, ಕಾಮಾಗ್ನಿಯನ್ನು ಉರಿಸುವ, ಮದನಬಾಣಗಳನ್ನು ಚೂಪುಮಾಡುವ, ವಿರಹಿಗಳ ಹೃದಯವನ್ನು ಭೇದಿಸುವ, ಮಾನಿನಿಯರ ಪ್ರಣಯಕೋಪದ ಹಟವನ್ನು ಹಾಳುಮಾಡುವ, ವಿರಹಿಗಳನ್ನು ಬಹಳವಾಗಿ ಕಣ್ಣೀರುಬಿಡಿಸುವ, ಬೆಳದಿಂಗಳೆಂಬ ನೀರಿನ ಪ್ರವಾಹವನ್ನು ಚಂದ್ರಕಿರಣ

ಅಲರ್ದಚ್ಛೋದನವೋತ್ಪಲಪ್ರಸರ ದಿವ್ಯಾಮೋದದೊಳ್ ಸಂದು ನಿ
ರ್ಮಲ ಚಂದ್ರದ್ಯುತಿವರ್ಷಹರ್ಷಿತ ಚಕೋರಾನಂದವಾರ್ಬಿಂದು ಸಂ
ಕುಲದೊಳ್ ಮಿಂದು ಚಲಲ್ಲತಾವಳಿಗೆ ಲಾಸ್ಯಾರಂಭಮಂ ತಂದು ತ
ಣ್ಣೆಲರೂದುತ್ತಿರಲಾನದರ್ಕೆಳಸಿ ಪಟ್ಟಿರ್ದೆಂ ಶಿಲಾಪಟ್ಟದೊಳ್ ೩೪

ವ॥ ಅಂತಿರ್ದ ಸುಧಾದ್ರ್ರಂಗಳಪ್ಪ ಕರಕೂರ್ಚಂಗಳಿಂ ದಿಗ್ಭಿತ್ತಿಗಳಂ ಧವಳಿಸುತ್ತಿರ್ದ ಸುಧಾಮಯೂಖನಂ ನೀಡುಂ ನೋಡಿ

ಅಮೃತಾಸಾರದಿನಾವಗಂ ತ್ರಿಭುವನಕ್ಕಾನಂದಮಂ ಮಾಳ್ಪ ತ
ನ್ನ ಮರೀಚಿಪ್ರಕರಂಗಳಿಂದವೆನಗೆಂತಾನಂದಮಂ ಮಾಳ್ಪನಂ
ತೆ ಮನಂಗೊಂಡು ಮದೀಯವಲ್ಲಭನೆನಿಪ್ಪಾ ಪುಂಡರೀಕಂಗವಾ
ತ್ಮಮರೀಚಿವ್ರಜದಿಂದೆ ಮಾಡುಗುಮೆ ಪೇಟಾನಂದಮಂ ಚಂದ್ರಮಂ ೩೫

ಮಿಸುಗುವ ಚಂದ್ರಮಂಡಲದಿನಂದಿಟಿತಂದನ ದಿವ್ಯವಾಣಿಯುಂ
ಪುಸಿಯೆನಿಸಿತ್ತು ಮಾಯ್ದೆನಗೆ ಪಾಪಿಗೆ ಮೇಣ್ ದಯೆಯಿಂದೆ ಜೀವಿತ
ವ್ಯಸನಿಯನಂತೆ ಜೀವಿಸುತಮಿರ್ಕೆವಳೆಂದು ಮಹಾತ್ಮನೆನ್ನನಾ
ಱಿಸಿದನದೆಂತುಮೆನ್ನಯ ಸಮೀಹಿತಮಿಂತು ವಿಳಂಬಿಸಿರ್ಕುಮೇ ೩೬

ಗಳು ಸುರಿಸುತ್ತಿರಲಾಗಿ ತರಳಿಕೆಯು ಮೈಮರೆತು ನಿದ್ರಿಸುತ್ತಿದ್ದಳು, ನನಗೆ ನಿದ್ರೆ ಬರಲಿಲ್ಲ, ಮೈಯೆಲ್ಲ ಉರಿಯುತ್ತಿತ್ತು. ಗುಹೆಯಿಂದ ಹೊರಕ್ಕೆ ಬಂದೆನು. ಆಗ ೩೪. ಅಚ್ಛೋದಸರೋವರದ ಅರಳಿರುವ ಹೊಸ ಕನ್ನೈದಿಲೆಯ ದಿವ್ಯವಾದ ಸುವಾಸನೆಯೊಂದಿಗೆ ಸೇರಿಕೊಂಡು, ನಿರ್ಮಲವಾದ ಬೆಳದಿಂಗಳಿನ ಪ್ರಸಾರದಿಂದ ಸಂತೋಷಗೊಂಡ ಚಕೋರಪಕ್ಷಿಗಳ ಆನಂದಬಾಷ್ಪದ ಹನಿಗಳ ಸಮೂಹದಲ್ಲಿ ಸ್ನಾನ ಮಾಡಿ, ಅಲ್ಲಾಡುತ್ತಿರುವ ಬಳ್ಳಿಗಳಿಗೆ ಮೃದುವಾದ ನೃತ್ಯವನ್ನು ಉಪದೇಶಿಸಿ ತಂಗಾಳಿಯು ಬೀಸುತ್ತಿತ್ತು. ಆಗ ನಾನು ಅದಕ್ಕೆ ಇಷ್ಟಪಟ್ಟು ಹಾಸುಗಲ್ಲಿನ ಮೇಲೆ ಮಲಗಿದ್ದೆನು. ವ॥ ಹಾಗಿದ್ದ ಅಮೃತವೆಂಬ ಸುಣ್ಣದಿಂದ ನೆನೆಸಲ್ಪಟ್ಟ, ಕಿರಣಗಳೆಂಬ ಕುಂಚಗಳಿಂದ ದಿಕ್ಕೆಂಬ ಗೋಡೆಯನ್ನು ಬೆಳ್ಳಗೆ ಮಾಡುತ್ತಿದ್ದ ಚಂದ್ರನನ್ನು ಬಹಳಹೊತ್ತು ನೋಡುತ್ತಿದ್ದೆನು. ಆಗ ೩೫. "ಈ ಚಂದ್ರನು ಅಮೃತದಮಳೆಯಿಂದ ಮೂರು ಲೋಕಕ್ಕೂ ಆನಂದವನ್ನುಂಟುಮಾಡುವ ತನ್ನ ಕಿರಣಗಳಿಂದ ನನಗೆ ಈಗ ಆನಂದವನ್ನುಂಟುಮಾಡುತ್ತಿದ್ದಾನೆ. ಹಾಗೆಯೆ ಕೃಪೆಯಿಟ್ಟು ನನ್ನ ಪ್ರಾಣಕಾಂತನಾದ ಪುಂಡರೀಕನಿಗೂ ತನ್ನ ಕಿರಣಪರಂಪರೆಯಿಂದ ಆನಂದವನ್ನುಂಟುಮಾಡುತ್ತಾನೆಯೆ ? ೩೬. ಪಾಪಿಷ್ಠಳಾದ ನನಗೆ ಪ್ರಕಾಶಮಾನವಾದ ಚಂದ್ರಮಂಡಲದಿಂದ ಇಳಿದುಬಂದ ಮಹಾಪುರುಷನ ದಿವ್ಯವಾಣಿಯೂ ಸುಳ್ಳಾಗಿ ಹೋಯಿತಲ್ಲ ! ಅಥವಾ ಬದುಕಬೇಕೆಂಬ ಆಶೆಯನ್ನಿಟ್ಟುಕೊಂಡಿರುವ ಜೀವಗಳ್ಳಿಯಾದ ಇವಳು ಹೇಗಾದರೂ ಬದುಕಿರಲಿ !" ಎಂದು ಮಹಾತ್ಮನಾದ ಅವನು ಕರುಣೆಯಿಂದ ನನ್ನನ್ನು ಸಮಾಧಾನಪಡಿಸಿರಬೇಕು ! ಹಾಗಿಲ್ಲ

ತನುವನದೊರ್ವೆಯುಂ ಮಗುಟ್ದು ತೋಱಿಸಲಾಱನೆ ಪುಂಡರೀಕದೇ
ವನನಿರದೆತ್ತಿಕೊಂಡು ಗಗನಕ್ಕೆ ಪರಾಸುವನಾ ವನಕ್ಕೆ ಭೋಂ
ಕನೆ ಪಿಡಿದೊಯ್ದನೇವನೊ ಮನಃಪ್ರಿಯನಕ್ಕಟ ಜೀವಿಸುತ್ತಮುಂ
ತೆನಗೆ ಕೃಪಾಬ್ಧಿ ತಾರನೆ ಕಪಿಂಜಲಕಂ ಪ್ರಿಯನೊಂದು ವಾರ್ತೆಯುಂ ೩೭

ವ॥ ಎಂದಿವು ಮೊದಲಾಗಿ ಪಲವುಮಾಲಜಾಲಂಗಳಂ ದುರ್ಜೀವಿಕಾಗ್ರಹೀತೆಯನೆ ನ್ನೊಳ್ ಚಿಂತಿಸುತ್ತಮಿರ್ಪನ್ನೆಗಮಾ ದ್ವಿಜಕುಮಾರನೆಡೆವಿಡದೆ ನಟ್ಟುಡಿದ ನನೆಯಂಬಿನ ಮೊನೆಗ ಳಂತೆ ನೆಗೆದ ಕಂಟಕನಿಕಾಯಮುಂ ಮದನದಹನನಿಂ ಭಸ್ಮಮಾದಂತೆ ಬೆಳರ್ಪನಪ್ಪಕೆಯ್ದ ಮೆಯ್ಯುಮಪ್ರತಿಹತಶಾಸನನಪ್ಪ ಪುಷ್ಪಶರಾಸನನಿನವಶ್ಯಮರಣದೊಳ್ ವಧ್ಯಶಿಲಾತಲಕಟ್ಟಲೆಂದು ಕಟ್ಟಿದ ಕಟ್ಟುಗಳಂತೆ ತೊಟ್ಟ ಮೃಣಾಳವಲಯಮುಂ ಸುತ್ತಿಯಿನ್ನೆತ್ತವೋಪೆಯೆಂದು ತರ್ಜಿಸಿದ ನಿಶಾಕರನ ಕರಶಾಖೆಯಂತೆ ಕಿವಿಗವತಂಸಮಾದ ಕೇದಗೆಯೊಳ್ಗರಿಯುಂ ತನಗೆತಾನೆ ನೀರ್ಗೊಟ್ಟಪ ನೆಂಬಂತೆ ಸುರಿವ ನಿರಂತರಾಶ್ರುಪೂರಮುಂ ತನ್ನಿಚ್ಛೆಯೊಳೆನ್ನ ಕೈವಿಡಿಯಲೆಂದು ಮಿಂದನೆಂಬಂತೆ ಪೊಣ್ಮುವ ಘರ್ಮೋದಕಂಗಳುಂ ಇದಿರ ಮನಮೇನೆಂದಱಿಯದೆಳಸದಿರೆಂದಡಿಗಡಿಗೆ ನಿವಾರಿಸು

ದಿದ್ದರೆ ನನ್ನ ಮನೋರಥವು ಕೈಗೂಡಲು ಹೀಗೆ ವಿಳಂಬವಾಗುತ್ತಿತ್ತೆ ? ೩೭. ತಟ್ಟನೆ ಬಂದು ಮೃತನಾಗಿದ್ದ ಪುಂಡರೀಕದೇವನನ್ನು ಬಿಡದೆ ಆಕಾಶಕ್ಕೆ ಎತ್ತಿಕೊಂಡುಹೋದ ಆ ಪುರುಷನು ಯಾವನೇ ಆಗಲಿ, ಮತ್ತೊಮ್ಮೆ ಬಂದು ಕರುಣೆಯಿಂದ ನನಗೆ ಕಾಣಿಸಿ ಕೊಳ್ಳಬಾರದಾಗಿತ್ತೆ ? ಪ್ರಾಣವೇ ಹೋಗಿದ್ದ ನನ್ನ ಪ್ರಾಣಕಾಂತನು, ಪಾಪ ! ಏನು ಮಾಡುತ್ತಾನೆ ? ಆದರೆ ಬದುಕಿದ್ದ ದಯಾವಂತನಾದ ಕಪಿಂಜಲನು ಬದುಕಿದ್ದೂ ಇನಿ ಯನ ಸಮಾಚಾರವನ್ನು ನನಗೆ ಬಂದು ತಿಳಿಸಲಿಲ್ಲವಲ್ಲ !" ಎಂದು ಚಿಂತಿಸುತ್ತಿದ್ದೆನು. ಹಾಳುಪ್ರಾಣಗಳನ್ನು ಧರಿಸಿಕೊಂಡಿರುವ ನಾನು ವ॥ ಇವೇ ಮೊದಲಾದ ಹಲವು ಬಗೆಯ ಮಿಥ್ಯಾಭಿಲಾಷೆಗಳನ್ನು ಚಿಂತಿಸುತ್ತಿರುವಲ್ಲಿ, ಆ ಬ್ರಾಹ್ಮಣತರುಣನು ಸ್ವಲ್ಪವೂ ಸ್ಥಳವಿಲ್ಲದಂತೆ ನಾಟಿ ಮುರಿದಿರುವ ಮನ್ಮಥನ ಹೂವಿನ ಬಾಣದ ತುದಿಗಳಂತೆ ಕಾಣುವ ಮೇಲಕ್ಕೆದ್ದಿರುವ ರೋಮಾಂಚಗಳೂ, ಕಾಮಾಗ್ನಿಯಿಂದ ಸುಟ್ಟು ಬೂದಿಯಾದಂತೆ ಬೆಳ್ಳಗಾಗಿರುವ ದೇಹವೂ, ಜಗತ್ತಿನಲ್ಲಿ ತಡೆಯೇ ಇಲ್ಲದ ಅಪ್ಪಣೆಯುಳ್ಳ ಮನ್ಮಥ ನಿಂದ ನಿಶ್ಚಯವಾಗಿ ಸಾಯಲೇಬೇಕಾದ ಪ್ರಸಂಗದಲ್ಲಿ ವಧ್ಯಶಿಲೆಯ ಮೇಲೆ ಕೂರಿಸ ಬೇಕೆಂದು ಕಟ್ಟಿದ ಕಟ್ಟುಗಳೆಂಬಂತೆ ತೊಟ್ಟುಕೊಂಡಿರುವ ತಾವರೆದಂಟಿನ ಬಳೆಯೂ ಉಳ್ಳವನಾಗಿ ಬರುತ್ತಿದ್ದ ಅವನನ್ನು ಬಳಸಿ ಬಳಸಿ ಇನ್ನೆಲ್ಲಿಗೆ ಹೋಗುತ್ತೀಯೆಂದು ಗದರಿಸುತ್ತಿರುವ ಚಂದ್ರನ ಬೆರಳಿನಂತಿರುವ ಕಿವಿಗೆ ಮುಡಿದುಕೊಂಡಿರುವ ಕೇತಗೆಯ ಸುಂದರವಾದ ಗರಿಯೂ, ತನಗೆ ತಾನೆ ತರ್ಪಣ ಕೊಡುವಂತೆ ಒಂದೇಸಮನೆ ಸುರಿಯುವ ಕಣ್ಣೀರೂ, ತನ್ನ ಇಷ್ಟದಿಂದಲೇ ನನ್ನ ಪಾಣಿಗ್ರಹಣ ಮಾಡಲು ಮಂಗಳಸ್ನಾನಮಾಡಿ ದ್ದಾನೆಂಬಂತೆ ಹೊಮ್ಮುತ್ತಿರುವ ಬೆವರುನೀರಿನ ಪ್ರವಾಹವೂ, ಇತರರ ಮನಸ್ಸನ್ನು

ವಂತೆ ನಿಲಿಸುವ ಊರುಸ್ತಂಭಮುಮುತ್ಕಲಿಕಾ ಸಹಸ್ರ ವಿಷಮರಾಗಸಾಗರಮನೀಸಿದಪನೆಂಬಂತೆ ನ್ನನಪ್ಪುವಟಿಯಾಸೆಯಿಂ ದೂರದೊಳ್ ನಿಮಿರ್ವ ನಿಡುತೋಳ್ಗಳುಂ ತನ್ನೊಳ್ ತೋಱೆ ಸತ್ವ ಗುಣಕ್ಕೆ ಸಾರ್ಕೆಗುಡದೆ ಕೃಪಣತೆಗೆಡೆಗೊಟ್ಟು ವಿರಕ್ತತೆಗೆ ಬಿಗುರ್ತು ತರಳತೆಗೆ ಕೂರ್ತು ಲಜ್ಜೆಗೆ ಗೆಂಟಾಗಿ ಚಾಪಲ್ಯಕ್ಕನಭಿಮುಖನಾಗಿ ಪರಲೋಕಭಯಕ್ಕೆ ಬೆಸೆದು ಬೆಸನಕ್ಕೊಸೆದು ಯುಕ್ತಾಯುಕ್ತ ವಿವೇಕಕ್ಕೆ ಪಿಂತೆಗೆದು ಉನ್ಮತ್ತನಂತಚ್ಚಬೆಳ್ದಿಂಗಳೊಳೊಯ್ಯನೊಯ್ಯನೆ ಬರುತಿರ್ದನನಾಂ ದೂರದೊಳ್ ಕಂಡು ಭಯಂಗೊಂಡು

ಎಲೆ ಕೇಡಾಯ್ತೆನಗೋವೊ ಮತ್ತಮಿವನೆನ್ನಂ ಕೆಯ್ಯೊಳಂ ಬಂದು ಮು
ಟ್ಟಲೊಡಂ ಪತ್ತುವಿಡಲ್ಕೆವೇಟ್ಕುವಸುವಂ ಮೆಯ್ಯೊಡ್ಡಿದೆಂ ದುಃಖಸಂ
ಕುಲಕೋರಂತಿರೆ ಪುಂಡರೀಕನನೆ ಮತ್ತಂ ಕಾಣ್ಬೆನಾನೆಂದೆ ನಿ
ಷ್ಫಲಮಾಯ್ತುತ್ಕಟ ಮಂದಭಾಗ್ಯೆಗೆನಗಿಂತೀ ಪ್ರಾಣಸಂಧಾರಣಂ ೩೮

ವ॥ ಎಂದೆನ್ನೊಳೆ ಬಗೆಯುತ್ತಿರ್ದೆನನ್ನೆಗವಾತನೆಯ್ದವಂದೆನ್ನನಿಂತೆಂದಂ

ತಿಳಿದುಕೊಳ್ಳದೆ ಸುಮ್ಮನೆ ಬಯಸಬೇಡವೆಂದು ಹೆಜ್ಜೆಹೆಜ್ಜೆಗೂ ತಡೆಯುವಂತೆ ನಿಲ್ಲಿಸುತ್ತಿರುವ ಕಂಭದಂತಿರುವ ತೊಡೆಗಳೂ (ಭಯದಿಂದ ತೊಡೆ ಮುಂದುವರಿಯುತ್ತಿರಲಿಲ್ಲ), ಸಾವಿರಾರು ಬಯಕೆಗಳೆಂಬ ತೆರೆಗಳಿಂದ ಕಷ್ಟಕರವಾದ, ಪ್ರೀತಿಯೆಂಬ ಕಡಲನ್ನು ದಾಟುತ್ತಿರುವವನಂತೆ ನನ್ನನ್ನು ಆಲಂಗಿಸಿಕೊಳ್ಳಬೇಕೆಂಬ ಹುಸಿಯಾಸೆಯಿಂದ ದೂರದಲ್ಲೇ ಮೇಲಕ್ಕೆತ್ತಿರುವ ನೀಳವಾದ ತೋಳುಗಳೂ ತನ್ನಲ್ಲಿ ಕಾಣುತ್ತಿರಲು, ಸತ್ವಗುಣಕ್ಕೆ ಅವಕಾಶಕೊಡದೆ ಕೇವಲ ದೈನ್ಯಕ್ಕೆ ಅವಕಾಶಕೊಟ್ಟು, ವಿರಕ್ತಿಯಿಂದ ದೂರಸರಿದು, ಚಾಪಲ್ಯಕ್ಕೆ ವಶನಾಗಿ, ಲಜ್ಜೆಗೆ ದೂರಸರಿದು, ದಿಟ್ಟತನಕ್ಕೆ ಬೆನ್ನುತಿರುಗಿಸಿ, ಪರಲೋಕ ಭಯಕ್ಕೆ ವಿಮುಖನಾಗಿ, ಹಂಬಲಕ್ಕೆ ಒಲಿದು, ಯುಕ್ತಾಯುಕ್ತವಿಚಾರಕ್ಕೆ ಹಿಮ್ಮೆಟ್ಟಿ, ಹುಚ್ಚನಂತೆ ಸ್ವಚ್ಛವಾದ ಬೆಳದಿಂಗಳಲ್ಲಿ ಮೆಲ್ಲಮೆಲ್ಲನೆ ಬಂದನು. ಅವನನ್ನು ನಾನು ದೂರದಿಂದಲೆ ನೋಡಿ ಭಯಪಟ್ಟೆನು. ೩೮. "ಅಯ್ಯೋ, ನನಗೊಳ್ಳೆಯ ಕಷ್ಟಬಂತಲ್ಲ! ಇವನೇನಾದರೂ ಬಂದು ನನ್ನನ್ನು ಕೈಯಿಂದ ಮುಟ್ಟಿಬಿಟ್ಟರೆ ಈ ಪ್ರಾಣವನ್ನು ಬಿಟ್ಟುಬಿಡಬೇಕಾಗುತ್ತದೆ. ಪುಂಡರೀಕನನ್ನು ಮತ್ತೆ ಕಾಣುವೆನೆಂಬ ಒಂದು ಆಸೆಯಿಂದಲೇ ಒಂದೇಸಮನಾಗಿ ದುಃಖಪರಂಪರೆಯನ್ನು ಅನುಭವಿಸಿಕೊಂಡು ಬಂದೆ. ಅಯ್ಯೋ, ಮಂದಭಾಗ್ಯಳಾದ ನನಗೆ ಪ್ರಾಣವನ್ನು ಉಳಿಸಿಕೊಂಡಿರುವುದು ವ್ಯರ್ಥವಾಯಿತು," ವ॥ ಎಂದು ನನ್ನಲ್ಲಿ ಯೋಚಿಸುತ್ತಿರು

ಎಲೆ ಕುಮುದನೇತ್ರೆ ಮನ್ಮಥಸಹಾಯನೀ ಚಂದ್ರಮಂ
ಕೊಲಲ್ ಬಗೆದನೆನ್ನನಾರ್ತನನಾಥನಂ ದುಃಖಿಯಂ
ಪಲುಂಬಿ ಮಱೆವೊಕ್ಕೆನಾಂ ನಿನಗಧೀನಮೀ ಜೀವಿತಂ
ವಿಲಂಬಿಸದೆ ರಕ್ಷಿಸೆನ್ನನಱಿಯೆಂ ಪ್ರತೀಕಾರಮಂ ೩೯

ಶರಣಾಗತಜನಭರಣಂ
ಪರತರಧರ್ಮಂ ತಪಸ್ವಿಗಳ್ಗದಱಿಂದೆ
ಪೊರೆಯೆನ್ನನಿಲ್ಲದೊಡೆ ಹಾ
ಸ್ಮರಶೀತಮಯೂಖರಿಂದೆ ಹತನಾದಪ್ಪೆಂ ೪೦

ವ॥ ಅದಂ ಕೇಳಲೊಡಮೆನ್ನ ನೆತ್ತಿಯೊಳುರಿ ಮಸಗಿದಂತಾಗೆ ಕಿನಿಸು ಕೆಯ್ಮಿಗೆ ಕಣ್ಗಳಿಂದುಗುತರ್ಪ ಕಂಬನಿಗಿಡಿಗಳಿಂದುರುಪುವಂತವನಂ ನೀಡುಂ ನೋಡುತ್ತಾವಿಷ್ಟೆಯಂತೆನ್ನನಾನಱಿಯದೆ

ನುಡಿವನ್ನನೆನ್ನನೀ ಪರಿ
ಸಿಡಿಲೇತಕೆ ಕಿಡೆದುದಿಲ್ಲ ನಿನ್ನಯ ಸಿರದೊಳ್
ಉಡುಗಿದುದಿಲ್ಲಮುಸಿರ್ ನೂ
ರ್ಮಡಿಯೆನಲೀ ಜಿಹ್ವೆ ಬಱಿದುದಿಲ್ಲ ದುರಾತ್ಮಾ ೪೧

ವಷ್ಟರಲ್ಲಿ ಆತನು ಹತ್ತಿರಬಂದು ನನ್ನನ್ನು ಕುರಿತು ಹೀಗೆಂದನು, ೩೯. "ಎಲೈ ನೈದಿಲೆಯಂತೆ ಕಣ್ಣುಳ್ಳವಳೆ, ಮನ್ಮಥನಿಗೆ ಸಹಾಯಕನಾದ ಈ ಚಂದ್ರನು ಕಷ್ಟಕ್ಕೆ ಸಿಕ್ಕಿರುವ, ಅನಾಥನಾದ ಹಾಗೂ ದುಃಖಿಯಾದ ನನ್ನನ್ನು ಕೊಲ್ಲಲು ಹೊರಟಿದ್ದಾನೆ. ನಾನು ಹಲುಬುತ್ತಾ ನಿನ್ನ ಮರೆಹೊಕ್ಕಿದ್ದೇನೆ. ಈಗ ನನ್ನ ಪ್ರಾಣವು ನಿನ್ನ ಕೈಯಲ್ಲಿದೆ. ವಿಳಂಬಮಾಡದೆ ನನ್ನನ್ನು ಕಾಪಾಡು. ಇದಕ್ಕೆ ಏನುಮಾಡಬೇಕೆಂಬುದೇ ನನಗೆ ಗೊತ್ತಾಗುತ್ತಿಲ್ಲ. ೪೦. ತಪಸ್ವಿಗಳಿಗೆ ಶರಣಾಗತರನ್ನು ಕಾಪಾಡುವುದೇ ಬಹಳ ಶ್ರೇಷ್ಠವಾದ ಧರ್ಮ. ಆದರಿಂದ ನನ್ನನ್ನು ಕಾಪಾಡು. ಇಲ್ಲದಿದ್ದರೆ, ಅಯ್ಯೋ, ಮನ್ಮಥ ಮತ್ತು ಈ ಚಂದ್ರ ಇಬ್ಬರೂ ನನ್ನನ್ನು ಕೊಂದುಬಿಡುತ್ತಾರೆ!" ವ॥ ಅವನ ಮಾತನ್ನು ಕೇಳಿದಕೂಡಲೆ ನನ್ನ ನೆತ್ತಿಗೆ ಉರಿ ಹತ್ತಿದಂತಾಗಿ ಕೋಪವು ಹೆಚ್ಚಲು, ಕಣ್ಣುಗಳಿಂದ ಹೊರಡುತ್ತಿರುವ ಕಣ್ಣೀರೆಂಬ ಬೆಂಕಿಕಿಡಿಗಳಿಂದ ಅವನನ್ನು ಸುಟ್ಟುಬಿಡುವವಳಂತೆ ದೃಷ್ಟಿಸಿ ನೋಡುತ್ತಾ, ಆವೇಶಗೊಂಡವಳಂತೆ ನನ್ನನ್ನೆ ನಾನು ಅರಿಯದೆಹೋದೆನು. ೪೧. "ಎಲೋ ದುಷ್ಟನೆ, ನನಗೆ ಈ ರೀತಿ ಹೇಳುತ್ತಿರುವ ನಿನ್ನ ತಲೆಯಮೇಲೆ ಸಿಡಿಲು ಏಕೆ ಬೀಳಲಿಲ್ಲ ? ನಿನ್ನ ಉಸಿರು ಏಕೆ ಉಡುಗಿಹೋಗಲಿಲ್ಲ ? ನಿನ್ನ ನಾಲಿಗೆಯೇಕೆ

ಖಿಲ ನಿನ್ನೀ ತನು ಪಂಚಭೂತಮಯಮಲ್ತಂತಾಗೆ ನಿನ್ನಂ ರಸಾ
ತಲಮಂ ಪೊರ್ದಿಸದಾಯ್ತದೇಕಿಳೆ ಮರುತ್ತೇಕೊಯ್ಯದಾಯ್ತೊರ್ವೊದಲ್
ಜಲಮೇಕಾಳಿಸದಾದುದೋ ದಹಿಸಲಿಲ್ಲೇಕರ್ಕೆ ತಾನಗ್ನಿ ಪೇ
ೞೆಲೆ ಪಾಪಾತ್ಮನೆ ತನ್ನವೋಲೆಸಗಲಿಲ್ಲೇಕಾಗಸಂ ಶೂನ್ಯನಂ ೪೨

ಈ ತೆಱದಿಂದಂ ಗಳಹುವ
ಪಾತಕಿ ನೀಂ ನೀತಿಮಾರ್ಗವಱಿಯದ ತಿರ್ಯ
ಗ್ಜಾತಿಯೊಳೆ ಜನ್ಮವೆತ್ತದ
ದೇತರ್ಕೆ ಮನುಷ್ಯಜಾತಿಯೊಳ್ ಜನಿಯಿಸಿದೈ ೪೩

ವ॥ ಮತ್ತಮೆಲೆ ಮತ್ತ ನೀನಿಂತು ನಗೆಗೀಡಾದ ನುಡಿಗಳಂ ನುಡಿಯುತ್ತಮೆನಗೆ ಮುಳಿಸನಾದೊಡಂ ಪುಟ್ಟಸಲಿಲ್ಲಮದುಕಾರಣದಿಂ ನಿನ್ನ ನುಡಿಗನುರೂಪಮಪ್ಪ ಜಾತಿಯೊಳ್ ಪುಟ್ಟಿದೊಡೆಮ್ಮನ್ನರನೆಂದುಂ ಕಾಮಿಸೆಯೆಂದು ನುಡಿದೊಡನಾಂ ಚಂದ್ರಾಭಿಮುಖಿಯಾಗಿ ಕೆಯ್ಗಳಂ ಮುಗಿದು ಮಹಾಭಾಗ ಸಕಲಭುವನಚೂಡಾಮಣಿಯಪ್ಪ ರೋಹಿಣೀರಮಣ ಪುಂಡರೀಕನನಾಂ ನೋಡಿದಂದಿನಿಂ ಮತ್ತೊರ್ವ ಪುರುಷನಂ ಮನದೊಳಾದೊಡಂ ಭಾವಿಸದಿರ್ದುದು ನನ್ನಿಯಪ್ಪೊಡೀಯಳೀಕಕಾಮಿಯಾನುಸಿರ್ದಂತೆ ಗಿಳಿಯಾಗಿ ಪುಟ್ಟುಗೆಂದು ಶಪಿಸಲೊಡನೆ

ನೂರಾರು ಚೂರಾಗಿ ಬಿರಿದುಹೋಗಲಿಲ್ಲ? ೪೨. ಎಲೋ ದುಷ್ಟ, ನಿನ್ನ ದೇಹವು ಪಂಚಭೂತಗಳಿಂದ ಹುಟ್ಟಿದುದಲ್ಲವೆಂದು ಕಾಣುತ್ತದೆ! ಹಾಗೆ ಹುಟ್ಟಿದ್ದರೆ ಭೂಮಿಯು ನಿನ್ನನ್ನು ಪಾತಾಳಕ್ಕೆ ಏಕೆ ತಳ್ಳಲಿಲ್ಲ ? ವಾಯು ಏಕೆ ಹಾರಿಸಿಕೊಂಡು ಹೋಗಲಿಲ್ಲ ? ನೀರು ಏಕೆ ಮೊದಲೆ ಕೊಚ್ಚಿಕೊಂಡು ಹೋಗಲಿಲ್ಲ ? ಅಗ್ನಿಯೇಕೆ ನಿನ್ನನ್ನು ಸುಡಲಿಲ್ಲ? ಎಲೋ ಪಾಪಿಷ್ಠ! ಆಕಾಶವು ನಿನ್ನನ್ನು ತನ್ನಂತೆಯೆ ಏಕೆ ಶೂನ್ಯನನ್ನಾಗಿ ಮಾಡಲಿಲ್ಲ, ಹೇಳು ? ೪೩. ಎಲೊ ಪಾಪಿ. ಹೀಗೆ ಬೊಗಳುವ ನೀನು ನೀತಿಮಾರ್ಗವನ್ನು ತಿಳಿದು ಕೊಂಡಿಲ್ಲದ ತಿರ್ಯಗ್ಜಾತಿಯಲ್ಲಿ ಜನ್ಮವೆತ್ತದೆ ಮನುಷ್ಯಜಾತಿಯಲ್ಲಿ ಏಕೆ ಹುಟ್ಟಿದೆ. ? ವ॥ ಎಲೋ ಮತ್ತ ! ನೀನು ಹೀಗೆ ನಗೆಗೀಡಾದ ಮಾತುಗಳನ್ನು ಹೇಳುತ್ತಿದ್ದರೂ ನನಗೆ ಕೋಪವೇನೂ ಬರಲಿಲ್ಲ ! ಆ ಕಾರಣದಿಂದ ನಿನ್ನ ಈ ಮಾತುಗಳಿಗೆ ಅನುರೂಪ ವಾದ ಜಾತಿಯಲ್ಲಿ ನೀನು ಹುಟ್ಟಿಬಿಟ್ಟರೆ ನಮ್ಮಂತಹವರನ್ನು ಮೋಹಿಸುವುದಿಲ್ಲ !" ಎಂದು ಹೇಳಿ, ಚಂದ್ರನ ಕಡೆಗೆ ಮುಖಮಾಡಿಕೊಂಡು "ಸಮಸ್ತ ಪ್ರಪಂಚಕ್ಕೂ ಚೂಡಾ ಮಣಿಯಂತಿರುವ ಮಹಾತ್ಮನಾದ ಚಂದ್ರನೆ, ನಾನು ಪುಂಡರೀಕನನ್ನು ನೋಡಿದಾರಭ್ಯ ಮತ್ತೊಬ್ಬ ಪುರುಷನನ್ನು ಮನಸ್ಸಿನಲ್ಲಾದರೂ ಚಿಂತಿಸದಿರುವುದು ಸತ್ಯವಾಗಿದ್ದ ಪಕ್ಷ ದಲ್ಲಿ ನಿರರ್ಥಕವಾಗಿ ಬಯಸುವ ಈ ಕಾಮುಕನು ಗಿಳಿಯಾಗಿ ಹುಟ್ಟಲಿ !" ಎಂದು

ಸಹಿಸಲಸಹ್ಯಮಪ್ಪ ಮದನಜ್ವರವೇಗದೆ ಮೇಣ್ ನಿಜಾಘ ದು
ರ್ವಹಪರಿಪಾಕದಿಂ ಬಗೆಯಲಲ್ಲದೊಡೆನ್ನಯ ತೀವ್ರಶಾಪವಾ
ಙ್ಮಹಿಮೆಯಿನಾತನಂದು ಕಡಿದಿಕ್ಕಿದ ಪೆರ್ಮರನಂತೆವೋಲದೇ
ನಹಹ ನಿರೂಪಿಪೆಂ ಕೆಡೆದು ಪೊಂದಿದನಾಯಿಳೆಯಲ್ಲಚೇತನಂ ೪೪

ವ॥ ಅದಂ ಕಂಡತಿದುಃಖಿತರಪ್ಪ ಪರಿಜನಂಗಳ ಮುಖದಿಂದೀತಂ ಭವತ್ಪ್ರಿಯವಯಸ್ಯ ನೆಂದಱಿದಾಂ ಕಡುದುಗುಡಂದಳೆದಿದೇನೆಂದು ಕಂಬನಿಗಳಂ ಬಿಡುತ್ತೆ ಲಜ್ಜಾವನತಮುಖಿಯಾಗಿರ [ರ್ದಳಂ]ಲೆನ್ನಂ ಕುರಿತು ಚಂದ್ರಾಪೀಡಂ

ಪಿರಿದುಂ ನೀನೊಲವಿಂದೆ ಯತ್ನಿಸಿದೊಡಂ ಕಾದಂಬರೀದೇವಿಯಾ
ಚರಣೋಪಾಸನ ಸೌಖ್ಯಮಾದೊಡೆನಗಾದತ್ತಿಲ್ಲಮೀ ಪುಟ್ಟಿನೊಳ್
ದೊರೆಕೊಳ್ವಂತದು ತಾನೊಡರ್ಚು ಮಱುವುಟ್ಟಲ್ಲಾದೊಡಂ ನೀನೆಯೆಂ
ದೊರೆವನ್ನಂ ಬಿಱಿದತ್ತು ಭೋಂಕನೆರ್ದೆ ತದ್ರಾಜೇಂದ್ರುಚಂದ್ರಾಂಕನಾ ೪೫

ವ॥ ಅನಂತರಂ ತರಳಿಕೆ ಮಹಾಶ್ವೇತೆಯಂ ಬಿಟ್ಟು ಭೋರನೆ ಚಂದ್ರಾಪೀಡಶರೀರಮಂ ಸಾರ್ದು ಹಾ ದೇವ ! ಚಂದ್ರಾಪೀಡ ಕಾದಂಬರಿಯನುೞಿದೆತ್ತವೋಪೆಯೆಂದು ಬಾಯುಱಿದು ಪಳವಿಸುತ್ತಮಿರ್ದಳ್ ಮಹಾಶ್ವೇತೆಯುಂ ಚಂದ್ರಾಪೀಡಮುಖನಿಹಿತ ನಿಶ್ಚಲಸ್ತಬ್ಧದೃಷ್ಟಿಯಾಗಿ

ಶಾಪವನ್ನು ಕೊಟ್ಟೆನು. ಕೂಡಲೆ ೪೪. ಸಹಿಸಲಸಾಧ್ಯವಾದ ಕಾಮಜ್ವರದ ತೀಕ್ಷ್ಣತೆ ಯಿಂದಲೋ ಅಥವಾ ತನ್ನ ಪಾಪದ ತಾಳಲಾರದ ಪರಿಣಾಮದಿಂದಲೋ ಅಥವಾ ನನ್ನ ತೀವ್ರವಾದ ಶಾಪವಚನದ ಪ್ರಭಾವದಿಂದಲೋ ಕಾಣೆ, ಅಯ್ಯೋ, ಏನು ಹೇಳಲಿ ! ಆತನು ಕೂಡಲೆ ಕತ್ತರಿಸಿದ ಹೆಮ್ಮರದಂತೆ ಅಚೇತನನಾಗಿ ಸತ್ತು ನೆಲಕ್ಕೆ ಬಿದ್ದನು ! ವ॥ ಅದನ್ನು ನೋಡಿ ಅತಿದುಃಖಿತರಾದ ಆತನ ಪರಿಜನರ ಬಾಯಿಂದ, ಅವನು ನಿನ್ನ ಆಪ್ತಮಿತ್ರನೆಂದು ತಿಳಿದುಕೊಂಡ ನಾನು ಬಹಳ ವಿಷಾದಪಡುತ್ತಿದ್ದೇನೆ" ಎಂದು ಹೇಳಿ ಕಣ್ಣೀರನ್ನು ಬಿಡುತ್ತ ಮಹಾಶ್ವೇತೆಯು ನಾಚಿಕೆಯಿಂದ ಮುಖವನ್ನು ತಗ್ಗಿಸಿದಳು. ಅವಳನ್ನು ಕುರಿತು ಚಂದ್ರಾಪೀಡನು ೪೫. "ಪೂಜ್ಯಳೆ, ನೀನು ಮಮತೆಯಿಂದ ಬಹಳ ವಾಗಿ ಪ್ರಯತ್ನಿಸಿದರೂ ಕಾದಂಬರೀದೇವಿಯ ಪಾದಸೇವೆಯ ಸುಖವು ನನಗೆ ಈ ಜನ್ಮ ದಲ್ಲಿ ಲಭಿಸಲಿಲ್ಲ. ಆದ್ದರಿಂದ ಮುಂದಿನ ಜನ್ಮದಲ್ಲಾದರೂ ಅದು ನನಗೆ ಲಭ್ಯವಾಗು ವಂತೆ ನೀನು ಮಾಡಬೇಕು" ಎಂದು ಹೇಳುತ್ತಿರುವಂತೆಯೇ ಆ ಚಂದ್ರಾಪೀಡನ ಎದೆಯು ತಟ್ಟನೆ ಒಡೆದುಹೋಯಿತು. ! ವ॥ ಬಳಿಕ ತರಳಿಕೆಯು ಮಹಾಶ್ವೇತೆಯನ್ನು ಬಿಟ್ಟು ಕೂಡಲೆ ಚಂದ್ರಾಪೀಡನ ಶರೀರದ ಹತ್ತಿರಕ್ಕೆ ಬಂದು "ಅಯ್ಯೋ ಸ್ವಾಮಿ, ಚಂದ್ರಾಪೀಡ, ಕಾದಂಬರಿಯನ್ನು ಬಿಟ್ಟು ಎಲ್ಲಿಗೆ ಹೋದೆ" ಎಂದು ಬಾಯಿಬಾಯಿ ಬಿಟ್ಟು ಗೋಳಾಡ ತೊಡಗಿದಳು. ಮಹಾಶ್ವೇತೆಯೂ ಚಂದ್ರಾಪೀಡನ ಮುಖದಲ್ಲಿ ನಿಶ್ಚಲವಾದ ದೃಷ್ಟಿ

ಮರಣಸಮಸಾದಿತೆಯಾದಂತೆ ಮೂರ್ಛೆಗೆ ಸಂದಳಿತ್ತಲನಂತರಂ ತತ್ಸಮಾಸನ್ನ ಪರಿಜನಂ ಪ್ರಲಾಪಂಗೆಯ್ಯುತ್ತವನಿತಲದೊಳ್ ಕೆಡೆದು ವಿಗತಚೇತನನಾದ ಕುಮಾರನಂ ಕಂಡು ಕೆಟ್ಟೆವಿದೇನೆಂದು ರಾಜಪುತ್ರರುಮುದ್ಭ್ರಾಂತರಾಗಿ ಚಂದ್ರಾಪೀಡನನುಗಮನಮೇ ಕರಣೀಯಮೆಂದು ನಿಶ್ಚೈಸಿರ್ದರನ್ನೆಗಮಿತ್ತ ಕಾದಂಬರಿಯ ಪರಿಜನಂ

ತಮತಮಗೊಲವಿಂ ಶ್ವೇತಾ
ಶ್ರಮಕ್ಕೆ ತಾಂ ಬಂದನಧಿಕಹರ್ಷದೆ ನೃಪಜಂ
ದ್ರುಮನೆಂದು ಭೋಂಕನತಿಸಂ
ಭ್ರಮದಿಂ ಗಂಧರ್ವಕನ್ನೆಗಱಿಪಿದರಾಗಳ್ ೪೬

ವ॥ ಅಂತಱಿಪೆ ಚಂದ್ರೋದಯೋಲ್ಲಸಿತೆಯುಪ್ಪುದಧಿವೇಲೆಯಂತೆ ಸಮಕರಧ್ವಜೆಯಾಗಿ ಮನದೊಳಗೆ ಗುಡಿಗಟ್ಟಿ ಮಹಾಶ್ವೇತೆಯಲ್ಲಿಗೆ ಪೋದಪ್ಪೆನೆಂದು ಜನನೀಜನಕರಿಂ ಕೃತಾನುಜ್ಞೆಯಾಗಿ ಕಾದಂಬರಿ ಕೆಯ್ಗೆಯ್ದು ರಸನ್ಮಣಿನೂಪುರಕಲಾಪೆಯರುಂ ಲೇಖೆಗಿಂತೆಂದಳ್ ಮುಖರ ಮೇಖಲಾದಾಮ ಸಂದಾನಿತಜಘನೆಯರುಂ ರಮ್ಯೋಜ್ವಲಾಕಲ್ಪೆಯರುಂ ಗೃಹೀತಸುರಭಿಮಾಲ್ಯಾನುಲೇಪನಪಟವಾಸಾದ್ಯುಪಕರಣೆಯರುಮೆನಿಸಿದ ಕೆಲಂಬರಾಪ್ತಪರಿಚಾರಿಕೆಯರ್ವೆರಸು ಕೇಯೂರಕೋಪದಿಶ್ಯಮಾನಮಾರ್ಗೆಯುಮೆನಿಸಿ ಪತ್ರಲೇಖಾ ಹಸ್ತಾವಲಂಬಿನಿಯುಮಾಗಿ ಬರುತಂ ಮದಲೇಖೆಗಿಂತೆಂದಳ್

ಯನ್ನಿರಿಸಿ ಮರಣ ಹೊಂದಿದವಳಂತೆ ಮೂರ್ಛೆಗೊಂಡಳು. ಬಳಿಕ ಚಂದ್ರಾಪೀಡನ ಸಮೀಪದಲ್ಲಿದ್ದ ಪರಿಜನರು ಪ್ರಲಾಪಿಸುತ್ತಿರಲು, ಭೂಮಿಯ ಮೇಲೆ ಬಿದ್ದು ಪ್ರಾಣ ಬಿಟ್ಟಿರುವ ಯುವರಾಜನನ್ನು ಕಂಡು "ಅಯ್ಯೋ ಕೆಟ್ಟೆವಲ್ಲ ! ಇದೇನಿದು !" ಎಂದು ಅರಸುಮಕ್ಕಳೆಲ್ಲರೂ ಗಾಬರಿಗೊಂಡು ತಾವೂ ಚಂದ್ರಾಪೀಡನನ್ನೇ ಹಿಂಬಾಲಿಸಿ ಸಾಯಬೇಕೆಂದು ನಿಶ್ಚಯಿಸಿದರು. ಈ ಕಡೆಯಲ್ಲಿ ಕಾದಂಬರಿಯ ಪರಿವಾರದವರು ೪೬. "ಚಂದ್ರಾಪೀಡನು ಮಹಾಶ್ವೇತಾಶ್ರಮಕ್ಕೆ ಬಹಳ ಸಂತೋಷದಿಂದ ಬಂದಿದ್ದಾನೆ." ಎಂದು ತಾವು ತಾವೇ ಬಹಳ ಪ್ರೀತಿಯಿಂದ ತಟ್ಟನೆ ಸಂಭ್ರಮದಿಂದ ಬಂದು ಕಾದಂಬರಿಗೆ ಆಗ ತಿಳಿಸಿದರು, ವ॥ ಹಾಗೆ ತಿಳಿಸಲಾಗಿ ಕಾದಂಬರಿಯು ಚಂದ್ರೋದಯದಿಂದ ಉಕ್ಕುತ್ತಿರುವ ಸಮುದ್ರದಂತೆ ಸಮಕರಧ್ವಜಳಾಗಿ (೧. ಕಾಮಪರವಶಳಾಗಿ ೨. ಮೊಸಳೆಯ ಬಾವುಟವುಳ್ಳದ್ದಾಗಿ. ಸಮುದ್ರದೇವನಿಗೆ ಮೊಸಳೆಯೆ ಬಾವುಟ) ಸಂತೋಷಪಟ್ಟು, ಮಹಾಶ್ವೇತೆಯ ಬಳಿಗೆ ಹೋಗಿ ಬರುತ್ತೇನೆಂದು ತಾಯಿ ತಂದೆಗಳಿಂದ ಅನುಮತಿಯನ್ನು ಪಡೆದು ಹೊರಟಳು, ಒಡವೆಗಳನ್ನು ಧರಿಸಿ ಧ್ವನಿಮಾಡುತ್ತಿರುವ ರತ್ನದ ಕಾಲ್ಗಡಗವನ್ನು ಹಾಕಿಕೊಂಡು, ಸೊಂಟದಲ್ಲಿ ಧ್ವನಿ ಮಾಡುತ್ತಿರುವ ಡಾಬನ್ನು ಧರಿಸಿಕೊಂಡಿರುವ, ಸುಂದರವಾದ ವೇಷಭೂಷಣಗಳುಳ್ಳ, ಹೂವಿನ ಸರ, ಗಂಧ, ಬುಕ್ಕಿಹಿಟ್ಟು ಮೊದಲಾದ ಸಾಮಗ್ರಿಗಳನ್ನು ತೆಗೆದುಕೊಂಡಿರುವ ಕೆಲವರು ಆಪ್ತರಾದ ಪರಿಚಾರಿಕೆಯರೊಂದಿಗೆ ಕೂಡಿಕೊಂಡು, ಕೇಯೂರಕನು ದಾರಿ

ಅಱಿವೋ ನಿಸ್ನೇಹನೆನ್ನಂ ಹಿಮಗೃಹಕದೊಳಂತಿರ್ದಳಂ ಕಂಡು ಮತ್ತಂ
ಪೆಱವೋದಂ ದುರ್ವಿದಗ್ಧಂ ಕಠಿನಹೃದಯನಾಂ ಸತ್ತೊಡಂ ನಂಬನೆನ್ನಂ
ಮಱುಗುತ್ತಿರ್ದಪ್ಪಳೆಂದೆಂದೆಣಿಸಿ ನುಡಿದೊಡಂ ಪೇೞನಾನೇನುವಂ ಕೇಳ್
ಪೆಱತೇಂ ಸಾರ್ತಂದವಂ ಕಾಲ್ವಿಡಿದೊಡವೊಸೆಯೆಂ ಪದ್ಮಪತ್ರಾಯತಾಕ್ಷೀ ೪೭

ವ॥ ಎಂದು ನುಡಿಯುತ್ತಂ ಚಂದ್ರಾಪೀಡದರ್ಶನೋತ್ಕಂಠಿಯಾಗಿ ಕಾದಂಬರಿ ಮಹಾಶ್ವೇತಾಶ್ರಮಕ್ಕೆವಂದು ನೆರೆದಿರ್ದ ರಾಜಲೋಕದ ನಡುವೆ ತಿರೋಹಿತಾಮೃತಮಪ್ಪ ರತ್ನಾಕರಮುಮನಂತಃಪ್ರವಿಷ್ಟ ಕಮಲಮಪ್ಪ ಪದ್ಮಾಕರಮುಮಂ ಜಲಧರಪಟಲಾಂತರಿತೇಂದುವಪ್ಪ ನಿಶಾಪ್ರಬಂಧಮುಮನನುಕರಿಸಿ ತಿರೋಭೂತಚೇತನನಾದ ಚಂದ್ರಾಪೀಡದೇವನಂ ಕಂಡು ಕೆಟ್ಟೆನಿದೇನೆಂದು ತೊಟ್ಟನೆ ಮುಗ್ಧೆ ಮೂರ್ಛೆಗೆ ಸಂದು ನೆಲಕ್ಕೆ ಬೀೞ್ವನ್ನೆಗಮೆಂತಾನುಂ ಮುಕ್ತಾಕ್ರಂದೆಯಪ್ಪ ಮದಲೇಖೆ ಕರತಲದಿಂ ಪಿಡಿದೆತ್ತೆ ಪತ್ರಲೇಖೆಯುಂ ಕಾದಂಬರೀದೇವಿಯ ಕರತಲಮಂ ಬಿಟ್ಟು ನಿಶ್ಚೇತನೆಯಾಗಿ ಬಿದ್ದಳಿತ್ತಲನಂತರಮೆಂತಾನುಂ ಕಿಱಿದುಬೇಗಕ್ಕೆ ಕಾದಂಬರಿ ಲಬ್ಧಸಂಜ್ಞೆಯಾಗಿ

ಯನ್ನು ತೋರಿಸುತ್ತಿರಲು, ಪತ್ರಲೇಖೆಯು ಕೈಯನ್ನು ಹಿಡಿದುಕೊಂಡು ಬರುತ್ತಾ ಮದಲೇಖೆಯನ್ನು ಕುರಿತು ಹೀಗೆ ಹೇಳಿದಳು. ೪೭. "ಕಮಲನೇತ್ರೆ ನಿನಗೆ ಗೊತ್ತಿದೆಯಲ್ಲ, ಆ ಪ್ರೀತಿಯೇ ಇಲ್ಲದವನು, ಹಿಂದೆ ಹಿಮಗೃಹದಲ್ಲಿ ಆ ರೀತಿಯಲ್ಲಿ ಸಂಕಟಪಡುತ್ತಿದ್ದ ನನ್ನನ್ನು ಕಣ್ಣಾರ ನೋಡಿದರೂ ಮತ್ತೆ ಹಿಂದಕ್ಕೆ ತನ್ನೂರಿಗೆ ಹೊರಟುಹೋದನು. ಇಂತಹ ಕಠಿನಚಿತ್ತನಾದ ಅವನು ನಾನು ಸತ್ತರೂ ನನ್ನನ್ನು ನಂಬುವುದಿಲ್ಲ! ಈಗೇನೋ ಸಂಕಟಪಡುತ್ತಿದ್ದಾಳೆ ಎಂದು ತಿಳಿದುಕೊಂಡು ಬಂದು ನನ್ನನ್ನು ಮಾತನಾಡಿಸಿದರೂ ನಾನು ಮಾತನಾಡುವುದಿಲ್ಲ! ಹೆಚ್ಚೇಕೆ? ಅವನು ಕಾಲು ಹಿಡಿದುಕೊಂಡರೂ ನಾನು ಕೋಪವನ್ನು ಬಿಡುವುದಿಲ್ಲ!" ವ॥ ಎಂದು ಹೇಳುತ್ತ ಕಾದಂಬರಿಯು ಚಂದ್ರಾಪೀಡನನ್ನು ನೋಡಬೇಕೆಂಬ ಹೆಬ್ಬಯಕೆಯುಳ್ಳವಳಾಗಿ ಮಹಾಶ್ವೇತೆಯ ಆಶ್ರಮಕ್ಕೆ ಬಂದಳು. ಅಲ್ಲಿ ನೆರೆದಿದ್ದ ರಾಜರುಗಳ ಮಧ್ಯದಲ್ಲಿ ಅಮೃತವನ್ನು ತನ್ನಲ್ಲಿ ಅಡಗಿಸಿಕೊಂಡಿರುವ ಸಮುದ್ರದಂತೆಯೂ, ತಾವರೆಗಳನ್ನು ಒಳಗೆ ಹೊಂದಿರುವ ತಾವರೆಗೊಳದಂತೆಯೂ, ಮೋಡಗಳ ಗುಂಪಿನಲ್ಲಿ ಮುಚ್ಚಿಹೋಗಿರುವ ಚಂದ್ರನುಳ್ಳ ರಾತ್ರಿಕಾಲದಂತೆಯೂ ಇರುವ ಚೈತನ್ಯವಳಿದ ಚಂದ್ರಾಪೀಡದೇವನನ್ನು ಕಂಡು "ಅಯ್ಯಯ್ಯೋ, ಕೆಟ್ಟೆ, ಇದೇನು?" ಎಂದು ತಟಕ್ಕನೆ ಏನೂ ಅರಿಯದ ಅವಳು ಮೂರ್ಛೆಗೊಂಡು ನೆಲಕ್ಕುರುಳಿಬೀಳುವುದರಲ್ಲಿದ್ದಳು, ಅಷ್ಟರಲ್ಲಿ ಗೋಳಿಡುತ್ತಿರುವ ಮದಲೇಖೆಯು ಹೇಗೋ ತನ್ನ ಕೈಯಿಂದ ಹಿಡಿದೆತ್ತಿದಳು. ಪತ್ರಲೇಖೆಯು ಕಾದಂಬರೀದೇವಿಯ ಕೈಯನ್ನು ಬಿಟ್ಟು ಎಚ್ಚರದಪ್ಪಿ ನೆಲಕ್ಕೆ ಬಿದ್ದಳು. ಕಾದಂಬರಿಯು

ಮರವಟ್ಟಂತೆ ವಿಮೂರ್ಛೆಯಂತೆ ಬರೆದಂತಾವಿಷ್ಟೆಯಾದಂತೆ ಕಂ
ಡರಿಸಿಟ್ಟಂತುಸಿರಿಕ್ಕಲುಂ ಮಱೆದು ಚಂದ್ರಾಪೀಡದೇವಾನನಾಂ
ಬುರುಹಸ್ತಂಭಿತದೃಷ್ಟಿ ಮೆಯ್ಯಱಿದಂತರ್ಮನ್ಯುಭಾರಾತಿಮಂ
ಥರೆ ಪೆಂಡರ್ಗಿದು ತಕ್ಕುದಲ್ತೆನಿಪವಸ್ಥಾಭೇದಮಂ ತಾಳ್ದಿದಳ್ ೪೮

ವ॥ ಅಂತು ತಾಳ್ದಿದ ಕಾದಂಬರಿಯು ಕಾಲಮೇಲೆ ಬಿಟ್ಟು ಮುಕ್ತಾರ್ತನಾದೆಯಾಗಿ ಮದಲೇಖೆಯಿಂತೆಂದಳ್

ಬಿಡು ನಿಜಮನ್ಯುಬಾಷ್ಪಭರಮಂ ನುಡಿಗುಂದುತಮಿಂತು ದುಃಖಮಾಂ
ತೊಡೆ ಕಡೆಗೋಡಿಪೋಗದೆ ಪೊನಲ್ ಪುಗುತರ್ಪ ತಟಾಕದಂದದಿಂ
ದೊಡೆದಪುದಲ್ತೆ ನಿನ್ನ ಸುಮಕೋಮಲಮಪ್ಪೆರ್ದೆ ತಂದೆಯು ತಾಯು ಬಾಳ್ಕಿಯಿ
ನ್ನುಡಿದೊಡದೆಂತುಮಿಲ್ಲ ತಿಳಿ ನೀಂ ಬಟಿಕಿಲ್ಲ ನಿಜಾನ್ವಯದ್ವಯಂ ೪೯

ವ॥ ಎಂದು ನುಡಿಯೆ ವಿಹಸಿತವದನೆಯಾಗಿ ಕಾದಂಬರಿ ಮದಲೇಖೆಯನಿಂತೆಂದಳ್

ಮರುಳೇ ನೀಂ ತಂಗಿ ಪೇಟ್ ಕಲ್ಲೆರ್ದೆಯಿದೊಡೆಗುಮೇಂ ಮುಂದೆ ಮತ್ಕಾಂತ
ನಿಂತಾ
ಗಿರೆಯುಂ ಪ್ರಾಣಂಗಳೆನ್ನಂ ಬಿಡವು ಬಿಡದೊಡೇನಾದುದೆಂತಾನುಮೀಗಳ್
ದೊರೆಕೊಂಡತ್ತೀ ಮದೀಯ ಪ್ರಿಯತಮತನುವಿಂ ತಂದೆ ತಾಯ್ ಬಂಧುವರ್ಗಂ
ಪರಿವಾರಂ ತಾನದೇಕೀ ತನುವಿನ ಬಟಿಸಂದಾಂ ಕೃತಾರ್ಥಾತ್ಮೆಯಪ್ಪೆಂ ೫೦

ಸ್ವಲ್ಪಕಾಲವಾದ ಮೇಲೆ ಹೇಗೋ ಎಚ್ಚರಗೊಂಡಳು. ೪೮. ಸ್ತಬ್ಧಳಾದಂತೆಯೂ, ಮೂರ್ಛೆಗೊಂಡವಳಂತೆಯೂ, ಚಿತ್ರದಲ್ಲಿ ಬರೆಯಲ್ಪಟ್ಟವಳಂತೆಯೂ, ಭೂತ ಹಿಡಿದವಳಂತೆಯೂ, ಕೆತ್ತಿರಿಸಲ್ಪಟ್ಟವಳಂತೆಯೂ, ಉಸಿರು ಬಿಡುವುದನ್ನೂ ಮರೆತು ಚಂದ್ರಾಪೀಡನ ಮುಖಕಮಲದಲ್ಲಿ ನೆಟ್ಟ ದೃಷ್ಟಿಯುಳ್ಳವಳಾಗಿ, ಶರೀರದ ಮೇಲೆ ಪ್ರಜ್ಞೆಯೇ ಇಲ್ಲದೆ, ಒಳಗಿನ ಅತಿಶಯವಾದ ಅಳಲಿನಿಂದ ನಿಶ್ಚೇಷ್ಟಿತಳಾಗಿ ಸ್ತ್ರೀ ಸ್ವಭಾವಕ್ಕೆ ತಕ್ಕುದಲ್ಲದ ವಿಚಿತ್ರವಾದ ಸ್ಥಿತಿಯೊಂದನ್ನು ಹೊಂದಿದಳು. ವ॥ ಅಂತಹ ಕಾದಂಬರಿಯು ಕಾಲ ಮೇಲೆ ಬಿದ್ದು ಗೋಳಾಡುತ್ತಾ ಮದಲೇಖೆಯು ಹೀಗೆಂದಳು. ೪೯. "ಗೆಳತಿ, ಅತ್ತು ಅತ್ತು ಕಣ್ಣೀರು ಹರಿದುಹೋಗುವಂತೆ ಮಾಡಿಬಿಡು. ಹೀಗೆ ಮಾತನಾಡದೆ ದುಃಖವನ್ನು ಒಳಗೇ ತುಂಬಿಕೊಳ್ಳುತ್ತಿದ್ದರೆ ನೀರಿನ ಪ್ರವಾಹವು ಬಹಳ ವಾಗಿ ತುಂಬಿಕೊಂಡು, ಕೋಡಿ ಬೀಳದ ಕೆರೆಯು ಒಡೆದುಹೋಗುವಂತೆ ನಿನ್ನ ಹೂವಿ ನಂತೆ ಕೋಮಲವಾದ ಹೃದಯವು ಒಡೆದುಹೋಗದೆ ಇರುತ್ತದೆಯೆ ? ನೀನು ಪ್ರಾಣ ವನ್ನು ನೀಗಿದರೆ ನಿನ್ನ ತಂದೆ ತಾಯಿಗಳ ಜೀವವು ಉಳಿಯುವುದಿಲ್ಲ. ಬಳಿಕ ನಿನ್ನ ತಾಯಿ ತಂದೆಗಳ ವಂಶಗಳೆರಡೂ ಉಳಿಯುವುದಿಲ್ಲವೆಂದು ನೀನು ತಿಳಿದುಕೊ." ವ॥ ಎಂದು ಹೇಳಲಾಗಿ ಕಾದಂಬರಿಯು ನಸುನಕ್ಕು ಮದಲೇಖೆಯನ್ನು ಕುರಿತು ಹೀಗೆ ಹೇಳಿದಳು. ೫೦. "ತಂಗಿ, ನೀನು ಹುಚ್ಚಿ, ಕಲ್ಲಿನಂತಿರುವ ನನ್ನ ಎದೆಯು ಒಡೆಯುತ್ತದೆಯೆ? ಹೇಳು, ಪ್ರಾಣಕಾಂತನು ನನ್ನ ಕಣ್ಣಿ ಮುಂದೆ ಹೀಗಾಗಿರಲು ನನ್ನ ಪ್ರಾಣ ನನ್ನನ್ನು ಬಿಟ್ಟು

ವ॥ ಅದಲ್ಲದೆಯುಂ

ಪಿಂದೆ ಸಮಸ್ತರಾಜ್ಯಪದಮಂ ಬಿಸುಟೆನ್ನಯ ದೂಸಱಿಂದವೇ
ಟ್ರಿಂದೆನಗೊಪ್ಪುಗೊಟ್ಟು ನಿಜದೇಹಮನೀ ಮಹಿಪಂ ಗುರುತ್ವದಿಂ
ದೋಂದಿದನೀಗಳಾಂ ಬಱಿದೆ ಕಣ್ಬನಿಯಂ ಸುರಿಯುತ್ತಮಿರ್ದೊಡಂ
ಬಂದಪುದೇನೊ ಪೇಱ್ ಕೆಳದಿ ಕೆಮ್ಮನೆ ಲಾಘವದಿಂದಮೋದುವಂ ೫೧

ವ॥ ಅದುಕಾರಣದಿಂ

ಸಾವುದೆ ಜೀವನಂ ದಲೆನಗೀ ಕಡುನಾಣ್ಗಡೆಯಾದ ಜೀವನಂ
ಸಾವೆಮು ತಂಗಿ ನೀನೆನಗೆ ಕೂರ್ಪುದು ನಿಕ್ಕುವಮಪ್ಪೊಡೆನ್ನ ಮೇ
ಲಾವರಿಸಿರ್ದ ಕೂರ್ಮೆಯಾನೆ ನಿನ್ನೊಳೆ ಮಾಡಿ ಮದೀಯ ಶೋಕದಿಂ
ಜೀವಮನಬ್ಬೆ ಪತ್ತುವಿಡದಂತಿರೆ ಮಾಡುವುದಾವುಪಾಯದಿಂ ೫೨

ವ॥ ಅದಲ್ಲದೆಯುಂ

ಪರಿಜನಮುಂ ಸಖೀಜನಮುಮೆನ್ನನೆ ಚಿಂತಿಸದಂತು ತಂಗಿ ನೀ
ನಿರು ಕರುಮಾಡದೊಳ್ ಮದುವೆಯಂ ಭವನಾಂಗಣಬಾಲಚೂತದೊಳ್
ಪರೆಪೊಲವಿಂದೆ ಮಾಧವಿಯೊಳೆನ್ನ ಪದಾಂಚನದಿಂದೆ ತಳ್ತು ಬಿ
ತ್ತರಿಸಿದಶೋಕದೊಳ್ದಳಿರ ಕೊಯ್ಯದಿರಾಭರಣಾರ್ಥಮಾಗಿಯುಂ ೫೩

ಹೋಗಿಲ್ಲ, ಬಿಟ್ಟುಹೋಗದಿದ್ದರೆ ತಾನೆ ಏನಾಯಿತು ? ಹೇಗೂ ಈಗ ನನ್ನ ಪ್ರಿಯ ತಮನ ಶರೀರವು ದೊರಕಿದೆ. ಇನ್ನು ತಂದೆ ತಾಯಿ ಬಂಧುಗಳು ಪರಿವಾರ ಇವೆಲ್ಲ ನನ ಗೇತಕ್ಕೆ ? ಈ ಶರೀರವನ್ನು ಹಿಂಬಾಲಿಸಿ ನಾನು ಕೃತಾರ್ಥಳಾಗುತ್ತೇನೆ. ವ॥ ಅದಲ್ಲದೆ ೫೧. ಗೆಳತಿ, ಈ ಮಹಾರಾಜನು ನನಗಾಗಿ ಸಮಸ್ತರಾಜ್ಯವನ್ನೂ ತೊರೆದು ಇಲ್ಲಿಗೆ ಬಂದು ಈ ದೇಹವನ್ನು ನನಗೆ ಒಪ್ಪಿಸಿ ಗೌರವವನ್ನು ಪಡೆದನು. ಈಗ ನಾನು ಸುಮ್ಮನೆ ಕಣ್ಣೀರು ಸುರಿಸುತ್ತಿದ್ದರೆ ಏನು ಬಂದಂತಾಯಿತು ? ಸುಮ್ಮನೆ ಹಗುರಳಾಗುತ್ತೇನೆ, ಅಷ್ಟೆ. ವ॥ ಆ ಕಾರಣದಿಂದ ೫೨. ನನಗೆ ಈಗ ಮರಣವೆ ಜೀವನ. ಈ ನಾಚಿಕೆ ಗೀಡಾದ ಬಾಳು ಸಾವಲ್ಲವೆ ? ನೀನು ನನ್ನನ್ನು ಪ್ರೀತಿಸುವುದು ನಿಜವಾದರೆ, ನನ್ನ ತಾಯಿಯು ನನ್ನ ಮೇಲೆ ಇಟ್ಟಿರುವ ಪ್ರೀತಿಯನ್ನು ನಿನ್ನ ಮೇಲೆ ಇಡುವಂತೆ ಮಾಡಿ, ದುಃಖದಿಂದ ಅವಳು ಪ್ರಾಣವನ್ನು ಬಿಡದಂತೆ ಯಾವುದಾದರೂ ಉಪಾಯವನ್ನು ಮಾಡು. ವ॥ ಅದಲ್ಲದೆ ೫೩. ನನ್ನ ಮಹಲಿನಲ್ಲಿ ಊಳಿಗದವರೂ ಗೆಳತಿಯರೂ ನನ್ನನ್ನೇ ನೆನೆಸಿಕೊಂಡು ದುಃಖಪಡದಂತೆ ಮಾಡು. ಮನೆಯ ಅಂಗಳದಲ್ಲಿರುವ ಎಳೆಮಾವಿನ ಮರಕ್ಕೂ ಮಲ್ಲಿಗೆಬಳ್ಳಿಗೂ ಪ್ರೀತಿಯಿಂದ ಮದುವೆಯನ್ನು ನೆರವೇರಿಸು. ನಾನು ಕಾಲಿ ನಿಂದ ಒದ್ದು ಕಸಿಮಾಡಿದ ಅಶೋಕವೃಕ್ಷದ ಚಿಗುರನ್ನು ಮುಡಿದುಕೊಳ್ಳುವುದಕ್ಕೂ ಸಹ

ಅನುರಾಗದಿನಾನೆ ಕುಮಾ
ರನ ಪಟಮಂ ಬರೆದು ಸೆಜ್ಜೆವನೆಯೊಳ್ ಸಾರ್ಚಿ
ರ್ದೆನದಂ ಪೂಜಿಸುತಿರು ಕಾ
ಮನಪಟಮಂ ಸೀಳ್ದುಕಳೆ ವೃಥಾಪೂಜಿತಮಂ ೫೪

ಚಿರಕಾಲಂ ನವೆದವು ಪಂ
ಜರದೊಳ್ ಕಾಳಿಂದಿಯೆಂಬ ಸಾರಿಕೆಯುಂ ತ
ತ್ಪರಿಹಾಸನೆಂಬ ಗಿಳಿಯುಮ
ವೆರಡಂ ನೀಂ ತಂಗಿ ಬಿಟ್ಟುಕಳೆ ಬಡವುಗಳಂ ೫೫

ಶಮದಮಯುತನೆನಿಸಿರ್ದೋ
ರ್ವ ಮುನಿಗೆ ತತ್ಕೇಳೀಶೈಲಮಂ ಕುಡು ವಕುಳ
ದ್ರುಮಕಂ ಮಾಲತಿಗಂ ಮದು
ವೆ ಮಾಡಿದೆಂ ಬಿಡಿಸವರ್ಕೆ ನೀಂ ಕಂಕಣಮಂ ೫೬

ತರಳಿಕೆಯೆಂಬ ನಮ್ಮ ಮಱಿಪುಲ್ಲೆಯನೋಂದು ತಪೋವನಕ್ಕೆ ನೀಂ
ನಿರವಿಸು ಪಂಜರಾಂತರದ ಕನ್ನಡವಕ್ಕಿಯನೊಂದು ಬಂದ ಮಾ
ಮರದೊಳೆ ಸಾರ್ಚು ಮಚ್ಚರಣ ನೂಪುರದಿಂಚರಕಾದಮಟ್ಟೆಱಿಂ
ಪರಿತರುತಿರ್ದ ಹಂಸಕನನೊಯ್ದಿರಿಸೊಂದು ಸರಃಪ್ರದೇಶದೊಳ್ ೫೭

ಕೊಯ್ಯಬೇಡ. ೫೪. ನಾನು ಪ್ರೀತಿಯಿಂದ ಯುವರಾಜನ ಚಿತ್ರವನ್ನು ಬರೆದು ಮಲಗುವ ಕೋಣೆಯಲ್ಲಿರಿಸಿದ್ದೇನೆ. ಅದನ್ನು ಪೂಜಿಸುತ್ತಿರು. ಅಲ್ಲೇ ಇರುವ ಮನ್ಮಥನ ಪಟವನ್ನು ಹರಿದು ಬಿಸಾಡು ! ೫೫, ಕಾಳಿಂದಿಯೆಂಬ ಸಾರಿಕೆಯೂ ಪರಿಹಾಸನೆಂಬ ಗಿಳಿಯೂ ಬಹಳಕಾಲದಿಂದಲೂ ಪಂಜರದಲ್ಲಿ ಕೊಳೆಯುತ್ತಿವೆ. ತಂಗಿ, ಆ ಬಡ ಪ್ರಾಣಿಗಳನ್ನು ಬಿಟ್ಟುಬಿಡು, ೫೬. ನನ್ನ ಕ್ರೀಡಾಶೈಲವನ್ನು ಅಂತರಿಂದ್ರಿಯ ಬಹಿರಿಂದ್ರಿಯಗಳನ್ನು ನಿಗ್ರಹಿಸಿರುವ ಒಬ್ಬ ಮುನಿಗೆ ಕೊಟ್ಟುಬಿಡು. ವಕುಳವೃಕ್ಷಕ್ಕೂ ಮಾಲತಿಬಳ್ಳಿಗೂ ಮದುವೆಮಾಡಿದ್ದೇನಲ್ಲ, ನೀನು ಅವುಗಳಿಗೆ ಕಂಕಣವಿಸರ್ಜನ ಮಂಗಳವನ್ನು ಮಾಡು. ೫೭. ನನ್ನ ಹುಲ್ಲೆಮರಿ ತರಳಿಕೆ ಇದೆಯಲ್ಲ, ಅದನ್ನು ಯಾವುದಾದರೂ ಒಂದು ತಪೋವನಕ್ಕೆ ಒಪ್ಪಿಸಿಬಿಡು. ಪಂಜರದೊಳಗಿರುವ ಗಿಳಿಯನ್ನು ಹಣ್ಣು ಬಿಟ್ಟಿರುವ ಯಾವುದಾದರೂ ಮಾವಿನಮರಕ್ಕೆ ಬಿಟ್ಟು ಬಾ. ನನ್ನ ಕಾಲ್ಗಡಗದ ಇಂಪಾದ ದನಿಯ ಆಸೆಯಿಂದ ಜೊತೆಯಲ್ಲೇ ಓಡಾಡುತ್ತಿರುವ ಹಂಸದಮರಿಯನ್ನು ತೆಗೆದುಕೊಂಡುಹೋಗಿ

ಪದೆದೆನ್ನಯ ವೀಣೆಯನಿರಿ
ಪುದು ನಿನ್ನಯ ತೊಡೆಯಮೇಲೆ ಮತ್ತಂ ನಿನಗಾ
ವುದಪೇಕ್ಷಿತಮಾಗಿರ್ದ
ತ್ತದೆಲ್ಲಮಂ ನೀನೆ ಕೆಳದಿ ಕೈಕೊಳ್ಳೀಗಳ್ ೫೮

ವ॥ ಆನಪ್ಪೊಡೆ ತಿಂಗಳ ತಣ್ಗದಿರ್ಗಳೊಳಮಿರ್ಪಳಿಯದ ಸಿರಿಕಂಡದಣ್ಪೊಳಮೆಡೆವಿಡದಾಲಿನೀರ್ವನಿಗಳಂ ಸಿಂಪಿಸುವ ನೀರ್ಜೊಂಪಂಗಳೊಳಂ ತುಹಿನಕರನ ತಣ್ಗದಿರ್ಗಳ ತನಿಸೋಂಕಿನಿಂ ತಣ್ಪುವಡೆದ ತಾರಹಾರಂಗಳೊಳಂ ಕರ್ಪೂರರಸದಿರ್ಪಿನಿಂ ಕುಳಿರ್ವ ತಳಿರ್ವಾಸುಗಳೊಳಂ ಉಳ್ಳಲರ್ದ ತಾವರೆಯ ನೆಯ್ದಿಲೆಸಳ ಪಸೆಗಳೊಳಂ ತಪ್ತಶೇಷಮಾಗಿ ಮಾಯ್ದೆನ್ನ ಶರೀರಮಂ ಪ್ರಿಯತಮಶರೀರಸಂಯೋಗಾಹ್ಲಾದದಿನಾರಿಸಿದಪ್ಪೆನೆಂದು ತನ್ನಂ ಮದಲೇಖೆಯಿಂ ಬಿಡಿಸಿಕೊಂಡು ಲಬ್ಧಸಂಜ್ಞೆಯುಂ ಚಿಂತಾಸ್ತಿಮಿತನಯನೆಯುಮಪ್ಪ ಮಹಾಶ್ವೇತೆಯಂ ತಳ್ಕೈಸಿ ನಿರ್ವಿಕಾರವದನೆಯಾಗಿ

ಇನಿಯನ ಬರ್ಪುದುಂ ನಿನಗೆ ಪಾರ್ದಿರವೇಟ್ಟುದು ಪುಂಡರೀಕದೇ
ವನೆ ಪತಿಯಪ್ಪನೆಂಬ ನುಡಿಯುಂ ಸದುಕಾರಣಮಾಗೆ ತಾಳ್ದು ನೀಂ
ತನುವನನೇಕಕಾಲವಿದನೆನ್ನಯ ಚಿಂತೆಯನಕ್ಕ ಮಾಣ್ಬುದಿಂ
ತೆನಗಿನಿತೊಂದು ಮೂಡುಗೆ ಭವಾಂತರದಲ್ಲಿ ಭವತ್ಸಮಾಗಮಂ ೫೯

ಒಂದು ಸರೋವರದಲ್ಲಿ ಬಿಟ್ಟು ಬಾ. ೫೮. ನನ್ನ ವೀಣೆಯನ್ನು ನೀನೇ ಪ್ರೀತಿಯಿಂದ ತೊಡೆಯಮೇಲೆ ಇಟ್ಟುಕೊಳ್ಳುತ್ತಿರು. ಆದಲ್ಲದೆ ನಿನಗೆ ಮತ್ತೆ ಯಾವುದನ್ನು ಏನು ಮಾಡಬೇಕೆಂದು ಇಷ್ಟವಾಗುತ್ತದೆಯೋ ಅದನ್ನೆಲ್ಲಾ ಹಾಗೆಯೇ ಮಾಡು. ವ॥ ನಾನಾದರೋ ಚಂದ್ರನ ತಂಪಾದ ಕಿರಣಗಳಿಂದಲೂ, ದ್ರವಗುಂದದ ಚಂದನಲೇಪನದಿಂದಲೂ, ಒಂದೇಸಮನೆ ಮಂಜುಗಡ್ಡೆಯ ನೀರುಹನಿಗಳನ್ನು ಸುರಿಸುವ ಜಲಗೃಹಗಳಿಂದಲೂ, ಚಂದ್ರನ ತಂಪುಕಿರಣಗಳ ಹಿತವಾದ ಸಂಪರ್ಕದಿಂದ ತಂಪು ಪಡೆದಿರುವ ಉಜ್ವಲವಾದ ಹಾರಗಳಿಂದಲೂ, ಕರ್ಪೂರರಸದ ದ್ರವದಿಂದ ತಂಪಾಗಿರುವ ಚಿಗುರಿನ ಹಾಸಿಗೆಗಳಿಂದಲೂ, ಚೆನ್ನಾಗಿ ಅರಳಿರುವ ತಾವರೆಯ ಹಾಗೂ ನೈದಿಲೆದಳಗಳ ಹಾಸಿಗೆಗಳಿಂದಲೂ ಬೆಂದು ಹೋಗಿ ಉಳಿದಿರುವ ನನ್ನ ಈ ಪಾಪಿದೇಹವನ್ನು ಪ್ರಿಯತಮನ ಶರೀರದ ಆಲಿಂಗನದಿಂದ ಉಂಟಾದ ಆನಂದದಿಂದ ಆರಿಸುತ್ತೇನೆ" ಎಂದು ಹೇಳಿದಳು. ತನ್ನನ್ನು ಮದಲೇಖೆಯಿಂದ ಬಿಡಿಸಿಕೊಂಡು ಮೂರ್ಛೆ ತಿಳಿದು ಎಚ್ಚೆತ್ತಿದ್ದ, ಹಾಗೂ ಚಿಂತೆಯಿಂದ ನಿಶ್ಚಲವಾದ ಕಣ್ಣುಳ್ಳ ಮಹಾಶ್ವೇತೆಯನ್ನು ತಬ್ಬಿಕೊಂಡು ನಿರ್ವಿಕಾರವಾದ ಮುಖವುಳ್ಳವಳಾಗಿ ೫೯. "ಅಕ್ಕ, ಪುಂಡರೀಕದೇವನೇ ನಿನಗೆ ಪತಿಯಾಗುವನೆಂಬ ಮಹಾಪುರುಷನ ಮಾತು ನೀನು ಬದುಕಿರಲು ಸರಿಯಾದ ಕಾರಣವಾಗಿದೆ. ಆದ್ದರಿಂದ ನಿನ್ನ ಶರೀರವನ್ನು ಬಹುಕಾಲ ಧರಿಸಿ ನಿನ್ನ ಇನಿಯನು ಬರುವವರೆಗೂ ನಿರೀಕ್ಷಿಸುತ್ತಿರು. ನನ್ನ ಚಿಂತೆಯನ್ನು ಬಿಟ್ಟುಬಿಡು. ಇನ್ನು ನನಗೆ ನಿನ್ನ ಭೇಟಿಯು ಮುಂದಿನ ಜನ್ಮದಲ್ಲಿ ಘಟಿಸಲಿ."

ವ॥ ಎಂದನಂತರಂ

ಸುರಿಯೆ ಕಚಭಾರ ಹಸ್ತದಿ
ನರಲ್ಗಳಾತ್ಮೋತ್ತಮಾಂಗದಿಂದರ್ಚಿಸಿದಳ್
ಸರಭಸಮಾಗಳ್ ಕಾದಂ
ಬರಿ ಚಂದ್ರಾಪೀಡದೇವಚರಣಾಂಬುಜಮಂ ೬೦

ವ॥ ಅಂತರ್ಚಿಸುತ್ತಮುತ್ಪುಂಜ್ಯಮಾನಪುಲಕನಿಕರೆಯುಮಸಮ ಸಾಧ್ವಸೋತ್ಕಂಪಮಾನಾಂಗಿಯುಮಮಂದಬಾಷ್ಪವೇಗಪ್ರಕ್ಷಾಳಿತವದನೆಯುಂ ಸರ್ವಾಂಗಸ್ರವತ್ಸ್ವೇದಬಿಂದು ತಾರಕಿತಗಾತ್ರೆಯುಂ ಮುಕುಳಾಯಮಾನ ನಯನಯುಗಳೆಯುಮಾಗಿ ತದವಸ್ಥನಪ್ಪ ಹೃದಯ ವಲ್ಲಭನೊಳ್ ಸಮಾಗಮಸುಖಮನನುಭವಿಸಿದಪ್ಪಳೆನಿಸಿ ವಿಗಳತ್ಸ್ವೇದಾರ್ದ್ರಾಂಗಳಪ್ಪ ಕರಕಮಲಂಗಳಿಂ ಪ್ರಿಯತಮನಂ ತೊಡೆಯ ಮೇಗಣ್ಗೆ ತೆಗೆದು ಮೊಗಮಂ ಬಿಡದೆ ನೋಡಿ ನಿಜಪ್ರಾಣಮಂ ಬಿಡಲುಜ್ಜುಗಂಗೆಯ್ವಾಗಳ್

ಅಮೃತಾಸಾರದಿನಾ ಪ್ರದೇಶಮನಿತುಂ ತೇಂಕಾಡಲಲ್ಲಿರ್ದರೆ
ಲ್ಲಮಿದೇನೋ ಕವಿತರ್ಪುದೀಗಳೆನುತಂ ತಳ್ಪೊಯ್ವ ತಣ್ಪಂದಮೆ
ಯ್ದೆ ಮುಟುಂಗುತ್ತಿರಲುಣ್ಮಿತೊರ್ವೊದಲೊಳವ್ಯಕ್ತಸ್ವರೂಪಂ ಸುಧಾಂ
ಶುಮಯೂಖೋಜ್ವಲಮಂತರಿಕ್ಷತಲದೊಳ್ ಹೈಮಪ್ರಭಾಮಂಡಲಂ ೬೧

ವ॥ ಎಂದು ಹೇಳಿದಳು. ೬೦. ಬಳಿಕ ಕಾದಂಬರಿಯು ತನ್ನ ಕೇಶಪಾಶದಿಂದ ಹೂವುಗಳು ಉದುರುತ್ತಿರಲು ತನ್ನ ತಲೆಯಿಂದ ಚಂದ್ರಾಪೀಡನ ಅಡಿದಾವರೆಗಳನ್ನು ಪೂಜಿಸಿದಳು. (ಟಿ) ಅವನಿಗೆ ತಲೆಮುಟ್ಟಿ ನಮಸ್ಕರಿಸಿದಳು ಎಂದರ್ಥ. ವ॥ ಹಾಗೆ ಪೂಜಿಸುತ್ತ ದಟ್ಟವಾಗಿ ಏಳುತ್ತಿರುವ ರೋಮಾಂಚನವುಳ್ಳವಳಾಗಿಯೂ, ಹೆಚ್ಚಾದ ಹೆದರಿಕೆಯಿಂದ ನಡುಗುತ್ತಿರುವ ದೇಹವುಳ್ಳವಳಾಗಿಯೂ, ಅಧಿಕವಾದ ಆನಂದಬಾಷ್ಪ ಪ್ರವಾಹದಿಂದ ತೊಳೆಯಲ್ಪಟ್ಟ ಕಣ್ಣುಗಳುಳ್ಳವಳಾಗಿಯೂ, ಆ ಸ್ಥಿತಿಯಲ್ಲಿರುವ ಹೃದಯವಲ್ಲಭನಲ್ಲೂ ರತಿಸುಖವನ್ನು ಅನುಭವಿಸುವಂತಿದ್ದು ಹರಿಯುತ್ತಿರುವ ಬೆವರಿನಿಂದ ಒದ್ದೆಯಾದ ಕರಕಮಲಗಳಿಂದ ಪ್ರಿಯತಮನನ್ನು ತೊಡೆಯಮೇಲೆ ಮಲಗಿಸಿಕೊಂಡು, ಅವನ ಮುಖವನ್ನೇ ಬಿಡದೆ ನೋಡುತ್ತಾ, ಪ್ರಾಣವನ್ನು ಬಿಡಲು ಹವಣಿಸುತ್ತಿದ್ದಳು. ೬೧. ಕೂಡಲೆ ಆಕಾಶದಲ್ಲಿ ಅವ್ಯಕ್ತಾಕಾರವುಳ್ಳ ಚಂದ್ರನ ಕಿರಣಗಳಂತೆ ಉಜ್ವಲವಾದ ಹೊಂಬಣ್ಣದ ಕಾಂತಿಯ ಸಮೂಹವು ಆವಿರ್ಭವಿಸಿತು. ಅದರಿಂದ ಆ ಪ್ರದೇಶವೆಲ್ಲವೂ ಅಮೃತದ ಜಡಿಮಳೆಯಿಂದ ತೇಲಿಹೋಗುತ್ತಿರುವಂತೆ ಕಾಣುತ್ತಿತ್ತು. ಅಲ್ಲಿದ್ದವರೆಲ್ಲ 'ಇದೇನೋ ಒಂದು ಕವಿಯುತ್ತಿದೆಯಲ್ಲ' ಎಂದು ಆಶ್ಚರ್ಯಭರಿತರಾದರು. ಮತ್ತು

ವ॥ ಅಂತಾ ಪ್ರಭಾಮಂಡಲದ ದೆಸೆಯಿನಮೃತವೃಷ್ಟಿಯಂ ಪಸರಿಸುವಂತದೊಂದು ದಿವ್ಯನಿನದಂ

ಒಸೆದಂದಾಂ ನಿನ್ನನಾಶ್ವಾಸಿಸಿದೆನೆಲೆ ಮಹಾಶ್ವೇತೆ ಮತ್ತಿಂದುಮಾಶ್ವಾ
ಸಿಸಲೆಟ್ಟಿಂದೆಂ ಮದೀಯಾಮೃತಮಯಕರ ಸಂದೋಹದಿಂ ನಿಚ್ಚಮಾನ
ರ್ಚಿಸುತಿರ್ದೆಂ ಪುಂಡರೀಕೋಜ್ವಲವಪುವನದಿರ್ದತ್ತು ಮಲ್ಲೋಕದೊಳ್ ನಿ
ನ್ನ ಸಮಾಯೋಗಾರ್ಥಮಿನ್ನುಂ ತೊಳಗಿ ಬೆಳಗುತಂ ನಿತ್ಯರೂಪತ್ವದಿಂದಂ ೬೨

ಇದು ಬೇರ್ವೆರ್ಯೊಕ್ಕ ಯೋಗೀಂದ್ರನ ತನುವಿನವೊಲ್ ಮುನ್ನಿನಂತಿರ್ಪುದ
ಲ್ಲದೆಯುಂ ಕಾದಂಬರೀದೇವಿಯ ಕರತಲಸಂಸ್ಪರ್ಶಮಂ ತಾಳ್ದಿಕೊಂಡಿ
ರ್ದುದು ಬೇಱೊಂದೆನ್ನ ತೇಜೋಮಯಮಿದು ಪೆಱತೇಂ ನಿತ್ಯಮೀ ದೇಹಮೀದೇ
ಹದೆ ಚಂದ್ರಾಪೀಡದೇವಂ ಕತಿಪಯದಿನದಿಂದಿಕೇಯೊಳ್ ಕೂಡಿದಪ್ಪಂ ೬೩

ವ॥ ಅದಱಿನೀ ದೇಹಮನತಿಪ್ರಯತ್ನದಿನಾರಾಧಿಸುತ್ತಿರ್ಪುದೆಂದು ನುಡಿದು ಮಾಣ್ಬು ದುಮಿದೇನೆನುತ್ತಂ ಕಾದಂಬರಿವೆರಸು ಸಕಲರಾಜಲೋಕಂ ವಿಸ್ಮಯಾಕ್ಷಿಪ್ತಹೃದಯರುಂ ಮಂದೀ ಕೃತಮರಣವ್ಯತಿಕರರುಮಾಗಿರ್ಪುದುಮನಂತರಂ ಪತ್ರಲೇಖೆ ತತ್ಪ್ರಭಾಮಂಡಲಗಳಿತ ಹಿಮ

ಅದರ ತಂಪಿನಲ್ಲಿ ಮುಳುಗಿಹೋದರು. ವ॥ ಆಗ ಆ ಬಗೆಯಾದ ಪ್ರಭಾಮಂಡಲದ ದೆಸೆಯಿಂದ ಅಮೃತದ ಮಳೆಯು ಹರಡುವಂತೆ ಒಂದು ದಿವ್ಯಧ್ವನಿಯು ಹೀಗೆ ಕೇಳಿ ಸಿತು. ೬೨. "ಮಹಾಶ್ವೇತೆ, ಹಿಂದೊಮ್ಮೆ ನಾನು ನಿನ್ನನ್ನು ಮಮತೆಯಿಂದ ಸಮಾ ಧಾನಪಡಿಸಿದ್ದು ಸರಿಯಷ್ಟೆ. ಈಗ ಮತ್ತೊಮ್ಮೆ ಸಮಾಧಾನಪಡಿಸಲು ಬಂದಿದ್ದೇನೆ. ಪುಂಡರೀಕನ ಶರೀರವನ್ನು ನನ್ನ ಲೋಕದಲ್ಲಿ ಅಮೃತಮಯವಾದ ಕಿರಣಗಳೆಂಬ ಕೈಗಳಿಂದ ಪೂಜಿಸುತ್ತಿದ್ದೇನೆ. (ಶೀತವಾಗಿರುವಂತೆ ಮಾಡಿ ಜೋಪಾನವಾಗಿಟ್ಟಿದ್ದೇನೆ.) ಅದು ಅಲ್ಲಿ ನಿನ್ನ ಸಮಾಗಮಕ್ಕಾಗಿ ತೊಳಗಿ ಬೆಳಗುತ್ತಾ ಯಾವ ವಿಕಾರವನ್ನೂ ಹೊಂದದೆ ಸ್ಥಿರವಾಗಿದೆ. ೬೩. ನನ್ನ ತೇಜೋಮಯವಾದ ಈ ಶರೀರವು ಪರಕಾಯ ಪ್ರವೇಶಮಾಡಿದ ಯೋಗೀಶ್ವರನ ಶರೀರದಂತೆ ಕಾದಂಬರೀದೇವಿಯ ಕರತಲಸ್ಪರ್ಶ ವನ್ನು ಅನುಭವಿಸುತ್ತಾ ಇಲ್ಲಿ ಇದ್ದಂತೆಯೇ ಯಾವಾಗಲೂ ಇರುತ್ತದೆ. ಇನ್ನೇನು ? ಕೆಲವು ದಿನಗಳು ಕಳೆದನಂತರ ಚಂದ್ರಾಪೀಡನು ಇದೇ ದೇಹದಿಂದ ಇವಳನ್ನು ಸೇರು ತ್ತಾನೆ. ವ॥ ಆದ್ದರಿಂದ ಈ ದೇಹವನ್ನು ಬಹಳ ಎಚ್ಚರಿಕೆಯಿಂದ ಉಪಚರಿಸುತ್ತಿರ ಬೇಕು" ಎಂದು ಹೇಳಿ ಆ ಪುರುಷನು ಮಾಯವಾದನು. ಆಗ ಕಾದಂಬರಿಯೊಂದಿಗೆ ರಾಜರೆಲ್ಲರೂ ಇದೇನೆಂದು ನಿಬ್ಬೆರಗಿನಿಂದ ತಮ್ಮ ತಮ್ಮ ಮರಣಪ್ರಯತ್ನವನ್ನು ಮುಂದುವರಿಸಲಿಲ್ಲ. ಬಳಿಕ ಪತ್ರಲೇಖೆಯು ಆ ಪ್ರಭಾಮಂಡಲದಿಂದ ಹೊಮ್ಮಿದ

ಸ್ಪರ್ಶದಿಂ ಲಬ್ಧಸಂಜ್ಞೆಯಾಗಿ ಮರುಳ್ಗೊಂಡಂತೆ ಇಂದ್ರಾಯುಧಮಿರ್ಪೆಡೆಗೆ ಪರಿತಂದು ಪರಿವರ್ಧಕಹಸ್ತದಿಂದದು ತೆಗೆದು ವಾಹನಮಿಲ್ಲದೆ ಚಂದ್ರಾಪೀಡದೇವನೇಕಾಕಿಯಾಗಿಂತು ದೂರಮೆಯ್ದಲೆಮ್ಮನ್ನರಿರ್ಪುದನುಚಿತಮೆಂದು ನುಡಿದಾಯಿಂದ್ರಾಯುಧವನೊಡಗೊಂಡಚ್ಛೋದಸರದೊಳ್ ಮುಳುಂಗಲೊಡಂ

ಪೊರೆದು ಸರೋಜರೇಣುಗಳಿನೊಂದಳಿೞೊಳೊಂದು ತೊಡಂಕಿ ವಾಃಕಣೋ
ತ್ಕರದೊಡಗೂಡಿ ಕಣ್ಗೆ ಕವಿತರ್ಪ ಜಟಾಳಿಯನಿರ್ಕೆಲಕ್ಕೆವೋ
ಸರಿಸುತವಬ್ಜತಂತುವಿನ ಜನ್ನಿವರಂ ಸುರಭೂಜವಲ್ಕಮೊ
ಪ್ಪಿರೆ ಪೊಱಮಟ್ಟನಾ ಕೊಳದಿನಾಗಳದೊರ್ವ ಕುಮಾರತಾಪಸಂ ೬೪

ವ॥ ಅಂತು ಪೊಱಮಟ್ಟು ಸುಹೃದ್ವಿಯೋಗವಿಹ್ವಲಿತಹೃದಯನಪ್ಪ ಕಪಿಂಜಲನುದ್ಬಾಷ್ಪಪರ್ಯಾಕುಲವ್ಯಾಬದ್ಧಲಕ್ಷ್ಯದೃಷ್ಟಿಯುಪ್ಪ ಮಹಾಶ್ವೇತೆಯುನೆಯ್ದೆವಂದು

ಮಱುವುಟ್ಟಿಗನಾದನನೇ
ನಱಿವೋ ನೀನೆನ್ನನೆನೆ ಕಪಿಂಜಲಮುನಿಯೆಂ
ದಱಿದತಿಸಂಭ್ರಮದಿಂ ಬಂ
ದೆಱಗಿದಳಾ ಸತಿ ತದೀಯ ಚರಣದ್ವಯದೊಳ್ ೬೫

ಶೈತ್ಯದ ಸ್ಪರ್ಶದಿಂದ ಎಚ್ಚರವನ್ನು ಪಡೆದು, ಹುಚ್ಚುಹಿಡಿದವಳಂತೆ ಇಂದ್ರಾಯುಧವಿದ್ದ ಸ್ಥಳಕ್ಕೆ ಬಂದು, ಅದರ ಪಾಲಕನ ಕೈಯಿಂದ ಅದನ್ನು ತೆಗೆದುಕೊಂಡು "ಚಂದ್ರಾಪೀಡ ಮಹಾರಾಜನು ಹೀಗೆ ವಾಹನವಿಲ್ಲದೆ ಏಕಾಕಿಯಾಗಿ ದೂರ ಪ್ರಯಾಣ ಮಾಡುತ್ತಿರುವುದನ್ನು ನೋಡಿಕೊಂಡು ನಮ್ಮಂತಹವರು ಸುಮ್ಮನಿರುವುದು ಸರಿಯಲ್ಲವೆಂದು" ಹೇಳಿ, ಇಂದ್ರಾಯುಧವನ್ನೂ ಜೊತೆಯಲ್ಲೇ ತೆಗೆದುಕೊಂಡು ಹೋಗಿ ಅಚ್ಛೋದಸರೋವರದಲ್ಲಿ ಮುಳುಗಿಬಿಟ್ಟಳು! ೬೪. ಕೂಡಲೆ ಆ ಕೊಳದಿಂದ ಒಬ್ಬ ಮುನಿಕುಮಾರನು ಮೇಲಕ್ಕೆದ್ದನು! ಅವನ ಜಟೆಗಳು ಕಮಲದ ಧೂಳುಗಳಿಂದ ಕೂಡಿಕೊಂಡು ಒಂದಕ್ಕೊಂದು ತೊಡರಿಕೊಂಡಿದ್ದುವು. ಅಲ್ಲದೆ ನೀರಿನ ಹನಿಗಳಿಂದ ತುಂಬಿದ್ದವು. ಆ ಜಟೆಗಳು ಕಣ್ಣುಗಳಿಗೆ ಮುತ್ತುತ್ತಿರಲು ಅವನು ಅವನ್ನು ಎರಡು ಕಡೆಗೂ ಸರಿಸುತ್ತಿದ್ದನು. ಅವನು ಧರಿಸಿದ್ದ ತಾವರೆದಂಟಿನ ಎಳೆಗಳ ಜನಿವಾರವೂ, ಉಟ್ಟಿದ್ದ ಕಲ್ಪವೃಕ್ಷದ ನಾರುಮಡಿಯೂ ಶೋಭಿಸುತ್ತಿದ್ದುವು! ವ॥ ಹಾಗೆ ಮೇಲಕ್ಕೆಬಂದು ಗೆಳೆಯನ ಅಗಲಿಕೆಯಿಂದ ದುಃಖಿಗೊಂಡ ಮನಸ್ಸುಳ್ಳ ಆ ಕಪಿಂಜಲನು ಉಕ್ಕುತ್ತಿರುವ ಕಣ್ಣೀರಿನಿಂದ ಕಣ್ಣು ಕಾಣದಿದ್ದರೂ ತನ್ನ ಕಡೆಗೇ ನೋಡುತ್ತಿರುವ ಮಹಾಶ್ವೇತೆಯ ಹತ್ತಿರಕ್ಕೆ ಬಂದು ೬೫. "ಅಮ್ಮ, ಬೇರೆ ಜನ್ಮವನ್ನು ಎತ್ತಿ ಈಗ ಬಂದಿರುವ ನನ್ನನ್ನು ನೀನು ಗುರುತಿಸಬಲ್ಲೆಯಾ?" ಎಂದು ಮಹಾಶ್ವೇತೆಯನ್ನು ಕೇಳಿದನು. ಕೂಡಲೆ ಅವಳು ಈತನು ಕಪಿಂಜಲಮುನಿಯೆಂದು ತಿಳಿದು, ಬಹಳ ಸಂಭ್ರಮದಿಂದ ಬಂದು

ಮುನಿಪತಿ ಲಜ್ಜೆಗೆಟ್ಟು ಬೆಸಗೊಂಡಪೆನೆಂತೆನೆ ಪುಂಡರೀಕದೇ
ವನ ಪೆಱಗಿಂತು ಜೀವಿಸುತಮಿರ್ದವಳೇ ಬೆಸಸಿಂ ಮಹಾನುಭಾ
ವನನಿರದೊಯ್ದನಾವನಿರಿಸಿಟ್ಟನದೆಲ್ಲಿ ತದೀಯ ವಾರ್ತೆಯೇ
ನಿನಿತುವರಂ ವಿಲಂಬಿಸಿಯುಮೊರ್ವರೆ ಬಂದಿರಿದಾವಕಾರಣಂ ೬೬

ವ॥ ಎಂದ ಮಹಾಶ್ವೇತೆಗೆ ಕಪಿಂಜಲನಿಂತೆಂದಂ ನೀನಂದಂತು ಬಾಯಱಿದು ಪಳವಿಸುತ್ತಿರೆಯುಂ ನಿನ್ನನೇಕಾಕಿಯನೀಡಾಡಿ ವಯಸ್ಯಸ್ನೇಹದಿನಾಂ ಪುಂಡರೀಕನ ಕೊಂಡೊಯ್ದ ಪುರುಷನ ಬೞಿಸಂದು ಮದೀಯಸಖನನೆತ್ತಲೊಯ್ದಪೆಯೆಂಬುದುಮಾತನೆನಗೆ ಮಱುಮಾತುಗುಡದೆ ಗೀರ್ವಾಣಮಾರ್ಗದೊಳನೇಕ ವೈಮಾನಿಕಜನಪ್ರಣಮ್ಯಮಾನನುಂ ದಿವ್ಯಾಂಗನಾವಲೋಕ್ಯಮಾನನುಮಾಗಿ ಪೋಗುತ್ತಮಂಬರಸರಃಕುಮುದಾಕರವೆನಿಪ ತಾರಕಾಚಕ್ರಮನತಿಕ್ರಮಿಸಿ ಚಂದ್ರಲೋಕಮಂ ಪೊಕ್ಕು ಚಂದ್ರಕಾಂತಮಣಿಮಂಟಪದೊಳ್ ಪುಂಡರೀಕನ ಶರೀರಮನಿರಿಸಿ ಮಗುೞ್ದೆನ್ನಂ ನೋಡಿ

ಅಱಿಯೈ ಚಂದ್ರನೆನಾಂ ಕಪಿಂಜಲಕ ನೀನೀ ಪುಂಡರೀಕಾರ್ಥಮೀ
ತೆಱದಿಂ ಪಿಂದೆಯಿದೇಕೆ ಬಂದೆ ಗಡ ಲೋಕಾನುಗ್ರಹಂಗೆಯ್ವುದೊ
ಸಱಿನಾಂ ಬಂದುದಯಂಗೆಯುತ್ತಮಿರಲೀ ಕಾಮಾತುರಂ ಶಾಪ್ತಂ
ಬೞಿದಿಂತೆನ್ನನದೋಷಿಯಂ ಕುರಿತು ಕೋಪೋದ್ರೇಕದಿಂ ನೋಡಿದಂ ೬೭

ಅವನ ಕಾಲುಗಳಿಗೆ ನಮಸ್ಕರಿಸಿದಳು. ೬೬. "ಮುನೀಶ್ವರ, ಪುಂಡರೀಕದೇವನು ಅಗಲಿ ಹೋದರೂ ಬದುಕಿರುವ ನಾನು ನಾಚಿಕೆಯಿಲ್ಲದೆ ಕೇಳುತ್ತಿದ್ದೇನೆ. ಆ ಮಹಾನುಭಾವನನ್ನು ಇಲ್ಲಿಂದ ಎತ್ತಿಕೊಂಡು ಹೋದವನು ಯಾರು ? ಎಲ್ಲಿಟ್ಟಿದ್ದಾನೆ ? ಅವನ ಸಮಾಚಾರವೇನು ? ನೀವು ಇಷ್ಟು ದೀರ್ಘಕಾಲ ವಿಳಂಬಮಾಡಿಕೊಂಡು ಬಂದರೂ ಒಬ್ಬರೇ ಬರಲು ಕಾರಣವೇನು? ತಿಳಿಸಿ." ವ॥ ಎಂದು ಕೇಳಿದಳು. ಮಹಾಶ್ವೇತೆಯನ್ನು ಕುರಿತು ಕಪಿಂಜಲನು ಹೀಗೆ ಹೇಳಿದನು. "ಅಮ್ಮ ! ನೀನು ಅಂದು ಹಾಗೆ ಬಾಯಿ ಬಾಯಿಬಿಟ್ಟು ಗೋಳಾಡುತ್ತಿದ್ದರೂ ಏಕಾಕಿನಿಯಾದ ನಿನ್ನನ್ನು ತೊರೆದು, ಸ್ನೇಹಿತನ ಮೇಲಿನ ಮಮತೆಯಿಂದ ಪುಂಡರೀಕನನ್ನು ಕೊಂಡೊಯ್ಯುತ್ತಿದ್ದ ವ್ಯಕ್ತಿಯ ಹತ್ತಿರಕ್ಕೆ ಹೋಗಿ ನನ್ನ ಗೆಳೆಯನನ್ನು ಎಲ್ಲಿಗೆ ತೆಗೆದುಕೊಂಡು ಹೋಗುತ್ತಿರುವೆ ? ಎಂದು ಕೇಳಿದೆನು. ಅವನು ಮರುಮಾತಾಡದೆ ಆಕಾಶಮಾರ್ಗದಲ್ಲಿ ವಿಮಾನಚಾರಿಗಳಾದ ಅನೇಕ ದೇವತೆಗಳಿಂದ ನಮಸ್ಕರಿಸಲ್ಪಡುವವನಾಗಿಯೂ, ದೇವತಾಸ್ತ್ರೀಯರಿಂದ ನೋಡಲ್ಪಡುವವನಾಗಿಯೂ ಹೋಗುತ್ತಾ, ಆಕಾಶವೆಂಬ ಸರೋವರದಲ್ಲಿ ನೈದಿಲೆಗಳ ಸಮೂಹದಂತಿರುವ ನಕ್ಷತ್ರ ಮಂಡಲವನ್ನು ಅತಿಕ್ರಮಿಸಿ ಚಂದ್ರಲೋಕವನ್ನು ಸೇರಿದನು. ಅಲ್ಲಿ ಚಂದ್ರಕಾಂತಶಿಲೆಯಿಂದ ನಿರ್ಮಿತವಾದ ಮಂಡಪದಲ್ಲಿ ಪುಂಡರೀಕನ ಶರೀರವನ್ನು ಮಲಗಿಸಿ ನನ್ನನ್ನು ನೋಡಿ, ೬೭. "ಕಪಿಂಜಲ, ನನ್ನನ್ನು ಚಂದ್ರನೆಂದು ತಿಳಿ ! ನೀನು ಈ ಪುಂಡರೀಕನಿಗಾಗಿ ಹೀಗೇಕೆ ಹಿಂದೆ ಬಂದೆ? ನಾನು ಲೋಕಾನುಗ್ರಹಕ್ಕಾಗಿ ಹುಟ್ಟಿ ಮೇಲೇರಿ ಬಂದರೆ,

ವ॥ ಅಂತು ನೋಡಿ

ಎಲೆ ಚಂದ್ರಹತಕ ಮದನನ
ಬಲದಿಂದಂ ಮೇಲೆವರಿದು ಕೊಂದಿಂತೆನ್ನಂ
ನಿಲಲಱಿಯೆಯಿರ್ಪೆ ನೀಂ ಮ
ರ್ತ್ಯಲೋಕದೊಳ್ ಪುಟ್ಟುನುತ್ತೆ ಶಾಪಂಗೊಟ್ಟಂ ೬೮

ಇವನೆನಗೆ ನಿರಪರಾಧಂ
ಗವಿಚಾರದೆ ಶಾಪಮೀಯೆ ನೀನುಂ ಸುಖದುಃ
ಖವನೆನ್ನೊಡನನುಭವಿಸೆಂ
ದಿವಂಗೆ ಮುನಿದಾನುಮಂತೆ ಶಾಪಂಗೊಟ್ಟೆಂ ೬೯

ವ॥ ಅಂತು ಶಾಪವಿತ್ತು ಸ್ಮರನ್ಮಯೂಖಸಂಭವೆಯರೆನಿಸಿದಚ್ಚರಸಿಯರೊಳುದಯಿಸಿದ ಗೌರೀತನೂಜೆಯಪ್ಪ ಮಹಾಶ್ವೇತೆಯಿಂ ಸ್ವಯಂವೃತನಾದನಪ್ಪುದಱಿಪಗತಾಮರ್ಷಣನಾಗಿ ಪುಂಡರೀಕನ ಶರೀರಮಂ ಕಿಡದಂತು ತಂದು ಮತ್ತೇಜದಿಂದಾಪ್ಯಾಯಮಾನಮಾಗೆ ಶಾಪಮೋಕ್ಷ ಪರ್ಯಂತಮಿರಿಸಿದಪ್ಪೆಂ ನೀನುಮೀತನ ವೃತ್ತಾಂತಮನವರಯ್ಯನಪ್ಪ ಶ್ವೇತಕೇತುವಿಂಗೆ ನಿವೇದಿಸಾ ಮಹಾನುಭಾವನೀತಂಗಾಯುಷ್ಕಾಮ ಹೋಮಾದಿಕಮನೊಡರ್ಚಿದಪನೆಂದೆನ್ನಂ

ಕಾಮಪೀಡಿತನಾದ ಇವನು ಸಾಯುವ ಸ್ಥಿತಿಯಲ್ಲಿದ್ದು ನನ್ನನ್ನು ಕೋಪಾತಿರೇಕದಿಂದ ನೋಡಿದನು. ವ॥ ಹಾಗೆ ನೋಡಿ ೬೮. "ಎಲೈ, ನೀಚನಾದ ಚಂದ್ರನೆ, ನೀನು ಮನ್ಮಥನ ಬೆಂಬಲದಿಂದ ಹೀಗೆ ಮೇಲೆ ಬಿದ್ದು ನನ್ನನ್ನು ಕೊಲ್ಲುತ್ತಿದ್ದೀಯೆ! ಆದ್ದರಿಂದ ನೀನೂ ಉಳಿಯಲಾರೆ. ಎರಡು ಸಲ ಭೂಮಿಯಲ್ಲಿ ಹುಟ್ಟು!" ಎಂದು ನನಗೆ ಶಾಪವನ್ನು ಕೊಟ್ಟನು. ೬೯. ಇವನು ಹೀಗೆ ಏನೂ ತಪ್ಪಿಲ್ಲದ ನನಗೆ ಶಾಪವನ್ನು ಕೊಡಲು ನಾನೂ ಕೋಪಗೊಂಡು "ನೀನೂ ನನ್ನ ಜೊತೆಯಲ್ಲಿ ಹುಟ್ಟಿ ನನ್ನಂತೆಯೆ ಕಷ್ಟಸುಖಗಳನ್ನು ಅನುಭವಿಸು!" ಎಂದು ಇವನಿಗೂ ಶಾಪವನ್ನು ಕೊಟ್ಟೆನು. ವ॥ ಹಾಗೆ ಶಾಪವನ್ನು ಕೊಟ್ಟು ಆಮೇಲೆ "ಇವನು ನನ್ನ ಕಿರಣಗಳಿಂದ ಹುಟ್ಟಿರುವ ಅಪ್ಸರೆಯರ ಕುಲದಲ್ಲಿ ಜನಿಸಿರುವ ಗೌರಿಯ ಮಗಳಾದ ಮಹಾಶ್ವೇತೆಯಿಂದ ಪತಿಯಾಗಿ ವೃತನಾಗಿದ್ದಾನೆ ಎಂದು ಆಲೋಚಿಸಿ, ಕೋಪವನ್ನು ಬಿಟ್ಟು ಇವನ ಶರೀರವನ್ನು ಕೆಡದಿರಲೆಂದು ತಂದು ನನ್ನ ಕಿರಣಗಳಿಂದ ಶೀತಲ ಮಾಡುತ್ತಾ ಅವಧಿ ಕಳೆಯುವವರೆಗೂ ಇಟ್ಟಿರುತ್ತೇನೆ. ನೀನೂ ಇವನ ವೃತ್ತಾಂತವನ್ನು ಇವನ ತಂದೆಯಾದ ಶ್ವೇತಕೇತುವಿಗೆ ಅರಿಕೆಮಾಡು. ಆ ಮಹಾನುಭಾವನು ಇವನಿಗೆ ಆಯುಷ್ಯಹೋಮವೇ ಮೊದಲಾದ ಶಾಂತಿಕರ್ಮವನ್ನು ಮಾಡಬಹುದು" ಎಂದು ನನ್ನನ್ನು ಕಳುಹಿಸಿದನು ಬಳಿಕ ನಾನು ಮತ್ತೆ ಆಕಾಶಮಾರ್ಗದಲ್ಲಿ ಬರುತ್ತಾ, ಸ್ನೇಹಿತನ ದುಃಖದಿಂದ ಕಣ್ಣೇ ಕಾಣದೆ ಒಬ್ಬ ವಿಮಾನಚಾರಿಯನ್ನು ಥಟ್ಟನೆ ದಾಟಿಬಿಟ್ಟೆನು. ಅವನು ಕೋಪಾಗ್ನಿಯಿಂದ ನನ್ನನ್ನು ಸುಟ್ಟುಬಿಡುವಂತೆ

ವಿಸರ್ಜಿಸುವುದುವಾಂ ಸುಹೃಚ್ಛೋಕಾಂಧನೆಂ ಮಗುಳ್ದುಮರ್ತ್ಯಮಾರ್ಗದೊಳ್ ಪರಿಯುತ್ತ ಮೊರ್ವ ವೈಮಾನಿಕನು ಭರದಿಂ ದಾಂಟುವುದುಮಾತಂ ಕ್ರೋಧಾನಲದಿನೆನ್ನನುರ್ಿಪುವಂತು ಕೆಚ್ಚನಾಗೆ ಬಿಚ್ಚನೆ ಬಿಟ್ಟ ದಿಟ್ಟಿಗಳಿಂ ನೋಡಿ

ಎಲೆ ದುಶ್ಶಿಕ್ಷಿತ ನಿನ್ನ ಕಣ್ಣೊಡೆದುವೇ ವಿಸ್ತೀರ್ಣಮಪ್ಪೀ ನಭ
ಸ್ಥಲದೊಳ್ ಪೋಗುತಮೆನ್ನನಿಂತುರದೆ ನೀಂ ನಿನ್ನೊಂದು ವಿದ್ಯಾತಪೋ
ಬಲದಿಂ ದಾಂಟಿದೆ ವಾಹದಂತಿರದಱಿಂ ವಾಹತ್ವಮಂ ತಾಳ್ದಿ ಭೂ
ತಲದೊಳ್ ಪೋ ನೆಲಸೆಂದು ಕೊಟ್ಟನೆನಗಾ ವೈಮಾನಿಕಂ ಶಾಪಮಂ ೭೦

ವ॥ ಅಂತು ಶಾಪಂಗುಡಲಾಂ ನಡುನಡುಗಿ ಕೆಯ್ಗಳಂ ಮುಗಿದು ಮಹಾಪುರುಷಾ ನಿನ್ನನಾಂ ವಯಸ್ಯಶೋಕಾಂಧನೆಂ ಕಾಣದೆ ದಾಂಟಿದೆನಲ್ಲದವಜ್ಞೆಯಿಂ ದಾಂಟಿದನಲ್ಲೇನಾದೊಡಮೆನಗೆ ಶಾಪಾಂತಕಾರಣಮಂ ಬೆಸಸೆಂಬುದುಂ ನೀನಾವಂಗೆ ವಾಹನಮಾಗಿರ್ಪೆಯಾತಂ ಮಱುಮೆಯ್ಗೆ ಸಲ್ವಸಮಯದೊಳಚ್ಛೋದಸರೋವರಸಲಿಲದೊಳ್ ಮಱುಂಗೆ ವಿಗತಶಾಪನಪ್ಪೆಯೆಂದು ವೈಮಾನಿಕನೆನಗೆ ಪೇೞ್ವುದುಮಾನಾತಂಗೆ ಮತ್ತಮಿಂತೆಂದೆಂ

ಜನಿಯಿಸಿದಪರೆನ್ನಯ ಕೆಳೆ
ಯನುಮಾ ಚಂದ್ರಮನುಮಿನ್ನಿಳಾತಳದೊಳವರ್
ಜನಿಯಿಸಿದಲ್ಲಿಯೆ ಜನಿಯಿಸು
ವಿನಿತಂ ನೀಂ ದಯೆಯಿನೆನಗೆ ಮಾಡಲೆವೇೞ್ಕುಂ ೭೧

ಕೆಂಪಾದ ಹಾಗೂ ಅಗಲವಾಗಿ ಬಿಟ್ಟ ಕಣ್ಣುಗಳಿಂದ ನೋಡಿ ೭೦. "ಎಲೋ ಅವಿನೀತ, ನಿನ್ನ ಕಣ್ಣು ಒಡೆದುಹೋಗಿದೆಯೆ ? ಇಷ್ಟು ಅಗಲವಾದ ಆಕಾಶದಲ್ಲಿ ಹೋಗುವಾಗ ನನ್ನನ್ನು ಹೀಗೆ ಆತುರದಿಂದ ಕುದುರೆಯಂತೆ ವಿದ್ಯೆ ಮತ್ತು ತಪಸ್ಸಿನ ಕೊಬ್ಬಿನಿಂದ ದಾಟಿಕೊಂಡೇ ಹೋಗುತ್ತಿದ್ದೀಯೆ ! ಆದ್ದರಿಂದ ನೀನು ಭೂಮಿಯಲ್ಲಿ ಕುದುರೆಯಾಗಿ ಹುಟ್ಟಿಜೀವಿಸು! ಹೋಗು" ಎಂದು ಆ ವಿಮಾನಚಾರಿಯು ನನಗೆ ಶಾಪವನ್ನು ಕೊಟ್ಟನು. ವ॥ ಹಾಗೆ ಶಾಪಕೊಡಲಾಗಿ ನಾನು ನಡುನಡುಗಿ ಕೈಗಳನ್ನು ಮುಗಿದು "ಮಹಾತ್ಮನೆ, ನನ್ನ ಮಿತ್ರನ ಮರಣದಿಂದಾದ ಶೋಕದಿಂದ ಕಣ್ಣುಕಾಣದೆ ನಿನ್ನನ್ನು ದಾಟಿಬಿಟ್ಟೆನಲ್ಲದೆ ತಿರಸ್ಕಾರದಿಂದ ಖಂಡಿತ ದಾಟಲಿಲ್ಲ. ಏನಾದರೂ ಆಗಲಿ, ನನಗೆ ಯಾವಾಗ ಶಾಪವು ನಿವೃತ್ತಿಯಾಗುವುದೆಂಬುದನ್ನು ತಿಳಿಸಬೇಕೆಂ"ದು ಬೇಡಿಕೊಂಡೆನು. ಅದಕ್ಕೆ ಅವನು "ನೀನು ಯಾರಿಗೆ ವಾಹನವಾಗಿರುತ್ತೀಯೋ ಅವನು ಬೇರೆ ಶರೀರಕ್ಕೆ ಹೋಗುವ ಸಮಯದಲ್ಲಿ ಅಚ್ಛೋದಸರೋವರದ ನೀರಿನಲ್ಲಿ ಮುಳುಗಿದರೆ, ನಿನಗೆ ಶಾಪ ನಿವೃತ್ತಿಯುಂಟಾಗುವುದು." ಎಂದು ನನಗೆ ಹೇಳಿದನು. ಬಳಿಕ ನಾನು ಮತ್ತೆ ಅವನನ್ನು ಕುರಿತು ಹೀಗೆ ಬೇಡಿಕೊಂಡೆನು. ೭೧. "ನನ್ನ ಸ್ನೇಹಿತನೂ, ಆ ಚಂದ್ರನೂ ಭೂಮಿಯಲ್ಲಿ ಎಲ್ಲಿ ಹುಟ್ಟುತ್ತಾರೋ ಅಲ್ಲೇ ನಾನೂ ಹುಟ್ಟುವಂತೆ ನನಗೆ ನೀವು ದಯವಿಟ್ಟು

ವ॥ ತುರಂಗತ್ವಮೆನಗೆ ಮೂಡಿದೊಡಮೆನ್ನ ಕೆಳೆಯನೊಡಗೂಡಿ ಕಾಲಮಂ ಕಳಿಪುವಂತು ನಿನ್ನ ದಿವ್ಯಚಕ್ಷುಗಳಿಂ ನೋಡಿ ಬೆಸಸೆಂಬುದುಂ ಸದಯನಾಗಿ ತನ್ನೊಳ್‌ಕ್ಷಿಣಿದುಬೇಗಂ ವೈಮಾನಿಕಂ ಜಾನಿಸಿ ತಿಳಿದೆನ್ನನಿಂತೆಂದಂ ಉಜ್ಜಯಿನಿಯೊಳಪತ್ಯಾರ್ಥವನೇಕವ್ರತಾಚರಣತತ್ಪರನಪ್ಪ ತಾರಾಪೀಡನೆಂಬ ಚಕ್ರವರ್ತಿಗೆ ಸಕಲಕಲಾಭಿರಾಮನುಂ ವಿಬುಧಜನಸೇವ್ಯನುಂ ಕುವಲಯಾನಂದಕರನುಂ ಯಶಶ್ಚಂದ್ರಿಕಾಧವಳಿತಭುವನನುಮೆನಿಸಿ ಚಂದ್ರಾಪೀಡನೆಂಬ ಪೆಸರಿಂ ಚಂದ್ರಮನೆ ಬಂದುದಯಿಸಿದಪ್ಪನಾತನ ಮಂತ್ರಿ ಶುಕನಾಸನೆಂಬಂಗೆ ನಿನ್ನ ಕೆಳೆಯನಪ್ಪ ಪುಂಡರೀಕಂ ವೈಶಂಪಾಯನನೆಂಬ ಪೆಸರಿಂ ಪುಟ್ಟಿದಪ್ಪನಾ ಚಂದ್ರಾವತಾರನೆನಿಸಿದ ರಾಜಕುಮಾರಂಗೆ ನೀಂ ವಾಹನವಾದಪ್ಪೆಯೆಂಬುದುಂ

ಅಂತಾ ವೈಮಾನಿಕ ವಚ
ನಾಂತದೊಳಾ ತುರಗರೂಪಮಂ ತಳೆದಾಕಾ
ಶಾಂತರದಿಂದಿಟಿದು ಸಮು
ದ್ರಾಂತರದೊಳ್ ಬಿಟ್ಟೆನೆನ್ನ ಕರ್ಮಾಂತರದಿಂ ೭೨

ವ॥ ಅಂತು ಬೀಟ್ಟುದುಂ ಪಾರಶೀಕಾಧಿರಾಜನೆನ್ನಂ ಕಂಡು ಪಿಡಿದೊಯ್ದು ತಾರಾಪೀಡನರೇಂದ್ರಂಗೋಲೈಸೆ ತದೀಯನಂದನನೆನಿಸಿದ ಚಂದ್ರಮೂರ್ತಿಯಪ್ಪ ಚಂದ್ರಾಪೀಡಂಗೆ

ಅವಕಾಶ ಮಾಡಿಕೊಡಬೇಕು. ವ॥ ಮತ್ತು ನಾನು ಕುದುರೆಯಾದರೂ ನನ್ನ ಸ್ನೇಹಿತನ ಜೊತೆಯಲ್ಲಿಯೇ ಕಾಲವನ್ನು ಕಳೆಯುವಂತೆ ಆಗಬೇಕು. ಅವರು ಎಲ್ಲಿ ಹುಟ್ಟುವರೆಂಬುದನ್ನು ನಿಮ್ಮ ಜ್ಞಾನದೃಷ್ಟಿಯಿಂದ ನೋಡಿ ತಿಳಿಸಬೇಕೆಂದು ಕೇಳಿಕೊಳ್ಳಲು, ಆ ವೈಮಾನಿಕನು ಕರುಣೆಯಿಂದ ಕೂಡಿ ಸ್ವಲ್ಪಕಾಲ ಧ್ಯಾನಿಸಿ ತಿಳಿದುಕೊಂಡು, ನನ್ನನ್ನು ಕುರಿತು ಹೀಗೆ ಹೇಳಿದನು. "ಉಜ್ಜಯಿನಿಯಲ್ಲಿ ಮಕ್ಕಳಾಗಬೇಕೆಂದು ಬಗೆಬಗೆಯ ವ್ರತಗಳನ್ನು ಆಚರಿಸುತ್ತಿರುವ ತಾರಾಪೀಡನೆಂಬ ಚಕ್ರವರ್ತಿಗೆ ಸಮಸ್ತ ಕಲೆಗಳಿಂದ ಶೋಭಿಸುವ, ವಿಬುಧಜನರಿಂದ (೧. ವಿದ್ವಾಂಸರು ೨. ದೇವತೆಗಳು.) ಸೇವಿಸಲ್ಪಡುವ, ಕುವಲಯಾನಂದಕರನಾದ (೧. ಪ್ರಪಂಚಕ್ಕೆ ಸಂತೋಷವನ್ನುಂಟುಮಾಡುವ ೨. ಕನ್ನೈದಿಲೆಗಳಿಗೆ ಸಂತೋಷವನ್ನುಂಟುಮಾಡುವ) ಕೀರ್ತಿಯೆಂಬ ಬೆಳದಿಂಗಳಿಂದ ಜಗತ್ತನ್ನು ಬೆಳ್ಳಗೆ ಮಾಡುವ ಚಂದ್ರಾಪೀಡನೆಂಬ ಹೆಸರಿನಿಂದ ಚಂದ್ರನೇ ಬಂದು ಹುಟ್ಟುತ್ತಾನೆ. ಆತನ ಮಂತ್ರಿಯಾದ ಶುಕನಾಸನೆಂಬುವನಿಗೆ ನಿನ್ನ ಗೆಳೆಯನಾದ ಪುಂಡರೀಕನು ವೈಶಂಪಾಯನನೆಂಬ ಹೆಸರಿನಿಂದ ಹುಟ್ಟುತ್ತಾನೆ. ಚಂದ್ರನ ಅವತಾರವೆನಿಸಿರುವ ಆ ರಾಜಕುಮಾರನಿಗೆ ನೀನು ವಾಹನವಾಗುತ್ತೀಯೆ" ಎಂದು ಹೇಳಿದನು. ೭೨. ಹಾಗೆಯೆ ವೈಮಾನಿಕನ ಮಾತು ಮುಗಿಯುತ್ತಿರುವಂತೆ ನಾನು ಕುದುರೆಯ ರೂಪವನ್ನು ತಾಳಿ, ಆಕಾಶಮಧ್ಯದಿಂದ ಇಳಿದು ನನ್ನ ಕರ್ಮಾಂತರದಿಂದ ಸಮುದ್ರಮಧ್ಯದಲ್ಲಿ ಬಿದ್ದೆನು. ವ॥ ಹಾಗೆ ಬೀಳಲಾಗಿ ಪಾರಸೀಕದೇಶದ ರಾಜನು ನನ್ನನ್ನು ಕಂಡು ಹಿಡಿದುಕೊಂಡು ಹೋಗಿ ತಾರಾಪೀಡಮಹಾರಾಜನಿಗೆ ಕಾಣಿಕೆಯಾಗಿ ಒಪ್ಪಿಸಿದನು, ಆಮೇಲೆ ನಾನು

ವಾಹನಮಾಗಿರ್ದು ಕಿನ್ನರಮಿಥುನದ ಬಟಿಸಲ್ವ ನೆವದಿಂ ನಿನ್ನಂ ಕಾಣಿಸಲೆಂದೀ ಚಂದ್ರಾವತಾರ ನನೀ ಪ್ರದೇಶಕ್ಕೆ ತಂದೆನಲ್ಲದೆಯುಂ—ಎಂಬುದುಂ ಹಾ ಮನಃಪ್ರಿಯ ಪುಂಡರೀಕ ಜನ್ಮಾಂತರಾ ವಿಸ್ಮೃತ ಮದನುರಾಗ ಮತ್ಪ್ರತಿಬದ್ಧಜೀವಿತ ಮನ್ಮಯ ಸಕಲ ಜೀವಿತಲೋಕ ಎಂದುದ್ಗತ ಶೋಕೆಯಾಗಿ

ಮುನ್ನಮದೊರ್ಮೆ ಪಾತಕಿಯೆನಂತಿರೆ ಕೊಂದವಳೆಂ ಭವಾಂತರೋ
ತ್ಪನ್ನನುಮಾಗಿ ನೀಂ ಮದನುರಾಗದಿನೆಟ್ತರೆ ಮತ್ತೆ ಕೊಂದೆ ನಾಂ
ನಿನ್ನನೆ ನಿನ್ನನಿಂತು ಮಗುಟ್ದುಂ ಮಗುಟ್ದುಂ ಕೊಲವೇಟ್ಪುದೇದು ಪೇ
ಟೆನ್ನನಿದಿಂತು ಪುಟ್ಟಿಸಿದನೇ ವಿಧಿ ರಕ್ಕಸಿಯಂ ಮನಃಪ್ರಿಯಾ ೭೩

ವ॥ ಎಂದಿವು ಮೊದಲಾಗಿ ಬಹುಪ್ರಕಾರದಿಂ ಪಳವಿಸುವ ಮಹಾಶ್ವೇತೆಯಂ ಕಪಿಂಜಲ ನಿಂತೆಂದಂ

ಹೃದಯಪ್ರಿಯನ ಸಮಾಗಮ
ನದೃಢ ಪ್ರತ್ಯಾಶೆಯಿಂದೆ ಘೋರತಪಃಕ್ಲೇ
ಶದಿನೊಂದಿ ನಿಂದೆಗೆಡೆಯ
ಲ್ಲದ ನಿನ್ನಂ ನೀನಿದೇಕೆ ನಿಂದಿಸಿದಪ್ಪೇ ೭೪

ಅವನ ಮಗನಾದ ಚಂದ್ರಾವತಾರನಾದ ಚಂದ್ರಾಪೀಡನಿಗೆ ವಾಹನವಾಗಿದ್ದು ಕೊಂಡು ಕಿನ್ನರದಂಪತಿಗಳನ್ನು ಹಿಂಬಾಲಿಸುವ ನೆವದಿಂದ ನಿನ್ನನ್ನು ತೋರಿಸ ಬೇಕೆಂದೇ ಅವನನ್ನು ಈ ಪ್ರದೇಶಕ್ಕೆ ಕರೆದುಕೊಂಡು ಬಂದೆನು. ಅದಲ್ಲದೆ"–ಎಂದು ಹೇಳುತ್ತಿರಲಾಗಿ, ಮಹಾಶ್ವೇತೆಯು "ಅಯ್ಯೋ ನನ್ನ ಹೃದಯವಲ್ಲಭ! ಪುಂಡ ರೀಕ, ಬೇರೆ ಜನ್ಮದಲ್ಲೂ ನನ್ನ ಪ್ರೀತಿಯನ್ನು ಮರೆಯದಿರುವವನೆ, ನನ್ನ ಮೇಲೆ ಪ್ರಾಣವನ್ನಿಟ್ಟುಕೊಂಡಿರುವವನೆ" ಎಂದು ಉಕ್ಕುತ್ತಿರುವ ದುಃಖವುಳ್ಳವಳಾದಳು. ೭೩. "ಇನಿಯ, ಪಾಪಿಷ್ಠಳಾದ ನಾನು ನಿನ್ನನ್ನು ಮೊದಲು ಒಂದು ಸಲ ಕೊಂದು ಹಾಕಿದೆ. ಆಮೇಲೆ ನೀನು ಬೇರೆ ಜನ್ಮದಲ್ಲಿ ಹುಟ್ಟಿ ನನ್ನ ಮೇಲಿನ ಪ್ರೀತಿಯಿಂದ ಬರಲಾಗಿ ಮತ್ತೆ ಕೊಂದುಹಾಕಿದೆನು! ಹೀಗೆ ನಿನ್ನನ್ನು ಮತ್ತೆ ಮತ್ತೆ ಕೊಲ್ಲುವುದಕ್ಕಾಗಿಯೇ ಈ ರಾಕ್ಷಸಿಯನ್ನು ಬ್ರಹ್ಮನು ಸೃಷ್ಟಿ ಮಾಡಿದನೆ, ಹೇಳು." ವ॥ ಇದೇ ರೀತಿಯಾಗಿ ನಾನಾ ಪ್ರಕಾರವಾಗಿ ಅಳುತ್ತಿರುವ ಮಹಾಶ್ವೇತೆಯನ್ನು ಕುರಿತು ಕಪಿಂಜಲನು ಹೀಗೆ ಹೇಳಿದನು. ೭೪. "ಅಮ್ಮ! ಪ್ರಾಣಕಾಂತನ ಸಮಾಗಮವುಂಟಾಗುವುದೆಂಬ ದೃಢ ವಾದ ಭರವಸೆಯಿಂದ ಕಠೋರವಾದ ತಪಸ್ಸಿನ ಕಷ್ಟಗಳನ್ನು ಅನುಭವಿಸುತ್ತಿರುವ, ಯಾವ ನಿಂದನೆಗೂ ಪಾತ್ರಳಲ್ಲದ ನಿನ್ನನ್ನು ನೀನೇ ಏಕೆ ಸುಮ್ಮನೆ ಬೈದುಕೊಳ್ಳು

ವ॥ ಇದೆಲ್ಲಂ ಮದ್ವಯಸ್ಯಂಗಂ ಚಂದ್ರಾವತಾರಂಗ[ಚಂದ್ರಮಸಂಗ]ಮೋರೊರ್ವರ ಶಾಪದಿಂದಮೆ ಸಮನಿಸಿದುದು ನಿನ್ನ ದೋಷಮಲ್ಲೆಂಬುದನಾನುಂ ನಿನಗೆ ಪೇೞ್ದೆಂ ವಿಯತ್ತಳದೊಳಿರ್ದ ಚಂದ್ರಮಂ ತನ್ನ ದಿವ್ಯವಚನದಿನಾೞ್ಸಿದುದುಮಂ ನೀನುಂ ಕಾದಂಬರಿಯುಂ ಕೇಳ್ದಿರದುಕಾರಣದಿನಶ್ರೇಯಸ್ಕರಮೆನಿಪ್ಪ ಶೋಕಾನುಬಂಧಮನಿರ್ವರುಂ ಮಾಡಲಾಗದಭಿಲಷಿತ ಸಿದ್ಧಿಗೆಂದಾವುದೊಂದು ಸದ್ವ್ರತಮನಾಚರಿಸುತ್ತಿರ್ದಿರದನೇ ನೀವನುಬಂಧಿಸುವುದದಲ್ಲದೆಯುಂ

ತಪದಿಂ ಸ್ಮರರಿಪುದೇಹಾ
ರ್ಧಪದದೊಳಾ ಗೌರಿ ನಿಂದವೊಲ್ ನಿಲ್ವೈ ನೀಂ
ತಪದಿಂದಿನಿಯನ ತೊಡೆಯೊಳ್
ತಪದಿಂ ದೊರೆಕೊಳ್ಳದಿರ್ಪ ಫಲಮೊಂದುಂಟೇ ೭೫

ವ॥ ಎಂದು ತಿಳಿಯವೇೞ್ದು ಮಹಾಶ್ವೇತೆಯಂ ಸಮಾಶ್ವಾಸಿಸಿದ ಕಪಿಂಜಲನಂ ವಿಷಣ್ಣ ದೀನಮುಖಿಯಾಗಿ ಕಾದಂಬರಿಯಿಂತೆಂದಳ್

ಸಲಿಲಪ್ರವೇಶಮಂ ಪ
ತ್ರಲೇಖೆಯುಂ ನೀಮುಮಲ್ತೆ ಮಾಡಿದಿರಂತಾ
ಲಲನೆಯುದೇನಾದಳದಂ
ಜಲಕ್ಕನಾಗೆನಗೆ ಬೆಸಸಿಮೀಗಳ್ ಮುನಿಪಾ ೭೬

ತ್ತಿರುವೆ ? ವ॥ ಇವೆಲ್ಲವೂ ನನ್ನ ಸ್ನೇಹಿತನಿಗೂ ಚಂದ್ರನಿಗೂ ಪರಸ್ಪರ ಶಾಪ ಮೂಲಕವಾಗಿಯೇ ಸಂಭವಿಸಿತು. ಇದರಲ್ಲಿ ನಿನ್ನ ತಪ್ಪೇನೂ ಇಲ್ಲ ಎಂದು ನಾನು ನಿನಗೆ ಹೇಳಿದ್ದೇನೆ. ಆಕಾಶದಲ್ಲಿ ಕಾಣಿಸಿಕೊಂಡ ಚಂದ್ರನೂ ತನ್ನ ದಿವ್ಯವಚನದಿಂದ ಸಮಾಧಾನಪಡಿಸುದುದನ್ನು ನೀನೂ ಕಾದಂಬರಿಯೂ ಕೇಳಿದಿರಿ. ಅದರಿಂದ ಅಶ್ರೇಯಸ್ಸನ್ನುಂಟುಮಾಡುವ ದುಃಖವನ್ನು ನೀವಿಬ್ಬರೂ ಮುಂದುವರಿಸಬೇಡಿ. ಅಲ್ಲದೆ ಮನೋರಥವು ಈಡೇರುವುದಕ್ಕಾಗಿ ಯಾವ ಒಂದು ಒಳ್ಳೆಯ ವ್ರತವನ್ನು ನೀನು ಆಚರಿಸುತ್ತಿರುವೆಯೋ ಅದೇ ಮುಂದುವರಿಯುತ್ತಿರಲಿ. ಅದಲ್ಲದೆ ೭೫. ಹೇಗೆ ಗೌರೀದೇವಿಯು ತಪಸ್ಸಿನಿಂದ ಪರಮೇಶ್ವರನ ಅರ್ಧದೇಹವನ್ನೇ ಪಡೆದುಕೊಂಡಿದ್ದಾಳೋ ಹಾಗೆಯೇ ನೀನೂ ತಪಸ್ಸಿನಿಂದ ಇನಿಯನ ತೊಡೆಯ ಮೇಲೆ ಮಂಡಿಸುವೆ. ತಪಸ್ಸಿನಿಂದ ಕೈಗೂಡದಿರುವುದು ಯಾವುದಿದೆ ?" ಎಂದನು. ವ॥ ಹೀಗೆ ಮಹಾಶ್ವೇತೆಯನ್ನು ಸಮಾಧಾನಪಡಿಸಿದ ಕಪಿಂಜಲನನ್ನು ದುಃಖದಿಂದ ಕಳೆಗುಂದಿದ ಮುಖವುಳ್ಳ ಕಾದಂಬರಿಯು ಹೀಗೆ ಕೇಳಿದಳು. ೭೬. "ಮುನಿಶ್ರೇಷ್ಠನೆ, ನೀವೂ ಪತ್ರಲೇಖೆಯೂ ಒಟ್ಟಿಗೆ ಜಲಪ್ರವೇಶ

ವ॥ ಎಂದು ಬೆಸಗೊಳ್ಳುದುಂ ಕಪಿಂಜಲಕನೆಂದನಾಂ ಜಲಪ್ರವೇಶಾನಂತರದ ವಾರ್ತೆಯಂ ಅಱಿದೆನಿಲ್ಲದಱಿನೀ ಚಂದ್ರಾತ್ಮಕನಪ್ಪ ಚಂದ್ರಾಪೀಡನುಂ ಪುಂಡರೀಕಾತ್ಮಕನಪ್ಪ ವೈಶಂಪಾಯನನುಮೆತ್ತಿರ್ದರೆಂಬುದಂ ಪತ್ರಲೇಖಾವೃತ್ತಾಂತಮೇನೆಂಬುದುಮಾನಱಿಯಲೆಂದೀಗಳಾಂ ಪ್ರತ್ಯಕ್ಷಲೋಕತ್ರಯನೆನಿಪ ಶ್ವೇತಕೇತುಮಹಾಮುನಿಗಳಲ್ಲಿಗೆ ಪೋದಪ್ಪೆನೆಂದು ಗಗನತಳಕ್ಕೆ ನೆಗೆದುಪೋದನನ್ನೆಗಮಿತ್ತ ಕಾದಂಬರಿ ಚಂದ್ರಾಪೀಡದೇವನಂ ನೋಡಿ ಕಣ್ಬನಿಗಳಂ ತೀವುವುದುಂ ಮಹಾಶ್ವೇತೆ ನೋಡಿ ತಂಗಿ ನೀನಟಲಂ ತಳೆಯದಿರಾವಿರ್ವರುಂ ಸಮಸುಖದುಃಖವೃತ್ತಿಗಳಾದೆ ವದಱಿಂ ಪ್ರಿಯತಮಸಮಾಗಮಪ್ರತ್ಯಾಶೆಯಿಂ ಕರಣೀಯಮಾವುದದನೆ ಮಾಡವೇಟ್ಟುದದಱಿಂ

ಎನಗಿದು ದೈವಮೆಂದು ಮನದೊಳ್ ಪರಿಭಾವಿಸಿ ಕಲ್ಲ ಮಣ್ಣ ರೂ
ಪನೆ ಗಡ ಪೂಜಿಸುತ್ತಮಿರೆ ಸನ್ನಿದವಾದಪುದೆಂದೊಡಕ್ಕ ನೆ
ಟ್ಟನೆ ಮನುಜೇಂದ್ರಚಂದ್ರಪೆಸರಿಂದೆಸೆವಗ್ಗದ ಚಂದ್ರಮೂರ್ತಿಯಂ
ಮನವೊಸೆದರ್ಚಿಸುತ್ತಮಿರೆ ಸನ್ನಿದನಪ್ಪುದಿದಾವ ಸಂದೆಗಂ ೭೭

ವ॥ ಎಂಬುದುಮದನೆ ಮನಂಗೊಂಡು ಶೀತವಾತಾತಪ ವರ್ಷಾದಿ ಸರ್ವದ್ವಂದ್ವ ದೋಷರಹಿತಮಪ್ಪದೊಂದು ರತ್ನಶಿಲಾತಲದೊಳ್ ಚಂದ್ರಾಪೀಡದೇವನಂ ನಿಲಿಸಿ ದಿವ್ಯವಸನ

ಮಾಡಿದಿರಲ್ಲವೆ ? ಈಗ ಅವಳು ಏನಾದಳೆಂಬುದನ್ನು ಬೇಗನೆ ನನಗೆ ತಿಳಿಸಿ." ವ॥ ಎಂದು ಕೇಳಲಾಗಿ ಕಪಿಂಜಲನು ಹೇಳಿದನು. "ಜಲಪ್ರವೇಶ ಮಾಡಿದಮೇಲೆ ನಡೆದಿರುವ ವೃತ್ತಾಂತವು ನನಗೆ ತಿಳಿಯದು. ಆದ್ದರಿಂದ ಚಂದ್ರಾತ್ಮಕನಾದ ಚಂದ್ರಾಪೀಡನೂ ಪುಂಡರೀಕಾತ್ಮಕನಾದ ವೈಶಂಪಾಯನನೂ ಎಲ್ಲಿದ್ದಾರೆಂಬುದನ್ನೂ, ಪತ್ರಲೇಖೆಯ ವೃತ್ತಾಂತವೇನು ಎಂಬುದನ್ನೂ ತಿಳಿದುಕೊಳ್ಳುವುದಕ್ಕಾಗಿ ಈಗ ನಾನು ಮೂರು ಲೋಕಗಳ ವೃತ್ತಾಂತವನ್ನೂ ಪ್ರತ್ಯಕ್ಷವಾಗಿ ತಿಳಿಯಬಲ್ಲ ಶ್ವೇತಕೇತುಮಹರ್ಷಿಗಳ ಸಮೀಪಕ್ಕೆ ಹೋಗುತ್ತೇನೆ" ಎಂದು ಆಕಾಶಕ್ಕೆ ಹಾರಿಹೋದನು. ಈಕಡೆ ಕಾದಂಬರಿಯು ಚಂದ್ರಾಪೀಡನನ್ನು ನೋಡಿ ಕಣ್ಣೀರು ಬಿಡುತ್ತಿರುವುದನ್ನು ಕಂಡು ಮಹಾಶ್ವೇತೆಯು "ತಂಗಿ, ದುಃಖಪಡಬೇಡ, ಈಗ ನಾವಿಬ್ಬರೂ ಸುಖದುಃಖಗಳಲ್ಲಿ ಸಮರಾದೆವು. ಆದ್ದರಿಂದ ಪ್ರಿಯತಮರೊಂದಿಗೆ ಮತ್ತೆ ಸೇರುವ ಭರವಸೆಯಿಂದ ಏನುಮಾಡಬೇಕೋ ಅದನ್ನೇ ಮಾಡಬೇಕಾಗಿದೆ. ಅದರಿಂದ, ೭೭. 'ನನಗೆ ಇದೇ ದೇವರು' ಎಂದು ಮನಸ್ಸಿನಲ್ಲಿ ಭಾವಿಸಿಕೊಂಡು ಕಲ್ಲು ಮಣ್ಣುಗಳಿಂದ ಮಾಡಿದ ಮೂರ್ತಿಯನ್ನೇ ಪೂಜಿಸುತ್ತಿದ್ದರೂ ಆ ದೇವರುಗಳು ಅಲ್ಲೇ ಸನ್ನಿಹಿತರಾಗುತ್ತಾರೆ. ಅಂದಮೇಲೆ ಚಂದ್ರಾಪೀಡಮಹಾರಾಜನೆಂಬ ಹೆಸರಿನಿಂದ ಶೋಭಿಸುವ ಶ್ರೇಷ್ಠನಾದ ಚಂದ್ರಮೂರ್ತಿಯನ್ನು ಮನಃಪೂರ್ವಕವಾಗಿ ಪೂಜಿಸುತ್ತಿದ್ದರೆ ಸನ್ನಿಹಿತನಾಗುವುದರಲ್ಲಿ ಯಾವ ಸಂದೇಹವಿದೆ?" ವ॥ ಎಂದು ಹೇಳಿದಳು. ಅದನ್ನೆ ಮನಸ್ಸಿಗೆ ತಂದುಕೊಂಡು ಚಳಿ, ಗಾಳಿ. ಬಿಸಿಲು, ಮಳೆ ಮೊದಲಾದ ಎಲ್ಲಾಬಗೆಯ ಕೋಟಲೆಗಳಿಲ್ಲದಿರುವ ಒಂದು ರತ್ನದ

ಕುಸುಮ ಧೂಪಾನುಲೇಪನಾಭರಣಂಗಳಿನಲಂಕರಿಸಿ ತದೀಯ ಚರಣಂಗಳಂ ತೊಡೆಯಮೇಲಿಕ್ಕಿಕೊಂಡು ಪರಿಜನಮುಂ ಪುರಜನಮುಂ ರಾಜಲೋಕಮುಂ ಬೆರಸಂದಿನ ಪಗಲುಮನಿರುಳುಮಂ ಕಳೆದು ಮಱುದಿವಸಂ ಕಣ್ದೆಱೆದ ಚಿತ್ರದಂತಿರ್ದ ಚಂದ್ರಾಪೀಡನವಯವಂಗಳುಮನೆಲ್ಲಮನೆಲವಿ ನೋಡಿ ಕಾದಂಬರಿ ಕೆಲದೊಳಿರ್ದ ಮದಲೇಖೆಯಂ ನೀನುಂ ಭಾವಿಸಿನೋಡೆಂಬುದುಮಾಕೆ ತದ್ದಿವ್ಯಾಕೃತಿಯ ಸಕಲಾಂಗಪ್ರತ್ಯಂಗಂಗಳಂ ನೋಡಿ

ನಗುವಂತಿರ್ದಪ್ಪುದಿಂತೀ ವದನಮುರುಳಿಗೊಂಡಿರ್ಪುದೀ ಕೇಶಮೀ ದೃ
ಗ್ಯುಗಳಂ ಕನ್ನೆಯ್ದಿಲಂತಿರ್ದಪುದರುಣಿಮಮಂ ಬೀಱುತಿರ್ದಪ್ಪುವೀ ಮಿಂ
ಚುಗುರುಂ ಹಸ್ತಾಂಘ್ರಿಪದ್ಮಂಗಳುಮಧಮುಮೀ ದೇಹಲಾವಣ್ಯವಾದಂ
ಮಿಗುತಿರ್ಕುಂ ತನ್ಮಹಾಭಾಗನ ನುಡಿಯಿದಱಿಂ ಸತ್ಯಮಾಗಿರ್ದುದಲ್ತೇ ೭೮

ವ॥ ಎಂದು ನುಡಿದ ಮದಲೇಖೆಯ ಮಾತಿನೊಳ್ ನಿರ್ಭರಾನಂದೆಯಾಗಿ ಕಾದಂಬರಿ ಮಹಾಶ್ವೇತೆಗಂ ಚಂದ್ರಾಪೀಡಚರಣತಳನಿಬದ್ಧಜೀವಿತಮಪ್ಪ ರಾಜಲೋಕಕ್ಕಂ ಪ್ರಿಯತಮಾಕೃತಿಯಂ ತೋಱಲೊಡಮವರ್ ವಿಸ್ಮಯೋತ್ಫುಲ್ಲಲೋಚನರುಮಾವಿಷ್ಕೃತಾನಂದರುಮಪ್ಪುದುಮನಂತರಂ ಸಖೀಜನಂಬೆರಸು ಚಂದ್ರಾಪೀಡದೇವನನಲಂಕರಿಸಿ ಶರೀರಸ್ಥಿತಿಕರಣಾರ್ಥಂ ಸಕಲ

ಶಿಲೆಯ ಮೇಲೆ ಚಂದ್ರಾಪೀಡದೇವನನ್ನು ಮಲಗಿಸಿ, ಶ್ರೇಷ್ಠವಾದ ಬಟ್ಟೆ, ಹೂವು, ಧೂಪ, ಗಂಧ ಒಡವೆಗಳಿಂದ ಅಲಂಕರಿಸಿ, ಅವನ ಪಾದಗಳನ್ನು ತನ್ನ ತೊಡೆಯಮೇಲೆ ಇಟ್ಟುಕೊಂಡು ಪರಿಜನರು ಪುರಜನರು ಮತ್ತು ರಾಜರುಗಳೊಂದಿಗೆ ಕಾದಂಬರಿಯು ರಾತ್ರಿಯನ್ನು ಕಳೆದಳು. ಮರುದಿವಸ ಬಿಡಿಸಿದ ಚಿತ್ರದಂತಿದ್ದ ಚಂದ್ರಾಪೀಡನ ಅವಯವಗಳೆಲ್ಲವನ್ನೂ ಸವರಿನೋಡಿ ಕಾದಂಬರಿಯು ಪಕ್ಕದಲ್ಲಿದ್ದ ಮದಲೇಖೆಯನ್ನು ಕುರಿತು 'ನೀನೂ ಚೆನ್ನಾಗಿ ನೋಡು' ಎಂದು ಹೇಳಿದಳು. ಆಗ ಅವಳು ಆ ದಿವ್ಯಾಕಾರನ ಸಮಸ್ತಾಂಗೋಪಾಂಗಗಳನ್ನು ನೋಡಿ, ೭೮. "ಈ ಬಾಯಿ ನಗುತ್ತಿರುವಂತಿದೆ. ಕೂದಲು ಸುರುಳಿಸುತ್ತಿ ಗುಂಗುರು ಗುಂಗುರಾಗಿದೆ. ಕಣ್ಣುಗಳೆರಡೂ ಕನ್ನೈದಿಲೆಯಂತಿವೆ. ಮಿಂಚುತ್ತಿರುವ ಉಗುರುಗಳು ಕೆಂಬಣ್ಣವನ್ನು ಬೀರುತ್ತಿವೆ. ಹಸ್ತಕಮಲ ಮತ್ತು ಪಾದಕಮಲಗಳೂ ತುಟಿಯೂ ದೇಹದ ಸೌಂದರ್ಯವನ್ನು ಬಹಳಮಟ್ಟಿಗೆ ಹೆಚ್ಚಿಸುತ್ತಿವೆ. ಆದರಿಂದ ಆ ಮಹಾತ್ಮನ ಮಾತು ಖಂಡಿತವಾಗಿಯೂ ಸತ್ಯವಾದುದು" ಎಂದಳು. ವ॥ ಹೀಗೆ ಹೇಳಿದ ಮದಲೇಖೆಯ ಮಾತಿನಿಂದ ಕಾದಂಬರಿಗೆ ಪರಮಾನಂದವುಂಟಾಯಿತು, ಅವಳು ಮಹಾಶ್ವೇತೆಗೂ ಚಂದ್ರಾಪೀಡನ ಚರಣದಲ್ಲೇ ಜೀವವನ್ನಿಟ್ಟುಕೊಂಡಿರುವ ರಾಜಸಮೂಹಕ್ಕೂ ತೋರಿಸಿದಳು. ಅವರು ಆಶ್ಚರ್ಯದಿಂದ ಅರಳಿದ ಕಣ್ಣುಳ್ಳವರಾಗಿ ಸಂತೋಷವನ್ನು ವ್ಯಕ್ತಪಡಿಸಿದರು. ಬಳಿಕ ಅವಳು ಗೆಳತಿಯರೊಂದಿಗೆ ಸೇರಿ ಚಂದ್ರಾಪೀಡನನ್ನು ಸಿಂಗರಿಸಿ, ಊಟವೇ ಮೊದಲಾದುವನ್ನು ಮಾಡಿಕೊಳ್ಳುವಂತೆ

ರಾಜಲೋಕಮಂ ವಿಸರ್ಜಿಸಿ ಮಹಾಶ್ವೇತಾನುರೋಧದಿಂ ಕೃತಫಲಜಲಾಹಾರೆಯಾಗಿ ತದನಂತರಂ ಮದಲೇಖೆಗೆಂದಳೆನ್ನೆಗಮೆನಗೀ ಮನೋಹರಂ ಸನ್ನಿದನಪ್ಪನನ್ನೆವರಮೀತೆಱದಿಂದಿರಲ್ವೇಡಿರ್ದುದಱಿಂ ವಿಸ್ಮಯಮಪ್ಪೀ ವೃತ್ತಾಂತಮನಾದ್ಯಂತಮಾಗಿ ತಾಯ್ತಂದೆಗಳ್ಗೆ ತಿಳಿಯವೇೞ್ದು ಸಮಾಧಾನಮಂ ಮಾೞ್ಪುದೆಂದಾಕೆಯುಂ ಬೇಗಂ ಪೋಗಲ್ವೇೞ್ದಿಂದಿನಂದದಿಂ ಚಂದ್ರಾಪೀಡಚರಣಕಮಲಂಗಳಂ ದೃಢಪ್ರತ್ಯಯದಿನಾರಾಧಿಸುತ್ತಿರ್ದಳನ್ನೆಗಂ

ಪರೆಯೆ ಮುಗಿಲ್ ಜಲಕ್ಕನಿರಲೆಣ್ದೆಸೆ ನೀರ್ತೆಗೆಯಲ್ಕೆ ಬೆಳ್ಮಳ
ಲ್ದೆರೆಗಳನಪ್ಪುಕೆಯ್ಯೆ ತೊೞೆ ಶಾಲಿವನಾಳಿಯ ಪೆಂಪಿನಿಂಪಿನಾ.
ವರಿಸೆ ಪೊಲಂ ಸರೋಜಕುಮುದೋಜ್ವಲಮಾಗೆ ಕೊಳಂ ಪಳಚ್ಚನಾ
ಗಿರೆ ಶಶಿರಶ್ಮಿ ಬಂದುದತಿನಿರ್ಮಲನೀರದಮಪ್ಪ ಶಾರದಂ ೭೯

ವ॥ ಅಂತು ಬಂದ ಶರದಾಗಮದೊಳೊಂದುದಿವಸಂ ಚಂದ್ರಾಪೀಡಚರಣಮೂಲೋಪವಿಷ್ಟೆಯಾದ ಕಾದಂಬರಿಯಲ್ಲಿಗೆ ಮೇಘನಾದಂ ಬಂದು [ಯುವರಾಜಂ] ತಡೆದುದರ್ಕುತ್ಕಂಠಿತರಾಗಿ ತಾರಾಪೀಡದೇವನುಂ ವಿಲಾಸವತೀಮಹಾದೇವಿಯುಮಾರ್ಯ ಶುಕನಾಸನುಂ ವಾರ್ತಾಹರರನಟ್ಟಿದೊಡವರುಮರಸನಂ ಕಾಣಲೆಂದು ಬಂದಿರ್ದಪರಿಲ್ಲಿಗೆ ತಕ್ಕುದಂ ದೇವಿಯರೆ ಬಲ್ಲಿರೆಂದು ಬಿನ್ನವಿಸುವುದುಂ ತೊಟ್ಟನೆ ವಿಚಿತ್ರ ವೃತ್ತಾಂತಸ್ಮರಣ ಪರಿಕ್ಷುಬ್ಧಹೃದಯೆಯುಂ

ಹೇಳಿ ರಾಜರೆಲ್ಲರನ್ನೂ ಕಳುಹಿಸಿದಳು. ತಾನು ಮಹಾಶ್ವೇತೆಯ ಬಲಾತ್ಕಾರದಿಂದ ಹಣ್ಣು, ನೀರುಗಳಿಂದಲೇ ಊಟವನ್ನು ಮುಗಿಸಿದಳು. ಬಳಿಕ ಮದಲೇಖೆಯನ್ನು ಕುರಿತು "ಈ ನನ್ನ ಕಾಂತನು ಚೈತನ್ಯವನ್ನು ಪಡೆಯುವವರೆಗೂ ಹೀಗೆಯೇ ಇರಬೇಕಾಗಿರುವುದರಿಂದ ಆಶ್ಚರ್ಯಕರವಾದ ಈ ಸಂಗತಿಯನ್ನು ಆಮೂಲಾಗ್ರವಾಗಿ ತಾಯಿ ತಂದೆಗಳಿಗೆ ತಿಳಿಯಹೇಳಿ, ಅವರನ್ನು ಸಮಾಧಾನಪಡಿಸು" ಎಂದು ಹೇಳಿ ಬೇಗನೆ ಊರಿಗೆ ಹೋಗಿ ಬರುವಂತೆ ಹೇಳಿದಳು. ಆಮೇಲೆ ಎಂದಿನಂತೆ ಚಂದ್ರಾಪೀಡನ ಚರಣಕಮಲಗಳನ್ನು ದೃಢವಾದ ನಂಬಿಕೆಯಿಂದ ಪೂಜಿಸುತ್ತಿದ್ದಳು. ಅಷ್ಟರಲ್ಲಿ ೭೯. ಶರತ್ಕಾಲವು ಬಂದಿತು. ಮೋಡಗಳು ಹರಿದುವು, ಎಂಟು ದಿಕ್ಕುಗಳೂ ನಿರ್ಮಲವಾದುವು. ನದಿಗಳಲ್ಲಿ ನೀರು ಕಮ್ಮಿಯಾಗುತ್ತಿರಲು ಅವುಗಳಲ್ಲಿ ಬಿಳುಪಾದ ಮರಳಿನ ಪದರಗಳು ಕಾಣತೊಡಗಿದವು. ಭೂಮಿಯು ಸಮೃದ್ಧಿಯಾದ ಬತ್ತದ ಗದ್ದೆಗಳಿಂದ ಆವೃತವಾಯಿತು. ಸರೋವರಗಳು ಕಮಲ, ನೈದಿಲೆಗಳಿಂದ ಪ್ರಕಾಶಿಸತೊಡಗಿದುವು. ಚಂದ್ರನ ಕಿರಣಗಳು ಉಜ್ವಲವಾಯಿತು. ಮೋಡಗಳು ಬಿಳಿಯ ಬಣ್ಣವನ್ನು ಪಡೆದುವು. ವ॥ ಹಾಗೆ ಬಂದ ಶರತ್ಕಾಲದಲ್ಲಿ ಒಂದು ದಿವಸ ಚಂದ್ರಾಪೀಡನ ಕಾಲಿನ ಬಳಿ ಕುಳಿತುಕೊಂಡಿದ್ದ ಕಾದಂಬರಿಯ ಸಮೀಪಕ್ಕೆ ಮೇಘನಾದನು ಬಂದು "ಯುವರಾಜನು ರಾಜಧಾನಿಗೆ ಮರಳದೆ ವಿಳಂಬ ಮಾಡಿದನೆಂದು ತಳಮಳಗೊಂಡ ತಾರಾಪೀಡಮಹಾರಾಜನೂ ವಿಲಾಸವತಿಮಹಾರಾಣಿಯೂ ಶುಕನಾಸನೂ ದೂತರನ್ನು ಕಳುಹಿಸಿದ್ದಾರೆ. ಅವರು ಯುವರಾಜನನ್ನು ಕಾಣಬೇಕೆಂದು

ಗದ್ಗದಿಕಾವಗೃಹ್ಯಮಾಣಕಂಠೆಯುಮಾಗಿ ಕಾದಂಬರಿ ಕಿಱಿದುಬೇಗಂ ತನ್ನೊಳೆ ಚಿಂತಿಸುತ್ತ ಮೆಂತಾನುಂ ವಾರ್ತಾಹರರಂ ಬರವೇೞ್ಟಿಂಬುದುಂ ಮೇಘನಾದಂ ತಂದು ಕಾಣಿಸೆ ಚಂದ್ರಾಪೀಡ ಚರಣಂಗಳ್ಗೆ ದೂರದೊಳೆ ಸರ್ವಾಂಗಾಲಿಂಗಿತ ಮಹೀತಳರಾಗಿ ಪೊಡಮಟ್ಟು ಕುಮಾರನಂ ಕಾಣುತ್ತೆ ಕೌತುಕದಿನವಹಿತೋತ್ಪಕ್ಷ್ಮನಿಭೃತದೃಷ್ಟಿಗಳುಂ ಖಿನ್ನವದನರುಮಾದ ವಾರ್ತಾಹರರಂ ನೀಡುಂ ನೋಡಿ ಕಾದಂಬರಿಯಿಂತೆಂದಳ್

ಇದು ಖೇದಪ್ರದಮಲ್ತು ವೃತ್ತಕಮಿದಾಶ್ಚರ್ಯಪ್ರದಂ ಮರ್ತ್ಯನೆಂ
ಬುದುವೇಡೀ ವಿಭು ದೇವತಾತ್ಮನಿದನೀ ವಕ್ತ್ರೇಂದು ಪೇೞುತ್ತಮಿ
ರ್ದುದು ದಲ್ ಪೇೞ್ವುದು ಪೋಗಿ ನೀವಿದಱಿನೀಗಳ್ ಬೇಗವಚ್ಛೋದತೀ
ರದೊಳಿರ್ದಂ ನೃಪಚಂದ್ರನೆಂಬಿದನೆ ರಾಜೇಂದ್ರಂಗೆ ನಿರ್ವ್ಯಾಕುಳಂ ೮೦

ವ|| ಎಂಬುದುಂ ಪ್ರತ್ಯಕ್ಷಿತ ಸಕಲ ವೃತ್ತಾಂತನಪ್ಪನನೆಮ್ಮೊಡನೆ ದೇವಿಯರ್ ಬೆಸಸು ವುದೆನೆ ಕಾದಂಬರಿಯುಮದನೆ ಮನಂಗೊಂಡು ಮೇಘನಾದಂಗೆ ಬೆಸಸುವುದುಮಾತಂ ತ್ವರಿತಗತ ನೆಂಬ ಕುಮಾರಸೇವಕನಂ ಕರೆದೀ ವೃತ್ತಾಂತಮಂ ತಾರಾಪೀಡದೇವಂಗೆ ಬಿನ್ನವಿಸಿ ಬಾಯೆಂದು ವಾರ್ತಾಹರರೊಡನೆ ಪೋಗಲ್ ಪೇೞ್ವುದುಮಾ ತ್ವರಿತಗತನತಿವೇಗದಿಂದವಂದಿರೊಡನೆ ಕೆಲವಾನುಂ ದಿವಸಂಗಳಿನುಜ್ಜಯಿನಿಯುನೆಯ್ದಿ ಪುಗುವಾಗಳುಜ್ಜಯಿನಿನಿವಾಸಿಗಳಪ್ಪ ನರಪತಿ

ಇಲ್ಲಿಗೆ ಬಂದಿದ್ದಾರೆ ಈ ವಿಷಯದಲ್ಲಿ ದೇವಿಯರ ಚಿತ್ತಕ್ಕೆ ಸರಿದೋರಿದಂತೆ ಮಾಡ ಬಹುದು" ಎಂದು ಅರಿಕೆಮಾಡಿದನು. ಇದನ್ನು ಕೇಳಿದಕೂಡಲೆ ಕಾದಂಬರಿಯು ವಿಚಿತ್ರವಾದ ವೃತ್ತಾಂತವನ್ನು ನೆನೆಸಿಕೊಂಡು ತಳಮಳಗೊಂಡ ಮನಸ್ಸುಳ್ಳವಳಾಗಿ ಗದ್ಗದಧ್ವನಿಯಿಂದ ಕೂಡಿದ ಕಂಠದಿಂದ ಸ್ವಲ್ಪಹೊತ್ತು ತನ್ನಲ್ಲೆ ಚಿಂತಿಸುತ್ತಿದ್ದು "ದೂತರನ್ನು ಕರೆದುಕೊಂಡು ಬನ್ನಿ" ಎಂದು ಕಷ್ಟದಿಂದಲೇ ಹೇಳಿದಳು. ಮೇಘನಾದನು ಕರೆದುಕೊಂಡು ಬಂದು ದೂರದಲ್ಲೆ ತೋರಿಸಿದನು. ಅವರೂ ದೂರದಿಂದಲೇ ತಮ್ಮ ಸರ್ವಾಂಗಗಳನ್ನೂ ನೆಲದ ಮೇಲೆ ಈಡಾಡಿ ನಮಸ್ಕರಿಸಿದರು. ಯುವರಾಜನನ್ನು ಕಂಡು ಆಶ್ಚರ್ಯದಿಂದ ಕೂಡಿ ಅವನಲ್ಲೇ ನೆಟ್ಟ ಅರಳಿದ ನಿಶ್ಚಲವಾದ ದೃಷ್ಟಿಯುಳ್ಳವರಾಗಿ ಪೆಚ್ಚಾದ ಮುಖದಿಂದ ಕೂಡಿರುವ ಆ ದೂತರನ್ನು ಬಹಳಹೊತ್ತು ನೋಡಿ ಕಾದಂಬರಿಯು ಹೀಗೆಂದಳು. ೮೦. "ಇದು ದುಃಖಕರವಲ್ಲ. ಈ ವೃತ್ತಾಂತವು ಅತ್ಯಾಶ್ಚರ್ಯ ಕರವಾದುದು. ಈ ಮಹಾರಾಜನನ್ನು ಮನುಷ್ಯನೆಂದು ಭಾವಿಸಬೇಡಿ. ಇವನು ದೇವತಾ ಸ್ವರೂಪನು. ಇದನ್ನು ಇವನ ಚಂದ್ರನಂದದ ಮುಖವೇ ಹೇಳುತ್ತಿದೆ. ಇದು ಖಂಡಿತ. ಆದರಿಂದ ನೀವು ಬೇಗನೆ ಹೋಗಿ "ಅಚ್ಛೋದಸರೋವರದ ತೀರದಲ್ಲಿ ಯುವರಾಜ ನಿದ್ದಾನೆ" ಎಂದು ತಾರಾಪೀಡಮಹಾರಾಜನಿಗೆ ಯಾವ ಬಗೆಯ ಕಳವಳಕ್ಕೂ ಎಡೆಯಿಲ್ಲ ದಂತೆ ತಿಳಿಸಿ." ವ|| ಎಂದು ಹೇಳಿದಳು. ಅವರು ಈ ಎಲ್ಲಾ ಸಂಗತಿಗಳನ್ನೂ ಕಣ್ಣಾರೆ ಕಂಡಿರುವ ಒಬ್ಬನನ್ನು ನಮ್ಮೊಡನೆ ದೇವಿಯರು ಕಳುಹಿಸಿಕೊಡಬೇಕೆಂದು ವಿಜ್ಞಾಪಿಸಿ ಕೊಂಡರು. ಕಾದಂಬರಿಗೂ ಅದು ಸರಿಯೆಂದು ತೋರಿತು. ಅವಳು ಅದೇರೀತಿ ಮಾಡು

ಪ್ರಭೃತಿ ಬಂಧುಜನಂಗಳ್ ತಮ್ಮ ತಮ್ಮವರ ವೃತ್ತಾಂತಂಗಳಂ ಬೆಸಗೊಳಲದರ್ಕದತ್ತಪ್ರತಿ ವಚನರಾಗಿ ರಾಜಭವನಮನೆಯ್ದೆವರ್ಪುದುಮತಿಸಂಭ್ರಮದಿಂ ಪರಿಜನಂಗಳ್ ತಮತಮಗೆ ಪರಿ ತಂದು ಚಂದ್ರಾಪೀಡದೇವನತ್ತಣಿಂ ವಾರ್ತಾಹರರ್ ವಂದರೆಂದು ವಿಲಾಸವತೀಮಹಾದೇವಿ ವೆರಸಿರ್ದ ತಾರಾಪೀಡದೇವಂಗೆ ಬಿನ್ನವಿಸಲೊಡನಾನಂದಬಾಷ್ಪಲುಳಿತಲೋಚನನುಂ ವಾರ್ತಾ ಹರಾಗಮನದತ್ತದೃಷ್ಟಿಯುಮಾಗಿ

ಇದು ಪಿರಿದಪ್ಪ ಬೇವಸದ ಬೀಡು ಪಥಶ್ರಮದಾಗರಂ ಪ್ರವಾ
ಸದ ಮೊದಲೆಂಬಿದಂ ವಿವಿಧ ವೈಪಥಪಾಂಸುಗಳಿಂದೆ ನಾಡೆ ಸೀ
ಟಿದ ತಲೆಯುಂ ಕರಂ ಮಲಿನಮಾದ ಪಟಚ್ಚರಮುಂ ನೆಗಟ್ಟಲಂ
ದಿದಿರೊಳಿ ಲೇಖವಾಹನಿವಹಂ ಬರೆ ಕಂಡನಿಳಾಧಿನಾಯಕಂ ೮೧

ವ|| ಅಂತು ಕಂಡು

ತನಯಂ ಕುಶಲದೆ ಬರುತಿ
ರ್ದನೆ ಪೇಟಿಮೆನುತ್ತಮಂತೆ ವಾರ್ತಾಪರರಂ
ತನಗೆ ಪೊಡಮಡದ ಮುನ್ನಮೆ
ಜನಕಂ ಬೆಸಗೊಂಡನಾಗಳುತ್ಕಂಠತೆಯಿಂ ೮೨

ವಂತೆ ಮೇಘನಾದನಿಗೆ ಹೇಳಿದಳು. ಅವನು ಯುವರಾಜನ ಸೇವಕನಾದ ತ್ವರಿತಗತ ನೆಂಬುವವನನ್ನು ಕರೆದು ಈ ವೃತ್ತಾಂತವನ್ನು ತಾರಾಪೀಡಚಕ್ರವರ್ತಿಗೆ ಅರಿಕೆಮಾಡಲು ದೂತರೊಂದಿಗೆ ಹೋಗಿಬರುವಂತೆ ತಿಳಿಸಿದನು. ಆ ತ್ವರಿತಗತನು ಬಹಳ ಚುರುಕಾಗಿ ಅವರೊಂದಿಗೆ ಕೆಲವು ದಿನಗಳಲ್ಲೇ ಉಜ್ಜಯಿನಿಯನ್ನು ಸೇರಿ ನಗರದೊಳಕ್ಕೆ ಕಾಲಿಟ್ಟನು. ಅಷ್ಟರಲ್ಲೇ ಉಜ್ಜಯಿನೀನಿವಾಸಿಗಳಾದ ರಾಜರೇ ಮೊದಲಾದ ಬಂಧುಜನರು ತಮ್ಮ ತಮ್ಮವರ ಯೋಗಕ್ಷೇಮಗಳನ್ನು ಬಂದು ಕೇಳಲಾರಂಭಿಸಿದರು. ಅದಕ್ಕೆ ದೂತರು ಯಾವ ಉತ್ತರವನ್ನೂ ಕೊಡದೆ ಅರಮನೆಗೆ ಬಂದರು. ಆಗ ಪರಿಜನರು ಬಹಳ ಸಂಭ್ರಮದಿಂದ ತಾವು ತಾವೇ ಓಡಿಹೋಗಿ ವಿಲಾಸವತೀದೇವಿಯ ಜೊತೆಯಲ್ಲಿದ್ದ ಮಹಾರಾಜನಿಗೆ "ಚಂದ್ರಾಪೀಡನ ಕಡೆಯಿಂದ ದೂತರು ಬಂದಿದ್ದಾರೆಂದು" ಅರಿಕೆ ಮಾಡಿ ದರು. ಕೂಡಲೆ ಮಹಾರಾಜನು ಆನಂದಬಾಷ್ಪದಿಂದ ತುಂಬಿದ ಕಣ್ಣುಳ್ಳವನಾಗಿ ದೂತರು ಬರುವುದನ್ನೇ ನೆಟ್ಟದೃಷ್ಟಿಯಿಂದ ನೋಡುತ್ತಿದ್ದನು. ೮೧. ಮಹಾ ರಾಜನು ಎದುರಿಗೆ ಬರುತ್ತಿರುವ ದೂತರ ಸಮೂಹವನ್ನು ನೋಡಿದನು. ನಾನಾ ವಿಧ ವಾದ ಕ್ಲೇಶಕರವಾದ ದಾರಿಯ ಧೂಳಿನಿಂದ ಕೂಡಿರುವ ಅವರ ಕೇದರಿದ ತಲೆಯೂ ಬಹಳ ಕೊಳಕಾದ ಹಳೆಯಾದ ಬಟ್ಟೆಯೂ 'ಇವರು ಮಹತ್ತರವಾದ ಚಿಂತೆಗೆ ನೆಲೆಯಾಗಿ ದ್ದಾರೆ; ಪ್ರಯಾಣದ ಆಯಾಸಕ್ಕೆ ಮನೆಯಾಗಿದ್ದಾರೆ; ದೂರಪ್ರಯಾಣದ ಕೋಟಲೆಗೆ ಮೂಲಸ್ಥಾನದಂತಿದ್ದಾರೆ' ಎಂಬುದನ್ನು ಚೆನ್ನಾಗಿ ಪ್ರಕಾಶಪಡಿಸುತ್ತಿತ್ತು. ವ|| ಹಾಗೆ ನೋಡಿ, ೮೨. ಮಹಾರಾಜನು ಅವರು ನಮಸ್ಕರಿಸುವುದಕ್ಕೆ ಮೊದಲೆ ಬಹಳ ಆತುರ

ವ॥ ಅದಲ್ಲದೆಯುಂ

ಎಂತುಟು ಯುವರಾಜನ ವೃ
ತ್ತಾಂತಂ ಬರುತಿರ್ದನೆಲ್ಲಿ ತಡೆದಿರ್ದಂ ತಾ
ನಿಂತೇಕೆ ಬಿನ್ನವತ್ರಲೆ
ಯಂ ತಂದಿರೆ ತೋಱಿಮೆಂದು ನುಡಿವುದುಮಾಗಳ್ ೮೩

ವ॥ ಆ ಲೇಖವಾಹಕರ್ ತ್ವರಿತಗತ [ಶಿ] ಸಮೇತಂ ರಾಜಾಧಿರಾಜಂಗೆ ಕೃತಪ್ರಣಾಮ ರಾಗಿ ದೇವ ಚಂದ್ರಾಪೀಡದೇವನಚ್ಛೋದಸರೋವರದ ತಡಿಯಲ್ಲಿರ್ದಂ ಮೇಲಾದ ವೃತ್ತಾಂತಮಂ ತ್ವರಿತಗತಿ [ತಂ] ಬಿನ್ನವಿಸಿದಪ್ಪನೆನುತ್ತಂ ವಿಷಣ್ಣಮಾನವದನರಾಗಿರ್ಪುದುಂ ವಿಳಾಸವತಿಮಹಾದೇವಿಯಿಂತೆಂದಳ್

ನಿರುದ್ಧನಿಜಬಾಷ್ಪವೋಕ್ಷರತಿದುಃಖದೀನಾನರ್
ಪರಿಚ್ಯುತಮುದರ್ ಮದಾನನ ವಿಲೋಕನತ್ರಸ್ತರಿಂ
ತಿರಲ್ಕೆ ಬೆಸಗೊಳ್ವುದೇಂ ಮಗನದೊಂದು ವೃತ್ತಾಂತಮಂ
ನಿರಾಕುಳಮೆ ಪೇಳ್ದರಾಂ ನೆರೆಯೆ ಕೇಳೆನಿನ್ನೆಲ್ಲಮಂ ೮೪

ವ॥ ಎನುತ್ತಂ ಪುತ್ರಸ್ನೇಹಕಾತರಹೃದಯೆಯಾದುದಱಿಂ ಬಹುಪ್ರಕಾರದಿಂ ಬಾಯ ಟಿದು ಪಳವಿಸುತ್ತಂ ಮೂರ್ಛಾಪ್ರಪನ್ನೆಯಾಗಿ ಕಱಿದಾನುಂಬೇಗಕ್ಕೆ ಶಿಶಿರೋಪಚಾರಂಗಳಿಂ ಲಬ್ಧಚೇತನೆಯುಮರ್ಧೋನ್ಮೀಲಿತಲೋಚನೆಯುಮಾದ ವಿಳಾಸವತೀಮಹಾದೇವಿಯುಂ ಬಾಷ್ಪ ಗದ್ಗದಕಂಠನಾಗಿ ತಾರಾಪೀಡನಿಂತೆಂದಂ

ದಿಂದ "ಮಗನು ಕ್ಷೇಮದಿಂದ ಬರುತ್ತಿರುವನೆ ? ಹೇಳಿ" ಎಂದು ಕೇಳಿದನು. ವ॥ ಅಲ್ಲದೆ ೮೩. "ಯುವರಾಜನ ಸಮಾಚಾರವೇನು ? ಎಲ್ಲಿ ಬರುತ್ತಿದ್ದಾನೆ? ಇಷ್ಟುದಿನ ಬರದೆ ತಡಮಾಡಲು ಕಾರಣವೇನು ? ಅವನ ಕಡೆಯಿಂದ ಪತ್ರವನ್ನೇನಾದರೂ ತಂದಿದ್ದರೆ ತೋರಿಸಿ" ಎಂದು ದೊರೆಯು ಕೇಳಿದನು. ವ॥ ಆ ಓಲೆಕಾರರು ತ್ವರಿತಗತನೊಂದಿಗೆ ಚಕ್ರವರ್ತಿಗೆ ನಮಸ್ಕಾರಮಾಡಿ "ಮಹಾಸ್ವಾಮಿ, ಯುವರಾಜರು ಅಚ್ಛೋದ ಸರೋವರದ ದಡದಲ್ಲಿದ್ದಾರೆ. ಹೆಚ್ಚು ಸಮಾಚಾರವನ್ನು ಈ ತ್ವರಿತಗತನು [ಶಿ] ಅರಿಕೆಮಾಡುತ್ತಾನೆ ಎಂದು ಹೇಳಿದರು. ದುಃಖದ ನೋವಿನಿಂದ ಕಳೆಗುಂದಿದ ಮುಖವುಳ್ಳ ಅವರನ್ನು ನೋಡಿ ವಿಲಾಸವತಿಮಹಾರಾಣಿಯು ಹೀಗೆ ಹೇಳಿದಳು. ೮೪. "ಅಯ್ಯೊ, ಇನ್ನು ಹೇಳುವುದೇನು ? ಹರಿಯುತ್ತಿರುವ ಕಣ್ಣೀರನ್ನು ಕಷ್ಟದಿಂದ ತಡೆದುಕೊಳ್ಳುತ್ತಿದ್ದಾರೆ. ಬಹಳ ದುಃಖದಿಂದ ಮುಖವು ಪೆಚ್ಚಾಗಿದೆ. ಸಂತೋಷವನ್ನು ಸ್ವಲ್ಪವೂ ತೋರ್ಪಡಿಸುತ್ತಿಲ್ಲ. ನನ್ನ ಮುಖವನ್ನು ನೋಡುವುದಕ್ಕೆ ಅಂಜುತ್ತಾರೆ. ನನ್ನ ಮಗನ ವೃತ್ತಾಂತವನ್ನು ಈ ದೂತರು ಸ್ಪಷ್ಟವಾಗಿಯೇ ಹೇಳಿಬಿಟ್ಟಿದ್ದಾರಲ್ಲ. ಮುಂದಿನ ಯಾವುದನ್ನೂ ನಾನು ಕೇಳಲಾರೆ" ವ॥ ಎಂದು ಹೇಳುತ್ತ ಪುತ್ರಸ್ನೇಹದಿಂದ ತಳಮಳಗೊಂಡ ಮನಸ್ಸುಳ್ಳವಳಾಗಿ, ಪರಿಪರಿಯಾಗಿ ಬಾಯಿಬಾಯಿ ಬಿಟ್ಟು ಗೋಳಾ

ಮಗನಾದನೆನಿಪ್ಪವರ್ಗೀ
ನೆಗಟ್ಚಿತ್ತಿ ನಮಗೇಕೆ ಬೇಡ ಕೇಳ್ವಂ ಸಾವ
ನ್ನೆಗವಿನಿಸಂ ಮತ್ತಂ ತ್ವರಿ
ತಗತನೆ ತಾಂ ಪೇಟಲಿರ್ದನೆಂಬುದನೀಗಳ್ ೮೫

ವ॥ ಎಂದಾ ತ್ವರಿತಗತನಂ ಬೆಸಗೊಳ್ವುದುಮವಂ ವೈಶಂಪಾಯನವ್ಯತಿಕರದಿಂ ಚಂದ್ರಾಪೀಡದೇವಂಗಾದ ವೃತ್ತಾಂತಮುಮಂ ತತ್ಕ್ಷಣದೊಳೆ ವಿಸ್ಮಯಮಾಗಲಾಕಸ್ಮಿಕಮಾಗಸದೊಳೊಗೆದ ದಿವ್ಯವಚನಮುಮನನಂತರಮಾ ಪತ್ರಲೇಖೆಯೊಡನಚ್ಛೋದಸರೋವರದೊಳ್ ಮುಳುಂಗಿದಿಂದ್ರಾಯುಧಮೆ ವಿಗತಶಾಪನಾಗಿ ಕಪಿಂಜಲಕನೆಂಬ ಕುಮಾರನಾದುದುಮನಾತನೆ ಮಹಾಶ್ವೇತೆಯಲ್ಲಿಗೆ ವಂದು ಪರಸ್ಪರಶಾಪದಿಂ ಸಕಳಕಳಾಭಿರಾಮನುಂ ವಿಬುಧಜನಸೇವ್ಯನುಂ ಯಶಶ್ಚಂದ್ರಿಕಾಧವಳಿತ ಸಕಲ ಭುವನನುಂ ಕುವಲಯಾನಂದಕರನುಮೆನಿಸಿದ ಚಂದ್ರಮನೆ ದೇವರ್ಗೆ ಚಂದ್ರಾಪೀಡನಾಗಿ ಪುಟ್ಟಿದನೇಂಬುದುಮನವರ್ ಕತಿಪಯದಿನದಿಂ ಪ್ರತ್ಯೂರ್ಜಿತರಾದಪ್ಪುದುಮಂ ತದ್ವಚನಾನುರೂಪಮಾಗಿ ಚಂದ್ರಾಪೀಡದೇವನ ದಿವ್ಯದೇಹದೊಳಾದ ದೃಢತರ

ಪುತ್ತ ಮೂರ್ಛಾಕ್ರಾಂತಳಾದಳು. ಅನಂತರ ಸ್ವಲ್ಪಹೊತ್ತಿನ ಮೇಲೆ ಶೈತ್ಯೋಪಚಾರಗಳಿಂದ ಅವಳಿಗೆ ಎಚ್ಚರವಾಯಿತು. ಅರ್ಧಮುಚ್ಚಿದ ಕಣ್ಣುಗಳುಳ್ಳ ಅವಳನ್ನು ಕಣ್ಣೀರು ತುಂಬಿ ಗದ್ಗದಧ್ವನಿಯುಳ್ಳ ತಾರಾಪೀಡನು ಹೀಗೆ ಹೇಳಿದನು. ೮೫. ಮಗನಿದ್ದು ಅವನಿಂದ ಆಗಬೇಕಾದ ಪ್ರಯೋಜನವನ್ನು ಪಡೆದವರು ಅವನ ಕಷ್ಟ ಸುಖಗಳನ್ನು ವಿಚಾರಿಸುವ ಪ್ರಯತ್ನಮಾಡಬೇಕು. ನಮಗದೆಲ್ಲ ಇನ್ನೇಕೆ ? ಬೇಡ. ಹೇಗೂ ಸಾಯಲು ಸಿದ್ಧವಾಗಿಯೇ ಇದ್ದೇವೆ. ಇನ್ನು ತ್ವರಿತಗತನು ಏನು ಹೇಳುತ್ತಾನೋ? ಅದನ್ನು ಸ್ವಲ್ಪ ಈಗ ಸಾಯುವುದರೊಳಗೆ ಕೇಳಿಬಿಡೋಣ" ವ॥ ಎಂದು ತ್ವರಿತಗತನನ್ನು ಕೇಳಿದನು. ಅವನು ವೈಶಂಪಾಯನನ ಸಂಬಂಧದಿಂದ ಚಂದ್ರಾಪೀಡದೇವನಿಗಾದ ವೃತ್ತಾಂತವನ್ನೂ, ಕೂಡಲೆ ಆಶ್ಚರ್ಯವಾಗುವಂತೆ ಆಕಸ್ಮಾತ್ತಾಗಿ ಆಕಾಶದಲ್ಲಿ ಉಂಟಾದ ದಿವ್ಯವಚನವನ್ನೂ, ಪತ್ರಲೇಖೆಯೊಡನೆ ಅಚ್ಛೋದಸರೋವರದಲ್ಲಿ ಮುಳುಗಿದ ಇಂದ್ರಾಯುಧವೇ ಶಾಪವಿಮೋಚನೆಯನ್ನು ಹೊಂದಿ ಕಪಿಂಜಲಕನೆಂಬ ಮುನಿಕುಮಾರನಾದುದನ್ನೂ, ಅವನೇ ಮಹಾಶ್ವೇತೆಯ ಹತ್ತಿರಕ್ಕೆ ಬಂದು ಪರಸ್ಪರ ಶಾಪದಿಂದ ಸಕಲ ಕಲಾಭಿರಾಮನೂ (೧. ಸಂಪೂರ್ಣವಾದ ಹದಿನಾರು ಕಳೆಗಳಿಂದ ಶೋಭಿಸುವ ೨. ಸಮಸ್ತ ವಿದ್ಯೆಗಳಿಂದ ಶೋಭಿಸುವ) ವಿಬುಧಸೇವ್ಯನಾದ (೧. ದೇವತೆಗಳಿಂದ ಸೇವಿಸಲ್ಪಡುವ ೨. ವಿದ್ವಾಂಸರಿಂದ ಸೇವಿಸಲ್ಪಡುವ) ಕುವಲಯಾನಂದಕರನಾದ (೧. ಕನ್ನೈದಿಲೆಗಳಿಗೆ ಸಂತೋಷವನ್ನುಂಟುಮಾಡುವ, ೨. ಭೂಮಂಡಲಕ್ಕೆ ಸಂತೋಷವನ್ನುಂಟುಮಾಡುವ) ಚಂದ್ರನೇ ಮಹಾರಾಜರ ಮಗನಾದ ಚಂದ್ರಾಪೀಡನಾಗಿ ಹುಟ್ಟಿರುವನೆಂಬುದನ್ನೂ, ಮತ್ತು ಅವರು ಕೆಲವು ದಿನಗಳ ತರುವಾಯ ಮರಳಿ ಜೀವ

ಪ್ರತ್ಯಯೋತ್ಪಾದಕಂಗಳೆನಿಸಿದ ಪ್ರತಿದಿನ ಪ್ರವರ್ಧಮಾನ ಲಾವಣ್ಯಾದ್ಯನೇಕ ಚಿಹ್ನಂಗಳು ಮನಾದ್ಯಂತಂ ಬಿನ್ನವಿಸೆ ನಿರತಿಶಯಃಶೋಕಾಕಾರಮುಂ ದುಶ್ಶ್ರವಮುಂ ವಿಸ್ಮಯೋತ್ಪಾದಕಮುಂ ಅತಿಕೌತುಕಜನಕಮುಮಪ್ಪ [ಚಂದ್ರಾಪೀಡ ವೈಶಂಪಾಯನರ] ವೈಶಂಪಾಯನನ ವೃತ್ತಾಂತಮಂ ತಾರಾಪೀಡದೇವಂ ಕೇಳ್ದು ಕೆಲದೊಳ್ ನಿರ್ವಿಶೇಷಾವಸ್ಥನಾಗಿರ್ದ ಶುಕನಾಸನ ಮೊಗಮಂ ನೋಳ್ಪುದುಂ ಆ ಮಂತ್ರಿಮುಖ್ಯಂ ತದವಸ್ಥನಾಗಿಯುಂ ಸುಹೃದ್ದುಃಖಾಪನೋದನಾರ್ಥಂ ಸ್ವಸ್ಥನಂದದಿಂ ನರೇಂದ್ರನನಿಂತೆಂದಂ

ಉದಯಿಕ್ಕುಂ ಪರಮೇಶ್ವರೇಚ್ಛೆಯೊಳೆ ಮೇಣ್ ಪ್ರಾಧಾನ್ಯದಿಂ ಮೇಣ್ ಸ್ವಕ
ರ್ಮದೆ ಮೇಣ್ ವಸ್ತು ನಿಜಸ್ವಭಾವದೊಳೆ ಮೇಣ್ ವೈಚಿತ್ರ್ಯಮಂ ಕೂಡೆ ತಾ
ಳ್ದಿದ ಸಂಸಾರದೊಳೆಂದುಮಿಂತೆ ಸುಖದುಃಖಾದಿ ಪ್ರಸಂಗಕ್ಕೆ ಪು
ಟ್ಟಿದ ನಾನಾವಿಧಮಪ್ಪ ಭೂತನಿವಹಕ್ಕಾರಬ್ಧ ಕಾರ್ಯೋದಯಂ ೮೬

ಇದಱೊಳ್ ಯುಕ್ತಿಯನಾರ
ಯ್ಯದಿರುಗ್ರವಿಷಪ್ರಸುಪ್ತನೆಚ್ಚರ್ಪಂ ಧ್ಯಾ
ನದೆ ವಲ್ ಕಾರ್ಬೊನ್ನಂ ತಿರು
ಗಿದಪುದಯಸ್ಕಾಂತಶಕ್ತಿಯೆಲ್ಲಿತ್ತದಱೊಳ್ ೮೭

ವನ್ನು ಪಡೆಯುವರೆಂಬುದನ್ನೂ, ಆ ಮಾತಿಗೆ ತಕ್ಕಂತೆ ಚಂದ್ರಾಪೀಡನ ದಿವ್ಯದೇಹದಲ್ಲಾದ ದೃಢವಾದ ನಂಬಿಕೆಯನ್ನು ಉಂಟುಮಾಡುವ ಪ್ರತಿನಿತ್ಯವೂ ಹೆಚ್ಚುತ್ತಿರುವ ಸೌಂದರ್ಯವೇ ಮೊದಲಾದ ಅನೇಕ ಗುರುತುಗಳನ್ನೂ ಆಮೂಲಾಗ್ರವಾಗಿ ಅರಿಕೆ ಮಾಡಿದನು. ತಾರಾಪೀಡನು ಅತ್ಯಧಿಕವಾದ ಶೋಕವನ್ನುಂಟುಮಾಡುವ, ಕೇಳಲು ಕಷ್ಟಕರವಾದ, ಆಶ್ಚರ್ಯವನ್ನೂ ಕುತೂಹಲವನ್ನೂ ಉಂಟುಮಾಡುವ ಚಂದ್ರಾಪೀಡ ವೈಶಂಪಾಯನರ ವೃತ್ತಾಂತವನ್ನು ಕೇಳಿ ಪಕ್ಕದಲ್ಲಿ ತನ್ನಂತೆಯೆ ದುಃಖಪೀಡಿತನಾದ ಶುಕನಾಸನ ಮುಖವನ್ನು ನೋಡಿದನು. ಆ ಮಂತ್ರಿವರೇಣ್ಯನು ಅಂತಹ ದುಃಸ್ಥಿತಿಯಲ್ಲಿದ್ದರೂ ಮಿತ್ರನ ದುಃಖವನ್ನು ಪರಿಹರಿಸುವುದಕ್ಕಾಗಿ ಸುಖವಾಗಿರುವವನಂತೆಯೇ ತೋರ್ಪಡಿಸಿಕೊಳ್ಳುತ್ತಾ ಮಹಾರಾಜನನ್ನು ಕುರಿತು ಹೀಗೆ ಹೇಳಿದನು. ೮೬. "ಮಹಾಸ್ವಾಮಿ, ಪರಮೇಶ್ವರನ ಇಚ್ಛೆಯಿಂದಾಗಲಿ ತ್ರಿಗುಣಾತ್ಮಕವಾದ ಪ್ರಕೃತಿಯಿಂದಾಗಲಿ ತನ್ನ ಜನ್ಮಾಂತರದ ಕರ್ಮದಿಂದಾಗಲಿ ವಸ್ತುವಿನ ನಿಜಸ್ವಭಾವದಿಂದಾಗಲಿ ಆಶ್ಚರ್ಯಕರವಾದ ಈ ಸಂಸಾರದಲ್ಲಿ ಸುಖ ದುಃಖಗಳನ್ನು ಅನುಭವಿಸಲು ಹುಟ್ಟಿರುವ ನಾನಾ ಬಗೆಯ ಪ್ರಾಣಿವರ್ಗಕ್ಕೆ ಈ ರೀತಿಯಲ್ಲಿ ಯಾವುದಾದರೂ ಒಂದು ಅದ್ಭುತವಾದ ಘಟನೆಯಿಂದ ಇಂತಹ ಕಾರ್ಯಗಳು ಉಂಟಾಗುತ್ತವೆ. ೮೭. ಇದರಲ್ಲಿ ಯಾವ ಕಾರ್ಯಕಾರಣ ಭಾವವಿಚಾರವನ್ನೂ ಮಾಡುವುದಕ್ಕಾಗುವುದಿಲ್ಲ. ವಿಷಾಪಹಾರಕವಾದ ಮಂತ್ರಗಳ ಪುನಶ್ಚರಣೆಯಿಂದ ಭಯಂಕರವಾದ ವಿಷದಿಂದ ಮೂರ್ಛೆಗೊಂಡವನೂ ಎಚ್ಚರಗೊಂಡು ಬದುಕುತ್ತಾನೆ. ಸೂಜಿಗಲ್ಲಿನ ಸಾನ್ನಿಧ್ಯದಿಂದ ಕಬ್ಬಿಣವೂ ತಿರುಗುವುದು.

ವ॥ ಮತ್ತಂ ಮದವಮಾಂದ್ಯೋತ್ಪಾದನಾಪಹರಣಮಾರಣ ವಶೀಕರಣದ್ವೇಷಣಾದಿಗಳ್ಗೆ ಪೆಱವುವೀದೊಱೆಯವರ್ಕೆ ಪಿರಿದುಮಾಗಮಂಗಳೆ ಪ್ರಮಾಣಂಗಳಲ್ಲದೆಯುಂ ಪುರಾಣ ರಾಮಾಯಣ ಭಾರತಾದಿಗಳೊಳಂ ಶಾಪಕದನಂಗಳನೇಕ ಪ್ರಕಾರಮಿರ್ಪುವವೆಂತೆನೆ

ಸಮನಿಸಿದತ್ತು ಕೇಳಜಗರತ್ವಮಗಸ್ತ್ಯನದೊಂದು ಶಾಪದಿಂ
ದಮೆ ಸುರರಾಜನಪ್ಪ ನಹುಷಂಗೆ ವಸಿಷ್ಠನ ಶಾಪದಿಂದವ
ಷ್ಟಮವಸುಗಲ್ತೆ ಶಂತನುತನೂಜತೆ ಸಾರ್ದುದು ಶುಕ್ರಶಾಪದಿಂ
ದಮೆ ದೊರೆಕೊಂಡುದಲ್ಲವೆ ಯಯಾತಿಗೆ ಯೌವನದೊಳ್ ಜರಾಗಮಂ ೮೮

ವ॥ ಅದಲ್ಲದೆಯುಂ

ತ್ರಿಜಗದ್ವಂದಿತನೆನಿಸಿ
ರ್ದಜನಾ ಜಮದಗ್ನಿಗಖಿಳಭುವನಪ್ರಭು ಪಂ
ಕಜನಾಭಂ ದಶರಥಭೂ
ಭುಜಂಗೆ ಸುತನಾದನೆಂಬುದಂ ಕೇಳ್ ಮೊದಲೊಳ್ ೮೯

ಜನಿಯಿಸುವರಲ್ತೆ ದೇವರ್
ಮನುಜರ್ಗದಱಿಂದೆ ಸಂದೆಯಂಬಡಲೇನಾ

ಮನುಜರ್ಗೇಂ ಕಿಱಿಯನೆ ನೀಂ
ವನರುಹನಾಭಂಗೆ ಚಂದ್ರನೇಂ ಕಿಱುಕುಳನೇ ೯೦

ಈ ಕಬ್ಬಿಣದಲ್ಲಿ ಸೂಜಿಗಲ್ಲಿನ ಶಕ್ತಿ (ತಾನಾಗಿಯೇ ತಿರುಗುವ ಶಕ್ತಿ) ಎಲ್ಲಿಂದ ಬರುತ್ತದೆ? ವ॥ ಮತ್ತು ಮದವನ್ನಾಗಲಿ ಜಾಡ್ಯವನ್ನಾಗಲಿ ಉಂಟುಮಾಡುವುದು ಅಥವಾ ಪರಿಹರಿಸುವುದು, ಕೊಲ್ಲುವುದು, ವಶಪಡಿಸಿಕೊಳ್ಳುವುದು, ದ್ವೇಷವನ್ನುಂಟುಮಾಡು ವುದು ಮೊದಲಾದುವುಗಳಿಗೂ ಬೇರೆ ಇಂತಹ ಕಾರ್ಯಸಾಧನೆಗಳಿಗೂ ಬಹಳವುಟ್ಟಿಗೆ ಶಾಸ್ತ್ರಗಳೇ ಆಧಾರವಾಗಿವೆ. ಅದಲ್ಲದೆ ಪುರಾಣಗಳಲ್ಲೂ ರಾಮಾಯಣ ಮಹಾಭಾರತ ಗಳಲ್ಲೂ ಶಾಪಗಳ ವೃತ್ತಾಂತಗಳು ಅನೇಕ ಪ್ರಕಾರವಾಗಿ ಉಲ್ಲೇಖಿಸಲ್ಪಟ್ಟಿವೆ. ಹೇಗೆಂದರೆ, ೮೮. ದೇವೇಂದ್ರಪದವಿಗೇರಿದ್ದ ನಹುಷನು ಅಗಸ್ತ್ಯಮಹರ್ಷಿಗಳ ಶಾಪದಿಂದ ಹೆಬ್ಬಾವಾಗಬೇಕಾಯಿತು. ವಸಿಷ್ಠಮಹರ್ಷಿಗಳ ಶಾಪದಿಂದ ಅಷ್ಟವಸು ಗಳಲ್ಲಿ ಕೊನೆಯವನು ಶಂತನುಮಹಾರಾಜನ ಮಗನಾಗಿ ಹುಟ್ಟಬೇಕಾಯಿತು. ಶುಕ್ರಾ ಚಾರ್ಯರ ಶಾಪದಿಂದಲೇ ಯಯಾತಿಗೆ ಯೌವನದಲ್ಲಿ ಮುಪ್ಪು ಉಂಟಾಯಿತು. ವ॥ ಅದಲ್ಲದೆ ೮೯. ಮೂರು ಲೋಕಕ್ಕೂ ಪೂಜ್ಯನಾದ, ಜನ್ಮರಹಿತನಾದ, ಸಮಸ್ತ ಜಗತ್ತಿಗೂ ಒಡೆಯನಾದ ಶ್ರೀಮನ್ನಾರಾಯಣನು ಜಮದಗ್ನಿಗೂ ದಶರಥನಿಗೂ ಮಗನಾಗಿ ಅವತರಿಸಲಿಲ್ಲವೆ ? ೯೦. ದೇವತೆಗಳು ಮಾನವರ ಮಕ್ಕಳಾಗಿ ಅವತರಿಸು ತ್ತಾರೆ. ಆದ್ದರಿಂದ ಸಂಶಯಪಡಬೇಕಾದ್ದಿಲ್ಲ, ಆ ದಶರಥನೇ ಮೊದಲಾದ ಮನುಷ್ಯ ರಿಗಿಂತ ನೀನೇನೂ ಕಮ್ಮಿಯಲ್ಲ. ಹಾಗೆಯೆ ಶ್ರೀಮನ್ನಾರಾಯಣನಿಗಿಂತ ಚಂದ್ರನೇನೂ

ಕನಸಿನೊಳಾ ದೇವಿಯುರಾ
ನನದೊಳ್ ಚಂದ್ರಪ್ರವೇಶಮಾಯ್ತೆಂದುಸಿರ್ದಯ್
ಜನಪತಿ ನೀಂ ಪೇೞ್ದಿನೆ ದಲ್
ನಿನಗಾನುಂ ಪುಂಡರೀಕಮುಂ ಕಂಡುದುಮಂ ೯೧

ಒರ್ವನಮೃತಸ್ವರೂಪದೊ
ಳೊರ್ವಂ ತಾನಿರ್ದಪಂ ತದಮೃತದಿನಿಂತಾ
ಯಿರ್ವರ್ಗಂ ಪ್ರತ್ಯುದ್ಭವ
ಮುರ್ವೀಪತಿ ಸಮನಿಸಿರ್ಪುದೇಂ ಸಂದೆಯಮೇ ೯೦

ಭುವನಕ್ಕಾದಮಪೂರ್ವಮಾದುದೆನಿಸಿರ್ದಾ ರೂಪು ಲಾವಣ್ಯ ವೈ
ಭವಮಾ ಕಾಂತಿವಿಶೇಷಮಾ ಜನಮನೋಹಾರಿತ್ವಮಾ ಸತ್ಕಳಾ
ನಿವಹಂ ಶ್ರೀನಿಲಯತ್ವಮಾ ಸಕಲಲೋಕಾಹ್ಲಾದಕಾರಿತ್ವಮು
ಕ್ಕುವೆ ಚಂದ್ರಾತ್ಮಕನಲ್ಲದಂದು ನೆಗೞ್ದಾ ರಾಜೇಂದ್ರಚಂದ್ರಾಂಕನೊಳ್ ೯೩

ಪಡೆದಾ ಕಾದಂಬರೀದೇವಿಗೆ ವರನೆ ಭವನ್ನಂದನಂ ಶಾಶ್ವತೈಶ್ವ
ರ್ಯದ ಪೆಂಪಂ ಲೋಕಪಾಲತ್ವದ ಮಹಿಮೆಯನುತ್ಸಾಹದಿಂ ತಾಳ್ದಿ ತದ್ದೇ
ಹದಿನಾದಂ ಭಕ್ತಿಯಿಂ ನಿನ್ನಡಿಗೆಱಗಿದಪಂ ತಾನೆ ಚಂದ್ರಂ ದಲೀ ಬಂ
ದದೞಿಂ ಸೈಪಾವುದಾ ಶಾಪಮೆ ನಮಗೆ ವರಂ ಶೋಕಮುಂ ಮಾಣ್ಬುದೀಗಳ್
೯೪

ಕಡಮೆಯಲ್ಲ. ೯೧. ಎಲೈ ದೊರೆಯೆ, ಕನಸಿನಲ್ಲಿ ಮಹಾರಾಣಿಯವರ ಬಾಯೊಳಗೆ ಚಂದ್ರನು ಬಂದು ಪ್ರವೇಶಮಾಡಿದುದನ್ನು ನೀವೂ ಹೇಳಿದ್ದೀರಿ. ಬಿಳಿಯ ಕಮಲ ವನ್ನು ಕಂಡಿದ್ದನ್ನು ನಾನೂ ಹೇಳಿದ್ದೇನೆ. ೯೨. ಒಬ್ಬನು (ಚಂದ್ರನು) ಅಮೃತಮಯ ವಾದ ಶರೀರದಲ್ಲಿ ಇದ್ದಾನೆ. ಇನ್ನೊಬ್ಬನು (ಪುಂಡರೀಕನು) ಅಮೃತದ ಪ್ರಭಾವ ದಿಂದ ಇದ್ದಾನೆ. ಹೀಗೆ ಆ ಅಮೃತಪ್ರಭಾವದಿಂದಲೇ ಅವರಿಬ್ಬರಿಗೂ ಜೀವ ಬರುತ್ತದೆ. ದೊರೆಯೇ ಇದರಲ್ಲಿ ಸಂಶಯವೇ ಇಲ್ಲ. ೯೩. ಚಂದ್ರಾಪೀಡನು ಚಂದ್ರನ ಅವತಾರ ವಲ್ಲದಿದ್ದರೆ ಭೂಮಿಯಲ್ಲಿ ಅಪೂರ್ವವಾದ ಆ ರೂಪ ಸೌಂದರ್ಯಸಮೃದ್ಧಿಯೂ, ಅತಿಶಯವಾದ ಕಾಂತಿಯೂ, ಜನರ ಮನಸ್ಸಿಗೆ ಆಹ್ಲಾದವನ್ನುಂಟುಮಾಡುವಿಕೆಯೂ, ಆ ಕಲೆಗಳ ಸಮೂಹವೂ, ಸಿರಿವಂತಿಕೆಯೂ, ಸಮಸ್ತ ಲೋಕವನ್ನೂ ಆಹ್ಲಾದಪಡಿಸು ವಿಕೆಯೂ ಹೇಗೆ ಉಂಟಾಗುತ್ತಿತ್ತು ? ೯೪. ಇದೊ, ಇನ್ನೇನು ಸ್ವಲ್ಪದಿನಗಳಲ್ಲೇ ನಿನ್ನ ಮಗನಾದ ಚಂದ್ರನು ಕಾದಂಬರೀದೇವಿಗೆ ವರನೆನಿಸಿಕೊಂಡು (ಕಾದಂಬರಿಯನ್ನು ಮದುವೆ ಮಾಡಿಕೊಂಡು) ಸ್ಥಿರವಾದ ಐಶ್ವರ್ಯದ ಸಮೃದ್ಧಿಯನ್ನೂ, ಲೋಕ ಪಾಲತ್ವದ ಮಹಿಮೆಯನ್ನೂ ಉತ್ಸಾಹದಿಂದ ಪಡೆದು, ಅದೇ ಶರೀರದಿಂದ ತಾನಾಗಿಯೇ ಬಂದು ಭಕ್ತಿಯಿಂದ ನಿಮ್ಮ ಕಾಲಿಗೆ ನಮಸ್ಕರಿಸುತ್ತಾನೆ, ಇದು ಖಂಡಿತ. ಇದಕ್ಕಿಂತಲೂ

ವ॥ ಎಂದು ಶುಕನಾಸಂ ತಿಳಿಯಪೇೞೆ ತಾರಾಪೀಡನರೇಂದ್ರಂ ಮತ್ತಮಿಂತೆಂದಂ

ಉೞಿದುವವೇನುಂ ತೋಱವು
ಘೞಿಲನೆ ತಾಂ ತನ್ನ ಕೂರ್ತ ತಮ್ಮಂಗಾದೊಂ
ದೞಲಿಂ ಮಗನೆರ್ದೆಯೊಡೆದುದು
ತೊೞಲುತ್ತಿರ್ದಪ್ಪುದು ಮನದೊಳಂ ಕಣ್ಗಳೊಳಂ ೯೫

ಸಂತೈಸಲ್ಕಾರ್ತಪೆನಿ
ಲ್ಲಿಂತುಂ ನೋಡೆನ್ನನಾನೆದಲ್ ದೇವಿಯುನಿ
ನ್ನೆಂತಾವತೆಱದಿನೀಗಳ್
ಸಂತೈಸುವೆನೆನುತಮಂತೆ ತಾರಾಪೀಡಂ ೯೬

ಪಾರಲ್ಕೇಂ ಜೀವಿತಸಂ
ಧಾರಣಕಿಂ ಗಮನವೊಂದೆ ಪೊಱಗಾಗಿರೆ ಮ
ತ್ತಾರಯಲುಪಾಯವಿಲ್ಲವ
ಧಾರಿಸುವುದು ಮನದೊಳಾರ್ಯ ನಮಗಿದು ಕಾರ್ಯಂ ೯೭

ವ॥ ಎಂಬುದುಂ ವಿಲಾಸವತೀಮಹಾದೇವಿ ವಿಲಂಬಮಾವುದೇೞೆಮೆಂಬುದುಮಿತ್ತ ಲತಿಸಂಭ್ರಮಯಾಗಿ ಚಂದ್ರಾಪೀಡನ ವೃತ್ತಾಂತಮಂ ಕೇಳ್ದು ಮನೋರಮೆ ಬರುತ್ತಿರ್ದ ಳೆಂಬುದಂ ಕೇಳ್ದು ವಿಲಾಸವತೀಮಹಾದೇವಿಯುಂ ತಾರಾಪೀಡನಿಂತೆಂದಂ

ಪ್ರಣ್ಯ ಬೇಕೆ ? ಅವರ ಶಾಪವೇ ನಮಗೆ ವರವಾಯಿತು. ಈಗ ಶೋಕವನ್ನು ಬಿಟ್ಟು ಬಿಡಬೇಕು" ವ॥ ಎಂದು ಶುಕನಾಸನು ತಿಳಿಯಪಡಿಸಿದನು. ಆಗ ತಾರಾಪೀಡನು ಹೀಗೆ ಹೇಳಿದನು. ೯೫. "ತನ್ನ ಪ್ರೀತಿಯ ತಮ್ಮನಿಗೆ ಉಂಟಾದ ದುಃಖದಿಂದ ತಟ್ಟನೆ ನನ್ನ ಮಗನ ಎದೆ ಒಡೆದುಹೋದುದು ನನ್ನ ಮನಸ್ಸಿನಲ್ಲೂ ಕಣ್ಣಿನಲ್ಲೂ ಕಟ್ಟಿ ತೊಳಲುತ್ತಿದೆ. ನನಗೆ ಇನ್ನೇನೂ ತೋರುವುದಿಲ್ಲ. ೯೬. ಈಗ ನೋಡು, ನಿಜವಾಗಿಯೂ ನನ್ನನ್ನೆ ನಾನು ಏನಾದರೂ ಸಮಾಧಾನಪಡಿಸಿಕೊಳ್ಳಲು ಅಶಕ್ತನಾಗಿದ್ದೇನೆ. ಹೀಗಿರಲು ರಾಣಿ ಯನ್ನು ನಾನು ಹೇಗೆ ಸಮಾಧಾನಪಡಿಸಲಿ ?" ಎಂದು ಹೇಳುತ್ತ, ಮುಂದುವರಿದು ೯೭. "ಆಯ್ಯ, ಇನ್ನು ನೋಡುವುದೇನಿದೆ ? ನಾವು ಪ್ರಾಣವನ್ನಿಟ್ಟುಕೊಂಡಿರಬೇಕಾದರೆ ಅಲ್ಲಿಗೆ ಹೋಗುವುದೊಂದೇ ಉಳಿದಿರುವುದು. ಇನ್ನು ಆಲೋಚಿಸಬೇಕಾದ ಕಾರಣವೇ ಇಲ್ಲ. ಇದನ್ನು ಮನಸ್ಸಿನಲ್ಲಿ ಖಚಿತಮಾಡಿಕೊ. ಇದೇ ನಮ್ಮ ಮುಖ್ಯ ಕರ್ತವ್ಯ" ಎಂದನು. ವ॥ ಆಗ ವಿಲಾಸವತೀಮಹಾರಾಣಿಯು "ಏಳಿ, ಇನ್ನು ವಿಳಂಬವೇತಕ್ಕೆ ?" ಎಂದಳು. ಅಷ್ಟರಲ್ಲಿ ಈಕಡೆ ಚಂದ್ರಾಪೀಡನ ವೃತ್ತಾಂತವನ್ನು ಕೇಳಿ ಮನೋರಮೆಯು ಬಹಳ ತ್ವರಿತದಿಂದ ಬರುತ್ತಿರುವಳೆಂದು ತಿಳಿಯಿತು. ಕೂಡಲೆ ತಾರಾಪೀಡನು ವಿಲಾಸ

ಭಾವಿಸು ಧೈರ್ಯಮಂ ತನಯರಿರ್ವರ ವಾರ್ತೆಯನತ್ತ ಕೇಳ್ದುದುಂ
ಜೀವಮನಂತೆ ಪತ್ತುವಿಡುಗುಂ ತನುವಿಂದದಱಿಂದಮೀಗಳಿ
ನ್ನಾವುದುಪಾಯದಿಂದಿನಿತುಮಂ ತಿಳಿವಂತಿರೆ ಮುಂಚೆ ಪೇೞ್ದು ನೀಂ
ಜೀವಿಸುವಂತು ಸಂತಯಿಸು ಪೋಗಿ ಮನೋರಮೆಯಂ ಮನಃಪ್ರಿಯೇ ೯೮

ವ॥ ಎಂದು ಪೇೞ್ದು ಪೋಗಿ ಮನೋರಮೆಯಂ ಸಂತೈಸಿ ಮುಂದಿಟ್ಟೊಡಗೊಂಡು ಬಂದಳ್ ಇತ್ತಲಾರ್ಯ ಶುಕನಾಸಂಬೆರಸು ಗಮನಸಂವಿಧಾನಮಂ ಮಾಡಿ ತಾರಾಪೀಡಂ ಪೊಱಮಡುವುದುಂ ರಾಜಾದೇಶದೊಳಂ ಚಂದ್ರಾಪೀಡಸ್ನೇಹದೊಳಮಾಶ್ಚರ್ಯದರ್ಶನತಾತ್ಪರ್ಯದೊಳಂ ಪ್ರಥಮಗತ ಪಿತೃಮಿತ್ರಭ್ರಾತೃಸ್ವಜನದರ್ಶನೌತ್ಸುಕ್ಯದೊಳಂ ಗೃಹರಕ್ಷಕವರ್ಜಮಾಗುಜ್ಜಯಿನಿಯ ಸಕಲರಾಜಲೋಕಮೆಟ್ಟು ನಡೆಗೊಳ್ವುದಂ ಕಂಡಿದು ಶೀಘ್ರಗಮನವಿಘಾತಹೇತುವೆಂದು

ಇರಿಸಲ್ವೇಡಿರ್ದರಂ ಪಿಂದಿರಿಸಿ ಸಕಲರಾಜನ್ಯಕಂ ಸುತ್ತುವಂದ
ಟ್ಟಿರಲಶ್ವಾನೀಕವಾದಂ ಪಥಮನಿರದೆ ಪೀರ್ತಂದುವೋ ಪೇೞೆಂಬಂ
ತಿರಲಿಟ್ಟಂದೆಲ್ಲಿಯುಂ ನಿಲ್ಲದೆ ಕೆಲವುದಿವಸಕ್ಕೆಯ್ದಿದಂ ಪದ್ಮಪತ್ರೋ
ತ್ಕರಕಾಂತಿಪ್ರಚ್ಛದಾಚ್ಛಾದಿತ ಜಲಮೆನಿಪಚ್ಛೋದಮಂ ಸಾರ್ವಭೌಮಂ ೯೯

ವತಿಯನ್ನು ಕುರಿತು ಹೀಗೆ ಹೇಳಿದನು. ೯೮. "ಪ್ರಿಯೆ, ನೀನು ಮೊದಲು ಧೈರ್ಯವನ್ನು ತಂದುಕೊ. ಮನೋರಮೆಯು ಇಬ್ಬರು ಮಕ್ಕಳ ವೃತ್ತಾಂತವನ್ನು ಬೇರೆ ಕಡೆಯಿಂದ ಕೇಳಿದರೆ, ಅವಳ ಜೀವವು ದೇಹವನ್ನು ಬಿಟ್ಟು ಹೊರಟುಹೋಗುತ್ತದೆ. ಆದ್ದರಿಂದ ಯಾವುದಾದರೂ ಉಪಾಯದಿಂದ ಎಲ್ಲ ವೃತ್ತಾಂತವನ್ನೂ ಮೊದಲು ಅವಳಿಗೆ ತಿಳಿಯಪಡಿಸಿ, ಅವಳು ಪ್ರಾಣಧಾರಣೆ ಮಾಡಿಕೊಂಡಿರುವಂತೆ ಹೋಗಿ ಸಮಾಧಾನಪಡಿಸು" ವ॥ ಎಂದು ಹೇಳಿದನು. ವಿಲಾಸವತಿಯು ಹೋಗಿ ಮನೋರಮೆಯನ್ನು ಸಮಾಧಾನಪಡಿಸಿ ಜೊತೆಯಲ್ಲಿ ಕರೆದುಕೊಂಡು ಬಂದಳು. ಈ ಕಡೆ ಶುಕನಾಸನೊಂದಿಗೆ ತಕ್ಕ ಏರ್ಪಾಡುಗಳನ್ನು ಮಾಡಿ ತಾರಾಪೀಡನು ಪ್ರಯಾಣಕ್ಕೆ ಸಿದ್ಧನಾದನು. ಮಹಾರಾಜನ ಅಪ್ಪಣೆಯಿಂದಲೂ, ಚಂದ್ರಾಪೀಡನ ಮೇಲಿನ ಸ್ನೇಹದಿಂದಲೂ, ಆಶ್ಚರ್ಯವನ್ನು ನೋಡಬೇಕೆಂಬ ಆಶಯದಿಂದಲೂ, ಮೊದಲು ಪ್ರಯಾಣಮಾಡಿದ್ದ ತಂದೆ, ಸ್ನೇಹಿತ, ಸಹೋದರ, ಸ್ವಜನರುಗಳನ್ನು ನೋಡಬೇಕೆಂಬ ಉತ್ಸಾಹದಿಂದಲೂ ಮನೆಯ ಕಾವಲಿನವರನ್ನು ಬಿಟ್ಟು ಉಳಿದ ಉಜ್ಜಯಿನಿಯ ಸಮಸ್ತ ರಾಜರುಗಳೂ ಪ್ರಯಾಣ ಹೊರಟಿರುವುದನ್ನು ಕಂಡು ಇದು ಚುರುಕಾಗಿ ಪ್ರಯಾಣ ಮಾಡುವುದಕ್ಕೆ ಅಡ್ಡಿಯಾಗುತ್ತದೆ ಎಂದು ತಿಳಿದು, ೯೯. ಚಕ್ರವರ್ತಿಯಾದ ತಾರಾಪೀಡನು ಬಿಟ್ಟು ಹೋಗಬಹುದಾದವರನ್ನೆಲ್ಲ ಹಿಂದಕ್ಕೆ ಕಳುಹಿಸಿ, ಇತರ ರಾಜರೆಲ್ಲರೂ ಸುತ್ತಿಕೊಂಡು ಸಂಗಡ ಬರುತ್ತಿರಲು ಕುದುರೆಸೈನ್ಯವು ಬಹಳಮಟ್ಟಿಗೆ ದಾರಿಯನ್ನು ಕುಡಿದುಬಿಡುತ್ತಿದೆಯೋ, ಹೇಳಿ ಎಂಬಂತೆ ಪ್ರಯಾಣ ಮಾಡಿದನು. ಎಲ್ಲಿಯೂ ನಿಲ್ಲದೆ ಕೆಲವು ದಿನ

ವ॥ ಅಂತೆಯ್ದಿ ವಿಕಲ್ಪಶತಡೋಲಾಧಿರೂಢನಾಗಿ ವಾರ್ತೆಯನಾರಯ್ಯಲಾಪ್ತರೆನಿಸಿದ ಸಾದಿಗಳಂ ತ್ವರಿತಗತಂಬೆರಸಟ್ಟಿದನನ್ನೆಗಮವರ್ವೆರಸುಜ್ಝಿತಾತ್ಮಸಂಸ್ಕಾರವುಲಿನೀಕೃತ ಶರೀರರುಂ ಅವನಿತಲನಿವೇಶಿತೋತ್ತಮಾಂಗರುಮುದ್ಬಾಷ್ಪದೀನತರದೃಷ್ಟಿಗಳುಮಾಗಿ ಲಜ್ಜೆಯಿಂ ರಸಾತಳಮಂ ಪುಗುವಂತೆ ಬಗೆದು ಮೇಘನಾದಸಹಿತಂ ಬರುತಿರ್ದ ಚಂದ್ರಾಪೀಡಚರಣನಿಬದ್ಧ ಜೀವಿತರಪ್ಪ ನಿಖಿಲ ರಾಜಪುತ್ರರಂ ಕಂಡು ಸಮುಲ್ಲಸಿತತನಯ ಶೋಕಾಕ್ರಾಂತನಾದೊಡಮುಚ್ಛ್ವಸಿತಹೃದಯನುಂ ದೃಢೀಭೂತ ಚಂದ್ರಾಪೀಡದೇಹಾವಿನಾಶಪ್ರತ್ಯಯನುಮಾಗಿ ಪಕ್ಕದಿರ್ದ ವಿಳಾಸವತೀಮಹಾದೇವಿಯರುಂ ತಾರಾಪೀಡನೀತೆಂದಂ

> ಬಗೆಯೊಳ್ ಧೈರ್ಯಮನೂಂಟುಮಾಡು ತನುವಂ ತಾಳ್ದಿರ್ದಪಂ ನಿಶ್ಚಯಂ
> ಮಗನೆಂತುಂತೆಗೆ ಮೇಘನಾದಸಹಿತಂ ತತ್ಪಾದಪದ್ಮೋಪಜೀ
> ವಿಗಳಾಗಿರ್ದರ ಮಕ್ಕಳೆಲ್ಲವಿದೆ ನಮ್ಮಂ ಕಾಣಲೆಂದೀಗಳಿ
> ಲ್ಲಿಗೆ ಮುಂತೀ ಬರುತಿರ್ಪರೀಕ್ಷಿಸಿನಿಸಂ ಪಂಕೇಜಪತ್ರೇಕ್ಷಣೇ ೧೦೦

ವ॥ ಎಂಬುದುಮದಂ ಕೇಳ್ದು ಸುತನಿರ್ವಿಶೇಷಮಪ್ಪ ರಾಜಲೋಕಮಂ ನೋಡಿ ಧೈರ್ಯಮಂ ಪತ್ತುವಿಟ್ಟಿರ್ದ ಪಡಿದೆಱೆದಂತಾಗೆ

ಗಳೊಳಗಾಗಿ ತಾವರೆದಳಗಳ ಗುಂಪಿನ ಕಾಂತಿಪಟಲದಿಂದ ಮುಚ್ಚಿಹೋದ ನೀರುಳ್ಳ ಅಚ್ಛೋದಸರೋವರವನ್ನು ಸೇರಿದನು. ವ॥ ಹಾಗೆ ಬಂದು ನೂರಾರು ವಿಕಲ್ಪಗಳಿಂದ ಡೋಲಾಯಮಾನವಾದ ಮನಸ್ಸುಳ್ಳವನಾಗಿ, ಸಮಾಚಾರವನ್ನು ತಿಳಿದುಕೊಂಡುಬರಲು ಆಪ್ತರಾದ ಸವಾರರನ್ನು ತ್ವರಿತಗತನ ಜೊತೆಯಲ್ಲಿ ಕಳುಹಿಸಿದನು. ಅವರ ಜೊತೆಯಲ್ಲಿ ಸ್ನಾನವೇ ಮೊದಲಾದ ಶರೀರಸಂಸ್ಕಾರಗಳನ್ನು ಬಿಟ್ಟಿರುವುದರಿಂದ ಕೊಳಕಾದ ಶರೀರವುಳ್ಳ, ತಲೆಗಳನ್ನು ನೆಲಕ್ಕೆ ತಗ್ಗಿಸಿಕೊಂಡಿರುವ, ಉಕ್ಕುತ್ತಿರುವ ಕಣ್ಣೀರಿನಿಂದ ಕಳೆಗುಂದಿದ ಕಣ್ಣುಗಳುಳ್ಳ, ನಾಚಿಕೆಯಿಂದ ಪಾತಾಳಕ್ಕೆ ಇಳಿದುಹೋಗಲು ಬಯಸುವಂತಿರುವ ಮೇಘನಾದನ ಜೊತೆಯಲ್ಲಿ ಬರುತ್ತಿರುವ ಚಂದ್ರಾಪೀಡನ ಅಡಿದಾವರೆಗಳಲ್ಲಿ ಇರಿಸಲ್ಪಟ್ಟ ಪ್ರಾಣಗಳುಳ್ಳ ಅರಸುಮಕ್ಕಳೆಲ್ಲರನ್ನೂ ನೋಡಿ ತಾರಾಪೀಡನು ಹೆಚ್ಚುತ್ತಿರುವ ಪುತ್ರಶೋಕದಿಂದ ಆವೃತನಾದನು. ಆದರೂ ಅದನ್ನು ಸಮಾಧಾನಪಡಿಸಿಕೊಂಡು ಚಂದ್ರಾಪೀಡನ ಶರೀರವು ಅಳಿದಿಲ್ಲವೆಂಬ ದೃಢನಂಬಿಕೆಯುಳ್ಳವನಾಗಿ ಪಕ್ಕದಲ್ಲಿದ್ದ ವಿಲಾಸವತೀದೇವಿಯನ್ನು ಕುರಿತು ತಾರಾಪೀಡನು ಹೀಗೆಂದನು. ೧೦೦. "ಕಮಲನೇತ್ರೆ, ಮನಸ್ಸಿನಲ್ಲಿ ಧೈರ್ಯವನ್ನು ತಂದುಕೊ. ಮಗನು ಖಂಡಿತವಾಗಿಯೂ ಶರೀರವನ್ನು ಧರಿಸಿದ್ದಾನೆ, ಕುಮಾರನ ಪಾದಕಮಲವನ್ನು ಆಶ್ರಯಿಸಿಕೊಂಡಿರುವ ಅರಸುಮಕ್ಕಳೆಲ್ಲರೂ ಮೇಘನಾದನೊಂದಿಗೆ ನಮ್ಮನ್ನು ನೋಡಬೇಕೆಂದು ಈಗ ಇಲ್ಲಿಗೆ ಬರುತ್ತಿದ್ದಾರೆ. ಅವರನ್ನು ಸ್ವಲ್ಪನೋಡು" ವ॥ ಎಂದನು. ಅದನ್ನು ಕೇಳಿ ವಿಲಾಸವತಿಯು ತನ್ನ ಮಗನಂತೆಯೇ ಇದ್ದ ಆ ಅರಸುಮಕ್ಕಳ ಗುಂಪನ್ನು ನೋಡಿ ಧೈರ್ಯ

ಒಡನಾಡಿಯೊಡನೆ ಬಳೆದೊಡ
ನೊಡಸಂದಿರ್ದರಸುಮಕ್ಕಳೆಲ್ಲರ್ ಬರೆ ನೀಂ
ನಡುವೆಸೆದು ಬಾರದಾವುದು
ತೊಡರ್ಪಿನಿಂ ಪೆಱಗೆ ನಿಂದೆಯೊರ್ವನೆ ಕಂದಾ ೧೦೧

ವ॥ ಎಂದು ಪ್ರಲಾಪಂಗೆಯ್ವ ವಿಲಾಸವತೀಮಹಾದೇವಿಯನಾಶ್ವಾಸಿಸುತ್ತಿರ್ಪುದು ಮಖಿಳ ರಾಜಲೋಕಂಬೆರಸು ಮೇಘನಾದನವನಿತಳನಿವೇಶಿತೋತ್ತಮಾಂಗನಾಗಿ

ಎಂತುಟು ಮೇಘನಾದ ತೊಡಕಿಲ್ಲದೆ ಪೇೞ್ ಮಗನಿರ್ದದೊಂದು ವೃ
ತ್ತಾಂತಮನೆಂಬುದುಂ ಪ್ರತಿದಿನಂ ನೃಪಚಂದ್ರನ ದಿವ್ಯದೇಹದಿಂ
ಕಾಂತಿ ಪೊದಟ್ದು ಪರ್ವಿ ಗಗನಾಂತರಮಂ ಪುದಿದಿರ್ಪುದೀಗಳೇ
ನುಂ ತಡವಿಲ್ಲ ಸನ್ನಿಹಿತನಾದಪನಲ್ತೆ ಭವತ್ತನೂಭವಂ ೧೦೨

ವ॥ ಎಂದು ಮೇಘನಾದಂ ಬಿನ್ನಪಂಗೆಯ್ಯೆ ಸಮುಪಜಾತಪ್ರತ್ಯಾಶೆಯಾಗಿರ್ದ ವಿಲಾಸ ವತೀಮಹಾದೇವಿಗಿಂತೆಂದಂ

ಅಮೃತಾಂಶುಮೂರ್ತಿಯೆನಿಸಿ
ರ್ದ ಮಗನನೀಕ್ಷಿಸಿ ಕೃತಾರ್ಥರಪ್ಪಂ ನಡೆ ಪೋ
ಪಮೆನುತ್ತೆ ಮಹಾಶ್ವೇತಾ
ಶ್ರಮಕ್ಕೆ ನಡೆತಂದನಂದು ತಾರಾಪೀಡಂ ೧೦೩

ವ॥ ಅನ್ನೆಗಮಿತ್ತ ಚಂದ್ರಾಪೀಡನ ಗುರುಜನದ ಬರವಂ ಮಹಾಶ್ವೇತೆ ಕೇಳ್ದು ಭೋಂಕನೆ ಕಣ್ಬನಿಗಳಂ ಸೂಸಿ

ವನ್ನು ಕಳೆದುಕೊಂಡು ಎದೆಬಾಗಿಲು ತೆರೆದಂತಾಗಲು, ೧೦೧. "ಕಂದಾ, ನಿನ್ನ ಜೊತೆಯಲ್ಲಿ ಬೆಳೆದು, ಯಾವಾಗಲೂ ಜೊತೆಯಲ್ಲೇ ಇರುವ ಈ ಅರಸುಮಕ್ಕಳೆಲ್ಲ ಬಂದಿದ್ದಾರಲ್ಲ ! ನೀನೊಬ್ಬನು ಮಾತ್ರ ಅವರ ಮಧ್ಯದಲ್ಲಿ ಶೋಭಿಸಿ ಬರುತ್ತಿಲ್ಲವಲ್ಲ ! ಯಾವ ಅಡ್ಡಿಯಿಂದ ಒಬ್ಬನೆ ಹಿಂದುಳಿದುಬಿಟ್ಟೆ ?" ವ॥ ಹೀಗೆ ಪ್ರಲಾಪಿಸುತ್ತಿದ್ದ ವಿಲಾಸವತೀದೇವಿಯನ್ನು ತಾರಾಪೀಡನು ಸಮಾಧಾನಪಡಿಸುತ್ತಿರುವಲ್ಲಿ ಅರಸುಮಕ್ಕಳೆಲ್ಲರೊಂದಿಗೆ ಮೇಘನಾದನು ಬಂದು ನಮಸ್ಕರಿಸಿದನು. ೧೦೨. "ಮೇಘನಾದ, ಮಗನು ಹೇಗಿದ್ದಾನೆ ಎಂಬುದನ್ನು ವಿಶದವಾಗಿ ಹೇಳು" ಎಂದು ತಾರಾಪೀಡನು ಕೇಳಿದನು. ಅದಕ್ಕೆ ಅವನು "ಸ್ವಾಮಿ, ಚಂದ್ರಸ್ವರೂಪನಾದ ಯುವರಾಜನ ದಿವ್ಯದೇಹದಿಂದ ಕಾಂತಿಯು ಹೊರಹೊಮ್ಮಿ ಹರಡಿ ಆಕಾಶದಲ್ಲೆಲ್ಲಾ ವ್ಯಾಪಿಸುತ್ತಿದೆ. ತಮ್ಮ ಕುಮಾರನು ಪ್ರತ್ಯಕ್ಷವಾಗಿಯೇ ಇಲ್ಲಿದ್ದಾನೆ." ವ॥ ಎಂದು ಅರಿಕೆಮಾಡಿದನು. ತಾರಾಪೀಡನು ಆಸೆಗೊಂಡ ವಿಲಾಸವತೀದೇವಿಗೆ ಹೀಗೆಂದನು. ೧೦೩. "ಚಂದ್ರಮೂರ್ತಿಯಾದ ಮಗನನ್ನು ನೋಡಿ ಧನ್ಯರಾಗೋಣ, ನಡೆ ಹೋಗೋಣ" ಎಂದು ಹೇಳಿ ತಾರಾಪೀಡನು ಮಹಾಶ್ವೇತಾಶ್ರಮಕ್ಕೆ ಬಂದನು. ವ॥ ಅಷ್ಟರಲ್ಲಿ ಈ ಕಡೆ ಚಂದ್ರಾಪೀಡನ

ಕರಗಿಸುತಿರ್ದಪೆಯೆನ್ನಂ
ಮರಣಮನೆಮಗೇಕೆ ಮಾಡೆ ವಿಧಿಯೆನುತಂ ನಿ
ತ್ತರಿಸದೆ ಲಜ್ಜಿಸಿ ಪೊಕ್ಕಳ್
ಪರಿದು ಮಹಾಶ್ವೇತೆ ನಿಜಗುಹಾಭ್ಯಂತರಮಂ ೧೦೪

ವ॥ ಗಂಧರ್ವರಾಜನಂದನೆಯುಂ ಮೋಹಾಂಧಕಾರಂ ಕವಿಯೆ ಚಂದ್ರಮೂರ್ತಿಯಪ್ಪ ಚಂದ್ರಾಪೀಡನ ಪಕ್ಕದೊಳ್ ಸಖೀಜನಹಸ್ತಾವಲಂಬಿತಶರೀರೆಯಾಗಿರ್ದಳ್ ಇತ್ತ ಶುಕನಾಸಾವಲಂಬಿತ ಶರೀರನಾಗಿ ತಾರಾಪೀಡಂ ತದಾಶ್ರಮಮಂ ಪುಗುವುದುಮಲ್ಲಿ ತನ್ನ ಮಗನೆತ್ತವೋದನೆಂದು ನೀಡುಂ ನೋಡುತ್ತುಂ ಮನೋರಮಾವಲಂಬಿತಶರೀರೆಯಾಗಿ ವಿಲಾಸವತೀಮಹಾದೇವಿ ಪೊಕ್ಕು ಸಹಜಮಪ್ಪ ಕಾಂತಿಯೊಳೊಪ್ಪಂಬಡೆದು ಲೆಪ್ಪದಂತಿರ್ದ ಮಗನಂ ಗೆಂಟಿನೊಳೆ ಕಂಡು

ಇನಿತು ದಿವಸಕ್ಕೆಂತಾನುಂ ಕಂಡೆನಪ್ಪುವೆ ಕಂದ ಪಾ
ಯೆನುತ ನಿವಿರಲ್ ತೋಳ್ಗಳ್ ಕಣ್ಣೀರಪೂರದಲಂದು ಝು
ಮ್ಮೆನುತೆ ಮೊಲೆವಾಲಾದಂತಾನೆತ್ತಲುಂ ತೊರೆದುರ್ಚೆ ಪಾ
ಯ್ವನೆಗಮಿರದೆಟ್ಟಂದಳ್ ಸೋತ್ಕಂಠೆ ಪುತ್ರವಿಮೋಹದಿಂ ೧೦೫

ತಾಯಿತಂದೆಗಳ ಆಗಮನವನ್ನು ಮಹಾಶ್ವೇತೆಯು ಕೇಳಿ ಕಂಬನಿಗರೆದು ೧೦೪. "ಅಯ್ಯೋ, ವಿಧಿಯೆ, ನನ್ನನ್ನು ಸುಟ್ಟು ಕರಿಕುಮಾಡುತ್ತಿರುವೆಯಲ್ಲ! ನನಗೆ ಮರಣವನ್ನೇಕೆ ಉಂಟುಮಾಡದೆಹೋದೆ?" ಎಂದು ಹಲುಬುತ್ತಾ, ನಾಚಿಕೆಯಿಂದ ನಿಲ್ಲಲಾರದೆ ಓಡಿ ತನ್ನ ಗುಹೆಯ ಒಳಕ್ಕೆ ಹೊರಟುಹೋದಳು. ವ॥ ಕಾದಂಬರೀ ದೇವಿಗೂ ಮೂರ್ಛೆಯ ಮಬ್ಬು ಕವಿಯಲು ಚಂದ್ರಸ್ವರೂಪನಾದ ಚಂದ್ರಾಪೀಡನ ಪಕ್ಕದಲ್ಲಿ ಗೆಳತಿಯರ ಕೈಗಳಿಂದ ಧೃತವಾದ ಶರೀರವುಳ್ಳವಳಾಗಿದ್ದಳು. ಈಕಡೆ ಶುಕನಾಸನಿಂದ ಹಿಡಿಯಲ್ಪಟ್ಟಿರುವ ಶರೀರವುಳ್ಳ ತಾರಾಪೀಡನು ಆಶ್ರಮಕ್ಕೆ ಬಂದನು. ಮನೋರಮೆಯಿಂದ ಧೃತಳಾದ ವಿಲಾಸವತಿಯೂ ತನ್ನ ಮಗನು ಎಲ್ಲಿ ಹೋದನೆಂದು ಬಹಳವಾಗಿ ಹಂಬಲಿಸುತ್ತಾ ಒಳಕ್ಕೆ ಬಂದು, ಸಹಜವಾದ ಕಾಂತಿಯಿಂದ ಶೋಭಿಸುತ್ತ ಪುತ್ತಳಿಯಂತಿದ್ದ ಮಗನನ್ನು ದೂರದಲ್ಲೇ ನೋಡಿದಳು. ೧೦೫. "ಅಯ್ಯೋ, ಕಂದ, ಇಷ್ಟು ದಿನಗಳಾದ ಮೇಲಾದರೂ ನಿನ್ನನ್ನು ಕಂಡೆನಲ್ಲ!" ಎಂದು ಹೇಳುತ್ತಾ ತೋಳುಗಳನ್ನು ನೀಡಿ, ಕಣ್ಣೀರಿನ ಪ್ರವಾಹವು ಸುರಿಯುತ್ತಿರಲು, ಝುಮ್ಮೆಂದು ಮೊಲೆಹಾಲು ತುಂಬಿ ಉಕ್ಕಿ ಹರಿಯುತ್ತಿರಲು ಪುತ್ರಪ್ರೇಮದಿಂದ ಬಹಳ ಉದ್ವಿಗ್ನಳಾಗಿ ಬಂದಳು.

ವ॥ ಅಂತು ಬರುತ್ತಂ

ಮಱುಮಾತಂ ಕುಡು ವತ್ಸ ನಿನ್ನ ವಿನಯಂ ಪೇೞೆತ್ತವೋಯ್ತೀಗಳೀ
ತೆಱನೇಕಾದುದೊ ಕಂದ ಕಾಲ್ವಿಡಿದಪೆಂ ನಿಮ್ಮಯ್ಯನೀ ಬಂದನ
ಟ್ಕಱಿನೊಳ್ ನೀನಿದಿರೆೞ್ದು ಕಾಲ್ಗೆಱಗು ಚಂದ್ರಾಪೀಡ ನೀಂ ಭಕ್ತಿಯಂ
ಮಱೆದೈ ನಿನ್ನಯ ಕೂರ್ಮೆಯೆಲ್ಲಿತೆನುತಂ ಬಾಯ್ವಿಟ್ಟು ಪೊಯ್ಯಲ್ಪಿದಳ್ ೧೦೬

ಬಿಡದಾಲಿಂಗಿಸಿ ಪುತ್ರನಂ ಪದೆದು ಮೂರ್ಧಾಘ್ರಾಣಮಂ ಮಾಡಿ ಕ
ನ್ನಡಿಯಂತಿರ್ದ ಕದಂಪನೊತ್ತಿ ಕಡುಪೀದಿನ್ನೇವೆನಾನೆಂದು ಕೇ
ಸಡಿಯಂ ನೆತ್ತಿಯೊಳಿಟ್ಟುಕೊಂಡು ಪಿರಿದೊಂದಾಕ್ರಂದದಿಂ ಗಂಟಲಂ
ದೊಡೆವಂತಾಗೞುತಿರ್ದಳಿರ್ಪಿನೆಗಮೆಟ್ಟಂದಂ ಧರಾಧೀಶ್ವರಂ ೧೦೭

ವ॥ ಅಂತು ಬಂದಂತರಿತ ನಿಜಪೀಡನಪ್ಪ ತಾರಾಪೀಡಂ ಚಂದ್ರಾಪೀಡನಂ ಪ್ರಜಾ ಪೀಡಾಪಹರಣಕ್ಷಮಂಗಳಪ್ಪ ಬಾಹುದ್ವಯದಿನಪ್ಪಿ ವಿಲಾಸವತೀಮಹಾದೇವಿಗಿಂತೆಂದಂ

ಬಸುಱೊಳ್ ಬಂದಂ ನಮ್ಮೊ
ದು ಸುಕೃತದಿಂ ದೇವತಾತ್ಮನೀ ಮಗನಂ ಮಾ
ನಿಸನೆಂದು ದೇವಿ ನೀಂ ಭಾ
ವಿಸಿ ಶೋಕಮನೇನನಪ್ಪುಕೆಯ್ಯದಿರೀಗಳ್ ೧೦೮

ವ॥ ಹಾಗೆ ಬರುತ್ತ ೧೦೬. "ಕಂದ ! ಮಾತಾಡಪ್ಪ ! ನಿನ್ನ ಆ ವಿನಯವು ಈಗ ಎಲ್ಲಿ ಹೋಯಿತು ? ಹೇಳು. ಈಗ ಏಕೆ ಹೀಗಾಗಿಬಿಟ್ಟಿತು. ನಿನ್ನ ಕಾಲು ಕಟ್ಟಿಕೊಳ್ಳುತ್ತೇನೆ, ಮಗು. ನಿನ್ನನ್ನು ನೋಡಬೇಕೆಂದು ಪ್ರೀತಿಯಿಂದ ನಿನ್ನ ತಂದೆಯವರು ಬಂದಿದ್ದಾರೆ. ನೀನು ಇದಿರೆದ್ದು ಅವರ ಕಾಲಿಗೆ ನಮಸ್ಕರಿಸು. ಅಯ್ಯೋ, ಚಂದ್ರಾಪೀಡ ನೀನು ನಮ್ಮ ಮೇಲಿನ ಭಕ್ತಿಯನ್ನು ಮರೆತುಬಿಟ್ಟೆಯಾ ? ನಿನ್ನ ಪ್ರೀತಿ ಎಲ್ಲಿಹೋಯಿತು ?" ಎಂದು ವಿಲಾಸವತಿಯು ಬಾಯಿ ಬಾಯಿಬಿಟ್ಟು ಗೋಳಾಡಿದಳು. ೧೦೭. ಮಗನನ್ನು ಪ್ರೀತಿ ಯಿಂದ ಗಾಢವಾಗಿ ತಬ್ಬಿಕೊಂಡು ತಲೆಯನ್ನು ಮೂಸಿನೋಡಿ, ಕನ್ನಡಿಯಂತಿದ್ದ ಕೆನ್ನೆ ಯನ್ನು ಅಮುಕಿ "ಅಯ್ಯೋ, ನಾನು ಇನ್ನೇನುಮಾಡಲಿ !" ಎಂದು ಹೇಳುತ್ತಾ ಕೆಂಪಾದ ಕಾಲುಗಳನ್ನು ತನ್ನ ನೆತ್ತಿಗೆ ತಗುಲಿಸಿಕೊಂಡು, ಹೆಚ್ಚಾದ ರೋದನದಿಂದ ಗಂಟಲು ಒಡೆದುಹೋಗುವಂತೆ ಅಳುತ್ತಿದ್ದಳು. ಅಷ್ಟರಲ್ಲಿ ಅಲ್ಲಿಗೆ ಮಹಾರಾಜನೂ ಬಂದನು. ವ॥ ಹಾಗೆ ಬಂದು ತನ್ನ ಅಳಲನ್ನು ಮುಚ್ಚಿಕೊಂಡು, ತಾರಾಪೀಡನು ಚಂದ್ರಾಪೀಡನನ್ನು ಪ್ರಜೆಗಳ ಕಷ್ಟಗಳನ್ನು ಪರಿಹರಿಸುವುದರಲ್ಲಿ ದಕ್ಷತೆಯನ್ನು ಹೊಂದಿ ರುವ ಎರಡು ತೋಳುಗಳಿಂದಲೂ ತಬ್ಬಿಕೊಂಡು ಮಹಾರಾಣಿಯನ್ನು ಕುರಿತು ಹೀಗೆ ಹೇಳಿದನು. ೧೦೮. "ದೇವಿ, ಇವನು ದೇವತಾಸ್ವರೂಪನು. ಪುಣ್ಯವಿಶೇಷದಿಂದ ನಮ್ಮ ಗರ್ಭದಲ್ಲಿ ಅವತರಿಸಿದ್ದಾನೆ. ಈ ಮಗನನ್ನು ಮನುಷ್ಯನೆಂದು ಭಾವಿಸಿಕೊಂಡು

ವ॥ ಮತ್ತಂ ವೈಶಂಪಾಯನವಿಯೋಗದಿಂ ವಿಹ್ವಲಿತರಾದ ಮನೋರಮೆಯುಮಂ ಶುಕನಾಸನುಮಂ ನಾವೀಗಳಾವತೆಱದಿಂ ಸಂತೈಸಲ್ವೇಟ್ಪುದದಲ್ಲದೆಯುಂ ತ್ವದಾತ್ಮಜಾತ ಜೀವಿತ ಪ್ರಲಭ್ಯಾಭ್ಯುದಯ ಮಹೋತ್ಸವೆಯಪ್ಪ ಗಂಧರ್ವರಾಜತನೂಜೆ

ನಿನ್ನಯ ಸೊಸೆ ಕಾದಂಬರಿ
ಯುನ್ಮಾಡೆಯುಮಾದ ಮನ್ಯುವಿಂದಂ ಮೂರ್ಛಾ
ಪನ್ನೆಯೆನಿಸಿರ್ಪಳೆಚ್ಚಱಿ
ಸನ್ನೆವರಂ ದೇವಿ ತೊಡೆಯಮೇಲಿಟ್ಟೀಗಳ್ ೧೦೯

ವ॥ ಎಂದು ತಾರಾಪೀಡಂ ನುಡಿಯೆ

ಅತಿಸಂಭ್ರಮದಿಂದಂ ಸತಿ
ಸುತನಂ ಬಿಟ್ಟೆಲ್ಲಿದಳ್ ಮದನ್ವಯಜೀವ
ಪ್ರತಿಲಂಭನಹೇತುವೆನು
ತ್ರುತಿಸಂಮೋಹದೊಳೆ ಹೃದಯಮಂ ತಾನೆಱವೀ ೧೧೦

ಮಗಳೆ ತೆಱೆ ನೀಂ ಕಣ್ಣಂ ನೀನಿಲ್ಲದನ್ನೆಗವಾಸೆಯಿ
ಲ್ಲ ಗಡ ಬೞಿಯುಂ ಚಂದ್ರಾಪೀಡಾಂಕನಂ ಪಿಡಿದಕ್ಕಱಿಂ
ದಗಲದಿನಿತುಂ ಕಾಲಂ ಪೊರ್ದಿರ್ದೆನೀನಮೃತಾಂಗಿಯೈ
ಮುಗುಳ್ದುಮದಱಿಂ ಕಂಡೆಂ ರಾಜೇಂದ್ರಚಂದ್ರನ ವಕ್ತ್ರಮಂ ೧೧೧

ಈಗ ಶೋಕಿಸಬೇಡ. ವ॥ ಮತ್ತು ವೈಶಂಪಾಯನನ ವಿಯೋಗದಿಂದ ದುಃಖಿಗೊಂಡಿರುವ ಮನೋರಮೆಯನ್ನೂ ಶುಕನಾಸನನ್ನೂ ನಾವು ಈಗ ಸರ್ವಪ್ರಯತ್ನದಿಂದಲೂ ಸಮಾಧಾನಪಡಿಸಬೇಕು. ಅದಲ್ಲದೆ ನಿನ್ನ ಮಗನಿಗೆ ಜೀವ ಬರುವುದರಿಂದಲೇ ಏಳಿಗೆಯ ಪರಮಾನಂದವನ್ನು ಅನುಭವಿಸಬೇಕಾದ ಗಂಧರ್ವರಾಜಪುತ್ರಿಯಾದ ೧೦೯. ನಿನ್ನ ಸೊಸೆ ಕಾದಂಬರಿಯು ಅತ್ಯಧಿಕವಾದ ದುಃಖದಿಂದ ಮೂರ್ಛೆಗೊಂಡಿದ್ದಾಳೆ. ರಾಣಿ, ಅವಳನ್ನು ತೊಡೆಯಮೇಲಿಟ್ಟುಕೊಂಡು ಎಚ್ಚರಗೊಳಿಸು." ವ॥ ಎಂದು ತಾರಾಪೀಡನು ಹೇಳಲಾಗಿ, ೧೧೦. ವಿಲಾಸವತಿಯು ಬಹಳ ಸಡಗರದಿಂದ ಮಗನನ್ನು ಬಿಟ್ಟು "ನನ್ನ ಮಗನು ಮರಳಿ ಜೀವವನ್ನು ಪಡೆಯಲು ಕಾರಣಭೂತಳು ಎಲ್ಲಿದ್ದಾಳೆ ?" ಎನ್ನುತ್ತಾ, ಬಹಳ ಮಮತೆಯಿಂದ ಅವಳ ಎದೆಯನ್ನು ನೇವರಿಸುತ್ತಾ, ೧೧೧. "ಮಗಳೆ, ಕಣ್ಣು ಬಿಡಮ್ಮ, ನೀನಿಲ್ಲದಿದ್ದರೆ ನನಗಿನ್ನಾವ ಆಸೆಯೂ ಇಲ್ಲವೇ ಇಲ್ಲ. ಅಲ್ಲದೆ ಚಂದ್ರಾಪೀಡನನ್ನು ಹಿಡಿದುಕೊಂಡು ಪ್ರೀತಿಯಿಂದ ಅಗಲದೆ ಇಷ್ಟುಕಾಲದವರೆಗೂ ಜೊತೆಯಲ್ಲೇ ಇದ್ದೀಯೆ. ನಿನ್ನ ಶರೀರವು ಅಮೃತಮಯವಾದುದಮ್ಮ, ಅದ್ದ

ವ॥ ಎಂದು ವಿಲಾಸವತೀಮಹಾದೇವಿ ನುಡಿಯೆ ಚಂದ್ರಾಪೀಡನಾಮಗ್ರಹಣದೊಳಂ ಪ್ರಿಯತಮಸ್ಪರ್ಶ ನಿರ್ವಿಶೇಷಮಪ್ಪ ಕರಸ್ಪರ್ಶದೊಳಂ ಮೂರ್ಛೆಯಿಂದೆಚ್ಚೆತ್ತುನೋಡಿ ನವ್ರ ಮುಖಿಯಾವ ಕಾದಂಬರಿಯುಂ ಮದಲೇಖೆ ಮೆಲ್ಲನೆತ್ತಿ

ಪ್ರತಿಪತ್ತಿ ಮೂಢೆಯೆನಿಸಿ
ರ್ದ ತರುಣಿಯುಂ ಗುರುಜನಕ್ಕೆ ಪೊಡವಡಿಪುದುಮಾ
ಸತಿಯುಂ ಪರಸಿದರಾಯು
ಷ್ಮತಿ ನೀಂ ನಿಚ್ಚೈ ದೆಯಾಗೆನುತ್ತವರಾಗಳ್ ೧೧೨

ವ॥ ಅಂತು ಪರಕೆಯುಂ ಪರಸಿ ತಾರಾಪೀಡನರೇಂದ್ರಂ ಮದಲೇಖೆಗಿಂತೆಂದಂ

ನೋಡಲೆ ದೇವಿ ಬಂದೆವಲೆ ಚಿತ್ರರಥಾತ್ಮಜೆಯಿರ್ದ ದೂಸಱಿಂ
ಕೂಡಿದುದಟ್ಕಱೊಂದೆ ಯುವರಾಜನ ದಿವ್ಯಶರೀರದಲ್ಲಿಯುಂ
ಮಾಡುವ ರುದ್ಧದೊಳ್ ಕಿಱಿದು ನಾಚುಗುವೋ ವಧುವಪ್ರಯೋಜನಂ
ನೋಡುತವಿರ್ದುವೇನಮೃತಮೂರ್ತಿಯೆ ನೋಡುತುಮಿರ್ಕೆ ಪಕ್ಕದೊಳ್ ೧೧೩

ರಿಂದಲೆ ಮತ್ತೆ ನನ್ನ ಕಂದನ ಮುಖವನ್ನು ನಾನು ನೋಡಿದೆ.” ವ॥ ಎಂದು ವಿಲಾಸ ವತಿಮಹಾರಾಣಿಯು ಹೇಳಿದಳು. ಚಂದ್ರಾಪೀಡನ ಹೆಸರು ಕಿವಿಗೆ ಬಿದ್ದುದರಿಂದಲೂ, ಪ್ರಿಯತಮನ ಸ್ಪರ್ಶಕ್ಕೆ ಸಮಾನವಾದ ಕರಸ್ಪರ್ಶದಿಂದಲೂ ಕಾದಂಬರಿಯು ಮೂರ್ಛೆ ಯಿಂದ ಎಚ್ಚೆತ್ತು ನೋಡಿ ತಲೆಯನ್ನು ತಗ್ಗಿಸಿದಳು. ಅವಳನ್ನು ಮದಲೇಖೆಯು ಮೆಲ್ಲ ನೆತ್ತಿ, ೧೧೨. ಏನು ಮಾಡುವುದಕ್ಕೂ ತೋಚದಿರುವ ಆ ಕಾದಂಬರಿಯಿಂದ ಅತ್ತೆ ಮಾವಂದಿರಿಗೆ ನಮಸ್ಕಾರ ಮಾಡಿಸಿದಳು. ಅವರು ಸೊಸೆಯನ್ನು “ಆಯುಷ್ಮಂತಳಾಗಿ ದೀರ್ಘಸುಮಂಗಲಿಯಾಗು” ಎಂದು ಹರಸಿದರು. ವ॥ ಹಾಗೆ ಆಶೀರ್ವದಿಸಿ ತಾರಾ ಪೀಡಮಹಾರಾಜನು ಮದಲೇಖೆಯನ್ನು ಕುರಿತು ಹೀಗೆಂದನು. ೧೧೩. “ಅಮ್ಮ, ನಿನ್ನ ಗೆಳತಿಯಾದ ಕಾದಂಬರಿಯ ನಿಮಿತ್ತದಿಂದ ನಾವು ಮಗನನ್ನು ಕಾಣಲು ಬಂದಂತಾಯಿತು. ಯುವರಾಜನ ದಿವ್ಯಶರೀರದ ವಿಷಯದಲ್ಲಿ ನೋಡಿ ಸುಖಪಡುವು ದೊಂದೆ ನಮಗೆ ಸೇರಿದ್ದು. ನಾವು ಹತ್ತಿರದಲ್ಲಿರುವುದರಿಂದ ಉಂಟಾಗುವ ಅಡ್ಡಿಯಿಂದ ಸೊಸೆ ಸ್ವಲ್ಪಮಟ್ಟಿಗೆ ನಾಚಿಕೆಪಟ್ಟುಕೊಳ್ಳಬಹುದು. ಸುಮ್ಮನೆ ವ್ಯರ್ಥವಾಗಿ ನೋಡು ತ್ತಿರುವುದರಿಂದ ಏನು ಪ್ರಯೋಜನ ? ಅಮೃತಮೂರ್ತಿಯಾದ ಕಾದಂಬರಿಯೇ ಅವನ

ವ॥ ಎಂದು ಕಿಱಿದುಬೇಗಮಿರ್ದಲ್ಲಿಂ ಪೊಱಮಟ್ಟು ಮುನ್ನೆ ಕಲ್ಪಿತಮಾದ ನಿವಾಸಕ್ಕೆ ಪೋಗಿ [ಪೊಗದೆ] ಪೆಱತೊಂದಾಶ್ರಮದೊಳೆಸೆವ ಶಿಲಾತಲಸನಾಥಮಪ್ಪ ತರುಲತಾಮಂಟಪ ದೊಳ್ ಕುಳ್ಳಿರ್ದು ಸಮದುಃಖಿಗಳಪ್ಪ ಮಂತ್ರಿ ಶುಕನಾಸನುಮನಖಿಲನಿಜಾನುಗತ ರಾಜಚಕ್ರ ಮುಮಂ ಕರೆದವರೆಲ್ಲರುಮನಿಂತೆಂದಂ

ಇದು ಶೋಕೋದ್ರೇಕದಿಂದಂ ನುಡಿದ ನುಡಿಯೆನಲ್ವೇಡ ಮಚ್ಚಿತ್ತದೊಳ್ ತಾ
ಳ್ದಿದುದಂ ನಾನಾಡಿದಪ್ಪೆಂ ವಧುವೆರಸಿದ ಪುತ್ರಂಗೆ ಮದ್ರಾಜ್ಯಭಾರಾ
ಸ್ಪದಮಂ ಕೊಟ್ಟೊಂದು ಋಷ್ಯಾಶ್ರಮದೊಳೆ ತನುವಂ ಮುಪ್ಪಿನೊಳ್ ತೇದು ಮೋಕ್ಷಾ
ಸ್ಪದಮಂ ಕೈಕೊಳ್ವೆನಾನೆಂದಿರೆ ವಿಧಿವಶದಿಂದಿಂತುಟೊಂದಾದುದೀಗಳ್ ೧೧೪

ಆರಿರ್ದೊಡದೇಂ ರಾಜ್ಯದ
ಭಾರಂ ನಿಮ್ಮಿಂದವಪ್ಪುಕೆಯ್ವುದು ನೀವಾ
ಭಾರಮನಾಂ ಸುಖರಹಿತ ಶ
ರೀರದೆ ಪರಲೋಕಸುಖಮನಿಂ ಸಾಧಿಸುವೆಂ ೧೧೫

ಪಕ್ಕದಲ್ಲಿದ್ದುಕೊಂಡು ನೋಡಿಕೊಳ್ಳುತ್ತಿರಲಿ." ವ॥ ಎಂದು ಹೇಳಿ ಸ್ವಲ್ಪಕಾಲವಾದ ಮೇಲೆ ಅಲ್ಲಿಂದ ಹೊರಟು ಮೊದಲೆ ಏರ್ಪಡಿಸಿದ್ದ ಬಿಡಾರಕ್ಕೆ ಹೋಗದೆ ಸಮೀಪ ದಲ್ಲಿದ್ದ ಬೇರೊಂದು ಆಶ್ರಮಕ್ಕೆ ಹೋದನು. ಅಲ್ಲಿದ್ದ ಹಾಸುಗಲ್ಲಿನಿಂದ ಕೂಡಿದ ಮರ ಬಳ್ಳಿಯ ಮಂಟಪದಲ್ಲಿ ಕುಳಿತುಕೊಂಡು ತನ್ನ ದುಃಖದಲ್ಲಿ ಸಮಭಾಗಿಗಳಾದ ಶುಕನಾಸ ನನ್ನೂ ತನ್ನ ಜೊತೆಯಲ್ಲಿ ಬಂದಿರುವ ರಾಜಸಮೂಹವನ್ನೂ ಕುರಿತು ಹೀಗೆಂದನು. ೧೧೪. "ಇದು ದುಃಖಾತಿಶಯದಿಂದ ಆಡಿದ ಮಾತು ಎಂದು ಭಾವಿಸಬೇಡಿ. ಹಿಂದೆಯೆ ನಾನು ಮನಸ್ಸಿನಲ್ಲಿ ಏನನ್ನು ಸಂಕಲ್ಪಿಸಿಕೊಂಡಿದ್ದೆನೋ ಅದನ್ನೇ ಈಗ ಹೇಳುತ್ತೇನೆ. ಸೊಸೆ ಯಿಂದ ಕೂಡಿದ ಮಗನಿಗೆ ನನ್ನ ರಾಜ್ಯಭಾರವನ್ನು ವಹಿಸಿ ಯಾವುದಾದರೊಂದು ಋಷ್ಯಾ ಶ್ರಮದಲ್ಲಿ ಶರೀರವನ್ನು ಮುಪ್ಪಿನಲ್ಲಿ ಸವೆಸಿ ಮೋಕ್ಷಮಾರ್ಗವನ್ನು ಹಿಡಿಯಬೇಕೆಂದ. ಉದ್ದೇಶಮಾಡಿದ್ದೆನು. ಈಗ ದೈವಲೀಲೆಯಿಂದ ಹೀಗೆ ಬೇರೆ ರೀತಿಯಾಯಿತು ೧೧೫. ಆಗಲಿ, ಯಾರಿದ್ದರೇನು? ನೀವು ಆ ರಾಜ್ಯಭಾರವನ್ನು ವಹಿಸಿಕೊಳ್ಳಬೇಕು. ನಾನು ನನ್ನು ಸುಖವಿಲ್ಲದ ಈ ಶರೀರದಿಂದ ಪರಲೋಕಸುಖವನ್ನು ಸಾಧಿಸಿಕೊಳ್ಳುತ್ತೇನೆ."

ವ॥ ಎಂಬುದುಮಾ ಸಕಲರಾಜಲೋಕಂ

ಇದನೇನೆಂದಪ್ಪಿರೆಚ್ಚತ್ರಖಿಲ ಭುವನಸಾಮ್ರಾಜ್ಯಮಂ ತಾನೆ ದಲ್ ತಾ
ಳ್ದಿದಪಂ ರಾಜೇಂದ್ರಚಂದ್ರಂ ಪೆಱಗ್ಗಿದು ತಳೆಯಲ್ಕಕ್ಕುಮೇ ದೇವ ನೀವಾ
ಳ್ದುದನಾವಾಳ್ದಪ್ಪೆವೆಂತೆಲ್ಲರುಮೆನೆ ಪರಿವಾರಾನ್ವಿತಂ ರಾಜ್ಯದೊಳ್ ನಿ
ಲ್ಲದೆ ನಾಂವಿರ್ಪಂತಿರಿರ್ದಂ ಮುನಿವಿನುತ ತಪೋರಾಜ್ಯದೊಳ್ ಸಾರ್ವಭೌಮಂ

೧೧೬

## ಚಂದ್ರಾಪೀಡನ ಪ್ರಾಣವಿಯೋಗ

### ಸಮಾಪ್ತ

ವ॥ ಎಂದು ನುಡಿದನು. ಅಲ್ಲಿದ್ದ ರಾಜರು ೧೧೬. "ಮಹಾಸ್ವಾಮಿ, ತಾವು ಇದೇನು ಹೇಳುತ್ತೀರಿ ? ಯುವರಾಜನಾದ ಚಂದ್ರಾಪೀಡನು ಎಚ್ಚೆತ್ತು ಸಕಲಭೂಮಂಡಲದ ಚಕ್ರಾಧಿಪತ್ಯವನ್ನೂ ತಾನೆ ವಹಿಸಿಕೊಳ್ಳುತ್ತಾನೆ. ಇದನ್ನು ಬೇರೆಯುವರು ಆಳಲು ಸಾಧ್ಯವೇ ಇಲ್ಲ. ತಾವು ಆಳಿದ ಸಾಮ್ರಾಜ್ಯವನ್ನು ನಾವು ಹೇಗೆ ಆಳಬಲ್ಲೆವು ?" ಎಂದು ಹೇಳಿದರು. ಬಳಿಕ ಚಕ್ರವರ್ತಿಯು ರಾಜ್ಯವನ್ನು ತೊರೆದು ಋಷಿಗಳಿಂದ ಪ್ರಶಂಸಿಸಲ್ಪಡುವ ತಪಸ್ಸೆಂಬ ರಾಜ್ಯದಲ್ಲಿ ನಮ್ಮಂತೆಯೇ ಇದ್ದುಕೊಂಡಿದ್ದನು. (ಟಿ. ನಮ್ಮಂತಹ ಎಂದು ಜಾಬಾಲಿಮಹರ್ಷಿಗಳು ಹೇಳಿರುವುದರಿಂದ ತಪೋವನವಾಸಿಗಳಾದ ಋಷಿಗಳಂತೆ ಎಂದು ಅರ್ಥ.)

## ಚಂದ್ರಾಪೀಡನ ಪ್ರಾಣವಿಯೋಗ

### ಮುಗಿಯಿತು

# ೧೦. ಚಂದ್ರಾಪೀಡ ಕಾದಂಬರಿಯರ ಪುನಸ್ಸಮಾಗಮ

ಎಂದಾ ಹಾರೀತನಾಮಪ್ರಮುಖಮುನಿಸಮೂಹಕ್ಕೆ ಜಾಬಾಲಿಗಳ್ ಪೇ
ಳ್ದೆಂದುಂ ಮಂದಸ್ಮಿತಾಸ್ಯರ್ ಕಥೆಯ ರಸದೊಳೋಲಾಡುತಂ ಪೊಟ್ತಿನಿತ್ತಾ
ಯ್ತೆಂದುಂ ಮಚ್ಚಿತ್ತದೊಳ್ ಭಾವಿಸದೆ ಮಱದುಪೇಟುತ್ತಮಿಂತಿರ್ಪಮೇ ಪೇ
ಟೆಂದೆನ್ನಂ ನೋಡಿ ಕೇಳ್ ಶೂದ್ರಕನೃಪ ಕೆಲದೊಳ್ ಕೇಳ್ವವರ್ಗೆಂದರಾಗಳ್ ೧

ವ॥ ಅದೆಂತೆನೆ

ಆವೊಂ ಶ್ರೀಶ್ವೇತಕೇತುವ್ರತಿಗೆ ಸುತನೆನಲ್ ಸಂದು ಕಾಮಿತ್ವದಿಂದಂ
ದೇವತ್ವಂಗೆಟ್ಟು ಮರ್ತ್ಯೋದ್ಭವನೆನೆ ಶುಕನಾಸಂಗೆ ಪುಟ್ಟಿರ್ದನೋ ತಾ
ನಾ ವೈಶಂಪಾಯನಂ ತಂದೆಯ ಮುನಿಸಿನ ಬೈಗುಳ್ಗಳಿಂದಂ ಮಹಾಶ್ವೇ
ತಾ ವಾಕ್ಸಾಮರ್ಥ್ಯದಿಂದಂ ಗಿಳಿಯ ಬಸುಱೊಳೀಯಂದದಿಂ ಬಂದನಲ್ತೇ ೨

ಅಂತು ಮುನಿ ಪೇಟಲೆಚ್ಚ
ತ್ತಂತೆವೊಲಾನಾಗೆ ಬಾಲ್ಯದೊಳವೆನ್ನಯ ಜ
ನ್ಮಾಂತರದೊಳಾದ ವಿದ್ಯಾ
ಸಂತತಿ ಜಿಹ್ವಾಗ್ರದಲ್ಲಿ ನೆಲಸಿದುದಾಗಳ್ ೩

೧. ಶೂದ್ರಕಮಹಾರಾಜನೆ ಕೇಳು. ಹೀಗೆ ಜಾಬಾಲಿಮಹರ್ಷಿಗಳು ಹಾರಿತನೇ ಮೊದಲಾದ ಮುನಿಗಳ ಸಮೂಹಕ್ಕೆ ಹೇಳಿ ನಸುನಗೆಯನ್ನು ಬೀರಿದನು. "ಕಥೆಯ ಆನಂದದಲ್ಲಿ ನಲಿದಾಡುತ್ತಾ, ಹೊತ್ತು ಎಷ್ಟಾಯಿತು ? ಎಂಬುದನ್ನೂ ಗಮನಿಸದೆ ಪರವಶರಾಗಿ ಹೇಳುತ್ತ ಹೀಗೆಯೆ ಇದ್ದುಬಿಟ್ಟೆವಲ್ಲ !" ಎಂದು ಹೇಳುತ್ತಾ, ನನ್ನನ್ನು ನೋಡಿ ಹತ್ತಿರದಲ್ಲಿ ಕೇಳುತ್ತಿರುವವರನ್ನು ಕುರಿತು ಹೀಗೆ ಹೇಳಿದರು. ವ॥ ಅದು ಹೇಗೆಂದರೆ ೨. ಯಾರು ಶ್ವೇತಕೇತುಮಹರ್ಷಿಗಳಿಗೆ ಮಗನಾಗಿ ಹುಟ್ಟಿ, ಕಾಮುಕತನದಿಂದ ದೇವತ್ವವನ್ನು ಕಳೆದುಕೊಂಡು ಮನುಷ್ಯಜಾತಿಯಲ್ಲಿ ಶುಕನಾಸನ ಮಗನಾಗಿ ಹುಟ್ಟಿದನೋ ಆ ವೈಶಂಪಾಯನನೇ ಈ ಗಿಳಿ ! ತಂದೆಯು ಕೋಪದಿಂದ "ಇವನು ತಿರ್ಯಗ್ಜಾತಿಯಲ್ಲಿ ಹುಟ್ಟದಿರುವುದಿಲ್ಲ" ಎಂಬುದಾಗಿ ಬೈದುದರಿಂದಲೂ, ಮಹಾಶ್ವೇತೆಯು ಶಾಪದ ಪ್ರಭಾವದಿಂದಲೂ ಗಿಳಿಯ ಹೊಟ್ಟೆಯಲ್ಲಿ ಹೀಗೆ ಹುಟ್ಟಿಬಂದಿದ್ದಾನೆ. ೩. ಆ ರೀತಿಯಲ್ಲಿ ಮಹರ್ಷಿಯು ಹೇಳಿದ ಕೂಡಲೆ ನಾನು ಮಲಗಿದ್ದು ಎಚ್ಚೆತ್ತವನಂತಾದೆನು. ಹಿಂದಿನ ಜನ್ಮಗಳಲ್ಲಿ ನಾನು ಕಲಿತಿದ್ದ ಎಲ್ಲಾ ವಿದ್ಯೆಗಳೂ ಬಾಲ್ಯದಲ್ಲಿಯೆ ನನ್ನ ನಾಲಿಗೆಯ ತುದಿ

ವ॥ ಅದಲ್ಲದೆಯುಮಖಿಲಕಲಾಪೋಪದೇಶಕೌಶಲಮನೊಳಕೊಂಡಿರ್ಪ ಸ್ಪಷ್ಟ ವರ್ಣಾಭಿಧಾನಮಪ್ಪ ವಾಣಿಯನಪ್ಪುಕೆಯ್ದು ವಿಜ್ಞಾತ ಸಕಲಾನ್ಯಜನ್ಮವೃತ್ತಾಂತನೆನಾಗಿ ತಾಯುಂ ತಂದೆಯುಂ ತಾರಾಪೀಡದೇವನುಮುಂ ವಿಲಾಸವತೀಮಹಾದೇವಿಯುಮುಂ ಚಂದ್ರಾಪೀಡದೇವನುಮುಂ ಮುನ್ನಿನ್ನ ಕೆಳೆಯನಪ್ಪ ಕಪಿಂಜಲನುಮುಂ ನೆನೆದೆಂ ಮಹಾಶ್ವೇತೆಯೊಳಾದ ಕೂರ್ಮೆ ನೂರ್ಮಡಿಸೆ ತದ್ಗತಚಿತ್ತನಾಗಿ ನೆನೆನೆನೆದೆನ್ನ ಕಾಮಪರತೆಗಾಂ ನೆಲದೊಳ್ ತಲೆಯುಂ ಕುತ್ತಿ ಕಿಱಿದುಬೇಗಮಿರ್ದು ನಿಜಾವಿನಯಶ್ರವಣಲಜ್ಜೆಯಿಂ ಕರಗುವಂತೆಯುಂ ಪಾತಾಳಮುಂ ಪುಗುವಂತೆಯುಮಾಗಿಂತೆಂದೆನದೆಂತೆನೆ

ಮುನ್ನಿನ ಭವಮಂ ಬಂಧುಗ
ಳಂ ನೆಱೆ ತಿಳಿವಱಿತಮಾಯ್ತು ಭವದೀಯ ಪದಾ
ಸನ್ನತೆಯಿಂದಾದೊಡಮೇಂ
ಬಿನ್ನವಿಸಿದಪೆಂ ಮುನೀಂದ್ರ ನಾಣ್ಚದೆ ಮತ್ತಂ ೪

ಜಾತಿಸ್ಮರತೆ ವಿರಕ್ತಿಗೆ
ಹೇತುವೆನುತ್ತಿರ್ಪರದುವೆ ಪುಸಿಯಾಗಿ ಮಹಾ
ಶ್ವೇತೆಯೊಳಾದೊಂದನುರಾ
ಗಾತಿಶಯಂ ಪೆರ್ಚಿದಪುದು ಮುನ್ನಿಂದೀಗಳ್ ೫

ಯಲ್ಲಿ ಮೂಡಿದುವು. ವ॥ ಅದಲ್ಲದೆ ಸಮಸ್ತ ಕಲೆಗಳನ್ನೂ ಹೇಳಿಕೊಡಬಲ್ಲ ಚಾತುರ್ಯವನ್ನು ಪಡೆದಿರುವ ಹಾಗೂ ಸ್ಪಷ್ಟವಾದ ಅಕ್ಷರಗಳನ್ನು ಉಚ್ಚರಿಸಬಲ್ಲ ವಾಣಿಯೂ ಉಂಟಾಯಿತು. ಅಲ್ಲದೆ ಜನ್ಮಾಂತರಗಳ ಎಲ್ಲಾ ಸಂಗತಿಗಳೂ ಜ್ಞಾಪಕಕ್ಕೆ ಬಂದುವು, ಆಗ ತಾಯಿಯನ್ನೂ, ತಂದೆಯನ್ನೂ, ತಾರಾಪೀಡನನ್ನೂ, ವಿಲಾಸವತಿಯನ್ನೂ, ಚಂದ್ರಾಪೀಡನನ್ನೂ, ಹಿಂದೆ ನನ್ನ ಗೆಳೆಯನಾಗಿದ್ದ ಕಪಿಂಜಲನನ್ನೂ ನೆನೆಸಿಕೊಂಡೆನು. ಮಹಾಶ್ವೇತೆಯ ಮೇಲಿನ ಅನುರಾಗವು ನೂರುಮಡಿಯಾಯಿತು. ಅವಳಲ್ಲೆ ಮನಸ್ಸು ನೆಟ್ಟು, ಅವಳನ್ನೇ ಚಿಂತಿಸಿ ಚಿಂತಿಸಿ, ನನ್ನ ಕಾಮಾತುರತೆಗೆ ತಾನೇ ತಲೆತಗ್ಗಿಸಿ ಸ್ವಲ್ಪಕಾಲವಿದ್ದು, ನನ್ನ ದುರ್ವರ್ತನೆಯನ್ನು ಕೇಳಿದುದರಿಂದ ಉಂಟಾದ ನಾಚಿಕೆಯಿಂದ ಪಾತಾಳಕ್ಕೆ ಇಳಿದುಹೋಗುವವನಂತೆ ಆಗಿ ಅವರನ್ನು ಕುರಿತು ಹೀಗೆಂದೆನು. ೪. "ಮಹರ್ಷಿಗಳೆ, ತಮ್ಮ ಚರಣಾನುಗ್ರಹದಿಂದ ಹಿಂದಿನ ಜನ್ಮಗಳನ್ನೂ ಬಂಧುಗಳನ್ನೂ ಚೆನ್ನಾಗಿ ನೆನೆಸಿಕೊಳ್ಳುವ ತಿಳಿವಳಿಕೆಯುಂಟಾಯಿತು. ಆದರೆ ನಾಚಿಕೆಯಿಲ್ಲದೆ ಮತ್ತೆ ತಮ್ಮಲ್ಲಿ ಹೇಗೆ ವಿಜ್ಞಾಪಿಸಿಕೊಳ್ಳಲಿ ? ೫. ಜನ್ಮಾಂತರಸ್ಮರಣೆಯು ವಿರಕ್ತಿಗೆ ಕಾರಣವಾಗುತ್ತದೆ ಎಂದು ಹೇಳುತ್ತಾರೆ. ಆದರೆ ಅದೆಲ್ಲಾ ಸುಳ್ಳಾಗಿ ಮಹಾಶ್ವೇತೆಯ ಮೇಲಿನ ಅತ್ಯಧಿಕ

ವ॥ ಅದಲ್ಲದೆಯುಂ ಮದ್ವಿಪತ್ತಿಶ್ರವಣಮಾತ್ರದಿಂ ಸ್ಫುಟಿತಹೃದಯನಾದ ಚಂದ್ರಾಪೀಡನೆಲ್ಲಿ ಪುಟ್ಟಿದನೆಂಬುದಂ ಬೆಸಸಲ್ವೇೞ್ಕುಮಾಂ ತಿರ್ಯಗ್ಜಾತಿಯಾದೊಡಮಾತನಂ ನೋಡಿ ಕೃತಾರ್ಥನಪ್ಪೆನೆಂಬುದುಮಾ ಮುನೀಂದ್ರನೆನ್ನಂ ಮುನ್ನಿನಂತೆ ನೋಡಿ ನಿಜಸ್ನೇಹವಚನದಿನೆನ್ನನಿಂತೆಂದಂ

ಮಱೆದೈ ತರಳತೆಯಿಂದೀ
ತೆಱನಾದುದನೆಲೆ ದುರಾತ್ಮ ಪಾಱಲ್ ಮತ್ತಂ
ಮಱುಗುತ್ತಿರ್ದಪೆಯಿನಿಸಂ
ಗಱಿ ಮೂಡಿದ ಬಱಿಕ ನೀನೆ ದಲ್ ಪೋದಪ್ಪೈ ೬

ವ॥ ಎಂದು ಜಾಬಾಲಿಗಳ್ ನುಡಿಯೆ ಹಾರೀತನತಿಕುತೂಹಲಿತಾಂತಃಕರಣನಾಗಿ ತಂದೆಗಿಂತೆಂದಂ

ತನುವಿಂದಂ ಪೋಗೆ ಜೀವಂ ನೆಲೆವಿಡಿಯಲಣಂ ಬಾರದೆಂಬನ್ನೆಗಂ ತ
ನ್ಮುನಿಗಂತಪ್ಪೊಂದು ಕಾಮಾತುರತೆ ಸಮನಿಸಿತ್ತೇತಱಿಂ ನಾಕಸಂಭೂ
ತನದೇಕಲ್ಪಾಯುವಾದಂ ಬೆಸಸಿಮೆನಗಿದಾಶ್ಚರ್ಯಮಾಗಿರ್ದುದೆಂದಾ
ತನಯಂಗಿಂತೆಂದನಾಗಳ್ ಮುನಿಜನಕುಮುದಾನಂದಚಂದ್ರಂ ಮುನೀಂದ್ರಂ ೭

ವಾದ ಅನುರಾಗವು ಹಿಂದಿನಂತೆಯೇ ಈಗಲೂ ಹೆಚ್ಚುತ್ತಿದೆ. ವ॥ ಅದಲ್ಲದೆ ನನ್ನ ಮರಣವನ್ನು ಕೇಳಿದ ಮಾತ್ರದಿಂದಲೇ ಎದೆಯೊಡೆದು ಸತ್ತ ಚಂದ್ರಾಪೀಡನು ಎಲ್ಲಿ ಹುಟ್ಟಿದ್ದಾನೆ ? ಎಂಬುದನ್ನು ತಿಳಿಸಬೇಕು. ಈ ಹಕ್ಕಿಯ ಜಾತಿಯಲ್ಲೂ ಅವನನ್ನು ನೋಡಿ, ಧನ್ಯನಾಗುತ್ತೇನೆ" ಎಂದು ಕೇಳಿಕೊಂಡೆನು. ಅದಕ್ಕೆ ಆ ಮುನೀಂದ್ರನು ನನ್ನನ್ನು ಮೊದಲಿನಂತೆಯೆ ನೋಡಿ ತನ್ನ ವಾತ್ಸಲ್ಯಪೂರ್ಣವಾದ ವಾಣಿಯಿಂದ ಹೀಗೆಂದನು ೬. "ಅಯ್ಯೋ ದುರಾತ್ಮ ! ಚಪಲತನದಿಂದಲೇ ಹೀಗಾದುದನ್ನು ಮರೆತುಬಿಟ್ಟೆಯಾ? ಮತ್ತೆ ಹಾರಿಹೋಗಬೇಕೆಂದು ತವಕಿಸುತ್ತಿರುವೆಯಲ್ಲ ! ಆಗಲಿ ; ರೆಕ್ಕೆ ಹುಟ್ಟಲಿ. ಆಮೇಲೆ ನೀನೇ ಹೋಗುವೆಯಂತೆ." ವ॥ ಎಂದು ಜಾಬಾಲಿಮುನಿಗಳು ಹೇಳಲಾಗಿ ಹಾರೀತನು ಬಹಳ ಕುತೂಹಲದಿಂದ ಕೂಡಿದ ಮನಸ್ಸುಳ್ಳವನಾಗಿ ತಂದೆಯನ್ನು ಕುರಿತು ಹೀಗೆಂದನು. ೭. "ಶರೀರದಿಂದ ಜೀವವು ಹೋಗುತ್ತಿರಲಾಗಿ ಅದನ್ನು ತಡೆದು ನಿಲ್ಲಿಸಿಕೊಳ್ಳಲೂ ಆಗಲಿಲ್ಲವೆಂಬಷ್ಟುಮಟ್ಟಿಗೆ ಆ ಪುಂಡರೀಕನಿಗೆ ಏತಕ್ಕೆ ಅಷ್ಟೊಂದು ಕಾಮೋದ್ರೇಕವು ಉಂಟಾಯಿತು ? ಸ್ವರ್ಗಲೋಕದಲ್ಲಿ ಹುಟ್ಟಿದವನಾದರೂ ಏತಕ್ಕೆ ಅಲ್ಪಾಯುವಾದನು ? ಅಪ್ಪಣೆಕೊಡಿಸಬೇಕು. ಇದು ನನಗೆ ಬಹಳ ಸೋಜಿಗವಾಗಿದೆ !" ಎಂದು ಕೇಳಿಕೊಳ್ಳುತ್ತಿರುವ ಮಗನನ್ನು ಕುರಿತು ಮುನಿಗಳೆಂಬ ಕನ್ನೈದಿಲೆಗಳಿಗೆ

ಎದಿತಮೆನಲ್ ಕಾಮದ ಮೋ
ಹದ ಮೊದಲೆಂದೆನಿಸಿದಲ್ಪಸಾರಸ್ತ್ರೀವೀ
ರ್ಯದಿನಲ್ತೆ ಕೇವಲಂ ಪು
ಟ್ಟಿದನೀ ಪಾಪಾತ್ಮನಾತ್ಮಕರ್ಮೋದಯದಿಂ                                                   ೮

ಸ್ವಾಗತ ॥ ವೇದದಲ್ಲಿಯುಮಿದೀ ಪ್ರಕಾರದಿಂ
ದೋದಿತೆಂದಱಿವೆಯಲ್ತೆ ವತ್ಸ ನೀಂ
"ಯಾದೃಶೋ ಜಗತಿ ಜಾಯತೇ ಪುನ
ಸ್ತಾದೃಶೋ ಭವತಿ" ಯೆಂಬ ವಾಕ್ಯಮಂ                                                   ೯

ವ॥ ಅದಲ್ಲದೆಯುಂ ಕಾರ್ಯಂಗಳ್ ಕಾರಣಗುಣಯೋಗಂಗಳದುವಲಮಾಯುರ್ವೇದ ದೊಳಮಲ್ಪಸಾರಸ್ತ್ರೀವೀರ್ಯದೊಳಲ್ಪಾಯುಷ್ಯನೆಂಬುದಱಿನೀತಂಗಿಂತಪ್ಪ ಕಾಮಪರವಶ ತೆಯುಂ ಮದನಜ್ವರಸಂತಾಪಮರಣಮುಮಾದುದು

ಇನ್ನುಮಚಿರಾಯುಷಕ್ಕಂ
ಮುನ್ನಿನ ತೆಱದಿಂದಮಾಯುರವಸಾನದೊಳೀ
ತನ್ನೆಟ್ಟನಕ್ಷಯಾಯು
ಪ್ಯೋನ್ನತಿಯಂ ತಳೆದು ಸುಖದಿನಿರ್ಕುಂ ಬೞಿಯುಂ                                                   ೧೦

ವ॥ ಎಂಬುದುಮದಂ ಕೇಳ್ದು ಮವನಿತಲನಿವೇಶಿತೋತ್ತಮಾಂಗನಾಗಿ ಯತಿಪತಿಯು ನಿಂತೆಂದಂ

ಚಂದ್ರನಂತಿರುವ ಆ ಮಹರ್ಷಿಯು ಹೀಗೆ ಹೇಳಿದನು. ೮. "ವತ್ಸ, ಇದಕ್ಕೆ ಕಾರಣವು ಸ್ಪಷ್ಟವಾಗಿಯೇ ಇದೆ. ಈ ಪಾಪಿಷ್ಠನು ಸಂಭೋಗಾಭಿಲಾಷೆಗೂ ಮೂಢತನಕ್ಕೂ ಉತ್ಪತ್ತಿಸ್ಥಾನವೆನಿಸಿರುವ ಅಲ್ಪಶಕ್ತಿಯುಳ್ಳ ಹೆಂಗಸಿನ ವೀರ್ಯವೊಂದರಿಂದಲೇ ತನ್ನ ಪ್ರಾಚೀನಕರ್ಮಫಲದಿಂದ ಹುಟ್ಟಿದನು ! ೯. ಮಗು, ವೇದದಲ್ಲೂ 'ಪ್ರಪಂಚದಲ್ಲಿ ಯಾವರೀತಿ ಹುಟ್ಟುತ್ತಾನೋ ಅದೇರೀತಿ ಆಗುತ್ತಾನೆ !' ಎಂಬ ವಚನವು ಹೇಳಲ್ಪಟ್ಟಿ ರುವುದು ನಿನಗೂ ಗೊತ್ತೇ ಇದೆ. ವ॥ ಅದಲ್ಲದೆ ಕಾರಣಗುಣಗಳು ಕಾರ್ಯದಲ್ಲಿ ಸೇರಿ ಕೊಂಡೇ ಇರುತ್ತವೆ, (ಕಾರಣಗುಣಾಃ ಕಾರ್ಯೇ ಸಂಕ್ರಾಮಂತಿ) ಆಯುರ್ವೇದ ದಲ್ಲಿಯೂ ಅಲ್ಪಸಾರವುಳ್ಳ ಸ್ತ್ರೀವೀರ್ಯದಿಂದ ಹುಟ್ಟಿದವನು ಅಲ್ಪಾಯುವಾಗಿರುತ್ತಾ ನೆಂದು ಹೇಳಿದೆ. ಆದರಿಂದ ಇವನಿಗೆ ಇಂತಹ ಕಾಮಪರವಶತೆಯೂ ಕಾಮಜ್ವರ ಸಂತಾಪದಿಂದ ಮರಣವೂ ಉಂಟಾಯಿತು ! ೧೦. ಈಗಲೂ ಇವನು ಮೊದಲಿ ನಂತೆಯೇ ಅಲ್ಪಾಯುಷ್ಯವುಳ್ಳವನೇ ಆಗಿದ್ದಾನೆ. ಈ ಆಯುಷ್ಯವು ಕಳೆದಮೇಲೆ ಇವನು ಅಕ್ಷಯವಾದ ಆಯುಷ್ಯಾಭಿವೃದ್ಧಿಯನ್ನು ಪಡೆದು ಬಳಿಕ ಸುಖವಾಗಿರುತ್ತಾನೆ." ವ॥ ಎಂದು ಹೇಳಲಾಗಿ, ಅದನ್ನು ಕೇಳಿ ನೆಲದವರೆಗೂ ತಲೆಯನ್ನು ತಗ್ಗಿಸಿ ಜಾಬಾಲಿ

ಧೈರ್ಯಂ ಕೆಟ್ಟಿತ್ತು ಸರ್ವಾಕ್ಷಮಮೆನಿಪುದಱಿಂ ಕೊಳ್ ವರ್ತಿಸುತ್ತಿರ್ಪೆನಿಂತೀ
ತಿರ್ಯಗ್ಜಾತಿತ್ವದೊಳ್ ಸಾಲಗೆಯುಮಿದು ಭವತ್ಸೇವೆಯಿಂದಾದುದಿನ್ನೇಂ
ಕಾರ್ಯಂ ಮತ್ತುಂಟು ಸಾರ್ಗುಂ ತನುವುಮಗಣಿತಾಯುಷ್ಯಮುಂ ಮತ್ತಸಲ್ಕಾ
ಶ್ಚರ್ಯಂಬಟ್ಟಪ್ಪೆನೀಗಳ್ ಬೆಸಸಿಮೆನಗೆನಲ್ ಮುಕ್ತತಂದ್ರಂ ಮುನೀಂದ್ರಂ ೧೧

ತವುತಿರ್ದತ್ತಲ್ತೆ ತಾರಾಸಮುದಾಯಮಿದೊ ಪಂಪಾಸರಸ್ತೀರ ಸುಪ್ತೋ
ತ್ಥವಿಹಂಗಧ್ವಾನಮೀ ಪೊಣ್ಮುವುದು ವನಲತಾಳಿಪ್ರಸೂನಾವಳೀಗಂ
ಧವಹಂ ಮೆಲ್ಪಿಂದೆ ದಲ್ ಮತ್ತಿರದೆಸೆವ ನಿಶಾಸಂಘಸಂಮರ್ದದೊಂದು
ತ್ಸವದಿಂ ತಣ್ಗಂಪನೀ ಬೀಱಿದಪುದು ಬೆಳಗಾಯ್ತೇನನಿಂ ಪೇೞ್ವೆನೀಗಳ್ ೧೨

ವ॥ ಅದಲ್ಲದೆಯುಂ ನಿತ್ಯಕರ್ಮಂ ಪ್ರತ್ಯಾಸನ್ನಮಾಯ್ತೆಂದು

ನಿಷ್ಠಾಪರಂ ಪ್ರಭಾತಾ
ನುಷ್ಠಾನ ನಿಮಿತ್ತಮೆಟ್ಟನಲ್ಲಿಂದಂ ತ
ದ್ಗೋಷ್ಠಿಯನುೞಿದು ಮುನೀಂದ್ರಗ
ರಿಷ್ಠಂ ಜಾಬಾಲಿನಾಮಧೇಯಮುನೀಂದ್ರಂ ೧೩

ವ॥ ಆಗಳಾ ತಪಸ್ವಿಗಳ್ ನೀರಾಗರಾಗಿಯುಂ ಕಥಾರಸವಿಸ್ಮೃತಗುರೂಚಿತಪ್ರತಿಪತ್ತಿಗಳುಂ ಮತ್ತಂ ಕೇಳುತ್ತಮಿರ್ದಂತೆ ಕಂಟಕಿತಕಾಯರುಂ ವಿಸ್ಮಯೋತ್ಫುಲ್ಲಮಾನಸರುಂ ಯುಗ

ಮುನಿಯನ್ನು ಕುರಿತು ಹೀಗೆ ಹೇಳಿದೆನು. ೧೧. "ಪೂಜ್ಯರೆ, ಯಾವ ಕೆಲಸವನ್ನೂ ಮಾಡಲಾಗದ ಈ ಹಕ್ಕಿಯ ಜಾತಿಯಲ್ಲಿ ಹೀಗೆ ಹುಟ್ಟಿರುವ ನನಗೆ ಧೈರ್ಯವೇ ಲುಪ್ತವಾಗಿದೆ. ಮಾತಾಡುವ ಶಕ್ತಿಮಾತ್ರ ತಮ್ಮೊಂದು ಅನುಗ್ರಹದಿಂದ ಉಂಟಾಯಿತು. ನನ್ನ ಶರೀರವು ಅಪರಿಮಿತವಾದ ಆಯುಸ್ಸನ್ನು ಪಡೆಯಲು ನಾನು ಯಾವ ಕಾರ್ಯವನ್ನು ಮಾಡಬೇಕು ? ನನಗಂತೂ ಈಗ ಬಹಳ ಆಶ್ಚರ್ಯವಾಗಿದೆ. ಅಪ್ಪಣೆ ಕೊಡಿಸಬೇಕು" ಎಂದು ಕೇಳಿಕೊಂಡೆನು. ಆಗ ಕಾಲಹರಣಕ್ಕೆ ಇಷ್ಟಪಡದ ಜಾಬಾಲಿ ಮಹರ್ಷಿಯು ೧೨. "ಇಗೋ, ನಕ್ಷತ್ರಗಳ ಸಮೂಹವು ಮಾಯವಾಗುತ್ತಿದೆ. ಪಂಪಾಸರೋವರದ ದಡದಲ್ಲಿ ಮಲಗಿ ಎಚ್ಚೆತ್ತ ಹಕ್ಕಿಗಳ ಧ್ವನಿಯು ಹರಡುತ್ತಿದೆ. ಕತ್ತಲೆಯ ಗುಂಪು ನಾಶವಾಯಿತೆಂಬ ಸಂತೋಷದಿಂದಲೋ ಎಂಬಂತೆ ತಂಗಾಳಿಯು ವನಲತೆಗಳ ಹೂವಿನ ವಾಸನೆಯನ್ನು ಬೀರುತ್ತಾ ಬೀಸುತ್ತಿದೆ. ಬೆಳಗಾಯಿತು. ನಾನು ಈಗ ಏನುಹೇಳಲಿ ?" ಎಂದು ಹೇಳಿದನು. ವ॥ "ಅದಲ್ಲದೆ ನಿತ್ಯಕರ್ಮಾನುಷ್ಠಾನ ವೇಳೆಯು ಸಮೀಪಿಸುತ್ತಿದೆ." ಎಂದು ಹೇಳಿ, ೧೩. ಆಚಾರನಿಷ್ಠನಾದ ಆ ಜಾಬಾಲಿ ಮುನೀಂದ್ರನು ಬೆಳಗಿನಜಾವದಲ್ಲಿ ಮಾಡಬೇಕಾದ ಕರ್ಮಾಚರಣೆಗಾಗಿ ಸಭೆಯನ್ನು ಮುಗಿಸಿ ಅಲ್ಲಿಂದ ಎದ್ದನು. ವ॥ ಆಗ ಆ ಎಲ್ಲ ತಪಸ್ವಿಗಳೂ ಸ್ವತಃ ವಿರಕ್ತರಾದರೂ ಕಥೆಯ ಸ್ವಾರಸ್ಯದಿಂದ ಪರವಶರಾಗಿ ಗುರುಗಳಿಗೆ ನಮಸ್ಕಾರ ಮಾಡುವುದನ್ನೂ ಮರೆತು, ಕೇಳುತ್ತಿದ್ದಂತೆಯೇ ರೋಮಾಂಚಗೊಂಡ ಶರೀರವುಳ್ಳವರಾಗಿಯೂ, ಆಶ್ಚರ್ಯದಿಂದ

ಪದಾಗಳಿತ ಶೋಕಾನಂದಜನ್ಮನಯನಸಲಿಲರುಂ ಹಾಕಷ್ಟಶಬ್ದಾನುಬಂಧಿಗಳುಂ ಪರವಶರು ಮೆನಿಸಿ ಕಿಱಿದುಬೇಗಮಿರ್ದಲ್ಲಿಂದಮೆೞ್ದು

ಸಕಲಮುನಿವ್ರಜಮಿರೆ ತಾ
ನೆ ಕರುಣದಿಂ ಕೊಂಡುಪೋಗಿ ಮೆಲ್ಲನೆ ಹಾರೀ
ತಕುಮಾರಂ ತನ್ನಯ ಪ
ರ್ಣಕುಟೀರದ ಶಯನತಳದೊಳಿರಿಸಿದನೆನ್ನಂ ೧೪

ವ॥ ಅನ್ನೆಗಂ ಪ್ರಾಭಾತಿಕಕ್ರಿಯಾನಿಮಿತ್ತಂ ಹಾರೀತಂ ಪೋದಂ ಇತ್ತ ಸಕಲಕಾರ್ಯಾ ಕ್ಷಮಮಪ್ಪ ತಿರ್ಯಗ್ಜಾತಿಯೊಳ್ ಬಿಟ್ಟು ಚಿಂತಾಪೀಡಿತನಾಗಿ

ಪಡೆಯಲ್ಬಾರದು ಮುನ್ನನಂತಭವದೊಳ್ ಮಾನುಷ್ಯಮಂ ಮತ್ತೆಯುಂ
ಪಡೆಯಲ್ಬರ್ಕುಮೆ ವಿಪ್ರಜಾತಿಯನದಂ ಪೆತ್ತುಂ ಮುನೀಂದ್ರತ್ವಮಂ
ಪಡೆಯಲ್ಬರ್ಕುಮೆ ಮತ್ತಮಾರ್ಗೆ ಪಡೆಯಲ್ ದೇವತ್ವಮಂ ನೋಡದಂ
ಪಡೆದಾನಿಂತಿರೆ ಶಾಪದಿಂದಕಟ ತಿರ್ಯಗ್ಜಾತಿಯೊಳ್ ಬಿಟ್ಟೆನೇ ೧೫

ಶೋಕಶತಾಕುಲಮುಂ ದುಃ
ಖಾಕರಮುಮೆನಿಪ್ಪ ಮಾಯ್ದ ಮತ್ಕಾಯಮನಿ
ನ್ನೇಕೆ ಗಡ ಪಿಡಿದಪೆಂ ನಿ
ರ್ವ್ಯಾಕುಲದಿಂ ಬಿಡುವೆನೆಂದು ಚಿಂತಿಸುತಿನೆಗಂ ೧೬

ಅರಳಿದ ಮನಸ್ಸುಳ್ಳವರಾಗಿಯೂ, ಏಕಕಾಲದಲ್ಲಿ ಸುರಿಯುತ್ತಿರುವ ದುಃಖದ ಮತ್ತು ಸಂತೋಷದ ಕಣ್ಣೀರುಳ್ಳವರಾಗಿಯೂ ಆದರು. ಬಳಿಕ ಶರೀರದ ಮೇಲೆ ಪರಿವೆಯೇ ಇಲ್ಲದೆ ಸ್ವಲ್ಪಕಾಲ ಅಲ್ಲಿದ್ದು 'ಅಯ್ಯೋ, ಕಷ್ಟ! ಪಾಪ' ಎಂದು ಹೇಳುತ್ತಾ ಎದ್ದು ಹೊರಟುಹೋದರು. ೧೪. ಬಳಿಕ ಹಾರೀತನು ಅಷ್ಟುಜನ ಮುನಿಗಳ ಗುಂಪೇ ಇದ್ದರೂ ತಾನೇ ಕರುಣೆಯಿಂದ ನನ್ನನ್ನು ಮೆಲ್ಲನೆ ಎತ್ತಿಕೊಂಡು ಹೋಗಿ ತನ್ನ ಪರ್ಣ ಕುಟೀರದ ಒಳಗೆ ಹಾಸಿಗೆಯ ಮೇಲೆ ಇರಿಸಿದನು. ವ॥ ಅಷ್ಟರಲ್ಲಿ ಬೆಳಗಿನಜಾವದ ಕರ್ತವ್ಯಕ್ಕಾಗಿ ಹಾರೀತನು ಹೊರಟುಹೋದನು. ಈಕಡೆ ನಾನು ಯಾವ ಕೆಲಸ ವನ್ನೂ ಮಾಡಲಾರದ ತಿರ್ಯಗ್ಜಾತಿಯಲ್ಲಿ ಬಿದ್ದು ಚಿಂತೆಯಿಂದ ಪೀಡಿತನಾದೆನು. ೧೫. "ಮೊದಲು ಅನೇಕ ಜನ್ಮಗಳಲ್ಲಿ ಮನುಷ್ಯಜನ್ಮವನ್ನು ಪಡೆಯುವುದು ಬಹಳ ಕಷ್ಟ. ಮತ್ತೆ ಅದರಲ್ಲೂ ಬ್ರಾಹ್ಮಣಜಾತಿಯನ್ನು ಪಡೆಯಲು ಸಾಧ್ಯವೆ? ಒಂದು ವೇಳೆ ಬ್ರಾಹ್ಮಣಿಕೆಯನ್ನು ಪಡೆದರೂ ಮುನೀಂದ್ರನಾಗಿ ಹುಟ್ಟಲು ಸಾಧ್ಯವೆ? ಮತ್ತೆ ಅದರಲ್ಲೂ ದೇವತ್ವವನ್ನು ಪಡೆಯಲು ಯಾರಿಗೆತಾನೇ ಸಾಧ್ಯವಾದೀತು? ಹೀಗಿರಲು ನಾನು ಆ ದೇವತ್ವವನ್ನು ಪಡೆದಿದ್ದರೂ, ಅಯ್ಯೋ, ಶಾಪದಿಂದ ಹೀಗೆ ತಿರ್ಯಗ್ಜಾತಿಯಲ್ಲಿ ಬಿದ್ದುಬಿಟ್ಟೆನಲ್ಲ! ೧೬. ನೂರಾರು ದುಃಖಗಳಿಂದ ಪೀಡಿಸಲ್ಪಡುತ್ತಿರುವ ಮನೋವ್ಯಥೆಗೆ ಗಣಿಯಂತಿರುವ ಈ ನನ್ನ ಹಾಳು ದೇಹವನ್ನು ಇನ್ನೇತಕ್ಕೆ ಇಟ್ಟುಕೊಂಡಿರಲಿ? ನಿಶ್ಚಿಂತೆಯಿಂದ ಬಿಟ್ಟೇಬಿಡುತ್ತೇನೆ

ಚಿಂತಾಕುಲಿತನನಾಱಿಸು
ವಂತಿರೆ ಮೊಗಮಲರ್ದು ನಸುನಗುತ್ತಂ ಹಾರೀ
ತಂ ತೊಟ್ಟನೆ ಪರ್ಣಕುಟೀ
ರಾಂತರಮಂ ಪೊಕ್ಕು ಪದಪಿನಿಂದಿಂತೆಂದಂ ೧೭

ಎಲೆ ವೈಶಂಪಾಯನ ತ
ನ್ನೊಲವಿಂದಂ ಬಂದನೀಗಳರಸುತ್ತೆ ಕಪಿಂ
ಜಲನಿಲ್ಲಿಗೆ ನಿನ್ನಂ ಪಂ
ಬಲಿಸುತ್ತಂ ಶ್ವೇತಕೇತುಯತಿಗಳ ಕೆಲದಿಂ ೧೮

ವ॥ ಎಂಬುದುಮಾಕ್ಷಣದೊಳ್ ಉತ್ಪನ್ನಪಕ್ಷನಾದಂತೆಗೆಯ್ದು ನೋಡಲುತ್ಕಂಠಿತನಾಗಿ ಮದ್ವಯಸ್ಯನೆಲ್ಲಿರ್ದನಾವೆಡೆಯೆನೆ ಹಾರೀತಂ ಮತ್ತಾತಪಾದಮೂಲದಲ್ಲಿಗೆವಂದನೆಂಬುದುಮತ್ತಲೆ ಕಣ್ಣಾಗಿರೆ

ಬಟಲೆ ಪೆಗಲಿಂ ಚಂಚದ್ವಲ್ಕಾಂಚಲಂ ಪೆಗಲಿಂಗೆ ಬಂ
ದೆಟಲೆ ಜಡೆಗಳ್ ಮುಯ್ಪಿಂ ಯಜ್ಞೋಪವೀತಮದೊಯ್ಯನಂ
ದಿಟಿಯೆ ಪರಿಪಟ್ಪೋರಂತಾಕಾಶಮಾರ್ಗದೆ ಬಂದು ಪಾ
ಡಟಿದ ಸಖನಂ ಮುಂದಾಂ ಕಂಡೆಂ ಕಪಿಂಜಲನಂ ನೃಪಾ ೧೯

ವ॥ ಅಂತು ಕಂಡು ಕಣ್ಣನೀರ್ಗಳುಣ್ಮೆ ಭೋಂಕನಿದಿರೇಟಲುಜ್ಜುಗಂಗೆಯ್ದೆನ್ನ ಕೆಳೆಯನಪ್ಪ ಕಪಿಂಜಲನನಿಂತೆಂದಂ

ಎಂದು ಚಿಂತಿಸುತ್ತಿದ್ದೆನು. ೧೭. ಚಿಂತಾಕ್ರಾಂತನಾಗಿದ್ದ ನನ್ನನ್ನು ಸಮಾಧಾನ ಪಡಿಸುವವನಂತೆ ಅರಳಿದ ಮುಖದಿಂದ ಕೂಡಿದ ಹಾರೀತನು ನಸುನಗುತ್ತ ತಟ್ಟನೆ ಪರ್ಣಕುಟೀರದ ಒಳಕ್ಕೆ ಬಂದು ಪ್ರೀತಿಯಿಂದ ನನ್ನನ್ನು ಕುರಿತು ಹೀಗೆ ಹೇಳಿದನು. ೧೮. "ಎಲೈ ವೈಶಂಪಾಯನ ! ಕಪಿಂಜಲನು ನಿನ್ನನ್ನೇ ಹಂಬಲಿಸುತ್ತಾ, ಪ್ರೀತಿಯಿಂದ ನಿನ್ನನ್ನೇ ಹುಡುಕಿಕೊಂಡು ಶ್ವೇತಕೇತುಮಹರ್ಷಿಗಳ ಕಡೆಯಿಂದ ಈಗ ಬಂದಿದ್ದಾನೆ." ವ॥ ಎಂದು ಹೇಳಲಾಗಿ ಆ ಕ್ಷಣದಲ್ಲಿ ರೆಕ್ಕೆ ಮೂಡಿದವನಂತೆ ನೋಡಲು ಅತುರವುಳ್ಳವನಾಗಿ "ನನ್ನ ಗೆಳೆಯನು ಎಲ್ಲಿ ಯಾವ ಸ್ಥಳದಲ್ಲಿದ್ದಾನೆ?" ಎಂದು ಕೇಳಲಾಗಿ ಹಾರೀತನು "ನಮ್ಮ ತಂದೆಯವರ ಬಳಿಗೆ ಬಂದಿದ್ದಾನೆ" ಎಂದು ಹೇಳಿದನು. ನಾನು ಆ ಕಡೆಗೇ ನೋಡುತ್ತಿರಲಾಗಿ, ೧೯. ಎಲೈ ರಾಜನೆ, ಅಲುಗಾಡುತ್ತಿರುವ ನಾರುಮಡಿಯ ಸೆರಗು ಹೆಗಲಿನಲ್ಲಿ ಜಾರುತ್ತಿರಲು, ಜಟೆಗಳು ಹೆಗಲ ಮೇಲೆ ಇಳಿಬಿದ್ದಿರಲು, ಜನಿವಾರವು ಹೆಗಲಿನಿಂದ ಮೆಲ್ಲನೆ ಜೋಲುತ್ತಿರಲು, ಆಕಾಶಮಾರ್ಗದಿಂದ ಒಂದೇಸಮನೆ ವೇಗವಾಗಿ ಬಂದುದರಿಂದ ಆಯಾಸಪಟ್ಟಿರುವ ನನ್ನ ಸ್ನೇಹಿತನಾದ ಕಪಿಂಜಲನನ್ನು ನಾನು ಎದುರುಗಡೆ ಕಂಡೆನು! ವ॥ ಹಾಗೆ ಕಂಡು ಕಣ್ಣೀರು ಉಕ್ಕಿಬರಲು ತಟ್ಟನೆ ಎದುರುಗೊಳ್ಳಲು

ದೊರೆಕೊಂಡತ್ತು ಭವದ್ವಯಾಂತರದೊಳೀಗಳ್ ಕಾಣ್ಕೆಕಂಡೇನೊ ಚಿ
ಚ್ಚರಮೆಟ್ಟಿದಪ್ಪುವ ಕುಳ್ಳಿರಲ್ ಕುಡುವ ನಿನ್ನೀ ಸೇದೆವಟ್ಟಂಗವಂ
ಕರದಿಂದೊತ್ತುವ ಶಕ್ತಿಯಂ ತಳೆವುದರ್ಕಾಂ ನೋಂತೆನಿಲ್ಲಣ್ಣ ನೀಂ
ಬರೆಯುಂ ಪಾಪಿಯೆನೇವೆನೆಂದು ಪಿರಿದುಂ ಶೋಕಾಂಧನಾಗಿರ್ಪನಂ ೨೦

ಎತ್ತಿ ಕರಂಗಳಿಂದೆ ನಿಜಬಾಷ್ಪನಿರುದ್ಧಮೆನಿಪ್ಪ ಕಣ್ಗಳಿಂ
ದೊತ್ತಿ ಶರೀರದೊಳ್ ಪುಗಿಸಿಕೊಂಡಪನೆಂಬಿನವಾದಮಪ್ಪುತುಂ
ಚಿತ್ತದಲಂಪಿನಿಂ ಕಿಱುಳನಂತಿರಲೆನ್ನಯ ಮಾಯ್ದ ಕಾಲ್ಗಳಂ
ನೆತ್ತಿಯೊಳಿಟ್ಟುಕೊಂಡಱುತಮಿರ್ದನಟಲ್ದೆನಸುಂ ಕಪಿಂಜಲಂ ೨೧

ವ॥ ಅಂತಱುತಿರ್ದನಂ ವಾಙ್ಮಾತ್ರಪ್ರತೀಕಾರನೆನಿಂತೆಂದೆಂ

ಮೊದಲೊಳ್ ಪಱಿದೈ ಸಂಸಾ
ರದ ತೊಡರಂ ನಿರದೆ ಮುಕ್ತಿಪದದೊಳ್ ನಿನಗಿಂ
ತಿದು ತಕ್ಕುದೆ ಮೂಢರ ಮಾ
ರ್ಗದಿನೆನಗೆ ಜಡಂಗಿದೇಕೆ ಶೋಕಂಗೆಯ್ವೈ ೨೨

ಪ್ರಯತ್ನಪಟ್ಟು ನನ್ನ ಸ್ನೇಹಿತನಾದ ಕಪಿಂಜಲನನ್ನು ಕುರಿತು ಹೀಗೆಂದೆನು. ೨೦. "ಗೆಳೆಯ, ಎರಡು ಜನ್ಮ ಕಳೆದ ಮೇಲೆ ಈಗ ನಿನ್ನನ್ನು ಕಂಡೆನು. ಕಂಡರೇನು ? ಕೂಡಲೆ ಎದ್ದು ನಿನ್ನನ್ನು ತಬ್ಬಿಕೊಳ್ಳುವುದಕ್ಕೂ, ಕುಳಿತುಕೊಳ್ಳಲು ಆಸನವನ್ನು ಕೊಡು ವುದಕ್ಕೂ, ಆಯಾಸಗೊಂಡ ನಿನ್ನ ಅಂಗಗಳನ್ನು ಕೈಯಿಂದ ಒತ್ತುವುದಕ್ಕೂ ಶಕ್ತಿಯನ್ನು ಪಡೆಯುವುದಕ್ಕೆ ನಾನು ಕೇಳಿಕೊಂಡು ಬಂದಿಲ್ಲ ! (ಪುಣ್ಯ ಮಾಡಿಲ್ಲ). ಅಣ್ಣ ! ನೀನು ಬಂದರೂ ಪಾಪಿಯಾದ ನಾನು ಏನುಮಾಡಬಲ್ಲೆ ?" ಎಂದು ಹೇಳುತ್ತಾ ಹೆಚ್ಚಾದ ದುಃಖದಿಂದ ಅರಿವೇ ಇಲ್ಲದಂತಾದೆನು. ೨೧. ಕಪಿಂಜಲನು ಕೈಗಳಿಂದ ನನ್ನನ್ನು ಎತ್ತಿ ಕೊಂಡು, ನೀರು ತುಂಬಿದ ಕಣ್ಣುಗಳಿಂದ ನನ್ನನ್ನು ಒತ್ತಿಕೊಂಡು, ತನ್ನ ಶರೀರದಲ್ಲಿ ನನ್ನನ್ನು ಅಡಗಿಸಿಕೊಳ್ಳುವವನಂತೆ ತಬ್ಬಿಕೊಳ್ಳುತ್ತಾ, ಮನಸ್ಸಿನ ಪ್ರೀತಿಯಿಂದ ನನ್ನ ಹಾಳು ಕಾಲುಗಳನ್ನು ತನ್ನ ತಲೆಯಮೇಲಿಟ್ಟುಕೊಂಡು ವ್ಯಥೆಯಿಂದ ಸಾಮಾನ್ಯ ಮನುಷ್ಯನಂತೆ ವಿಪರೀತವಾಗಿ ಅಳುತ್ತಿದ್ದನು. ವ॥ ಹಾಗೆ ಅಳುತ್ತಿರುವ ಗೆಳೆಯನನ್ನು ಕುರಿತು ಕೇವಲ ಬಾಯಿಮಾತಿನಿಂದಲೆ ಉಪಚಾರದ ಮಾತುಗಳನ್ನಾಡುತ್ತಾ, ನಾನು ಹೀಗೆ ಹೇಳಿದೆನು. ೨೨. "ಮಿತ್ರ, ನೀನು ಸಂಸಾರದ ಬಂಧನವನ್ನು ಮೊದಲೆ ಹರಿದು ಹಾಕಿರುವೆ. ಮೋಕ್ಷಮಾರ್ಗದಲ್ಲಿ ನಡೆಯುತ್ತಿರುವೆ. ತಿಳಿಗೇಡಿಯಾದ ನನಗಾಗಿ ಮೂಢ

ಜನಕಂ ಕುಶಲದಿನಿರ್ದನೆ
ನೆನೆವನೆ ಮಾಯ್ದೆನ್ನವಾರ್ತೆಗೇಳ್ದೇನೆಂದಂ
ಮನದೊಳ್ ಖೇದಿಸಿದನೆ ಮುನಿ
ದನೆ ಪೇಟ್ಕಿಂದೆನ್ನ ಕೆಳೆಯನಂ ಬೆಸಗೊಂಡೆಂ ೨೩

ವ॥ ಅನ್ನೆಗಂ ಹಾರೀತಶಿಷ್ಯೋಪನೀತಪಲ್ಲವಾಸನದೊಳ್ ಕುಳ್ಳಿರ್ದು ತನ್ನ ತೊಡೆಯ ಮೇಲೆನ್ನನಿರಿಸಿ

ತಂದೆಗೆ ಕುಶಲಂ ನಮಗಾ
ದಂದವುಮಂ ದಿವ್ಯಚಕ್ಷುವಱಿದಿರ್ದಂ ನೀ
ನೊಂದರ್ಕಂ ಚಿಂತಿಸಬೇ
ಡೆಂದು ಕಪಿಂಜಲಕನೆನಗೆ ಮಗುಟ್ದುಂ ನುಡಿದಂ ೨೪

ವ॥ ಆಂ ತುರಂಗತ್ವಮಂ ಪತ್ತುವಿಟ್ಟು ತಂದೆಯಲ್ಲಿಗೆವಂದೆನನ್ನಗಮನತಿದೂರದೊಳುದ್ಬಾಷ್ಪದೃಷ್ಟಿಯುಂ ವಿಷಣ್ಣದೀನವದನನುಂ ಸಭಯನುಮಾಗಿ ಪೊರ್ದಲೆನ್ನಂ ಕಂಡು

ಬಿಡು ನೀನಂಜಿಕೆಯಂ ಕಪಿಂಜಲಕ ದೋಷಂ ನಿನ್ನದಲ್ತೇಕೆ ಪೇಟ್
ಸೆಡೆವೈ ದೋಷಮಿದೆನ್ನದೆಂದು ಮಱುಗುತ್ತಿರ್ದುಂ ಮಗಂ ಪುಟ್ಟಿದಾ
ಗಡೆ ಮಾಡಲ್ ಬಗೆದಂದೆನಿಲ್ಲಿನಿಸುಮಾಯುಷ್ಕಾಮುಮಂ ಯಜ್ಞಮಂ
ತಡವಂ ಮಾಡಿದೆನೀಗಳಿಂದೆ ಬಗೆ ನೀಂ ತತ್ಕಾರ್ಯಸಂಸಿದ್ಧಿಯಂ ೨೫

ರಂತೆ ಏಕೆ ದುಃಖಪಡುತ್ತಿರುವೆ ? ಇದು ನಿನಗೆ ಸರಿಯಲ್ಲ. ೨೩. ನಮ್ಮ ತಂದೆಯವರು ಕ್ಷೇಮದಿಂದ್ದಾರೆಯೇ ? ನನ್ನನ್ನು ಜ್ಞಾಪಿಸಿಕೊಳ್ಳುತ್ತಿರುವರೇ ? ನನ್ನ ಹಾಳು ಸಮಾಚಾರವನ್ನು ಕೇಳಿ ಏನು ಹೇಳಿದರು ? ಮನಸ್ಸಿನಲ್ಲಿ ದುಃಖಿಸಿದರೆ ? ಅಥವಾ ಕೋಪಿಸಿಕೊಂಡರೆ ? ಹೇಳು" ಎಂದು ನನ್ನ ಗೆಳೆಯನನ್ನು ಕೇಳಿಕೊಂಡೆನು. ವ॥ ಅಷ್ಟರಲ್ಲಿ ಹಾರೀತನ ಶಿಷ್ಯನು ತಂದ ಚಿಗುರಿನ ಪೀಠದಲ್ಲಿ ಕಪಿಂಜಲನು ಕುಳಿತುಕೊಂಡು ತನ್ನ ತೊಡೆಯ ಮೇಲೆ ನನ್ನನ್ನು ಇಟ್ಟುಕೊಂಡು, ೨೪. "ಗೆಳೆಯ, ತಂದೆಯವರು ಕ್ಷೇಮವಾಗಿದ್ದಾರೆ. ಜ್ಞಾನದೃಷ್ಟಿಯುಳ್ಳ ಅವರು ನಮಗಾದ ಅವಸ್ಥೆಯನ್ನೆಲ್ಲ ತಿಳಿದುಕೊಂಡಿದ್ದಾರೆ. ನೀನು ಯಾವುದಕ್ಕೂ ಚಿಂತೆಮಾಡಬೇಡ" ಎಂದು ನನಗೆ ಹೇಳಿದನು. ವ॥ ನಾನು ಕುದುರೆಯ ಜಾತಿಯನ್ನು ಬಿಟ್ಟು ತಂದೆಯವರ ಹತ್ತಿರಕ್ಕೆ ಹೋದೆನು. ಅವರು ಕಣ್ಣೀರು ಬಿಡುತ್ತಿರುವ, ದುಃಖದಿಂದ ಕಳೆಗುಂದಿದ ಮುಖವುಳ್ಳ, ಭಯಗೊಂಡಿರುವ, ಹತ್ತಿರಕ್ಕೆ ಬರುತ್ತಿರುವ ನನ್ನನ್ನು ಸಮೀಪದಲ್ಲಿ ನೋಡಿ, ೨೫. "ಕಪಿಂಜಲ, ನೀನು ಹೆದರಬೇಡ. ಇದರಲ್ಲಿ ನಿನ್ನ ತಪ್ಪೇನೂ ಇಲ್ಲ. ಏಕೆ ಅಂಜುತ್ತಿರುವೆ ? ಹೇಳು. ಇದು ನನ್ನದೇ ತಪ್ಪೆಂದು ನಾನು ಕೊರಗುತ್ತಲೇ ಇದ್ದೆ ! ಆದರೂ ಮಗು ಹುಟ್ಟಿದಾಗ ಆಯುಷ್ಯವನ್ನು ಹೆಚ್ಚಿಸುವ ಯಾವ ಯಜ್ಞವನ್ನೂ ಮಾಡಲಿಲ್ಲ. ಸುಮ್ಮನೆ ಕಾಲಹರಣ

ವ॥ ಇದಱಿಂ ನೀನೊಂದುಮಂ ಚಿಂತಿಸದಿರೆಂದು ತಂದೆ ಬೆಸಸೆ ಭಯಮಂ ಪತ್ತುವಿಟ್ಟು

ಎನಗೆ ಪಸಾದಿಪೊಡೆ ಸಖಂ
ಜನಿಯಿಸಿದೆಡೆಯುತ್ತಲೈದುವಂತೆನಗಾಜ್ಞಾ
ಪನಮೀವುದೊಲವಿನಿಂ ನೀ
ಮೆನೆ ಜನಕಂ ಕೇಳ್ದು ಮಗುಟ್ದು ಬೆಸಸಿದನಾಗಳ್ ೨೬

ಮಗನೆ ಶುಕಜಾತಿಯೊಳಗವ
ನೊಗೆದಿರ್ದಪನವನನಱಿಯಲಾರ್ಪೈ ನಿನ್ನಂ
ಮಿಗೆ ತಿಳಿಯಲಾಱನವನುಂ
ತೆಗೆಯುದಱಿಂ ಗಮನಚಿಂತೆಯುಂ ನೀನೀಗಳ್ ೨೭

ವ॥ ಎಂದು ನುಡಿದಿರ್ದಿಂದಿನ ಪೊಟ್ತುರೆಯೊಳಯ್ಯನೆನ್ನಂ ಕರೆದು

ಕೇಳಿಲೆ ನೀಂ ಕಪಿಂಜಲ ಭುವತ್ಸುಹೃದಂ ವಿಧಿಯೋಗದಿಂದೆ ಜಾ
ಬಾಲಿಮುನೀಂದ್ರನಾಶ್ರಮವನಾ ಶುಕದೇಹದೆ ಸೇರ್ದನಿಂದು ಮೇಲ್
ಮೇಳಿಸಿತೈ ಸಮಂತು ಜನನಾಂತರ ಸಂಸ್ಮರಣಂ ದಲಾತನೊಳ್
ತಾಳುತನೂನಹರ್ಷಮನೆ ಪೋಗವನಂ ನಡೆನೋಡಲೊಪ್ಪದಿಂ ೨೮

ಮಾಡಿಬಿಟ್ಟೆ. ಇನ್ನುಮೇಲೆ ಆ ಕಾರ್ಯವು ನೆರವೇರಿತೆಂದೇ ತಿಳಿದುಕೊ. ವ॥ ಇದರಿಂದ ನೀನೇನೂ ಯೋಚನೆ ಮಾಡಬೇಡ ಎಂದು ತಂದೆಯುವರು ಅಪ್ಪಣೆ ಮಾಡಲು ಭಯವನ್ನು ಬಿಟ್ಟು, ೨೬. "ನನಗೆ ಅನುಗ್ರಹ ಮಾಡುವುದಾದರೆ ನನ್ನ ಸ್ನೇಹಿತನು ಎಲ್ಲಿ ಹುಟ್ಟಿದ್ದಾನೋ ಅಲ್ಲಿಗೆ ಹೋಗುವಂತೆ ನನಗೆ ತಾವು ಪ್ರೀತಿಯಿಂದ ಅಪ್ಪಣೆಕೊಡಬೇಕು" ಎಂದು ಕೇಳಿಕೊಂಡೆನು. ಆಗ ಮತ್ತೆ ನನ್ನ ತಂದೆಯುವರು ಹೀಗೆ ಹೇಳಿದರು. ೨೭. "ಮಗನೆ, ಈಗ ಅವನು ಗಿಳಿಯ ಜಾತಿಯಲ್ಲಿ ಹುಟ್ಟಿದ್ದಾನೆ. ಆದರಿಂದ ನೀನು ಅವನನ್ನು ಗುರುತಿಸಲಾರೆ. ಹಾಗೆಯೆ ಅವನೂ ನಿನ್ನನ್ನು ಗುರುತಿಸಲಾರನು. ಆದ್ದರಿಂದ ನೀನು ಸದ್ಯಕ್ಕೆ ಅಲ್ಲಿಗೆ ಹೋಗುವ ಯೋಚನೆಯುನ್ನು ಬಿಟ್ಟುಬಿಡು." ವ॥ ಮತ್ತೆ ಈದಿನ ಮುಂಜಾನೆ ನನ್ನನ್ನು ಕರೆದು, ೨೮. "ಕಪಿಂಜಲ, ಕೇಳಪ್ಪ, ನಿನ್ನ ಸ್ನೇಹಿತನು ಗಿಳಿಯ ದೇಹದಿಂದ ಕೂಡಿ ಈಗ ಅದೃಷ್ಟವಿಶೇಷದಿಂದ ಜಾಬಾಲಿಮಹರ್ಷಿಗಳ ಆಶ್ರಮವನ್ನು ಸೇರಿದ್ದಾನೆ. ಮತ್ತು ಇಂದು ಅವನಿಗೆ ಹಿಂದಿನ ಜನ್ಮಗಳ ನೆನಪು ಉಂಟಾ

ಭರದಿಂದಂ ಸಾರ್ದು ಪುಣ್ಯಾಶ್ರಮಮನಿರದೆ ಮತ್ಸ್ವಸ್ತಿವಾದಂಗಳಂ ಬಿ
ತ್ತರಿಸುತ್ತಂ ದೀರ್ಘಕಾಲಂ ಬದುಕಿಪ ಬಗೆಯಿಂದೀಗಳಾಂ ಮಾಡುವಾಯು
ಷ್ಕರಯಜ್ಞಂ ಪೂರ್ಣಮಪ್ಪನ್ನೆವರಮೊಸೆದು ಜಾಬಾಲಿಸಾಮೀಪ್ಯದೊಳ್ಸಾ
ದರಮಿರ್ ಬೇಱೊಂದನಾಲೋಚಿಸದಿರೆನುತೆ ಪೇಟ್ ನೀನವಂಗೆಂದರಾಗಳ್ ೨೯

ವ॥ ಇದಲ್ಲದೆ ಭವದೀಯ ವಿಯೋಗದುಃಖಸವಮಾಕುಲಿತೆಯಾಗಿರ್ಪ ನಿನ್ನ ಜನನಿಯೆನಿ
ಸಿದ ಲಕ್ಷ್ಮಿಯುಮಾ ಕಜ್ಜದೊಳ್ ಪರಿಚಾರಿಣಿಯಾಗಿರ್ದಪಳಾಕೆಯುಮೆನ್ನಂ ಮುದ್ದಿಸಿ ಜನಕ
ನೊರೆದುದನೆ ಮಗುಟ್ದು ಮಗುಟ್ದು ಬೆಸಸಿದಳ್

ಇಂತೊರೆದು ಮೃದುಶಿರೀಷಸು
ಮಾಂತದವೋಲ್ ಸೂಕ್ಷ್ಮಮೆನಿಪ ತುಪ್ಪುಟತತಿಯಿಂ
ದಂತುರಮಾದೆನ್ನಂಗಮ
ನಂತರಿಸದೆ ಕರದಿನೆಟವಿದಂ ಮನದಟಲಿಂ ೩೦

ವ॥ ಆಗಳಾತನ ಮನದ ಸಂತಾಪಮನಱಿದಾನುಂ ದುಃಖಿತಹೃದಯನಾಗಿ ಮಿತ್ರನಪ್ಪ
ಕಪಿಂಜಲ ನೀಂ ನಿರ್ಭಾಗ್ಯನಾದೆನಗೋಸುಗಂ ಕುದುರೆವರಿಜಂ ತಳೆದು ಪರಾಧೀನನಾಗಿ ಪಲ
ಕೋಟಲೆಗಳನನುಭವಿಸಿದೆ ಸೋಮಪಾನೋಚಿತಮಪ್ಪೀ ಮೊಗದೊಳ್ ನೊರೆವೆರೆದ ನೆತ್ತರುಗುವ
ಬಿಟ್ಟಿತಪ್ಪ ಕಡಿಯಾಣದೇರ್ಗಳುಮಂ ಪೂಗೊಯ್ವ ಪದದೊಳ್ ಮೇಲೆಕಿಡೆದೆಳವಳ್ಳಿಯು

ಗಿದೆ. ಅವನನ್ನು ನೋಡಲು ಸಂತೋಷದಿಂದ ಹೋಗಿಬಾ, ೨೯. ಬೇಗನೆ ಹೋಗಿ ಪುಣ್ಯಾಶ್ರಮವನ್ನು ಸೇರಿ ಅವನಿಗೆ ನನ್ನ ಆಶೀರ್ವಾದಗಳನ್ನು ತಿಳಿಸು. ಮತ್ತು ನಾನು ಅವನಿಗೆ ದೀರ್ಘಾಯುಸ್ಸುಂಟಾಗಲೆಂದು ಮಾಡುತ್ತಿರುವ ಆಯುಷ್ಯಹೋಮವು ಮುಗಿಯುವವರೆಗೂ ಬೇರೆ ಏನನ್ನೂ ಆಲೋಚಿಸದೆ ಜಾಬಾಲಿಗಳ ಸನ್ನಿಧಾನದಲ್ಲೆ ಸಂತೋಷದಿಂದ ಇರುವಂತೆ ಅವನಿಗೆ ತಿಳಿಸು" ಎಂದು ಅಪ್ಪಣೆ ಮಾಡಿದರು. ವ|| ಇದಲ್ಲದೆ ನಿನ್ನ ಅಗಲಿಕೆಯ ದುಃಖದಿಂದ ಪೀಡಿತಳಾದ ನಿನ್ನ ತಾಯಿಯಾದ ಲಕ್ಷ್ಮಿಯು ಈ ಕಾರ್ಯದಲ್ಲಿ ಸೇವೆ ಮಾಡುತ್ತಾ ಅಲ್ಲಿಯೇ ಇದ್ದಾಳೆ. ಅವಳೂ ನನ್ನ ಮೇಲೆ ಅಕ್ಕರೆಯನ್ನು ತೋರಿಸಿ ತಂದೆಯವರು ಹೇಳಿದ್ದನ್ನೆ ಮತ್ತೆ ಮತ್ತೆ ಹೇಳಿ ಕಳುಹಿಸಿದ್ದಾಳೆ." ೩೦. ಹೀಗೆ ಹೇಳಿ ಕಪಿಂಜಲನು ಮೃದುವಾದ ಬಾಗೆಹೂವಿನಂತೆ ಸೂಕ್ಷ್ಮವಾದ ಕೂದಲುಗಳ ಸಮೂಹದಿಂದ ವ್ಯಾಪ್ತವಾದ ನನ್ನ ಅಂಗಗಳನ್ನು ಮತ್ತೆ ಮತ್ತೆ ಮನಸ್ಸಿನ ಅಳಲಿನಿಂದ ಕೂಡಿ ಸವರಿದನು. ವ॥ ಆಗ ಅವನ ಮನಸ್ಸಿನ ಸಂತಾಪವನ್ನು ತಿಳಿದು ನಾನೂ ದುಃಖಗೊಂಡ ಮನಸ್ಸುಳ್ಳವನಾಗಿ, "ಗೆಳೆಯ, ಕಪಿಂಜಲ, ನೀನು ಅದೃಷ್ಟಹೀನನಾದ ನನಗೋಸ್ಕರ ಕುದುರೆಯ ಆಕಾರವನ್ನು ತಾಳಿ, ಪರಾಧೀನನಾಗಿ ಹಲವಾರು ಕೋಟಲೆಗಳನ್ನು ಅನುಭವಿಸಿಬಿಟ್ಟೆ. ಯಾಗಕಾಲದಲ್ಲಿ ಸೋಮಪಾನಕ್ಕೆ ಉಚಿತವಾದ ಈ ನಿನ್ನ ಬಾಯಲ್ಲಿ ನೊರೆಯಿಂದ ಕೂಡಿದ ರಕ್ತವನ್ನು ಬರಿಸುವ ಕಠಿನವಾದ ಕಡಿವಾಣದ ಗಾಯ

ಸೋಂಕಿಗಂ ಬಟಲ್ವೊಡಲೊಳ್ ಚಮ್ಮಟಿಗೆಗುತ್ತುಗಳುಮಂ ಚಿಂದಳಿರ ಮೆಲ್ವಾಸಿನೊಳ್ ಮಲಂಗುತಿರ್ದ ನಿನ್ನೀ ಬೆನ್ನೆಲುವಿನೊಳಾವಗಂ ಬಿಗಿದಿರ್ದ ಪಲ್ಲಣದೊತ್ತಿನಿಂದೊಗೆದ ಧಡ್ಡುಗಳುಮಂ ಜನ್ನಿವಾರಮುಂ ತಳೆವೀ ಮೆಯ್ಯೊಳ್ ತೊವಲ್ವೊರಜೆಗಳ ಕಟ್ಟಿಂ ಪುಟ್ಟಿದ ಬೇನೆಯುಮನೆಂತು ಸೈರಿಸಿದೆಯೆಂದೀ ತೆಱದ ಪೂರ್ವವೃತ್ತಾಂತಾಲಾಪಂಗಳಿಂದಾಗಳಾಂ ತಿರ್ಯಗ್ಜಾತಿದುಃಖಮಂ ಮಱೆದು ಸಂತಸದಿನಿರ್ಪನ್ನೆಗಂ

ಗಗನಾಂಗಣಸೌಧಾಗ್ರದೊ
ಳೊಗುಮಿಗೆಯಿಂ ರಾಜಿಸಿರ್ಪ ಮಣಿಕಲಶಂಬೊಲ್
ಸೊಗಯಿಸಿದುದು ಮಿಗೆ ಮಧ್ಯಾ
ಹ್ನಗತಂ ರವಿಬಿಂಬಮಾಗಳಂಬರತಲದೊಳ್ ೩೧

ವ॥ ಆಗಳಾ ಹಾರೀತಂ ಕಪಿಂಜಲಂಗಮೆನಗಮುಚಿತಮಾದಾಹಾರದಿಂ ತಣಿಪಿದನಂತರಂ ಕಪಿಂಜಲಂ ಕಿಱಿದುಪೊಟ್ತಂ ಕಳೆದೆನ್ನಂ ಕೊರ್ತು ಕೆಳೆಯನೆ ತಾತಂ ತಾನೆಸಗುವಾಯುಷ್ಕರಯಜ್ಞಂ ಪೂರ್ಣಮಪ್ಪನ್ನೆಗಮೀ ಪೂಜ್ಯನಪ್ಪ ಜಾಬಾಲಿಯಾಶ್ರಮದಿಂ ಚಲಿಸದಿರಾನುಮಾ ಕರ್ಮದೊಳೆ ವ್ಯಗ್ರನಾಗಿರ್ಪನದಱಿಂದೀಗಳಾಂ ಪೋಪೆನೆಂದೆನ್ನಂ ತಳ್ಕೈಸಿ ವಿಸ್ಮಯಾವಿಷ್ಟರಾದ

ಗಳನ್ನೂ, ಹೂವುಗಳನ್ನು ಕೊಯ್ಯುವಾಗ ಮೇಲೆ ಬಿದ್ದ ಎಳೆಬಳ್ಳಿಯು ತಗುಲಿದರೂ ತಡೆದುಕೊಳ್ಳಲಾರದ ಈ ದೇಹದಲ್ಲಿ ಚಾವಟಿ ಏಟುಗಳನ್ನೂ, ಎಳೆಯ ಚಿಗುರಿನ ಮೃದುವಾದ ಹಾಸಿಗೆಯ ಮೇಲೆ ಮಲಗುತ್ತಿದ್ದ ನಿನ್ನ ಈ ಬೆನ್ನುಮೂಳೆಯ ಮೇಲೆ ಯಾವಾಗಲೂ ಬಿಗಿದಿದ್ದ ಜೀನು ಒತ್ತಿ ಒತ್ತಿ ಉಂಟಾಗುವ ಜಡ್ಡುಗಳನ್ನೂ, ಜನಿವಾರವನ್ನು ಧರಿಸುವ ಈ ಶರೀರದಲ್ಲಿ ಮಿಣಿಗಳ ಕಟ್ಟುವಿಕೆಯಿಂದ ಉಂಟಾದ ನೋವನ್ನೂ ಹೇಗೆ ಸಹಿಸಿಕೊಂಡೆ ?" ಎಂದೆನು. ಈ ಬಗೆಯ ಪೂರ್ವವೃತ್ತಾಂತಗಳ ಮಾತುಕತೆಗಳಿಂದ ಆಗ ನಾನು ಹಕ್ಕಿಯಾಗಿ ಹುಟ್ಟಿರುವ ದುಃಖವನ್ನು ಮರೆತು ಸಂತೋಷವಾಗಿದ್ದೆನು. ೩೧. ಆಗ ಮಧ್ಯಾಹ್ನವಾಯಿತು. ಆಕಾಶವೆಂಬ ಮಹಡಿಯ ತುದಿಯಲ್ಲಿ ಅತ್ಯಧಿಕವಾಗಿ ಪ್ರಕಾಶಿಸುವ ಮಣಿಕಲಶದಂತಿರುವ ಸೂರ್ಯಬಿಂಬವು ಆಕಾಶದಲ್ಲಿ ಚೆನ್ನಾಗಿ ಪ್ರಕಾಶಿಸುತ್ತಿತ್ತು. ವ॥ ಆಗ ಹಾರೀತನು ಕಪಿಂಜಲನನ್ನೂ ನನ್ನನ್ನೂ ಉಚಿತವಾದ ಆಹಾರದಿಂದ ತೃಪ್ತಿಬಡಿಸಿದನು. ಬಳಿಕ ಸ್ವಲ್ಪಹೊತ್ತು ಕಳೆದಮೇಲೆ ಕಪಿಂಜಲನು ನನ್ನನ್ನು ಕುರಿತು ಪ್ರೀತಿಯಿಂದ "ಗೆಳೆಯ ತಂದೆಯವರು ಮಾಡುತ್ತಿರುವ ಆಯುಷ್ಯವರ್ಧಕವಾದ ಯಜ್ಞವು ಪೂರ್ಣವಾಗುವವರೆಗೂ ಈ ಪೂಜ್ಯರಾದ ಜಾಬಾಲಿಮಹರ್ಷಿಗಳ ಆಶ್ರಮದಿಂದ ಹೊರಡಬೇಡ. ನಾನೂ ಅದೇ ಕರ್ಮದಲ್ಲಿ ಭಾಗಿಯಾಗಬೇಕು. ಆದ್ದರಿಂದ ಈಗ ನಾನು ಹೋಗಿಬರುತ್ತೇನೆ" ಎಂದು ನನ್ನನ್ನು ತಬ್ಬಿಕೊಂಡು ಆಶ್ಚರ್ಯ

ಮುನಿಕುಮಾರರುನ್ನಮಿತಾನನರಾಗಿ ನೋಡುತ್ತಿರೆ ಗಗನಕ್ಕೊಗೆದದೃಶ್ಯನಾದಂ ಬಳಿಕ್ಕಂ ಹಾರೀತನೆನ್ನಂ ಕೆಲವಾನುದಿವಸಂ ಪೋಷಿಸುತ್ತಿರಲೆನಗೆ ಗಱಿಗಳೊಗೆದು ಪಾಱುವನಿತು ಬಲಮು ಪಯಿಸೆ ಮನದೊಳಿಂತಾಲೋಚಿಸಿದೆಂ

ಕ್ಷಮನಾದೆಂ ನಭದಲ್ಲಿ ಪಾಱಲುರೆ ಚಂದ್ರಾಪೀಡನುತ್ಪತ್ತಿಯಾ
ಕ್ರಮಮುಂ ಮೇಣ್ ತಿಳಿವಿಂಗೆ ಬಂದುದಱಿಂದಾ ರಾಜಚಂದ್ರಾಂಕನಂ
ನಿಮಿಷಂ ನೋಡದಿರಲ್ಕಮಾಱೆನಹಹಾ ಏನಾನುಮಕ್ಕೀಗಳಾಂ
ಗಮಿಪೆಂ ತಾನವನಲ್ಲಿಗೆಂದು ಮನದೊಳ್ ನಿಶ್ಚೈಸಿದೆಂ ಭೂಪತೀ ೩೨

ವ॥ ಅಂತು ನಿಶ್ಚೈಸಿ ಬಳಿಕೊಂದುದಿನಂ ಪ್ರಾತರ್ವಿಹಾರಾರ್ಥಮುತ್ತರಾಭಿಮುಖನಾಗಿ ಮೆಲ್ಲನೆ ಪೊಱಮಟ್ಟು ಬಟಲ್ಕೆಯಿಂ ಬಸವಳಿದು ಪಾಱಲಳವಿಲ್ಲದೆ ಸಮೀಪದೊಳಿರ್ದ ಹರಿತಪಲ್ಲವಭರಾವನಮ್ರಮಾದೊಂದು ಜಂಬೂವೃಕ್ಷಮನಡರ್ದು ಕಿಱಿದುಬೇಗಮಿರ್ದು ಚೇತರಿಸಿಕೊಂಡಲ್ಲಿಂ ತಳರ್ದು

ಕುಳಿರುತ್ತಂ ಸುತ್ತಲುಂ ಕತ್ತಲಿಪ ತರುಲತಚ್ಛಾಯೆಯುಂ ಸಾರ್ದು ಸಾರ್ದು
ತ್ಪಳಗಂಧೋದ್ಗಾರಿ ಪಂಪಾಸರದ ಸಲಿಲಮಂ ಪೀರ್ದಬ್ಜಬೀಜಾ
ವಳಿಯುಂ ತೀರದ್ರುಮಾಂದೋಳಿತಫಲತತಿಯುಂ ಕಾರ್ದು ಕಾರ್ದೊಯ್ಯನಲ್ಲಿಂ
ತಳರ್ದಾಂ ಮತ್ತೊಂದು ತಣ್ಪಂ ತಳೆದ ತರುತಲಸ್ಕಂಧದೊಳ್ ನಿಂದೆನಾಗಳ್ ೩೩

ಭರಿತರಾದ ಮುನಿಕುಮಾರರು ತಲೆಯನ್ನು ಮೇಲಕ್ಕೆತ್ತಿ ನೋಡುತ್ತಿರುವಂತೆಯೇ ಆಕಾಶಕ್ಕೆ ನೆಗೆದು ಕಣ್ಮರೆಯಾದನು. ಬಳಿಕ ಹಾರೀತನು ನನ್ನನ್ನು ಕೆಲವು ದಿನಗಳು ಪೋಷಿಸುತ್ತಿದ್ದನು. ನನಗೆ ಗರಿಗಳು ಮೂಡಿ ಶಕ್ತಿಯುಂಟಾಯಿತು. ಆಗ ನಾನು ಮನಸ್ಸಿನಲ್ಲಿ ಹೀಗೆ ಯೋಚಿಸಿದೆನು. ೩೨. "ಆಕಾಶದಲ್ಲಿ ಹಾರಲು ಈಗ ನನಗೆ ಚೆನ್ನಾಗಿ ಶಕ್ತಿ ಬಂದಿದೆ. ಮತ್ತು ಚಂದ್ರಾಪೀಡನಿರುವ ರೀತಿಯೂ ತಿಳಿಯಿತು. ಆದರಿಂದ ಆ ರಾಜೇಂದ್ರಚಂದ್ರನನ್ನು ನೋಡದೆ ಒಂದು ನಿಮಿಷವೂ ಬದುಕಲಾರೆ. ಅಯ್ಯೋ, ಏನುಬೇಕಾದರೂ ಆಗಲಿ. ಈಗ ನಾನು ಅವನಿರುವ ಸ್ಥಳಕ್ಕೆ ಹೋಗಿಯೇ ಹೋಗುತ್ತೇನೆ" ಎಂದು ಎಲೈ ಮಹಾರಾಜನೆ, ಮನಸ್ಸಿನಲ್ಲಿ ತೀರ್ಮಾನಿಸಿದೆ. ವ॥ ಹಾಗೆ ತೀರ್ಮಾನಿಸಿ ಬಳಿಕ ಒಂದು ದಿವಸ ಬೆಳಗಿನ ಸಂಚಾರಕ್ಕಾಗಿ ಹೊರಟ ನಾನು ಹಾಗೆಯೆ ಉತ್ತರಾಭಿಮುಖವಾಗಿ ಮೆಲ್ಲನೆ ಹೊರಟು ಹಾರಿಹೋಗುತ್ತಾ, ಆಯಾಸದಿಂದ ಶಕ್ತಿ ಗುಂದಿ ಹಾರಲು ಶಕ್ತಿಯಿಲ್ಲದೆ ಹತ್ತಿರದಲ್ಲಿದ್ದ ಹಸಿರುಬಣ್ಣದ ಚಿಗುರುಗಳ ಭಾರದಿಂದ ಬಾಗಿದ್ದ ಒಂದು ನೇರಳೆಮರವನ್ನು ಏರಿ ಸ್ವಲ್ಪಕಾಲವಿದ್ದು ಚೇತರಿಸಿಕೊಂಡು ಅಲ್ಲಿಂದ ಹೊರಟೆನು. ೩೩. ತಣ್ಣಗೆ ಕೊರೆಯುತ್ತಿದ್ದ ಸುತ್ತಲೂ ಕತ್ತಲೆಯನ್ನುಂಟುಮಾಡುವ ಮರದ ಬುಡದ ನೆರಳನ್ನು ಸೇರಿ ಸೇರಿ, ನೈದಿಲೆಯ ಸುವಾಸನೆಯನ್ನು ಹೊರ ಹೊಮ್ಮಿಸುವ ಪಂಪಾಸರೋವರದ ನೀರನ್ನು ಕುಡಿದು ಕುಡಿದು, ಅನೇಕ ತಾವರೆಬೀಜಗಳನ್ನೂ ದಡದ ಮರಗಳಲ್ಲಿ ಜೋಲಾಡುತ್ತಿರುವ ಅನೇಕ ಹಣ್ಣುಗಳನ್ನೂ ತಿಂದು ತಿಂದು, ಮೆಲ್ಲನೆ ಅಲ್ಲಿಂದ ಹೊರಟು ತಂಪಿನಿಂದ ಶೋಭಿಸುವ ಮತ್ತೊಂದು

ವ॥ ಅಂತು ನಿಂದು

ಇನ್ನುಮಪರಾಹ್ಣದೊಳ್ ಕಿಱಿ
ದುಂ ನಡೆನೋಡುತ್ತೆ ಮನದೊಳಾಂ ಚಿಂತಿಸುತಿ
ರ್ಪನ್ನೆಗಮಧ್ವಶ್ರಮದಿಂ
ದಂ ನಡೆ ಮಾಯ್ದೆನಗೆ ನಿದ್ರೆಬಂದತ್ತಾಗಳ್ ೩೪

ವ॥ ಅಂತು ನಿದ್ರೆಗೆಯ್ದು ಕಿಱಿದುಬೇಗಕ್ಕೆಂತಾನುಮೆಚ್ಚೆತ್ತು ನೇಣ್ಬಲೆಯೊಳ್ ಸಿಲುಕಿರ್ದೆನ್ನಂ ಕಂಡಿದೆತ್ತಣಿಂ ಬಂದುದೆಂದು ನೋೞ್ಪನ್ನೆಗಮುದ್ಬದ್ಧಭೀಷಣಭ್ರುಕುಟಿಯುಮಕಾರಣಕ್ರೊಧಾಂಧಕಾರಿತ ರೌದ್ರಮುಖನುಮಾರಕ್ತತಾರಕಾಕ್ಷನುಮಾಗಿ ಕೇವಲಕಾಲಾಯಸ ಪರಮಾಣುಗಳಿಂ ನಿರ್ಮಿಸಿದಂತೆ ರೌದ್ರಾಕಾರನಾದ ಕಾಲಪುರುಷನೋರ್ವನಂ ಕಂಡು ಭಯಂಗೊಂಡು ಮೆಲ್ಲನಿಂತೆಂದೆಂ

ಎಲೆ ನೀನಾರೇಕಿಕ್ಕಿದೆ
ಬಲೆಯಂ ಪೇಟಣ್ಣ ನಿನಗೆ ಮಾಂಸದೊಳಾದೊಂ
ದೊಲವು ಸಮನಿಸಿದೊಡಲ್ಲಿಯೆ
ಕೊಲಲೊಲ್ಲದೆ ಮಾಣ್ದೆಯೇನಿದಚ್ಚರಿಯಲ್ತೇ ೩೫

ಕರುಣಿಸಿ ಬಿಡು ವಲ್ಲಭಜನ
ನಿರೀಕ್ಷಣೋತ್ಸುಕನೆನೆನಗೆ ಪೋಪೆಡೆ ದೂರಾಂ
ತರಮುಂತುಂ ಪ್ರಾಣಿಗಳೆ
ಲ್ಲರಾಸೆಯುಂ ಬಗೆವೊಡೊಂದೆ ನೀನಱಿಯದುದೇ ೩೬

ಮರದ ಬುಡದ ಕವಲಿನಲ್ಲಿ ನಿಂತೆನು. ವ॥ ಹಾಗೆ ನಿಂತು, ೩೪. ಇನ್ನು ಅಪರಾಹ್ಣದಲ್ಲಿ ಸ್ವಲ್ಪದೂರ ಹೋಗಬೇಕೆಂದು ಉದ್ದೇಶಿಸಿ ಮನಸ್ಸಿನಲ್ಲಿ ಆಲೋಚಿಸುತ್ತಿರುವಷ್ಟರಲ್ಲಿ ಹಾಳಾದ ನನಗೆ ಆಗ ಬಹಳ ನಿದ್ರೆ ಬಂದುಬಿಟ್ಟಿತು, ವ॥ ಹಾಗೆ ನಿದ್ರೆ ಮಾಡಿ ಸ್ವಲ್ಪಹೊತ್ತಿಗೆ ಹೇಗೋ ಎಚ್ಚರಗೊಂಡು ನೋಡಿದೆನು. ಹಗ್ಗದ ಬಲೆಯಲ್ಲಿ ಸಿಕ್ಕಿಹಾಕಿಕೊಂಡಿರುವೆನೆಂದು ಗೊತ್ತಾಯಿತು. ಇದೆಲ್ಲಿಂದ ಬಂತು ? ಎಂದು ನೋಡುವಷ್ಟರಲ್ಲಿ ಭಯಂಕರವಾಗಿ ಹುಬ್ಬು ಗಂಟುಹಾಕಿಕೊಂಡಿರುವ, ಕಾರಣವೇ ಇಲ್ಲದೆ ಕೋಪದಿಂದ ಕಪ್ಪಿಟ್ಟ ಕ್ರೂರವಾದ ಮುಖವುಳ್ಳವನೂ, ಕೆಂಪಾದ ಕಣ್ಣುಗುಡ್ಡೆಯಿಂದ ಕೂಡಿಕೊಂಡಿರುವವನೂ ಆಗಿರುವ, ಬರಿಯ ಕಬ್ಬಿಣದ ಪರಮಾಣುಗಳಿಂದಲೇ ಸೃಷ್ಟಿಸಲ್ಪಟ್ಟಂತಿರುವ ಭಯಂಕರಾಕಾರನಾದ ಒಬ್ಬ ಕರಿಯ ಮನುಷ್ಯನನ್ನು ಕಂಡು ಭಯಪಟ್ಟು ಮೆಲ್ಲನೆ ಹೀಗೆಂದೆನು. ೩೫. "ಅಣ್ಣ, ನೀನು ಯಾರು ? ಈ ಬಲೆಯನ್ನು ಏಕೆ ಇಕ್ಕಿದೆ ? ನಿನಗೆ ಮಾಂಸದ ಆಸೆಯಿದ್ದರೆ ನಾನು ಮಲಗಿದ್ದಾಗಲೆ ಕೊಲ್ಲದೆ ಏತಕ್ಕೆ ಬಿಟ್ಟೆ ? ಇದು ಆಶ್ಚರ್ಯವಾಗಿದೆ ! ೩೬. ದಯಮಾಡಿ ನನ್ನನ್ನು ಬಿಟ್ಟುಬಿಡು. ನಾನು ಆಪ್ತೇಷ್ಟರನ್ನು ನೋಡಲು ಹೋಗುತ್ತಿದ್ದೇನೆ. ಬಹಳ ದೂರ ಹೋಗಬೇಕು. ವಿಚಾರ ಮಾಡಿದರೆ ಎಲ್ಲಾ ಪ್ರಾಣಿಗಳ ಆಸೆಗಳೂ ಒಂದೇ ಸಮನಾಗಿರುತ್ತವೆ. ಇದು ನಿನಗೆ ಗೊತ್ತಿಲ್ಲವೆ?"

ವ॥ ಎಂಬುದುಮೆನ್ನನಾತನಿಂತೆಂದನಾಂ ಕ್ರೂರಕರ್ಮಜಾತಿಯಪ್ಪ ಚಂಡಾಲನೆನಪ್ಪೆ ನಾದೊಡಂ ಮಾಂಸಲೋಭಚಿತ್ತದೊಳ್ ಪಿಡಿದೆನಲ್ಲಿಲ್ಲಿಗನತಿದೂರದೊಳ್ ಮಾತಂಗರ ಪಳ್ಳಿಯಿ ರ್ಪುದಲ್ಲಿಗೆನ್ನಾಳ್ದನೊಡೆಯನಾತನ ಮಗಳ್ ಕೌತುಕದಿಂ ನಿನ್ನಂ ಪಿಡಿದುತರಲೆಂದು ಪಲಂಬರ ನಟ್ಟಿದೊಡೆನ್ನ ಪುಣ್ಯದಿಂ ನೀನೆನಗೆ ದೊರೆಕೊಂಡೆ ನಿನ್ನನೆನ್ನಾಳ್ದಿತಿಯಲ್ಲಿಗೊಪ್ಪಿಸುವೆನಲ್ಲಿಂ ಮೇಲೆ ಬಿಡುಗೆ ಬಿಡದಿರ್ಕೆ ನಿನಗಾಯಬ್ಬೆಯೊಡೆಯಳೆಂಬುದಂ ಪೇಟ್ದುದುಮದಂ ಕೇಳ್ದು ತೊಟ್ಟನೆ ನೆತ್ತಿಯಂ ಸಿಡಿಲ್ಪೊಡೆದಂತಾಗೆ

ಪಡೆದಳನೇಕಲೋಕಜನವಂದಿತೆ ಲಕ್ಷ್ಮಿಯೆನಲ್ಕೆ ಮೋಹದಿಂ  
ನಡಪಿದನೆನ್ನನಾ ತ್ರಿಭುವನಾರ್ಚಿತನಪ್ಪ ಮುನೀಂದ್ರನೆಂದುಮಿ  
ರ್ಪೆಡೆ ಸುರಲೋಕಮಕ್ಕಟೆಸಗೀ ಪೊಲೆವಟ್ಟನಮೇಲೆ ಬೀಟ್ದುದೊಂ  
ದಡಸಿದುದಾವ ಪಾಪಮನೆ ಮಾಡಿದೆನಿಂತಿರೆ ಮಂದಭಾಗ್ಯನೆಂ ೩೭

ಎಲೆ ಪುಂಡರೀಕ ಬಿಡು ಜ  
ನ್ಮಲೋಭಮಂ ನಿನ್ನ ಗೆಯ್ದ ಕರ್ಮಂ ವಿಹಿತಂ  
ತಲೆಯೊಳನುಭವಿಸುವೀ ಕೋ  
ಟಲೆಯಿಂ ಗರ್ಭದೊಳೆ ಕರಗೆನೇಕೆಯೊ ಮೊದಲೊಳ್ ೩೮

ವ॥ ಹೀಗೆ ಹೇಳಲಾಗಿ ಅವನು ನನ್ನನ್ನು ಕುರಿತು ಹೀಗೆ ಹೇಳಿದನು. "ನಾನು ಕ್ರೂರ ಕಾರ್ಯಗಳನ್ನು ಮಾಡುವ ಜಾತಿಯಲ್ಲಿ ಹುಟ್ಟಿದ ಚಂಡಾಲನಾದರೂ ಮಾಂಸದ ಆಸೆ ಯಿಂದೇನೂ ಹಿಡಿಯಲಿಲ್ಲ. ಇಲ್ಲಿಗೆ ಸ್ವಲ್ಪ ದೂರದಲ್ಲಿ ಚಂಡಾಲರ ಹಳ್ಳಿಯಿದೆ. ಅಲ್ಲಿಗೆ ನನ್ನ ಯಜಮಾನನೇ ಒಡೆಯ. ಅವನ ಮಗಳು (ಜಾಬಾಲಿಗಳ ಆಶ್ರಮದಲ್ಲಿ ಜನ್ಮಾಂತರ ಜ್ಞಾನವುಳ್ಳ ಗಿಳಿಯೊಂದಿದೆ ಎಂದು ಕೇಳಿ) ನಿನ್ನನ್ನು ಹಿಡಿದುತರುವಂತೆ ಹಲವರನ್ನು ಕಳುಹಿಸಿದಳು. ನನ್ನ ಪುಣ್ಯದಿಂದ ನೀನು ನನಗೆ ಸಿಕ್ಕಿದೆ. ನಿನ್ನನ್ನು ನನ್ನ ಒಡತಿಗೆ ಒಪ್ಪಿಸುತ್ತೇನೆ. ಅಲ್ಲಿಂದ ಮುಂದೆ ನಿನ್ನನ್ನು ಬಿಡುವುದಕ್ಕೂ ಬಿಡದಿರುವುದಕ್ಕೂ ಆ ತಾಯಿಯೆ ಒಡೆಯಳು" ಎಂದು ಹೇಳಿದನು. ಅದನ್ನು ಕೇಳಿ ಕೂಡಲೆ ತಲೆ ಸಿಡಿದು ಹೋದಂತಾಯಿತು. ೩೭. "ಅಯ್ಯೋ, ಸಮಸ್ತ ಲೋಕದ ಜನರಿಂದಲೂ ನಮಸ್ಕರಿ ಸಲ್ಪಡುವ ಲಕ್ಷ್ಮೀದೇವಿಯ ಗರ್ಭದಲ್ಲಿ ಹುಟ್ಟಿ ಬಂದೆ! ಮೂರು ಲೋಕಗಳಿಗೂ ಪೂಜ್ಯನಾದ ಶ್ವೇತಕೇತುಮಹರ್ಷಿಯು ನನ್ನನ್ನು ಪ್ರೀತಿಯಿಂದ ಬೆಳೆಸಿದನು. ವಾಸ ಸ್ಥಳವಾದರೋ ಸ್ವರ್ಗ. ಇಂತಹ ನನಗೆ ಚಂಡಾಲರ ಬೀಡಿನಲ್ಲಿ ಇರಬೇಕಾದ ಒಂದು ಪಾಡು ಉಂಟಾಯಿತಲ್ಲ. ಹೀಗಾಗಲು ಮಂದಭಾಗ್ಯನಾದ ನಾನು ಯಾವ ಪಾಪವನ್ನು ಮಾಡಿದ್ದೆನೋ! ೩೮. ಎಲೋ, ಪುಂಡರೀಕ! ನೀನು ಬದುಕಬೇಕೆಂಬ ಆಸೆಯನ್ನು ಬಿಟ್ಟುಬಿಡು. ನೀನು ಹಿಂದೆ ಮಾಡಿದ ಕರ್ಮಗಳ ಫಲವನ್ನು ಈ ಜನ್ಮದಲ್ಲಿ ಅನುಭವಿ ಸುವ ಕಷ್ಟಕ್ಕಿಂತಲೂ ಮೊದಲು ತಾಯಿಯ ಬಸುರಿನಲ್ಲಿದ್ದಾಗಲೇ ಏಕೆ ಕರಗಿಹೋಗಲಿಲ್ಲ!

ರಕ್ಷಿಸಲಾಗದೇ ಜಗದಭೀಷ್ಟಫಲಪ್ರದೆ ತಾಯೆ ಲಕ್ಷ್ಮಿ ಪೇ
ಟಕ್ಷಮನಾದ ನಿನ್ನ ಮಗನಂ ಪರಿರಕ್ಷಿಪುದಿಲ್ಲಿ ವಿಶ್ವರ
ಕ್ಷಾಕ್ಷಮ ತಾತ ನೀಂ ಮಗುಟ್ದು ಬಂದು ಕಪಿಂಜಲ ಮಾಟ್ಪುದೆನ್ನ ಕ
ರ್ಮಕ್ಷಯಮಂ ಭವಾಂತರದೊಳಾದೊಡಮಕ್ಕುಮೆ ಮತ್ಸಮೀಹಿತಂ ೩೯

ವ॥ ಎಂದಿವು ಮೊದಲಾಗಿ ಪಲವುಮಂ ಪ್ರಲಾಪಿಸುತ್ತುಮಾ ಮಾತಂಗನನಿಂತೆಂದೆಂ

ಜಾತಿಸ್ಮರನಾದೆಂ ಮುನಿ
ಜಾತಿಯೆನಾಂ ಮುನ್ನ ಶಾಪದಿಂದಂ ತಿರ್ಯ
ಗ್ಜಾತಿಗೆ ಬಿಟ್ಟೆಂ ಬಿಡು ದುಃ
ಖಾತುರನೆಂ ನಿನಗೆ ಪುಣ್ಯಮಕ್ಕುಮಗಣ್ಯಂ ೪೦

ವ॥ ಎಂದಡಿಗಡಿಗೆ ಕಾಲಮೇಲೆ ಬೀಟ್ಪುದುಮವಂ ಬೆಟ್ಟವೆಟ್ಟನಿಂತೊದಂ

ಮುನಿಯೋ ಯಕ್ಷನೊ ಗಂಧ
ರ್ವನೊ ರಾಕ್ಷಸನೋ ಪಿಶಾಚನೋ ನೀನಿನ್ನಾ
ವನುಮೆಂದಱಿಯೆಂ ಮತ್ಸಾ
ಮಿನಿಗೊಯ್ದೊಪ್ಪಿಸುವೆನೀಗಳಿನಿತನೆ ಬಲ್ಲೆಂ ೪೧

ವ॥ ಎಂದೆನ್ನಂ ಪಿಡಿದುಕೊಂಡು ದಕ್ಷಿಣಾಭಿಮುಖನಾಗಿ ಪೋಪುದುಮೆನಗಿಂ ಪ್ರಾಣ ಪರಿತ್ಯಾಗಮೇ ಪ್ರತಿಕ್ರಿಯೆಯೆಂದು ನಿಶ್ಚೈಸುವಿನಮನ್ನೆಗಂ ಮುಂದೆ ಜೀರ್ಣಮಾಗುರಾಗ್ರಥನ

೩೯. ಜಗತ್ತಿನಲ್ಲಿರುವ ಎಲ್ಲರ ಮನೋರಥಗಳನ್ನೂ ನೆರವೇರಿಸುವ ತಾಯೆ, ಲಕ್ಷ್ಮಿ, ನನ್ನನ್ನು ಕಾಪಾಡಬಾರದೇನಮ್ಮ ! ಹೇಳು. ಜಗತ್ತನ್ನೆ ಕಾಪಾಡಬಲ್ಲ ಶಕ್ತಿಯುಳ್ಳ ತಂದೆಯೆ ! ಅಸಮರ್ಥನಾದ ನಿನ್ನ ಏಕಮಾತ್ರ ಪುತ್ರನನ್ನು ಕಾಪಾಡು. ಗೆಳೆಯ ಕಪಿಂಜಲ, ನೀನು ಮತ್ತೆ ಬಂದು ನನ್ನ ಕರ್ಮಗಳನ್ನು ಪರಿಹರಿಸು. ಮುಂದಿನ ಜನ್ಮದಲ್ಲಾದರೂ ನನ್ನ ಇಷ್ಟಾರ್ಥವು ಈಡೇರಲಿ." ವ॥ ಇದೇ ರೀತಿಯಲ್ಲಿ ಹಲವು ಬಗೆಯಾಗಿ ಹಲುಬುತ್ತಿದ್ದು ಆ ಚಂಡಾಲನನ್ನು ಕುರಿತು ಹೀಗೆ ಹೇಳಿದೆನು ೪೦. "ಅಯ್ಯ, ನಾನು ಹಿಂದಿನ ಜನ್ಮದ ನೆನಪುಳ್ಳವನು. ಹಿಂದೆ ನಾನು ಋಷಿಯಾಗಿ ಹುಟ್ಟಿದೆ. ಈಗ ಶಾಪದಿಂದ ಹಕ್ಕಿಯ ಜಾತಿಯಲ್ಲಿ ಹುಟ್ಟಿದ್ದೇನೆ. ದುಃಖಪೀಡಿತನಾದ ನನ್ನನ್ನು ಬಿಟ್ಟು ಬಿಡು. ನಿನಗೆ ಅನಂತವಾದ ಪುಣ್ಯವು ಬರುತ್ತದೆ." ವ॥ ಎಂದು ಮತ್ತೆ ಮತ್ತೆ ಕಾಲಿಗೆ ಬೀಳಲು ಅವನು ಯೋಚನೆ ಮಾಡದೆ ಹೀಗೆಂದನು. ೪೧. "ನೀನು ಋಷಿಯೋ, ಯಕ್ಷನೋ ಗಂಧರ್ವನೋ ರಾಕ್ಷಸನೋ ಪಿಶಾಚನೋ ? ನೀನು ಯಾರೋ ನನಗೆ ಅದೊಂದೂ ಗೊತ್ತಿಲ್ಲ. ನಿನ್ನನ್ನು ತೆಗೆದುಕೊಂಡುಹೋಗಿ ನನ್ನ ಒಡತಿಗೆ ಒಪ್ಪಿಸುವುದೊಂದೇ ನನಗೆ ಗೊತ್ತಿರುವುದು !" ಎಂದನು. ವ॥ ಎಂದು ಹೇಳಿ ನನ್ನನ್ನು ಹಿಡಿದುಕೊಂಡು ದಕ್ಷಿಣಾಭಿಮುಖವಾಗಿ ಹೋಗುತ್ತಿದ್ದನು. ನನಗಿನ್ನು ಪ್ರಾಣತ್ಯಾಗವನ್ನು ಬಿಟ್ಟು ಬೇರೆ ದಾರಿಯೇ ಇಲ್ಲವೆಂದು ನಿಶ್ಚಯಿಸಿದೆನು. ಅಷ್ಟರಲ್ಲಿ ಮುಂದೆ ಹರಿದು

ವ್ಯಗ್ರರುಂ ಗೃಹೀತಕಾಂಡಕೋದಂಡರುಂ ಉದ್ದಂಡಪಾಣಿಗಳುಂ ಬಹುವಿಧಗ್ರಾಹಕ ವಿಹಂಗಮ ವಾಚಾಲನಾಕುಶಲರುಂ ಕೌಲೇಯಕಮುಕ್ತಿಸಂಚಾರಣಚತುರರುಮಪ್ಪ ಚಂಡಾಲಶಿಶುಗಳ್ ದೆಸೆ ದೆಸೆಗೆ ಪರಿದು ಬೇಂಟೆಯಾಡುತ್ತುಮಿರೆ ಮತ್ತಮಾನಂತೆ ಪೋಗೆವೋಗೆ ಪೊಲಸಿನಗಂಧಮಂ ಪೊತ್ತು ಕಿಱುಕವ್ವರೆಗೊಳ್ವ ಕೌರಪೊಗೆಯಿನಱಿಯಲಾದ ಬೇಡವಟ್ಟಮಂ ಕಂಡೆನಲ್ಲಿಯೆಲುವೆ ಮನೆಯ ಕಸದಕೂಟಂ ಬಸೆಯೆ ತುಪ್ಪಂ ನಾಯ್ಗಳೆ ಪರಿವಾರಂ ಮದ್ಯಮೆ ಪುರುಷಾರ್ಥಂ ನೆತ್ತರೆ ದೇವತಾರ್ಚನೋಪಕರಣಂ ಪಶೂಪಹಾರಮೆ ಧರ್ಮಮೆಂತುಮಲ್ಲದೆಯುಂ

ನರಕದ ನೆಲೆ ಪೇಸಿಕೆಗಳ
ಕರು ಮಸಣದ ಪುಟ್ಟು ಪಾಪದೆಱೆ ಪಾತಕದಾ
ಗರಮದು ನೆನೆವರ್ಗೆ ಭಯಂ
ಕರವತಿಪಾಪಕರಮಾದುದುದ್ವೇಗಕರಂ ೪೨

ವ॥ ಅಂತದಂ ಕಂಡು ಕಂಟಣಿಸುತ್ತುಮೆನ್ನೊಳಿಂತೆಂದೆಂ

ಬರುತಿರೆ ಕಂಡು ದೂರದೊಳೆ ತನ್ನಯ ಜಾತಿಗೆ ತಕ್ಕುದಲ್ತೆನಲ್
ಕರುಣಮನಪ್ಪುಕೆಯ್ದು ಮನದೊಳ್ ಬಿಡುವಂತುಟದೊಂದವಳ್ಗೆ ಪೇಟಿಸ್
ದೊರಕೊಳಲಾರ್ಕುಮೇಂ ಪೊಲತಿಗೆನ್ನಯ ಪುಣ್ಯದೊಳೆಂದು ಭಾವಿಸು
ತ್ತಿರಲಿರದೆಯ್ದಿದಂ ಪೊಲೆಯನಾ ಪೊಲೆವಟ್ಟನೊಳಿರ್ದ ಕನ್ನೆಯಂ ೪೩

ಹೋದ ಬಲೆಗಳನ್ನು ಹೊಲಿಯುವುದರಲ್ಲಿ ತತ್ಪರರಾದ, ಬಿಲ್ಲು ಬಾಣಗಳನ್ನು ಹಿಡಿದು ಕೊಂಡಿರುವ, ದೊಣ್ಣೆಯನ್ನು ಹಿಡಿದುಕೊಂಡಿರುವ, ಹಕ್ಕಿಗಳನ್ನು ಹಿಡಿಯಲು ಸಹಾಯ ಮಾಡುವ ನಾನಾ ಬಗೆಯ ಹಕ್ಕಿಗಳಿಗೆ ಶಿಕ್ಷಣ ಕೊಡುವುದರಲ್ಲಿ ಕುಶಲರಾದ, ನಾಯಿ ಗಳನ್ನು "ಛೂ" ಬಿಡುವುದರಲ್ಲೂ, ಓಡಾಡಿಸುವುದರಲ್ಲೂ ಸಮರ್ಥರಾದ ಚಂಡಾಲ ಬಾಲಕರು ದಿಕ್ಕು ದಿಕ್ಕುಗಳಲ್ಲೂ ಓಡಾಡಿ ಬೇಟೆಯಾಡುತ್ತಿರಲು, ಬಹಳ ದುರ್ನಾತ ವನ್ನುಂಟುಮಾಡಿ ಸ್ವಲ್ಪಮಟ್ಟಿಗೆ ಮುತ್ತಿಕೊಂಡು ಕಂಟು ಹೊಗೆಯಿಂದ ಆವೃತವಾದ ಬೇಡರ ಬೀಡನ್ನು ಕಂಡೆನು. ಅಲ್ಲೋ ಮೂಳೆಗಳೇ ಮನೆಯ ಕಸ. ಪ್ರಾಣಿಗಳ ಕೊಬ್ಬೇ ತುಪ್ಪ. ನಾಯಿಗಳೇ ಪರಿವಾರ. ಮದ್ಯವೇ ಭೊಗವಸ್ತು. ರಕ್ತವೇ ದೇವರ ಪೂಜೆಯ ಸಾಮಗ್ರಿ. ಪ್ರಾಣಿಬಲಿಯೇ ಧರ್ಮ ! ಎನಿಸಿದ್ದಿತು. ಅದಲ್ಲದೆ, ೪೨. ಆ ಚಂಡಾಲರ ಹಳ್ಳಿಯು ನರಕಕ್ಕೆ ಆಶ್ರಯವಾಗಿಯೂ, ಹೇಸಿಗೆಗಳಿಗೆ ಮೂಲಸ್ತಂಭವಾಗಿಯೂ ಮಸಣಕ್ಕೆ ಉತ್ಪತ್ತಿಸ್ಥಾನದಂತೆಯೂ, ಪಾಪಕ್ಕೆ ನೆಲೆಯಾಗಿಯೂ, ಹಿಂಸೆಗೆ ಮನೆ ಯಂತೆಯೂ, ನೆನಸುವವರಿಗೆ ಭಯಂಕರವಾಗಿಯೂ, ಬಹಳ ಪಾಪಕರವಾಗಿಯೂ, ಮನಸ್ಸಿಗೆ ತಳಮಳವನ್ನುಂಟುಮಾಡುವುದಾಗಿಯೂ ಇತ್ತು. ವ॥ ಅಂತಹುದನ್ನು ನೋಡಿ ಹೇಸಿಗೆಪಡುತ್ತ ಆಲೋಚಿಸಿದೆನು. ೪೩. "ನಾನು ಬರುತ್ತಿರುವುದನ್ನು ದೂರದಲ್ಲೆ ನೋಡಿ, ತನ್ನ ಜಾತಿಗೆ ತಕ್ಕುದಲ್ಲದಿದ್ದರೂ ಮನಸ್ಸಿನಲ್ಲಿ ಕರುಣೆಯು ಬಂದು ನನ್ನನ್ನು ಬಿಟ್ಟುಬಿಡಬೇಕೆಂಬ ಒಳ್ಳೆಯ ಬುದ್ಧಿಯು ನನ್ನ ಪುಣ್ಯವಿಶೇಷದಿಂದ ಆ ಚಂಡಾಲಕನ್ಯೆಗೆ ಬಂದುಬಿಡಬಹುದೆ ?" ಎಂದು ಆಲೋಚಿಸುತ್ತಿರುವಂತೆಯೆ ಆ

ವ॥ ಕಂಡು ಗೆಂಟಱಿಂೊಳೆ ಪೊಡವಟ್ಟು ಮೆಲ್ಲನೆ ನೀಡೆ ಲೇಸುಗೆಯ್ದೆಯೆಂದೆನ್ನಂ ಕರತಲ ದೊಳ್ ತಳೆದು

ಎಯ್ದದೆಡೆಯೆಲ್ಲಮಂ ನೀ
ನೆಯ್ದಿದೆ ಮತ್ತಿರದೆ ಮಗನೆ ಮಾಣದೆ ಪೇೞ್
ನ್ನೆಯ್ದಿದಪೆಯೆಲ್ಲಿಗಟ್ಕಱಿ
ನುಯ್ದಪೆನಾಂ ಕಾಮುಪರತೆಯಿಂದಂ ಕೆಟ್ಟೆ ೫೪

ವ॥ ಎಂದಾ ಚಂಡಾಲಕನ್ನಿಕೆ ರೋಮಂಬೊರೆದ ಪಂದೊವಲ ಪಂಜರದೊಳಿಕ್ಕಿ ಮಹಾ ಶ್ವೇತಾವಲೋಕನಕೆ ತಗೆಯಂ ಮಾಳ್ಪಂತೆ ಪಡಿಯಂ ಕೆತ್ತಗೞಿಯನಿಕ್ಕಿ ನೀನಿಂತಿರೆಂದು ನಿರ್ವ್ಯಾ ತಾಂತರಾತ್ಮೆಯಂತೆ ನುಡಿದುಸಿರದಿರ್ದೊಡಾನುಮಾ ಪಂಜರದ ಪಡಿಕೆಯೊಳಿರ್ದೆನ್ನೊಳಿಂತೆಂದಂ

ಅಕ್ಕರ॥ ನುಡಿದೆನಪ್ಪೊಡೆ ಲೇಸಾಗಿ ನುಡಿಯಲ್ಕೆ ಬಲ್ಲುದೀ ಗಿಳಿಯೆಂದು ಕನ್ನೆಯೆನ್ನಂ
ಬಿಡದಿರ್ಕುಮದಱಿಂದಮೀ ಕನ್ನಿಕೆ ನುಡಿಯಿಸಿದೊಡಮೆಂತುಂ ನುಡಿಯದಿರ್ಪೆಂ
ನುಡಿಯದಿರ್ದೆನಪ್ಪೊಡೆ ಕಡುಮುಳಿಸಿಂದಂ ಪಿರಿದಪ್ಪವಸ್ಥೆಯನೆಯ್ದಿಸುಗುಂ
ನುಡಿಯದೆಂತು[ದಂದು]ಮೇಬಾರ್ತೆಯೆಂದು ಮೇಣ್ ಬಿಡುಗುಮೊ ಪೇೞ್
ನುತೆ ಬಗೆಯುತಿರ್ದೆಂ ೫೫

ಚಂಡಾಲನು ಹೊಲಗೇರಿಯಲ್ಲಿದ್ದ ಆ ಹುಡುಗಿಯ ಪತ್ತಿರಕ್ಕೆ ಬಂದನು. ವ॥ ಅವಳನ್ನು ನೋಡಿ ದೂರದಿಂದಲೆ ನಮಸ್ಕರಿಸಿ ನನ್ನನ್ನು ಮೆಲ್ಲನೆ ಅವಳಿಗೆ ಒಪ್ಪಿಸಿದನು. ಅವಳು ಒಳ್ಳೆಯದನ್ನು ಮಾಡಿದೆ ಎಂದು ಹೇಳಿ ನನ್ನನ್ನು ಅಂಗೈಮೇಲಿಟ್ಟುಕೊಂಡು ೫೪. "ಮಗನೆ, ನೀನು ಬರಬಾರದ ಕಡೆಗೆಲ್ಲ ಬರಬೇಕಾಯಿತು. ಇನ್ನೂ ಆಸೆಯಿಂದ ಇನ್ನೂ ಎಲ್ಲಿಗೆ ಹೋಗುತ್ತೀಯೆ ? ನಿನ್ನನ್ನು ನಾನು ಹಿಡಿತದಲ್ಲಿಡುತ್ತೇನೆ. ನೀನು ಕಾಮೋದ್ರೇಕ ದಿಂದಲೇ ಹಾಳಾದೆ" ವ॥ ಎಂದು ಆ ಚಂಡಾಲಕನ್ನಿಕೆಯು ಕೂದಲುಗಳಿಂದ ಕೂಡಿ ಕೊಂಡಿರುವ ಹಸಿಚರ್ಮದ ಪಂಜರದಲ್ಲಿ ನನ್ನನ್ನು ಕೂಡಿ, ಮಹಾಶ್ವೇತೆಯನ್ನು ನೋಡು ವುದಕ್ಕೆ ಮರೆಮಾಡುವಂತೆ ಬಾಗಿಲನ್ನು ಮುಚ್ಚಿ, ಅಗುಳಿಯನ್ನು ಹಾಕಿ, 'ನೀನು ಹೀಗೆಯೇ ಇರು' ಎಂದು ನೆಮ್ಮದಿಪಟ್ಟುಕೊಂಡವಳಂತೆ ಹೇಳಿ ಸುಮ್ಮನಾದಳು. ನಾನೂ ಆ ಪಂಜರದ ಬಂಧನಕ್ಕೆ ಸಿಕ್ಕಿಕೊಂಡು ಆಲೋಚಿಸಿದೆನು. ೫೫. "ನಾನು ಮಾತಾಡಿದರೆ ಈ ಗಿಳಿಯು ಚೆನ್ನಾಗಿ ಮಾತನಾಡಬಲ್ಲದೆಂದು ಈ ಹುಡುಗಿಯು ನನ್ನನ್ನು ಬಿಡದೆ ಇರಬಹುದು. ಆದ್ದರಿಂದ ಇವಳು ಮಾತಾಡಿಸಿದರೂ ಏನಾದರೂ ಮಾತಾಡುವುದೇ ಇಲ್ಲ. ಹಾಗೆ ಮಾತಾಡದಿದ್ದರೆ ಬಹಳ ಕೋಪದಿಂದ ಇದಕ್ಕಿಂತಲೂ ಹೆಚ್ಚಾದ ಕಷ್ಟ ಸ್ಥಿತಿಗೆ ನನ್ನನ್ನು ಒಳಪಡಿಸಬಹುದು. ಅಥವಾ ಮಾತನಾಡದಿದ್ದರೆ ಏನೋ ಹೋಗಲಿ ಎಂದು ಬೇಸರಿಕೆಯಿಂದ ನನ್ನನ್ನು ಬಿಟ್ಟರೂ ಬಿಡಬಹುದು" ಎಂದು ಆಲೋಚಿಸು

ಸುರಲೋಕಭ್ರಷ್ಟನೆಂ ಮರ್ತ್ಯರೊಳುದಯಿಪ ತಿರ್ಯಕ್ತ್ವದೊಳ್ ನಿಲ್ವ ಚಂಡಾ
ಲರ ಕೆಯ್ಯೊಳ್ ಬೀಟ್ವ ತೋಲ್ಪಂಜರದ ಪಡಿಕೆಯೊಳ್ ನಿಲ್ವ ದುರ್ವಾರದುಃಖೋ
ತ್ಕರಮೆಲ್ಲಂ ನೋಡಲೆನ್ನಿಂದ್ರಿಯನಿವಹದ ದೋಷಂ ದಲಿಂ ಮೀಱದಂತಾ
ಗಿರಿಸಲ್ವೇಟ್ಕೆಂದವಂ ನಿಗ್ರಹಿಪ ನಿಯಮದಿಂ ಮೌನದಿಂದಿರ್ದನಾಗಳ್ ೪೬

ವ॥ ಅಂತು ನಿಖಿಲೇಂದ್ರಿಯನಿಗ್ರಹಕ್ಕೆ ನಿಶ್ಚಯಂಗೆಯ್ವೆನಗೆ ಮರಣಮೆ ಶರಣಮೆಂದಿರೆ ತಮತಮಗೆ ಬಂದು

ನುಡಿಯಿಸಿದೊಡಮುಱೆ ಬಿಡೆ ಜಡಿ
ದೊಡಮೋವದೆ ಪಿಡಿದು ಬಡಿದೊಡಂ ಕೊಂದೊಡಮಾಂ
ನುಡಿಯದೆ ಕಿವಿ ಘೀಳಿನೆ ಘೀ
ಳಿಡುತಿರ್ದೆಂ ಕುಟುಕನೊಲ್ಲೆನೆಂತಿಕ್ಕಿದೊಡಂ ೪೭

ವ॥ ಅಂತಾ ದಿವಸಮನನಶನದೊಳ್ ಕಳಿಯಲಾ ಕನ್ನೆ ಕಂಡು ನೋವಂತೆಗೆಯ್ದು ಪಲ ತೆಜದ ಪಕ್ವಫಲಂಗಳುಮಂ ಸುರಭಿಶೀತಲಜಲಂಗಳುಮಂ ತಾನೆ ತಂದು ನೀಡೆಯುಮೊಲ್ಲದಿರಲೆನ್ನ ನಿಂತೆಂದಳ್ ನಿರ್ವಿಕಾರಚಿತ್ತವೃತ್ತಿಗಳಪ್ಪ ಪಕ್ಷಿಗಳ್ ಪಸಿವುಂ ನೀರಟ್ಕೆಯುಮಾಗಲುಪಯೋಗಿಸ

ತ್ತಿದ್ದೆನು. ೪೬. "ನಾನು ದೇವಲೋಕದಿಂದ ಕೆಳಗಿಳಿದೆ. ಮನುಷ್ಯಜಾತಿಯಲ್ಲಿ ಹುಟ್ಟಿದೆ. ಹಕ್ಕಿಯಾಗಿ ಹುಟ್ಟಿದೆ. ಚಂಡಾಲರ ಕೈಗೆ ಸಿಕ್ಕಿಬಿದ್ದೆ. ಹಾಗೂ ಈಗ ಚರ್ಮಪಂಜರದ ಬಂಧನಕ್ಕೆ ಒಳಪಟ್ಟೆ. ಹೀಗೆ ಈ ಸಹಿಸಲಸಾಧ್ಯವಾದ ದುಃಖಸಮೂಹವೆಲ್ಲ ವಿಚಾರ ಮಾಡಿ ನೋಡಿದರೆ ನಿಜವಾಗಿಯೂ ನನ್ನ ಇಂದ್ರಿಯಗಳ ತಪ್ಪು. ಇನ್ನು ಮೇಲೆ ಅವು ಹತೋಟಿ ಮೀರದಂತೆ ಇಟ್ಟುಕೊಂಡೇ ತೀರಬೇಕು" ಎಂದು ನಿಶ್ಚಯಿಸಿ, ಸುಮ್ಮನಿದ್ದೆನು. ವ॥ ಹಾಗೆ ಅವುಗಳನ್ನು ಹತೋಟಿಯಲ್ಲಿಟ್ಟುಕೊಳ್ಳಬೇಕೆಂದು ತೀರ್ಮಾನಿಸಿರುವ ನನಗೆ ಸಾವೇ ಗತಿಯೆಂದು ನಿಶ್ಚಯಿಸಿರಲು, ತಾವು ತಾವೇ ಬಂದು ೪೭. ಅವರು ಮಾತಾಡಿಸಿದರೂ, ಹೆಚ್ಚಾಗಿ ಬೆದರಿಸಿದರೂ, ಕರುಣೆ ಯಿಲ್ಲದೆ ಹಿಡಿದು ಹೊಡೆದರೂ, ಕೊನೆಗೆ ಕೊಂದು ಹಾಕಿದರೂ ನಾನು ಬಾಯೇ ಬಿಡಬಾರದೆಂದು ಹಟಮಾಡಿಬಿಟ್ಟೆ. ಹಾಗೆಯೆ ಬಾಯಿ ಬಿಡಲಿಲ್ಲ. ಆದರೆ ಕಿವಿ ಒಡೆದುಹೋಗುವಂತೆ ಕಿರುಚುತ್ತಿದ್ದೆನು. ವ॥ ಹಾಗೆ ಆ ದಿನವನ್ನೆಲ್ಲಾ ಆಹಾರವನ್ನು ತೆಗೆದುಕೊಳ್ಳದೆ ಕಳೆದೆನು. ಬಳಿಕ ಮರುದಿವಸ ಇದನ್ನು ನೋಡಿ ವ್ಯಸನಪಡುವವಳಂತೆ ಕಾಣುತ್ತಿದ್ದ ಅವಳು ಹಲವು ಬಗೆಯ ಕಳಿತ ಹಣ್ಣುಗಳನ್ನೂ ಸುವಾಸನೆಯಿಂದ ಕೂಡಿ ರುವ ತಂಪಾದ ನೀರನ್ನೂ ತಾನೇ ತಂದುಕೊಟ್ಟಳು. ನಾನು ತೆಗೆದುಕೊಳ್ಳಲಿಲ್ಲ. ಆಗ ನನ್ನನ್ನು ಕುರಿತು ಹೀಗೆ ಹೇಳಿದಳು. "ಮನಸ್ಸಿಗೆ ಏನನ್ನೂ ಹಚ್ಚಿಕೊಳ್ಳದ ಹಕ್ಕಿಗಳು ಹಸಿವು ಬಾಯಾರಿಕೆಗಳುಂಟಾದರೆ ತೆಗೆದುಕೊಳ್ಳದಿರುವ ಪದಾರ್ಥವೇ ಇಲ್ಲ. ಒಂದು

ದುದೊಂದುಮಿಲ್ಲೆತ್ತಾನುಂ ಭೋಜ್ಯಾಭೋಜ್ಯವಿವೇಕನೆನಾಂ ಜಾತಿಸ್ಮರನಾಹಾರಮಂ ಪರಿಹರಿಸು
ವೆನೆಂಬೆಯಪ್ಪೊಡೆ ಭಕ್ಷ್ಯಾಭಕ್ಷ್ಯರಹಿತಮಪ್ಪ ತಿರ್ಯಗ್ಜಾತಿಯೊಳ್ ಪುಟ್ಟಿದ ನಿನಗೆಯುಮಭಕ್ಷ್ಯ
ಮೊಂದುಮಿಲ್ಲಂ ಮೊದಲೊಳುತ್ಕೃಷ್ಟಜಾತಿಯೊಳ್ ಪುಟ್ಟಿ ತಿರ್ಯಗ್ಜಾತಿಗೆ ಬೀಳ್ದಂದೇ ನಿನ್ನ
ವಿವೇಕಮಳಿದಂತುಟೆವಲಮಿನ್ನಿನಗೆ ಜಾತಿಗೆ ತಕ್ಕಂತಾಹಾರಮನಾಚರಿಸೆ ದೋಷಮಿಲ್ಲಮಲ್ಲ
ದೆಯುಂ ಭಕ್ಷ್ಯಾಭಕ್ಷ್ಯನಿಯಮಿತರ್ಗಾಪದ್ವಿಷಯದೊಳ್ ಪ್ರಾಣಸಂಧಾರಣಾರ್ಥಮಭೋ
ಜ್ಯೋಪಭೋಗಮುಂಟೀಗಳೆತ್ತಾನುಮಾನಿತ್ತುದನೊಲ್ಲೆನೆಂಬೆಯಪ್ಪೊಡೆ ಚಂಡಾಲಭಾಂಡದಿಂ
ಭೂಮಿಪತಿತಮಾದಂಬುವುಂ ಪವಿತ್ರಮೆಂಬುದುಂಟದರಿಂ ಕ್ಷುತ್ಪಿಪಾಸೆಗಳಿನಾಯಾಸಂಬಡದೆ
ಮುನಿಜನೋಚಿತಮಪ್ಪ ನವಫಲಂಗಳನುಪಭೋಗಿಸೆಂದು ನುಡಿಯೆ

ನಯದಿಂದಂ ತಿಳಿವುಟ್ಟಲ್ಕೆನಗೆ ಪೇಟಲ್ ಕೇಳ್ದು ಚಂಡಾಲಜಾ
ತಿಯೊಳೀ ವಾಕ್ಯಮುಮೀ ವಿವೇಕಮುಮದೆಂತಾದತ್ತೊ ಪೇಟೆಂದು ವಿ
ಸ್ಮಯಮುತ್ತೆಂದುದಗೆಯ್ವೆನೆಂಬ ಬಗೆಯೊಳ್ ಬಾಟ್ಪಾಸೆಯಿಂ ಕ್ಷುತ್ಪಿಪಾ
ಸೆಯುಮಂ ತಾಳ್ದಿರಲಾಱದಾಜಿಸಿನೆನಾಂ ತತ್ಪಾನಪಾನಂಗಳಿಂ ೪೮

ವೇಳೆ "ನಾನು ಏನನ್ನು ತಿನ್ನಬೇಕು. ಏನನ್ನು ತಿನ್ನಬಾರದು ಎಂಬ ವಿವೇಕವುಳ್ಳವನು. ಮತ್ತು ಹಿಂದಿನ ಜನ್ಮಗಳ ನೆನಪುಳ್ಳವನು. ಆದ್ದರಿಂದ ಈ ಆಹಾರವನ್ನು ತೆಗೆದುಕೊಳ್ಳುವುದಿಲ್ಲ" ಎಂದು ಹೇಳುವೆಯಾದರೆ ಭಕ್ಷ್ಯಾಭಕ್ಷ್ಯನಿಯಮವೇನೂ ಇಲ್ಲದ ಪಕ್ಷಿಯ ಜಾತಿಯಲ್ಲಿ ಹುಟ್ಟಿರುವ ನಿನಗೆ ತಿನ್ನಬಾರದೆಂಬುದು ಯಾವುದೂ ಇಲ್ಲ. ಮೊದಲು ಮೇಲುಜಾತಿಯಲ್ಲಿ ಹುಟ್ಟಿ, ಈಗ ಈ ಹಕ್ಕಿಜಾತಿಗೆ ಬಿದ್ದಾಗಲೆ ನಿನ್ನ ವಿವೇಕವು ಗೊತ್ತಾಯಿತು ! ಇನ್ನು ನಿನಗೆ ನಿನ್ನ ಜಾತಿಗೆ ತಕ್ಕ ಆಹಾರವನ್ನು ಸೇವಿಸಿದರೆ ಯಾವ ದೋಷವೂ ಬರುವುದಿಲ್ಲ. ಅದಲ್ಲದೆ ಭಕ್ಷ್ಯಾಭಕ್ಷ್ಯನಿಯಮವುಳ್ಳವರೂ ಆಪತ್ಕಾಲದಲ್ಲಿ ಪ್ರಾಣವನ್ನು ಉಳಿಸಿಕೊಳ್ಳುವುದಕ್ಕಾಗಿ ತಿನ್ನಬಾರದುದನ್ನು ತಿನ್ನುವುದೂ ಉಂಟು. ಈಗಲೂ ನಾನು ಕೊಡುವುದನ್ನು ತಿನ್ನುವುದಿಲ್ಲವೆಂದು ಹೇಳುವುದೂ ಸರಿಯುಲ್ಲ. ಏಕೆಂದರೆ, ಚಂಡಾಲರ ಪಾತ್ರೆಯಿಂದ ಭೂಮಿಗೆ ಬಿದ್ದ ನೀರೂ ಪವಿತ್ರವಾದುದೇ ಎಂದು ಹೇಳುತ್ತಾರೆ. ಆದ್ದರಿಂದ ಹೀಗೆ ಹಸಿವು ಬಾಯಾರಿಕೆಗಳಿಂದ ಆಯಾಸ ಪಡದೆ ಮುನಿಜನೋಚಿತವಾದ ಈ ಹೊಸ ಹಣ್ಣುಗಳನ್ನು ತಿನ್ನು" ಎಂದು ಹೇಳಿದಳು. ೪೮. ಹೀಗೆ ಮೃದುವಾಗಿ ನನಗೆ ತಿಳಿವಳಿಕೆಯುಂಟಾಗುವಂತೆ ಅವಳು ಹೇಳಿದ್ದನ್ನು ಕೇಳಿ ಚಂಡಾಲರ ಜಾತಿಯಲ್ಲಿ ಇಂತಹ ಮಾತೂ ಇಂತಹ ತಿಳಿವಳಿಕೆಯೂ ಹೇಗೆ ಬಂದಿತು ? ಎಂದು ಆಶ್ಚರ್ಯವುಂಟಾಗಲು, ಅವಳು ಹೇಳಿದಂತೆಯೆ ಮಾಡಬೇಕೆಂದು ಮನಸ್ಸು ಮಾಡಿ, ಬದುಕಬೇಕೆಂಬ ಆಸೆಯಿಂದ ಹಸಿವು ಬಾಯಾರಿಕೆಗಳನ್ನು ತಡೆಯಲಾರದೆ, ಅವಳು ಕೊಟ್ಟ ಆಹಾರ ಪಾನೀಯಗಳ ಸೇವನೆಯಿಂದ ಹಸಿವನ್ನು ನಿವಾರಿಸಿಕೊಂಡೆನು.

ವ॥ ಅಂತು ಕೆಲವು ದಿವಸಮಿರ್ಪನ್ನೆಗಂ

ಇನೋದಯದೊಳೊರ್ಮೆ ಕಣ್ದೆಱೆದು ನೋಡುತುಂ ಕಂಡೆನಾಂ
ಕನತ್ಕನಕಪಂಜರಸ್ಥಿತನನೆನ್ನನಾ ಕನ್ನೆ ಮು
ನ್ನಿನಂತೆ ನಿಜರೂಪದಿಂದಮೆಸೆದಿರ್ದಳೆಂತಿಲ್ಲಿ ಕೇ
ಳನಂತರಮೆ ತೋಱಿತಿಂದ್ರಪುರದಂತಿರಾ ಪಕ್ಕಣಂ ೪೯

ವ॥ ಅಂತದಂ ಕಂಡು ವಿಸ್ಮಿತಾಂತರಂಗನಾಗಿ ಮೌನಮಂ ಬಿಟ್ಟು ಕನ್ನೆಯಂ ಬೆಸಗೊಳ
ಲುಜ್ಜುಗಂಗೆಯ್ವನ್ನಮೆನ್ನನೊಡಗೊಂಡು ದೇವರ ಶ್ರೀಪಾದಂಗಳಂ ಕಾಣಲೆಂದು ಬಂದಳ್

ಈ ಕನ್ನೆಯಾರ್ಗೆ ಪೆಸರೇ
ನೇಕೆನ್ನಂ ಪಿಡಿದುತರಿಸಿದಳ್ ಸೆಱೆಯೊಳ್ ಮ
ತ್ತೇಕಿಕ್ಕಿದಳಾಗಳ್ ತಾ
ನೇಕಿಲ್ಲಿಗೆ ತಂದಳಱಿಯೆನಿದನವನಿಪತೀ ೫೦

ವ॥ ಎಂದು ಶೂದ್ರಕಮಹಾರಾಜಂಗಾ ಪ್ರಪಂಚಮೆಲ್ಲಮಂ ಪೇಟ್ ಕೇಳ್ದತಿಕುತೂಹ
ಲಿತನಾಗಿ ಚಂಡಾಲಕನ್ಯೆಯನೊಡಗೊಂಡುಬಾಯೆಂದು ಮುಂದಿರ್ದ ಪಡಿಯಱತಿಗೆ ಬೆಸಸುವುದು
ಮವಳ್ ಪೋಗಿ ಬೇಗದಿನೊಡಗೊಂಡು ಬರೆ ತದುಪದಿಶ್ಯಮಾನಮಾರ್ಗೆಯಾಗಿ ಬಂದು

ವ॥ ಹಾಗೆ ಕೆಲವು ದಿನಗಳಿರಲಾಗಿ, ೪೯. ಎಲೈ ರಾಜನೆ ಕೇಳು, ಒಂದು ದಿನ ಸೂರ್ಯೋದಯಕಾಲದಲ್ಲಿ ಕಣ್ಣು ಬಿಟ್ಟು ನೋಡಲು ನಾನು ತಳತಳಿಸುವ ಚಿನ್ನದ ಪಂಜರದಲ್ಲಿರುವುದು ಗೊತ್ತಾಯಿತು. ಆ ಹುಡುಗಿಯು ಈಗ ಇಲ್ಲಿ ಹೇಗೆ ಕಾಣುತ್ತಿದ್ದಾಳೋ ಅದೇ ರೀತಿ ಅಲ್ಲಿ ಶೋಭಿಸುತ್ತಿದ್ದಳು. ಕೂಡಲೆ ಆ ಹೊಲಗೇರಿಯು ಅಮರಾವತಿಯಂತೆ ಕಾಣತೊಡಗಿತು. ವ॥ ಆ ರೀತಿಯಲ್ಲಿದ್ದ ಅದನ್ನು ನೋಡಿ ಆಶ್ಚರ್ಯಗೊಂಡು, ಮೌನವನ್ನು ಬಿಟ್ಟು ಆ ಹುಡುಗಿಯನ್ನು ಕೇಳಲು ಪ್ರಯತ್ನ ಮಾಡುವಷ್ಟರಲ್ಲಿ ಅವಳು ನನ್ನನ್ನು ತೆಗೆದುಕೊಂಡು ತಮ್ಮ ಘನವಾದ ಪಾದಗಳ ದರ್ಶನಕ್ಕಾಗಿ ಬಂದಳು. ೫೦. ಎಲೈ ರಾಜನೆ, ಆ ಹುಡುಗಿಯು ಯಾರ ಮಗಳು ? ಅವಳ ಹೆಸರೇನು ? ನನ್ನನ್ನೇಕೆ ಹಿಡಿಸಿ ತರಿಸಿದಳು ? ಏಕೆ ಬಂಧನದಲ್ಲಿಟ್ಟಳು ? ಇಲ್ಲಿಗೇಕೆ ನನ್ನನ್ನು ತಂದಳು ? ಇದಾವುದೂ ನನಗೆ ತಿಳಿಯದು.” ವ॥ ಎಂದು ಶೂದ್ರಕಮಹಾರಾಜನಿಗೆ ಆ ಕಥೆಯೆಲ್ಲವನ್ನೂ ಹೇಳಿದನು. ಆಗ ಶೂದ್ರಕರಾಜನು ಬಹಳ ಕುತೂಹಲವುಳ್ಳವನಾಗಿ “ಚಂಡಾಲಕನ್ನಿಕೆಯನ್ನು ಕರೆದುಕೊಂಡು ಬಾ !” ಎಂದು ಮುಂದಿದ್ದ ದ್ವಾರಪಾಲಕಳಿಗೆ ಅಪ್ಪಣೆ ಮಾಡಿದನು. ಅವಳು ಹೋಗಿ ಬೇಗನೆ ಆಕೆಯನ್ನು ದಾರಿ ತೋರಿಸುತ್ತಾ ಕರೆತಂದಳು.

ಮಾಣ್ಗುಟಿದರ ಮೆಯ್ವೆಳಗೆನೆ
ಕಣ್ಗಳ್ ಕೋರೈಸೆ ತೊಳಗಿ ಬೆಳಗುತ್ತಂ ಮುಂ
ದಣ್ಗಾಗಿ ನಡೆದು ನೃಪನಂ
ಜಾಣ್ಗೊಂಡ ನಿಜಪ್ರಗಲ್ಭವಚನದೆ ನುಡಿದಳ್ ೫೧

ವಿದಿತಾಶೇಷಕಲಾಕಲಾಪ ಭುವನಾಲಂಕಾರ ಕಾದಂಬರೀ
ಹೃದಯಾನಂದನ ರೋಹಿಣೀರಮಣ ತಾನಾತ್ಮೀಯ ವೃತ್ತಾಂತಮಂ
ವಿದಿತಂ ಪೇೞ್ವುತಮೀ ದುರಾತ್ಮನಿಗೆ ಕೇಳುತ್ತಿರ್ದೆ ನೀಂ ಕೇಳ್ದೆ ದಲ್
ಮೊದಲಿಂ ಪೂರ್ವಭವಾಂತರೋದಿತ ಭವದ್ವೃತ್ತಾಂತಸಂತಾನಮಂ ೫೨

ವ॥ ಮತ್ತಮೀ ದುರ್ಬುದ್ಧಿ ಈ ಜನ್ಮದೊಳಂ ಗುರುಗಳಿಂ ನಿಷಿದ್ಧನಾಗಿಯುಂ ತಂದೆಯ ಮಾತಂ ಮೀಱಿ ವಧೂನಿರೀಕ್ಷಣೋತ್ಸುಕತೆಯಿಂ ಪಾಱಿಪೋಗುತ್ತಮಿರೆ

ಮಗನಿಂತೀ ಶುಕನೀ ದುರಾತ್ಮಕನ ತಾಯೆಂ ಶ್ರೀಯೆನಾಂ ದಿವ್ಯಚ
ಕ್ಷುಗಳಿಂದೀತನ ತಂದೆ ಪೋಗಱಿದಿವಂ ತಿರ್ಯಕ್ತ್ವದೊಳ್ ನಿಲ್ವನೆ
ನ್ನಗವಾಯುಷ್ಕರಮಾದ ಯಜ್ಞಮನಿದಂ ಪೂರೈಸದಾನಿರ್ಪೆನ
ನ್ನೆಗಮೀಗಳ್ ಸೆಱೆಯಿಕ್ಕಿಯಿಂ ನಿಲಿಪುದೆಂದನ್ನಲ್ಲಿಗಿಂತಟ್ಟಿದಂ ೫೩

೫೧. ಬೇರೆಯವರ ದೇಹಕಾಂತಿಯು ಹಾಗಿರಲಿ ಎಂಬಂತೆ ಎಲ್ಲರ ಕಣ್ಣುಗಳೂ ಕೋರೈಸು ತ್ತಿರಲು, ಕಾಂತಿಯಿಂದ ಪ್ರಕಾಶಿಸುತ್ತ, ಆ ಚಂಡಾಲಕನ್ನಿಕೆ ಮುಂದೆ ಬಂದು ರಾಜನನ್ನು ಕುರಿತು ಜಾಣತನದಿಂದ ಕೂಡಿದ ದಿಟ್ಟತನದ ಮಾತುಗಳಿಂದ ಹೀಗೆ ಹೇಳಿದಳು. ೫೨. "ಲೋಕಪ್ರಸಿದ್ಧವಾದ ಸಮಸ್ತ ಕಲೆಗಳ ಸಮೂಹದಿಂದ ಜಗತ್ತನ್ನು ಅಲಂಕರಿಸುತ್ತಿರುವವನೆ, ಕಾದಂಬರೀದೇವಿಯ ಹೃದಯಕ್ಕೆ ಆನಂದವನ್ನುಂಟುಮಾಡುವವನೆ, ರೋಹಿಣೀವಲ್ಲಭನಾದ ಚಂದ್ರನೆ! ಈ ಕೆಟ್ಟ ಬುದ್ಧಿಯುಳ್ಳವನು ತನ್ನ ವೃತ್ತಾಂತವನ್ನು ತಿಳಿಯುವಂತೆ ಹೇಳಿದ್ದನ್ನು ನೀನು ಕೇಳಿದೆಯಷ್ಟೆ! ಇದರಿಂದ ನಿಜವಾಗಿಯೂ ಜನ್ಮಾಂತರದಲ್ಲಿ ನಡೆದ ನಿನ್ನ ವೃತ್ತಾಂತಗಳೆಲ್ಲವನ್ನೂ ನೀನು ಆಮೂಲಾಗ್ರವಾಗಿ ಕೇಳಿದಂತಾಯಿತು. ವ॥ ಮತ್ತು ಈ ತಿಳಿಗೇಡಿಯು ಈ ಜನ್ಮದಲ್ಲೂ ತಂದೆಯವರಿಂದ ಬೇಡವೆಂದು ತಡೆಯಲ್ಪಟ್ಟರೂ ಅವರ ಮಾತನ್ನು ಮೀರಿ ಇನಿಯಳನ್ನು ನೋಡಬೇಕೆಂಬ ಉತ್ಸಾಹದಿಂದ ಹಾರಿಹೋಗುತ್ತಿತ್ತು. ೫೩. ಈ ಕೆಟ್ಟ ಬುದ್ಧಿಯುಳ್ಳ, ಹಿಂದಿನ ಜನ್ಮದ ಮಗನಾದ ಈ ಗಿಳಿಯು ಹೀಗೆ ಹಾರಿಹೋಗುತ್ತಿರುವುದನ್ನು ಇವನ ತಂದೆಯಾದ ಶ್ವೇತಕೇತುಮಹರ್ಷಿಯು ಜ್ಞಾನದೃಷ್ಟಿಯಿಂದ ತಿಳಿದುಕೊಂಡನು. ನಾನು ಇವನ ತಾಯಿಯಾದ ಲಕ್ಷ್ಮಿ! ಆ ಮಹರ್ಷಿಯು, ಇವನು ಹಕ್ಕಿಯ ಜಾತಿಯಲ್ಲಿರುವವರೆಗೂ, ಹಾಗೂ ತಾನು ಮಾಡುತ್ತಿರುವ ಆಯುಷ್ಕರವಾದ ಯಜ್ಞವು ಮುಗಿಯುವವರೆಗೂ ಇವನನ್ನು ಸೆರೆಯಿಟ್ಟುಕೊಂಡಿರುವಂತೆ ತಿಳಿಸಿ ನನ್ನನ್ನು ಭೂಲೋಕಕ್ಕೆ ಕಳುಹಿಸಿ

ವ॥ ಅದಱಿನೀತಂಗೆಂತೆಂತು ವಿರಕ್ತಿ ಪುಟ್ಟುಗುಮಂತಂತೆ ವಿನಯವೃತ್ತಿನಿಮಿತ್ತವೆನಿತುಮಂ ಮಾಡಿದೆನೀಗಳಾಯಜ್ಞಾವಸಾನಸಮಯಮಾಗಿರ್ದುದಱಿನೀ ಸಮಯದೊಳ್ ಸಮಸುಖದುಃಖಿಗಳಾಗಲೆವೇಟ್ಕುಮದಱಿಂದೀತನ ಜನ್ಮಾಂತರ ಸಹಾಯನಪ್ಪ ನಿನ್ನಲ್ಲಿಗೊಡಗೊಂಡು ಬಂದೆ ನೀವಿರ್ವರುಂ ಜನ್ಮಜರಾಮರಣವ್ಯಾಧಿದುಃಖಬಹುಳಂಗಳಪ್ಪ ತನುಗಳಂ ಬಿಟ್ಟು ದಿವ್ಯದೇಹಂಗಳಂ ಕೈಕೊಂಡು ಇಷ್ಟಜನಸಮಾಗಮ ಸುಖಮನನುಭವಿಸಿಂ ಮರ್ತ್ಯಲೋಕಸಂಪರ್ಕಪರಿಹಾರಾರ್ಥಮೀ ಚಂಡಾಲವೇಷಮಂ ತಳೆದಿರ್ದೆನಿಂ ಪೋಪೆನೆಂದು

ಝಣಜ್ಝಣಿತ ಮೇಖಲಾಕಲಿತ ಹಾರಕೇಯೂರ ಭೂ
ಷಣಪ್ರಭೆ ದಿಗಂತಮಂ ಬೆಳಗೆ ರಾಜರಾಜದ್ಗೃಹಾಂ
ಗಣಸ್ಥಿತ ಜನಕ್ಕೆ ವಿಸ್ಮಯಮನಾಗಿಸುತ್ತುಂ ನಭೋಂ
ಗಣಕ್ಕೊಗೆದಳಂದು ಲಕ್ಷ್ಮಿ ಕುಡುಮಿಂಚಿದೊಂದೆಂಬಿನಂ ೫೪

ವ॥ ಅನಂತರಮಾ ಶೂದ್ರಕಮಹಾರಾಜನಾ ವಚನಮಂ ಕೇಳ್ದು ಜಾತಿಸ್ಮರನಾಗಿ ಗಿಳಿಯ ಮೊಗಮಂ ನೋಡಿ

ನೀಂ ಪುಂಡರೀಕನೈ ವೈ
ಶಂಪಾಯನ ಪೂರ್ವಜನ್ಮಸಂಬಂಧಿಯೆ ಕಂ
ಡೆಂ ಪುಣ್ಯದಿಂದಮಿರ್ವರು
ಮಿಂ ಪಡೆದಪಮೊಡನೆ ಶಾಪಮೋಕ್ಷದ ಫಲಮಂ ೫೫

ದನು ! ವ॥ ಆದ್ದರಿಂದ ಇವನಿಗೆ ಪಶ್ಚಾತ್ತಾಪವುಂಟಾಗುವಂತೆಯೂ, ಒಳ್ಳೆಯ ನಡತೆಯುಂಟಾಗುವಂತೆಯೂ ಆಗಲು ಇಷ್ಟನ್ನೂ ನಾನೇ ಮಾಡಿದ್ದೇನೆ. ಈಗ ಆ ಯಜ್ಞವು ಮುಗಿಯುತ್ತಾ ಬಂದಿದೆ. ಈ ಸಮಯದಲ್ಲಿ ನೀವಿಬ್ಬರೂ ಒಂದೇಸಮನಾದ ಸುಖದುಃಖಗಳನ್ನು ಅನುಭವಿಸತಕ್ಕವರಾದುದರಿಂದ ಈತನ ಜನ್ಮಾಂತರಮಿತ್ರನಾದ ನಿನ್ನ ಹತ್ತಿರಕ್ಕೆ ಕರೆದುಕೊಂಡು ಬಂದಿದ್ದೇನೆ. ನೀವಿಬ್ಬರೂ ಹುಟ್ಟು ಮುಪ್ಪು ಸಾವು ರೋಗಗಳಿಂದ ಕೂಡಿಕೊಂಡಿರುವ ಈಗಿನ ದೇಹಗಳನ್ನು ಬಿಟ್ಟು, ದಿವ್ಯದೇಹಗಳನ್ನು ಪಡೆದು ಆಪ್ತೇಷ್ಟರ ಸಮಾಗಮಸುಖವನ್ನು ಅನುಭವಿಸಿರಿ ! ಭೂಲೋಕದ ಜನರ ಸಂಪರ್ಕವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ನಾನು ಈ ಚಂಡಾಲವೇಷವನ್ನು ಧರಿಸಿದ್ದೆನು. ಇನ್ನು ನಾನು ಹೋಗುತ್ತೇನೆ !" ಎಂದು ಹೇಳಿದಳು. ೫೪. ಲಕ್ಷ್ಮಿಯು ಝಣ ಝಣ ಧ್ವನಿಯನ್ನು ಮಾಡುತ್ತಿರುವ ಡಾಬಿನಿಂದ ಕೂಡಿರುವ ಹಾರ ತೋಳು ಬಂದಿ ಮೊದಲಾದ ಆಭರಣಗಳ ಕಾಂತಿಯು ದಿಗಂತವನ್ನು ಬೆಳಗುತ್ತಿರಲು, ಅರಮನೆಯ ರಮಣೀಯವಾದ ಅಂಗಣದಲ್ಲಿರುವ ಜನರಿಗೆ ಆಶ್ಚರ್ಯವನ್ನುಂಟುಮಾಡುತ್ತಾ ಇದೊಂದು ಬಳ್ಳಿ ಮಿಂಚೋ ಎಂಬಂತೆ ಕೂಡಲೆ ಆಕಾಶಪ್ರದೇಶಕ್ಕೆ ಹಾರಿ ಕಣ್ಮರೆಯಾದಳು ! ವ॥ ಬಳಿಕ ಶೂದ್ರಕಮಹಾರಾಜನು ಆ ಮಾತು ಕೇಳಿ, ಹಿಂದಿನ ಜನ್ಮದ ನೆನಪನ್ನು ಪಡೆದು ಗಿಳಿಯ ಮುಖವನ್ನು ನೋಡಿ ೫೫. "ವೈಶಂಪಾಯನ ! ನೀನು ಪುಂಡರೀಕ ! ನನ್ನ ಹಿಂದಿನ ಜನ್ಮದ ನೆಂಟ ! ಪುಣ್ಯವಶದಿಂದ ನಿನ್ನನ್ನು ಕಂಡೆನು, ಇನ್ನು ಇಬ್ಬರೂ ಒಟ್ಟಿಗೆ ಶಾಪ

ವ॥ ಎಂಬುದುಮನಂತರಂ ಗಂಧರ್ವರಾಜನಂದನೆಯುಂ ಮುಂದೆ ನಿಲಿಸಿ ಕರ್ಣಾಂತಾ ಕೃಷ್ಟಕಾರ್ಮುಕನಾಗಿ ಮಕರಧ್ವಜನೆಡೆವಿಡದೆ ಮತ್ಸರಿಸಿ ಮನುಜಮಕರಧ್ವಜನನೋರಂತಿಸುತಿರ ಲಾತನಲರ್ಗಣೆಯ ಗಾಳಿಯೆ ಪೊಯ್ದಂತೆ ಮೆಯ್ ನಡುಗಲೊಡರಿಸಿದುದಾತನ ನನೆಯಂಬಿನ ಮೊನೆಗಣೆಗಳಿವೆಂಬಿನಂ ಮೆಯ್ ನವಿರ್ನಿಮಿರ್ಸೆದುವಾತನ ಕುಡುವಿಲ್ಲ ಜೇವಡೆಗೆ ಬಿಗುರ್ತಂತೆ ಕಣ್ ಮುಕುಳಿಸಿದುವಾತನುರಿಯಂಬಿನ ಪೊಗೆ ಮೊಗಸಿದಂತಧರಕಿಸಲಯಂ ನಸುಗಂದಿದುದಾತನ ವಿಷಮಶರಶಲಾಕೆಗಳಿಂ ಕೀಲಿತವಾದಂತವಯವಂಗಳ್ ಸಟ್ಟನಿಂದುವಂತುಮಲ್ಲದೆಯುಂ

ಎಳಮರನಂ ಕಾಟ್ಗಿಚ್ಚುರ
ದಳುರಲ್ ಬೆವರುಣ್ಮಿಪೊಣ್ಮುವಂತಿರಲಾ ಕೋ
ಮಳತನುವತನುದಾವಾ
ನಳನಳುರಲ್ ಬೆಮರ್ಗಳುಣ್ಮಿಪೊಣ್ಮಿದುವಾಗಳ್ ೫೬

ವ॥ ಅಂತು ಸಂತಾಪವೊದವೆ ತಾಪಾಪನೋದನಾರ್ಥಂ ಪ್ರವಾಳ ಕಮಲಕುವಲಯ ಕಲ್ಹಾರ ಮೃಣಾಳವಲಯ ಮಲಯಜಮೌಕ್ತಿಕಾವಳೀದರ್ಪಣಾದಿ ಶಿಶಿರೋಪಚಾರಂಗಳಂ ಪರಿಜನಂಗಳ್ ಪರಿತಂದು ಮಾಡೆ ತನ್ನೊಳಿಂತೆಂದಂ

ವಿಮೋಚನದ ಫಲವನ್ನು ಪಡೆಯುತ್ತೇವೆ" ವ॥ ಎಂದು ಹೇಳುತ್ತಿರುವಂತೆಯೇ ಮನ್ಮಥನು ಕಾದಂಬರಿಯನ್ನು ಮುಂದೆ ನಿಲ್ಲಿಸಿ ಬಿಲ್ಲನ್ನು ಕಿವಿಯವರೆಗೂ ಎಳೆದು ಮನುಷ್ಯರೂಪವನ್ನು ತಾಳಿರುವ ಮನ್ಮಥನಂತಿರುವ ಶೂದ್ರಕಮಹಾರಾಜನ ಮೇಲೆ ಹೊಟ್ಟೆಕಿಚ್ಚಿನಿಂದಲೋ ಎಂಬಂತೆ ಒಂದೇಸಮನೆ ಬಾಣಗಳನ್ನು ಬಿಡುತ್ತಿದ್ದನು. ಅವನ ಹೂವಿನಬಾಣದ ಗಾಳಿಯಿಂದ ಹೊಡೆಯಲ್ಪಟ್ಟಂತೆ ಶರೀರವು ನಡುಗಲಾರಂಭಿಸಿತು. ಅವನ ಹೂವಿನಬಾಣದ ತುದಿಗಳೇ ಇವು ಎಂಬಂತೆ ಮೈಗೂದಲು ಮೇಲಕ್ಕೆದ್ದಿತು. ಆತನ ಬಾಗಿದ ಬಿಲ್ಲಿನ ಟಂಕಾರಕ್ಕೆ ಹೆದರಿದಂತೆ ಕಣ್ಣು ಮುಚ್ಚಿಕೊಂಡಿತು. ಆತನ ಉರಿಯುವ ಬಾಣದ ಹೊಗೆಯು ಆವರಿಸಿದಂತೆ ಚಿಗುರಿನಂತಿರುವ ತುಟಿಯು ಸ್ವಲ್ಪ ಮಟ್ಟಿಗೆ ಒಣಗಿತು. ಅವನ ಭಯಂಕರವಾದ ಬಾಣಗಳೆಂಬ ಸರಳುಗಳಿಂದ ಬಿಗಿಯಲ್ಪಟ್ಟಂತೆ ಅಂಗಗಳು ಮಿಸುಕಾಡದೆ ಸ್ತಬ್ಧವಾದುವು ! ಅದಲ್ಲದೆ ೫೬. ಎಳೆಯಮರವನ್ನು ಕಾಡುಕಿಚ್ಚು ಆವರಿಸಲು ಅದರಿಂದ ದ್ರವವು ಹೊರಡುವಂತೆ ಆ ರಾಜನ ಮೃದುವಾದ ಶರೀರವನ್ನು ಮನ್ಮಥನೆಂಬ ಕಾಡುಕಿಚ್ಚು ಆವರಿಸಲು ಬೆವರು ಹೊರಹೊಮ್ಮುತ್ತಿತ್ತು. ವ॥ ಹಾಗೆ ಸಂತಾಪವುಂಟಾಗಲು ಅದನ್ನು ಶಮನ ಮಾಡುವುದಕ್ಕಾಗಿ ಪರಿಜನರು ಬೇಗ ಬಂದು ಹವಳ, ಕಮಲ, ಕನ್ನೈದಿಲೆ, ಕಹ್ಲಾರ, ತಾವರೆದಂಟಿನ ಬಳೆ, ಶ್ರೀಗಂಧ, ಮುತ್ತಿನ ಸರ, ಕನ್ನಡಿ ಮೊದಲಾದುವುಗಳಿಂದ ಶೈತ್ಯೋಪಚಾರವನ್ನು ಮಾಡಲು ಶೂದ್ರಕನು ತನ್ನಲ್ಲಿ

ತಳಿರಂ ಕಾಂತೆಯ ಕೆಂದಳಂ ಕಮಲಮಂ ಕಣ್ಗಳ್ ಮೃಣಾಳಂಗಳಂ
ಸಳಿತೋಳ್ ಕನ್ನಡಿಯಂ ಕುಚಂ ಮಲಯಜಶ್ರೀಯಂ ಸ್ಮಿತಂ ಮೌಕ್ತಿಕಾ
ವಳಿಯಂ ದಂತಮರೀಚಿ ಚಂದ್ರಿಕೆಯನಂಗಜ್ಯೋತಿ ಪೂರ್ಣೇಂದುಮಂ
ಡಳಮಂ ಮುದ್ದುಮೊಗಂ ಗೆಲುತ್ತುಮಿರೆ ಮತ್ತೇನೆಂದಿವಂ ತಾಳ್ದುವೆಂ ೫೭

ವ॥ ಎಂದು ಚಿತ್ರರಥನಂದನೆಯಂ ಹೃದಯದೊಳ್ ತಳೆದು

ಆಕೆಯ ಪೆಸರಾಕೆಯ ಮಾ
ತಾಕೆಯ ಮುದ್ದಾಕೆಯಂದವಾಕೆಯ ತನುಸೋಂ
ಕಾಕೆಯ ತಿಳಿವಾಕೆಯ ಮುಳಿ
ಸಾಕೆಯ ಕೂಟಮೆ ದಲಿರ್ದುದರಸನ ಮನದೊಳ್ ೫೮

ವ॥ ಅದಲ್ಲದೆಯುಂ ಗಿಳಿಯ ಮೊಗಮಂ ನೋಡಿ ನೃಪರೂಪಚಂದ್ರಂ ಚಂದ್ರಾಪೀಡನಾದ ತನ್ನ ಮುನ್ನಿನ ಭವದ ಕೆಳೆಯನಂ ವೈಶಂಪಾಯನನಂ ನೆನೆನೆನೆದು ನಿಜಪ್ರಿಯಸಖವಿಯೋಗದವದಹ್ಯಮಾನಮಾನಸನಾಗಿ ಪರಿಜನಂಗಳ್ ಪಸರಿಸಿದ ಸಿರಿಕಂಡದಣ್ಪುಗಳೊಳಂ ಕೆಂಸಡಿಗಳೊಳಿಕ್ಕುವಿರ್ಪುವೊರೆದ ತಾವರೆಯೆಲೆಗಳೊಳಂ ಕೆಂದಳಂಗಳೊಳ್ ಸಂದಿಸುವ ಕರ್ಪೂರ

ಹೀಗೆ ಚಿಂತಿಸಿದನು. ೫೭. "ಚಿಗುರನ್ನು ಇನಿಯಳ ಅಂಗೈ ಅಂಗಾಲುಗಳು ಸೋಲಿಸುತ್ತವೆ. ಹಾಗೆಯೇ ಕಮಲವನ್ನು ಕಣ್ಣುಗಳೂ, ತಾವರೆದಂಟುಗಳನ್ನು ಕೋಮಲವಾದ ತೋಳುಗಳೂ, ಕನ್ನಡಿಯನ್ನು ಕುಚಗಳೂ, ಗಂಧದ ಶೋಭೆಯನ್ನು ಮಂದಹಾಸವೂ, ಮುತ್ತಿನ ಸರವನ್ನು ಹಲ್ಲುಗಳ ಕಾಂತಿಯೂ, ಬೆಳದಿಂಗಳನ್ನು ಶರೀರದ ಲಾವಣ್ಯವೂ, ಚಂದ್ರಮಂಡಲವನ್ನು ಮುದ್ದುಮೊಗವೂ ಸೋಲಿಸುತ್ತವೆ. ಹೀಗಿರಲು ಏನೆಂದು ಇವುಗಳನ್ನು ಉಪಯೋಗಿಸಿಕೊಳ್ಳಲಿ ?" ಟಿ. ಕಾದಂಬರಿಯ ಅಂಗಗಳಿಂದ ಈ ಪದಾರ್ಥಗಳೆಲ್ಲ ಸೋತುಹೋಗಿವೆ. ಹೀಗೆ ನಿಸ್ಸತ್ವ ಪದಾರ್ಥಗಳಿಗೆ ಅವಳ ವಿರಹದಿಂದ ಉಂಟಾದ ನನ್ನ ಸಂತಾಪವನ್ನು ಪರಿಹರಿಸುವ ಸಾಮರ್ಥ್ಯವಿದೆಯೇ ? ಎಂದು ತಾತ್ಪರ್ಯ. ವ॥ ಹೀಗೆ ಆಲೋಚಿಸುತ್ತಾ ಕಾದಂಬರಿಯನ್ನು ಹೃದಯದಲ್ಲಿ ನಿಲಿಸಿದ್ದನು. ೫೮. ಆಕೆಯ ಹೆಸರು, ಆಕೆಯ ಮಾತು, ಆಕೆಯ ಪ್ರೀತಿ, ಆಕೆಯ ಶರೀರಸ್ಪರ್ಶ, ಆಕೆಯ ಪ್ರಸನ್ನತೆ, ಆಕೆಯ ಕೋಪ, ಆಕೆಯ ಸಮಾಗಮ–ಇವುಗಳೇ ಆ ರಾಜನ ಮನಸ್ಸಿನಲ್ಲಿ ಯಾವಾಗಲೂ ಇರುತ್ತಿತ್ತು. ವ॥ ಅದಲ್ಲದೆ ಗಿಳಿಯ ಮುಖವನ್ನು ನೋಡಿ ಚಂದ್ರಾವತಾರನಾದ ಶೂದ್ರಕನು ತನ್ನ ಹಿಂದಿನ ಜನ್ಮದ ಸ್ನೇಹಿತನಾದ ವೈಶಂಪಾಯನನನ್ನು ಯಾವಾಗಲೂ ನೆನೆಸಿಕೊಳ್ಳುತ್ತಿದ್ದನು. ಪ್ರಿಯಸ್ನೇಹಿತನ ವಿರಹವೆಂಬ ಕಾಡುಕಿಚ್ಚಿನಿಂದ ಅವನ ಹೃದಯವು ಬೆಂದುಹೋಗುತ್ತಿತ್ತು. ಪರಿಜನರು ಮೈಗೆಲ್ಲಾ ಲೇಪಿಸಿದ ಶ್ರೀಗಂಧದಿಂದಲೂ, ಕೆಂಪಾದ ಕಾಲುಗಳ ಮೇಲೆ ಇಟ್ಟ ತೇವದಿಂದ ಕೂಡಿದ ತಾವರೆಯೆಲೆಗಳಿಂದಲೂ, ಅಂಗೈ ಮೇಲೆ ಇಟ್ಟಿರುವ ಕರ್ಪೂರಧೂಳಿಗಳಿಂದ ಮಿಶ್ರಿತವಾದ ಹಿಮದ ಗಡ್ಡೆಗಳಿಂದಲೂ,

ರಜದೊಳ್ ಪೊರೆದ ಹಿಮದ ಜಿಒಬ್ಬುಗಳೊಳಮುರದೊಳಿಕ್ಕಿದಾಲಿಗೋಡುವ ಹಾರಂಗಳೊಳಂ ಕದಂಪಿನೊಳೊತ್ತುವ ರನ್ನದ ಕನ್ನಡಿಗಳೊಳಂ ನೊಸಲೊಳಿಕ್ಕುವ ಚಂದ್ರಕಾಂತದ ಪಟ್ಟಂಗಳೊಳಂ ಮುಯ್ಯಿನೊಳಮರ್ಚುವ ಮೃಣಾಳದ ತೋಳ್ವಲಯಂಗಳೊಳಂ ಬಾಟೆಯ ತಿರುಳೆಲೆಯ ಬಿಜ್ಜಣಿಗೆಗಳೊಳಮೆಸಟ ಪಸೆಗಳೊಳಂ ಪಳುಕಿನ ನೆಲವಾಳಿಗೆಗಳೊಳಂ ಧಾರಾಗೃಹಂಗಳೊಳಂ ಜಲಮಂಟಪಂಗಳೊಳಮೆಂತುಮಾ ಸಂತಾಪಮಂ ಸಂತಯಿಸಲಾಱದೆ

ಸ್ವಾಗತ॥ ಎನ್ನನಿತ್ತು ಸುಖಮಂ ಸಖಂಗೆ ಮಾ
ಟ್ಪೆಂ ನಿರಾಕುಳಮೆನುತ್ತವಾಗಳೆ
ತ್ತಂ ನೃಪಂ ಪದಪಿನಿಂ ಮಹಾತ್ಮನಾಂ
ಕಿಂ ನದೇಯಮೆನೆ ತನ್ನ ಜೀವಮಂ ೫೯

ಗಿಳಿಯಿತ್ತ ಮಹಾಶ್ವೇತಾ
ವಳೋಕನೋತ್ಕಂಠೆಯಿಂದೆ ಜೀವಂ ಬಿಟ್ಟ
ತ್ತೆಳಸುತಿರಲಮೃತಕರಮಂ
ಡಳಮಧ್ಯದ ಪುಂಡರೀಕದೇಹಮದಾಗಳ್ ೬೦

ಉದಯಂ ರಾಜೇಂದ್ರಚಂದ್ರಾತ್ಮಕನೆನಿಸಿದ ಚಂದ್ರಂಗೆ ಸಾರ್ತಂದುದಿನ್ನ
ಭ್ಯುದಯಂ ಲೋಕತ್ರಯಕ್ಕೆಂಬುದನಱಿಪುವೆನಾಂ ರಾಗದಿಂದೀಗಳೆಂಬಂ
ದದೆ ರಕ್ತಾಶೋಕಚೂತದ್ರುಮಸಮುದಿತ ಬಾಲಪ್ರವಾಳಧ್ವಜಂ ಬಂ
ದುದು ಚಂಚಚ್ಚಂಚರೀಕಪ್ರಕರ ಶುಕಕುಲಾಲಾಪಕಾಂತಂ ವಸಂತಂ ೬೧

ಎದೆಯ ಮೇಲೆ ಇಟ್ಟಿರುವ ಆಲಿಕಲ್ಲಿನಂತೆ ಕೊರೆಯುವ ಹಾರಗಳಿಂದಲೂ, ಕೆನ್ನೆಗೆ ಒತ್ತುವ ರನ್ನಗನ್ನಡಿಗಳಿಂದಲೂ, ಹಣೆಯ ಮೇಲೆ ಇರಿಸುವ ಚಂದ್ರಕಾಂತಮಣಿಯ ಪಟ್ಟಿಗಳಿಂದಲೂ, ಹೆಗಲಿಗೆ ತೊಡಿಸಿರುವ ತಾವರೆದಂಟಿನ ತೋಳುಬಳೆಗಳಿಂದಲೂ, ಬಾಳೆಯ ಸುಳಿಯೆಲೆಯ ಬೀಸಣಿಗೆಯಿಂದಲೂ, ಹೂವಿನ ದಳಗಳ ಆಸನಗಳಿಂದಲೂ, ಸ್ಫಟಿಕದ ನೆಲಮಾಳಿಗೆಗಳಿಂದಲೂ, ಕಾರಂಜಿಮನೆಗಳಿಂದಲೂ, ಜಲಮಂಟಪಗಳಿಂದಲೂ, ಅವನ ಸಂತಾಪವು ಶಮನವಾಗಲಿಲ್ಲ. ೫೯. "ಸ್ನೇಹಿತನಿಗೆ ನನ್ನನ್ನೇ ಒಪ್ಪಿಸಿ ನಿರಾತಂಕವಾದ ಸುಖವನ್ನುಂಟುಮಾಡುತ್ತೇನೆ!" ಎಂದು ಪ್ರೀತಿಯಿಂದ ನಿಶ್ಚಯಿಸಿ ರಾಜನು ತನ್ನ ಜೀವವನ್ನು ಒಪ್ಪಿಸಿಬಿಟ್ಟನು. ಮಹಾತ್ಮರು ಕೊಡದಿರುವುದು ಯಾವುದಿದೆ ? (ಶೂದ್ರಕರಾಜನು ಪ್ರಾಣವನ್ನು ಬಿಟ್ಟನು.) ೬೦. ಈಕಡೆ ಗಿಳಿಯು ಮಹಾಶ್ವೇತೆಯನ್ನು ನೋಡಬೇಕೆಂಬ ಹೆಬ್ಬಯಕೆಯಿಂದ ಚಂದ್ರಮಂಡಲದ ಮಧ್ಯದಲ್ಲಿರುವ ಪುಂಡರೀಕದೇಹವನ್ನು ಬಯಸುತ್ತಿರುವಂತೆಯೆ ತನ್ನ ಜೀವವನ್ನು ಬಿಟ್ಟಿತು. ೬೧. "ಚಂದ್ರಾಪೀಡಮಹಾರಾಜನ ಸ್ವರೂಪನಾದ ಚಂದ್ರನಿಗೆ ಇನ್ನು ಏಳಿಗೆಯ ಕಾಲವು ಸನ್ನಿಹಿತವಾಗಿಬಿಟ್ಟಿತು. ಆದ್ದರಿಂದ ಇನ್ನು ಮೂರು ಲೋಕಗಳಿಗೂ ಏಳಿಗೆಯುಂಟಾಗುತ್ತದೆ ಎಂಬ ಈ ವಿಚಾರವನ್ನು ನಾನು ಪ್ರೀತಿಯಿಂದ ಮೂರು ಲೋಕಗಳಿಗೂ ತಿಳಿಸುತ್ತೇನೆ" ಎಂಬ ಇಚ್ಛೆಯಿಂದಲೋ ಎಂಬಂತೆ ವಸಂತನು ಕೆಂಪುಅಶೋಕ ಮತ್ತು ಮಾವಿನ ಮರಗಳ ಆಗತಾನೆ ಬಿಡುತ್ತಿರುವ

ಎಳಮಾವಿನ ಚೆಲ್ವಿಂ ಪೊಂ
ಬಳೆಗಂಪಿಂ ತೆಂಕಣೆಲರಿನೆಳನೀರ್ಗಳಿನಿಂ
ದೊಳದಿಂ ತಣಿಯಿಪುದು ಜನಂ
ಗಳ ಪಂಚೇಂದ್ರಿಯಮನೆಂದು ಬಂದ ವಸಂತಂ ೬೨

ತಳಿರಿಂ ತಳ್ತಿತ್ತಶೋಕದ್ರುಮಮೆಳಗೊನರಿಂದೊಂದಿತಿಮ್ಮಾವು ಬಲ್ಪೊಂ
ಬಳೆಯಿಂ ಬಳ್ಕಿತ್ತು ಕೌಂಗಚ್ಚಲರ ತುಱುಗಲಂ ಪೇಱಿಕೊಂಡಿರ್ದುದೆತ್ತಂ
ತಿಳಕಂ ಪೂಗೊಂಚಲಿಂದೊಂದಿದುದು ಕುರವಕಂ ಕಂಜಕಿಂಜಲ್ಕದಿಂ ಕ
ಣ್ಗೊಳಿಸಿತ್ತಬ್ಜಾಕರಂ ತಂಪಲೆವ ಮಲಯಮಂದಾನಿಲಾಂದೋಳದಿಂದಂ ೬೩

ಬನವಂ ಕೆಂದಳಿರಿಂದೆ ಬಾಸಣಿಸುತಂ ದಿಗ್ರಾಜಿಯಂ ಬಂದ ಮಾ
ವಿನ ಕಂಪಿಂದಮೆ ಪೊಸುತಂ ಬಿರಯಿಯಂ ಮತ್ತಾಳಿನೀ ಕೋಕಿಲ
ಧ್ವನಿಯಿಂದಂಜಿಸುತಂ ಸಮಸ್ತ ಜನಮಂ ಪುಷ್ಪಾಸವಾಸಾರ ದು
ರ್ದಿನದಿಂ ಸೊರ್ಕಿಸುತಂ ಪೊದಟ್ದುದು ಜಗತ್ಕಾಂತಂ ವಸಂತಾಗಮಂ ೬೪

ಎಳೆಚಿಗುರೆಂಬ ಬಾವುಟವನ್ನು ಮೆರೆಸುತ್ತಾ ಹಾರಾಡುತ್ತಿರುವ ದುಂಬಿಗಳ ಗುಂಪು ಮತ್ತು ಗಿಳಿಗಳ ಸಮೂಹದ ಧ್ವನಿಯಿಂದ ಮನೋಹರನಾಗಿ ಬಂದನು. ೬೨. ಬಂದ ವಸಂತನು ಎಳಮಾವಿನ ಸೌಂದರ್ಯದಿಂದಲೂ ಹೊಂಬಾಳೆಯ ಸುವಾಸನೆಯಿಂದಲೂ ದಕ್ಷಿಣದಿಕ್ಕಿನ ಗಾಳಿಯಿಂದಲೂ ಜನರು ಹಾಡುವ ಹಿಂದೋಳರಾಗದಿಂದಲೂ ಪಂಚೇಂದ್ರಿಯಗಳನ್ನು ತೃಪ್ತಿಪಡಿಸಿದನು. ೬೩. ತಂಪಾಗಿ ಮಲಯಪರ್ವತದ ಕಡೆ ಯಿಂದ ಬೀಸುವ ಮಂದಮಾರುತದ ತೂಗುವಿಕೆಯಿಂದ ಅಶೋಕವೃಕ್ಷಗಳು ಚಿಗುರಿ ನಿಂದ ಕೂಡಿಕೊಂಡಿದ್ದುವು. ಸಿಹಿಮಾವಿನ ಮರಗಳು ಎಳೆಯ ಚಿಗುರುಗಳಿಂದ ಕೂಡಿ ಕೊಂಡಿದ್ದುವು. ಅಡಕೆಮರಗಳು ಬಹಳವಾಗಿ ಬಿಟ್ಟಿರುವ ಹೊಂಬಾಳೆಗಳಿಂದ ಬಗ್ಗಿ ಹೋಗಿದ್ದುವು, ತಿಲಕದ ಮರಗಳು ಬೆಳ್ಳಗಿರುವ ಹೂವುಗಳ ಸಮೂಹದಿಂದ ಎಲ್ಲೆಲ್ಲೂ ತುಂಬಿದ್ದುವು. ದೊಡ್ಡ ಗೋರಂಟೆಮರಗಳು ಹೂವಿನ ಗೊಂಚಲುಗಳಿಂದ ಕೂಡಿದ್ದುವು. ತಾವರೆಗೊಳಗಳು ತಾವರೆಯ ಕೇಸರಗಳಿಂದ ಶೋಭಿಸುತ್ತಿದ್ದುವು. ೬೪. ಕಾಡುಗಳನ್ನೆಲ್ಲ ಕೆಂಪಾದ ಚಿಗುರುಗಳಿಂದ ಮುಚ್ಚುತ್ತಲೂ, ದಿಕ್ಕುಗಳ ಸಮೂಹವನ್ನು ಮಾವಿನಮರ ಗಳ ಸುವಾಸನೆಯಿಂದ ಬಳಿಯುತ್ತಲೂ (ತುಂಬುತ್ತಲೂ), ವಿರಹಿಗಳನ್ನು ಮದವೇರಿದ ಹೆಣ್ಣುದುಂಬಿ ಮತ್ತು ಕೋಕಿಲೆಗಳ ಧ್ವನಿಯಿಂದ ಹೆದರಿಸುತ್ತಲೂ, ಜನರೆಲ್ಲರನ್ನೂ ಹೂವಿನರಸದ ಮಳೆಯನ್ನು ಕರೆಯುತ್ತಿರುವ ಮಳೆದಿನದಿಂದ ಕೊಬ್ಬಿಸುತ್ತಲೂ

ಬಿರಯಿಗಳಂ ಬೆರ್ಚಿಸಲಿದೆ
ಪರಮಾಸ್ತ್ರಂ ಮನುಮತಂಗೆನಿಪ್ಪ ವಸಂತಂ
ಬರಲೊಡನೊರ್ಮೆಯೆ ಗಂಧ
ರ್ವರಾಜಸುತೆ ಮನದೊಳಾಗಳಾಕುಲೆಯಾದಳ್ ೬೫

ವ॥ ಅನ್ನೆಗಂ ಕಾಮದೇವನುಕ್ಕಿವದಲ್ಲಿ ಮುನ್ನಮೆ ಕಟ್ಟಿದ ಮೋಂದಳಿರ ತೋರಣಂಗಳೊಳಮೆತ್ತಿದಶೋಕಪಲ್ಲವಪತಾಕೆಯೊಳಂ ನೇಱಿಲ ರಕ್ತ ಚಾಮರಂಗಳೊಳಂ ಬಿಗಿದ ನಾರಂಗದ ಮೇಲ್ಕಟ್ಟನೊಳಂ ಮಾಂಗಾಯ ಫಲಾವಳಿಗಳೊಳಂ ತೊಡರ್ಚಿದ ಪುನ್ನಾಗದ ಸೊಸಕಂಗಳೊಳಂ ನಾಗದ ಝುಳುಂಬಕಂಗಳೊಳಂ ಸಂಪಗೆಯಲರ ಕಿಂಕಿಣಿಗಳೊಳಂ ಕೆಂದಾವರೆಯ ಗಂಟೆಗಳೊಳಂ ದವನದ ಕೇರ್ಗಟ್ಟನೊಳಂ ಜವೆಯ ಜಾಗರದೊಳಮಲರ್ವಂಡಿನ ಜಗಲಿಯೊಳಂ ಸಹಕಾರದ ಸಾರಣೆಯೊಳಂ ಅಲ್ಲಲ್ಲಿಗಲರ್ದ ಪೂವಲಿಗಳೊಳಂ ಶತಪತ್ರದ ಸಿತಾತಪತ್ರದೊಳಂ ಪೊಂಬಾಳೆಯ ಚಾಮರಂಗಳೊಳಮೆಸೆವ ಮಂಟಪಂಗಳ ನಡುವಣ ಪದ್ಮರಾಗದ ಪಟ್ಟವಣೆಯೊಳ್ ನಿಲಿಸಿದ ಕಾಮದೇವನನತಿಪ್ರೀತಿಯಿಂದರ್ಚಿಸಿ

ನಿನ್ನನೆ ಪೂಜಿಸಿ ಪಡೆದರ್
ಕನ್ನೆಯರಭಿಮತಮನಾದವಾರಾಧಿಸಲಾ
ನಿನ್ನವರಂ ರತಿಪತಿ ನೀ
ನೆನ್ನ ಮನೋರಥಮನೇಕೆ ಪೇಟು ತಡೆಯಿಸಿದ್ಯೆ ೬೬

ಜಗನ್ಮನೋಹರವಾದ ವಸಂತಋತು ವ್ಯಾಪಿಸಿತು. ೬೫. 'ವಿರಹಿಗಳನ್ನು ಹೆದರಿಸಲು ಮನ್ಮಥನಿಗಿರುವ ಅಮೋಘವಾದ ಮಂತ್ರಾಸ್ತ್ರವೇ ಇದು' ಎಂಬಂತಿರುವ ವಸಂತ ಸಮಯವು ಬರಲಾಗಿ ಗಂಧರ್ವರಾಜಕುಮಾರಿಯಾದ ಕಾದಂಬರಿಯು ಮನಸ್ಸಿನಲ್ಲಿ ಬಹಳ ತಳಮಳಗೊಂಡಳು. ವ॥ ಅಷ್ಟರಲ್ಲಿ ಕಾಮದೇವನ ಹಬ್ಬ ಬಂದಿತು. ಆಗ ಮೊದಲೇ ಕಟ್ಟಿದ ಮಾವಿನ ಚಿಗುರಿನ ತೋರಣಗಳಿಂದಲೂ, ಎತ್ತಿಕಟ್ಟಿರುವ ಅಶೋಕ ವೃಕ್ಷದ ಚಿಗುರಿನ ಧ್ವಜಗಳಿಂದಲೂ, ನೇರಳೆಮರದ ಚಿಗುರೆಂಬ ಕೆಂಪು ಚಾಮರಗಳಿಂದಲೂ, ಕಟ್ಟಿರುವ ಕಿತ್ತಳೆಯ ಮೇಲ್ಕಟ್ಟುಗಳಿಂದಲೂ, ಮತ್ತು ಕಟ್ಟಿರುವ ಮಾವಿನ ಫಲಗಳಿಂದಲೂ, ತೊಡಿಸಿರುವ ಸುರಗಿಹೂವಿನ ಕುಚ್ಚುಗಳಿಂದಲೂ, ನಾಗಕೇಸರದ ತೆರೆಗಳಿಂದಲೂ, ಸಂಪಿಗೆಹೂವಿನ ಕಿರುಗೆಜ್ಜೆಗಳಿಂದಲೂ, ಕೆಂದಾವರೆಯ ಗಂಟೆಗಳಿಂದಲೂ ದವನದ ತಡಿಕೆಗಳಿಂದಲೂ, ಜವೆಯ ಅಂಕುರಾರ್ಪಣದ ಪೈರಿನಿಂದಲೂ, ಹೂವಿನ ಪುಡಿಗಳಿಂದ ಮಾಡಿದ ಜಗಲಿಗಳಿಂದಲೂ, ಸಿಹಿಮಾವಿನ ಹೂವಿನ ರಸದಿಂದ ಮಾಡಿದ ಸಾರಣೆಗಳಿಂದಲೂ, ಅಲ್ಲಲ್ಲಿ ಅರಳಿರುವ ಹೂವಿನ ತಳಿಯುವಿಕೆಯಿಂದಲೂ, ಬಿಳಿ ಕಮಲದಿಂದ ನಿರ್ಮಿತವಾದ ಬಿಳಿಕೊಡೆಗಳಿಂದಲೂ, ಹೊಂಬಾಳೆಯ ಚಾಮರಗಳಿಂದಲೂ ಶೋಭಿಸುವ ಮಂಟಪಗಳ ಮಧ್ಯದ ಪೀಠದಲ್ಲಿ ಪ್ರತಿಷ್ಠೆ ಮಾಡಿರುವ ಕಾಮದೇವನ ಮೂರ್ತಿಯನ್ನು ಭಕ್ತಿಯಿಂದ ಪೂಜಿಸಿದಳು. ೬೬. "ಭಗವಂತ, ಕಾಮದೇವ, ಅನೇಕ ಕನ್ನಿಕೆಯರು ನಿನ್ನನ್ನು ಪೂಜಿಸಿ ತಮ್ಮ ಇಷ್ಟಾರ್ಥವನ್ನು ಬಹಳಮಟ್ಟಿಗೆ

ವ॥ ಎಂದು ವಿಷಮಾಸ್ತ್ರಂಗೆ ವಿಷಾದದೊಳಿ ಪೊಡಮಟ್ಟು

ಸುರಭಿಜಲಂಗಳಿಂದಮಭಿಷಿಕ್ತನನಾ ನೃಪರೂಪಚಂದ್ರನಂ
ತರದೊಳೆ ಮಾಡಿ ಕೇಸಡಿಗಳಂ ಹರಿಚಂದನದಿಂದಮೂಡಿ ಕೇ
ಸರದ ತುಱುಂಬನಿಕ್ಕಿ ಸಿರಿಕಂಡಮನೊಯ್ಯನೆ ಪೂಸಿ ಕಂಪಿನೊಳ್ ಪೊ
ರೆದ ವಸಂತದೊಳ್ಮುಗುಳ ತಣ್ತೊಡವಂ ತುಡಿಸಲ್ಕೊಡರ್ಚಿದಳ್ ೬೭

ವ॥ ಅದೆಂತೆನೆ ಸುರಗಿಯಲರ ಮುಗುಳ ಮುತ್ತಿನ ಮಾಲೆಯಿಂ ಸುರಹೊನ್ನೆಯ ರನ್ನವಟ್ಟಿಗೆಯಿಂ ರಕ್ತಾಶೋಕರಚಿತ ರತ್ನಕಟಕದಿಂ ಕಪ್ಪುರದ ಪೂವಸರಿಗೆಯಿಂ ಕುಂಕುಮದ ಕುಟ್ಮಲದ ಪದಕದಿಂ ಸಿಂಧುವಾರತಾರಹಾರ। ಕುರವಕದ ಕೇಯೂರದಿಂ ಪಾರಿಜಾತದ ಕರ್ಣಪೂರದಿಂ ತಿಲಕದ ತಿಲಕದಿನಲಂಕರಿಸಿ

ಅಳಿಪಿನೊದವಿಂ ನೀಡುಂ ಪೀರ್ವಂದದಿಂ ನಡೆನೋಡಿ ಸಂ
ಗಳಿಸೆ ನಿಡುಸುಯ್ ರೋಮಾಂಚಂ ಪೊಣ್ಮೆ ಘರ್ಮಜಲಂ ಪೊದ
ಟ್ದಿಳಿಯೆ ನಡುಗುತ್ತಕ್ಕಂ ಕಂಡಪ್ಪಳೆಂದು ಮೃಗಾಕ್ಷಿ ಪೆ
ಪ್ಪಳಿಸಿ ದೆಸೆಯಂ ನೋಡುತ್ತಂ ಪೊರ್ದಿದಳ್ ನೃಪಚಂದ್ರನಂ ೬೮

ಪಡೆದುಕೊಂಡಿದ್ದಾರೆ. ನಾನು ಇಷ್ಟುದಿನ ಪೂಜೆಮಾಡಿದರೂ ನೀನು ನನ್ನ ಮನೋರಥವನ್ನು ನೆರವೇರಿಸದೆ ಏಕೆ ತಡಮಾಡುತ್ತಿರುವೆ ?" ವ॥ ಎಂದು ವಿಷಾದದಿಂದ ಕಾದಂಬರಿ ಮನ್ಮಥನಿಗೆ ನಮಸ್ಕರಿಸಿದಳು. ೬೭. ಬಳಿಕ ಚಂದ್ರಾಪೀಡನ ಶರೀರವನ್ನು ಸುವಾಸನೆಯಾದ ನೀರಿನಿಂದ ಸ್ನಾನ ಮಾಡಿಸಿದಳು. ಕೆಂಪಾದ ಅವನ ಕಾಲುಗಳಿಗೆ ಶ್ರೀಗಂಧವನ್ನು ಲೇಪಿಸಿದಳು. ಕೂದಲಿನ ಗಂಟಿಗೆ ಬಕುಳ ಕುಸುಮದ ದಂಡೆಯನ್ನು ಮುಡಿಸಿದಳು. ಮೈಗೆ ಶ್ರೀಗಂಧವನ್ನು ಬಳಿದಳು. ಅಲ್ಲದೆ ವಸಂತಕಾಲದಲ್ಲಿ ಬಿಡುವ ಸುವಾಸನೆಯನ್ನು ಬೀರುವ ಮೊಗ್ಗುಗಳ ತಂಪಾದ ಒಡವೆಗಳನ್ನು ತೊಡಿಸಲು ಆರಂಭಿಸಿದಳು. ವ॥ ಅದು ಹೇಗೆಂದರೆ, ಸುರಗಿಹೂವಿನ ಮೊಗ್ಗುಗಳಿಂದ ಮಾಡಿದ ಮುತ್ತಿನ ಸರದಿಂದಲೂ, ಸುರಹೊನ್ನೆಯ ಹೂವಿನಿಂದ ಮಾಡಿದ ರತ್ನದ ಪಟ್ಟಿಕೆಯಿಂದಲೂ, ಕೆಂಪುಅಶೋಕಕುಸುಮಗಳಿಂದ ಮಾಡಿದ ರನ್ನಗಡಗಗಳಿಂದಲೂ, ಕರ್ಪೂರವೃಕ್ಷದ ಹೂವಿನಿಂದ ಮಾಡಿದ ಕಂಠಾಭರಣದಿಂದಲೂ, ಕುಂಕುಮವೃಕ್ಷದ ಮೊಗ್ಗಿನ ಪದಕದಿಂದಲೂ, ಲಕ್ಕಿಹೂವಿನಿಂದ ಮಾಡಿದ ದೊಡ್ಡ ಮುತ್ತಿನಸರದಿಂದಲೂ, ದೊಡ್ಡ ಕೆಂಪು ಗೋರಂಟಿಹೂವಿನ ತೋಳುಬಂದಿಯಿಂದಲೂ, ಪಾರಿಜಾತಕುಸುಮದಿಂದ ಮಾಡಿದ ಕರ್ಣಾಭರಣದಿಂದಲೂ, ತಿಲಕಪುಷ್ಪದ ಪರಾಗದ ತಿಲಕದಿಂದಲೂ ಅಲಂಕಾರಮಾಡಿದಳು. ೬೮. ಅನುರಾಗವುಂಟಾದುದರಿಂದ ಕುಡಿದುಬಿಡುವಳೋ ಎಂಬಂತೆ ಬಹಳಹೊತ್ತಿನವರೆಗೆ ಚಂದ್ರಾಪೀಡನ ದೇಹವನ್ನು ಚೆನ್ನಾಗಿ ನೋಡಿದಳು. ನಿಟ್ಟುಸಿರು ಪ್ರಾರಂಭವಾಯಿತು. ರೋಮಾಂಚನವು ಹೊರಹೊಮ್ಮಿತು. ಬೆವರು ಹೊರಟು ಇಳಿಯುತ್ತಿತ್ತು. ಆಗ ಕಾದಂಬರಿಯು ನಡುಗುತ್ತಾ ಮಹಾಶ್ವೇತೆಯು ಕಂಡುಬಿಟ್ಟಾಳೆಂಬ ಗಾಬರಿಯಿಂದ ಎಲ್ಲಾ ಕಡೆಗೂ ದೃಷ್ಟಿಯನ್ನು ಹರಿಸುತ್ತಾ

ವ॥ ಅದಲ್ಲದೆಯುಂ

ಉಱಿಯಲೆನಸುಂ ಲಜ್ಜಾಭಾರಂ ಸಮುಚಿತ ಸಾಧ್ವಸಂ
ಕಱಿಯಲೆಡೆವೆತ್ತಾಗಳ್ ಸಾರ್ಚಾರುಮಿಲ್ಲದಿರಲ್ಕೆ ಕಂ
ಡೆಳಸಿ ನಿಲಿಸಲ್ ತನ್ನಂ ತಾನಾಱದೊಯ್ಯನೆ ಕಣ್ಮಲರ್
ಮಲರೆ ನೃಪನಂ ಭೋಂಕಲ್ ಮೇಲ್ವಾಯ್ದು ತಳ್ತಿರದಪ್ಪಿದಳ್ ೬೯

ವ॥ ಆಗಳ್ ತದಾಲಿಂಗನಾಮೃತವರ್ಷದಿಂ ಜೀವಂ ಬಂದು

ಪ್ರಸರಚ್ಚಂದ್ರಪ್ರಭಾಲಿಂಗಿತ ಕುಮುದಮಯಂ ತಾನಿದೆಂಬಂತಿರುತ್ಸಾ
ಹಿಸೆ ಮೆಲ್ಸುಯ್ಗುತ್ತಿನಿಂದೊಂದಿದ ಹೃದಯಮುಷಸ್ಸಂಗಪದ್ಮಂಬೊಲುನ್ಮೀ
ಳಿಸೆ ಕಂಗಳ್ ಕೂಡೆ ಚೈತನ್ಯದೊಳಳವಡೆ ಸರ್ವಾಂಗಮೆಚ್ಚೆತ್ತನಾಗಳ್
ಪಸೆಯೊಳ್ ಮುನ್ನಿದ್ರೆಗೆಯ್ದೆಚ್ಚಱುವರಸನವೋಲಂದು ರಾಜೇಂದ್ರಚಂದ್ರಂ ೭೦

ವ॥ ಅಂತು ಮೆಯ್ಮುರಿದೆಚ್ಚೆತ್ತು ತನ್ನಂ ತಳ್ತಪ್ಪಿರ್ದ ಗಂಧರ್ವರಾಜನಂದನೆಯುಂ ಕಂಡು

ಪಡೆದೆಂ ಮತ್ಪುಣ್ಯದಿಂದೀ ಪದಮನಿನಿತುಕಾಲಕ್ಕೆನುತ್ತುಂ ನರೇಂದ್ರಂ
ನಿಡುದೋಳಿಂದಪ್ಪಿ [ಪ್ಪೆ] ಭೋಂಕಲ್ ಭಯದೆ ನಡುಗುತಂ ಕಣ್ಗಳಂ ಮುಚ್ಚಿ ತಳ್ತಿ
ರ್ದೊಡಲಂ ಪೊಕ್ಕಪ್ಪಳೆಂಬಂದದೆ ಬೆಡಗಿನೊಳಪ್ಪುತ್ತಮಾಗಳ್ ಬಿಡಲ್ಕಂ
ಪಿಡಿಯಲ್ಕಂ ತಾನದೇನೆಂದಱಿಯದಬಲೆ ನಾನಾ ರಸಾಕ್ರಾಂತೆಯಾದಳ್ ೭೧

ಚಂದ್ರಾಪೀಡನ ಬಳಿಗೆ ಬಂದಳು. ವ॥ ಅದಲ್ಲದೆ ೬೯. ಮಿಗಿಲಾದ ನಾಚಿಕೆಯು ಬಹಳಮಟ್ಟಿಗೆ ಬಿಟ್ಟುಹೋಯಿತು. ಇದ್ದ ಭಯವು ಹೋಯಿತು. ಹತ್ತಿರದಲ್ಲಿ ಯಾರೂ ಇರಲಿಲ್ಲ. ಆಗ ಅವಕಾಶ ಸಿಕ್ಕಿತು. ನೋಡಿದಳು, ಆಸೆಯುಂಟಾಯಿತು. ತನ್ನನ್ನು ತಾನು ಹತೋಟಿಗೊಳಿಸದೆ ಹೋದಳು. ಮೆಲ್ಲನೆ ಕಣ್ಣು ಅರಳಿತು. ಚಂದ್ರಾಪೀಡನನ್ನು ಆಕ್ರಮಿಸಿ ಬಿಗಿಯಾಗಿ ತಬ್ಬಿಕೊಂಡಳು ! ವ॥ ಆಗ ಅವಳ ಆಲಿಂಗನವೆಂಬ ಅಮೃತದ ಮಳೆಯಿಂದ ಚಂದ್ರಾಪೀಡನಿಗೆ ಜೀವಬಂದಿತು. ೭೦. ಮೃದುವಾಗಿ ಉಸಿರಾಡಲಾರಂಭಿಸಿದ ಅವನ ಹೃದಯವು ವಿಕಾಸವನ್ನು ಹೊಂದಿತು! ಆಗ ಅದು ಹರಡುತ್ತಿರುವ ಬೆಳದಿಂಗಳಿನ ಸಂಪರ್ಕವನ್ನು ಹೊಂದಿದ ಕನ್ನೈದಿಲೆಯಂತೆ ಶೋಭಿಸಿತು. ಬೆಳಗಿನ ಜಾವವು ಒದಗಲು ತಾವರೆಯು ಅರಳುವಂತೆ ಅವನ ಕಣ್ಣುಗಳು ಅರಳಿದುವು. ಸರ್ವಾಂಗಗಳೂ ಚೈತನ್ಯದಿಂದ ಕೂಡಿಕೊಂಡುವು. ಆ ರಾಜೇಂದ್ರಚಂದ್ರನು (ಚಂದ್ರಾಪೀಡನು) ಹಾಸಿಗೆಯಲ್ಲಿ ಮಲಗಿದ್ದು ಎಚ್ಚರಗೊಂಡ ರಾಜನಂತೆ ಎಚ್ಚೆತ್ತನು. ವ॥ ಹಾಗೆ ಮೈಮುರಿದು ಎಚ್ಚೆತ್ತು ತನ್ನನ್ನು ಗಟ್ಟಿಯಾಗಿ ತಬ್ಬಿಕೊಂಡಿದ್ದ ಕಾದಂಬರಿಯನ್ನು ನೋಡಿ, ೭೧. "ಇಷ್ಟುಕಾಲ ಕಾಲಕಳೆದಮೇಲೆ ನನ್ನ ಪುಣ್ಯದಿಂದ ಈ ಅವಕಾಶ ಸಿಕ್ಕಿತು" ಎಂದು ಹೇಳುತ್ತಾ, ಕೂಡಲೆ ತನ್ನ ನೀಳವಾದ ತೋಳುಗಳಿಂದ ಅವಳನ್ನು ಚಂದ್ರಾಪೀಡನು ತಬ್ಬಿಕೊಂಡನು. ಅವಳು ಭಯದಿಂದ ನಡುಗುತ್ತಾ ಕಣ್ಣು

ವ॥ ಅಂತಿರ್ದಳಂ ಮನುಜೇಂದ್ರಚಂದ್ರಂ ನೋಡಿ

ಭಯಮಂ ಮಾಣ್ ಜೀವಂ ನಿ
ನ್ನಯ ಪರಿರಂಭಣದೆ ಬಂದುದಲ್ತೆ ಸುಧಾಸೂ
ತಿಯ ಕಾಂತಿಯೊಳೊಗೆದಚ್ಚರ
ಸಿಯರನ್ವಯದಲ್ಲಿ ದೇವಿ ಜನಿಯಿಸಿದವಳಯ್ ೭೨

ವ॥ ಅದಲ್ಲದೆಯುಂ

ಇದು ಬೇಱೊಂದೆನ್ನ ತೇಜೋಮಯಮನೆ ಮೊದಲೊಳ್ ನಿತ್ಯಮೀ ದೇಹಮಂತ
ಲ್ಲದೆಯುಂ ಕಾದಂಬರೀದೇವಿಯ ಕರತಲಸಂಸ್ಪರ್ಶದಿಂ ತಾಳ್ದಿಕೊಂಡಿ
ರ್ಪುದೆನಲ್ಕೇವೇೞ್ವುದೀ ದೇಹದೊಳೆ ನೆರೆಗುವೆಂದಾದಲಂಪಿಂ ನಭೋಮ
ಧ್ಯದೊಳಿರ್ದಾನಂದೆ ಪೇೞ್ದಿನ್ನಯ ನುಡಿಯನದಂ ಭಾವಿಸಂಭೋಜನೇತ್ರೇ ೭೩

ವ॥ ಇನ್ನೆವರಂ ನಿನ್ನ ಕರತಲಸ್ಪರ್ಶದಿನಾಪ್ಯಾಯಿತ ಶರೀರನಾಗಿಯುಂ ಶಾಪ ದೋಷದಿಂ ಪ್ರತ್ಯುಜ್ಜೀವಿತನಾಗದಾನೀಗಳ್ ಮಹಾಶ್ವೇತೆಯ ಪ್ರಿಯತಮನಪ್ಪ ಮದೀಯ ವಯಸ್ಯಂಬೆರಸು ವಿಗತದೋಷನಾಗಿ ನಿನ್ನ ದೂಸಱೊಳಿಲ್ಲಿ ನಿಲಿಸಿದ ಮದೀಯ ದೇಹಕ್ಕವತರಿಸಿ ದೆನೆಂದು ಚಂದ್ರಮನನುಭೂತಪೂರ್ವಮಪ್ಪ ಗಂಭೀರಪೂರ್ವವಚನದಿಂ ನುಡಿದು ಗಂಧರ್ವ ರಾಜನಂದನೆಯನಾನಂದಿಸುತ್ತಮಿರ್ಪುದುಂ

ಗಳನ್ನು ಮುಚ್ಚಿ ತಬ್ಬಿಕೊಂಡಿದ್ದ ಚಂದ್ರಾಪೀಡನ ದೇಹವನ್ನೇ ಪ್ರವೇಶಿಸುತ್ತಿರುವವಳಂತೆ ಬೆಡಗಿನಿಂದ ಶೋಭಿಸುತ್ತಾ, ಅವನ ಶರೀರವನ್ನು ತಬ್ಬಿಕೊಂಡಿರುವುದಕ್ಕೂ ಬಿಡಿಸಿಕೊಳ್ಳು ವುದಕ್ಕೂ ಏನೂ ತೋಚದೆ ಬಗೆಬಗೆಯ ಮನೋಭಾವಗಳನ್ನು ತಾಳಿದಳು. ಟಿ॥ ಹರ್ಷ ಭಯ ಲಜ್ಜೆ ಜಡತೆ ಶಂಕೆ ವಿತರ್ಕ ಮೊದಲಾದ ಚಿತ್ತವೃತ್ತಿಗಳಿಂದ (ಭಾವ) ಅವಳ ಮನಸ್ಸು ಆವರಿಸಲ್ಪಟ್ಟಿದ್ದಿತು, ಎಂದು ತಾತ್ಪರ್ಯ. ವ॥ ಹಾಗೆ ಇದ್ದ ಕಾದಂ ಬರಿಯನ್ನು ಚಂದ್ರಾಪೀಡನು ನೋಡಿ ೭೨. "ದೇವಿ, ಕಾದಂಬರಿ, ಭಯವನ್ನು ಬಿಡು. ನಿನ್ನ ಆಲಿಂಗನದಿಂದ ನನಗೆ ಜೀವ ಬಂದಿತು. ನೀನು ಅಮೃತಮಯನಾದ ಚಂದ್ರನ ಕಿರಣಗಳಿಂದ ಹುಟ್ಟಿದ ಅಪ್ಸರೆಯರ ವಂಶದಲ್ಲಿ ಹುಟ್ಟಿದವಳಲ್ಲವೆ ? ವ॥ ಅದಲ್ಲದೆ ೭೩. ಈ ಚಂದ್ರಾಪೀಡನ ಶರೀರವು ಅಮೃತಕಿರಣನೆನಿಸಿದ ನನ್ನ ತೇಜಸ್ಸಿನಿಂದಲೇ ಉಂಟಾದುದು. ಆದ್ದರಿಂದ ಸ್ವಭಾವದಿಂದಲೇ ನಾಶವಾಗತಕ್ಕದ್ದಲ್ಲ. ಅದಲ್ಲದೆ ಕಾದಂ ಬರೀದೇವಿಯ ಕರತಲಸ್ಪರ್ಶದ ಪ್ರಭಾವದಿಂದ ಯಾವ ವಿಕಾರವನ್ನೂ ಹೊಂದದೆ ಇದ್ದಂತೆಯೆ ಇರುತ್ತದೆ. ಇನ್ನು ಹೇಳುವುದೇನು ? ನನ್ನ ಆತ್ಮವು ಈ ದೇಹದಲ್ಲೇ ಮತ್ತೆ ಕೂಡುತ್ತದೆ" ಎಂದು ಚಂದ್ರರೂಪನಾದ ನಾನು ನಿನ್ನ ಮೇಲಿನ ಪ್ರೀತಿಯಿಂದ ಹಿಂದೆಯೆ ಆಕಾಶಮಧ್ಯದಲ್ಲಿ ಕಾಣಿಸಿಕೊಂಡು ಹೇಳಿದ್ದೇನೆ. ಎಲೈ ತಾವರೆಯಂತೆ ಕಣ್ಣುಳ್ಳವಳೆ, ಆ ಮಾತನ್ನು ಈಗ ನೆನಪಿಗೆ ತಂದುಕೊ. ವ॥ ಇದುವರೆಗೂ ನಿನ್ನ ಕರತಲ ಸ್ಪರ್ಶದಿಂದ ತಂಪುಗೊಳಿಸಲ್ಪಟ್ಟರೂ ಶಾಪದೋಷದಿಂದ ಜೀವವನ್ನು ಪಡೆಯಲಿಲ್ಲ.

ಕುಳಿರುತ್ತಿರ್ಪಮೃತಾಂಶುಮಂಡಲದೊಳಿರ್ದಾದಂ ಸುಧಾಮೋದಮಂ
ತಳೆದಂಗಂ ಬೆಳರ್ಗೆಂ[ರ್ಗಂ]ಪನಾಳ್ದಿರೆ ಮಹಾಶ್ವೇತಾಂಗನಾಮೌಕ್ತಿಕಾ
ವಳಿ ವಕ್ಷಸ್ಥಲದೊಳ್ ತೆಱಿಂಬೊಳೆಯಲಾಗಳ್ ಪುಂಡರೀಕಂ ಕಪಿಂ
ಜಳಕಂ ಕೈಗುಡಲಿಪ್ಪಮಿತ್ರನೆ ಬರುತ್ತಿರ್ದಂ ಮರುನ್ಮಾರ್ಗದಿಂ ೭೪

ಮನದೊಂದಾಹ್ಲಾದದಿಂದಂ ಗಗನತಳದಿನೆಟ್ಟಿಂದು ರಾಜೇಂದ್ರಚಂದ್ರಾಂ
ಕನ ಪಾದಾಂಭೋಜಯುಗ್ಮಕ್ಕೆಱಗೆ ತೆಗೆದು ತಟ್ಕೈಸುತಂ ಪುಂಡರೀಕಾ
ಖ್ಯನಿಜಪ್ರಾಗ್ಜನ್ಮಸಂಬಂಧದಿನೊಗೆದ ಸುಹೃತ್ಸ್ನೇಹದಿಂ ಮತ್ತೆಯುಂ ಪಿಂ
ತನೆ ಬಂದ್ಯೆ ನೀನೆನುತ್ತಪ್ಪುಱಿೞೊಳೆ ಕೆಳೆಯನೊಳ್ ಮಾತನಾಡುತ್ತಮಿರ್ದಂ ೭೫

ವ|| ಅನ್ನೆಗಂ ಕೇಯೂರಕಂ ಚಿತ್ರರಥಹಂಸರ್ಗೆ ತನ್ಮಹೋತ್ಸವಮಂ ಪೇಟಲ್ಕೆ ಪೋದ ನಿತ್ತ ಮೃತ್ಯುಂಜಯಜಪವ್ಯಗ್ರನಾಗಿ ವಿಲಾಸವತೀಮಹಾದೇವಿವೆರಸಿರ್ದ ತಾರಾಪೀಡನಲ್ಲಿಗೆ ಮದಲೇಖೆ ಪರಿತಂದು ವೈಶಂಪಾಯನಂಬೆರಸು ಯುವರಾಜಂ ಪ್ರತ್ಯುಜ್ಜೀವಿತನಾದನೆಂದು

ಈಗ ನಾನು ಮಹಾಶ್ವೇತೆಯ ಪ್ರಿಯತಮನಾದ ನನ್ನ ಸ್ನೇಹಿತನೊಂದಿಗೆ ಶಾಪವಿಮೋಚನೆಯನ್ನು ಪಡೆದು ನಿನಗಾಗಿ ಇಲ್ಲಿ ಬಿಟ್ಟಿದ್ದ ನನ್ನ ಶರೀರಕ್ಕೆ ಅವತರಿಸಿದ್ದೇನೆ." ಎಂದು ಚಂದ್ರಮೂರ್ತಿಯು ಹಿಂದೆ ಪರಿಚಿತವಾಗಿದ್ದ ಗಂಭೀರವಾದ ಮಾತುಗಳಿಂದ ಹೇಳಿ ಗಂಧರ್ವರಾಜಪುತ್ರಿಯನ್ನು ಸಂತೋಷಪಡಿಸುತ್ತಿದ್ದನು. ಆಗ ೭೪. ಶೀತಳವಾದ ಚಂದ್ರಮಂಡಲದಲ್ಲಿದ್ದು ಬಹಳವಾಗಿ ಅಮೃತದ ಸುವಾಸನೆಯನ್ನು ಪಡೆದ ಶರೀರವು ಉಜ್ವಲವಾದ ಸುಗಂಧವನ್ನು ಬೀರುತ್ತಿರಲು, ಹಿಂದೆ ಮಹಾಶ್ವೇತೆಯು ಕೊಟ್ಟಿದ್ದ ಮುಕ್ತಾವಳಿಯು ಸ್ಪಷ್ಟವಾಗಿ ವಕ್ಷಸ್ಥಳದಲ್ಲಿ ಹೊಳೆಯುತ್ತಿರಲು ಪುಂಡರೀಕನು ಆಪ್ತ ಮಿತ್ರನಾದ ಕಪಿಂಜಲನ ಕೈಹಿಡಿದುಕೊಂಡು ಆಕಾಶಮಾರ್ಗದಿಂದ ಬರುತ್ತಿದ್ದನು. ಟಿ. ಇಲ್ಲಿ ಬೆಳರ್ಗೆಂಪು ಎಂಬ ಪಾಠವಿತ್ತು. ಇದು ಮೂಲ ಕಾದಂಬರಿಗೂ ಪ್ರಕೃತ ಸಂದರ್ಭಕ್ಕೂ ವಿರುದ್ಧವಾಗಿರುವುದರಿಂದ ಬೆಳರ್ಗಂಪು ಎಂಬ ಪಾಠವನ್ನು ಇಟ್ಟುಕೊಳ್ಳಲಾಗಿದೆ. ೭೫. ಆಗ ಪುಂಡರೀಕನು ಆನಂದದಿಂದ ಕೂಡಿ, ಆಕಾಶದಿಂದ ಕೆಳಗಿಳಿದು ಬಂದು ಚಂದ್ರಾವತಾರನಾದ ಚಂದ್ರಾಪೀಡನ ಅಡಿದಾವರೆಗಳಿಗೆ ನಮಸ್ಕರಿಸಿದನು. ಚಂದ್ರಾಪೀಡನು ಅವನನ್ನು ಬಾಚಿ ತಬ್ಬಿಕೊಂಡು "ಪುಂಡರೀಕ, ಹಿಂದಿನ ಜನ್ಮದ ಸಂಸ್ಕಾರದಿಂದ ಉಂಟಾದ ಮಿತ್ರಸ್ನೇಹದಿಂದ ಮತ್ತೆ ನನ್ನ ಹಿಂದೆಯೇ ಬಂದುಬಿಟ್ಟೆಯಲ್ಲ !" ಎಂದು ಸ್ನೇಹಿತನೊಡನೆ ಪ್ರೀತಿಪೂರ್ವಕವಾಗಿ ಮಾತಾಡುತ್ತಿದ್ದನು. ವ|| ಅಷ್ಟರಲ್ಲಿ ಕೇಯೂರಕನು ಚಿತ್ರರಥನಿಗೂ ಹಂಸನಿಗೂ ಆ ಪರಮಾನಂದದ ಸುದ್ದಿಯನ್ನು ತಿಳಿಸುವುದಕ್ಕಾಗಿ ಹೋದನು. ಈಕಡೆ ಮದಲೇಖೆಯು ಮೃತ್ಯುಂಜಯಜಪದಲ್ಲಿ ತತ್ಪರನಾಗಿದ್ದ ವಿಲಾಸವತೀಮಹಾರಾಣಿಯ ಜೊತೆಯಲ್ಲಿದ್ದ ತಾರಾಪೀಡನ ಹತ್ತಿರಕ್ಕೆ ಓಡಿ, ಬಂದು "ವೈಶಂಪಾಯನನೊಂದಿಗೆ ಯುವರಾಜನು ಪ್ರಾಣವನ್ನು ಪಡೆದಿದ್ದಾನೆ" ಎಂದು

ಪೇೞ್ವುದುಮತ್ಯಾನಂದರಭಸದಿಂ ವಿಲಾಸವತೀಮಹಾದೇವಿಯುಮಾರ್ಯ ಶುಕನಾಸನುಮಂ ಜರಾಶಿಥಿಲ ದೀರ್ಘಬಾಹುಯುಗಳದಿಂದಟ್ಟಿಱಿಕೊಳೆ ತೞ್ಕೈಸಿ

ಜರೆಯಿಂ ತಳ್ಪೊಯ್ದು ತನ್ನೊಳ್ ದೊರೆಯೆನಿಸಿದ ರಾಜರ್ಷಿಗಳ್ ಸುತ್ತುಗೊಂಡಿ
ರ್ದಿರೆ ಮುಯ್ಪಿಂದಾವಗಂ ಸಂಭ್ರಮದೆ ರುಚಿರವಲ್ಕೋತ್ತರೀಯಾಂಚಲಂ ಜೋ
ಲ್ದಿರೆ ಲೋಕಾಹ್ಲಾದಿ ಚೈತ್ರಾನಿಲವಿಲುಳಿತಪದ್ಮಾಕರಂ ತಾನಿದೆಂಬಂ
ತಿರೆ ತಾರಾಪೀಡದೇವಕ್ಷಿತಿಪತಿಯುತಿ ಬಂದಂ ಮಹೋತ್ಸಾಹದಿಂದಂ ೭೬

ವ|| ಅಂತತಿಹರ್ಷಪರವಶನಾಗಿ ಬರುತಿರ್ದ ತಂದೆಯಂ ಕಂಡು ರಾಜೇಂದ್ರಚಂದ್ರಂ ಸಾಷ್ಟಾಂಗಪ್ರಣಾಮಪುರಸ್ಸರಂ ಪಾದಾರವಿಂದಕ್ಕೆಱಗಿದಾಗಳ್

ನಿನಗಾಂ ತಂದೆಯೆನಾದೆನೆಮ್ಮ ಬಸುಱಿಂದಂ ಬಂದೆ ನೀನೆಂಬ ಪೆಂ
ಪೆನಗೇಂ ಸಾಲದೆ ಕಂದ ಚಂದ್ರನೆನಲುಂ ತ್ರೈಲೋಕ್ಯದಿಂ ವಂದನೀ
ಯನೆಯೆಂದಂದೆಮಗಲ್ತೆ ವಂದ್ಯನವೊಲೆಂದಾನಂದದಿಂದಾತ್ಮನಂ
ದನನಂ ಚಂದ್ರನನಪ್ಪಿದಂ ತೆಗೆದು ತಾರಾಪೀಡಚಕ್ರೇಶ್ವರಂ ೭೭

ವ|| ಅಂತು ತೞ್ಕೈಸೆ ನಿರ್ಭರಹರ್ಷಪರವಶೆಯಪ್ಪ ತಾಯುಮಂ ಚಂದ್ರಾಪೀಡಂ ನೋಡಿ

ಹೇಳಿದಳು. ಕೂಡಲೆ ತಾರಾಪೀಡನು ಅತ್ಯಾನಂದಭರಿತನಾಗಿ ರಭಸದಿಂದ ವಿಲಾಸವತಿಯನ್ನೂ ಶುಕನಾಸನನ್ನೂ ಮುಪ್ಪಿನಿಂದ ಕೃಶವಾದ ನೀಳವಾದ ತೋಳುಗಳಿಂದ ಪ್ರೀತಿಪೂರ್ವಕವಾಗಿ ತಬ್ಬಿಕೊಂಡನು. ೭೬. ರಾಜರ್ಷಿಯಾದ ತಾರಾಪೀಡನು, ಸರಿಸಮಾನರಾದ ವೃದ್ಧರಾಜರ್ಷಿಗಳು ಸುತ್ತುವರಿದು ಬರುತ್ತಿರಲಾಗಿ, ಹೋಗುವ ಸಡಗರದಲ್ಲಿ ಸುಂದರವಾದ ನಾರಿನ ಹೊದೆಯುವ ಬಟ್ಟೆಯ ಅಂಚು ಹೆಗಲಿನಲ್ಲಿ ಒಂದೇಸಮನೆ ಜೋಲಾಡುತ್ತಿರಲು ಬಹಳ ಉತ್ಸಾಹದಿಂದ ಬಂದನು. ಆಗ ಅವನು ಲೋಕಕ್ಕೆ ಆಹ್ಲಾದವನ್ನುಂಟುಮಾಡುವ ಚೈತ್ರಮಾಸದ ಗಾಳಿಯಿಂದ ಚಲಿಸುತ್ತಿರುವ ತಾವರೆಬಳ್ಳಿಯ ಗುಂಪಿನಂತಿದ್ದನು. ವ|| ಹಾಗೆ ಬಹಳ ಸಂತೋಷದಿಂದ ಪರವಶನಾಗಿ ಬರುತ್ತಿದ್ದ ತನ್ನ ತಂದೆಯನ್ನು ಕಂಡು ಚಂದ್ರಾಪೀಡನು ಸಾಷ್ಟಾಂಗಪ್ರಣಾಮಪೂರ್ವಕವಾಗಿ ಅವನ ಅಡಿದಾವರೆಗಳಿಗೆ ನಮಸ್ಕರಿಸಿದನು. ೭೭. ತಾರಾಪೀಡಚಕ್ರವರ್ತಿಯು "ಕಂದ, ನಾನು ನಿನಗೆ ತಂದೆಯಾಗಿದ್ದೇನೆ. ನಮ್ಮ ಬಸುರಿಂದ ನೀನು ಬಂದೆ ಎಂಬ ಒಂದು ಹಿರಿಮೆಯೇ ನನಗೆ ಸಾಲದೆ ? ನೀನು ಮೂರು ಲೋಕಗಳಿಂದಲೂ ವಂದನೀಯನಾದ ಚಂದ್ರನೆಂದ ಮೇಲೆ ನಮಗೂ ವಂದನೀಯನಂತೆಯೇ ಆಗಲಿಲ್ಲವೆ ?" ಎಂದು ಆನಂದದಿಂದ ತನ್ನ ಮಗನಾದ ಚಂದ್ರನನ್ನು ಬಾಚಿ ತಬ್ಬಿಕೊಂಡನು. ವ|| ಹಾಗೆ ಆಲಿಂಗಿಸಿಕೊಳ್ಳಲಾಗಿ ಅತ್ಯಧಿಕವಾದ ಹರ್ಷದಿಂದ ಪರವಶೆಯಾದ ತಾಯಿಯನ್ನು ಚಂದ್ರಾಪೀಡನು ನೋಡಿ

ಪೊಡೆವಡೆ ತಾಯ್ ಬಸುಱಿೊಳಗಿಡ
ಲೊಡರಿಸಿದಪಳೆರದೆ ಮಗುಟ್ದುವೆನೆ ಮೊಲೆವಾಲ್ಗಳ್
ಬಿಡದೆಚ್ಚುಪಾಯೆ ಪದಪಿಂ
ದಡಿಗಡಿಗಾತ್ಮಜನನಾದವಪ್ಪಿದಳಾಗಳ್ ೭೮

ವ॥ ಅನಂತರಂ ಮನೋರಮಾಸಮೇತನಪ್ಪ ಶುಕನಾಸನಲ್ಲಿಗೆ ವಂದು

ವಿನಯಭರದಿಂದೆ ನಮಿತಾ
ನನನೆನಿಸಿದ ಪುಂಡರೀಕನಂ ವೈಶಂಪಾ
ಯನನೆಂದವಧರಿಸಿಂ ನೀ
ವೆನುತಂ ಕಾಣಿಸಿದನಂದು ಚಂದ್ರಾಪೀಡಂ ೭೯

ವ॥ ಅಂತಾ ಸಮಯದೊಳ್ ಕಪಿಂಜಲಕಂ ಶುಕನಾಸನನಿಂತೆಂದಂ

ನಡಪಲ್ ಮುಂ ಪೆತ್ತೆವಾವೀತನನಿನಿತೆಡರಿಂ ಪುಂಡರೀಕಾಖ್ಯನಂ ಪೇ
ಟ್ವೊಡೆ ವೈಶಂಪಾಯನಂ ತನ್ನಯ ಮಗನದಱಿಂ ಸ್ನೇಹಮೊಟ್ಟೈಸೆ ತಮ್ಮ
ರ್ಡೆಗೀಗಳ್ ಮುಕ್ತಶಾಪಂ ನಿಜತನುವೆರಸಾನಂದದಿಂ ಬಂದನೀತಂ
ಗೊಡೆಯರ್ ತಾವೆಂದು ಪೇಟ್ದಟ್ಟಿದನಿದನೊಲವಿಂ ಶ್ವೇತಕೇತುಪ್ರತೀಶಂ ೮೦

ವ॥ ಎಂಬುದುಂ ವಿನಯವಿನಮಿತನಪ್ಪ ಪುಂಡರೀಕನ ಮೇಲೆ ಕೆಯ್ಯನಿಕ್ಕಿ ಶುಕನಾಸನೀತೆಂದಂ

೭೮. ನಮಸ್ಕಾರ ಮಾಡಲಾಗಿ, ತಾಯಿಯು ಅವನನ್ನು ತನ್ನ ಗರ್ಭದಲ್ಲಿ ಮತ್ತೆ ಸೇರಿಸಿಕೊಳ್ಳಲು ಪ್ರಯತ್ನಿಸುವಳೋ ಎಂಬಂತೆ ಮಗನನ್ನು ಮತ್ತೆ ಮತ್ತೆ ಪ್ರೀತಿಯಿಂದ ಗಾಢವಾಗಿ ತಬ್ಬಿಕೊಂಡಳು, ಪುತ್ರವಾತ್ಸಲ್ಯದಿಂದ ಅವಳ ಮೊಲೆಹಾಲು ಉಕ್ಕಿ ಹರಿಯಿತು. ವ॥ ಬಳಿಕ ಮನೋರಮೆಯೊಂದಿಗೆ ಕೂಡಿಕೊಂಡಿರುವ ಶುಕನಾಸನ ಸಮೀಪಕ್ಕೆ ಬಂದು ೭೯. "ವಿನಯದ ಭಾರದಿಂದ ಬಗ್ಗಿರುವ ಮುಖವುಳ್ಳ ಪುಂಡರೀಕನನ್ನು ವೈಶಂಪಾಯನನೆಂದೇ ನೀವು ತಿಳಿದುಕೊಳ್ಳಬೇಕು" ಎಂದು ಚಂದ್ರಾಪೀಡನು ಪುಂಡರೀಕನನ್ನು ಅವರಿಗೆ ತೋರಿಸಿದನು. ವ॥ ಆಗ ಕಪಿಂಜಲನು ಶುಕನಾಸನನ್ನು ಕುರಿತು ಹೀಗೆಂದನು. ೮೦. ಮಂತ್ರಿಶ್ರೇಷ್ಠ, ಶ್ವೇತಕೇತುಮಹರ್ಷಿಗಳು ಹೀಗೆ ಹೇಳಿ ಕಳಿಸಿದ್ದಾರೆ, ಏನೆಂದರೆ : ಪುಂಡರೀಕನೆಂದು ಹೆಸರುಳ್ಳ ಇವನನ್ನು ಇಷ್ಟು ವಿಪತ್ತುಗಳಿಂದ ತಪ್ಪಿಸಿ ಕಾಪಾಡುವುದಕ್ಕಾಗಿ ಮಾತ್ರ ಮೊದಲು ನಾವು ಮಗನಾಗಿ ಪಡೆದೆವು. ನಿಜವಾಗಿ ಹೇಳಬೇಕಾದರೆ ನಿಮ್ಮ ಮಗನಾದ ವೈಶಂಪಾಯನನೇ ಇವನು. ಈಗ ಶಾಪವಿಮುಕ್ತನಾಗಿ ನಿಜಶರೀರದಿಂದ ಕೂಡಿ, ಆನಂದದಿಂದ ಸ್ನೇಹವು ತುಂಬಿಬರಲು ನೀವು ಇರುವ ಸ್ಥಳಕ್ಕೇ ಬಂದಿದ್ದಾನೆ. ಇನ್ನು ನೀವೇ ಇವನಿಗೆ ಒಡೆಯರು ಎಂದು ಶ್ವೇತಕೇತು ಮಹರ್ಷಿಗಳು ನಿಮಗೆ ಪ್ರೀತಿಯಿಂದ ಹೇಳಿ ಕಳುಹಿಸಿದ್ದಾರೆ" ವ॥ ಎಂದು ಹೇಳಲಾಗಿ ವಿನಯದಿಂದ ಬಗ್ಗಿರುವ

ಸಕಲಾರಾಧ್ಯರ್ ತಾವಿಂ
ತು ಕರುಣದಿಂದೆನಗೆ ಬೆಸಸಿಯಟ್ಟಿದರೆಂದಂ
ದು ಕಪಿಂಜಲ ಪೇೞ್ದಿನ್ನಿಂ
ದೆ ಕೃತಾರ್ಥರುಮೊಳರೆ ಮತ್ತೆ ಭುವನತ್ರಯದೊಳ್ ೮೧

ವ॥ ಎಂದಿವು ಮೊದಲಾಗಿ ಪೂರ್ವಜನ್ಮಸ್ಮರಣಾಲಾಪಂಗಳಿಂದಂ ಪರಸ್ಪರಾಲೋಕನ ಸುಖೋತ್ಫುಲ್ಲಲೋಚನರಾಗಿ ಕಣ್ಣೊಳಿ ಬೆಳಗಪ್ಪುದುಂ ಪ್ರಭಾತಸಮಯದೊಳಖಿಳಗಂಧರ್ವ ಲೋಕದೊಡನೆ ಬರೆ ಮದಿರಾಮಹಾದೇವಿವೆರಸು ಚಿತ್ರರಥನುಂ ಗೌರಿವೆರಸು ಹಂಸನುಂ ಬಂದು ಜಾಮಾತೃದರ್ಶನೋತ್ಫುಲ್ಲವದನರ್ ತಾರಾಪೀಡ ಶುಕನಾಸರೊಳತಿಶ್ಲಾಘ್ಯಸಂಬಂಧಬಂಧುರ ವಚನಂಗಳಂ ನುಡಿಯುತ್ತವಾನಂದಪರಂಪರೆಯನೆಯ್ದಿ ಕಿಱಿದುಬೇಗಮಿರ್ದು ರಾಜಾಧಿರಾಜನಂ ಗಂಧರ್ವರಾಜನಿಂತೆಂದಂ

ಇವರ್ಗಾತ್ಮೋಚಿತಮಾಗಿ ಮುನ್ನಮೆ ವಿವಾಹಂ ಸಂದುದಿಂ ಲೌಕಿಕ
ವ್ಯವಹಾರಕ್ಕೆಸಗಲ್ಕೆವೇೞ್ಪುದದಱಿಂದಂ ಹೇಮಕೂಟಕ್ಕೆವಂ
ದು ವಿವಾಹೋತ್ಸವಮಂ ನೆಗೞ್ಚಿ ಪಿರಿದೊಂದುತ್ಸಾಹಮಂ ಮಾೞ್ಪುದಿ
ನ್ನೆವಗೆಂದಟ್ಕಱೊಳಿಂತಿದಂ ನುಡಿದನಾ ಗಂಧರ್ವಲೋಕೇಶ್ವರಂ ೮೨

ಪುಂಡರೀಕನ ಮೇಲೆ ಕೈಯಿಟ್ಟು ಶುಕನಾಸನು ಹೀಗೆ ಹೇಳಿದನು. ೮೧. "ಎಲೈ ಕಪಿಂಜಲಮುನಿಯೆ, ಜಗತ್ಪೂಜ್ಯರಾದ ಶ್ವೇತಕೇತುಮಹರ್ಷಿಗಳು ಹೀಗೆ ಕರುಣೆಯಿಂದ ಹೇಳಿಕಳುಹಿಸಿದ್ದಾರೆ ಎಂದಮೇಲೆ ನನಗಿಂತ ಧನ್ಯರಾದವರು ಈ ಮೂರು ಲೋಕಗಳಲ್ಲಿ ಮತ್ತಾರಿದ್ದಾರೆ, ಹೇಳಿ." ವ॥ ಹೀಗೆ ಇವೇ ಮೊದಲಾದ ಪೂರ್ವಜನ್ಮದ ನೆನಪಿನ ಮಾತುಕತೆಗಳಿಂದ ಕೂಡಿ ಪರಸ್ಪರ ಸಂದರ್ಶನದಿಂದುಂಟಾದ ಸುಖದಿಂದ ಅವರು ಅರಳಿದ ಕಣ್ಣುಳ್ಳವರಾಗಿರುವಾಗಲೇ ಬೆಳಗಾಯಿತು. ಬೆಳಗಿನ ಜಾವದಲ್ಲಿ ಮದಿರಾದೇವಿಯೊಂದಿಗೆ ಚಿತ್ರರಥನೂ ಗೌರಿಯೊಂದಿಗೆ ಹಂಸನೂ ಸಮಸ್ತ ಗಂಧರ್ವರೊಂದಿಗೆ ಬಂದರು. ಅವರು ಅಳಿಯಂದಿರನ್ನು ನೋಡಿದ್ದರಿಂದ ಅರಳಿದ ಮುಖವುಳ್ಳವರಾಗಿ ತಾರಾಪೀಡನೊಂದಿಗೂ ಶುಕನಾಸನೊಂದಿಗೂ ಶ್ರೇಷ್ಠವಾದ ನಂಟಿಗೆ ಉಚಿತವಾದ ಲೋಕಾಭಿರಾಮವಾದ ಮಾತುಗಳನ್ನಾಡುತ್ತಾ ಆನಂದಪರಂಪರೆಯನ್ನು ಅನುಭವಿಸುತ್ತಿದ್ದರು. ಸ್ವಲ್ಪಕಾಲ ಕಳೆದ ಮೇಲೆ ತಾರಾಪೀಡಚಕ್ರವರ್ತಿಯನ್ನು ಕುರಿತು ಗಂಧರ್ವರಾಜನು ಹೀಗೆ ಹೇಳಿದನು. ೮೨. "ಇವರಿಗೆ ಪರಸ್ಪರ ಮನಸ್ಸು ಒಪ್ಪಿ ಅಂತರಂಗದಲ್ಲಿ ಮೊದಲೇ ಮದುವೆಯಾಗಿಬಿಟ್ಟಿದೆ. ಆದರೂ ಲೌಕಿಕ ವ್ಯವಹಾರ ಕ್ಕಾಗಿ ಬಹಿರಂಗವಾಗಿ ಮಾಡಬೇಕಾಗಿದೆ. ಆದ್ದರಿಂದ ನನ್ನ ಮೇಲಿನ ಪ್ರೀತಿಯಿಂದ ಹೇಮಕೂಟಕ್ಕೆ ಬಂದು ವಿವಾಹಮಹೋತ್ಸವವನ್ನು ನೆರವೇರಿಸಿ ನಮಗೆ ಉಲ್ಲಾಸ

ವ॥ ಅಂತು ನುಡಿಯೆ ತಾರಾಪೀಡನರೇಂದ್ರನಿಂತೆಂದಂ

ಭವದೀಯ ಶ್ಲಾಘ್ಯಸಂಬಂಧಮೆ ದಲಿದುವೆ ಕೈಸಾರ್ದುದೀದೆಂದು ಪೇಟ್ದಿ
ನ್ನೆವಗಿಲ್ಲಂ ಬಿಟ್ಟು ಮತ್ತಂ ಸುಖಮೆನಿಪುದದೇಂ ಪುತ್ರನಿಕ್ಷಿಪ್ತ ರಾಜ್ಯ
ರ್ಗವಗಿಂ ಮತ್ತೀಟ್ಟಿರಲ್ಕಾಗದು ಸದನಸುಖಾವಾಪ್ತಿಯಂ ಮಾಡು ನೀನೆ
ಲ್ಲವನತ್ಯುತ್ಸಾಹದಿಂ ನಿನ್ನಳಿಯನನೊಡಗೊಂಡೆಯ್ದು ಗಂಧರ್ವರಾಜಾ ೮೩

ವ॥ ಎಂಬುದುಂ ನಿಮಗೆಂತುಸಂತಸಮಂತೆ ನೆಗಟ್ಚೆನೆಂದು ರಾಜೇಂದ್ರಚಂದ್ರಂಬೆರಸು ತ್ಸಾಹಾನ್ವಿತನಾಗಿ ನಾನಾ ಧ್ವಜವಿರಾಜಿತಕೂಟಮುಮುದ್ಘಾಟಿತ ಸಕಲ ವಾತಾಯನಕವಾಟಮುಮಪ್ಪ ಹೇಮಕೂಟಕ್ಕೆವಂದು ಮಂಗಳಾನಕರವಂಗಳಿಂದೆಸೆವ ವಿವಾಹಮಂಟಪಕ್ಕೆೃತರ್ಪುದುಮಿತ್ತ ಕೃತ ಸಕಲಮಂಗಳವ್ಯಾಪಾರನುಮಾಗಿ

ಎಱೆಯುಂ ತ್ರೈಲೋಕ್ಯರಾಜ್ಯಕ್ಕೆನಿಸಿದ ವಿಭುವಿಂಗೇನನಿತ್ತೀಗಳೊಲ್ದಾ
ನೆಱೆವೆಂ ಕಾದಂಬರೀದೇವಿಗೆ ಬೞಿವೞಿ ಗಂಧರ್ವರಾಜ್ಯಂ ದಲೆಂದ
ಟ್ಕೞಿನಿಂ ಕೈಕೊಳ್ವುದೆಂದಾತ್ಮಜೆಯನೊಲವಿನೀದಿತ್ತು ಸಾಕ್ಷ್ಯಕ್ಕೆ ಕೈನೀ
ರೆಱೆದಂ ರಾಜೇಂದ್ರಚಂದ್ರಂಗೊದವಿದ ಪದಪಿಂದಂದು ಗಂಧರ್ವರಾಜಂ ೮೪

ವನ್ನುಂಟುಮಾಡಬೇಕು" ಎಂದು ಗಂಧರ್ವರಾಜನು ಕೇಳಿಕೊಂಡನು. ವ॥ ಅದಕ್ಕೆ ತಾರಾಪೀಡನು ೮೩. "ಗಂಧರ್ವರಾಜ, ನಮಗೆ ನಿಜವಾಗಿಯೂ ಈ ನಿಮ್ಮ ಉತ್ತಮೋತ್ತಮವಾದ ಬೀಗತನವು ಈಗ ದೊರಕಿತು. ಇಷ್ಟು ಹೇಳಿದ ಮೇಲೆ ನಮಗೆ ಈ ವಾನಪ್ರಸ್ಥಾಶ್ರಮವನ್ನು ಬಿಟ್ಟು ಬೇರೆ ಸುಖವೆಲ್ಲಿದೆ ? ಮಗನಿಗೆ ರಾಜ್ಯಭಾರವನ್ನು ವಹಿಸಿ ಕೊಟ್ಟ ಮೇಲೆ ನಾವು ಮತ್ತೆ ಪುರಪ್ರವೇಶ ಮಾಡಬಾರದು. ಆದ್ದರಿಂದ ನೀನೆ ನಿನ್ನ ಅಳಿಯನನ್ನು ಕರೆದುಕೊಂಡುಹೋಗಿ ಮನೆಯನ್ನು ಸುಖವಾಗಿ ಸೇರಿ ನೆರವೇರಿಸಬೇಕಾದುದನ್ನೆಲ್ಲ ಉತ್ಸಾಹದಿಂದ ನೆರವೇರಿಸು" ಎಂದನು. ವ॥ ತಾರಾಪೀಡನು ಹೀಗೆ ಹೇಳಲಾಗಿ ಚಿತ್ರರಥನು "ನಿಮಗೆ ಹೇಗೆ ಸಂತೋಷವೋ ಹಾಗೆಯೆ ಮಾಡೋಣ" ಎಂದು ಚಂದ್ರಾಪೀಡನೊಂದಿಗೆ ಉತ್ಸಾಹಭರಿತನಾಗಿ ಅನೇಕ ಧ್ವಜಗಳಿಂದ ಶೋಭಿಸುವ ಶಿಖರಗಳುಳ್ಳ, ಎಲ್ಲಾ ಕಿಟಕಿಯ ಬಾಗಿಲುಗಳನ್ನೂ ತೆರೆದಿರುವ ಹೇಮಕೂಟಪರ್ವತಕ್ಕೆಬಂದು ಮಂಗಳಕರವಾದ ತಮಟೆಧ್ವನಿಗಳಿಂದ ಶೋಭಿಸುವ ಕಲ್ಯಾಣಮಂಟಪಕ್ಕೆ ಬಂದು ಮಾಡಬೇಕಾದ ಸಮಸ್ತ ಮಂಗಳಕಾರ್ಯಗಳನ್ನೂ ನೆರವೇರಿಸಿದನು. ೮೪. "ಮೂರುಲೋಕಗಳಿಗೂ ಒಡೆಯನೆನಿಸಿರುವ ದೇವರಿಗೆ ಯಾವ ವರದಕ್ಷಿಣೆಯನ್ನು ಕೊಟ್ಟು ಪ್ರೀತಿಯಿಂದ ಧಾರೆಯೆರೆದು ಕೊಡಲಿ ? ಅದು ಆಗದ ಮಾತು. ಆದ್ದರಿಂದ ಕಾದಂಬರಿಗೆ ಮಾತ್ರ ಈ ಗಂಧರ್ವರಾಜ್ಯವನ್ನೇ ನಿಜವಾಗಿಯೂ ಬಳುವಳಿಯಾಗಿ ಕೊಟ್ಟಿದ್ದೇನೆ, ಪ್ರೀತಿಯಿಂದ ಪರಿಗ್ರಹಿಸಬೇಕು" ಎಂದು ಹೇಳುತ್ತಾ ಗಂಧರ್ವರಾಜನು ತನ್ನ ಮಗಳಾದ ಕಾದಂಬರಿಯನ್ನು ಆ ರಾಜಾಧಿರಾಜನಾದ ಚಂದ್ರಾಪೀಡನಿಗೆ ಪ್ರೀತಿಪೂರ್ವಕವಾಗಿ ಕೊಟ್ಟು ಕೇವಲ ಸಾಕ್ಷೀಭೂತನಾಗಿ ಬಹಳ ಉತ್ಸಾಹದಿಂದ ಶುಭದಿವಸದಲ್ಲಿ ಧಾರೆಯೆರೆದು ಕೊಟ್ಟನು.

ಪಿರಿದುಂ ವಿಭೂತಿಯಿಂ ಚಿ
ತ್ರರಥಾನುಜನೆನಿಪ ಹಂಸನುಂ ನಿಜರಾಜ್ಯಂ
ಬೆರಸು ಮಹಾಶ್ವೇತೆಯನಾ
ದರದಿಂದಂ ಪುಂಡರೀಕದೇವಂಗಿತ್ತಂ ೮೫

ವ॥ ಅಂತು ವಿವಾಹಮಹೋತ್ಸವಮಂ ರಾಜೇಂದ್ರಚಂದ್ರನುಂ ಪುಂಡರೀಕನುಮಪ್ಪು ಕೆಯ್ದು

ದೊರೆಕೊಂಡುದಮಂ ಬಯಸಿದ
ತರುಣಿಯರೊಳ್ ಕೂಟಮನಿತಱಿಂದಮೆ ನೋಡಲ್
ಚರಿತಾರ್ಥರಾವೆ ಕಿಂಚಿ
ತ್ಕರವನ್ಯಮೆನುತ್ತಮಾತ್ಮಗತದೊಳ್ ಬಗೆದರ್ ೮೬

ವ॥ ಅನಂತರಮಭಿವಾಂಛಿತ ಪ್ರಾಣೇಶ್ವರಪ್ರಾಪ್ತಿಸಮುತ್ಸುಕೆಯುಮಖಿಲ ಪರಿವಾರ ಪರಿವೃತೆಯುಮಪ್ಪ ಕಾದಂಬರಿ ವಿಷಾದಮನಪ್ಪುಕೆಯ್ದು ಮನುಜೇಂದ್ರಚಂದ್ರನಂ ನೋಡಿ

ಜೀವಂ ಬಂದುದು ಸಕಲ
ರ್ಗೀವೇೞ್ಗೆಂ ಪತ್ರಲೇಖೆಯಂ ಕಿಡಪೆವಿ
ಲ್ಲಾ ವಧುಪೂರ್ವಳದೆಲ್ಲಿದ
ಳಾವೆಡೆಯೊಳ್ ನಿಂದಳರಸ ಪೇೞೆನಗೀಗಳ್ ೮೭

ವ॥ ಎನೆ ಮನುಜೇಂದ್ರಚಂದ್ರನಿಂತೆಂದಂ

೮೫. ಚಿತ್ರರಥನ ತಮ್ಮನಾದ ಹಂಸನು ಬಹಳ ವಿಜೃಂಭಣೆಯಿಂದ ಪುಂಡರೀಕನಿಗೆ ತನ್ನ ರಾಜ್ಯಸಮೇತವಾಗಿ ಮಹಾಶ್ವೇತೆಯನ್ನು ಆದರದಿಂದ ಧಾರೆಯೆರೆದು ಕೊಟ್ಟನು. ವ॥ ಈ ರೀತಿಯಲ್ಲಿ ಚಂದ್ರಾಪೀಡಮಹಾರಾಜನೂ ಪುಂಡರೀಕನೂ ವಿವಾಹ ಮಹೋತ್ಸವದ ಆನಂದವನ್ನು ಅನುಭವಿಸಿದರು. ೮೬. "ತಮಗೆ ಈಗ ಲಭಿಸಿದ ವರನನ್ನೇ ಪಡೆಯಬೇಕೆಂದು ಹಂಬಲಿಸುತ್ತಿದ್ದ ಯುವತಿಯರೊಂದಿಗೆ ಮದುವೆಯಾಯಿತಲ್ಲ! ಹಾಗೆ ನೋಡಿದರೆ, ಇಷ್ಟರಿಂದಲೆ ನಾವು ಧನ್ಯರಾಗಿದ್ದೇವೆ. ಉಳಿದ ಈ ಬಳುವಳಿಗಳೆಲ್ಲ ಅಲ್ಪವಿಷಯ!" ಎಂದು ಆ ಅಳಿಯಂದಿರಿಬ್ಬರೂ ಮನಸ್ಸಿನಲ್ಲಿ ಭಾವಿಸಿದರು. ವ॥ ಬಳಿಕ ತಾನು ಬಯಸಿದ ಪ್ರಾಣಕಾಂತನ ಪ್ರಾಪ್ತಿಯಿಂದ ಸಂತೋಷಭರಿತಳಾದ ಸಮಸ್ತ ಪರಿವಾರಸಮೇತಳಾದ ಕಾದಂಬರಿಯು ಚಂದ್ರಾಪೀಡನನ್ನು ನೋಡಿ ವ್ಯಥೆಯಿಂದ, ೮೭. "ಅರಸ, ಎಲ್ಲರಿಗೂ ಹೋದ ಪ್ರಾಣ ಬಂತು, ಪತ್ರಲೇಖೆಯೊಬ್ಬಳು ನಮ್ಮ ಮಧ್ಯೇ ಇಲ್ಲವಲ್ಲ! ಏನು ಹೇಳಲಿ! ಆ ತರುಣಿ ಹಿಂದಿನ ಜನ್ಮದಲ್ಲಿ ಯಾರಾಗಿದ್ದಳು? ಈಗ ಎಲ್ಲಿದ್ದಾಳೆ? ಎಂಬುದನ್ನು ನನಗೆ ತಿಳಿಸು." ವ॥ ಎಂದು ಕೇಳಿ

ಸಮಸುಖದುಃಖಮಂ ತಳೆವ ರೋಹಿಣಿ ತಾನಿವನಿತ್ತ ಶಾಪದಾ
ಕ್ರಮುವನೆ ಕೇಳ್ದು ಮಾಣಿಸೆಯುಃಮೆನ್ನಯಃ ಮೋಹದೆ ಮರ್ತ್ಯರೂಪದಿಂ
ದಮೆ ಬೞಿಸಂದಳೊಲ್ದು ಮಗುೞ್ದುಂ ಬರೆ ಪಿಂತೆಯೆ ಮತ್ತೆ ಬಲ್ಪಿನಿಂ
ದಮೆ ನಿಲಿಸಿಟ್ಟೆನೆಯ್ದೆ ನಿಜಲೋಕದೊಳಾಕೆಯನಲ್ಲಿ ಕಂಡಪೈ ೮೮

ಎಂದು ನರೇಂದ್ರಚಂದ್ರನುಸಿರಲ್ ವಧುರೋಹಿಣಿ ಬೆನ್ನೊಳಂತೆ ಬಂ
ದಂದಮನಾತ್ಮವಲ್ಲಭನೊಳಾದನುರಕ್ತತೆಯಂ ಮಹತ್ವಮಂ
ಸಂದ ಪತಿವ್ರತಾಚರಣಮಂ ಋಜುವೃತ್ತಿಯನಂದು ಭಾವಿಸು
ತ್ತೊಂದುಮನೆಂದಳಿಲ್ಲ ಬೞಿಯಂ ಪಿರಿದುಂ ತನಗಾದ ಲಜ್ಜೆಯಿಂ ೮೯

ಎರಡುಂ ಜನ್ಮಂಗಳೊಳ್ ಬೇರ್ವರಿದ ಬಯಕೆ ಕೂಡಿತ್ತದೆಂತಾನುಮೀಗಳ್
ನೆರೆಯಲ್ಕೀವೇೞ್ಕುಮೆಂಬಂತನುಚರನವೊಲಾಲೋಕಮಂ ಪತ್ತುವಿಟ್ಟೋ
ಸರಿಸಿತ್ತಾವೇಗದೊಳ್ ವಾಸರಮನುಚರಿಯುಪೊಲ್ ಸಂಜೆ ಸಂಜಾತರಕ್ತಾಂ
ಬರದಿಂದಂ ಬಾಸಣಿಪ್ಪಂತೆಸೆದುದಸದಳಂ ಸಾಂದ್ರಶೋಣಾಂಶುಜಾಲಂ ೯೦

ಕೊಂಡಳು. ಚಂದ್ರಾಪೀಡನು ಹೀಗೆಂದನು. ೮೮. "ಅವಳು ತನ್ನ ಸುಖದುಃಖಗಳಿಗೆ ಸಮಭಾಗಿನಿಯಾದ ರೋಹಿಣಿ ! ನನಗೆ ಈ ಪುಂಡರೀಕನು ಕೊಟ್ಟ ಶಾಪವನ್ನು ಕೇಳಿ, ನಾನು ಎಷ್ಟು ಬೇಡವೆಂದರೂ ಕೇಳದೆ ನನ್ನ ಮೇಲಿನ ಪ್ರೀತಿಯಿಂದ ಮನುಷ್ಯಜನ್ಮ ವನ್ನೆತ್ತಿ ನನ್ನ ಜೊತೆಯಲ್ಲಿದ್ದಳು. ಈಗಲೂ ಮತ್ತೆ ಅದೇ ಪ್ರೀತಿಯಿಂದ ನನ್ನ ಹಿಂದೆಯೆ ಬರಲು ಹೊರಟಳು. ಮತ್ತೆ ನಾನು ಬಲಾತ್ಕಾರದಿಂದ ನನ್ನ ಲೋಕದಲ್ಲೇ ಅವಳನ್ನು ಇರುವಂತೆ ಹೇಳಿ ಬಂದಿದ್ದೇನೆ. ನೀನು ಅವಳನ್ನು ಅಲ್ಲಿಯೆ ನೋಡಬಹುದು!" ೮೯. ಹೀಗೆ ಆ ರಾಜೇಂದ್ರನು ಹೇಳಲು ಕಾದಂಬರಿಯು "ರೋಹಿಣಿಯು ತನ್ನ ಪತಿಯ ಹಿಂದೆಯೇ ಬಂದುದನ್ನೂ, ಅವಳಿಗೆ ಪತಿಯಲ್ಲಿರುವ ಅನುರಾಗವನ್ನೂ, ಅವಳ ಹಿರಿಮೆ ಯನ್ನೂ, ಪತಿವ್ರತಾಧರ್ಮವನ್ನೂ, ಸರಳ ಸ್ವಭಾವವನ್ನೂ ಅರ್ಥಮಾಡಿಕೊಂಡಳು. ಅನಂತರ ತಾನು ಗುಣಗಳಲ್ಲಿ ಅವಳನ್ನು ಸರಿಗಟ್ಟಲಾರೆನೆಂದು ಬಹಳ ನಾಚಿಕೆಯಿಂದ ಏನೂ ಮಾತಾಡಲಿಲ್ಲ. ೯೦. "ಈ ನೂತನ ದಂಪತಿಗಳಿಗೆ ಎರಡು ಜನ್ಮಗಳಲ್ಲಿ ಬೇರು ಬಿಟ್ಟಿದ್ದ ಬಯಕೆಯು ಹೇಗೋ ಈಗ ಕೈಗೂಡಿದೆ. ಇನ್ನು ಮೇಲೆ ಇಬ್ಬರೂ ಸೇರ ಬೇಕು ಎಂದು ತಿಳಿದುಕೊಂಡು ಚಂದ್ರಾಪೀಡನ ಮನಸ್ಸನ್ನು ಅರಿತುಕೊಂಡ ಸೇವಕನಂತೆ ಆ ಲೋಕವನ್ನು ಬಿಟ್ಟು (೧. ಕಾಣಿಸಿಕೊಳ್ಳುವುದನ್ನು ಬಿಟ್ಟು ೨. ಪ್ರಕಾಶ ವನ್ನು ಬಿಟ್ಟು) ಹೊರಟುಹೋಯಿತು. ಆಮೇಲೆ ಸಂಜೆ ಸೇವಕಿಯಂತೆ ಕೆಂಪಾದ ಆಕಾಶವೆಂಬ ಬಟ್ಟೆಯಿಂದ ಅವರ ಏಕಾಂತವನ್ನು ಯಾರೂ ನೋಡದಿರಲೆಂದು ಪರದೆ

ವ॥ ತದನಂತರಂ

ಅನುರಕ್ತನಿಜಕರಸ್ಪ
ರ್ಶನದಿಂ ವನಿತಾಜನಕ್ಕೆ ರಾಗೋದ್ರೇಕಂ
ಜನಿಯಿಸುತಿರೆ ಕುವಲಯಪತಿ
ಯನುಕ್ರಮೋದಯವಿಲಾಸಮೇನೊಪ್ಪಿದುದೋ ೯೧

ವ॥ ಅಂತಾ ರಜನಿಯೊಳ್ ರಾಜೇಂದ್ರಚಂದ್ರಂ ಸುರತಸುಖಾಂಬೋಧಿಯೊಳ್ ಮೂಡಿ ಮುೞುಗಾಡಿ ಮಱುದಿವಸಂ ಮಾವಂದಿರಂ ಬೀೞ್ಕೊಂಡು ವಧೂಸಮೇತಂ ಪರಿತ್ಯಕ್ತ ಸಕಲ ಕಾರ್ಯರಪ್ಪ ಮಾತಾಪಿತೃಗಳಲ್ಲಿಗೆವಂದು ತತ್ಪಾದಪ್ರಣತನಾಗಿ ತದೀಯಾಶೀರ್ವಾದಶತಸಹ ಸ್ರಂಗಳಂ ತಲೆಯೊಳಾಂತು ನಿಜಸಮಾನೀಕೃತ ಸಕಲ ರಾಜಲೋಕಸಮನ್ವಿತಮು[ನು]ಜ್ಜಯಿನ್ಯ ಭಿಗಮನಕೃತಾಭ್ಯನುಜ್ಞನಾಗಿ

ನಯದಿಂ ಗಂಧರ್ವರಾಜಾತ್ಮಜೆಯೆಡದೊಳಿರಲ್ ಪುಂಡರೀಕಂ ಮಹಾಶ್ವೇ
ತೆಯ ಸೋಂಕಿಂದಾದಲಂಪಿಂ ಬಲದೋಳಿರೆ ಪೌರಾವನೀಪಾಲಪುತ್ರ
ಪ್ರಯುತಂ ನಾನಾ ವಿಮಾನಾವಳಿ ಮಣಿಕಿರಣವ್ಯಾಪ್ತ ದಿಕ್ಚಕ್ರನುಜ್ಜ್ವ
ನಿಯನಂದೆಯ್ತಂದು ಪೊಕ್ಕಂ ವಿಬುಧಕುಲಾನಂದಚಂದ್ರಂ ನರೇಂದ್ರಂ ೯೨

ಹಾಕುತ್ತಾಳೋ ಎಂಬಂತೆ ಬಹಳ ದಟ್ಟವಾದ ಕೆಂಪುಕಾಂತಿಯಿಂದ ಶೋಭಿಸುತ್ತಿತ್ತು. ವ॥ ಆಮೇಲೆ ೯೧. ಅನುರಕ್ತವಾದ (೧. ಪ್ರೀತಿಯಿಂದ ಕೂಡಿರುವ ೨. ಕೆಂಪಾದ) ತನ್ನ ಕಿರಣವೆಂಬ ಕೈಗಳ ಸ್ಪರ್ಶದಿಂದ ಸ್ತ್ರೀಯರಿಗೆ ಹೆಚ್ಚಾಗಿ ಕಾಮೋದ್ರೇಕವುಂಟಾಗು ತ್ತಿರಲು ಚಂದ್ರನು ಕ್ರಮವಾಗಿ ಉದಯಿಸುತ್ತಿದ್ದನು. ಆ ವೈಖರಿಯು ಬಹಳ ರಮ್ಯ ವಾಗಿತ್ತು. ವ॥ ಆ ರಾತ್ರಿಯಲ್ಲಿ ಚಂದ್ರಾವತಾರನಾದ ಚಂದ್ರಾಪೀಡನು ಸಂಭೋಗಸುಖ ವೆಂಬ ಸಮುದ್ರದಲ್ಲಿ ಮುಳುಗಾಡಿದನು. ಮರುದಿವಸ ಮಾವನಿಂದ ಬೀಳ್ಕೊಂಡು ಕಾದಂಬರೀಸಮೇತನಾಗಿ ಐಹಿಕವ್ಯಾಪಾರವನ್ನೆಲ್ಲ ತೊರೆದಿರುವ ತಾಯಿ ತಂದೆಗಳ ಸಮೀಪಕ್ಕೆ ಬಂದನು. ಅವರಿಗೆ ನಮಸ್ಕಾರವನ್ನು ಮಾಡಿ, ಅವರ ಅನಂತಾಶೀರ್ವಾದ ಗಳನ್ನು ತಲೆಯಲ್ಲಿ ಧರಿಸಿ, ದಾನಮಾನಗಳಿಂದ ತನ್ನ ಮಟ್ಟಕ್ಕೆ ಏರಿಸಲ್ಪಟ್ಟ ಸಕಲ ರಾಜ ಸಮೂಹದಿಂದ ಕೂಡಿದವನಾಗಿ ಉಜ್ಜಯಿನಿಗೆ ಪ್ರಯಾಣಮಾಡಲು ಅಪ್ಪಣೆಯನ್ನು ಪಡೆದುಕೊಂಡನು. ೯೨. ವಿನಯದಿಂದ ಕೂಡಿದ ಕಾದಂಬರಿಯು ಎಡಗಡೆಯಿರಲು, ಮಹಾಶ್ವೇತೆಯ ಸ್ಪರ್ಶದಿಂದ ಆನಂದಿತನಾದ ಪುಂಡರೀಕನು ಬಲಗಡೆಯಿರಲು, ಪಟ್ಟಣಿ ಗರು ಮತ್ತು ಅರಸುಮಕ್ಕಳಿಂದ ಕೂಡಿ, ವಿಮಾನಪಂಕ್ತಿಯ ರತ್ನಕಿರಣಗಳಿಂದ ದಿಗಂತ ವನ್ನೆಲ್ಲ ತುಂಬುತ್ತಾ, ವಿದ್ವಾಂಸರೆಂಬ ಕನ್ನೈದಿಲೆಗಳಿಗೆ ಸಂತೋಷವನ್ನುಂಟುಮಾಡುವ

ಅವಿಭಕ್ತಸ್ನೇಹಮಂ ರೋಹಿಣಿಯನೊಸೆಯಿಸಲ್ . ಸೋಮಲೋಕಕ್ಕೊರ್ಮೊ
ರ್ಮೆ ವಯಸ್ಯಂ ಪುಂಡರೀಕಂಬೆರಸಮಳಸರಃಪಂಕಜಾವೋದ ಲಕ್ಷ್ಮೀ
ಭವನಕ್ಕೊರ್ಮೊರ್ಮೆ ಕಾದಂಬರಿಯೊಲವಿನೊಳಂ ಹೇಮಕೂಟಕ್ಕದೊರ್ಮೊ
ರ್ಮೆ ವಿಶೇಷಸ್ನೇಹಮಂ ಮಾಡುವನನುದಿನಮೆಟ್ಟಂದು ರಾಜೇಂದ್ರಚಂದ್ರಂ ೯೩

ಪ್ರಿಯದಿಂ ರಾಜೇಂದ್ರಚಂದ್ರಂ ಪ್ರಿಯತಮೆಯೆನೆ ಸಂದಿರ್ದ ಕಾದಂಬರೀಕಾಂ
ತೆಯೊಳಾ ಕಾದಂಬರೀಕಾಂತೆಯುವೊಸೆದು ಮಹಾಶ್ವೇತೆಯೊಳ್ ತನ್ಮಹಾಶ್ವೇ
ತೆಯನೊಲ್ದಾ ಪುಂಡರೀಕಾಹ್ವಯನಮಲತರಪ್ರೇಮದಿಂ ಪುಂಡರೀಕಾ
ಹ್ವಯನಂ ರಾಜೇಂದ್ರಚಂದ್ರಾಂಕನುಮಗಲದೆ ಕೂಡಿರ್ದರುತ್ಸಾಹದಿಂದಂ ೯೪

ಕ್ಷಿತಿಯೊಳ್ ಸೌವರ್ಣಕಾಂತಿಪ್ರಸರಮಸದೆಳಂ ಪರ್ವೆ ಸಂದಿರ್ದುದಂತಾ
ಕೃತಿ ಮುನ್ನಂ ಬಾಣವಾಣೀಪ್ರಿಯನ ವಚನದಿಂ ಮತ್ತೆ ಕರ್ಣಾಟಭಾಷಾ
ಚತುರತ್ವಂ ಪೊರ್ದಿ ಕಾದಂಬರಿ ಪಸರಿಸಿ ರಾಜೇಂದ್ರಚಂದ್ರಾಂಕನೊಳ್ ಸಂ
ಗತಿವೆತ್ತಾದಂ ತ್ರಿಲೋಕೀ ಸಹಚರಿಯೆನೆ ತಾಂ ಸಂದುದಾಚಂದ್ರತಾರಂ ೯೫

ಚಂದ್ರಸ್ವರೂಪನಾದ ಚಂದ್ರಾಪೀಡಮಹಾರಾಜನು ಉಜ್ಜಯಿನಿಗೆ ಪ್ರಯಾಣ ಬೆಳೆಸಿದನು. (ಟಿ). ಇಲ್ಲಿ ವಿಬುಧ ಎಂಬ ಶಬ್ದಕ್ಕೆ ಶ್ಲೇಷೆಯಿಂದ ದೇವತೆ ಎಂಬ ಅರ್ಥವೂ ತೋರುವುದು. ಚಂದ್ರನು ದೇವತೆಗಳಿಗೆ ಅಮೃತವನ್ನು ಒದಗಿಸುವುದರಿಂದ ಅವರಿಗೆ ಸಂತೋಷವನ್ನುಂಟುಮಾಡುವುದು ಸಮಂಜಸವಾಗುತ್ತದೆ. ೯೩. ಚಂದ್ರಾವತಾರನಾದ ಚಂದ್ರಾಪೀಡನು ಒಮ್ಮೆ ರೋಹಿಣಿಯನ್ನು ಸಂತೋಷಪಡಿಸಲು ಚಂದ್ರಲೋಕಕ್ಕೂ, ಒಮ್ಮೆ ಗೆಳೆಯನಾದ ಪುಂಡರೀಕನ ಜೊತೆಯಲ್ಲಿ ಸ್ವಚ್ಛವಾದ ಸರೋವರದಲ್ಲಿರುವ ಕಮಲದ ಸುವಾಸನೆಯಿಂದ ಕೂಡಿದ ಲಕ್ಷ್ಮಿಯ ವಾಸಸ್ಥಾನಕ್ಕೂ, ಮತ್ತೊಮ್ಮೆ ಕಾದಂಬರಿಯ ಪ್ರೀತಿಯಿಂದ ಹೇಮಕೂಟಕ್ಕೂ ಬಂದು ಹೆಚ್ಚು ಒಲವನ್ನು ತೋರಿಸಿ ಸಂತತವಾಗಿ ವಿಹರಿಸುತ್ತಿದ್ದನು. ೯೪. ಚಂದ್ರಾಪೀಡನು ಪ್ರೀತಿಯಿಂದ ಪ್ರಿಯತಮೆಯೆನಿಸಿದ ಕಾದಂಬರೀದೇವಿಯೊಂದಿಗೂ, ಆ ಕಾದಂಬರೀದೇವಿಯು ಸಂತೋಷದಿಂದ ಮಹಾಶ್ವೇತೆಯೊಂದಿಗೂ ಕೂಡಿ, ಹಾಗೆಯೆ ಮಹಾಶ್ವೇತೆಯನ್ನು ಪ್ರೀತಿಸಿ ಪುಂಡರೀಕನೂ ಮತ್ತು ಬಹಳ ಪರಿಶುದ್ಧವಾದ ಸ್ನೇಹದಿಂದ ಪುಂಡರೀಕನನ್ನು ಚಂದ್ರಾಪೀಡನೂ ಬಹಳ ಉತ್ಸಾಹದಿಂದ ಕೂಡಿಕೊಂಡು ಅಗಲದೆ ಇರುತ್ತಿದ್ದರು. ೯೫. ಈ ಕಾದಂಬರೀಗ್ರಂಥವು ಸರಸ್ವತೀವಲ್ಲಭನೆಂದು ಹೆಸರುವಾಸಿಯಾಗಿದ್ದ ಬಾಣಮಹಾಕವಿಯ ವಾಣಿಯಿಂದ ಸಂಸ್ಕೃತಭಾಷೆಯಲ್ಲಿ ಸುಂದರವಾದ ವಚನಗಳ ಹೊಳಪನ್ನು

ಇವು ಕಾಳಿಂಗಾಭಿಧೇಯಪ್ರವಿದಿತಮಿವು ಕಾಂಭೋಜಬಾಹ್ಲೀಕದೇಶೋ

ದ್ಭವಮಶ್ವಂ ರಾಶಿಯಾಗಿರ್ದಪುವಿವು ನಿಜನಾಮಾಂಕವಿದ್ಯೋತವಾಗ

ಲ್ಕಿವು ನಾನಾ ಶಾಸನಂ ಸತ್ಕೃತಿವನಿತೆಗಿವೌಚಿತ್ಯಮೆಂದಿತ್ತನತ್ಯು

ತ್ಸವದಿಂ ವಿದ್ವತ್ಸಭಾಮಂಡಲಿ ತಣಿವಿನೆಗಂ ಭೋಜರಾಜಕ್ಷಿತೀಶಂ ೯೬

ಅತಿಚತುರಕವಿಕದಂಬಂ

ಸ್ತುತಿಯಿಸೆ ಚಾತುರ್ಯವೃತ್ತಿಯಂ ತಳೆದು ಜಗತ್

ಸ್ತುತನಾದ ನಾಗಪೂಜ್ಯಂ

ಕೃತಿಪಂ ತಾಂ ಸುಖದಿನಿರ್ಕೆಯಿನನಟಿಗೆವರಂ ೯೭

ಅತಿಶಯವಾಗಿ ಹರಡುತ್ತಾ ಜಗತ್ತಿನಲ್ಲಿ ಸರ್ವವಿದಿತವಾಗಿದೆ. ಅದೇ ಕಾದಂಬರಿಯು ಮತ್ತೆ ಈಗ ಕರ್ಣಾಟಭಾಷೆಯಲ್ಲಿ ಚಮತ್ಕಾರವನ್ನು ಹೊಂದಿ, ನಾಯಕನಾದ ಚಂದ್ರಾಪೀಡನ ಕಥೆಯಿಂದ ಕೂಡಿ, ಮೂರು ಲೋಕಗಳಲ್ಲೂ ಸರ್ವವಿದಿತವಾಗಿ ಪ್ರಸಿದ್ಧಿಯನ್ನು ಪಡೆದು ಚಂದ್ರನೂ ನಕ್ಷತ್ರಗಳೂ ಇರುವವರೆಗೂ ಸ್ಥಿರವಾಗಿರುತ್ತದೆ. (ಟಿ). ಇಲ್ಲಿ "ರಾಜೇಂದ್ರಚಂದ್ರಾಂಕನೊಳ್ ಸಂಗತಿವೆತ್ತು" ಎಂಬ ವಚನದಿಂದ ಕವಿಗೆ ಆಶ್ರಯದಾತನಾದ ಚಂದ್ರನೆಂಬ ಮಹಾರಾಜನ ಅಂಕಿತದಿಂದ ಕೂಡಿಕೊಂಡು ಎಂಬ ಅರ್ಥವೂ ತೋರುತ್ತದೆ. ೯೬. ಇವು ಕಳಿಂಗದೇಶದಲ್ಲಿ ಹುಟ್ಟಿದ ಕುದುರೆಗಳೆಂದು ಪ್ರಸಿದ್ಧವಾಗಿವೆ. ಇಲ್ಲಿ ಕಾಂಭೋಜ ಬಾಹ್ಲೀಕ ದೇಶಗಳಲ್ಲಿ ಹುಟ್ಟಿದ ಕುದುರೆಗಳು ಹಿಂಡುಹಿಂಡಾಗಿವೆ. ಇವೆಲ್ಲ ಕವಿಗಳ ಕವಿತಾರಮಣಿಗೆ ಉಚಿತವಾದ ಬಳುವಳಿ ಎಂದು ಭೋಜಮಹಾರಾಜನು ತನ್ನ ಹೆಸರು ಪ್ರಕಾಶಕ್ಕೆ ಬರುವಂತೆ ಅನೇಕ ದಾನಶಾಸನಗಳನ್ನು ಬರೆದು, ಬಹಳ ಸಂತೋಷದಿಂದ ವಿದ್ವಾಂಸರ ಸಮೂಹಕ್ಕೆ ತೃಪ್ತಿಯಾಗುವವರೆಗೂ ದಾನಮಾಡಿದ್ದಾನೆ. ೯೭. ಬಹಳ ಪ್ರತಿಭಾವಂತರಾದ ಕವಿಗಳ ಗುಂಪು ಸ್ತೋತ್ರಮಾಡುತ್ತಿರಲಾಗಿ, ಒಳ್ಳೆಯ ರಸಿಕತನವನ್ನು ಪಡೆದು ಲೋಕದಲ್ಲೆಲ್ಲಾ ಕೀರ್ತವಂತನಾದ ಮತ್ತು ನಾಗವರ್ಮನ ಗೌರವಕ್ಕೆ ಪಾತ್ರನಾದ ಈ ಕಾವ್ಯಕ್ಕೆ ಪೋಷಕನಾಯಕನಾದ ಮಹಾರಾಜನು ಸೂರ್ಯನಿರುವವರೆಗೂ

ಇದು ಚೋದ್ಯಂ ಕವಿಹೃದ್ಗತಂ ನವರಸಂ ನಿರ್ದೋಷಮೆಂದೀಗಳಾ
ದುದು ಕಾದಂಬರಿಸೇವ್ಯಮಾದುದನಿತುಂ ತಾನೆಯ್ದಿ ಭೂಭಾಗದೊಳ್
ವಿದಿತಶ್ರೀಕವಿ ನಾಗವರ್ಮನ ವಚಸ್ಸಂದೋಹದಿಂ ದೋಷಮೊಂ
ದದಲಂಕಾರದ ವಸ್ತುಬಂಧಮಿದು ತಾನೇಂ ಮಾಡದೇಂಗೆಯ್ಯದೋ ೯೮

## ಚಂದ್ರಾಪೀಡ ಕಾದಂಬರಿಯರ ಪುನಸ್ಸಮಾಗಮ

ಸಮಾಪ್ತ

## ಕರ್ಣಾಟಕ ಕಾದಂಬರಿ

ಸಂಪೂರ್ಣಂ

ಸುಖವಾಗಿರಲಿ. ೯೮. ಈ ಕಾವ್ಯವು ಅದ್ಭುತವಾದುದು, ವಿದ್ವಾಂಸರ ಮನಸ್ಸಿಗೆ ಆನಂದವನ್ನುಂಟುಮಾಡತಕ್ಕದ್ದು, ನವರಸಭರಿತವಾದುದು ಮತ್ತು ಕಾವ್ಯದೋಷ ಗಳೊಂದೂ ಇಲ್ಲದೆ ನಿರ್ದುಷ್ಟವೆನಿಸಿರುವುದು. ಆದ್ದರಿಂದ ಈ ಕಾದಂಬರಿಯು ಲೋಕ ದಲ್ಲಿ ವಿಶೇಷವಾಗಿ ಓದಿ ಆನಂದಿಸಲು ತಕ್ಕುದಾಗಿದೆ. ಸುಪ್ರಸಿದ್ಧ ಕವಿಯಾದ ನಾಗವರ್ಮನ ವಾಗ್ಗುಂಫದಿಂದ (ವಾಕ್ಯರಚನೆ) ಮೆರೆಯುವ, ದೋಷರಹಿತವಾದ ಕಾವ್ಯಾಲಂಕಾರಗಳಿಂದ ಶೋಭಿಸುವ ಈ ವಸ್ತುಕಾವ್ಯವು ಕಾವ್ಯದಿಂದ ಜನರಿಗೆ ಉಂಟಾ ಗುವ ಫಲಗಳನ್ನೆಲ್ಲಾ ನೀಡುತ್ತಾ ಪರಮಾನಂದವನ್ನುಂಟುಮಾಡುತ್ತದೆ.

## ಚಂದ್ರಾಪೀಡ ಕಾದಂಬರಿಯರ ಪುನಸ್ಸಮಾಗಮ

ಮುಗಿಯಿತು

ಭದ್ರಂ ಶುಭಂ ಮಂಗಳಂ

## ೧. ಪೂರ್ವಕಥೆಗಳು

### ಗಿಳಿಗೆ ಅಗ್ನಿಯ ಶಾಪ : ೧–೫೭

ಹಿಂದೆ ತಾರಕನೆಂಬ ಒಬ್ಬ ರಾಕ್ಷಸನು ದೇವತೆಗಳನ್ನು ಬಹಳವಾಗಿ ಪೀಡಿಸುತ್ತಿದ್ದನು. ಅವನ ಹಾವಳಿಯನ್ನು ತಾಳಲಾರದೆ ದೇವತೆಗಳು ಬ್ರಹ್ಮನಲ್ಲಿ ಮೊರೆಯಿಟ್ಟರು. ಆಗ ಬ್ರಹ್ಮನು "ದೇವತೆಗಳಿರಾ, ಈಗ ಪರಮೇಶ್ವರನು ಪಾರ್ವತಿಯನ್ನು ಮದುವೆ ಮಾಡಿಕೊಂಡು ಅವಳೊಂದಿಗೆ ಸಂಸಾರಸುಖವನ್ನು ಅನುಭವಿಸುತ್ತಿದ್ದಾನೆ. ನೀವು ಅವನನ್ನು ಪ್ರಾರ್ಥಿಸಿದರೆ ಆತನು ತನ್ನ ವೀರ್ಯವನ್ನು ಹೊರಗೆ ಬಿಡುತ್ತಾನೆ. ಅದನ್ನು ಅಗ್ನಿಯು ಧರಿಸಿದರೆ ಆಗ ಕುಮಾರನು ಹುಟ್ಟುತ್ತಾನೆ, ಅವನು ತಾರಕನನ್ನು ವಧಿಸುತ್ತಾನೆ" ಎಂದನು. ದೇವತೆಗಳು ಅಗ್ನಿಯನ್ನು ಈ ಕೆಲಸಕ್ಕೆ ಪ್ರೇರಿಸಲು ಅವನ ಬಳಿಗೆ ಬರುತ್ತಿದ್ದರು. ಅಗ್ನಿಗೆ ಇದು ತಿಳಿಯಿತು. ಈ ಕೆಲಸಕ್ಕೆ ಕೈಹಾಕಿದರೆ ತನಗೆ ಪಾರ್ವತಿಯು ಶಾಪಕೊಟ್ಟಾಳೆಂಬ ಭೀತಿಯಿಂದ ಅವನು ಓಡಿಹೋಗಿ ಎಲ್ಲೋ ಅಡಗಿಕೊಂಡುಬಿಟ್ಟನು. ದೇವತೆಗಳು ಹುಡುಕಿಕೊಂಡು ಹೊರಟರು. ದಾರಿಯಲ್ಲಿ ಅವರು ಒಂದು ದೊಡ್ಡ ಆನೆಯನ್ನು ಕಂಡು "ನೀನು ಅಗ್ನಿಯನ್ನು ಕಂಡೆಯಾ ?" ಎಂದು ಕೇಳಿದರು. ಅದು ಈ ಅರಳಿಮರದಲ್ಲಿ ಅಡಗಿಕೊಂಡಿದ್ದಾನೆಂದು ಅದನ್ನು ತೋರಿಸಿತು. ಅಗ್ನಿಯು ಅಲ್ಲಿಂದ ಓಟಕಿತ್ತು ಒಂದು ಬನ್ನಿಮರದಲ್ಲಿ ಅಡಗಿಕೊಂಡನು. ದೇವತೆಗಳು ಅವನನ್ನೇ ಹಿಂಬಾಲಿಸಿ ದಾರಿಯಲ್ಲಿ ಕಂಡ ಒಂದು ಗಿಳಿಯನ್ನು "ಅಗ್ನಿಯನ್ನು ನೀನು ಕಂಡೆಯಾ ?" ಎಂದು ಕೇಳಿದರು. ಅದು "ಈ ಬನ್ನಿಮರದಲ್ಲಿದ್ದಾನೆ" ಎಂದು ಹೇಳಿತು. ದೇವತೆಗಳು ಅಲ್ಲಿ ಅಗ್ನಿಯನ್ನು ಕಂಡುಹಿಡಿದು ಅವನನ್ನು ತಮ್ಮ ಸಹಾಯಕ್ಕೆ ಕರೆದೊಯ್ದರು. ಅಗ್ನಿಯು ತಾನು ಅಡಗಿದ್ದನ್ನು ತಿಳಿಸಿದ ಆನೆಯ ಕುಲಕ್ಕೆ ಜಿಹ್ವಾಪರಿವೃತ್ತಿ (ನಾಲಿಗೆಯು ಹಿಂದಕ್ಕೆ ತಿರುಗುವಿಕೆ)ಯುಂಟಾಗಲಿ ಎಂದೂ, ಗಿಳಿಯ ಕುಲಕ್ಕೆ ಅಸ್ಫುಟಾಲಾಪ (ಸ್ಪಷ್ಟವಾಗಿ ಮಾತನಾಡಲು ಆಗದಿರುವಿಕೆ)ವುಂಟಾಗಲಿ ಎಂದೂ ಶಾಪವಿತ್ತನು.

### ಅಗಸ್ತ್ಯಮಹರ್ಷಿಯು ವಾತಾಪಿಯನ್ನು ನಿಗ್ರಹಿಸಿದುದು : ೧–೮೭

ಇಲ್ವಲ, ವಾತಾಪಿ ಎಂಬ ಇಬ್ಬರು ಅಣ್ಣತಮ್ಮಂದಿರಾದ ರಾಕ್ಷಸರಿದ್ದರು. ಅವರು ಋಷಿಗಳಿಗೆ ಬಹಳ ಬಾಧೆಯನ್ನು ಕೊಡುತ್ತಿದ್ದರು. ಅವರು ಬ್ರಾಹ್ಮಣರನ್ನು ಊಟಕ್ಕೆ ಕರೆಯುತ್ತಿದ್ದರು. ಇಲ್ವಲನು ವಾತಾಪಿಯನ್ನು ಮೇಕೆಯನ್ನಾಗಿ ಮಾಡಿಕೊಂಡು ಆ ಮಾಂಸವನ್ನು ಆಹ್ವಾನಿತರಾದ ಬ್ರಾಹ್ಮಣರಿಗೆ ಬಡಿಸುತ್ತಿದ್ದನು. ಭೋಜನವಾದ

ಮೇಲೆ "ವಾತಾಪೇ ಆಗಚ್ಛ" (ವಾತಾಪಿಯೇ ಹೊರಕ್ಕೆ ಬಾ) ಎಂದು ಕೂಗುತ್ತಿದ್ದನು. ಕೂಡಲೆ ವಾತಾಪಿಯು ಬ್ರಾಹ್ಮಣರ ಹೊಟ್ಟೆಯನ್ನು ಸೀಳಿಕೊಂಡು ಹೊರಕ್ಕೆ ಬರುತ್ತಿದ್ದನು. ಬಳಿಕ ಅವರು ಸತ್ತ ಆ ಬ್ರಾಹ್ಮಣರ ಧನ ಧಾನ್ಯಾದಿಗಳನ್ನು ಅಪಹರಿಸುತ್ತಿದ್ದರು. ಹೀಗೆ ಅನೇಕ ಮಂದಿ ಬ್ರಾಹ್ಮಣರು ಕೊಲೆಗೀಡಾದರು. ಒಮ್ಮೆ ಅಗಸ್ತ್ಯನಿಗೆ ಇದೇ ಗತಿಯೊದಗಿತು. ಇಲ್ವಲನು ವಾತಾಪಿಯನ್ನು ಅದೇ ರೀತಿ ಆಡನ್ನಾಗಿ ಮಾಡಿ ಅವರಿಗೆ ತಿನ್ನಿಸಿ ಹಿಂದಿನಂತೆಯೆ "ವಾತಾಪೇ ಆಗಚ್ಛ" ಎಂದು ಕೂಗಿದನು. ಕೂಡಲೆ ಅಗಸ್ತ್ಯಮಹರ್ಷಿಯು "ವಾತಾಪೇ ಜೀರ್ಣೋಭವ" (ವಾತಾಪಿಯೇ ಅರಗಿಹೋಗು) ಎಂದು ಹೊಟ್ಟೆಯಮೇಲೆ ಕೈಯಾಡಿಸಿದನು. ವಾತಾಪಿಯು ಆ ಮುನಿಯ ಜಠರಾಗ್ನಿಗೆ ಆಹುತಿಯಾದನು. ಕೋಪಗೊಂಡ ಇಲ್ವಲನು ಅಗಸ್ತ್ಯನ ಮೇಲೆ ಎರಗಲು ಧಾವಿಸಿ ಬಂದನು. ಮಹರ್ಷಿಯು ಅವನನ್ನು ಕ್ರೂರದೃಷ್ಟಿಯಿಂದ ನೋಡಿದ ಕೂಡಲೆ ಅವನು ಸುಟ್ಟು ಬೂದಿಯಾದನು.

**ವಿಂಧ್ಯದಮನ : ೧-೮**

ಹಿಂದೊಮ್ಮೆ ನಾರದಮಹರ್ಷಿಯು ವಿಂಧ್ಯಪರ್ವತದ ಸಮೀಪಕ್ಕೆ ಬಂದನು. ವಿಂಧ್ಯಾಧಿದೇವನು ಬಹಳ ಭಕ್ತಿಯಿಂದ ಅವನನ್ನು ಸ್ವಾಗತಿಸಿದನು. ಕುಶಲ ಸಂಭಾಷಣೆಯಾದ ಮೇಲೆ ನಾರದನು ಅವನನ್ನು ಕುರಿತು "ವಿಂಧ್ಯದೇವ, ಸೂರ್ಯನು ಪ್ರತಿನಿತ್ಯವೂ ಮೇರುಪರ್ವತವನ್ನು ಪ್ರದಕ್ಷಿಣೆ ಮಾಡುತ್ತಾನೆ. ಹಾಗೆಯೆ ನಿನಗೇಕೆ ಮಾಡಬಾರದು. ನೀನೇನೂ ಮೇರುಪರ್ವತಕ್ಕಿಂತ ಕಮ್ಮಿಯಲ್ಲ. ಇದು ನನಗೆ ಬಹಳ ಖೇದವನ್ನುಂಟುಮಾಡುತ್ತಿದೆ." ಅವನು ನಿನಗೂ ಪ್ರದಕ್ಷಿಣೆ ಮಾಡುವಂತೆ ಏಕೆ ಮಾಡಿಕೊಳ್ಳಬಾರದು ? ಎಂದು ಹೇಳಿ ಹೊರಟುಹೋದನು. ಬಳಿಕ ವಿಂಧ್ಯನು ಸೂರ್ಯನನ್ನು ತನಗೂ ಪ್ರದಕ್ಷಿಣೆ ಹಾಕಬೇಕೆಂದು ಕೇಳಿದನು. ಅವನು ಒಪ್ಪಲಿಲ್ಲ. ವಿಂಧ್ಯನಿಗೆ ಕೋಪ ಬಂತು. ಸೂರ್ಯನ ಗತಿಗೆ ಭಂಗಬರುವಂತೆ ಆಕಾಶದಲ್ಲಿ ಎತ್ತರವಾಗಿ ಬೆಳೆದನು. ಸೂರ್ಯನ ಗತಿಗೆ ತಡೆಯುಂಟಾಯಿತು. ಭೂಮಿಯ ಮೇಲೆ ಒಂದು ಕಡೆ ಬರಿಯ ಹಗಲು ಮತ್ತೊಂದು ಕಡೆ ರಾತ್ರಿಯುಂಟಾಯಿತು. ಇದರಿಂದ ಜನರಿಗೆ ಬಹಳ ತೊಂದರೆಯಾಯಿತು. ಆಗ ದೇವತೆಗಳು ಕಾಶಿಯಲ್ಲಿದ್ದ ಅಗಸ್ತ್ಯಮಹರ್ಷಿಗೆ ಮೊರೆಯಿಟ್ಟರು. ಆಗ ಆ ಮಹರ್ಷಿಯು ಪತ್ನೀಸಮೇತನಾಗಿ ದಕ್ಷಿಣ ದಿಕ್ಕಿಗೆ ಹೊರಟನು. ವಿಂಧ್ಯಪರ್ವತದ ಹತ್ತಿರಕ್ಕೆ ಬಂದಾಗ ವಿಂಧ್ಯನು ತನ್ನ ಎತ್ತರವನ್ನು ತಗ್ಗಿಸಿ ನಮಸ್ಕರಿಸಿದನು. ಅಗಸ್ತ್ಯನು "ವತ್ಸ, ನಾನು ಮರಳಿ ಬರುವವರೆಗೂ ಹೀಗೆಯೇ ಇರು" ಎಂದು ಕಟ್ಟಾಜ್ಞೆ ಮಾಡಿ ದಕ್ಷಿಣದೇಶಕ್ಕೆ ಬಂದುಬಿಟ್ಟನು. ಮತ್ತೆ ಅವರು ಉತ್ತರದೇಶಕ್ಕೆ ಮರಳಿ ಹೋಗಲಿಲ್ಲ. ವಿಂಧ್ಯಪರ್ವತವು ಈಗಲೂ ಹಾಗೆಯೆ ನಿಂತಿದೆ, ಸೂರ್ಯನು ಎಂದಿನಂತೆ ಚಲಿಸತೊಡಗಿದನು.

## ಸಮುದ್ರಪಾನ : ೧-೮೬

ಕಾಲೇಯರೆಂಬ ರಾಕ್ಷಸರ ತಂಡವೊಂದು ತಪಸ್ವಿಗಳಿಗೆಲ್ಲ ಬಹಳ ಹಿಂಸೆಯನ್ನು ಕೊಡುತ್ತಿತ್ತು. ರಾತ್ರಿಯವೇಳೆಯಲ್ಲಿ ಋಷ್ಯಾಶ್ರಮಗಳಿಗೆ ಮುತ್ತಿಗೆ ಹಾಕಿ, ಋಷಿಗಳನ್ನು ಕೊಂದು ತಿಂದು ಓಡಿಹೋಗಿ ಸಮುದ್ರದ ಮಡುವಿನಲ್ಲಿ ಅಡಗಿಕೊಳ್ಳುತ್ತಿದ್ದರು. ಇದರಿಂದ ಋಷಿಗಳು ಕಂಗೆಟ್ಟು ತಪಸ್ಸನ್ನು ಬಿಟ್ಟು ದಿಕ್ಕುಪಾಲಾಗಿ ಓಡಿಹೋದರು. ಇಂದ್ರನೇ ಆಗಲಿ ಯಾರೇ ಆಗಲಿ ಅಟ್ಟಿಸಿಕೊಂಡು ಬಂದರೆ ಓಡಿಹೋಗಿ ಸಮುದ್ರದಲ್ಲಿ ಮುಳುಗಿ ಕಣ್ಮರೆಯಾಗಿಬಿಡುತ್ತಿದ್ದರು. ದೇವತೆಗಳು ಶ್ರೀಮನ್ನಾರಾಯಣನನ್ನು ಮರೆ ಹೊಕ್ಕರು. ಶ್ರೀಮನ್ನಾರಾಯಣನು "ಸಮುದ್ರದ ನೀರನ್ನು ಖಾಲಿ ಮಾಡಿದರೆ ಅವರನ್ನು ಅನಾಯಾಸವಾಗಿ ಹಿಡಿದು ಕೊಲ್ಲಬಹುದು. ಸಮುದ್ರದ ನೀರನ್ನು ಕುಡಿಯಲು ಮಹಾತ್ಮನಾದ ಅಗಸ್ತ್ಯನೇ ಸಮರ್ಥನು" ಎಂದನು. ಆಗ ದೇವತೆಗಳೆಲ್ಲರೂ ಈ ಮಹಾ ಕಾರ್ಯವನ್ನು ಸಾಧಿಸಲು ಅಗಸ್ತ್ಯಮುನಿಯನ್ನು ಬೇಡಿಕೊಂಡರು. ಅಗಸ್ತ್ಯಮಹರ್ಷಿಯು ದೇವತೆಗಳಿಗೆ ಅಭಯವನ್ನು ಕೊಟ್ಟು, ಅವರೊಂದಿಗೆ ಸಮುದ್ರತೀರಕ್ಕೆ ಹೋಗಿ ಸಮುದ್ರದ ನೀರನ್ನೆಲ್ಲ ಏಕಾಪೋಷನವಾಗಿ ಕುಡಿದುಬಿಟ್ಟನು. ಸಮುದ್ರವು ಖಾಲಿ ಯಾಯಿತು. ಒಳಗೆ ಅಡಗಿದ್ದ ಕಾಲೇಯರು ದೇವತೆಗಳ ಕಣ್ಣಿಗೆ ಬಿದ್ದರು. ದೇವತೆ ಗಳು ಅವರೊಂದಿಗೆ ಕಾದಾಡಿ ಅವರನ್ನು ನಾಮಾವಶೇಷರನ್ನಾಗಿ ಮಾಡಿದರು.

ಕೆಲವು ಕಾಲವು ಕಳೆದ ಮೇಲೆ ಖಾಲಿ ಬಿದ್ದ ಸಮುದ್ರವು ಭಗೀರಥನು ಭೂಮಿಗೆ ಇಳಿಸಿದ ಗಂಗಾನದಿಯಿಂದ ಮತ್ತೆ ತುಂಬಿಕೊಂಡಿತು.

## ರಾವಣನು ಕೈಲಾಸವನ್ನು ಕಿತ್ತುದು : ೧-೧೮, ೫-೪೨

ಲಂಕಾಧಿಪತಿಯಾದ ರಾವಣನು ದಿಗ್ವಿಜಯಕ್ಕಾಗಿ ಹೊರಟು ಕುಬೇರನನ್ನು ಗೆದ್ದು ಅವನಲ್ಲಿದ್ದ ಪುಷ್ಪಕವೆಂಬ ವಿಮಾನವನ್ನು ಕಿತ್ತುಕೊಂಡನು. ಅದು ಬೇಕಾದಕಡೆಗೆ ಹೋಗಬಲ್ಲ ಅದ್ಭುತವಾದ ಶಕ್ತಿಯುಳ್ಳದ್ದು. ರಾವಣನು ಅದರಲ್ಲಿ ಕುಳಿತು ಮುಂದೆ ಹೋಗುತ್ತಿರುವಲ್ಲಿ ಇದ್ದಕ್ಕಿದ್ದಂತೆ ಅದು ನಿಂತುಬಿಟ್ಟಿತು. ಕಾರಣವನ್ನು ವಿಚಾರಿಸುವಲ್ಲಿ ಇದು ಕೈಲಾಸಪರ್ವತದ ಮೇಲುಭಾಗವೆಂದೂ ಇಲ್ಲಿ ಯಾವ ವಿಮಾನವೂ ಹಾರಾಡಲಾರ ದೆಂದೂ ತಿಳಿಯಿತು. ರಾವಣನಿಗೆ ಕೋಪಬಂದು ಆ ಬೆಟ್ಟವನ್ನು ಕಿತ್ತೊಗೆಯಬೇಕೆಂದು ಮನಸ್ಸುಮಾಡಿ ಕೆಳಗಿಳಿದು ತನ್ನ ತೋಳುಗಳಿಂದ ಕಿತ್ತು ಎತ್ತಿದನು, ಬೆಟ್ಟದ ಮೇಲಿದ್ದ ಶಿವನಪರಿವಾರವೆಲ್ಲ ಗಾಬರಿಗೊಂಡರು. ಪಾರ್ವತಿಯು ಹೆದರಿ ಪರಮೇಶ್ವರನನ್ನು ತಬ್ಬಿ ಕೊಂಡಳು. ಪರಮೇಶ್ವರನು ತನ್ನ ಹೆಬ್ಬೆರಳಿನಿಂದ ಬೆಟ್ಟವನ್ನು ಒಮ್ಮೆ ಅಮುಕಿದನು. ಪರ್ವತವು ತನ್ನ ಸ್ಥಳದಲ್ಲಿ ಮತ್ತೆ ತಳವೂರಿತು. ರಾವಣನ ತೋಳುಗಳು ಪರ್ವತದ ಅಡಿಯಲ್ಲಿ ಸಿಕ್ಕಿಕೊಂಡುಬಿಟ್ಟುವು. ರಾವಣನು ಗಟ್ಟಿಯಾಗಿ ಕಿರುಚುತ್ತಾ ಎಳೆದು

ಕೊಳ್ಳಲು ಪ್ರಯತ್ನಿಸಿದನು. ಸಾಧ್ಯವೇ ಆಗಲಿಲ್ಲ. ಬಳಿಕ ಪರಮೇಶ್ವರನನ್ನು ಪರಿಪರಿ ಯಾಗಿ ಸೋತ್ರಮಾಡಲುಪಕ್ರಮಿಸಿದನು. ಬಹಳಕಾಲದ ಮೇಲೆ ಪರಮೇಶ್ವರನಿಗೆ ಕನಿಕರವುಂಟಾಗಿ ತೋಳುಗಳನ್ನು ಬಿಡಿಸಿ ವಿಮಾನವು ಮುಂದಕ್ಕೆ ಚಲಿಸಲು ಅನುಮತಿ ಯನ್ನು ಕೊಟ್ಟನು.

**ನರ್ಮದಾನದಿಯ ಆವಿರ್ಭಾವ : ೨-೧೬ ವ**

ಭರತಖಂಡದ ಸಪ್ತ ಮಹಾನದಿಗಳಲ್ಲಿ ಒಂದಾದ ನರ್ಮದಾನದಿಯು ಅಮರ ಕಂಟಕ ಅಥವಾ ಮೇಖಲಕವೆಂಬ ಪರ್ವತದಲ್ಲಿ ಹುಟ್ಟುತ್ತದೆ. ಅದು ಅಲ್ಲಿ ದೊಡ್ಡ ಬಿದಿರು ಹಿಂಡಲಿನಿಂದ ಹೊರಕ್ಕೆ ಬರುತ್ತದೆ ಎಂದು ಹೇಳಲ್ಪಟ್ಟಿದೆ.

**ದಶರಥನು ಪುತ್ರವಂತನಾದುದು : ೨-೫೨**

ಅಯೋಧ್ಯಾಧಿಪತಿಯಾದ ದಶರಥಮಹಾರಾಜನಿಗೆ ಬಹುಕಾಲ ಮಕ್ಕಳಾಗಲಿಲ್ಲ. ಆಗ ಅವನು ತನ್ನ ಮಂತ್ರಿಯಾದ ಸುಮಂತ್ರನ ಸಲಹೆಯಂತೆ ವಿಭಾಂಡಕರೆಂಬ ಮಹ ರ್ಷಿಯ ಪುತ್ರನಾದ ಋಶ್ಯಶೃಂಗನೆಂಬ ಮಹರ್ಷಿಯನ್ನು ಬರಮಾಡಿಕೊಂಡು, ಅವನ ಪೌರೋಹಿತ್ಯದಲ್ಲಿ "ಪುತ್ರಕಾಮೇಷ್ಟಿ" ಎಂಬ ಯಾಗವನ್ನು ಮಾಡಿದನು. ಯಾಗವು ಮುಗಿಯುತ್ತಿರುವಲ್ಲಿ ಅಗ್ನಿಕುಂಡದಿಂದ ದೇವಪುರುಷನೊಬ್ಬನು ಆವಿರ್ಭವಿಸಿ ಚಿನ್ನದ ಪಾತ್ರೆಯಲ್ಲಿ ತುಂಬಿದ್ದ ಪಾಯಸವನ್ನು ದಶರಥನಿಗೆ ಕೊಟ್ಟನು. ರಾಜನು ತನ್ನ ಮೂವರು ರಾಣಿಯರಿಗೆ ಅದನ್ನು ಕುಡಿಸಿದನು. ಅವರು ಗರ್ಭವತಿಯರಾಗಿ ನಾಲ್ವರು ಪುತ್ರರನ್ನು ಪಡೆದರು. ಅವರೇ ರಾಮ ಲಕ್ಷ್ಮಣ ಭರತ ಶತ್ರುಘ್ನರು. (ಇಲ್ಲಿ ವಿಭಾಂಡಕ ನೆಂದರೆ ವಿಭಾಂಡಕನ ಮಗನಾದ ಋಶ್ಯಶೃಂಗನೆಂದು ಅರ್ಥಮಾಡಬೇಕು).

**ರಂಭೆಯು ಕುದುರೆಯಾದುದು : ೩-೧೩ ವ**

ಹಿಂದೆ ಸ್ಥೂಲಶಿರಸ್ಸು ಎಂಬ ಮಹರ್ಷಿಯು ದರ್ಭೆ ಸಮಿತ್ತುಗಳನ್ನು ತರುವುದ ಕ್ಕಾಗಿ ಕಾಡಿನಲ್ಲಿ ತಿರುಗಾಡುತ್ತಿರುವಲ್ಲಿ "ಅಯ್ಯೋ ನಾವು ಹಳ್ಳಕ್ಕೆ ಬೀಳುತ್ತಿದ್ದೇವೆ. ನಮ್ಮನ್ನು ಕಾಪಾಡು" ಎಂಬ ಆರ್ತನಾದವನ್ನು ಕೇಳಿ ಅಲ್ಲಿಗೆ ಬಂದನು. ಒಂದು ಬಳ್ಳಿ ಯನ್ನು ಹಿಡಿದುಕೊಂಡು ಜೋಲಾಡುತ್ತಾ ಇನ್ನೇನು ದೊಡ್ಡ ಹಳ್ಳಕ್ಕೆ ಬಿದ್ದು ಹೋಗುವ ಸ್ಥಿತಿಯಲ್ಲಿದ್ದ ಪುರುಷರನ್ನು ಕಂಡು ನೀವು ಯಾರು ? ಎಂದು ಕೇಳಿದನು . ಅವರು "ನಾವು ಸ್ಥೂಲಶಿರಸ್ಸಿನ ಪಿತೃಗಳು. ಅವನು ಬ್ರಹ್ಮಚಾರಿಯಾಗಿದ್ದು ಸಂತಾನವನ್ನು ಮಾಡಿ ಕೊಳ್ಳಲಿಲ್ಲ. ಅವನ ಕಾಲಾನಂತರಲ್ಲಿ ನಾವೆಲ್ಲರೂ ನರಕದಲ್ಲಿ ಬೀಳುತ್ತೇವೆ" ಎಂದರು. ಸ್ಥೂಲಶಿರಸ್ಸು ಅದನ್ನು ಕೇಳಿ ವಂಶವೃದ್ಧಿಗಾಗಿ ತನ್ನನ್ನು ವರಿಸುವಂತೆ ರಂಭೆಯನ್ನು ಕೇಳಿದನು. ಅವಳು "ನನಗೀಗ ದೇವತೆಗಳ ಕೆಲಸವೊಂದಿದೆ. ಅದನ್ನು ಮಾಡಿ ಮುಗಿಸಿ ಬಂದುಬಿಡುತ್ತೇನೆ" ಎಂದು ಹೇಳಿ ಹೊರಟುಹೋದವಳು ಎಷ್ಟು ಹೊತ್ತಾದರೂ

ಬರಲೇ ಇಲ್ಲ. ಕೋಪಗೊಂಡ ಮಹರ್ಷಿಯು "ಹೆಣ್ಣು ಕುದುರೆಯಾಗು" ಎಂದು ಶಪಿಸಿದನು. ನರನಾರಾಯಣರ ಅವತಾರದವರೆಗೆ ಆ ಶಾಪವು ನಡೆಯಂತಕ್ಕುದಾಗಿತ್ತು.

**ಅಷ್ಟವಸುಗಳಿಗೆ ಶಾಪ : ೮–೮೮**

ಧರ್ಮಪ್ರಜಾಪತಿಯಿಂದ ದಕ್ಷಪುತ್ರಿಯಾದ ವಸು ಎಂಬುವಳಲ್ಲಿ ಆಪ, ಧರ, ಧ್ರುವ, ಸೋಮ, ಅನಿಲ, ಅನಲ, ಪ್ರತ್ಯೂಷ, ಪ್ರಭಾಸ ಎಂಬ ಎಂಟು ಮಕ್ಕಳು ಹುಟ್ಟಿದರು. ಇವರಿಗೆ ಅಷ್ಟವಸುಗಳೆಂದು ಹೆಸರು.

ಒಮ್ಮೆ ಇವರು ಎಂಟು ಮಂದಿಯೂ ತಮ್ಮ ಮಡದಿಯರೊಂದಿಗೆ ಸಂಚರಿಸುತ್ತಾ ವಸಿಷ್ಠಮಹರ್ಷಿಯ ಆಶ್ರಮದ ಸಮೀಪದಲ್ಲಿ ನಂದಿನೀಧೇನುವನ್ನು ಕಂಡು ಅದನ್ನು ಅಪಹರಿಸತೊಡಗಿದರು. ವಸಿಷ್ಠನು ಭೂಲೋಕದಲ್ಲಿ ಹುಟ್ಟುವಂತೆ ಅವರಿಗೆ ಶಾಪವನ್ನು ಕೊಟ್ಟನು. ಅದರಿಂದ ಅವರು ಆಗ ಶಂತನುಚಕ್ರವರ್ತಿಯ ಹೆಂಡತಿಯಾಗಿದ್ದ ಗಂಗಾದೇವಿಯಲ್ಲಿ ಮಾನವರಾಗಿ ಜನಿಸಿದರು, ಹಿರಿಯವನಾದ ಆಪನು ವಸಿಷ್ಠಶಾಪಕ್ಕೆ ಮೂಲಕಾರಣನಾದುದರಿಂದ ಭೀಷ್ಮನಾಗಿ ಹುಟ್ಟಿ ಬಹುಕಾಲ ಭೂಮಿಯಲ್ಲಿರಬೇಕಾಯಿತು. ಮಿಕ್ಕ ಏಳುಮಂದಿಯೂ ಹುಟ್ಟಿದಕೂಡಲೆ ಸತ್ತು ಶಾಪವನ್ನು ನೀಗಿಕೊಂಡು ತಮ್ಮ ಹಿಂದಿನ ದೇಹವನ್ನು ಪಡೆದರು.

## ೨. ಕಠಿನ ಪದಗಳ ಅರ್ಥ

[ಇಲ್ಲಿಯ ಸಂಖ್ಯೆಗಳು ಆಶ್ವಾಸ ಮತ್ತು ಪದ್ಯವನ್ನು ಸೂಚಿಸುತ್ತವೆ.]

### ಅ

ಅಂಗಚಿತ್ತ–ಉಡುಗೊರೆ ೨ ೮೬ವ
ಅಂಗರಾಗ–ಲೇಪನದ್ರವ್ಯ ೬ ೧೦ವ
ಅಂಚೆವಿಂಡು-ಹಂಸಪಕ್ಷಿಗಳ ಗುಂಪು ೧ ೫೮ವ
ಅಂಭೋದಕಾಲ–ಮಳೆಗಾಲ ೯ ೧೩
ಅಂಶುಮಾಲಿ–ಸೂರ್ಯ ೫ ೩೨
ಅಂಸ–ಹೆಗಲು ೬ ೭೩
ಅಕ್ಷವಲಯ–ಜಪಸರ ೪ ೫೧
ಅಕ್ಷಾವಳಿ–ಜಪಸರ ೧ ೯೮
ಅಗ–ಬೆಟ್ಟ ೪ ೧೬
ಅಗ್ಗಲಿಸು–ಹೆಚ್ಚು, ಅತಿಶಯವಾಗು ೨–೧೯
ಅಗಿ– ಭಯಪಡು ೫ ೧೦೧
ಅಗುರು–ಮೇಲಕ್ಕೇಳು, ಹೆಚ್ಚಾಗು ೫ ೧೧೫
ಅಗುರ್ವು–ಅತಿಶಯ ೨ ೬೫
ಅಗುರ್ವು–ಭಯ ೧ ೧೩೮
ಅಗುಳ್–ಅಗೆ (ನೆಲವನ್ನು) ೧ ೧೭೪
ಅಗೆವೋಗು–ಮೊಳಕೆಹೊರಡು ೨ ೮೩
ಅಗ್ನಿಶೌಚವಸ್ತ್ರ–ಉಬ್ಬೆಗೆ ಹಾಕಿದ ಬಟ್ಟೆ ೮ ೪೧
ಅಘಮರ್ಷಣ–ಸ್ನಾನಮಾಡುವಾಗ ಜಪಿಸುವ ಮಂತ್ರ ೧ ೧೭೭ವ
ಅಚ್ಚರಸಿ-ಅಪ್ಸರಸ್ತ್ರೀ ೫ ೧
ಅಡಕಿಲ್ಗೊಳ್–ಒಂದರ ಮೇಲೆ ಒಂದು ಇರು ೬ ೧೦೪
ಅಡಪ–ಎಲೆ ಅಡಕೆ ಚೀಲ ; ಸಂಚಿ ೨ ೩೪
ಅಡ್ಡೈಸು–ಅಡ್ಡವಾಗು ೬ ೧೦೨
ಅಣ್ಪು–ಲೇಪನ ೧ ೨೬

ಅದವಟಲ್–ಸಂತಾಪ, ವ್ಯಥೆ ೫ ೧೭೨
ಅದೃಷ್ಟಪೂರ್ವ–ಹಿಂದೆ ಕಂಡರಿಯದ ೪ ೨ವ
ಅಧಿಗಮ–ಪಡೆಯುವಿಕೆ, ಪ್ರಾಪ್ತಿ ೨ ೧೧೮
ಅಧಿವಾಸಿಸು–ವಾಸನೆಕಟ್ಟು ೭ ೨೧ವ
ಅಧ್ವಗ–ದಾರಿಗ, ಪ್ರಯಾಣಿಕ ೮ ೩೭
ಅನಪತ್ಯ–ಮಕ್ಕಳಿಲ್ಲದವ ೫ ೯
ಅನಿಮಿಷ–ರೆಪ್ಪೆ ಇಲ್ಲದಿರುವುದು, ಮೀನು ೨ ೯
ಅನುಕಂಪಮಾನ– ನಡುಗುತ್ತಿರುವ, ೨
ದಯೆಯಿಂದ ಕೂಡಿರುವ ೭ ೪೩
ಅನುಗೆಯ್–ಸಿದ್ಧವಾಗು ೪ ೬೮
ಅನುರೋಧ–ನಿರ್ಬಂಧ ೬ ೧೧೪ವ
ಅನುವಿಸು–ಬಯಸು ೭ ೫೫
” –ಮಾತನ್ನು ಕೇಳುವಂತೆ ಮಾಡು ಅನುನಯಮಾಡು ೫ ೨೦೭
ಅನುಶಾಸಿಸು–ಉಪದೇಶಮಾಡು ೬ ೯೨
ಅನ್ನಯ–ಅನ್ಯಾಯ ೬ ೯೨
ಅನ್ವಯ–ವಂಶ ; ಕುಲ ೬ ೧
ಅಪತ್ಯ–ಮಗ ೧ ೧೬೬
ಅಪನೀತ–ಕಳಚಲ್ಪಟ್ಟ ೮ ೧೨೦
ಅಪರಾಂಭೋದಿ-ಪಶ್ಚಿಮಸಮುದ್ರ ೫ ೨೦೮
ಅಪವರ್ಗ–ಮೋಕ್ಷ ೫ ೧೧೪
ಅಪಾಂಗ–ಕಡೆಗಣ್ಣು ೬ ೨೦
ಅಬ್ಜ–ತಾವರೆ, ಕಮಲ ೫ ೨
ಅಬ್ಜ-ಚಂದ್ರ ೫ ೨
ಅಬ್ಬೆ–ತಾಯಿ, ಅಮ್ಮ ೧೦ ೩೬
ಅಬ್ರಹ್ಮಣ್ಯ-ಬ್ರಾಹ್ಮಣರು ಆಪತ್ಕಾಲದಲ್ಲಿ

ಮೊರೆಯಿಡುವ ಒಂದು ಶಬ್ದ, ಅನ್ಯಾಯ ೫ ೧೬೯

ಅಭಿಸಾರಿಕೆ–ಕಾಮಪರವಶಳಾಗಿ ನಲ್ಲನು ಸೂಚಿಸುವ ಸಂಕೇತಸ್ಥಳಕ್ಕೆ ಹೋಗುತ್ತಿರುವ ಹೆಂಗಸು ೧ ೧೩

ಅಭ್ರಕ–ಮೋಡ ೪ ೩೭

ಅಭ್ರಕ–ಕಾಗೆಬಂಗಾರ ೪ ೪೫

ಅಭ್ರಗಂಗೆ–ದೇವಗಂಗಾನದಿ ೧ ೧೯೪

ಅಬ್ಜಾಕರ–ತಾವರೆಗೊಳ ೧ ೧೨೨

ಅಭವ–ಶಿವ ; ಪರಮೇಶ್ವರ ೮ ೧೧೫

ಅಭಿಚಾರ–ಮಾಟ ೩ ೧೦೩

ಅಭಿಜಾತ–ಸತ್ಕುಲಪ್ರಸೂತ ೩ ೮೩

ಅಭಿರೂಪ–ಪಂಡಿತ, ನಿಷ್ಣಾತ ೧ ೫೦

ಅಭಿಷವ–ಸ್ನಾನ ೨ ೨೬

ಅಭ್ಯರ್ಹಿತ–ಹಿರಿಯ, ಪೂಜ್ಯ ೬ ೧೬೬ವ

ಅಭ್ಯವಹಾರ–ಆಹಾರ ೧ ೬೮ವ

ಅಭ್ಯಾಗತ–ಮನೆಗೆ ಬಂದು ಸತ್ಕಾರವನ್ನು ಸ್ವೀಕರಿಸುವವನು ; ಅತಿಥಿ ೪ ೬೩

ಅಭಿಷವ–ಸ್ನಾನ ೪ ೬೨

ಅಮರನದಿ–ಗಂಗಾನದಿ ೧ ೧

ಅಮರ್ಚು–ಸೇರಿಸು ೧ ೧೩೮

ಅಮರ್ದು–ಅಮೃತ ೧ ೩೫

ಅಮೃತಾಸಾರ–ಅಮೃತದ ಜಡಿಮಳೆ ೯ ೯೧

ಅರಮೆ–ವಿಶೇಷವಾಗಿ ೮ ೧೩೯

ಅರಸಂಚೆ–ರಾಜಹಂಸ ೫ ೧೪

ಅರೆವಾನಿಸಿಕೆ–ಅರ್ಧಮನುಷ್ಯತ್ವ ೧ ೧೦

ಆರ್ತಿ–ಆಸೆ ೫ ೨೮

ಅಲಂಪು–ಪ್ರೀತಿ ೫ ೧೬೩

ಅಲಕ್ತಕ–ಅರಗಿನರಸ ೧ ೮೩

ಅಲತಗೆ–ಅರಗಿನರಸ, ಅಲಕ್ತಕ ೯ ೧೧ವ

ಅಲರ್–ಅರಳು, ವಿಕಸಿತವಾಗು ೨ ೮೪

ಅಲರ್ಗಣೆ–ಹೂವಿನ ಬಾಣ ೧೦ ೫೫

ಅಲರ್ಗೊಂಚಲ್–ಹೂವಿನಗೊಂಚಲು ೫ ೫೧

ಅಲುಂಬು–ಒಗೆದು ಮಡಿಮಾಡು ೫ ೨೭

ಅಲೆ–ಪೀಡಿಸು ೫ ೩೩ವ

ಅಲೆಪ–ಬೀಸುವಿಕೆ ೨ ೮೭

ಅಲೆಪ–ಚಲನೆ ೧ ೮೩

ಅವಗಾಹನ–ಸ್ನಾನ ೧ ೧೫

ಅವಚೂಲ–ಬಾವುಟದ ತುದಿಯಿಂದ ಕೆಳಕ್ಕೆ ಜೋಲಾಡುವ ಕುಚ್ಚು, ಅಲಂಕಾರಕ್ಕಾಗಿ ಕಟ್ಟಿದ ಕುಚ್ಚು ೮ ೨

ಅವಜ್ಞೆ–ತಿರಸ್ಕಾರ ೫ ೧೨೧ವ

ಅವತಂಸ–ಕಿವಿಯ ಆಭರಣ ೫ ೬೦

ಅವಧರಿಸು–ತಿಳಿದುಕೊಳ್ಳು ೫ ೨೦೭

ಅವಮೆ–ಅಮಾವಾಸ್ಯೆ ೯ ೧೩

ಅವಸರ–ಅವಕಾಶ ೨ ೮೨

ಅವಿತಥ–ಸತ್ಯ ೨ ೮೬

ಅವಿನಯ–ಕೆಟ್ಟನಡವಳಿಕೆ ೧೦ ೩ವ

ಅವಿಭಾವ್ಯ–ಗುರುತುಹಿಡಿಯಲು ಆಗದವನು ೮ ೬೧

ಅವ್ವಳಿಸು–ಮೇಲೆ ಬೀಳು ೫ ೩೩

ಅಶ್ರುತಪೂರ್ವ–ಹಿಂದೆಂದೂ ಕೇಳದಿರುವ ೧ ೧೨೭

ಅಸವಸ–ಆತುರ, ತ್ವರೆ ೧ ೧೮೭

ಅಸಿತಾಹಿ–ಕರಿನಾಗರಹಾವು ೫ ೧೦೫

ಅಸಿತೋರಗ–ಕರಿನಾಗರಹಾವು ೧ ೧೫೨

ಅಸಿಯುಗುರ್–ತೆಳುವಾದ ಉಗುರು ೩ ೫೫

ಅಹಮಹಮಿಕೆ–ನಾನು ಮುಂದು ತಾನು ಮುಂದು ಎಂಬ ಹುರುಪು, ಉತ್ಸಾಹ ೩ ೧೮

ಅಳಕ–ಮುಂಗುರುಳು ೧ ೬೧ವ

ಅಳರು–ವ್ಯಾಪಿಸು, ಹರಡು ೬ ೮೩

ಅಳೀಕ–ಸುಳ್ಳಾದ, ಮೋಸದ ೬ ೮೩
ಅಳುಂಬಂ–ಅಧಿಕವಾಗಿ ೨ ೫೫
ಅಳುಪು- ಪ್ರೀತಿ ೫ ೩೩೮
ಅಳುರ್–ಆವರಿಸು, ಹರಡು ೧೦ ೫೬
ಅಳ್ಕು–ಶಕ್ತಿಗುಂದು ೫ ೮೦
ಅಱಗುಲಿ–ಧರ್ಮಭ್ರಷ್ಟ ೧ ೧೪೮
ಅಱಲ್ಗೊಳ್–ಬಾಯಾರು ೮ ೮೧
ಅಱುಂಬುನೀರ್–ಬತ್ತಿದ ಹಳ್ಳದಲ್ಲಿ ತೋಡಿದಾಗ ಬರುವ ನೀರು, ಚಿಲುಮೆ ೮ ೧೮
ಅಟಲ್–ದುಃಖ ೧ ೧೫೪
ಅಟ್ಕಱ್–ಪ್ರೀತಿ ೩ ೧
ಅಟ್ಕಿವಡು–ಸಂತೋಷಪಡು ೨ ೧೧೬

ಆ

ಆಕೇಕರಾಲೋಕ–ಓರೆಗಣ್ಣು ೩ ೧೫
ಆಗರ–ಗಣಿ, ಆಧಾರಸ್ಥಾನ ; ಆಕರ ೧೦ ೪೨
ಆಗುಳಿ–ಆಕಳಿಕೆ ೬ ೧೩೫
ಆತಪತ್ರ–ಕೊಡೆ, ಛತ್ರಿ ೩ ೨೦
ಆತ್ಮಘಾತ–ಆತ್ಮಹತ್ಯೆ ೫ ೨೦೪
ಆಭಿಜಾತ್ಯ–ಕುಲೀನತೆ ೬ ೯೨
·ಆಮಳಕ–ನೆಲ್ಲಿಕಾಯಿ ೧ ೭೪
ಆಮಿಷ–ಮಾಂಸ ೧ ೧೪೬
ಆರ್–ತಣಿ, ತೃಪ್ತಿಪಡು ೩ ೪೨
ಆರಾಧ್ಯ–ಪೂಜ್ಯ, ಗುರು ೮ ೧೯೪
ಆರ್ಗೆ–ಯಾರ ಮಗಳು ? ೧೦ ೫೦
ಆಲಜಾಲ–ಮಿಥ್ಯಾಭಿಲಾಷೆ ೯ ೩೭
ಆವಿಲ–ಕೊಳಕು, ಮಲಿನ ೮ ೧೪೪
ಆಶೀವಿಷ–ಹಾವು ; ಸರ್ಪ ೩ ೮೬
ಆಶ್ವಿಕಬಲ–ಕುದುರೆಸೈನ್ಯ ೮ ೧೦೨
ಆಸತ್ತ– (ಧಾ.ಆಸಱು) ಬಳಲಿದ ೩ ೧೩೧
ಆಸವ–ಹೆಂಡ, ಮದ್ಯ ೩ ೨೯
ಆಹ್ವಯ–ಹೆಸರು ೨ ೧
ಆಳವಾಳ–ಪಾತಿ ೧ ೧೮೯
ಆಱ್–ಶಕ್ತನಾಗು ೫ ೧೪೨
ಆಱಿಸು–ಸಮಾಧಾನಪಡಿಸು ೫ ೧೯೦
ಆಟ್–ನೀರಿನಲ್ಲಿ ಮುಳುಗು ೫ ೫೬
ಆಟಿಸು–ನೀರಿನಲ್ಲಿ ಕೊಚ್ಚಿಕೊಂಡುಹೋಗು, ಮುಳುಗಿಸು ೯ ೪೨

ಇ

ಇಂಗಡಲ್–ಕ್ಷೀರಸಮುದ್ರ ೩ ೧೧೪
ಇಂಚರ–ಇಂಪಾದ ಧ್ವನಿ ೧ ೫೮೮
ಇಂತುಟೆವಲಂ–ಇಷ್ಟೇನೆ ? ಹೀಗಾಯಿತೆ ? ೮ ೬೩೮
ಇಂದೂಪಲ–ಚಂದ್ರಕಾಂತಶಿಲೆ ೭ ೧೪
ಇಂದ್ರಚಾಪ–ಕಾಮನಬಿಲ್ಲು ೧ ೨೩
ಇಂಧನ–ಸೌದೆ, ಕಟ್ಟಿಗೆ ೫ ೧೮೦
ಇಕ್ಕುವಡು–ಹೊಡೆಯಲ್ಪಡು ೮ ೧೧೪
ಇಕ್ಕೆದಾಣ–ಬಿಡದಿ, ವಾಸಸ್ಥಳ ೨ ೩
ಇಟ್ಟಳ–ಮನೋಹರ ೨ ೫೫
ಇಟ್ಟಳ–ದಟ್ಟವಾದುದು ೧ ೪೨
ಇಡು–ಬೆಳಸು ೮ ೧೪೬
ಇನಬಿಂಬ–ಸೂರ್ಯಮಂಡಲ ೧ ೬೭
ಇಭ–ಆನೆ ೫ ೧೩೫
ಇರ್ಪು–ತೇವ, ಒದ್ದೆ ೭ ೩೮
ಇಱುಂಬು–ನಡುವೆ, ಮಧ್ಯ ೧ ೧೧೩

ಈ

ಈಂಟು–ಕುಡಿ, ಪಾನಮಾಡು ೧ ೭೩
ಈಳ್ಕೊಳ್–ಕಸಿದುಕೊಳ್ಳು ೧ ೩೫

ಉ

ಉಕ್ಕೆವ–ಉತ್ಸಾಹ, ಅಶೋತ್ತರ ೫ ೧೯೨
ಉಜ್ಜಳಿಸು–ಪ್ರಕಾಶಿಸು ೯ ೧೧೮
ಉಟಜ–ಪರ್ಣಶಾಲೆ ೧ ೯೬
ಉಡುಪ–ಚಂದ್ರ ೭ ೨೩

ಉಡೆ–ಸೀರೆ ೩ ೨೭
ಉತ್ಕ–ಮೈಮರೆತ ೫ ೧೩೯
ಉತ್ಕಂಠಿತ–ಹೆಚ್ಚು ಅಭಿಲಾಷೆಯುಳ್ಳವನು ೧೦ ೧೮
ಉತ್ಕಲಿಕೆ–೧ ಕಾಮೋದ್ರೇಕ ೨ ಅಲ್ಲೋಲ ಕಲ್ಲೋಲ ೮ ೧೨೫
ಉತ್ತಮಾಂಗ–ತಲೆ ೧ ೭೧
ಉತ್ತರೀಯ ವಸನ, ಹೊದೆಯುವ ಪಂಚೆ ೧ ೨೫
ಉತ್ತ್ರವಳಿಕೆ–ಕಾತರತೆ ೫ ೨೦೩
ಉತ್ಸಂಗ–ತೊಡೆ ೨ ೫೫
ಉತ್ಸೇಧ–ಎತ್ತರ ೧ ೧೪೬ವ
ಉದಧಿವೇಲೆ–ಸಮುದ್ರದ ಪ್ರವಾಹ–ಅಲೆ ೯ ೪೬
ಉದ್ದೆಸ–ಉದ್ದೇಶ ೫ ೪೬
ಉನ್ನತಿಕೆ–ಹಿರಿಮೆ, ಪೆಂಪು ೨ ೧೦೮
ಉಪಚಯ–ಅಭಿವೃದ್ಧಿ ೭ ೪೭
ಉವಧಾನ–ತಲೆದಿಂಬು ೨ ೬೫
ಉಪಪ್ಲವ–ಬಾಧೆ, ತೊಂದರೆ ೨ ೧೬
ಉಪಶಮನ–ಅಡಗುವಿಕೆ, ಶಾಂತಿ ೫ ೧೧೮
ಉಪಶ್ರುತಿ–(ಜೋಯಿಸರನ್ನು ಕೇಳುವ) ಭವಿಷ್ಯ ೨ ೬೮
ಉಪಾಂಶುವಧೆ-ಗುಟ್ಟಾಗಿ ಮಾಡುವ ಕೊಲೆ ೩ ೧೦೩ವ
ಉಪಾರೂಢ-ಏರಿದ, ಪಡೆದ ೩ ೧ವ
ಉಪಾಲಂಭನ–ನಿಂದೆ ೫ ೧೭೬
ಉಪ್ಪವಡಿಸು- ಹಾಸಿಗೆಯಿಂದ ಏಳು, ಎಚ್ಚರಗೊಳ್ಳು ೬ ೧೬೬ವ
ಉಬ್ಬೆಗ–ಉದ್ವೇಗ ೩ ೧೦೫
ಉಮ್ಮಳಿಸು–ದುಃಖಪಡು ೬ ೧೦೦
ಉರುಪು–ಸುಡು, ದಹಿಸು ೧ ೧೪
ಉರುಳಿ–ವಿಲೇಪನ ೭ ೩
ಉರ್ಚು–ಚಾರಿಬೀಳು ೭ ೧೩ವ
ಉರ್ಚು–ಹೊರಕ್ಕೆ ಬರು ೮ ೧೫೬
ಉರ್ವರೆ–ಭೂಮಿ ೧ ೯೯
ಉಲುಪು–ಶಬ್ದ ೧ ೩೨
ಉಲ್ಲೋಲ–ದೊಡ್ಡ ಅಲೆ ೩ ೧೦
ಉಷ್ಣೀಷ–ರುಮಾಲು ೫ ೧೮೪ವ
ಉಳ್ಳಲರ್–ಚೆನ್ನಾಗಿ ಅರಳು ೫ ೧೧ವ

ಊ

ಊರುದಘ್ನ-ತೊಡೆಯವರೆಗೂ ಮುಳುಗುವ ೮ ೬೦ವ
ಊರುಯುಗ-ಎರಡು ತೊಡೆಗಳು ೨ ೩೮
ಊರ್ಣೆ–ಹುಬ್ಬಿನ ನಡುವಿನ ಕೂದಲು ೨ ೧೯
ಊಷರ–ಬಂಜರುನೆಲ ೧ ೧೨೪

ಋ

ಋಜುವೃತ್ತಿ–ಸರಳಸ್ವಭಾವ ೧೦ ೮೯

ಎ

ಎಡೆವರಿ–ಮಧ್ಯೆ ಅಂತರವನ್ನು ಹೊಂದು, ಹಿಂದೆ ಬೀಳು ೪ ೮
ಎಡ್ಡ–ಸುಂದರ ೩ ೨೫
ಎಮೆದುಱುಗಲ್–ಒತ್ತಾದ ಕಣ್ಣಿನ ರೆಪ್ಪೆ ೫ ೧೦೨
ಎರವುಗೊಳ್–ಬೇಡಿಕೊಳ್ಳು ೫ ೧೯೭
ಎರೆ–ಆಹಾರ ೧ ೧೫೨
ಎಲರ್–ಗಾಳಿ ೧ ೨೫
ಎಲವ–ಬೂರುಗದ ಮರ ೧ ೧೦೫
ಎಲ್ಗಳ್–ಮೂಳೆಗಳು ೧ ೧೯೮
ಎಸಕ–ಕಾರ್ಯ, ಪ್ರಭಾವ ೧ ೧೦೭
ಎಳವುಳಿಲ್ದಾಣ-ಕೋಮಲವಾದ ಮರಳು ದಿಣ್ಣೆ ೮ ೬೦

ಎಳವರೆ–ಬಾಲಚಂದ್ರ ೨ ೪೨
ಎಳೆಕುಳಿಗೊಳ್–ಪಡೆಯಲು ತವಕಿಸು ೨ ೫೬
ಎಱಂಕೆ–ರೆಕ್ಕೆ ೧ ೯೭ವ
ಎಱೆಯ–ಒಡೆಯ, ಸ್ವಾಮಿ ೧ ೮
ಎಱೆವಟ್ಟು–ಆಶ್ರಯಸ್ಥಾನ ೭ ೨೨
ಎಟಲ್–ಚೋಲು ೨ ೧೨

**ಏ**

ಏಳಿಸು–ತಿರಸ್ಕರಿಸು ೨ ೧೭
ಏಱ್–ಗಾಯ, ಹುಣ್ಣು ೧೦ ೩೦ವ

**ಐ**

ಐಕಿಲ್–ಚಳಿ, ಶೀತ ೧ ೧೨೪

**ಒ**

ಒಚ್ಚತಂ–ಒಂದೇಸಮನೆ ೯ ೧೧ವ
ಒಡರಿಸು–ಉಂಟುಮಾಡು ೨ ೫೯
ಒಡರ್ಚು–ಹುಟ್ಟು ೧ ೧೪೭
ಒತ್ತಂಬ–ಒತ್ತಡ, ಬಲಾತ್ಕಾರ ೧ ೧೪೬
ಒಳ್ವಾರ–ಒಳ್ಳೆಯದಾರಿ ೩ ೫೧

**ಓ**

ಓ (ಓವು)–ಸ್ನೇಹವನ್ನು ತೋರಿಸು ೫ ೧೪೮
ಓಪ–ಇನಿಯ, ಕಾಂತ ೫ ೧೩೪
ಓರಂತೆ–ಒಂದೇಸಮನೆ ೨ ೪೯
ಓಸರಿಸು–ಹಿಂಜರಿ ೮ ೩೬
ಓಸರಿಸು–ಓರೆಯಾಗು ೫ ೧೯೩
ಓಸರಿಸು–ಸರಿಪಡಿಸು ೬ ೭೮
ಓಜ–ಗುರು, ಆಚಾರ್ಯ ೫ ೪೪

**ಕ**

ಕಂಕೆಲ್ಲಿ–ಅಶೋಕವೃಕ್ಷ ೮ ೨೯
ಕಂಟಣಿಸು–ಹೇಸಿಗೆಪಡು ೧೦ ೪೨ವ
ಕಂಠೀರವ–ಸಿಂಹ ೭ ೫೬
ಕಂಚುಕಿ–ರಾಣಿವಾಸದ ಅಧಿಕಾರಿ ೧ ೭೧
ಕಂಡರಸು–ಕೆತ್ತು, ಚಿತ್ರಿಸು, ಪ್ರತಿಮೆಯನ್ನು
ಕೊರೆ ೬ ೩೩
ಕಂತು–ಮನ್ಮಥ ೧ ೧೮
ಕಕ್ಷ್ಯ–ಮಹಲು, ತೊಟ್ಟಿ ೨ ೮೮
ಕಚ–ಕೂದಲು ೩ ೧೪೮
ಕಟಕ–ಪಾಳೆಯ, ಸೇನಾನಿವೇಶ ೭ ೫೫
ಕಡವು–ಕಡಹದಮರ, ಕದಂಬವೃಕ್ಷ ೭ ೨೩
ಕಡುಕೆಯ್–ಶಕ್ತಿಯನ್ನು ತೋರಿಸು,
ಸಾಹಸಮಾಡು ೧ ೧೩೪
ಕಡುಗೊರ್ಬು–ಬಹಳ ದಪ್ಪ ೮ ೧ವ
ಕಡುಪು–ಬಲ, ಪರಾಕ್ರಮ ೪ ೩
ಕಡುಪು–ಕ್ರೋಧ ೩ ೮
ಕಡುಸೇಪೆ–ಪೆಚ್ಚಾದ ಶ್ರಮ ೧ ೧೫೬
ಕಣ್ಗುಡಿತೆ–ಬೊಗಸೆಗಣ್ಣು, ಅಗಲವಾದ
ಕಣ್ಣು ೯ ೭
ಕಣ್ಗೆಡ್ಡಮಾಗು–ಶೋಭಿಸು ೨ ೮೯
ಕಣ್ಗೆಯ್–ನಿದ್ದೆಮಾಡು ೮ ೧೧
ಕಣ್ಗೆಸೆ–ಕಣ್ಣಿಗೆ ಒಪ್ಪು, ಶೋಭಿಸು ೧೨ ೯೦
ಕಣ್ಣಲಾಗನೆ–ಕ್ಷಣಮಾತ್ರದಲ್ಲಿ ೮ ೩೪
ಕಣ್ಪರಿವು–ಕಣ್ಣಿನ ಓಟ ೫ ೮೩
ಕಣ್ಮಲರ್–ಹೂವಿನಂತಿರುವ ಕಣ್ಣು, ವಿಶಾಲ
ವಾದ ಕಣ್ಣು ೨ ೮೪
ಕದಂಬ–ಗುಂಪು ೧೦ ೯೭
ಕದಪು–ಕೆನ್ನೆ ೫ ೧೫೦
ಕದರ್ಥನೆ–ಕಾಟ ೭ ೭
ಕದಿರ್–ಕಿರಣ ೫ ೧೫೮
ಕನಕಾಚಲ–ಚಿನ್ನದಬೆಟ್ಟ, ಮೇರುಪರ್ವತ
೮ ೫೭ವ
ಕನ್ನಡವಕ್ಕಿ–ಗಿಳಿ ೧ ೭೦
ಕನ್ನೆಮಾಡ–ರಾಜಪುತ್ರಿಯರು ವಾಸಿಸುವ
ರಾಣಿವಾಸ, ಕನ್ಯಕಾಂತಃಪುರ ೬ ೧೬೦
ಕಬರಿ–ಕೇಶಪಾಶ, ತಲೆಗೂದಲು ೬ ೨೪

ಕುಜಾತ–ಮರ ೫ ೧೦
ಕುಟುಕು–ಗ್ರಾಸ, ಆಹಾರ ೧ ೧೧೨ವ
ಕುಟಜ–ಬೆಟ್ಟಮಲ್ಲಿಗೆ ೯ ೧೭
ಕುಟ್ಟಿಮಂ–ನೆಲಗಟ್ಟು ೨ ೬೧
ಕುಟ್ಮಳ–ಮೊಗ್ಗು ೧ ೨೩೧
ಕುಡುವಿಲ್–ಬಾಗಿದಬಿಲ್ಲು ೧೦ ೫೫
ಕುತ್ತು–ಏಟು, ಹೊಡೆತ ೧೦ ೩೦
ಕುನ್ನಿ–ಯಾವುದಾದರೂ ಪ್ರಾಣಿಯ ಮರಿ ೧ ೧೩೯
ಕುಮುದ–ಬಿಳಿನೈದಿಲೆ ೧ ೧೮೪
ಕುಮುದಿನಿ–ನೈದಿಲೆಬಳ್ಳಿ ೪ ೬೧
ಕುರರ–ಒಂದು ಜಾತಿಯ ಹಕ್ಕಿ ೧ ೮೨
ಕುವಲಯ–೧ ಭೂಮಂಡಲ, ೨ ಕನ್ನೈದಿಲೆ ೯ ೮೫
ಕುಶ–ದರ್ಭೆ ೨ ೬೫
ಕುಸುಮಾಸ್ತ್ರ–ಮನ್ಮಥ ೧ ೧೮೮
ಕುಳಿರ್–ತಣ್ಣಗಿರು ೧ ೨೩೯
ಕುಸುರಿ–ಕಾಲಿನ ಆಭರಣ ೬ ೧೪೧
ಕೂರ್ಗಣೆ–ಚೂಪಾದ ಬಾಣ ೮ ೫೫ವ
ಕೂರ್ಚ–ಕುಂಚ ೯ ೩೪ವ
ಕೂರ್ತ (ಕೂರ್) –ಪ್ರೀತಿಸಿದ ೭ ೮೩
ಕೂರ್ಮೆ–ಪ್ರೀತಿ ೧ ೭೧
ಕೃಪಾಣ–ಕತ್ತಿ ೧ ೧೨
ಕೃಷ್ಣಿಕೆ–ಕಪ್ಪು ೬ ೧೬೯
ಕೆಂದಳ–ಕೆಂಪಾದ ಅಂಗೈ, ಕರತಲ ೩ ೨೫ವ
ಕೆಕ್ಕರಿಸು–ಹೆದರು ೧ ೧೩೪ವ
ಕೆಟ್ಟುದು–ಕಳೆದುಹೋದುದು ೮ ೧೧೭
ಕೆತ್ತು–ಮುಚ್ಚು ೧೦ ೪೪ವ
ಕೆತ್ತು–ಅದುರು, ಹಾರು ೨ ೮೭, ೫ ೧೪೪
ಕೆಲ–ಹತ್ತಿರ ೭ ೫೫ವ
ಕೇಗು–ನವಿಲಿನ ಧ್ವನಿ, ಕೇಕಾರವ ೭ ೧೩
ಕೇಣ–ದೀರ್ಘವಿಚಾರ, ಆಲೋಚನೆ ೫ ೧೨೪
ಕೇಯೂರ–ತೋಳುಬಂದಿ, ಅಂಗದ ೧ ೧೬
ಕೇರ್–ತಡಿಕೆ ೮ ೧೨೨
ಕೇರ್ಗಟ್ಟು–ತಡಿಕೆ ೧೦ ೬೫ವ
ಕೇಸಡಿ–ಕೆಂಪಾದ ಕಾಲು, ಹೆಜ್ಜೆ ೧೦ ೫೮
ಕೇಸರಫಲ–ವಕುಳವೃಕ್ಷದ ಕಾಯಿ, ಹಣ್ಣು ೫ ೨೫
ಕೇಸರಿಕಿಶೋರ–ಸಿಂಹದ ಮರಿ ೨ ೧೧೮
ಕೈಗಣ್ಣು–ಪೆಚ್ಚಾಗು ೭ ೧ವ
ಕೈವಾರ–ಸ್ತೋತ್ರ ೭ ೫೪
ಕೈವಿಡಿ–ಮದುವೆಯಾಗು ೬ ೧
ಕೊರ್ವು–ಹೆಚ್ಚಾಗು, ಅತಿಶಯವಾಗು, ಕೊಬ್ಬು ೧ ೧೨೭
ಕೋಟರ–ಪೊಟರೆ ೧ ೧೦೪
ಕಾರಹೊಗೆ–ಕಂಟುವಾಸನೆ ಬರುವ ಹೊಗೆ ೧೦ ೪೧
ಕಾಲೇಯಕ–ನಾಯಿ ೧೦ ೪೧
ಕೌಂಗು–ಅಡಕೆಮರ ೧ ೮೩ವ
ಕೌತುಕಾವಹ–ಆಶ್ಚರ್ಯವನ್ನುಂಟು ಮಾಡುವುದು ೪ ೬೮
ಕೌಶೇಯ–ರೇಶ್ಮೆವಸ್ತ್ರ ೧ ೧೮೩ವ
ಕೌಸ್ತುಭ–ವಿಷ್ಣುವಿನ ವಕ್ಷಸ್ಥಳವನ್ನು ಅಲಂಕರಿಸಿರುವ ರತ್ನ ೬ ೧೩೦
ಕೌಳುಡೆ–ದಿಂಬು ೬ ೩೧
ಕೌಳೇಯ–ನಾಯಿ ೧ ೧೮೦
ಕ್ಷುಣ್ಣ–ಪರಿಚಿತವಾದ ೨ ೧೦೬

ಖ

ಖಂಜ–ಕುಂಟ ೨ ೧೧೫
ಖುರಮಣಿಕ–ಕುದುರೆಯ ಕಾಲನ್ನು ಕಟ್ಟುವ ಗೂಟ ೭ ೯ವ
ಖಲೀನ–ಕಡಿವಾಣ ೩ ೮

ಖೇಚರ–ಆಕಾಶಚಾರಿ, ದೇವತೆ ೪ ೭೯

ಗ

ಗಂಡಸ್ಥಳ-ಕಪೋಲಪ್ರದೇಶ, ಕೆನ್ನೆ ೧ ೧೦೨
ಗಂಧವಹ–ವಾಯು, ಗಾಳಿ ೧೦ ೧೨
ಗಂಧಸಿಂಧುರ–ಮದ್ದಾನೆ ೩ ೧೧೭
ಗಜನಿಮೀಲನ–ಆನೆಯಂತೆ ಮದದಿಂದ ಕಣ್ಣುಮುಚ್ಚುವಿಕೆ ೩ ೭೮
ಗಡಪು–ವೇಗ ೪ ೪
ಗರ–ಗ್ರಹ ೩ ೯೬
ಗರ್ಹಿಸು–ನಿಂದಿಸು ೬ ೯೨
ಗವಿಲ–ಹಳದಿಮಿಶ್ರ ಕೆಂಬಣ್ಣ ೫ ೧೮
ಗವ್ಯೂತಿ–ಎರಡು ಕ್ರೋಶ, ಸುಮಾರು ನಾಲ್ಕು ಮೈಲಿ ೮ ೧೦೪ವ
ಗಾಂಪ–ಮೂಢ, ದಡ್ಡ ೩ ೮೨
ಗಾಡಿ-ಸೊಬಗು, ಚಲುವು ೬ ೧೧
ಗಾಳಿ–ದೆವ್ವ, ಪಿಶಾಚಿ ೩ ೯೬
ಗಾವರ–ಧ್ವನಿ ೪ ೩೧
ಗೀರ್ವಾಣಮಾರ್ಗ–ಆಕಾಶ ೯ ೯೬ವ
ಗುಂಡಿಗೆ–ಕಮಂಡಲು ೧ ೧೭೨
ಗುಣ–ದಾರ ೫ ೩೬
ಗುಣ್ಪು–ಆಳ ೧ ೯೭
ಗುಲ್ಫ–ಕಾಲಿನ ಹರಡು ೧ ೩೬
ಗೃಹಮಹತ್ತರ–ಮನೆವಾರ್ತೆಯ ಅಧಿಕಾರಿ ೩ ೬೧
ಗೆಂಟು–ದೂರ, ಹತ್ತಿರ ೩ ೪೦
ಗೆತ್ತು–ತಿಳಿದುಕೊಂಡು ೫ ೬೪ವ
ಗೋರಿಗೊಂಡ ಎರಳೆ–ಬೇಟೆಗಾರರ ಸಂಗೀತಕ್ಕೆ ಮೋಹಿಸಿ ಅವರ ಬೆನ್ನು ಹಿಂದೆ ಒಡಿಹೋಗುವ ಜಿಂಕೆ ೫ ೯೭
ಗೋವಿ–ಕೊಳಲು ೩ ೮೫
ಗ್ರೋಳಿಗೆ–ಹೆಣ್ಣು ಕುದುರೆ ೩ ೧೩

ಗೋತ್ರಸ್ಖಲನ–ಒಬ್ಬರ ಹೆಸರಿಗೆ ಬದಲಾಗಿ ಮತ್ತೊಬ್ಬರ ಹೆಸರನ್ನು ಬಾಯಿತಪ್ಪಿ ಹೇಳುವುದು ೬ ೧೩೫

ಘ

ಘನಮಾರ್ಗ–ಆಕಾಶ ೮ ೧೦೧
ಘನಸಮಯ–ಮಳೆಗಾಲ ೭ ೨೨
ಘರ್ಮಬಿಂದು–ಬೆವರುಹನಿ ೧ ೬೦
ಘೂರ್ಣಿಸು–ಅಲ್ಲೋಲಕಲ್ಲೋಲವಾಗು ೨ ೧೦೨
ಘೋಣ–ಮೂಗು ೩ ೫

ಚ

ಚಂಚರೀಕ–ದುಂಬಿ ೭ ೯ವ
ಚಂಚು–ಕೊಕ್ಕು ೧ ೧೪೭
ಚಂಡಿಕೆ-ಮುಡಿಗಂಟು, ಜುಟ್ಟು ೧ ೩೪
ಚಟೂರಿಸು–ಮುಖಸ್ತುತಿಮಾಡು, ಪೋಸಗೊಳಿಸು ೩ ೧೦೪
ಚಪ್ಪರಿಸು–ಹೆದರಿಸು ೮ ೪೬ವ
ಚಮರೀಜ–ಚಾಮರ ೩ ೨೨
ಚಮ್ಮಟಿಗೆ–ಚಾವಟಿ ೧೦ ೩೦ವ
ಚರು–ಹೋಮ ಮಾಡಲು ಉಪಯೋಗಿಸುವ ಅನ್ನ ೧ ೧೮೫
ಚಾಗವಿಕ್ಕು–ಹರಡು ೯ ೧೦ವ
ಚೆಂಬಿಸಿಲ್–ಕೆಂಬಿಸಿಲು ೨ ೩೫
ಚಚ್ಚರ–ಬೇಗ ೪ ೮
ಚತುಷ್ಪಥ–ನಾಲ್ಕು ಬೀದಿ ಕೂಡುವ ಸ್ಥಳ, ಚೌಕ ೨ ೬೬
ಚರ್ಚೆ–ಲೇಪನ ೫ ೧೪೦ವ
ಚಾಟು–ಪ್ರಿಯವಚನ ೫ ೧೭೬ವ
ಚಾಮೀಕರ–ಚಿನ್ನ ೬ ೧೦ವ
ಚುಬುಕ–ಗಲ್ಲ ೩ ೩೪

### ಜ

ಜಂಝಾಸಮೀರ–ವಾಳಿಯಿಂದ ಕೂಡಿದ ಬಿರುಗಾಳಿ ೯ ೧೫

ಜಂಬೂಫಳ–ನೇರಳೆಹಣ್ಣು ೫ ೨೦೯

ಜಘನ–ಸೊಂಟ ೬ ೪೧

ಜಡಿ–ಗದರಿಸು ೩ ೮೯

ಜಡಿಪ–ತರ್ಜನೆ, ಬೆದರಿಕೆ ೮ ೪೬ ವ

ಜವ್ವನಿಗ–ತರುಣ ೫ ೪೫

ಜಾಗರ–ಅಂಕುರಾರ್ಪಣದ ಸಸಿ, ಪೈರು ೩ ೧೦೫ ವ

ಜಾತಿಸ್ಮರತೆ–ಹಿಂದಿನ ಜನ್ಮದ ನೆನಪು ೧೦ ೫

ಜಾದಿ–ಹೆಜ್ಜಾಜಿ ಹೂವು ೧ ೨೯

ಜಾನುಚಂಕ್ರಮಣ–ಅಂಬೆಗಾಲಿಕ್ಕುವಿಕೆ ೨ ೫೮

ಜಿಗಿಲ್–ಅಂಟಿಕೊಳ್ಳು ೧ ೧೦೧.

ಜೂಟ-ಕೂದಲಿನ ಗುಂಪು, ಮುಡಿಕಟ್ಟು ೧ ೧

ಜೋಗವಟ್ಟಿಗೆ-ತಪಸ್ಸು ಮಾಡುವಾಗ ಬೆನ್ನು ಮೊಳಕಾಲುಗಳಿಗೆ ಕಟ್ಟಿ-ಕೊಳ್ಳುವ ಬಟ್ಟೆ, ಯೋಗಪಟ್ಟಿಕೆ ೪ ೬೫

ಜೇವಡೆ–ಬಿಲ್ಲಿನ ಟಂಕಾರ ೧೦ ೫೫ ವ

ಜೋವೇಱು–ಬೆಂಡಾಗು ೮ ೪೫

### ಝ

ಝಂಪಾಳ–ಮುಸುಕು ೬ ೨೫

ಝೋಂಪಿಸು–ಮೈಮರೆ ೮ ೧೧೪

### ಡ

ಡವಕೆ-ಒಂದು ಬಗೆಯ ವಾದ್ಯ ೩ ೨೮

ಡಾವರ-ಕ್ಷೋಭೆ ೫ ೫೭

ಡಿಂಡಿಮ-ಒಂದು ಬಗೆಯ ಚರ್ಮವಾದ್ಯ ೧ ೧೨೩

### ತ

ತಗುಳ್-ಆರಂಭಿಸು ೧ ೨೪೧ ವ

ತಗುಳ್–ಮುತ್ತು, ಆವರಿಸು ೨ ೧೩

ತಗುಳ್ಚು–ಪ್ರಾರಂಭಿಸು ೫ ೩೧

ತಗೆ-ಅಡ್ಡಿ, ತಡೆ ೧೦ ೪೯

ತನಿಗೆತ್ತು–ಬಹಳವಾಗಿ ನಡುಗು ೭ ೫೩

ತನೂಜಾತ–ಮಗ ೨ ೫೨

ತಮಾಲ–ಹೊಂಗೆಮರ ೧ ೭೯

ತರ–ಗುಂಪು, ಸಾಲು, ವ್ಯಾಪನೆ ೨ ೧೨

ತರ್ಜಿತೆ–ಧಿಕ್ಕರಿಸಲ್ಪಟ್ಟವಳು ೬ ೯೨

ತಲೆವಟ್ಟಿರು–ಆಸಕ್ತವಾಗು ೩ ೯೧

ತವಂಗ–ಬಾಗಿಲ ಜಗುಲಿ ೮ ೮

ತಳವೆಳಗಾಗು–ಬೆರಗಾಗು ೯ ೪

ತಳಿರ್ಗಾಸೆ–ಕಾವಿಬಟ್ಟೆ ೧ ೯೭ವ

ತಳಿರ್ವಾಸು–ಚಿಗುರಿನ ಹಾಸಿಗೆ ೮ ೩೮

ತಳೆ-ಧರಿಸು, ಅನುಭವಿಸು ೫ ೫೪

ತಳ್ಕು–ಲೇಪನ ೧ ೨೬

ತಳ್ಕೈಸು–ಅಪ್ಪು, ಆಲಿಂಗಿಸು ೨ ೧೧೫

ತಳ್ಪೊಯ್–ಹೊಡೆ, ಅಪ್ಪಳಿಸು ೯ ೬೧

ತಳ್ಪೊಯ್–ಸೇರು, ಕೂಡು ೨ ೧೨೩

ತಾಂಬೂಲಕರಂಕವಾಹಿನಿ–ಸಂಚಿನವಳು, ಹಡಪವಳಿತಿ ೨ ೪೪ ವ

ತಾಣ–ಸ್ಥಾನ, ಸ್ಥಳ ೧ ೧೦೩

ತಾರನಗೇಂದ್ರ–ಕೈಲಾಸಪರ್ವತ ೬ ೧೦೯

ತಾರಾಗ–ಕೈಲಾಸ ೪ ೧೬

ತಾರಾಚಲ–ಕೈಲಾಸ ೪ ೫

ತಾಳವೃಂತ–ಬೀಸಣಿಗೆ ೧ ೨೪೧

ತಿಂತಿಣಿ–ಗುಂಪು ೪ ೯

ತಿಗ್ಮರೋಚಿ–ಸೂರ್ಯ ೭ ೨೫

ತಿಣ್ಣ–ತೀಕ್ಷ್ಣ, ಉಗ್ರ ೧ ೧೬೪

ತಿಣ್ಪು–ಹೆಚ್ಚಳ, ಅತಿಶಯ ೮ ೧೨೫ ವ

ತಿಮಿರ–ಕಣ್ಣಿಗೆ ಬರುವ ಒಂದು ಬಗೆಯ ರೋಗ, ಪರೆ ೩ ೬೪.

ತಿರಸ್ಕರಿಣಿ–ಪರದೆ, ತೆರೆ ೮ ೧೦೪
ತಿರು–ಬಿಲ್ಲಿನಹುರಿ, ಮೌರ್ವಿ ೯ ೧೪
ತಿರ್ಯಗ್ಜಾತಿ–ಮನುಷ್ಯೇತರ ಪ್ರಾಣಿಯ ಜಾತಿ ೯ ೪೩
ತಿಳಿಪು–ಸಮಾಧಾನಪಡಿಸು ೧ ೫೧
ತಿಱು–ಕೊಯ್ಯು (ಹೂವು ಮೊದಲಾದು ವಸ್ತು) ೮ ೪೬ ವ
ತಿಱುಕಲ್–ಅಣೆಕಲ್ಲು ೬ ೫೮
ತುರಂಗವದನ–ಕಿನ್ನರ ೪ ೪
ತುರಗಬ್ರಹ್ಮಚರ್ಯ–ಹೆಣ್ಣು ಕೊಡುವವರು ಇಲ್ಲದುದರಿಂದ ಗತಿಯಿಲ್ಲದೆ ತಾಳಿರುವ ಬ್ರಹ್ಮಚರ್ಯ ೮ ೩ ವ
ತುರಿಪ–ತ್ವರೆ, ವೇಗ ೩ ೨೬
ತುಱುಂಬು–ತುರುಬು, ಮುಡಿಕಟ್ಟು ೧ ೨೯
ತುಱುಗಲ್–ಗುಂಪು ೩ ೧೯
ತುಱುಗೆವೆಗಣ್–ಒತ್ತಾಗಿರುವ ರೆಪ್ಪೆಗಳುಳ್ಳ ಕಣ್ಣು ೨ ೧೯
ತೂಗುಂದೊಟ್ಟಲ್-ತೂಗಾಡುವ ತೊಟ್ಟಿಲು ೨ ೫೬
ತೂಱಲಗೊಂಬು–ಸಣ್ಣಕೊಂಬೆ ೧ ೧೦೦
ತೃಣಪುಲೀ–ಹುಲ್ಲಿನ ಉಕ್ಕಡ ೮ ೧ವ
ತೆರಂದಿರಿ–ಅವಕಾಶ ಮಾಡಿಕೊಳ್ಳು ೧ ೨೪೦
ತೆರಳ್ಚು–ಹೋಗುವಂತೆ ಮಾಡು, ಹೊರಡಿಸು ೧ ೧೩೪
ತೆರೆ–ಚರ್ಮದ ಸುಕ್ಕು ೧ ೧೪೫
ತೆಳ್ವಸಿರ್–ತೆಳುವಾದ ಗರ್ಭ ೨ ೯೬
ತೆಱಂಬೊಳೆ–ಚೆನ್ನಾಗಿ ಪ್ರಕಾಶಿಸು ೩ ೧೧೨
ತೊಂಗಲ್–ಗಂಟು ೨ ೫೮
ತೊಳ್ತು–ದಾಸಿ, ಸೇವಕಿ ೫ ೧೬೪
ತೊಡರ್ಚು–ಮುಡಿಸು, ಜೋಡಿಸು ೫ ೫೧ವ
ತೊಡರ್ಪು–ತೊಡಕು ೯ ೨೩
ತೋರಣ–ಹೆಬ್ಬಾಗಿಲು, ಹೊರಬಾಗಿಲು ೬ ೧೬ವ
ತೊರೆ–ಮೊಲೆಯಲ್ಲಿ ಹಾಲುತುಂಬಿಕೊಳ್ಳು ೮ ೧೫೬
ತೊವಲ್ಪೊರಜ–ಚರ್ಮದ ಹುರಿಯನ್ನು ಕಟ್ಟುವಿಕೆ ೧೦ ೩೦ವ
ತೋರ್ಕೆಗೊಡು–ಕಾಣಿಕೆಯಾಗಿ ಒಪ್ಪಿಸು ೬ ೮೦
ತ್ರಯೀ–ಮೂರು ವೇದಗಳು ಋಕ್, ಯಜು, ಸಾಮ ೪ ೪೦
ತ್ರಿಪಥಗೆ–ಗಂಗಾನದಿ ೧ ೧೯೨
ತ್ರಿವರ್ಗ-ಧರ್ಮ, ಅರ್ಥ, ಕಾಮಗಳು ೨ ೨೩

ದ

ದಂದುಗ–ದುಃಖ ೫ ೧೫
ದಂಡತೋರಣ–ಅರೆಕಾಲು ೬ ೨೦
ದಂತಪತ್ರ–ದಂತದ ಓಲೆ ೮ ೬೦
ದಂತುರ–ವ್ಯಾಪ್ತವಾದ ೧೦ ೩೦
ದಡ್ಡಿ–ಹಚ್ಚಡ ೬ ೨೩ವ
ದಡ್ಡು–ಜಡ್ಡು ೧೦ ೩೭ವ
ದಳಿಂಬ–ಮೆತ್ತೆ ೯ ೮ವ
ದಾಂಗುಡಿವರಿ–ಹಬ್ಬು ೩ ೧೦೮
ದಾನಲೇಖೆ–ಮದೋದಕದ ಗೆರೆ ೮ ೯೧
ದಾವದಹನ-ಕಾಡುಕಿಚ್ಚು ೫ ೧೧೬
ದಿನಮುಖ-ಸೂರ್ಯೋದಯ ಕಾಲ ೧ ೧೨೫
ದೀಧಿತಿ–ಕಿರಣ ೫ ೧೫೮
ದೀರ್ಘಿಕೆ–ಕೊಳ, ಜಲಾಶಯ ೩ ೫೧ವ
ದುಗುಲ–೧ ರೇಶ್ಮೆಬಟ್ಟೆ ೨ ಉತ್ತಮವಾದ ಬಟ್ಟೆ ೫ ೨೦೦
ದುರಾವೇಶ–ಕೆಟ್ಟ ತೊಳ ೫ ೮೦
ದುರೋದರ–ಜೂಜಾಟ ೬ ೯೨
ದುರ್ವಿದಗ್ಧ–ಮೂಢ, ದಡ್ಡ ೬ ೪೧

ದುಶ್ಚ್ಯವನ-ಇಂದ್ರ ೩ ೮೦

ದುಃಶ್ರವ-ಕೇಳಲು ಕಷ್ಟಕರವಾದುದು ೮ ೩೧ವ

ದೂದವಿ-ದೂತಿ ೮ ೩೫ವ

ದೂಸಱು-ಕಾರಣ, ನಿಮಿತ್ತ ೯ ೫೧

ದೆಪ್ಪಳಿಸು-ಬೆರಗಾಗು ೧ ೧೩೬ವ

ದೋಷಾಕರ-ಚಂದ್ರ ೫ ೧೫೨

ದೇವಕುಲ-ದೇವಾಲಯ ೨ ೬

ದೋಣಿವೋಗು-ಕುಳಿಬೀಳು ೮ ೩೭

ದೌವಾರಿಕ-ಬಾಗಿಲುಕಾಯುವವನು ೩ ೧ವ

ದ್ರೋಣಿ-ದೋಣ್ಣೆ ೩ ೧೦೫

ಧ

ಧವಳಾತಪತ್ರ-ಬಿಳಿಕೊಡೆ ೩ ೧೧೪

ಧಾಮ-ಹೊಳಪು, ಕಾಂತಿ ೨ ೩೭

ಧಾರ್ಮಿಕ-ಉಪಾಸಕ, ಸಾಧಕ ೮ ೩೭

ಧಾರ್ಷ್ಟ್ಯ-ದಿಟ್ಟತನ ೬ ೧೨೩

ಧೂಸರ-ಮಲಿನ, ಕೊಳಕಾದ ೬ ೧೦ವ

ಧೌತ-ತೊಳೆಯಲ್ಪಟ್ಟ, ಒಗೆಯಲ್ಪಟ್ಟ ೨ ೪೧

ಧ್ರುವ-೧ ಧ್ರುವನಕ್ಷತ್ರ, ೨ ಒಂದು ಬಗೆಯ ತಾಳ ೪ ೫೪ವ

ನ

ನಡಪು-ಕಾಪಾಡು, ಪೋಷಿಸು ೧ ೨೬೦ವ

ನಣ್ಪು-ಸ್ನೇಹ ೭ ೭

ನನೆಯಂಬು-ಹೂವಿನಬಾಣ ೮ ೩೧ವ

ನಯನತ್ರಿಭಾಗ-ಕುಡಿನೋಟ, ಕಟಾಕ್ಷ ೬ ೧೦೫

ನರ್ಮಾಲಾಪ-ಹಾಸ್ಯಕರವಾದ ಮಾತುಕತೆ ೮ ೯೪

ನಲವರಿಕೆ-ಪ್ರೀತಿ ೩ ೪೧

ನಾಗೇಂದ್ರ-ಆದಿಶೇಷ ೧ ೧

ನಾಡಾಡಿ-ಸಾಮಾನ್ಯ ೬ ೧೧

ನಾಣೆಱಿಕ-ಲಜ್ಜೆಯಿಂದ ಕೂಡಿದ ಪ್ರೀತಿ ೫ ೧೨೭

ನಾರಂಗವಟ್ಟೆ-ಕೆಂಪುಬಟ್ಟೆ, ಕಿತ್ತಲೆಹಣ್ಣಿನ ಬಣ್ಣದ ಬಟ್ಟೆ ೭ ೬೯ವ

ನಾರದತನಯೆ-ನಾರದಮಹರ್ಷಿಯ ಸಾಕು ಮಗಳಾದ ಭದ್ರೆ ಎಂಬುವಳು ೬ ೧೬೭

ನಾರಾಚ-ಬಾಣ ೨ ೨೬

ನಾಳ್ಗಡಿಗಳೆ-ಗಡೀಪಾರು ಮಾಡು ೩ ೮೯

ನಿಕ್ಕುವಂ-ನಿಜವಾಗಿಯೂ, ಸತ್ಯವಾಗಿಯೂ ೯ ೫೨

ನಿಚ್ಚೈದೆ-ದೀರ್ಘ ಸುಮಂಗಲಿ ೯ ೧೧೨

ನಿತಂಬ-ಬೆಟ್ಟದ ಮಧ್ಯಪ್ರದೇಶ ೯ ೧೧ವ

ನಿತ್ತರಿಸು-ಸಹಿಸು, ತಾಳು ೮ ೨೭

ನಿಮಿರ್-ಪ್ರಸರಿಸು, ಹರಡು ೧ ೮೧

ನಿಮಿರ್-ಮೇಲಕ್ಕೆತ್ತು, ಮೇಲುಮುಖವಾಗು ೧ ೧೭೨

ನಿಮಿರ್ಕೆ-ಆಧಿಕ್ಯ, ವಿಸ್ತಾರ ೬ ೧೩೦

ನಿಮಿರ್ಚು-ಬಿಚ್ಚು ೫ ೭೭

ನಿರ್ಮೋಕ-ಹಾವಿನಪರೆ ೧ ೬೮

ನಿರ್ಲಕ್ಷಣೆ-ಅಮಂಗಳಸ್ವರೂಪಳು ೫ ೧೮೯

ನಿಲಿಂಪನಿಕಾಯ-ದೇವತೆಗಳ ಗುಂಪು ೬ ೩೨

ನಿಶಾವಸಾನ-ಬೆಳಗಿನ ಜಾವ ೨ ೭೨

ನಿಷ್ಪಂದಗಾತ್ರ-ಅಲುಗಾಡದ ಶರೀರವುಳ್ಳವನು ೮ ೧೧೪

ನಿಸದಂ-ನಿಜವಾಗಿಯೂ ೫ ೧೯೧

ನಿಸ್ತ್ರಿಂಶ-ಹಿಂಸಕ, ಘಾತಕ ೫ ೧೫೨

ನಿಳ್ಕು-ಚಾಚು ೨ ೧೪

ನೀಡ-ಗೂಡು ೧ ೧೪೭

ನೀರದ-ಮೇಘ ೯ ೭೯

ನೀರಿೞಿ-ಸ್ನಾನಮಾಡು ೫ ೧೮೩

ನೀರೇರುಹ-ಕಮಲ ೧ ೩೯

ನೀರ್ಗೊಡು-ತರ್ಪಣವನ್ನು ಕೊಡು ೯ ೩೭ವ
ನೀರ್ಜೊಂಪ-ಜಲಮಂಟಪ ೮ ೧೨೪ವ
ನೀರ್ವಾಣ-ಜಲಾಶಯ ೪ ೧೯
ನೀಹಾರ-ಹಿಮ ೭ ೨೭
ನೀಱೆ-ಮಹಿಳೆ ೩ ೫೨
ನುಣ್ಚರ-ಇಂಪಾದ ಧ್ವನಿ ೮ ೬೦
ನೂಪುರ-ಕಾಲ್ಗಡಗ, ಕಾಲಂದಿಗೆ ೧ ೫೮ವ
ನೂಲ್-ಉಡಿದಾರ, ಒಡ್ಯಾಣ ೩ ೨೭
ನೂಲ್ವಿಗೆ-ಸೂತ್ರಹಿಡಿದು ಸಮಮಾಡು ೩ ೯
ನೃಶಂಸ-ಕ್ರೂರ, ಹಿಂಸಕ ೩ ೧೧೩ವ
ನೆಗಪು-ಎತ್ತು ೫ ೧೧೫
ನೆಗಟಿಸ್-ಮಾಡು, ಏರ್ಪಡಿಸು ೫ ೩೧
ನೆಗಟ್ಟು-ಮಾಡು ೨ ೧೧೬
ನೆಲ್-ಬತ್ತ ೧ ೧೨
ನೆಲಸಸುಫ್ಫುಡಿಸು-ಹಸ್ತಲಾಘವವನ್ನು ಕೊಡು ೬ ೧೧೭ವ
ನೆಲಮಾಡ-ಮಹಡಿ ೩ ೨೫
ನೆಲೆವರ್ಚು-ದಡವನ್ನು ಮೀರು ೨ ೧೦೨
ನೆಟಲಿಕ್ಕು-ಪ್ರತಿಬಿಂಬಿಸು ೯ ೧೧ವ
ನೇತ್ರದುಕೂಲ-ಸೂಕ್ಷ್ಮವಾದ ರೇಶ್ಮೆಬಟ್ಟೆ, ಉತ್ತಮವಾದ ಬಟ್ಟೆ ೧ ೬೮ವ
ನೇತ್ರಸೂತ್ರ-ಮಂಗಳಸೂತ್ರ ೫ ೧೯
ನೇಣ್-ಹಗ್ಗ ೩ ೪
ನೇಲ್-ನೇತುಹಾಕು ೪ ೬೫
ನೇಸಱ್-ಸೂರ್ಯ ೧ ೧೧೮
ನೈಷ್ಠುರ್ಯ-ಕಠಿನತ್ವ, ಒರಟುತನ ೩ ೮೦
ನೋಂಪಿ-ವ್ರತ, ತಪಸ್ಸು ೬ ೬೧

ಪ

ಪಂಜರಿಸು-ಪಂಜರದಂತೆ ವಿರಳವಾಗು ೧ ೯೪೮
ಪಂದಲೆ-ಆಗತಾನೆ ಕತ್ತರಿಸಿದ ಹಸಿತಲೆ ೮ ೭೮
ಪಂದೊವಲ್-ಹಸಿಯಚರ್ಮ ೧೦ ೪೪ವ
ಪಕ್ಕಣ-ಬೇಡರಬೀಡು, ಶಬರಾಲಯ ೧೦ ೪೯
ಪಕ್ಕರೆ-ಪಕ್ಷರಕ್ಷೆ ೩ ೬
ಪಕ್ಷದ್ವಾರ-ಪಕ್ಕದ ಬಾಗಿಲು, ದಿಡ್ಡಿಬಾಗಿಲು ೫ ೧೪೬
ಪಗಿಲ್-ಅಂಟಿಕೊಳ್ಳು ೧ ೧೨೪
ಪಟಚ್ಚರ-ಜೀರ್ಣವಸ್ತ್ರ ೯ ೮೧
ಪಟಮಂಡಪ-ಗುಡಾರ, ಡೇರೆ ೩ ೧೨೭ವ
ಪಟವಾಸ-ಸುವಾಸನೆ ಪುಡಿ, ಬುಕ್ಕಿಹಿಟ್ಟು ೨ ೨೬
ಪಟ್ಟವಣೆ-ಸಿಂಹಾಸನ, ರಾಜಯೋಗ್ಯವಾದ ಪೀಠ ೩ ೧೦೫
ಪಟ್ಟಿಸ-ಈಟಿ ೮ ೩೮
ಪಡಿಕೆ-ಬಂಧನ ೧೦ ೪೪
ಪಡಿಗ-ಮುಖ ತೊಳೆಯುವ ನೀರಿನಪಾತ್ರೆ ೨ ೩೪
ಪಡಿಯಱ-ಬಾಗಿಲು ಕಾಯುವವನು, ಪ್ರತೀಹಾರ ೭ ೧ವ
ಪಡಿಯಱತಿ-ಬಾಗಿಲು ಕಾಯುವವಳು, ಪ್ರತೀಹಾರಿ ೧ ೨೨ ವ
ಪಡಿಯಱಿಕೆ-ಬಾಗಿಲು ಕಾಯುವುದು ೨ ೩೪
ಪಡಿವರಿಜ-ಪ್ರತಿಮೆ, ವಿಗ್ರಹ ೫ ೧೧ ವ
ಪಡೆವಳ್ಳ-ದಳವಾಯಿ, ಸೇನಾಪತಿ ೩ ೮೯
ಪತಂಗ-ಸೂರ್ಯ ೧ ೧೦೦
ಪತ್ತುಗೆವಿಡು-ಬಾಯಿತೆರೆ ೧ ೧೧೭
ಪತ್ತುವಿಡು-ಕಳೆ, ಬಿಡು, ತೊರೆ ೫ ೯ವ
ಪತ್ರಭಂಗ-ಹೆಂಗಸರ ಕೆನ್ನೆ ಮೊದಲಾದ ಸ್ಥಳಗಳಲ್ಲಿ ಬರೆಯುವ ಚಿತ್ರ ೬ ೨೫ವ

ಪದಂಪು-ಪ್ರೀತಿ ೮-೬೨
ಪದಪು-ಸಂಭ್ರಮ, ಉತ್ಸಾಹ, ಒಲವು, ಪ್ರೀತಿ ೨ ೧೧
ಪದವೆಱು-ಅವಕಾಶವನ್ನು ಪಡೆ ೮ ೩೪
ಪದಾತಿ-ಕಾಲಾಳು ೩-೧ ವ
ಪದಿರಪಱಿ-ವಿವಿಧ ಶಬ್ದಗಳನ್ನುಂಟು ಮಾಡುವ ಚರ್ಮವಾದ್ಯ ೩ ೨೨ವ
ಪನೆ-ಹಲ್ಲು ೨ ೫೬
ಪರದಾರ-ಪರಸ್ತ್ರೀ ೩ ೯೮
ಪರಭಾಗ-ವರ್ಣೋತ್ಕರ್ಷ ೧ ೨೧೫
ಪರಭೃತ-ಕೋಕಿಲೆ ೫ ೧೦೦ವ
ಪರಶು-ಕೊಡಲಿ ೮ ೩೮
ಪರಾಸು-ಮೃತ ೯ ೩೭
ಪರಿಕಣೆ-ಕಾಲುವೆ ೩ ೨೭
ಪರಿಗ್ರಹ-ಪರಿವಾರ ೪ ೩
ಪರಿಜು-ಆಕಾರ, ರೂಪು ೧೦ ೩೦ವ
ಪರಿಡೋಣಿ-ನೀರು ಹರಿಯುವ ದೋಣಿ ೭ ೨೧
ಪರಿಣತವಯಸ-ಮುದುಕ, ವೃದ್ಧ ೮ ೧೫೮
ಪರಿಣತಿ-ಕೊನೆಯ ಅವಸ್ಥೆ ೨ ೫೨
ಪರಿಣತೆ-ಪಾರಂಗತೆ, ಕುಶಲೆ ೬ ೯೨ವ
ಪರಿನಾಳಿಕೆ-ನೀರು ಹರಿಯುವ ನಲ್ಲಿ ೭ ೨೮
ಪರಿಪಡು-ಓಡಿಬರು ೧೦ ೧೯
ಪರಿಭವಿಸು-ಅವಮಾನಗೊಳಿಸು ೩ ೯೮
ಪರಿರಂಭಣ-ಆಲಿಂಗನ ೧ ೭೨
ಪರಿಲಂಬ-ವಿಳಂಬ ೯ ೧ವ
ಪರಿವಱಿಯಾಗು-ಚೂರು ಚೂರಾಗು ೮ ೪೮
ಪರಿವ್ರಾಜಿಕೆ-ಸನ್ಯಾಸಿನಿ ೬ ೧೬೬ವ
ಪರಿಷ್ವಂಗ-ಆಲಿಂಗನ ೨ ೪೯
ಪರ್ಚು-ಪಿಸುಮಾತಾಡು ೮ ೧೪೭
ಪರ್ಣಪುಟ-ದೊನ್ನೆ ೧ ೧೭೬ವ
ಪರ್ಯಂಕ-ಮಂಚ ೧ ೨೭
ಪರ್ಯಾಣ-ಜೀನು ೯ ೨೦ವ
ಪರ್ಯುಷಿತ-ಮಾಸಿಹೋದ, ಒಣಗಿಹೋದ ೬ ೧೦ವ
ಪಲ್ಲಣ-ಜೀನು ೪ ೨೫
ಪಲ್ಲಣಿಸು-ಜೀನುಹಾಕು ೮ ೧೦೧ವ
ಪಲ್ವಱಿಗುಟ್ಟು-ಹಲ್ಲುಮೊರೆ ೭ ೨೩ವ
ಪವಣ್-ಅಳತೆ, ಪ್ರಮಾಣ ೨ ೮೫
ಪವಣ್ಗಟಿ-ಅಳತೆ ಮೀರು ೯ ೭
ಪಸದನಂಗೊಳ್-ಅಲಂಕಾರವನ್ನು ಹೊಂದು, ಸಿಂಗರಿಸಲ್ಪಡು ೫ ೬೯
ಪಸಾದ-ಅನುಗ್ರಹ, ಪ್ರಸಾದ ೮ ೯
ಪಸಾಯಿತ-ಪ್ರೀತಿಪಾತ್ರ, ವಿಶ್ವಾಸಪಾತ್ರ ೮ ೪ವ
ಪಸಿಯಬಣ್ಣ-ಶ್ಯಾಮಲವರ್ಣ ೧ ೩೫
ವಸುರ್ಪು-ಹಸುರುಬಣ್ಣ ೧ ೩೫
ಪಸೆ-ಹಾಸಿಗೆ ೧೦ ೫೮ವ
ಪಳಂಚಲೆ-ತಾಗು, ತಗುಲು, ಬಡಿ ೪ ೩೧ (ಪಳಂಚು+ಅಲೆ)
ಪಳಂಚಿಸು-ಕುಟ್ಟು ೧ ೩೧
ಪಳಚ್ಚನಾಗು-ನಿರ್ಮಲವಾಗು, ಸ್ವಚ್ಛವಾಗು ೯ ೬೯
ಪಳವಿಸು-ಅಳು, ಪ್ರಲಾಪಿಸು ೯ ೭೩
ಪಳವು-ಕಾಡು, ಅರಣ್ಯ ೧ ೮೧
ಪಳುಕು-ಸ್ಫಟಿಕ ೧ ೬೦ವ
ಪಳ್ಳ-ಕಿರುಹೊಳೆ ೮ ೧ವ
ಪಱವಾವಿಗೆ-ಹಳೆಯ ಬಾವಿ ೮ ೧ವ
ಪಱಿವಡು-ಬಿಟ್ಟುಹೋಗು ೮ ೧೧೮
ಪಱಿವಱಿಯಾಗು-ಚೆಲ್ಲಾಪಿಲ್ಲಿಯಾಗು, ಚದುರು ೧೧ ೫ವ

ಪಱೆ–ತಮ್ಮಟೆ ೩ ೨೨
ಪಲವಿಸು–ಪ್ರಲಾಪಿಸು ೫ ೧೬೯
ಪಾಂಗು–ರೀತಿ, ಬಗೆ ೫ ೧೬೮
ಪಾಡಿವ–ಪಾಡ್ಯ ೨ ೧೧೮ವ
ಪಾಡಱೆ–ಆಯಾಸಗೊಳ್ಳು ೧೦ ೧೯
ಪಾಪೆ–ಕಣ್ಣುಗುಡ್ಡೆ ೬ ೭೦
ಪಾಲೆ–ಕಿವಿಯ ಹೊರಭಾಗ, ಕಿವಿಯ ಹಳ್ಳ ೬ ೫೨
ಪಾಲ್ಗಡಲ್–ಕ್ಷೀರಸಮುದ್ರ ೩ ೫೬
ಪಾವಸೆ–ಪಾಚಿ ೬ ೧೬೮
ಪಾವುಡ–ಕಾಣಿಕೆ ೬ ೧೫೭
ಪಾಸಱೆ–ಹಾಸುಗಲ್ಲು ೫ ೧೫
ಪಿಂಗಳಿ–ಸಿಂಹ ? ೧ ೧೧೮
ಪಿಂಗು–ಹಿಂಗು, ಬತ್ತು ೧ ೨೩೫
ಪಿಡಿ–ಹೆಣ್ಣಾನೆ ೩ ೧೧೩
ಪಿಪಾಸೆ–ನೀರಡಿಕೆ ೧ ೧೫೬
ಪೀಲಿ–ನವಿಲುಗರಿ ೧ ೯೭
ಪೀಲಿದಱೆ–ನವಿಲುಗರಿಯ ಛತ್ರಿ ೮ ೬೧
ಪುಂಖ–ಗರಿ ೫ ೧೦೬
ಪುಂಡರೀಕ–ಬಿಳಿಯಕಮಲ ೨ ೬೨
ಪುಟವೇಱು–ಬೆಳೆ, ವೃದ್ಧಿಹೊಂದು ೨ ೭೭
ಪುಣಂಬು– ಬಾಣ ೫ ೧೦೮
ಪುತ್ರಿಕೆ–ಪುತ್ತಳಿ ೧ ೩೫
ಪುದಿ–ಸೇರು, ಕೂಡು ೧ ೨೨೬
ಪುದುವು–ಗುಂಪು ೧ ೧೦೫
ಪುಯ್ಯಲ್ಚು–ಗೋಳಾಡು ೫ ೧೬೯
ಪುರುಡು–ಅಸೂಯೆ, ಮತ್ಸರ, ಪೈಪೋಟಿ, ಸ್ಪರ್ಧೆ ೫ ೧೩೮
ಪುರೋಡಾಶ–ಒಂದು ಬಗೆಯ ಹೋಮ ದ್ರವ್ಯ ೧ ೧೮೫
ಪುಷ್ಪದಾಮ–ಹೂವಿನ ಮಾಲಿಕೆ ೬ ೨೩

ಪುಷ್ಕರ–ಸೊಂಡಲಿನ ತುದಿ ೧ ೧೮೪
ಪುಳಕ–ರೋಮಾಂಚ ೨ ೭೫
ಪುಳಿಂದ–ಬೇಡ, ವ್ಯಾಧ ೧ ೯೬ವ
ಪುಱಿಲ್–ಮರಳು ೫ ೨೦
ಪೂಗದ್ರುಮ–ಅಡಕೆಯಮರ ೧ ೧೭೯
ಪೂಣ್–ಪ್ರತಿಜ್ಞೆಮಾಡು ೬ ೯೬
ಪೂರ್ಣಪಾತ್ರ–ಉಡುಗೊರೆ, ಬಹುಮಾನ ೨ ೫೪
ಪೆಂಪು–ಹಿರಿಮೆ ೩ ೧೦೦
ಪೆಪ್ಪಳಿಸು–ಹೆದರು, ಗಾಬರಿಗೊಳ್ಳು ೧೦ ೬೮
ಪೆರ್ಬೊನಲ್–ದೊಡ್ಡಪ್ರವಾಹ ೬ ೨೯
ಪೆಳಱು–ಹೆದರು ೩ ೧೨೦
ಪೆಱೆ–ಬಾಲಚಂದ್ರ ೨ ೧೯
ಪೆಱಪಿಂಗಿಸು–ಹಿಂದಕ್ಕೆಸರಿಸು ೮ ೧೦೪
ಪೇಱಡವಿ–ದೊಡ್ಡಕಾಡು ೮ ೧ವ
ಪೈಶಾಚಕ–ದೆವ್ವಹಿಡಿದವನು ೫ ೮೦
ಪೊಂಪುಱೆ–ಆಧಿಕ್ಯ, ಹೆಚ್ಚಳ ೧ ೯೭
ಪೊಂಬಱೆ–ಹೊಂಬಾಳೆ ೧೦ ೬೨
ಪೊಚ್ಚರಿಸು–ಉಬ್ಬಿಸು ೩ ೧೦೨
ಪೊಡಮಡು–ನಮಸ್ಕರಿಸು ೩ ೪೩
ಪೊಡರ್–ಚಲಿಸು ೧ ೧೭೫
ಪೊಡರ್-ಕಾಣಿಸಿಕೊಳ್ಳು, ಹುಟ್ಟು ೧ ೧೨೬
ಪೊಡರ್ಪು–ಚಲನೆ ೫ ೪೪ವ
ಪೊಣರ್ವಕ್ಕಿ–ಚಕ್ರವಾಕಪಕ್ಷಿ ೪ ೨೦
ಪೊಣ್ಮು–ಹೊಮ್ಮು, ಪ್ರಕಟವಾಗು ೧ ೫೮
ಪೊದಱ್–ಪ್ರಕಟವಾಗು, ಹೊರಪಡು, ವ್ಯಾಪಿಸು ೫ ೬೩
ಪೊನಲ್–ಪ್ರವಾಹ ೧ ೯೨
ಪೊನ್ನೀರ್–ಚಿನ್ನದರಸ ೮ ೬೦
ಪೊರೆ–ಪದರ ೫ ೨೦೦
ಪೊರೆ–ವೃದ್ಧಿಹೊಂದು ೧ ೨೪

## ಬ

ಬವಸೆ–ಉದ್ಯೋಗ, ವ್ಯವಸಾಯ ಪ್ರಯತ್ನ ೮ ೭೭ವ

ಬಸವೞಿ–ಶಕ್ತಿಗುಂದು, ಮೈಮರೆ ೧ ೧೪೯

ಬೞಿಯಟ್ಟು-ದೂತನನ್ನು ಕಳುಹಿಸು ೩ ೧

ಬೞಿಸಲ್-ಜೊತೆಯಲ್ಲಿರು, ಹಿಂಬಾಲಿಸು ೧೦ ೮೯

ಬಾಂದೊಱೆ-ಆಕಾಶಗಂಗೆ, ದೇವಗಂಗೆ ೩ ೧೧೭

ಬಾಡುಂದಳಿರ್-ಬಾಡಿದ ಚಿಗುರು ೮ ೧ವ

ಬಾಯೞಿ–ಬಾಯಿ ಸೋಲು ೫ ೧೭೦

ಬಾಯ್ದೆಱೆ–ತುಟಿ ೫ ೧೬೪

ಬಾಸಣಿಗೆ–ಹೊದ್ದಿಕೆ ೭ ೩

ಬಾಸಣಿಸು-ಮುಚ್ಚು ೧ ೬೦ವ

ಬಾಸೆ-ಭಾಷೆ ೮ ೭೨

ಬಾಸೆ-ಹೆಂಗಸರ ಹೊಕ್ಕಳಿಂದ ಎದೆಯ ವರೆಗೆ ಬೆಳೆದಿರುವ ಕೂದಲಗೆರೆ, ಸಾಲು ೨ ೯೮

ಬಾಳ್-ಕತ್ತಿ, ಖಡ್ಗ ೧ ೧೩೪ವ

ಬಾಳ-ಲಾಮಂಚ ೮ ೧೨೩

ಬಾೞ್ಕೆ-ಜೀವನ ೫ ೧೯೨

ಬಾೞ್ಮೊದಲ್-ಮೂಲಭೂತ ೫ ೧೮೩

ಬಿಂದುವಿಡು-ಬೆವರುವುದರಿಂದ ನೀರನ್ನು ಹನಿಸು ೮ ೪೭

ಬಿಕ್ಕಿರಿ-ಸೊಳ್ಳೆ ೮ ೩೮

ಬಿಕ್ಕೆ-ಭಿಕ್ಷೆ ೫ ೯೩

ಬಿಗುರ್-ಭಯಪಡು ೧೦ ೫೫ವ

ಬಿಡೆ-ಹೆಚ್ಚಾಗಿ ೧೦ ೪೭ವ

ಬಿತ್ತರಿಸು-ಹರಡು, ವಿಸ್ತರಿಸು ೫ ೪೩

ಬಿದಿ-ಬ್ರಹ್ಮ, ವಿಧಿ ೫ ೧೪೪

ಬಿಜ್ಜಣಿಗೆ-ಬೀಸಣಿಗೆ ೭ ೨೨

ಬಿಣ್ಪು-ಅತಿಶಯ ೬ ೧೨೧

ಬಿದಿರ್-ಕೊಡಹು ೮ ೪೫ವ

ಬಿಯದ-ಬೇಡ, ವ್ಯಾಧ ೧ ೧೪೬

ಬಿಪ್ಪಂಡಿಸು-ದ್ವೇಷಿಸು ೩ ೮೨

ಬಿಸುಸುಯ್-ನಿಟ್ಟುಸಿರು ಬಿಡು ೧ ೧೪೯

ಬಿಸಕಾಂಡ-ತಾವರೆದಂಟು ೧ ೧೪೪

ಬೀಡುಗೆಯ್-ವಸತಿಮಾಡು, ಬಿಡಾರ ಹಾಕು ೯ ೧ವ

ಬೀಡುದಾಣ-ವಾಸಸ್ಥಾನ ೮ ೧೨೦

ಬೀೞ್ಗೊಂಪ-ಇಳಿಬಿದ್ದಿರುವ ಮಂಟಪ, ಲತಾಗೃಹ ೮ ೧೧೨

ಬೂತಾಟ-ಬೂಟಾಟಿಕೆ ೬ ೮೩

ಬೃಂಹಿತ-ಆನೆಯ ಕೂಗು, ಗರ್ಜಿತ ೧ ೧೩೪ವ

ಬೆಂಡೇೞ್-ಜಡವಾಗು ೯ ೧೦

ಬೆಟ್ಟವಟ್ಟನೆ-ಒರಟಾಗಿ ೧೦ ೪೦ವ

ಬೆಟ್ಟಿದ-ಕ್ರೂರಿ, ಕೆಟ್ಟವ ೧ ೧೬೫

ಬೆಳ್ಕರಿಸು-ಬಿಳುಪಾಗು ೫ ೧೪೫

ಬೆಳ್ಕಱು-ಹೆದರು ೬ ೯೩

ಬೆಱಂಟು-ನೆಲವನ್ನು ಕೆರೆ ೩ ೧೫

ಬೇಟ-ಪ್ರೀತಿ, ಪ್ರಣಯ ೫ ೩೮

ಬೇಟಕಾರ್ತಿ-ಕಾಮ ಉಳ್ಳವಳು, ಕಾಮಿನಿ ೭ ೧೬೩

ಬೇಡವಟ್ಟ-ಬೇಡರಬೀಡು ೧೦ ೪೧ವ

ಬೇವಸ-ವಿರಹವ್ಯಥೆ ೭ ೩೧

ಬೈಗು–ಸಂಜೆ ೧ ೧೬೯

ಬ್ರಹ್ಮಸೂತ್ರ–ಜನಿವಾರ ೪ ೫೩

ಬೊಬ್ಬುಳಿಕೆ–ಗುಳ್ಳೆ ೮ ೧೦೩ವ

ಭ

ಭವ–ಶಿವ ೨ ೩

ಭವಸ್ಮೃತಿ–ಹಿಂದಿನ ಜನ್ಮದ ನೆನಪು ೧ ೭೭

ಭವಾದ್ರಿ–ಕೈಲಾಸ ೪ ೬೦

ಭವ್ಯ–ಕ್ಷೇಮ ೬ ೭೪

ಭವ್ಯೇತರ–ನೀಚ, ದುರ್ಜನ ೩ ೭೪
ಭಸಿತಪುಂಡ್ರಕ–ಮೂರೆಳೆ ವಿಭೂತಿ ೧ ೧೭೧
ಭಾವೋದ್ಭವ–ಕಾಮ, ಮನ್ಮಥ ೫ ೩೩
ಭೂಜ–ಮರ ೨ ೬೭
ಭೂಭುಜ–ರಾಜ ೧ ೮
ಭೂಭೃತ್ಸುತೆ–ಹಿಮವಂತನ ಮಗಳು, ಪಾರ್ವತಿ ೧ ೩೮
ಭೃಂಗಾರು–ಚಿನ್ನದ ಪಾತ್ರೆ, ಬಟ್ಟಲು ೮ ೧೨೦
ಭೋಗ–ಹಾವಿನ ಹೆಡೆ ೧ ೧
ಭೈತ್ರ–ಹಡಗು ೮ ೧೨೫
ಭ್ರುಕುಟಿ–ಹುಬ್ಬುಗಂಟು ೨ ೧೧

ಮ

ಮಂಡಲಾಗ್ರ–ಕೊಂಕುಕತ್ತಿ, ಅಡಾಯುಧ ೮ ೩೮
ಮಂದುರ–ಕುದುರೆಲಾಯ, ವಾಜಿಶಾಲೆ ೭ ೯ವ
ಮಂಜೀರ–ಕಾಲ್ಗಡಗ ೨ ೫೯
ಮಕರಕುಂಡಲ–ಕಿವಿಯ ಕಡುಕು ೫ ೧೮೪ವ
ಮಕರಧ್ವಜ–ಮನ್ಮಥ ೧೦ ೫೫
ಮಕರಿಕಾಪತ್ರ–ಹೆಂಗಸರ ಕೆನ್ನೆ ಮೊದಲಾದ ಕಡೆ ಬರೆಯುವ ಚಿತ್ರರಚನೆ ೨ ೪೧
ಮಗುಳ್ಚು–ತಿರುಗಿಸು ೧ ೧೯
ಮಗುಳ್ಚು–ವಾಂತಿಮಾಡು, ಕಕ್ಕು ೩ ೪೯
ಮಗ್ಗಲಿಸು–ಕಡಮೆಮಾಡು ೪ ೭೧
ಮಚ್ಚು–ಉಡುಗೊರೆ ೨ ೧೧೫ವ
ಮಡ–ಹಿಮ್ಮಡಿ ೪ ೪
ಮಡಲ್–ಅತಿಯಾಗಿ ಬೆಳೆ, ಚಿಗುರು ೧ ೧೦೫
ಮತಂಗಜ–ಆನೆ ೧ ೧೨೯
ಮಧುವ್ರತ–ದುಂಬಿ ೪ ೩೩ವ
ಮನುಮಥ–ಮನ್ಮಥ ೭ ೨೩
ಮನವಿಂಕ್ಕು–ಮನಸ್ಸುಮಾಡು ೮ ೫೩
ಮನ್ಯು–ಕೋಪ ೯ ೧೦೯
ಮಯೂಖ–ಕಿರಣ, ಕಾಂತಿ ೫ ೧೩೮
ಮರಕತ–ಪಚ್ಚೆಮಣಿ ೬ ೮೧
ಮರಗಟ್ಟು–ಪಾತಿ ೧ ೯೯
ಮರಳ್–ಗಿರಗಿರನೆ ಸುತ್ತು, ತಿರುಗು ೧ ೧೬೫
ಮರವಡು–ಮೈಮರೆ, ನಿಶ್ಚೇಷ್ಟಿತನಾಗು, ಪ್ರಜ್ಞಾಹೀನನಾಗು ೮ ೬೪
ಮರೀಚ–ಮೆಣಸು ೬ ೨೫
ಮಹನೀಯ–ಶ್ರೇಷ್ಠ, ಉತ್ತಮ ೨ ೧೦೬
ಮಹಾಪ್ರಾಣತೆ–ಬಹಳಶಕ್ತಿ ೨ ೧೭೧
ಮಹಾಭಾಗ–ಗಂಡಸರನ್ನು ಸಂಬೋಧಿಸುವಾಗ ಬಳಸುವ ಪದ, ಅದೃಷ್ಟವಂತ, ಶ್ರೀಯುತ ೪ ೬೩
ಮಹಾಮಹತ್ತರೆ–ಅಂತಃಪುರದ ಪ್ರಧಾನ ಸೇವಕಿ ೨ ೮೦
ಮಸಗು–ಹರಡು, ವ್ಯಾಪಿಸು ೧ ೯೭ವ
ಮಱಕ–ಮೋಹ ೩ ೭೨
ಮಱುಮೆಯ್–ಬೇರೆ ಶರೀರ, ಮತ್ತೊಮ್ಮೆ ಹುಟ್ಟುವ ದೇಹ ೬ ೭೦ವ
ಮಱುವುಟ್ಟು–ಪುನರ್ಜನ್ಮ ೯ ೪೫
ಮಾತಂಗ–೧ ಆನೆ, ೨ ಅಂತ್ಯಜ, ಚಂಡಾಲ ೧ ೪೫ವ
ಮಾತಂಗಿ–ಚಂಡಾಲರ ಹೆಂಗಸು ೧ ೪೭
ಮಾಧವಿ–ಮಲ್ಲಿಗೆಬಳ್ಳಿ ೯ ೫೩
ಮಾನಸಸಂಭವ–೧ ಮನಸ್ಸಿನಲ್ಲಿ ಹುಟ್ಟಿರುವ ೨ ಮಾನಸಸರೋವರದಲ್ಲಿ ಹುಟ್ಟಿರುವ ೫ ೭೯
ಮಾಮಸಕ–ಮಹಾರಭಸ, ದೊಡ್ಡಕ್ಷೋಭೆ ೧ ೫೮ವ
ಮಾಯ್ದ–ಕೆಟ್ಟ, ನೀಚನಾದ, ಹಾಳಾದ,

ಶೋಚನೀಯ, ಬಡಪ್ರಾಣಿ, ವರಾಕ, ಪಾಪಿಷ್ಠ ೩ ೯೫
ಮಾರ್ದನಿ-ಪ್ರತಿಧ್ವನಿ ೧ ೫೮
ಮಾಲೆಗುಂಡಿಗೆ-ಮಾಲೆಯಂತೆ ಜೋಡಿಸಿದ ಗಡಿಗೆ ೭ ೨೧
ಮಿಡುಕು-ಚಲಿಸು, ಅಲುಗಾಡು ೧ ೧೨೬
ಮಿಥುನ-ಹೆಣ್ಣುಗಂಡು ಜೋಡಿ ೪ ೧
ಮಿಸಿಸು-ಅಭಿಷೇಕಮಾಡು, ಸ್ನಾನಮಾಡಿಸು ೮ ೧೫೬
ಮಿಸುಂಗು-ಪ್ರಕಾಶಿಸು, ಶೋಭಿಸು ೨ ೫೬
ಮಿಳಿ-ಚರ್ಮದ ಹಗ್ಗ ೮ ೧ವ
ಮಿಳಿರ್–ಹಾರಾಡು ೩ ೯೦
ಮಿಳ್ಳಿಸು–ಚಲಿಸು ೯ ೧೪
ಮೀನಾಂಕ–ಮನ್ಮಥ ೫ ೨೯
ಮುಂಜಮೇಖಲೆ–ನೊದೆಹುಲ್ಲಿನ ಉಡಿದಾರ ೧ ೧೮೬
ಮುಂದುಱುವರಿ–ಮುನ್ನುಗ್ಗು ೬ ೭೯ವ
ಮುಕುಳಿತಾಕ್ಷ–ಮುಚ್ಚಿದ ಕಣ್ಣುಳ್ಳವನು ೫ ೧೧೧
ಮುಕ್ತಾತ್ಮ–೧ ಮುತ್ತುಗಳಿಂದ ಮಾಡಲ್ಪಟ್ಟಿರುವ, ೨ ಮೋಕ್ಷವನ್ನು ಪಡೆದಿರುವ, ಜೀವನ್ಮುಕ್ತನಾದ ೭ ೩೨
ಮುತ್ತಂಚೆ–ಮುದಿಹಂಸ ೧ ೭೧
ಮುನ್ನೇಸಱ್–ಮುಂಜಾನೆ, ಅರುಣೋದಯ ೧ ೧೮೮
ಮುಪ್ಪುರಿಗೊಳ್–ಹೊಸೆ ೯ ೧೪
ಮುಯ್ಯು–ರೆಕ್ಕೆಗಳ ಮೂಲ, ಹೆಗಲು, ಭುಜ ೧ ೧೨೦
ಮುರಜ-ಮದ್ದಳೆ ೨ ೮
ಮುರಿಗೇಶ–ಗುಂಗುರುಕೂದಲು ೮ ೨
ಮುಸುರು–ಮುತ್ತು ೧ ೯೭ಧ

ಮುಱಿ–ತುಣುಕು, ತುಂಡು, ಚೂರು ೧ ೨೬
ಮುಟ್ಟು–ಬೀಳು ೬ ೧೨೦
ಮೂಗುವಡೆ–ಮೌನವನ್ನು ತಾಳು ೧ ೧೩೫
ಮೃಗಮದ–ಕಸ್ತೂರಿ ೨ ೨೭
ಮೃಗಲಾಂಛನ–ಚಂದ್ರ ೨ ೩೯
ಮೃಗಾಜಿನ–ಜಿಂಕೆಚರ್ಮ ೧ ೧೮೬
ಮೃಣಾಳ–ತಾವರೆದಂಟು ೪ ೧೩
ಮೆಯ್ವೞಿ–ಶರೀರಾವಲಂಬನ ೫ ೧೯೩
ಮೆಯ್ವೞಿ–ಅನುನಯ ೮ ೧೩೪
ಮೆಲ್ಪು–ಮೃದುತ್ವ ೨ ೧೧೨
ಮೆಲ್ಲುಲಿ–ಮೃದುಧ್ವನಿ ೧ ೫೮ವ
ಮೇಖಳೆ–ಬೆಟ್ಟದ ಮಧ್ಯಪ್ರದೇಶ ೪ ೪೮
ಮೇಲುದು–ಹೊದೆಯುವ ಬಟ್ಟೆ ೩ ೨೬
ಮೇಳಾಪಕ–ಸೇರುವಿಕೆ ೩ ೨೪
ಮೊಗಸು–ಆಕ್ರಮಿಸು, ಆವರಿಸು ೧೦ ೫೫ವ
ಮೊೞೆ–ಆರ್ಭಟಿಸು ೩ ೭೮
ಮೌಹೂರ್ತಿಕ–ಜೋಯಿಸ ೩ ೧೦೫

## ಯ

ಯಮ–ಯೋಗದ ಒಂದು ಅಂಗ, ಯೋಗಮಾರ್ಗ ೫ ೧೧೪
ಯಾಮಿಕ–ಕಾವಲುಗಾರ, ಪಹರೆಯವನು ೩ ೫೧
ಯೂಥಪತಿ–ಸಲಗ ೮ ೧೦೬ವ

## ರ

ರಂಕು–ಒಂದು ಜಾತಿಯ ಜಿಂಕೆ ೧ ೧೧೩
ರಕ್ಕೆವಣಿ–ರಕ್ಷಾಸೂತ್ರದಲ್ಲಿ ಕಟ್ಟಿರುವ ಮಣಿ ೨ ೫೬
ರಜತಾದ್ರಿ–ಬೆಳ್ಳಿಬೆಟ್ಟ, ಕೈಲಾಸ ೩ ೧೧೪
ರಜ್ಜು–ಹಗ್ಗ ೧ ೧೯೭
ರಣರಣಕ–ವಿರಹವ್ಯಥೆ ೬ ೧೭೭
ರತ್ನಾಭೋಗ–ರತ್ನದ ಆಭರಣ ೮ ೧೦೧

ರಥಾಂಗಯುಗ–ಚಕ್ರವಾಕದಂಪತಿ ೫ ೮೭
ರಥ್ಯಾ–ಮನೆಗಳ ಸಾಲು, ಬೀದಿ ೬ ೩೦
ರನ್ನವಟ್ಟಿಗೆ-ರತ್ನದ ಪಟ್ಟಿ ೧ ೬೭೮
ರಲ್ಲಕ–ಕಂಬಳಿ ೩ ೧೨೧
ರಸಾತಳ–ಪಾತಾಳ ೯ ೪೧
ರಾಜಕೀರ–ಅರಗಿಳಿ ೧ ೨೨
ರುಜೆ–ರೋಗ ೫ ೬೭
ರುರು–ಕಪ್ಪುಚುಕ್ಕೆಯುಳ್ಳ ಜಿಂಕೆ ೧ ೧೩೦
ರೂವು–ರೂಪು, ಆಕಾರ ೬ ೩೨
ರೋಚನ–ಗೋರೋಚನ ೨ ೫೬
ರೋದೋಂತ–ಭೂಮ್ಯಂತರಿಕ್ಷಗಳ ಮಧ್ಯ ೬ ೧೧೬
ರೋಮಂಥ–ಮೆಲಕು ೪ ೩೩

ಲ

ಲಂಬಣ–ಹಾರ ೩ ೧೦೯
ಲತಾಂತ–ಹೂವು ೧ ೬೯
ಲಾಜ–ಅರಳು (ಬತ್ತದ) ೩ ೧೧೨
ಲುಬ್ಧಕ–ಬೇಡ, ವ್ಯಾಧ ೧ ೧೪೧
ಲೆಪ್ಪ–ಪುತ್ತಳಿ ೯ ೧೦೪
ಲೋಲುಪ–ಆಸೆಯುಳ್ಳವನು ೧ ೧೪೬

ವ

ವಂದನಮಾಲೆ–ಬಾಗಿಲಿಗೆ ಕಟ್ಟುವ ತೋರಣ ೮ ೧೨೦
ವಕ್ರಭಣಿತಿ–ವ್ಯಂಗ್ಯವಾದ ಮಾತು ೬ ೯೧
ವಿಗತಚಿತ್ತ–ಪ್ರಜ್ಞೆ ಇಲ್ಲದವನು ೫ ೬೧
ವಧೂವಿಲೋಕನ–ಸೊಸೆಯನ್ನು ನೋಡುವುದು ೮ ೯೪
ವನರುಹನಾಭ–ಶ್ರೀಮಹಾವಿಷ್ಣು ೯ ೯೦
ವನೇಚರ–ಬೇಡ, ವ್ಯಾಧ ೧೯೬
ವಯಸ್ಯ–ಗೆಳೆಯ, ಮಿತ್ರ ೫ ೯೮
ವರಾಟಕ–ಕವಡೆ ೨ ೧೧೩೮
ವರುಷವರ–ನಪುಂಸಕ, ಷಂಡ ೭ ೧೬೮
ವಲಭಿ–ಚಂದ್ರಶಾಲೆ ೨ ೧೦
ವಲ್ಕಲ–ಮರದತೊಗಟೆ, ನಾರು ೧ ೧೦೪
ವಲ್ಕಾಂಚಲ–ನಾರುಬಟ್ಟೆಯ ಸೆರಗು ೧೦ ೧೯
ವಸ್ತುಬಂಧ–ಕಥಾಪ್ರಧಾನವಾದ ಕಾವ್ಯ ೧೦ ೯೮
ವಳಿತ್ರಯ–ಹೊಟ್ಟೆಯ ಮೇಲಿನ ಚರ್ಮದ ಹೊದಿಕೆ ೧ ೯೯
ವಾಗುರೆ–ಬಲೆ ೧೦ ೪೧
ವಾಚಸ್ಪತಿ–ಬೃಹಸ್ಪತಿ ೨ ೨೪
ವಾಜಿ–ಕುದುರೆ ೧ ೮೦
ವಾತಾಯನ-ಕಿಟಿಕಿ ೨ ೩೦
ವಾಮಜಾನು-ಎಡವೊಳಕಾಲು ೨-೯೧
ವಾಮನ–ಕುಳ್ಳ, ಗುಜ್ಜಾರಿ ೨–೧೧೫
ವಾರವಿಲಾಸಿನಿ–ಸೂಳೆ ೮–೧೨೧
ವಾರುವ-ಕುದುರೆ ೮ ೬೦೮
ವಾಹ–ಕುದುರೆ ೯ ೭೦
ವಾಹಳಿ-ಕುದುರೆ ಸವಾರಿ ೧ ೧೧೬
ವಿಕಚ-ಅರಳಿರುವ ೮ ೭೮೮
ವಿಕ್ರಮ–೧ ಪರಾಕ್ರಮ, ೨ ಪಾದ ವಿನ್ಯಾಸ (ಹೆಜ್ಜೆಯಿಡುವಿಕೆ) ೧ ೧೦
ವಿಟಪಿ–ಮರ ೧ ೮೭
ವಿಡಂಬನ–ಅಪಹಾಸ್ಯ ೨ ೩೧
ವಿಗ್ರಹ–೧ ಯುದ್ಧ, ೨ ಶರೀರ ೨ ೧೬
ವಿಡಂಬಿಸು-ಅನುಕರಿಸು ೬ ೮
ವಿನಿದ್ರ–ಅರಳಿರುವ ೨ ೯
ವಿಪಾಕ–ಕೆಟ್ಟ ಪರಿಣಾಮ ೩ ೯೫
ವಿದಗ್ಧವೃತ್ತಿ–ಜಾಣತನ ೬ ೬೮
ವಿದ್ದಂಬರೆ–ಆಕೃತಿಯನ್ನು ಬರೆ ೬ ೧೦೧
ವಿದ್ರುಮ–ಹವಳ ೫ ೧೩೪

ವಿನ್ನಾಣ-ಗುರುತು, ಅಭಿಜ್ಞಾನ ೭ ೩ವ
ವಿಪಂಚಿ-ವೀಣೆ ೪ ೩೧
ವಿಪಣಿ-ಅಂಗಡಿಬೀದಿ ೨ ೪
ವಿಪ್ರಲಂಭ-ಅಗಲಿಕೆ, ವಿರಹ ೨ ೧೩
ವಿಭೂತಿ-ಸಮೃದ್ಧಿ ೧೦ ೮೫
ವಿಷಮಾಸ್ತ್ರ-ಮನ್ಮಥ ೫ ೧೨೧
ವಿಹ್ವಲ-ಕಳವಳಗೊಂಡವನು ೮ ೧೦೬
ವೇತ್ರಾಸನ-ಬೆತ್ತದ ಪೀಠ ೬ ೧೬೬
ವೈಜಯಂತಿ-ಬಾವುಟ ೨ ೧೨
ವೈಪಥಪಾಂಸು-ಕೆಟ್ಟದಾರಿಯ ಧೂಳು ೯ ೮೧
ವೈಭಾತಿಕ-ಬೆಳಗಿನ ಜಾವದ ೧ ೧೨೧
ವ್ಯಗ್ರ-ಕಳವಳಗೊಂಡವನು, ಆಸಕ್ತನಾದವನು ೪ ೭೧
ವ್ಯತಿಕರ-ಸಂದರ್ಭ ೫ ೫೪ವ
ವ್ಯಾಳ-ದುಷ್ಟಮೃಗ ೮ ೧೨೯
ವ್ಯಾಳೇಭ-ಮದ್ದಾನೆ ೧ ೧೨೨

ಶ

ಶಕುನಿ-೧ ಹಕ್ಕಿ, ೨ ದುರ್ಯೋಧನನ ಸೋದರಮಾವ ೧ ೧೦೧
ಶಕ್ರಧನು-ಕಾಮನಬಿಲ್ಲು ೧ ೧೨೬
ಶತಪತ್ರ-ಕಮಲ ೧೦ ೬೫ವ
ಶರನಿಧಿ-ಸಮುದ್ರ ೨ ೫೨
ಶಾಕಿನಿ-ಪಿಶಾಚಿ ೪ ೭೩
ಶಾಡ್ವಲ-ಹಸಿರುಹುಲ್ಲು ಬೆಳೆಯುವ ಸ್ಥಳ, ಹುಲ್ಲುಗಾವಲು ೧ ೯೩
ಶಾಡ್ವಲಿತ-ಹಸುರುಹುಲ್ಲಿನ ಪ್ರದೇಶ ೬ ೮೧
ಶಾತ-ಹರಿತವಾದ ೨ ೨೫
ಶಾತಕುಂಭ-ಚಿನ್ನ ೧ ೬೫
ಶಾಬ-ಮರಿ ೨ ೫೯
ಶಾರಿಕೆ-ಮೈನಾಹಕ್ಕಿ, ಹೆಣ್ಣುಗಿಳಿ ೧ ೫೫
ಶಾಲಿವನ-ಬತ್ತದಗದ್ದೆ ೯ ೭೯
ಶಾಲೀನತೆ-ನಮ್ರತೆ,ವಿನಯ ೭ ೪೪ವ
ಶಾಲೂಕ-ತಾವರೆಗೆಡ್ಡೆ-ಬೇರು ೪ ೧೩
ಶಾಲೂರ-ಕಪ್ಪೆ ೯ ೧೫
ಶಾಲ್ಮಲಿ-ಬೂರುಗದ ಮರ ೧ ೯೯
ಶಿಖಂಡ-ಜುಟ್ಟು ೭ ೫೦
ಶಿಖಂಡಶೇಖರ-ತಲೆಮಣಿ,ಶಿಖಾಮಣಿ೭ ೫೦
ಶಿಖಂಡಿ-ನವಿಲು ೧ ೯೭ವ
ಶಿದ್ಗ-ವಿಟ ೩ ೧೦೨
ಶಿರೀಷ-ಬಾಗೆಹೂವು ೬ ೧೬೮
ಶೀಕರ-ನೀರುಹನಿ ೧ ೧
ಶೀತಮಯೂಖ-ಚಂದ್ರ ೯ ೪೦
ಶುದ್ಧಾಂತ-ಅಂತಃಪುರ ೮ ೪೫
ಶ್ಮಶ್ರು-ಮೀಸೆ ೧ ೧೩೮ವ
ಶ್ರುತ-ಶಾಸ್ತ್ರ, ವಿದ್ಯೆ ೩ ೨೪

ಷ

ಷಟ್ಚರಣ-ಆರಡಿ, ದುಂಬಿ ೬ ೭೪
ಷೋಡಶ-ಹದಿನಾರು ೨ ೧೨೯

ಸ

ಸಂಗಡಿಸು-ಒಟ್ಟುಗೂಡಿಸು ೫ ೧೮೪
ಸಂಧ್ಯಾರಾಗ-ಸಂಜೆಗೆಂಪು ೫ ೨೦೯
ಸಂಬಳಿಕೋಲ್-ಬಿದಿರುದೊಣ್ಣೆ ೧ ೩೧
ಸಂವರಿಸು-ಸಮಾಧಾನಪಡಿಸಿಕೊಳ್ಳು ೫ ೧೦೭
ಸಕ್ಕಿ-ಸಾಕ್ಷಿ ೫ ೧೭೪
ಸನ್ನಿದ-ಹತ್ತಿರ, ಸಮೀಪ, ಸನ್ನಿಹಿತ ೯ ೭೬
ಸಪ್ತತಂತು-ಯಾಗ ೨ ೧೬
ಸಂಮಾರ್ಜನಿ-ಕಸಪೊರಕೆ ೩ ೮೬
ಸಂಮೃಷ್ಟ-ಸಾರಿಸಿದ ೮ ೧೨೦
ಸಟಾವಳಿ-ಕೊರಳು ಕೂದಲ ಸಾಲು ೧ ೧೨೭
ಸನ್ನೆಗಾಳೆ-ಆಗಮನ, ಮುಹೂರ್ತ ಮೊದಲಾದ ಸನ್ನಿವೇಶವನ್ನು ಸೂಚಿ

ಸಲು ಊದುವ ತುತ್ತೂರಿ ೩ ೨೨ವ

ಸಮಕಟ್ಟು-ಏರ್ಪಡಿಸು ೩ ೬೧ವ

ಸಮಕಟ್ಟು-ಏರ್ಪಾಡು ೮ ೮೧ವ

ಸಮವಯಸ-ಒಂದೇ ವಯಸ್ಸಿನವನು ೧ ೧೬೭

ಸರ್ಗ-ಸೃಷ್ಟಿ ೬ ೧೯

ಸರಿಗೆ-ಕಂಠಾಭರಣ ೧೦ ೬೭ವ

ಸವಡಿಸು-ದ್ವಿಗುಣಿತವಾಗು ೩ ೯

ಸಹಕಾರ-ಸಿಹಿಮಾವಿನ ಮರ ೪ ೩೩ ವ

ಸಾದಿ-ಕುದುರೆ ಸವಾರ ೯ ೯೯ ವ

ಸಾಧ್ವಸ-ಭಯ ೫ ೩೫

ಸಾಭ್ಯುಪಗಮ-ಅಂಗೀಕಾರದಿಂದ ಕೂಡಿರುವ ೮ ೫೧ವ

ಸಾರಿಕೆ-ಮೈನಾಹಕ್ಕಿ, ಹೆಣ್ಣುಗಿಳಿ ೬ ೮೪

ಸಾರ್ಚು-ಹತ್ತಿರಕ್ಕೆ ಹೋಗು ೧ ೧೩೪

ಸಾಲಭಂಜಿಕೆ-ಪುತ್ತಳಿ, ಬೊಂಬೆ ೬ ೨೫

ಸಾವಗಿಸು-ಸರಿಮಾಡು ೩ ೭೯

ಸಾವಷ್ಟಂಭ-ಗರ್ವದಿಂದ ಕೂಡಿರುವ ೮ ೫೧ವ

ಸಿಂದುರ-ಚಂದ್ರ ೧ ೨೩೭

ಸಿಂಧುವಾರ-ಲಕ್ಕಿಹೂವು ೧ ೬೦

ಸಿಂಪಿಸು-ಚಿಮುಕಿಸು, ಚೆಲ್ಲು ೧ ೧೧೭

ಸಿಂಪು-ಚಿಪ್ಪು ೧ ೩೫

ಸಿಗ್ಗು-ನಾಚಿಕೆ ೫ ೯೯

ಸಿಚಯ-ಬಟ್ಟೆ, ವಸ್ತ್ರ ೩ ೭೯

ಸಿತಾತಪತ್ರ-ಬಿಳಿಯ ಕೊಡೆ ೩ ೨೧

ಸಿದ್ಧಾಂಜನ-ಸಾಧಕರು ನಿರ್ಮಿಸುವ ಅಮಾನುಷ ಶಕ್ತಿಯನ್ನುಕೊಡುವ ಅಂಜನ, ಕಾಡಿಗೆ ೮ ೩೮

ಸಿರಿಕಂಡ-ಶ್ರೀಗಂಧ, ಚಂದನ ೭ ೩ವ

ಸಿರಿಸ-ಬಾಗೆಹೂವು, ಶಿರೀಷ ೭ ೨೦ವ

ಸೀಗುರಿ-ಚಾಮರ ೧ ೩೪

ಸೀಕರ-ನೀರಿನಹನಿ, ತುಂತುರು ೩ ೧೧೩

ಸೀರ್ಪನಿ-ತುಂತುರುಹನಿ ೧ ೨೩೨

ಸೀರ್ಪು-ಅಂದ, ಅಚ್ಚುಕಟ್ಟು ೩ ೯

ಸೀರ್ಪುಲ್-ಹುಲ್ಲುಕಡ್ಡಿ ೯ ೨೪

ಸೀಱು-ಕೆದರು ೯ ೮೧

ಸುಟ್ಟುಂಬೆ-ತೋರುಬೆರಳು, ತರ್ಜನಿ ೬ ೧೩೯

ಸುಟ್ಟುಱಿ-ಸುಂಟರಗಾಳಿ ೩ ೬೯

ಸುತ್ತು-ರೀತಿ, ಪ್ರಕಾರಾಂತರ ೫ ೫೨

ಸುಧಾಸೂತಿ-ಚಂದ್ರ ೧೦ ೭೨

ಸುಧೆ-ಸುಣ್ಣ ೨ ೮೮

ಸುಧೆ-ಅಮೃತ ೨ ೯೬

ಸುರಗೋಪ-ಮಿಂಚುಹುಳು ೯ ೧೬

ಸುರತರು-ಕಲ್ಪವೃಕ್ಷ ೧ ೨೦೦

ಸುರಭೂಜ-ಕಲ್ಪವೃಕ್ಷ ೪ ೬೫

ಸುಲಿಪಲ್-ಶುಭ್ರವಾದ ಹಲ್ಲು ೩ ೧೦೯

ಸುಷುಮ್ನೆ-ಸುಷುಮ್ನಾ ಎಂಬ ಹೆಸರಿನ ಸೂರ್ಯಕಿರಣ ೫ ೩೨

ಸುಸಿಲ್-ಸಂಭೋಗ ೯ ೯

ಸೂಕರ-ಹಂದಿ ೧ ೧೩೦

ಸೂಸಕ-ಕುಚ್ಚು ೭ ೨೦

ಸೃಕ್ವ-ಕಟವಾಯಿ ೨ ೬೯

ಸೆಜ್ಜೆವನೆ-ಮಲಗುವ ಮನೆ ೬ ೧೬೨

ಸೆಡೆ-ಅಂಜು, ಹೆದರು ೧೦ ೨೫

ಸೆರೆ-ನರ ೧ ೧೪೫

ಸೇದೆ-ದಣಿವು ೧ ೧೦೦

ಸೇದೆವಡು-ಆಯಾಸಗೊಳ್ಳು ೧೦ ೨೦

ಸೇಮ-ಕ್ಷೇಮ ೬ ೭೫

ಸೈಂಹಿಕೇಯ-ರಾಹು ೧ ೧೪೪

ಸೈತಿಕ್ಕು-ನೇರ್ಪಡಿಸು ೬ ೭೪

ಸೈಪು–ಪುಣ್ಯ ೧ ೨೦೫
ಸೈರಿಭ–ಕೋಣ ೧ ೧೨೯
ಸೊಡರ್–ದೀಪ ೩ ೮೪
ಸೋಪಾಲಂಭ–ನಿಂದೆಯಿಂದ
ಕೂಡಿರುವ ೮ ೫೧೭
ಸೋವರ್ಮುಡಿ–ಜೋಲಾಡುವ
ಕೂದಲು ೩ ೨೯
ಸೋಲ್–ಪರವಶನಾಗು ೪ ೩೦
ಸೌಧ–ಉಪ್ಪರಿಗೆಮನೆ ೨ ೬೯
ಸೌವಿದಲ್ಲ–ಕಂಚುಕಿ ೫ ೯೦
ಸ್ಕಂಧವಾರ–ಸೇನೆ ಬೀಡುಬಿಡುವ ಸ್ಥಳ,
ಪಾಳೆಯ ೭ ೪೭
ಸ್ತ್ರೈಣ–ಸ್ತ್ರೀಸಂಬಂಧವಾದ ೧ ೧೭

## ಹ

ಹಂದರ–ಚಪ್ಪರ ೭ ೨೭
ಹರಿ–ಕುದುರೆ ೩ ೮
ಹರಿ-ವಿಷ್ಣು ೬ ೧೩೦
ಹರಿಚಂದನ–ಕೆಂಪುಗಂಧ ೧ ೧೨೮
ಹರಿದಶ್ವ–ಸೂರ್ಯ ೧ ೧೧೬
ಹರಿಣ-ಜಿಂಕೆ ೫ ೧೩೮
ಹರ್ಮ್ಯಾಂಗಣ–ಅರಮನೆಯ ಹಜಾರ ೨ ೫೮
ಹಸಾದ–ಪ್ರಸಾದ, ಅನುಗ್ರಹ ೭ ೫೩
ಹಿಳಿ-ಹಿಂಡು, ಮರ್ದಿಸು. ನಿಷ್ಪೀಡಿಸು ೫ ೭೫
ಹಾರೀತಕ–ಹಸುಬನಹಕ್ಕಿ ೬ ೧೧೫
ಹುತವಹ–ಅಗ್ನಿ ೫ ೨

## ಱ

ಱಾಟಳ-ರಾಟೆ ೭ ೨೧
ಱೊಬ್ಬ–ಹಿಮದ ಗಡ್ಡೆ ೧೦ ೫೮

---



[ಮುಂದುವರಿದದ್ದು]

ಕೆಳದಿನೃಪ ವಿಜಯ * ದಮಯಂತೀ ಸ್ವಯಂವರ
ಶಾಂತಿಪುರಾಣ * ಚಂದ್ರಪ್ರಭ ಪುರಾಣ
ಉದ್ಭಟ ಕಾವ್ಯ * ಕುಸುಮಾವಳಿ
ಅಭಿನವ ದಶಕುಮಾರ ಚರಿತೆ
ಮಲ್ಲಿನಾಥಪುರಾಣ * ರಾಜಶೇಖರ
ವಿಳಾಸ * ಚಿಕ್ಕದೇವರಾಜ ವಂಶಾವಳಿ
ದಿವ್ಯಸೂರಿ ಚರಿತೆ * ಸಿದ್ಧರಾಮಚಾರಿತ್ರ
ಬಸವಪುರಾಣ * ಪ್ರಭುಲಿಂಗ ಲೀಲೆ



1977

ಕನ್ನಡದ ಪ್ರಾಚೀನ ಕಾವ್ಯ ಸಂಪತ್ತು ಅಮೂಲ್ಯವಾಗಿದೆ. ಈ ಸಂಪತ್ತನ್ನು ಈಗಿನ ಕನ್ನಡ ಜನತೆ ಓದಿ ತಿಳಿದುಕೊಳ್ಳುವುದು ಅತ್ಯಾವಶ್ಯಕವಾಗಿದೆ. ಆದರೆ ಈ ಕಾವ್ಯಗಳು ಜನಸಾಮಾನ್ಯರಿಗೆ ಕಠಿಣವಾಗಿ ತೋರುವುದರಿಂದ ಇವುಗಳ ವ್ಯಾಸಂಗದಲ್ಲಿ ಉತ್ಸಾಹಪೂರ್ಣವಾದ ಪ್ರವೃತ್ತಿ ಕಂಡುಬರುತ್ತಿಲ್ಲ. ಅನೇಕ ಸಂದರ್ಭಗಳಲ್ಲಿ ಮೂಲಗ್ರಂಥಗಳೂ ದೊರೆಯುವುದಿಲ್ಲ........ಆದ್ದರಿಂದ ಈ ಕೊರತೆಯನ್ನು ನಿವಾರಣೆ ಮಾಡಲು ಕನ್ನಡ ಸಾಹಿತ್ಯ ಪರಿಷತ್ತು ತನ್ನ ಪಂಚವಾರ್ಷಿಕ ಯೋಜನೆಯಲ್ಲಿ ಹಳಗನ್ನಡ ಕಾವ್ಯಗಳ ಪುನರ್ಮುದ್ರಣಕ್ಕೆ ವಿಶೇಷಗಮನ ಹರಿಸಿ ಅದಕ್ಕಾಗಿ ಪ್ರತ್ಯೇಕ ಯೋಜನೆಯನ್ನು ಹಾಕಿಕೊಂಡಿತು. ಆರಿಸಿದ ಹಳಗನ್ನಡ ಹಾಗೂ ನಡುಗನ್ನಡ ಕಾವ್ಯಗಳನ್ನು ಹೊಸಗನ್ನಡ ಗದ್ಯದಲ್ಲಿ ಅನುವಾದಿಸಿ ಆ ಅನುವಾದದೊಡನೆ ಮೂಲಪಾಠವನ್ನು ಪ್ರಕಟಿಸಿ ಪುಸ್ತಕರೂಪದಲ್ಲಿ ಹೊರತರುವುದು ಮತ್ತು ಸರ್ಕಾರದ ಸಹಾಯ ಪಡೆದು ಆ ಪುಸ್ತಕಗಳು ಸಾಧ್ಯವಾದ ಮಟ್ಟಿಗೆ ಸುಲಭ ಬೆಲೆಯಲ್ಲಿ ದೊರೆಯುವಂತೆ ಮಾಡುವುದು ಇವು ಆ ಯೋಜನೆಯ ಮುಖ್ಯ ಅಂಶಗಳು.

—ಪ್ರಸ್ತಾವನೆಯಿಂದ

---

ಈ ಕಾರ್ಯಕ್ರಮದಲ್ಲಿ ಈಗ ಅಂಗೀಕರಿಸಿರುವ ಹಳಗನ್ನಡ-ನಡುಗನ್ನಡ ಕಾವ್ಯಗಳು ನಲವತ್ತನಾಲ್ಕು. ಇವುಗಳಲ್ಲಿ ಮೊದಲ ಕಂತಾಗಿ ಹದಿಮೂರು ಗ್ರಂಥಗಳು ಪರಿಷತ್ತಿನ ವಜ್ರಮಹೋತ್ಸವ ಸಂದರ್ಭದಲ್ಲಿ ಬಿಡುಗಡೆಯಾಗಲಿವೆ.